# ಮೆರವಣಿಗೆ

ಗೊರೂರು ರಾಮಸ್ವಾಮಯ್ಯಂಗಾರ್



1947

ಸತ್ಯಶೋಧನ ಪ್ರಕಟನಾಲಯ
ಕೋಟೆ, ಬೆಂಗಳೂರು ನಗರ

## ಈ ಲೇಖಕನ ಇತರ ಕೃತಿಗಳು

ಹಳ್ಳಿಯ ಚಿತ್ರಗಳು
ನಮ್ಮ ಊರಿನ ರಸಿಕರು
ಬೈಲಹಳ್ಳಿ ಸರ್ವೆ
ಗರುಡಗಂಬದ ದಾಸಯ್ಯ
ಪುರಾತನ ಕಥೆಗಳು
ಹಳ್ಳಿಯ ಹಾಡು (ಸಂಗ್ರಹ)
ವೈಯ್ಯಾರಿ
ಹಳ್ಳಿಯ ಬಾಳು
ಸಾಹಿತ್ಯದ ಜೀವಾಳ
ಭಕ್ತಿಯೋಗ
ಮಹದೇವದೇಸಾಯಿಯವರ ಕೃತಿಗಳು
ಪೂರ್ಣ ಸ್ವದೇಶಿ
ತಾಯಿನುಡಿಯಲ್ಲಿ ಶಿಕ್ಷಣ
ಸತೀ ಕಸ್ತೂರಿ ಬಾ
ಮೌಲಾನಾ ಅಬ್ದುಲ್ ಕಲಾಮ್ ಆಜಾದ್
ದುರದೃಷ್ಟ ಬಂಗಾಳಾ
ಸ್ವಾತಂತ್ರ್ಯವೇ ಧರ್ಮ
ಪುನರ್ಜನ್ಮ
ಮಲೆನಾಡವರು
ಬೆಸ್ತರ ಕರಿಯ



**ಅರ್ಪಣೆ**

ಸಾವಿರದ ಒಂಭೈನೂರ ನಲವತ್ತೆರಡನೆಯ
ಆಗಸ್ಟ್‌ನಿಂದ ನಲವತ್ತಮೂರನೆಯ ಡಿಸೆಂಬರ್ ವರೆಗೆ
ಹಾಸನ, ಸಾಗರ, ಶಿವಮೊಗ್ಗ, ಬೆಂಗಳೂರು, ಸೆರೆಮನೆಗಳಲ್ಲಿ
ನನ್ನ ಜತೆಗಾರರಾಗಿದ್ದ
“ **ಡಿಟೆನ್ಯು** ”ಗಳಿಗೆ.



# ಅರಿಕೆ

ಈ ಪುಸ್ತಕವನ್ನು ನಾನು ನಲವತ್ತೆರಡನೆಯ ಆಗಸ್ಟ್ ಚಳುವಳಿಯಲ್ಲಿ ಸೆರೆಮನೆಯಲ್ಲಿದ್ದ ಹದಿನಾಲ್ಕು ತಿಂಗಳಿನ ಕಾಲದಲ್ಲಿ ಬರೆದೆ. ಬಿಡುಗಡೆಯಾದ ನಂತರ ಇದನ್ನು ಮತ್ತೆ ತಿದ್ದಬೇಕೆಂದು ಮನಸ್ಸಿದ್ದರೂ ಆ ಕೆಲಸಕ್ಕೆ ಬೇಕಾದ ವಿರಾಮ ಮತ್ತು ಮನಶ್ಶಾಂತಿ ನನಗೆ ಈವರೆಗೆ ದೊರೆತಿಲ್ಲ. ಮತ್ತು ಆಗ ಬರೆದುದನ್ನು ಈಗ ತಿದ್ದುವುದು ಎಂದರೆ ಮತ್ತೆ ಅಂದಿನ ಮನೋಭಾವ ಬರಬೇಕು. ಸೆರೆಮನೆಯ ಸಂಕುಚಿತ ಬಂಧನದ ವಾತಾವರಣದ ಸ್ವಭಾವ ಇಂದು ಬರುವುದು ಸಾಧ್ಯವಿಲ್ಲ. ಅದಾವುದೋ ಹಿಂದಲ ಜಗತ್ತಾಗಿ ಕಾಣುತ್ತಿದೆ.

ಬಹುಕಾಲ ತನಗೆ ಇಷ್ಟವಾದ ಒಂದು ಮನೆಯಲ್ಲಿದ್ದ 'ಅತಿಥಿ' ಆ ಮನೆಯನ್ನು ಬಿಟ್ಟು ಹೊರಕ್ಕೆಬಂದರೂ, ಬಾಗಿಲಿನಲ್ಲಿಯೂ ಜಗಲಿಯ ಮೇಲೂ ಮತ್ತಷ್ಟು ಹೊತ್ತು ನಿಂತು ಕಾಲ ಕಳೆಯುವಂತೆ, ನನ್ನ ಮನಸ್ಸು ಪದೇ ಪದೇ ಈ ಗ್ರಂಥದ ಪಾತ್ರಗಳ ಎಡೆಗೆ ತಿರುಗುತ್ತಿದೆ. ಈ ಪುಸ್ತಕವನ್ನು ಬರೆದು ಮುಗಿಸಿದ ನಂತರದ ಈ ಮೂರು ವರುಷಗಳಲ್ಲಿ, ಜಗತ್ತು ಬೆಳೆದಿರುವಂತೆ ಈ ಗ್ರಂಥದ ಪಾತ್ರಗಳೂ ಇನ್ನೂ ಪರಿಪೂರ್ಣರಾಗಿ ಉಜ್ವಲರಾಗಿ ಬೆಳೆದಿದ್ದಾರೆ. ನನ್ನ ಒಳಕಣ್ಣು ಕಂಡಿರುವ ಈ ಬೆಳವಣಿಗೆಯನ್ನು ವಾಚಕರ ಮುಂದೆ ಇಡುವ ಮುಂದಲ ಸುಯೋಗವನ್ನು ನಿರೀಕ್ಷಿಸುತ್ತೇನೆ.

ಈ ಗ್ರಂಥ ಪ್ರಕಟನೆಯ ಸಂದರ್ಭದಲ್ಲಿ ನಾನು ಮೊದಲು ವಂದಿಸಬೇಕಾಗಿರುವುದು ನನಗೆ ಹದಿನಾಲ್ಕು ತಿಂಗಳು ಸೆರೆಮನೆಯ ವಾಸದ ವಿಶ್ರಾಂತಿಯನ್ನು ಕೊಟ್ಟು ಈ ಪುಸ್ತಕ ಬರೆಯಲು ಅವಕಾಶ ಮಾಡಿಕೊಟ್ಟ ನಮ್ಮ ಸರ್ಕಾರದವರನ್ನು. ಸೆರೆಮನೆಯಲ್ಲಿ ನನ್ನ ಜತೆಯ ಡಿಟೆನ್ಯೂಗಳ ಸಹಾನುಭೂತಿ ಸಹಾಯಗಳಿಲ್ಲದಿದ್ದರೆ ಈ ಪುಸ್ತಕವನ್ನು ಬರೆಯಲು ನನಗೆ ವಿರಾಮ ದೊರೆಯುತ್ತಿರಲಿಲ್ಲ. ನನ್ನ ಪಾಲಿಗೆ ಬೀಳುತ್ತಿದ್ದ ಸೆರೆಮನೆಯ ಕಾರ್ಯಭಾಗವನ್ನೆಲ್ಲಾ ನನ್ನ ಜತೆಗಾರರು ವಹಿಸಿಕೊಂಡು, ಸ್ವಭಾವದಿಂದ ಸೋಮಾರಿಯಾದ ನನ್ನನ್ನು ನನ್ನ ಬರವಣಿಗೆಯ ಕೆಲಸಕ್ಕೆ ಬಿಟ್ಟು ನನ್ನ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

ಈ ಗ್ರಂಥ, ಕೊನೆಗೂ ಪ್ರಕಟನೆಯಾಗುವುದೋ ಇಲ್ಲವೋ ಎಂದು ನಾನು ಹೆದರಿದ್ದೆ. ಇದು ಬೆಳಕನ್ನು ಕಾಣಲು, ನನ್ನ ಪ್ರಕಾಶಕರ ಧೈರ್ಯವೂ, ಸತ್ಯಶೋಧನ ಪ್ರಕಟನಾಲಯದ ಕಾರ್ಯಗಾರರ ಉತ್ಸಾಹವೂ ಮುಖ್ಯ ಕಾರಣ. ಮೋಟ ಪ್ರೆಸ್ ಮಾಲೀಕರೂ ಕೆಲಸಗಾರರೂ ನನ್ನೊಂದಿಗೆ ಒಳ್ಳೆ ಉತ್ಸಾಹದಿಂದ ಸಹಕರಿಸಿ ಇದನ್ನು ಅತ್ಯಲ್ಪ ಕಾಲದೊಳಗೆ ಮುದ್ರಿಸಿಕೊಟ್ಟಿದ್ದಾರೆ. ಮೈಸೂರು ಪೇಪರ್ ಮಿಲ್ಸ್‌ರವರು ಇದಕ್ಕೆ ಬೇಕಾದ ಕಾಗದವನ್ನು ಒದಗಿಸಿದ್ದಾರೆ ನನ್ನ ತರುಣ ಮಿತ್ರ ಆತ್ಮಾರಾಮ್ ಈ ದೊಡ್ಡ ಪುಸ್ತಕವನ್ನು ಅಂದವಾದ ಅಕ್ಷರದಲ್ಲಿ ಕರಡುಪ್ರತಿ ಮಾಡಿದ್ದಾರೆ ಈ ಗ್ರಂಥ ಪ್ರಕಟನೆಗೆ ನೆರವಾದವರಿಗೆಲ್ಲಾ ವಂದಿಸುತ್ತೇನೆ.

ಈ ಪುಸ್ತಕವನ್ನು ನಾನು ಮೆರೆವಣಿಗೆ ಎಂಬ ಹೆಸರಿನಿಂದಲೇ ಬರೆದೆ. ಆದರೆ ಆ ಹೆಸರಿನ ಮತ್ತೊಂದು ಪುಸ್ತಕ ಇದೆ ಎಂದು ತಿಳಿದುದರಿಂದ ಇದರ ಮೊದಲ ಹೆಸರನ್ನು ಬದಲಾಯಿಸಿ ಇದಕ್ಕೆ ಇದರ ಒಂದು ಅಧ್ಯಾಯದ ಹೆಸರಾದ ಸ್ವರ್ಗದ ಬಾಗಿಲು ಎಂಬುದನ್ನು ಇಟ್ಟೆ. ಕೆಲವು ಪುಟಗಳ ತಲೆಬರಹ ಹಾಗೆಯೇ ಅಚ್ಚಾಯಿತು. ಆದರೆ ಮೊದಲು ಇಟ್ಟಿದ್ದ ಹೆಸರೇ ಸೂಕ್ತವಾದುದೆಂದು ತೋರಿದುದರಿಂದ ಮೆರೆವಣಿಗೆ ಎಂಬ ಹೆಸರನ್ನೇ ಉಳಿಸಿಕೊಂಡಿದ್ದೇನೆ.

ಹನ್ನೊಂದನೆಯ ಅಧ್ಯಾಯದಲ್ಲಿ ಪುಟ ೧೪೯ರಿಂದ ಅಧ್ಯಾಯದ ಪೂರ್ತಿ, ಹಿಂದಿನ ಅಧ್ಯಾಯದ ಹೆಸರೇ ಬಿದ್ದಿದೆ ಅಧ್ಯಾಯ ಸಂಖ್ಯೆ ಹದಿನೇಳು ಎರಡು ಸಲ ಬಿದ್ದಿದೆ ೨೬ನೆಯ ಅಧ್ಯಾಯದ ನಂತರ ೨೮ ಎಂದೂ ೪೪ ಅಧ್ಯಾಯ ಎರಡು ಸಲವೂ ಬಿದ್ದಿದೆ. ಒಟ್ಟು ಅಧ್ಯಾಯ ಸಂಖ್ಯೆ ೫೭ ಸರಿಯಾಗಿದೆ. ಸಂಖ್ಯೆ ಹೆಚ್ಚುಕಡಿಮೆ ಆಗಿದೆಯೇ ಹೊರತು ವಿಷಯವಲ್ಲ. ವಾಚಕರು ಇವನ್ನೂ ಇತರ ಮುದ್ರಣ ದೋಷಗಳನ್ನೂ ತಿದ್ದಿಕೊಂಡು ಓದಿಕೊಳ್ಳಬೇಕಾಗಿ ಅರಿಕೆ.

ಗೊರೂರು<br>
[illegible]-೧೯೪೭

**ಗೊರೂರು ರಾಮಸ್ವಾಮಯ್ಯಂಗಾರ್.**

# ವಿಷಯ ಸೂಚಿಕೆ

# ೧. ಶ್ಯಾನುಭೋಗರ ಲಾಯು

ಹೇಮಾವತೀ ತೀರದ ಮಲ್ಲಿಗೆಹಳ್ಳಿ ಬಹು ಫಲವತ್ತಾದ ಗ್ರಾಮ. ಪ್ರಕೃತಿ ಎರಡು ಕೈಗಳಿಂದಲೂ ಅಲ್ಲಿ ಸಮೃದ್ಧಿಯನ್ನು ಚೆಲ್ಲಿದೆ. ಅಲ್ಲಿಯು ನೆಲ ಅತ್ಯಂತ ರಸವತ್ತಾದುದು. ರಾಗಿ ಭತ್ತ ತೆಂಗು ಅಡಿಕೆ ಮಾವು ಸಂಪಿಗೆ ಜಾಜಿ ಸೇವಂತಿಗೆ ಕಿತ್ತಳೆ ಕಾಫಿ ಏಲಕ್ಕಿ ಮೆಣಸು ಇವುಗಳಿಗೆ ಆ ಪ್ರಾಂತ ಆಗರ. ಅಲ್ಲಿಯು ತೋಟದ ಬಯಲು ಯಾವಾಗಲೂ ಭಗ ವಂತನ ಆರಾಧನೆಗೆ ಫಲ ಪುಷ್ಪ ಕಾಯಿಗಳನ್ನು ಎತ್ತಿಹಿಡಿದಿರುವ ಭಕ್ತ ನಂತೆ ಕಾಣುವುದು. ವಸಂತದ ಕಾಲದಲ್ಲಿ ತೋಟಗಳಲ್ಲಿ ತಿರುಗಾಡ ಬೇಕಾದರೆ ಮಂಡಿಯುದ್ದ ಸಂಪಿಗೆ ಹೂವಿನ ರಾಶಿಯಲ್ಲಿ ಹಾಯಿದು ಕೊಂಡು ಹೋಗಬೇಕು. ರಸಿಕ ಸೂರ್ಯನು ಉಷಾ ಸ್ತ್ರೀಯನ್ನು ಅನು ಸರಿಸಿಕೊಂಡು ಹೋಗುತ್ತಾ ಜಗತ್ತಿನ ಬಾಗಿಲನ್ನು ತೆರೆದು ಚಿನ್ನದ ಬುಟ್ಟಿಯನ್ನು ಕೈಯ್ಯಲ್ಲಿ ಹಿಡಿದುಕೊಂಡು ಹೊರಡುವನು. ಬೆಳಗಿನ ಪ್ರಭೆ ಅಪರಂಜಿ ವರ್ಣದ ಮಾವಿನ ಹಣ್ಣಿನ ಮೇಲೆ ಬಿದ್ದಾಗ ಹಣ್ಣುಗಳು ಅಮೃತ ರಸವನ್ನು ತುಂಬಿಕೊಂಡ ಭೂಮಾತೆಯ ಸುವರ್ಣ ಕಲಶಗಳಂತೆ ಹೊಳೆಯುವುವು. ಹೇಮಾವತೀ ನದಿ ಗ್ರಾಮದ ಅಧಿದೇವತೆಯಾಗಿ ಜೀವರಸವನ್ನು ತುಂಬಿಕೊಂಡು, ತೀರದ ನರಸಿಂಹಸ್ವಾಮಿ ದೇವಸ್ಥಾನ ವನ್ನು ಕುಡುಗೋಲಿನ ಅಲಗಿನಂತೆ ಬಳಸಿಕೊಂಡು ತೋಪಿನ ಬಳಿ ಎರಡು ಬಾಹುಗಳಾಗಿ ಕವಲೊಡೆದು ಅದನ್ನು ಬಾಚಿ [illegible]ಕೊಂಡು, ಅಗಲಿಹೋಗಲು ಇಷ್ಟವಿಲ್ಲದ ಗೆಳೆಯನಂತೆ ನಿಧಾನವಾಗಿ ಮುಂದಕ್ಕೆ ಹೋಗುತ್ತದೆ. ಹೇಮಾವತೀ ನದಿಗೆ ಮಲ್ಲಿಗೆಹಳ್ಳಿಯನ್ನು ಬಿಟ್ಟು ಓಡ ಬೇಕೆಂಬುದು ಯಾವಾಗಲೂ ಉದ್ದೇಶವಲ್ಲ. ಮಳೆಗಾಲದಲ್ಲಿ ಪೂರ್ಣ ಪ್ರವಾಹದಿಂದ ನದಿಯು ಎರಡು ದಡಗಳೂ ಬಿರಿಯುತ್ತಿದ್ದರೂ ಮಲ್ಲಿಗೆ ಹಳ್ಳಿಯ ದೇವಸ್ಥಾನದ ಹತ್ತಿರದ ತೋಪಿನಲ್ಲಿ ನದಿ ಇಬ್ಭಾಗವಾಗುವುದ ರಿಂದ ಪ್ರವಾಹ ನಿಧಾನವಾಗಿ ಊರ[illegible] ನೋಡುತ್ತಾ ಮುಂದೆ ಸಾಗು ತ್ತದೆ. ಸುಗ್ಗಿಯ ಕಾಲದಲ್ಲಿ ನದಿಯ ತೀರದಲ್ಲಿ ಎಲ್ಲಿಂದ ಎಲ್ಲಿಯುವರೆಗೆ

ನೋಡಿದರೂ ಚಿನ್ನದ ರಾಶಿಯಂತೆ ಭತ್ತ ಕಣಗಳಲ್ಲಿ ರಾಶಿರಾಶಿಯಾಗಿ ಬಿದ್ದಿರುತ್ತದೆ. ಮನುಷ್ಯ ತನ್ನ ಸ್ವಾಭಾವಿಕವಾದ ಚುರುಕು ಧೈರ್ಯ ಎದೆಗಾರಿಕೆ ಕಷ್ಟಸಹಿಷ್ಣುತೆ ತೃಪ್ತಿ ಇವುಗಳನ್ನು ಕಾಲ ಧರ್ಮ ಸಂಯೋಗದಿಂದ ಕಳೆದುಕೊಳ್ಳುತ್ತಿದ್ದರೂ ಪ್ರಕೃತಿ ಎಂದಿನಂತೆ ಉದಾರಿಯೂ ದಿನದಿನವೂ ಹೊಸ ಹೊಸ ಬೆಡಗಿನಿಂದ ಇವನನ್ನು ಆಕರ್ಷಿಸುವುದೂ ಆಗಿರುತ್ತದೆ.

ಮಲ್ಲಿಗೆಹಳ್ಳಿಯಂತಹ ನದೀ ತೀರದ ಅರ್ಧ ಮಲೆನಾಡಿನ ಗುಡ್ಡಗಿಡಗಳಲ್ಲಿ ವಾಸಿಸುವ ಜನರಿಗೆ ಪ್ರಕೃತಿಯ ಬಗೆಬಗೆಯ ಮನೋಧರ್ಮಗಳೂ ವ್ಯಾಪಾರಗಳೂ ವೇಷ ಬದಲಾವಣೆಗಳೂ ಚೆನ್ನಾಗಿ ಗೊತ್ತಾಗಿರುತ್ತವೆ. ಅಲ್ಲಿಯ ಮರಗಳು ಬಿರುಗಾಳಿಯಲ್ಲಿ ಘರ್ಜಿಸುವುದೂ ವಸಂತದ ತಂಗಾಳಿ ಬಂದಾಗ ಮೆತ್ತಗೆ ಉಸಿರು ಬಿಡುವುದೂ ಅವರ ಅನುಭವಕ್ಕೆ ಬರುತ್ತದೆ. ಪ್ರತಿಯೊಂದು ಮರದ ಒಳಗಡೆ ನಡೆಯುವ ವ್ಯಾಪಾರಗಳೂ ಅವರಿಗೆ ಸ್ನೇಹಿತನ ಮನೋಧರ್ಮದಂತೆ ಚೆನ್ನಾಗಿ ಕಾಣುತ್ತದೆ. ಈ ಮರಗಳ ಎಲೆಗಳು ಇಂತಹ ಇಂತಹ ಕಾಲದಲ್ಲಿ ಇಂತಹ ಇಂತಹ ಬಣ್ಣವನ್ನು ಹೊಂದುತ್ತವೆ, ಈ ಲತೆ ಇಂತಿಂತಹ ತಿಂಗಳಿನಲ್ಲಿ ಈ ಮರದ ಮೇಲಕ್ಕೆ ಇಷ್ಟಿಷ್ಟು ಎತ್ತರ ಹಬ್ಬುತ್ತದೆ; ಈ ಮರದಲ್ಲಿ ವಸಂತದಲ್ಲಿ ಎಲ್ಲಕ್ಕಿಂತ ಮುಂಚೆ ಚಿಗುರು ಹೊರಡುತ್ತದೆ. ನದಿಯಲ್ಲಿ ನೀರು ಇಂತಿಂತಹ ಮಳೆಯಲ್ಲಿ ಇಷ್ಟಿಷ್ಟು ಹೆಚ್ಚಾಗಿ ಬರುತ್ತದೆ. ಈ ಈ ತಿಂಗಳಲ್ಲಿ ನೀರು ಇಂಗಿ, ಮರಳು ಬಯಲು ಬಿಡುವಾಗುತ್ತದೆ. ಇವೆಲ್ಲಾ ಮಲ್ಲಿಗೆಹಳ್ಳಿಯ ಜನರಿಗೆ ನೆರೆಹೊರೆಯವರ ವ್ಯವಹಾರದಂತೆ ಚೆನ್ನಾಗಿ ಗೊತ್ತು. ಈ ಜನ ರಾತ್ರಿ ಮಲಗುವಾಗ ಹೊರತು ಉಳಿದ, ದಿನದ ತಮ್ಮ ಎಲ್ಲಾ ಕಾಲವನ್ನೂ ಮನೆಯಿಂದ ಹೊರಗೆ ಪ್ರಕೃತಿಯ ಜತೆಯಲ್ಲಿಯೇ ಕಳೆಯುತ್ತಾರೆ. ಆದುದರಿಂದ ಪ್ರಕೃತಿಯ ಸ್ವಭಾವದ ಗುಟ್ಟೆಲ್ಲಾ ಅವರಿಗೆ ಚೆನ್ನಾಗಿ ಗೊತ್ತಾಗಿದೆ.

ಮಲ್ಲಿಗೆಹಳ್ಳಿಯನ್ನು ಶ್ಯಾನುಭೋಗರ ಲಾಯವೆಂದೇ ಕರೆಯಬಹುದು. ಒಂದು ಹೋಬಳಿಯ ಇಪ್ಪತ್ತು ಶ್ಯಾನುಭೋಗರು ಇಲ್ಲಿ ಗೇರಾಯಿಸಿಕೊಂಡಿದ್ದಾರೆ. ಇವರಲ್ಲಿ ಒಬ್ಬೊಬ್ಬನೂ ಒಬ್ಬೊಬ್ಬ

ಪ್ರಚಂಡನೇ. ಪಾಪ, ಈ ಶ್ಯಾನುಭೋಗರ ಮುಂದೆ, ಆ ತಾಲ್ಲೂಕು ಕಚೇರಿಯ ಕುರ್ಚಿಗಳನ್ನು ಸವೆಸುತ್ತಾ ಶಾಯಿಯನ್ನು ಹೀರುತ್ತಾ ಕುಳಿತಿರುವ ಗುಮಾಸ್ತರೂ ಶಿರಸ್ತೆದಾರರೂ ಅಮಲ್ದಾರರೂ ಏನುತಾನೆ ಮಾಡಿಯಾರು ? ಯಾವ ಯಾವ ಶ್ಯಾನುಭೋಗನ ಲೆಕ್ಕದಲ್ಲಿ ಯಾವ ಯಾವ ಭೂತ ಪ್ರೇತ ಪಿಶಾಚಿಗಳು ಇರುವುವೋ ಪರಮಾತ್ಮನಿಗೊಬ್ಬನಿಗೇ ಗೊತ್ತು. ತಾಲ್ಲೂಕಿನ ಅಧಿಕಾರಿಗಳೂ, ಮೊದ ಮೊದಲು ಬಂದಾಗ ಅತ್ಯಂತ ಜಬರ್‌ದಸ್ತಿನಿಂದಲೇ ಬರುವವರೂ, ಎರಡು ಮೂರು ಸಲ ಮಲ್ಲಿಗೆಹಳ್ಳಿಗೆ ಬಂದು ಹೋಗುವುದರೊಳಗೆ ಈ ಪ್ರಚಂಡ ಶ್ಯಾನುಭೋಗರ ಪ್ರಜ್ಞೆಗೂ. ಧೈರ್ಯಕ್ಕೂ, ತಿಳುವಳಿಕೆಗೂ, ಒಗ್ಗಟ್ಟಿಗೂ ಮಲ್ಲಿಗೆಹಳ್ಳಿಯ ನದಿ, ದೇವಾಲಯ, ತೋಪು, ಹುಳಿಯನ್ನಗಳಿಗೂ ಮರುಳಾಗಿ, ತಾವೂ ಮನುಷ್ಯರೇ ಆಗುತ್ತಾರೆ.

ಈ ಶ್ಯಾನುಭೋಗರು ಪ್ರಚಂಡರು ಎಂದು ನಾವು ಹೇಳುವ ಮಾತಿನ ಅರ್ಥ ಅವರೆಲ್ಲ ಗಟ್ಟಿಗರೆಂಬ ಅಭಿಪ್ರಾಯದಲ್ಲಿಯೇ ಹೊರತು ಮತ್ತೇನು ಅಲ್ಲ. ಇವರಲ್ಲಿ ಕೆಲವರನ್ನು ನೋಡಿದರೆ ಅವರು ಶ್ಯಾನುಭೋಗರಂತೆ ಕಾಣುವುದೇ ಇಲ್ಲ. ದೊಡ್ಡ ದೇಶಸೇವಕರಾಗಿ ತೋರುತ್ತಾರೆ. ಇನ್ನು ಕೆಲವರ ಮಾತುಗಳನ್ನು ಕೇಳಿದರೆ ಇವರು ಯಾವುದೋ ಕಾಲೇಜಿನ ಪಂಡಿತರಾಗಿರಬೇಕೆಂದು ತೋರುತ್ತದೆ. ಮತ್ತೆ ಕೆಲವರಲ್ಲಿ ಮಾತನಾಡುತ್ತಿದ್ದರೆ ಇವರಾರೋ ಪತ್ರಿಕಾಕರ್ತರು ಇಲ್ಲಿ ಬಂದು ಸೇರಿರಬಹುದೆಂದು ಅನುಮಾನ ಬರುತ್ತದೆ. ಶ್ಯಾನುಭೋಗರೂ ಪಟೇಲರೂ ರೈತರೂ ಮನುಷ್ಯರೇ ಅಲ್ಲ ಎಂಬ ಭಾವನೆ ಅನೇಕ ಅಧಿಕಾರಿಗಳಲ್ಲಿ ಇರುವುದುಂಟು. ಅದರಲ್ಲಿಯೂ ಹಳ್ಳಿಗಳಿಗೆ ಬರುವಾಗ ಅವರು ಮೀಸೆಗಳನ್ನು ಹೆಚ್ಚಾಗಿ ಹುರಿಮಾಡಿಕೊಂಡು ಜನರನ್ನು ದನಗಳಂತೆ ಆಡಿಸಬೇಕೆಂದು ಬರುತ್ತಾರೆ. ಈ ಜಬರ್‌ದಸ್ತಿನ ರೋಗ ರೆವಿನ್ಯೂ ಮತ್ತು ಪೋಲಿಸ್ ಅಧಿಕಾರಿಗಳಿಗೆ ಬಹಳ ಹೆಚ್ಚು. ಸಿವಿಲ್ ಲಿಸ್ಟ್ ಸೀನಿಯಾರಿಟಿ ಲಿಸ್ಟ್ ಈ ಒಂದು ಕಾವ್ಯವನ್ನು ಮಾತ್ರ ಯಾವಾಗಲೂ ವ್ಯಾಸಂಗ ಮಾಡುತ್ತಾ ತಮ್ಮ ಸಮಾನ ಪ್ರಾಜ್ಞರೇ ಇಲ್ಲವೆಂಬ ಪಿತ್ಥ ವಿಕಾರವನ್ನುಹೊಂದಿದ ಅನೇಕ ಅಧಿಕಾರಿಗಳಿಗೆ, ಮಲ್ಲಿಗೆಹಳ್ಳಿಯನ್ನು ನೋಡಿದಮೇಲೆ ಇವರೂ ನಮ್ಮವರೇ, ನಮ್ಮ

ಹಾಗೆಯೇ ಇವರಿಗೂ ಕಷ್ಟಸುಖಗಳಿವೆ ಎಂದು ಮನವರಿಕೆಯಾಗುತ್ತಿದ್ದಿತು.

ಮನುಷ್ಯ ಸ್ವಭಾವದಲ್ಲಿರುವಂತೆ, ಶಾನುಭೋಗರಲ್ಲಿಯೂ ಕೆಲವು ಘಾಟಿಗಳು ಮಲ್ಲಿಗೆಹಳ್ಳಿಯಲ್ಲಿದ್ದಾರೆ. ಅವರು ಎಷ್ಟೋ ಅಮಲ್ದಾರರನ್ನು ನುಂಗಿ ಜೀರ್ಣಿಸಿಕೊಂಡಿದ್ದಾರೆ. ಒಂದೊಂದು ಸಮಯದಲ್ಲಿ ರೈತರಿಗೆ ಹೆಚ್ಚು ಕಿರುಕುಳ ಈ ಶ್ಯಾನುಭೋಗರಿಂದಲೋ ಅಥವಾ ಅಧಿಕಾರಿಗಳಿಂದಲೋ ಎಂದು ರೈತರಿಗೆ ಗಾಬರಿಯಾಗುತ್ತದೆ. ಇಂತಹ ಶ್ಯಾನುಭೋಗರು ಅಧಿಕಾರಿಗಳ ಎದುರಿಗೆ ನವರಸ ನಾಟಕವನ್ನು ಪ್ರದರ್ಶಿಸುತ್ತಾರೆ. ಕುಳವಾಡಿಗಳ ಮೇಲೆ ಜೋರು ಮಾಡುತ್ತಾರೆ. ಕಂದಾಯ ಬಾಕಿ ನಿಲ್ಲಿಸಿಕೊಂಡಿರುವ ರೈತನ ಮುಂದೆ ರುದ್ರರಾಗುತ್ತಾರೆ. ಗಂಡ ಸತ್ತವಳ ಹಸುವನ್ನು ಕಂದಾಯದ ಬಾಕಿಗಾಗಿ ಹಿಡಿಯಬೇಕೆಂದು ಅಮಲ್ದಾರರು ಘರ್ಜಿಸಿದಾಗ ಅವಳ ಸ್ಥಿತಿಗತಿಗಳನ್ನು ಅವಳಿಗಿಂತ ಕರುಣಾಜನಕವಾಗಿ ಮಾತನಾಡಿ ಅಮಲ್ದಾರರಿಂದ ವಾಯಿದೆ ಕೊಡಿಸುತ್ತಾರೆ. ಆಗಲೂ ಅಮಲ್ದಾರರು ವಾಯಿದೆ ಕೊಡದೆ ಹಸುವನ್ನು ಜಪ್ತಿಯನ್ನೇ ಮಾಡಿ ಪಟೇಲನ ವಶದಲ್ಲಿ ನಿಲ್ಲಿಸಿದರೆ, ರಾತ್ರಿ ಆ ಹಸುವನ್ನು ಹಾರಿಸಿ, ಅದರ ಜಾಗದಲ್ಲಿ ಗೂನು ಬೆನ್ನಿನ ಹೊಟ್ಟೆ ಬೆನ್ನು ಒಂದಾಗಿ ಸೇರಿ ಚಕ್ಕಳವಾದ ಬಲರಾಮ ಗೋವನ್ನು ನಿಲ್ಲಿಸುತ್ತಾರೆ. ಒಂದುಸಲ ಹೀಗೆ ನಡೆದು, ಹಸುವಿನ ಒಡತಿ ಹೆಂಗಸು, ಅಮಲ್ದಾರರನ್ನು ಒಂದು ತನ್ನ ಹಸು ಎಲ್ಲಿ ಎಂದು ತರಾಟೆಗೆ ತೆಗೆದುಕೊಂಡಾಗ, ಅಮಲ್ದಾರರು ಮಾತನಾಡುವುದಕ್ಕೆ ಮುಂಚೆಯೇ ಶ್ಯಾನುಭೋಗರು "ಧಣಿಗಳನ್ನು ಹಾಗೆ'ಹೇಳಬಾರದು. ಧಣಿಗಳಿಗೆ ಒಂದು ಲೆಕ್ಕವೇ. ಹಸುವಿನ ಬೆಲೆಯಲ್ಲಿ ನಿನ್ನ ಕಂದಾಯ ಕೊಟ್ಟು ಉಳಿದ ಹಣ ನಿನಗೆ ಕೊಡುತ್ತಾರೆ" ಎಂದರು. ಅಮಲ್ದಾರರು ಮಾತನಾಡದೆ ತಾಲ್ಲೂಕ್ ಹೆಡ್ಕ್ವಾರ್ಟರಿಗೆ ಹೋಗಿ, ಶ್ಯಾನುಭೋಗನಿಗೆ ಹಣ ಕಳುಹಿಸಿದರು.

ಅಮಲ್ದಾರರಿಗೆ ಮಲ್ಲಿಗೆಹಳ್ಳಿ ಶ್ಯಾನುಭೋಗರೇ ಅದ್ಭುತ ಸಮಸ್ಯೆಯಾಗಿದ್ದಾರೆ. ಇತರ ಹಳ್ಳಿ ಶ್ಯಾನುಭೋಗರು ಹಣ ತಿಂದು ಸಿಕ್ಕಿಹಾಕಿಕೊಳ್ಳುತ್ತಾರೆ. ಕೆಲವು ಅಮಲ್ದಾರ್ ಸಬ್‌ಡಿವಿಜನ್ ಅಧಿಕಾರಿಗಳು

ಶ್ಯಾನುಭೋಗನು ಕಂದಾಯ ವಸೂಲ್ಮಾಡಿ ಸರ್ಕಾರಕ್ಕೆ ಕಟ್ಟದೆ ರೈತರಿಗೆ ರಸೀತಿಯನ್ನು ಕೊಟ್ಟಿದ್ದಾರೆಯೇ ಎಂಬುದನ್ನು ಹುಡುಕುವುದಕ್ಕೇ ವರುಷ ದಲ್ಲಿ ಆರು ತಿಂಗಳು ಕಳೆಯುತ್ತಾರೆ. ಇನ್ನು ಕೆಲವರು ಶೇಕದಾರನನ್ನು ಗುಪ್ತ ಪೋಲೀಸಿನವನನ್ನಾಗಿ ನಿಯಮಿಸಿ ಅವನು ಈ ಘಾಟಿ ಶ್ಯಾನು ಭೋಗರ ಮೇಲೆ, ಹಣ ಇರಸಾಲಾಗದ ರಸೀತಿಯನ್ನು ತರುತ್ತಾನೆಯೇ ಎಂದು ಕಾಯುತ್ತಿರುತ್ತಾರೆ, ಮಲ್ಲಿಗೆಹಳ್ಳಿಗೆ ಬರುತ್ತಿದ್ದ ಅಮಲ್ದಾರರೂ ಸಬ್ ಡಿವಿಜನ್ ಸಾಹೇಬರೂ "ಈ ಊರಿನ ಶ್ಯಾನುಭೋಗರು ಘಾಟಿಗಳು. ಎಡಗೈಯ್ಯಲ್ಲಿ ಇರಸಾಲಾಗದ ಹಣದ ರಸೀತಿ ಇಟ್ಟುಕೊಂಡೇ ಇವರನ್ನು ಮಾತನಾಡಿಸಬೇಕು. ಇಲ್ಲದಿದ್ದರೆ ಇವರನ್ನು ಬಗ್ಗಿಸುವುದಕ್ಕಾಗುವುದಿಲ್ಲ" ಎಂದುಕೊಳ್ಳುತ್ತಿದ್ಧರು. ಆದರೆ ಶೇಕದಾರರು ಎಷ್ಟು ಗಸ್ತು ತಿರುಗಿ ದರೂ ಅಂತಹ ರಸೀತಿ ಮಾತ್ರ ದೊರೆಯುತ್ತಿರಲಿಲ್ಲ. ಆದರೂ 'ಮಲ್ಲಿಗೆ ಹಳ್ಳಿಯ ಆ ಶ್ಯಾನುಭೋಗ ಇಷ್ಟು ತಿಂದಿದಾನೆ. ಈ ಶ್ಯಾನುಭೋಗ ಅಷ್ಟು ತಿಂದಿದಾನೆ' ಎಂಬ ಸುದ್ದಿ ಮಾತ್ರ ನಿತ್ಯ ಕಿವಿಗೆ ಬೀಳುತ್ತಲೇ ಇದ್ದಿತು. ಒಂದುಸಲ ಸಬ್ ಡಿವಿಜನ್ ಆಫೀಸರಿಗೆ, ಒಬ್ಬ ಶ್ಯಾನುಭೋಗ ಖಂಡಿತ ವಾಗಿ ಒಬ್ಬ ರೈತನಿಂದ ಹಣ ತೆಗೆದುಕೊಂಡು ಅವನಿಗೆ ರಸೀತಿ ಕೊಟ್ಟು, ಆ ಹಣವನ್ನು ಸರ್ಕಾರಕ್ಕೆ ಇರಸಾಲು ಮಾಡಿಲ್ಲವೆಂದು ಗೊತ್ತಾಯಿತು. ಆ ರೈತ ಬಹಳ ಬಡವನಾಗಿದ್ದನು. ಅಂತಹ ಬಡವ, ಕಂದಾಯ ಮತ್ತೆ ಕೊಡಲಾರದ ಕಾರಣದಿಂದಲಾದರೂ ತನ್ನಲಿರುವ ರಸೀತಿಯನ್ನು ಈಚೆಗೆ ತೆಗೆಯುತ್ತಾನೆಂದುಕೊಂಡು ಸಾಹೇಬರು ರೈತನನ್ನು ಕರೆಸಿ, "ನೀನು ಕಂದಾಯ ಕೊಟ್ಟಾಯಿತೆ" ಎಂದು ಗದರಿಸಿದರು. ರೈತನು "ಹೌದು ಸ್ವಾಮಿ" ಎಂದನು. ಸಾಹೇಬರಿಗೆ ಬಹಳ ಸಂತೋಷವಾಯಿತು. ಅವರು "ಈಗ ಶ್ಯಾನುಭಾಗರು ನೀನು ಕೊಟ್ಟಿಲ್ಲವೆನ್ನುತ್ತಾರೆ. ನಿನ್ನ ಮೇಲೆ ಬಾಕಿ ನಿಲ್ಲಿಸಿದ್ದಾರೆ. ಎಲ್ಲಿ ನಿನ್ನಾತ್ವ ಇರೋ ರಸೀತಿ ತಾ" ಎಂದರು. ರೈತನು "ಕಂದಾಯ ಕೊಟ್ಟಿರೋದು ಉಂಟು ಸ್ವಾಮಿ ಆದರೆ ರಸೀತಿ ಎಲ್ಲೊ ಹಾಕಿನ್ನಿ. ಈಗ ಸಿಕ್ಕೊಕಿಲ್ಲ" ಎಂದನು. ಸಾಹೇಬರು "ರಸೀತಿ ಸಿಕ್ಕದ ಮೇಲೆ ನೀನು ಕೊಟ್ಟಿರೋದೆ ಬರಿ ಸುಳ್ಳು. ನಿನ್ನ ಹತ್ತಿರ ಮತ್ತೆ ವಸೂಲ್ಮಾಡತೇನೆ ಎಂದರು. ರೈತನು "ಸ್ವಾಮಿ ಚಿತ್ತ.

ಸರ್ಕಾಕ್ಕೆ ಈಟೊಂದು ಕಂದಾಯ ದಂಡ ತೆರ್ತೀನಿ. ಕೆರೆ ಒಡೆದು ೨೦ ವರುಷ ಆಯ್ತು. ಪ್ರತಿವರುಷನೂ ಪೂರ್ತ ಕಂದಾಯ ತೆರ್ತ ಇದೀನಿ. ಇದೂ ಒಂದು ದಂಡ ಶ್ಯಾನುಭೋಗ ಅಯ್ಯನಿಗೇ ಆಯ್ತು'' ಎಂದನು. ಸಾಹೇಬರು " ನೀನು ಹೀಗೆ ಮಾಡಿಯೇ ಅವರು ನಿಮ್ಮ ಮನೆ ಹಾಳ್ಮಾಡೋದು ಈಗ ನಿನ್ನ ರಸೀತಿ ಸಿಕ್ಕಿದ್ರೆ ಇನ್ನು ಮುಂದೆ ಶ್ಯಾನುಭೋಗನ ಹುಟ್ಟು ಅಡಗಿಸುತ್ತಿದ್ದೆ'' ಎಂದರು. ರೈತನು " ಬುದ್ಧಿ ದಣಿಗಳು ಆ ಕಡೆ ಹೋದರೆ ಶ್ಯಾನುಭಾಗರು ಉಪ್ಪಿಟ್ಟು ಕಾಪಿ ಪಾನಕ ಕೊಡ್ತಾರೆ. ರಸಬಾಳೆಹಣ್ಣು ಎಳನೀರು ನಿಂಬೆಹಣ್ಣು ಎಲ್ಲಾ ಗಾಡೀ ಒಳ್ಗೆ ಮಡಗ್ತಾರೆ. ದಣಿಗಳು ನಗತಾ ಹೊರಟು ಹೋಯ್ತೀರಿ. ಆಮೇಲೆ ಅಪ್ಪ ಅಜ್ಜನ ಕಾಲದಿಂದ ಇಲ್ದ ಯಾಜ್ಯ ನಾಯಾಕೆ ತಳದ ದಣಿತಾವ ಕಟ್ಟಿಕೊಳ್ಳಲಿ'' ಎಂದನು. ಸಾಹೇಬರು ಅವನನ್ನು ಬೈದುಕೊಂಡು ತಮ್ಮ ಕೆಲಸದಲ್ಲಿ ತೊಡಗಿದರು. ಆ ವೇಳೆಗೆ ಶ್ಯಾನುಭೋಗ ಕಾಫಿ ತಿಂಡಿ ಎಳನೀರು ಎಲೆ ಅಡಿಕೆ ರಸಬಾಳೆಹಣ್ಣು ಮುಂತಾದುವನ್ನೆಲ್ಲಾ ತೆಗೆಸಿಕೊಂಡು ಬಂದ. ಸಾಹೇಬರು ಆಯಾಸ ಪರಿಹಾರ ಮಾಡಿಕೊಂಡು, ಹಳ್ಳಿಗಳಿಂದ ಮನೆಗೆ ಬರಿಯ ಕೈಯಲ್ಲಿ ಹೋಗಬಾರದೆಂದು ಆ ಎಳನೀರು ಬಾಳೆಹಣ್ಣುಗಳನ್ನು ತಮ್ಮ ಗಾಡಿಗೆ ಹಾಕಿಸಿಕೊಂಡು ಹೋದರು. ಶ್ಯಾನುಭೋಗರೂ ರೈತರೂ ಒಟ್ಟಿಗೆ ಮಾತನಾಡುತ್ತಾ ತಮ್ಮ ತಮ್ಮ ಮನೆಗಳಿಗೆ ಹೋದರು.

ಹೆಡ್‌ಕ್ವಾರ್ಟರಿಗೆ ಹೊಸದಾಗಿ ವರ್ಗವಾಗಿ ಮಲ್ಲಿಗೆಹಳ್ಳಿಗೆ ಬಂದ ಅಮಲ್ದಾರರಿಗೆ ಆ ಹಳ್ಳಿ ಹೀಗೆ ಇತರ ಹಳ್ಳಿಗಳಂತಲ್ಲದೆ ಒಳ್ಳೆ ಗೆಲುವಾದ ಹಳ್ಳಿಯಾಗಿ ತೋರುತ್ತಿದ್ದಿತು. ಅಲ್ಲಿದ್ದ ಒಬ್ಬೊಬ್ಬ ಶ್ಯಾನುಭೋಗನೂ ಒಂದೊಂದು ಊರಾಗಿ ಒಂದೊಂದು ಇತಿಹಾಸವಾಗಿ ಒಬ್ಬೊಬ್ಬ ನಾಯಕನಾಗಿ ತೋರುತ್ತಿದ್ದನು. ಅವರ ಆಳವನ್ನು ಹಿಡಿಯುವುದೇ ಅಧಿಕಾರಿಗಳಿಗೆ ಕಷ್ಟವಾಗುತ್ತಿದ್ದಿತು. ಅವರ ಅನುಭವದಲ್ಲಿ ಸಾಧಾರಣವಾಗಿ "ಶ್ಯಾನುಭೋಗನೆಂದರೆ ಒಂದು ಬಡ ಪ್ರಾಣಿ. ಅವನು ಹಳ್ಳಿಯ ಬಾಗಲಿಗೆ ಕಂದಾಯ ವಸೂಲ್ಮಾಡಲು ಹೋದಕೂಡಲೆ ಮೊದಲು ಅವನನ್ನು ನಾಯಿಗಳು ಓಡಿಸಿಕೊಂಡು ಬಗಳುತ್ತಾ ಸ್ವಾಗತಿಸುತ್ತವೆ. ಆಗ ಅವನು ಊರಿನ ಜನರನ್ನು ಕರೆದು ತಾನು ಇಂಥವನೆಂದ ತಾರ್ಕಣೆ ಕೊಟ್ಟು

ಊರೊಳಕ್ಕೆ ಹೋಗಬೇಕಾಗುತ್ತದೆ. ಹೋದಮೇಲೆ ಆ ಚಾವಡಿಯಲ್ಲಿ ಬಿದ್ದಿರುವ ಒಂದು ಬಂಡಿ ಕಸವನ್ನು ಆತ ಕಾಲಿನಿಂದಲೋ ಕೈಯಿಂದಲೋ ತಾನೇ ಗುಡಿಸಿಕೊಂಡು ಒಂದು ಚಾಪೆ ಬೇಡಲು ಪ್ರಾರಂಭಿಸುತ್ತಾನೆ. ಅರ್ಧಗಂಟೆ ಗದ್ದಲ ಮಾಡಿದಮೇಲೆ, ಅರಗು ಹರಿದ ಜಲ್ಲುಜಲ್ಲಾದ ಒಂದು ಹರಕು ಚಾಪೆ ಹೊರಕ್ಕೆ ಬರುತ್ತದೆ. ಅದರ ಮೇಲೆ ಅವನು ಕುಳಿತುಕೊಂಡ ಕೂಡಲೇ ಸುತ್ತಾಗ್ರಾಮದ ಮುಖಂಡರೆಲ್ಲಾ ಬಂದು ಜೋಡಿ ಸೇದುತ್ತಾ ಹೊಗೆಸೊಪ್ಪು ಎಲೆ ಅಡಿಕೆ ಅಗಿಯುತ್ತಾ ಕುಳಿತುಬಿಡುತ್ತಾರೆ. ಒಬ್ಬನು ಶ್ಯಾನುಭೋಗನ ಮುಖಕ್ಕೆ ಹೊಗೆ ಬಿಡುತ್ತಾನೆ. ಶ್ಯಾನುಭೋಗ ಪಂಚೆಯ ಸೆರಗಿನಿಂದ ಹೊಗೆಯನ್ನು ಓಡಿಸುತ್ತಾನೆ. ಒಬ್ಬ ಎಲೆ ಅಡಿಕೆ ಹಾಕಿಕೊಂಡು ಹೊಗೆಸೊಪ್ಪು ಅಗಿಯುತ್ತಿರುವವನು ಪಿತೃಗಳಿಗೆ ಪಿಂಡವನ್ನು ಕೊಡುವ ವೀರಾಸನದಲ್ಲಿ ಕುಳಿತು ತುಟಿಯಮೇಲೆ ಎರಡು ಬೆರಳಿಟ್ಟು ಅದರ ನಡುವಿನಿಂದ ಕೆಂಪು ರಸವನ್ನು ಪಿಚಕಾರಿಯಿಂದ ಬಿಡುವಂತೆ ಹೊರಕ್ಕೆ ಬಿಡುತ್ತಾನೆ. ಅದರ ತುಂತುರು ಹಾರಿದ ಶ್ಯಾನುಭೋಗ ಅದನ್ನು ಬಟ್ಟೆಯಿಂದ ಒರಸಿಕೊಳ್ಳುತ್ತಾನೆ.

ಆ ನೆರೆಯುವ ವಿದ್ವಾಂಸರೆಲ್ಲಾ ಸರಸ್ವತಿಯ ಅವತಾರಗಳೇ. ಒಬ್ಬನು ಮಿತಾಕ್ಷರೀ, ಒಬ್ಬನು ಹತಾಕ್ಷರೀ, ಒಬ್ಬನು ಅಕ್ಷರ ಲಂಬಕ, ಒಬ್ಬನು ಅಕ್ಷರ ಹಿಂಸಕ, ಇನ್ನೊಬ್ಬನು ಅಕ್ಷರ ಭಕ್ಷಕ. ಯಾರ ಬಾಯಲ್ಲೂ ಮಾತುಗಳು ಸರಿಯಾಗಿ ಹೊರಡುವುದಿಲ್ಲ. ಒಬ್ಬನ ಕೈಯಲ್ಲಿ ರುಜು ಹಾಕು ಎಂದು ಕಡ್ಡಿ ಕೊಟ್ಟರೆ ತೀರಿತು. ಮುಖವನ್ನು ವಿಕಾರ ಮಾಡಿಕೊಂಡು ಕಾಗದ ಹರಿಯುವಂತೆ ಕಡ್ಡಿಯಿಂದ ಸದ್ದು ಮಾಡುತ್ತಾ ರೊಯ್ ಶಬ್ದ ಹೊರಡಿಸುತ್ತಾನೆ. ಅವರಲ್ಲಿ ಒಬ್ಬೊಬ್ಬ ರಾಜ ಶಾಸ್ತ್ರಜ್ಞನೂ ಉಂಟು. ಚೆನ್ನಂಗಿಹಳ್ಳಿ ಅಪ್ಪಯ್ಯನ ಹತ್ತಿರ, ಕಬ್ಬತ್ತಿ ತಿಪ್ಪಯ್ಯನ ಹತ್ತಿರ ವೃತ್ತಾಂತ ಪತ್ರಿಕೆ ಓದಿಸಿ ತಿಳಿದುಕೊಂಡು ಬಂದಿರುತ್ತಾನೆ. ಆದರೆ ಶ್ಯಾನುಭೋಗನಿಗೆ ವಿಚಾರಗಳೊಂದೂ ತಿಳಿದಿರುವುದಿಲ್ಲ. ಮೊದಲು ಮೊದಲು ರೈತನು ಲಡಾಯ ಹೇಗಾಯ್ತು, ಎಂದಾಗ ಶ್ಯಾನುಭೋಗ ನಡೀತಾ ಅಯ್ತೆ ಎನ್ನುತ್ತಾನೆ. ರೈತನು ಇಂತಹ ಹಡಗು ಮುಳುಗಿತಂತಲ್ಲ ಎಂದರೆ ಶ್ಯಾನುಭೋಗನು ಮುಳುಗಿತು ಮುಳುಗುತಾ ಇದೆ

ಎನ್ನುತ್ತಾನೆ. ರೈತನು ಯಾರದು ಜೋರು ಎಂದರೆ ಶ್ಯಾನುಭೋಗ ಇಬ್ಬರದೂ ಜೋರು ಒಂದೇ ಸಮನಾಗಿದೆ ಎನ್ನುತ್ತಾನೆ. ಆಗ ಶೆಟ್ಟಿಹಳ್ಳಿಯಲ್ಲಿ ಪೇಪರನ್ನು ಕೇಳಿಬಂದಿರುವ ರೈತನು ಇರಾಕ್ ಇರಾನ್ ಪರ್ಶಿಯನ್ ಸಮುದ್ರದ ಮಾರ್ಗವಾಗಿ ಜರ್ಮನಿಯವರು ಕರಾಚಿಗೆ ಬಂದರೆ ಏನು ಮಾಡುತ್ತೀರಿ ಎನ್ನುತ್ತಾನೆ.* ಶ್ಯಾನುಭೋಗನಿಗೆ ಸಿಟ್ಟು ಹತ್ತುತ್ತದೆ. ಅವನಿಗೆ ವಿಷಯಗಳು ಸರಿಯಾಗಿ ತಿಳಿದಿರುವುದಿಲ್ಲ. ಪ್ರಶ್ನೆ ಹಾಕುತ್ತಿರುವವನು ಕಂದಾಯದ ಬಾಕಿದಾರ. ಒರಿಯ ವಾಚಾಳಿ ಮಾತ್ರ. ಶ್ಯಾನುಭೋಗನು "ನಿನ್ನ ಮನೆ ಹಾಳಾಯ್ತು. ಲಡಾಯಿದ ಮನೆಗೆ ಬೆಂಕಿಬಿದ್ದು ಹೋಗಲಿ, ಕಂದಾಯ ತತ್ತಾ" ಎನ್ನುತ್ತಾನೆ. ರೈತ ತಿರಸ್ಕಾರದಿಂದ "ಯಾವ ಮಾತು ಆಡಿದರೂ ಅಯ್ಯ ಆಡಿ ಕೂಡಿ ಕಂದಾಯ್ಕೆ ತರ್‍ತಾನೆ. ಇವ ಕಂಡಿರೋದು ಇದೊಂದೆ ಮಾತು" ಎಂದುಕೊಂಡು ಎದ್ದು ಹೊರಟುಹೋಗುತ್ತಾನೆ. ಶ್ಯಾನುಭೋಗ ದಧಿಘೃತಕ್ಷೀರ ವರ್ಜ್ಯವಾದ ಬೇಳೆ ಶೂನ್ಯವಾದ ಊಟವನ್ನು ಅರ್ಧ ಅಸ್ತಮಾನದ ಹೊತ್ತಿಗೆ ಮಾಡಿಕೊಂಡು ಊರಿಗೆ ವಾಪಸು ಬರುತ್ತಾನೆ.

ಇಂತಹ ಶ್ಯಾನುಭೋಗರ ಪರಿಚಯವುಳ್ಳ ಅಧಿಕಾರಿಗಳಿಗೆ ಮಲ್ಲಿಗೆಹಳ್ಳಿಯ ಶ್ಯಾನುಭೋಗರನ್ನು ಕಂಡ ಕೂಡಲೇ ಒಂದು ಒಗೆಯ ಹೊಸ ಪ್ರಪಂಚಕ್ಕೆ ಬಂದ ಅನುಭವವಾಗುತ್ತದೆ. ಎಲ್ಲಾದಕ್ಕಿಂತ ಹೆಚ್ಚಾಗಿ ಆ ಶ್ಯಾನುಭೋಗರ ಘಾಟಿತನ ಕಂಡು ಅವರಿಗೆ ಗಾಬರಿಯಾಗುತ್ತದೆ. ಆ ಶ್ಯಾನುಭೋಗರ ಎದುರಿಗೆ ನಿಂತಾಗ ಅವರಿಗೆ ಮಾತನಾಡುವುದಕ್ಕೇ ಏನೂ ತೋಚುವುದಿಲ್ಲ. ಮುಖ್ಯವಾಗಿ ಮಲ್ಲಿಗೆಹಳ್ಳಿಯ ಶ್ಯಾನುಭೋಗ; ನೋಡಿದರೆ ತೆಳ್ಳಗೆ ಮೈಯಲ್ಲಿ ಮಾಂಸಖಂಡಗಳೇ ಇಲ್ಲದ ಒರಿಯ ಮೂಳೆಯ ಕಬ್ಬಿಣದ ತಂತಿಯ ಬೊಂಬೆ. ಆ ಶ್ಯಾನುಭೋಗ ಅವನ ಆಕಾರಕ್ಕೂ ಅಂತಸ್ತಿಗೂ, ಸಾಗಿಸುವ ಕೆಲಸ ಅದ್ಭುತವಾದುದು. ಅವನು ಮಾಡುವ ಕೆಲಸ ಬರಿಯ ಕಂದಾಯ ವಸೂಲ್ಮಾಡುವುದು ಅಷ್ಟೆ. ಆದರೆ ಊರಿನಲ್ಲಿ ಅವನ ಅಧಿಕಾರ, ಸೈನ್ಯದಲ್ಲಿ ಕಮ್ಯಾಂಡರ ಅಧಿಕಾರಕ್ಕಿಂತ ಹೆಚ್ಚು. ಅವನು ಕೆಲಸ ಮಾಡುವಾಗ ಶ್ಯಾನುಭೋಗನಿಗೆ ಮೇಲ್ಪಟ್ಟ ಅಧಿಕಾರಿಗಳು

* ಇದನ್ನು ಬರೆದುದು ಯುದ್ಧ ನಡೆಯುತ್ತಿರುವಾಗ.

ಯಾರೂ ಇಲ್ಲವೆಂಬಂತೆಯೇ ನಡೆಯುತ್ತಾನೆ. ಅಮಲ್ದಾರರು ಎದುರಿಗೆ ಇರುವಾಗ ಅಮಲ್ದಾರರಿಗೆ ಇಷ್ಟವಿರಲಿ ಇಲ್ಲದಿರಲಿ ತಾನು ರೈತರಿಗೂ ಕುಳವಾಡಿಗಳಿಗೂ ಪಟೇಲರಿಗೂ ಹೇಳುವ ಮಾತುಗಳನ್ನೆಲ್ಲಾ "ಸಾಹೇಬರ ಅಪ್ಪಣೆಯಾಗುತ್ತೆ" ಎಂದು ಹೇಳಿ ತನ್ನ ಅಪ್ಪಣೆಯನ್ನೇ ಕೊಡುತ್ತಾನೆ. ಒಂದೊಂದು ಸಲ ಅಮಲ್ದಾರರು ಯಾವ ಅಪ್ಪಣೆಯನ್ನೂ ಮಾಡಿರುವುದೇ ಇಲ್ಲ. ಶಾನುಭೋಗ ಹೇಳುತ್ತಿರುವುದು ಅವರ ಅಭಿಪ್ರಾಯಕ್ಕೆ ಪೂರ್ಣವಾಗಿ ವಿರೋಧವಾಗಿಯೇ ಇರುತ್ತದೆ. ಆದರೆ ರೈತರು ಶ್ಯಾನುಭೋಗನ ಮಾತಿನಲ್ಲಿ ತೋರಿಸುತ್ತಿರುವ ಗೌರವವನ್ನೂ, ಅವನು ಹೇಳುವುದು ಸರಿ ಎಂದು ಅವರು ತೋರಿಸುತ್ತಿರುವ ಮುಖಭಾವವನ್ನೂ ನೋಡಿ, ಶಾನುಭೋಗನನ್ನು ಪ್ರತಿಭಟಿಸಬೇಕೆಂದಿರುವ ಅಮಲ್ದಾರರೂ ತಮ್ಮ ಅಭಿಪ್ರಾಯವನ್ನು ಬದಲಾಯಿಸಿಕೊಂಡು ತಾವೂ ರೈತರಂತೆ ಶಾನುಭೋಗ ಹೇಳಿದ ಮಾತುಗಳನ್ನೇ ಒಪ್ಪುತ್ತಾರೆ. ಮಲ್ಲಿಗೆಹಳ್ಳಿಯ ಈ ಶಾನುಭೋಗನನ್ನು ನೋಡಿದರೆ ಈ ಶಾನುಭೋಗ ನಿಜವಾಗಿಯೂ ಹಳ್ಳಿಗೆ ಪಾಳೆಯಗಾರ ಎಂದು ಗೊತ್ತಾಗುತ್ತದೆ. ಅನೇಕ ಸಮಯದಲ್ಲಿ ನ್ಯಾಯವನ್ನು ತೀರ್ಮಾನಿಸಿ ಶಿಕ್ಷೆ ವಿಧಿಸುವವನೂ ಆ ಶಿಕ್ಷೆಯನ್ನು ಜಾರಿ ಮಾಡುವವನೂ ಶ್ಯಾನುಭೋಗನೆ. ಕೆಲವು ವೇಳೆ ಊರು ಒಟ್ಟಿನ ಕೆಲಸಗಳನ್ನು ಮಾಡಬೇಕಾದಾಗ ಜನ ಸರಿಯಾಗಿ ಸೇರದಿದ್ದರೆ ಆಗ ಊರಿನವರು "ಎಲ್ಲಿ ಜಾರಿ ಡಿಪಾರ್ಟ್ಮೆಂಟ್ ಕರೆಯಿರಿ" ಎಂದು ಶಾನುಭೋಗನನ್ನು ಕರೆಯುವುದುಂಟು. ಈ ಶಾನುಭೋಗ ತೀಕ್ಷ್ಣ ಎಂಬುದನ್ನು ತೋರಿಸಲು ಜನರು ಇವನನ್ನು ತಮಗೆ ಮನಸ್ಸಿಗೆ ತೋರಿದ ಹೆಸರಿನಲ್ಲಿ ಕರೆಯುತ್ತಾರೆ. ಮೊದಲು ಮೊದಲು ಈ ಹೆಸರು ರಾವಣ ಆಯಿತು. ಆಮೇಲೆ ಕೀಚಕನಾಯಿತು. ಅನಂತರ ಘಟೋದ್ಗಜನಾಯಿತು. ಈಚೆಗೆ ಜನರಲ್ ಡೈಯರ್ ಆಗಿ ಹಿಟ್ಲರ್ ಆಗಿ ಕೊನೆಗೆ ಈಗ ನಾದಿರ್‌ಷಾ ಎಂಬ ಹೆಸರು ಖಾಯಂ ಆಯಿತು.

# ೨. ಬೆಣ್ಣೆ ಕರಗುವುದು ಬೆಂಕಿಗೇಯೆ

ಈ ಶ್ಯಾನುಭೋಗ ಕಟ್ಟಿಸುವ ತೋರಣಗಳನ್ನು ನೋಡಿದರೆ ಅಧಿಕಾರಿಗಳೆಲ್ಲಾ ಮಂಕಾಗಿ ಬಿಡುತ್ತಾರೆ. ಮಲ್ಲಿಗೆಹಳ್ಳಿಯವರು, ಈ ತೋರಣಗಳನ್ನು ನೋಡಿ "ಈ ತೋರಣಗಳಿಗೆ ರಸ್ತೆಯ ಮಾವಿನ ಮರಗಳೆಲ್ಲಾ ಬರಿದಾದವು. ಇನ್ನು ನೇರಳೆ ಅರಳಿ ಮುತ್ತುಗ ಮುಂತಾದ ಮರಗಳನ್ನು ಪ್ರಾರಂಭಿಸಬೇಕು" ಎನ್ನುತ್ತಾರೆ. ಆದರೆ ನಾದಿರ್ ಷಾ, ಸರ್ಕಾರಿ ಅಧಿಕಾರಿಗಳಿಂದ ಪ್ರಜೆಗಳಿಗೆ ಆಗಬೇಕಾದ ಕೆಲಸವನ್ನು ಸುಲಭವಾಗಿ ಮಾಡಿಸುತ್ತಾನೆ. ಒಂದು ಕಡೆ ಅವನಿಗೆ ಸರ್ಕಾರಿ ಅಧಿಕಾರಿಗಳೂ ಬೇಕು. ಮತ್ತೊಂದು ಕಡೆ ಪ್ರಜೆಗಳೂ ಬೇಕು.

ಒಂದು ಉದಾಹರಣೆ ಕೇಳಿ: ಮಲ್ಲಿಗೆಹಳ್ಳಿ ದೇವಸ್ಥಾನದ ಸುತ್ತಾ ಇರುವ ತೋಪಿನ ಪಾದಗಳನ್ನು ಹೇಮಾವತೀ ನದಿ ತೊಳೆಯುತ್ತದೆ. ಹೀಗೆ ತೊಳೆಯುತ್ತಿರುವ ಹೇಮಾವತೀ ನದಿ ಬರಬರುತ್ತಾ ತನ್ನ ಅಲೆಗಳ ಹೊಡೆತವನ್ನು ಜೋರುಮಾಡಿ ತೋಪಿನ ದಡವನ್ನು ನಿಧಾನವಾಗಿ ಕೊರೆಯತೊಡಗಿತು. ತೋಪನ್ನು ತೊಳೆಯುತ್ತಿದ್ದ ನದಿ ಮರಗಳನ್ನೆಲ್ಲಾ ಕೆಡವಿಯೇ ಬಿಟ್ಟಿತು. ಪ್ರಕೃತಿ ಮಾಡುವ ಯಾವ ಕೆಲಸವೂ ವಿಚಿತ್ರವೇ. ನದಿ, ನದಿಯ ಮಧ್ಯದಲ್ಲಿರುವ ಒಂದು ಕರೆಕಲ್ಲು ಬಂಡೆಯನ್ನು ಸುತ್ತಿಕೊಂಡು ದೇವಸ್ಥಾನದ ತೋಪಿನ ಕಡೆ ನುಗ್ಗುತ್ತದೆ. ಕೆಲವು ವರುಷಗಳ ಕೆಳಗೆ ಆ ಬಂಡೆಯೇ ದೇವಸ್ಥಾನಕ್ಕೆ ಒಂದು ಕೋಟೆಯಾಗುತ್ತಿತ್ತು. ಅಲ್ಲಿ ನದಿ ಸುಮಾರಾಗಿ ಒಂದು ಕಡೆಗೆ ತಿರುಗಿಕೊಂಡು ಬಾಗುತ್ತದೆ. ಬಲಗಡೆಯಿಂದ ಪ್ರವಾಹ ಒಳ್ಳೆಯ ವೇಗದಲ್ಲಿ ಬಂದು ಬಂಡೆಗೆ ಮುತ್ತಿಟ್ಟು ತನ್ನ ರಾಗವನ್ನೂ ಕಾವನ್ನೂ ಪ್ರಯೋಗಿಸಿದನಂತರ ಶಾಂತಳಾದ ಪತ್ನಿಯಂತೆ ನಿಧಾನವಾಗಿ ಮುಂದೆ ಹೋಗುತ್ತಿದ್ದಿತು. ಆದರೆ ಈಗ ಕೆಲವು ವರುಷಗಳ ಕೆಳಗೆ ಪ್ರವಾಹವು ಇದ್ದಕ್ಕಿದ್ದಂತೆ ಬಂಡೆಗೆ ಬಡಿದು ಮುಂದೆ ಹೋಗುವುದರ ಬದಲು ಬಂಡೆಯ ಹತ್ತಿರ ಎಡಗಡೆಗೆ ದಡವನ್ನು ಕೊರೆದುಕೊಂಡು ನುಗ್ಗಿ ಬಂಡೆಯನ್ನು ಬಳಸಿಕೊಂಡು

ಅದನ್ನು ಒಂದು ದ್ವೀಪವಾಗಿ ಮಾಡಿ ಮುಂದೆ ಹರಿದುಹೋಗಲು ಪ್ರಾರಂಭಿಸಿತು. ಹಿಂದೆ ಬಂಡೆಗೆ ಬಡಿದು ನದಿಯು ಯಾವ ವೇಗವನ್ನೂ ಜೋರನ್ನೂ ಕಳೆದುಕೊಳ್ಳುತ್ತಿದ್ದಿತೋ ಆ ಜೋರು ದಡದ ಮೇಲೆ ತಿರುಗಿ ದಡದಲ್ಲಿದ್ದ ತೋಪು ನಿಧಾನವಾಗಿ ಕುಸಿಯತೊಡಗಿತು. ಆದರೆ ಕಲ್ಲು ಬಂಡೆ ಬಹಳ ಎತ್ತರವಾಗಿ ವಿಶಾಲವಾಗಿದೆ. ಅದು ಯಾವ ಪ್ರವಾಹ ದಲ್ಲಿಯೂ ಮುಳುಗಿ ಹೋಗುವ ಸಂಭವವಿಲ್ಲ. ಮಲ್ಲಿಗೆಹಳ್ಳಿಗೆ ಒಂದೂವರೆ ಮೈಲಿಯಲ್ಲಿ ಯುಗಚಿ ನದಿ ಹೇಮಾವತಿಯನ್ನು ಸೇರುತ್ತದೆ, ಯುಗಚಿ ನದಿ ಬಹಳ ಮೋಸದ ನದಿ. ಉತ್ತರ ದಿಕ್ಕಿನಲ್ಲಿ ಸ್ವಲ್ಪ ಮೋಡ ಗಳು ಆಡಿದರೆ ಸಾಕು. ಆ ನದಿ ಒಳ್ಳೇ ಪ್ರವಾಹವಾಗಿ ಬಂದು ಹೇಮಾ ವತಿಯ ನೀರನ್ನು ಹೆಚ್ಚಿಸುತ್ತದೆ. ಆ ನೀರು ಹೇಮಾವತಿಗೆ ಬಂದು ಸೇರಿ ಕೊಂಡು ಕಣ್ಣಿಗೆ ಕಾಣುವಂತೆ ಕೆಂಪು ನೀರಾಗಿ ಹೇಮಾವತಿಯ ಸ್ವಚ್ಛ ವಾದ ನೀರಿನಿಂದ ಬೇರೆಯಾಗಿ ಅದರ ಶುಭ್ರವಾದ ಆಳವಾದ ನೀರಿನ ಮೇಲೆ ಉರುಳಿಕೊಂಡು ಹೋಗಿಬಿಡುತ್ತದೆ. ಪ್ರಕೃತಿಯ ಚಲನವಲನ ಗಳನ್ನೂ, ರಾಗ ದ್ವೇಷಗಳನ್ನೂ ಕೋಪ ಪ್ರಸನ್ನತೆಗಳನ್ನೂ ಚೆನ್ನಾಗಿ ಅರಿತ ಮಲ್ಲಿಗೆಹಳ್ಳಿಯವರಿಗೆ, ಆಗ್ನೇಯದಲ್ಲಿ ಮೋಡ ತುಂಬಿ ಈಶಾನ್ಯ ದಲ್ಲಿ ಸ್ವಲ್ಪ ಮಿಂಚು ಹೊಳೆದ ಕೂಡಲೇ ಯುಗಚಿ ನದಿಯು ಉಬ್ಬುವುದಕ್ಕೆ ಹೆಚ್ಚು ಹೊತ್ತಿಲ್ಲವೆಂದು ಗೊತ್ತಾಗುತ್ತದೆ. ಮಲ್ಲಿಗೆಹಳ್ಳಿಯ ಉತ್ಸಾಹಿ ಗಳು ಕರೆ ಕಲ್ಲಿನ ಮೇಲೆ ಕುಳಿತು ಪಶ್ಚಿಮದ ಕಡೆ ನೋಡುತ್ತಿದ್ದರೆ, ಏಕ ಕಾಲದಲ್ಲಿ ನೂರಾರು ಆನೆಗಳಂತೆ ಯುಗಚಿಯ ಪ್ರವಾಹದ ಹೊಸ ನೀರು ಭೋರ್ಗರೆಯುತ್ತಾ ನುಗ್ಗಿ ಕಲ್ಲಿಗೆ ಬಡಿಯುತ್ತಿದ್ದುದು ಕಾಣುತ್ತಿದ್ದಿತು. ಹೀಗೆ ಮಲ್ಲಿಗೆಹಳ್ಳಿಯ ಉತ್ಸಾಹಿಗಳು ಬಂಡೆಯ ಮೇಲೆ ಕುಳಿತಿರುವಾಗ ಒಂದುಸಲ ಇದ್ದಕ್ಕಿದ್ದಂತೆ ಒಂದು ಆನೆ ಎತ್ತರ ಬರುವುದು ಕಂಡಿತು. ಹೇಮಾವತಿಯ ಸ್ವಚ್ಛವಾದ ನೀರಿನ ಮೇಲೆ, ಕೆಂಪು ಬಣ್ಣದ ಸಹಸ್ರಾರು ಕುದುರೆಗಳಂತೆ ಉರುಳಿ ಬರುತ್ತಿದ್ದ ಯುಗಚಿಯ ಕೆಬ್ಬೆನೀರು, ಹಿಂದೆ ಮಾಮೂಲಾಗಿ ಬರುತ್ತಿದ್ದ ನೀರಿಗಿಂತ ಹೆಚ್ಚಾದಂತೆ ಕಂಡಿತು. ಬಂಡೆಯ ಮೇಲೆ ಕುಳಿತಿದ್ದವರು ನೋಡುತ್ತಿದ್ದಂತೆ ಆ ನೀರು ಸಮುದ್ರಕ್ಕಿಂತ ಹೆಚ್ಚಾಗಿ ಭೋರ್ಗರೆಯುತ್ತಾ ನುಗ್ಗಿ, ಪದ್ಧತಿಯಂತೆ ಕರೆಕಲ್ಲನ್ನು ಅಪ್ಪಿ

ಕೊಂಡು ಅದರ ಮೇಲೆ ನೊರೆಯ ಸೆರಗನ್ನು ಬೀಸಿ ಮುಂದೆ ಹೋಗು
ವುದರ ಬದಲು ಹೊಸದಾದ ಚೈತನ್ಯವನ್ನು ಹೊಂದಿ ಇದ್ದಕ್ಕಿದ್ದಂತೆ ಎಡ
ಗಡೆಗೆ ನುಗ್ಗಿಬಿಟ್ಟಿತು. ಆ ರಭಸಕ್ಕೆ ಬಂಡೆಯ ಸುತ್ತ ಇದ್ದ ದಡವು ಧಡಂ
ಎಂದು ಮರಗಳ ಸಹಿತವಾಗಿ ಕುಸಿದು ಬಿದ್ದುಹೋಯಿತು. ಕರೆಕಲ್ಲು
ನೀರಿನ ಮಧ್ಯದಲ್ಲಿ, ಮಜ್ಜಿಗೆಯೊಳಗಿನ ಬೆಣ್ಣೆಯಂತೆ ತೇಲುತ್ತಾ ನಿಂತಿತು.
ದಡವು ಮುರಿದ ರಭಸಕ್ಕೆ ಕರೆಕಲ್ಲು ಬಂಡೆ ಅಲುಗಿದಂತೆ ಮೇಲಿದ್ದವರಿಗೆ
ತೋರಿತು. ಆವತ್ತು ಕರೆಯಕಲ್ಲು ದ್ವೀಪವಾಯಿತು. ಮಳೆಗಾಲ
ದಲ್ಲಿಯೂ ಪ್ರವಾಹ ಕಾಲದಲ್ಲಿಯೂ ಅದರ ಮೇಲಕ್ಕೆ ಹೋಗಬೇಕಾದರೆ
ಸುತ್ತಾ ಹರಿಯುತ್ತಿರುವ ನೀರನ್ನು ಈಜಿಕೊಂಡು ಹೋಗಬೇಕು. ಬೇಸಿ
ಗೆಯ ಕಾಲದಲ್ಲಿ ಅದರ ಮೂರುಕಡೆ ನೀರಿಲ್ಲದುದರಿಂದ (ಒಂದು ಕಡೆ
ಹೊಳೆಗೇ ಸೇರಿದೆ) ನಡೆದುಕೊಂಡು ಹೋಗಬಹುದು. ಅಲ್ಲಿಂದ ಪ್ರತಿ
ವರುಷವೂ ನದಿಯ ನೀರು ದಡವನ್ನು ಹೆಚ್ಚು ಹೆಚ್ಚಾಗಿ ಕೊರೆಯುತ್ತಾ
ಪೂರ್ಣವಾದ ನೀರೆಲ್ಲವೂ ಕಲ್ಲಿನ ಎಡಗಡೆಗೇ ನುಗ್ಗುತ್ತಾ ದೇವಸ್ಥಾನ
ವನ್ನೂ ಅದರ ಸುತ್ತಿನ ತೋಪನ್ನೂ ಪೂರ್ಣವಾಗಿ ತೆಗೆದುಕೊಳ್ಳುವ
ಸನ್ನಾಹದಲ್ಲಿದ್ದಿತು.

ಮಲ್ಲಿಗೆಹಳ್ಳಿಯ ವೈಭವವೇ ಮಲ್ಲಿಗೆಹಳ್ಳಿಯ ದೇವಸ್ಥಾನ. ದೇವ
ಸ್ಥಾನವನ್ನು ನೋಡಿ ಹಳ್ಳಿಯವರು ತಮ್ಮ ದಾರಿದ್ರ್ಯವನ್ನು ಮರೆಯು
ತ್ತಾರೆ. ಅಧಿಕಾರಿಗಳು ಬಂದು ತಮ್ಮನ್ನು ತಿರಸ್ಕರಿಸಿದಾಗ, ಅಥವ
ತಮ್ಮಲ್ಲಿಯೇ ಧನಿಕರಾದವರು ಬಡಪಾಯಿಗಳನ್ನು ಹಂಗಿಸಿದಾಗ, ಜನರು
ನೆಟ್ಟಗೆ ದೇವಸ್ಥಾನಕ್ಕೆ ಬರುತ್ತಾರೆ. ಬೈದವರೂ ಬರುತ್ತಾರೆ, ಬೈಯಿಸಿ
ಕೊಂಡವರೂ ಬರುತ್ತಾರೆ. ಊರಿನಲ್ಲಿ ಒಬ್ಬರಿಗೊಬ್ಬರಿಗೆ ಬಿರುಸಾದ
ಮಾತುಗಳು ನಡೆದುವೆಂದು ತಿಳಿದ ದಿವಸ ಅರ್ಚಕನು 'ಇವತ್ತು ದೇವ
ಸ್ಥಾನಕ್ಕೆ ಭಕ್ತರು ಹೆಚ್ಚು. ೨ ಭಾಗ ತೆಂಗಿನಕಾಯಿ ನಿತ್ಯಕ್ಕಿಂತ ಹೆಚ್ಚಾಗಿ
ದೊರೆಯುತ್ತದೆ' ಎಂದುಕೊಳ್ಳುತ್ತಾನೆ. ಬೈದವನು ಪಶ್ಚಾತ್ತಾಪ
ದಿಂದಲೂ ಬೈಯಿಸಿಕೊಂಡವನು ವಿಧೇಯವಾದ ಮನೋಭಾವದಿಂದಲೂ
ದೇವಸ್ಥಾನಕ್ಕೆ ಬರುತ್ತಾರೆ. ಅವರ ಇಬ್ಬರ ಮುಖದ ಮೇಲೂ ಒಂದೇ
ವಿಧವಾದ ನಮ್ರತೆಯೂ ಅಯ್ಯೋ ನಾನೆಷ್ಟರವನು ಎಂಬ ನೈಚ್ಯಭಾವವೂ

ಒಡೆದು ಕಾಣುತ್ತಿರುತ್ತದೆ. ಭಗವಂತನ ಎದುರಿಗೆ ಅವನ ಧನವೂ ಇವನ ದಾರಿದ್ರ್ಯವೂ ಒಂದಾಗುವುದು ಎಲ್ಲರಿಗೂ ಕಾಣುತ್ತಿರುತ್ತದೆ. ಅರ್ಚಕ ಒಂದೇ ಸಮನಾಗಿ ಇಬ್ಬರಿಗೂ ಪ್ರಸಾದ ತೀರ್ಥ ಕೊಡುತ್ತಾನೆ. ದೇವಸ್ಥಾನವನ್ನು ಬಿಟ್ಟು ಹೊರಡುವುದಕ್ಕೆ ಮುಂಚೆ ಮೆಟ್ಟಲಿನ ಮೇಲೆ ಒಂದು ಗಳಿಗೆ ಕುಳಿತು ಬಾಗಿಲನ್ನು ಕಾಯಬೇಕಾದುದು ಪದ್ಧತಿ. ಆಗ ಬೈದವನು ಬೈಸಿಕೊಂಡವನನ್ನು ಕುರಿತು "ಏನೋಪ್ಪ. ಮಾತು ಉಚಾಯಿಸಿತು. ಹಾಳು ಕೋಪ. ಮರೆತುಬಿಡು. ಬಾಲ್ಯದಿಂದಲೂ ನನಗೆ ಕೋಪ ಜಾಸ್ತಿ" ಎನ್ನುತ್ತಾನೆ. ಬೈಸಿಕೊಂಡವನು "ನನ್ನ ಹಾಳು ನಾಲಗೆದೇ ತಪ್ಪು. ನಿಮ್ಮ ನಾಲಗೆಯಿಂದ ಜನವೆಲ್ಲಾ ಆಗದೋರಾದರು ಅಂತ ನನ್ನ ಮನೆಯವಳು ಹೇಳ್ತಾಳೆ. ನೀನು ಹೇಳಿದರೆ ಹೇಳಿದೆ ಎಂತ ನಾನು ಸುಮ್ಮನೆ ಇದ್ದಿದ್ದರೆ ನನ್ನ ಆಸ್ತಿ ಹೋಗ್ತ ಇದ್ದದ್ದೇನು. ಎಲ್ಲಾ ಗ್ರಹ ಚಾರ ಕಾಲ. ಬಡವ ಮಡಗಿದ ಹಂಗೆ ಇರು ಅಂತ ಇರದೆ ಮಾತಿನ ಚಪಲಕ್ಕೆ ಸಿಕ್ಕಿ ಹೀಗೆ ಆಗ್ತಾ ಇದೇನೆ. ತಪ್ಪೆಲ್ಲಾ ನನ್ನದೇ ಹೆಚ್ಚು ಮಾತಾಡಿದೆ. ಏನೋ ಕ್ಷಮಿಸಿಬಿಡಪ್ಪ" ಎನ್ನುತ್ತಾನೆ. ಅಷ್ಟು ಹೊತ್ತಿಗೆ ಅರ್ಚಕ ಪರಿಚಾರಕರು ಮನೆಯಿಂದ ತಂದಿರುವ ಲಾಂದ್ರವನ್ನು ಹಚ್ಚಿಕೊಂಡು ಬಾಗಿಲನ್ನು ಭದ್ರಪಡಿಸಿಕೊಂಡು ಬರುತ್ತಾರೆ. ಆ ಮಾತನ್ನು ಮರೆತು ಎಲ್ಲರೂ ಲೋಕಾಭಿರಾಮವಾದ ಮಾತುಗಳನ್ನಾಡುತ್ತಾ ತಮ್ಮ ಮನೆಗಳಿಗೆ ಹೋಗುತ್ತಾರೆ. ದೇವಸ್ಥಾನವಿಲ್ಲದಿದ್ದರೆ ಜೀವಿಸುವುದು ಹೇಗೆ? ದೇವರಿಲ್ಲದ ಗುಡಿ ಹೇಗೋ ದೇವಸ್ಥಾನವಿಲ್ಲದ ಮಲ್ಲಿಗೆಹಳ್ಳಿ ಹಾಗೆ. ಇಂತಹ ದೇವಸ್ಥಾನ ಕೊಚ್ಚಿಕೊಂಡು ಹೋಗುವುದನ್ನು ಮಲ್ಲಿಗೆ ಹಳ್ಳಿಯವರು ಹೇಗೆ ತಾನೆ ಸಹಿಸುತ್ತಾರೆ.

ನದಿಯ ನೀರು ಒಳ್ಳೆಯ ಗಾತ್ರವಾಗಿ ನುಗ್ಗಿ ತೋಪನ್ನು ಕೊರೆಯುತ್ತಿದ್ದಿತು. ಅದನ್ನು ತಡೆಯಬೇಕಾದರೆ ಕೊನೆಯ ಪಕ್ಷ ಐದು ಸಾವಿರ ರೂಪಾಯಿ ಖರ್ಚುಮಾಡಿ ೫೦ ಗಜಕ್ಕೆ ಕಲ್ಲಿನ ಕಟ್ಟೆಯನ್ನು ಹಾಕಬೇಕಾಗಿದ್ದಿತು. ಮಲ್ಲಿಗೆಹಳ್ಳಿಯಂತಹ ಸಣ್ಣ ಗ್ರಾಮದ ಸಣ್ಣ ದೇವಸ್ಥಾನಕ್ಕೆ ಐದು ಸಾವಿರ ರೂಪಾಯಿಗಳನ್ನು ಕೊಡಲು ಯಾವ ಸರ್ಕಾರದವರು ತಾನೇ ಒಪ್ಪುತ್ತಾರೆ? "ನಿಮ್ಮ ದೇವಸ್ಥಾನದ ಮುಜರಾಯಿ ಫಂಡು

ಸರ್ಕಾರದಲ್ಲಿ ಮೂರು ಕಾಸೂ ಇಲ್ಲ. ಆದುದರಿಂದ ಈ ಕಲ್ಲು ಕಟ್ಟೆ ಕಟ್ಟಲು ನಮ್ಮಿಂದ ಸಾಧ್ಯವಿಲ್ಲ ಎಂದು ಜಿಲ್ಲಾಧಿಕಾರಿಗಳು ಅಪ್ಪಣೆ ಕೊಡಿಸಿದರು.'' ಆಗ ಮಲ್ಲಿಗೆ ಹಳ್ಳಿಯವರು ''ಸ್ವಾಮಿ ಇಂತಿಂತಹ ಕಡೆಯಲ್ಲಿ ಮುಜರಾಯಿ ಫಂಡಿನಿಂದ, ಇಂತಿಂತಹ ಮಶೀದಿಗೆ ಹಣ ಕೊಟ್ಟಿಲ್ಲವೆ? ಇಂತಿಂತಹ ಚರ್ಚಿಗೆ ಹಣ ಕೊಟ್ಟಿಲ್ಲವೆ? ಇಂತಹ ಗ್ರಾಮದ ಚರ್ಚಿನ ರಿಪೇರಿಗೆ ಗ್ರಾಮೋದ್ಧಾರದ ನಿಧಿಯಿಂದ ಗ್ರಾಮೋದ್ಧಾರದ ಹೆಸರಿನಲ್ಲಿ ಇಷ್ಟು ಕೊಟ್ಟಿಲ್ಲವೆ? ನಮ್ಮ ದೇವಸ್ಥಾನದ ಮುಜರಾಯಿ ಫಂಡಿನಲ್ಲಿ ಹಣವಿಲ್ಲದಿದ್ದರೂ ನಾವು ಭೂಕಂದಾಯ ೫-೬ ಸಾವಿರ ರೂಪಾಯಿ ಕೊಡುತ್ತಿಲ್ಲವೆ? ಹಳ್ಳಿಯ ಹಣವನ್ನೆಲ್ಲಾ ಪಟ್ಟಣಕ್ಕೆ ಹಾಕುತ್ತಿಲ್ಲವೇ? ಏನೋ ಒಂದು ಸಲ ಹಳ್ಳಿಯವರು ದೇವಸ್ಥಾನದ ಕೆಲಸಕ್ಕೆ ಕೇಳಿದರೆ ಹಣವಿಲ್ಲ ಎನ್ನುತ್ತೀರಲ್ಲ'' ಎಂದರು. ನಿಜವಾಗಿಯೂ ಸಾಹೇಬರೇ ಆಗಿದ್ದ ಸಾಹೇಬರಿಗೆ ಈ ಮಾತನ್ನು ಕೇಳಿ ಸಿಟ್ಟು ಹತ್ತಿತು. ಅವರು ''ಸರ್ಕಾರದ ನೀತಿಯನ್ನೇ ಟೀಕಿಸುತ್ತಿರುವ ನಿಮ್ಮಂತವರಿಗೆ ಒಂದು ಕಾಸನ್ನೂ ಕೊಡಕೂಡದು'' ಎಂದುಕೊಂಡು ಹೊರಟುಹೋದರು. ಅವರು ಯಾರಿಗೆ ಬರೆದರೋ ಏನೋ ಅಂತು ಮಲ್ಲಿಗೆಹಳ್ಳಿ ಗ್ರಾಮಸ್ಥರು ಬರೆದುಕೊಂಡ ಅರ್ಜಿಗೆ ಸರ್ಕಾರದಿಂದ ''ನಿಮ್ಮ ದೇವಸ್ಥಾನದ ಮುಜರಾಯಿ ಲೆಕ್ಕದಲ್ಲಿ ಹಣವಿಲ್ಲ. ಆದುದರಿಂದ ಏನೂ ಮಾಡಲಾಗುವುದಿಲ್ಲ. ಕಟ್ಟೆ ಕಟ್ಟದಿದ್ದರೆ ದೇವಸ್ಥಾನ ಕೊಚ್ಚಿಹೋಗುವುದೆಂದು ನೀವು ಬರೆದ ಅಂಶ ಸರ್ಕಾರಕ್ಕೆ ವಿದಿತವಾಯಿತು'' ಎಂದು ಪ್ರತ್ಯುತ್ತರ ಬಂದಿತು. ಗ್ರಾಮಸ್ಥರು ಸರ್ಕಾರದ ಮೇಲೂ ಸಾಹೇಬರ ಮೇಲೂ ರೇಗಾಡಿ ''ಕಂದಾಯ ಕೊಡುವುದಿಲ್ಲ. ಹಾಗೆ ಹೀಗೆ'' ಎಂದು ಕೂಗಾಡಿದರು. ನಾದಿರ್‌ಷಾ ಶ್ಯಾನುಭೋಗರು ಗುಬ್ಬಿ ಮೇಲೆ ಬ್ರಹ್ಮಾಸ್ತ್ರವ್ಯಾಕೆ? ಉಗುರಲ್ಲಿ ಹೋಗುವುದಕ್ಕೆ ಕೊಡಲಿಯಾಕೆ? ಸುಮ್ಮನಿರಿ, ಇದಕ್ಕೆಲ್ಲ ಉಪಾಯ ಇಟ್ಟಿದೇನೆ'' ಎಂದರು. ಗ್ರಾಮಸ್ಥರು ''ಉದ್ಧಕ್ಕೂ ನಿಮ್ಮದು ಉಪಾಯವೇ ಆಯಿತು'' ಎಂದು ಕೋಪದಿಂದ ಸುಮ್ಮನಾದರು.

ಸ್ವಲ್ಪ ದಿನಗಳನಂತರ, ಸಂಸ್ಥಾನದ ಮುಖ್ಯಾಧಿಕಾರಿಗಳೊಬ್ಬರು —ಮಂತ್ರಿಗಳು—ಈ ಜಿಲ್ಲೆಯಲ್ಲಿ ಪ್ರವಾಸಮಾಡುತ್ತಾರೆಂದು ಸುದ್ದಿ

ಹೆರಡಿತು. ಮಾದರಿ ಗ್ರಾಮವಾದ ಮಲ್ಲಿಗೆಹಳ್ಳಿಗೂ ಬರುತ್ತಾರೆಂದು ಜಿಲ್ಲಾಧಿಕಾರಿಗಳು ಶ್ಯಾನುಭೋಗ ಪಟೇಲರಿಗೆ ತಿಳಿಸಿದರು. "ಮಂತ್ರಿಗಳು ಊರಿನ ಒಳಕ್ಕೆ ಬರುತ್ತಾರೆ. ಪ್ರೈಮರಿ ಶಾಲೆಯ ಮುಂದೆ ಒಂದು ಗಳಿಗೆ ನಿಲ್ಲುತ್ತಾರೆ. ಹಾರ ತುರಾಯಿ ಸ್ವೀಕರಿಸುತ್ತಾರೆ. ಬೇಕಾದ ಅರ್ಜಿ ಕೊಡಬಹುದು. ಚಪ್ಪರ ಹೇಗಿರಬೇಕು! ಈ ಡಿಸ್ಟ್ರಿಕ್ಟಿನಲ್ಲಿಯೇ ಇಂತಹ ಸ್ವಾಗತವಾಗಲಿಲ್ಲ ಎನ್ನಿಸಬೇಕು" ಎಂದರು. ಜಿಲ್ಲಾಧಿಕಾರಿಗಳ ಸರ್ಕಾರಿ ಅಧಿಕಾರ ಹಳ್ಳಿಗಳಲ್ಲಿ ನಡೆಯುತ್ತಿರುವುದು ಮುಖ್ಯವಾಗಿ ಶ್ಯಾನುಭೋಗ ಪಟೇಲರಿಂದಲೇ. ಆ ಶ್ಯಾನುಭೋಗ ಪಟೇಲರು, ಅಧಿಕಾರಿಗಳ ಎದುರಿಗೆ ತಮ್ಮ ದರ್ಪವೂ ಮಹಿಮೆಯೂ ಏರಲೆಂದು ಗ್ರಾಮದಲ್ಲಿರುವ ದೊಡ್ಡ ದೊಡ್ಡ ಜಮೀನುದಾರರನ್ನೂ ಸಾಹುಕಾರರನ್ನೂ ಕಂಟ್ರಾಕ್ಟರುಗಳನ್ನೂ ರಿಟೈರ್ಡ್ ಶೇಕದಾರ್, ಮೇಷ್ಟರು ಮುಂತಾದವರನ್ನೂ ಅರ್ಧಬರ್ದ ಇಂಗ್ಲಿಷ್ ಬಂದವರನ್ನೂ, ಅಧಿಕಾರಿಗಳನ್ನೂ ಸ್ವಾಗತಿಸಲು ಕರೆದುಕೊಂಡು ಹೋಗುತ್ತಾರೆ. ಅವರು ಬರದಿದ್ದರೆ ಆ ಅಧಿಕಾರಿಗಳನ್ನು ಮಾತನಾಡಿಸುವವರೇ ಇಲ್ಲ. ಅವರ ಮುಖಕ್ಕೆ ಉಪ್ಪು ಹುಟ್ಟುವುದಿಲ್ಲ. ಸರ್ಕಾರ ಪ್ರಜೆಗಳನ್ನು ಆಳುವುದು ಸಾಮಾನ್ಯವಾಗಿ ಇವರ ಮೂಲಕವೇ. ಬರುವ ಅಧಿಕಾರಿಗಳಿಗೂ ಇದು ಗೊತ್ತು. ಅವರು ತಮಗೆ ಯಾವ ಕೆಲಸವಾಗಬೇಕಾದರೂ ಅದನ್ನು ಮಾಡಿಸಿಕೊಳ್ಳುವುದು ಈ ಶ್ಯಾನುಭೋಗರ ಮೂಲಕವಾಗಿಯೇ. ಗ್ರಾಮಸ್ಥರಿಗೆ ಸ್ವಲ್ಪವೂ ಇಷ್ಟವಿಲ್ಲದಿದ್ದರೂ ಸ್ಥಳದವನಾದ ಶ್ಯಾನುಭೋಗನಲ್ಲಿ ಇನ್ನು ದಿನಬೆಳಗೂ ವ್ಯಾಜ್ಯವಾಡುವುದು ಹೇಗೆ? ಈ ಕಾಗೆ ಯಾವುದಾದರೂ ಕಿರುಕುಳವನ್ನು ಕೊಡುತ್ತಾನೆ ಎಂದುಕೊಂಡು, ಶ್ಯಾನುಭಾಗನ ಇಷ್ಟದಂತೆ ಜನ ಅಧಿಕಾರಿಗಳನ್ನು ಸತ್ಕರಿಸುತ್ತಾರೆ. ಸಾಮಾನ್ಯವಾಗಿ ಸರ್ಕಾರಿ ಅಧಿಕಾರಿಗಳ ಹೆಮ್ಮೆಗೆ ಧೂಪ ಹಾಕುವವರು ಹಳ್ಳಿಗಳಲ್ಲಿ ಉಳಿದಿರುವ ಒಬ್ಬಿಬ್ಬರು ಇಂಗ್ಲಿಷ್ ವಿದ್ಯಾವಂತರು; ಅಧಿಕಾರಿ ಎಷ್ಟೇ ಉದ್ಧತನಾಗಿರಲಿ ರೈತರಲ್ಲಿ ಅವನಿಗೆ ಎಷ್ಟೇ ತಿರಸ್ಕಾರವಿರಲಿ ಈ ಇಂಗ್ಲಿಷ್ ಬರುವವರು ಅವರ ಜತೆಯಲ್ಲಿ ಎಸ್ ಪಸ್ ಎಂದು ಮಾತನಾಡುತ್ತಾ ಅವರನ್ನು ಕರೆದುಕೊಂಡು ಬಂದು ಸತ್ಕರಿಸುತ್ತಾರೆ. ಹಾಗೆ ಅವರು ಸತ್ಕಾರವನ್ನು

ಸ್ವೀಕರಿಸುವುದರಿಂದ ಇವರು ಧನ್ಯರಾಗುತ್ತಾರೆ. ಇಂತಹ ಪ್ರಾಣಿಗಳು ಮಲ್ಲಿಗೆಹಳ್ಳಿಯಲ್ಲಿ ಇಲ್ಲದೆ ಇಲ್ಲ. ಅವರ ಪೈಕಿ ಮಲ್ಲಿಗೆಹಳ್ಳಿಯ ಜಹಗೀರ್‌ದಾರರು ಒಬ್ಬರು. ಇವರು ಒಳ್ಳೆ ವಿದ್ಯಾವಂತರು. ಆಧುನಿಕರು. ಆಧುನಿಕ ಕಾಲೇಜಿನಲ್ಲಿ ಬಿ.ಎ., ಎಂ.ಎ., ಪ್ಯಾಸು ಮಾಡಿದವರು. ಒಳ್ಳೆಯ ವ್ಯವಹಾರ ಜ್ಞಾನವುಳ್ಳ ಸಾತ್ವಿಕರು. ಅವರಿಗೆ ಸರ್ಕಾರಿ ಅಧಿಕಾರಿಗಳನ್ನು ಕಂಡರೆ ಅಸಾಧ್ಯವಾದ ಗೌರವ. ಈ ಗೌರವ ಅಧಿಕಾರಿಗಳ ದರ್ಜೆಗೆ ಅನುಸಾರವಾಗಿ ಹೋಗುತ್ತದೆ. ಅಮಲ್ದಾರರು ಇಲ್ಲದಿರುವಾಗ ಶೇಕದಾರರನ್ನೇ ಅಮಲ್ದಾರರಂತೆಯೂ ಶೇಕದಾರನಿಲ್ಲದಿರುವಾಗ ಅವನ ಆಳನ್ನೇ ಶೇಕದಾರನನ್ನಂತೆಯೂ ಅವರು ಗೌರವಿಸುತ್ತಾರೆ. ಇಂಜನಿಯರ್ ಇಲ್ಲದ ಕಾಲದಲ್ಲಿ ಅವರು ಓವರ್‌ಶಿಯರ್‌ನ್ನೇ ಇಂಜನೀಯರಿಗೆ ಸಮಾನವಾಗಿ ಗೌರವಿಸಿದುದುಂಟು. ಯಾರಾದರೂ ಆಗಲಿ ಅವನು ಸರ್ಕಾರದ ಅಧಿಕಾರಿಯಾದರೆ ಸಾಕು. ಕೆಲವರು " ಜಹಗೀರ್‌ದಾರರು ಭಯದಿಂದ ಹಾಗೆ ಮಾಡುತ್ತಾರೆ " ಎನ್ನುತ್ತಾರೆ. ಇನ್ನು ಕೆಲವರು " ಅವರ ಸೌಜನ್ಯ ಅಂಥಾದ್ದು " ಎನ್ನುತ್ತಾರೆ. ಮಲ್ಲಿಗೆಹಳ್ಳಿಯ ಅವಧಾನಿ, ಅವರಿಗೆ ಸ್ವಲ್ಪ ಸ್ವಲ್ಪ ಇಂಗ್ಲಿಷು ಬರುತ್ತದೆ. ಬಹುಶಃ ಹಳೆಯ ಮೆಟ್ರಿಕುಲೇಶನ್ ಅಂತ ಕಾಣುತ್ತದೆ. ವ್ಯಾಕರಣ ಶುದ್ಧವಲ್ಲದಿದ್ದರೂ, ಒಳ್ಳೇ ಜೋರಾಗಿ ಇಂಗ್ಲೀಷ್ ಮಾತುಗಳನ್ನು ಬಾರಿಸುತ್ತಾರೆ. ಸಾಹುಕಾರ ಜಹಗಿರ್‌ದಾರರಷ್ಟು ಸಾಹುಕಾರಿಕೆ ಇವರಿಗೆ ಇಲ್ಲದುದರಿಂದ, ಸಾಹುಕಾರರು ಅಮಲ್ದಾರ್ ಡೆಪ್ಯುಟಿ ಕಮಿಶನರೊಂದಿಗೆ ವ್ಯವಹರಿಸಿದರೆ ಅವಧಾನಿ ಶೇಕದಾರ್ ಸಬ್ ಓವರ್ಶಿ ಪೋಲಿಸ್ ದಫೆದಾರ್ ತಾಲ್ಲುಕು ಕಛೇರಿ ಗುಮಾಸ್ತರು ಇವರೊಂದಿಗೆ ವ್ಯವಹರಿಸುತ್ತಾರೆ. ಮಲ್ಲಿಗೆಹಳ್ಳಿಯ ಕುಚೋದ್ಯಗಾರರು 'ನಮಗೆ ಏನು ಯೋಚನೆ ? ಐವತ್ತು ರೂಪಾಯಿನ ವರೆಗಿನ ಸಂಬಳದ ಅಧಿಕಾರಿಗಳು ಊರಿಗೆ ಬಂದರೆ ಅವಧಾನಿ ವಿಚಾರಿಸಿಕೊಳ್ಳುತ್ತಾರೆ. ಐವತ್ತು ರೂಪಾಯಿಗಳಿಗಿಂತ ಹೆಚ್ಚಿಗೆ ಸಂಬಳದ ಅಧಿಕಾರಿಗಳು ಬಂದರೆ ಜಹಗಿರ್‌ದಾರರು ವಿಚಾರಿಸಿಕೊಳ್ಳುತ್ತಾರೆ. ನಾವು ನೆಮ್ಮದಿಯಾಗಿ ಇರಬಹುದು " ಎಂದು ಹಾಸ್ಯಮಾಡುತ್ತಾರೆ.

ಜಿಲ್ಲಾಧಿಕಾರಿಗಳು, ಯಾವಾಗಿನಂತೆ ಈಗಲೂ ಶ್ಯಾನುಭೋಗರಿಗೆ

ಹೇಳಿಬಿಟ್ಟರೆ ಆಯಿತು ಎಂದುಕೊಂಡು ಮಲ್ಲಿಗೆಹಳ್ಳಿ ನಾದಿರ್‌ಶಹನಿಗೆ ಚಪ್ಪರದ ವಿಚಾರ ಹೇಳಿ ಹೊರಟು ಹೋದರು. ಅನಂತರ ಮೇಲಧಿಕಾರಿಗಳು ಬಂದಾಗ ನಡೆಯುವ ನಾಟಕಗಳೆಲ್ಲಾ ನಡೆದುವು. ಇಂಜನೀಯರಿಂಗ್ ಶಾಖೆಯುವರು ಮೇಲಧಿಕಾರಿಗಳ ಕಣ್ಣಿಗೆ ಮಣ್ಣೆರಚುವಂತೆ ರಸ್ತೆಗೆ ಮಣ್ಣೆರಚಿದರು. ಹಳ್ಳಿಯ ಹಳೆಯ ಮನೆಗಳು ಸುಣ್ಣವನ್ನು ಕಂಡು ಹತ್ತು ವರುಷಗಳಾಗಿದ್ದರೂ ಅಮಲ್ದಾರರು ಪಂಚಾಯ್ತಿಯ ಹಣವನ್ನು ತತ್‌ಕ್ಷಣ ಕೆಲಸಮಾಡುವ ಕಂಟ್ರಾಕ್ಟ್‌ದಾರನಿಗೆ ಕೊಟ್ಟು ರಸ್ತೆಯ ಮರಗಳಿಗೆಲ್ಲಾ ಕೆಂಪು, ಬಿಳುಪು ಪಟ್ಟೆಗಳನ್ನು ಬಳಿಸಿದರು. ಮರಗಳು ರೇಸಿಮೆ ಸೀರೆಗಳನ್ನುಟ್ಟುಕೊಂಡಂತೆ ಕಾಣುತ್ತಿದ್ದವು. ರಸ್ತೆಮರಗಳನ್ನೇ ಕಡಿದು ಆ ಸೌದೆಗಳನ್ನು ಮಲ್ಲಿಗೆಹಳ್ಳಿಯಲ್ಲಿ ತಮ್ಮ ಮನೆಗೇ ಮಾರುವ ಬೂಕನಹಳ್ಳಿ ಸಾಹೇಬರಿಗೆ ಶೇಕದಾರರು "ಅಪ್ಪಾ ಈಗ ಸಾಲುಮರಗಳನ್ನು ನೆಡಿಸಬೇಕೆಂದು ಆಜ್ಞೆಬಂದಿದೆ. ದೊಡ್ಡ ಸಾಹೇಬರು ಇಂತಹ ದಿವಸ ಬರುತ್ತಾರೆ. ಅಲ್ಲಿಯವರೆಗೆ ನೆಡುವುವುಗಳನ್ನು ಕಡಿಯಬೇಡಿ. ಅನಂತರ ನಿಮ್ಮ ಇಷ್ಟ" ಎಂದು ಅವರಿಂದ ಅಭಯವನ್ನು ತೆಗೆದುಕೊಂಡು, ರಸ್ತೆಯ ಮರಗಳಿಂದ ದೊಡ್ಡ ದೊಡ್ಡ ಕೊಂಬೆಗಳನ್ನು ಕಡಿಸಿ, ಉದ್ದಕ್ಕೂ ನೆಡಿಸಿದರು. ರಸ್ತೆಯ ಎರಡು ಕಡೆಗಳಲ್ಲಿಯೂ ಕಣ್ಣಿಗೆ ಕಾಣುವವರೆಗೆ ಬೆಳೆದಿದ್ದ ಚದರಂಗಿ ಗುತ್ತಿಗಳನ್ನೆಲ್ಲಾ ಕತ್ತರಿಸಿ ಮರೆಮಾಡಿದುದಾಯಿತು. ಪಂಚಾಯ್ತಿಯ ಹಣವನ್ನೆಲ್ಲಾ ತಾವೇ ಸ್ವಾಧೀನಪಡಿಸಿಕೊಂಡಿದ್ದ ಅಮಲ್ದಾರರು ಕಂಟ್ರಾಕ್ಟರಿಗೆ ಹೇಳಿ ಮಲ್ಲಿಗೆಹಳ್ಳಿಯ ಯಾವ ಯಾವ ಬೀದಿಗಳಲ್ಲಿ ಮಂತ್ರಿಗಳು ಹೋಗಬಹುದೆಂದು ತಿಳಿದಿದ್ದಿತೋ ಅಂತಹ ಕಡೆಗಳನ್ನೆಲ್ಲಾ ಚೆನ್ನಾಗಿ ಗುಡಿಸಿಸಿ ಕಸವನ್ನು ಅದೇ ಬೀದಿಯ ಕಣ್ಣಿಗೆ ಕಾಣದ ಓಣಿಗಳಿಗೂ ಗಲ್ಲಿಗಳಿಗೂ ಹಾಕಿಸಿದರು. ಅನೇಕ ಮನೆಗಳ ಮುಂದೆ ಬಿದ್ದಿದ್ದ ಕಸವನ್ನು ಆ ಮನೆಗಳ ಹಿತ್ತಲಿಗೇ ಹಾಕಿಸಿದರು. ಇನ್ನು ಉಳಿದಿದ್ದುದು, ಯಾವ ಬೀದಿಯಲ್ಲಿ ಮಂತ್ರಿಗಳು ಹೋಗುತ್ತಾರೋ ಆ ಬೀದಿಯಲ್ಲಿರುವ ಮನೆಗಳಿಗೆಲ್ಲಾ, ಬೀದಿಬಾಗಿಲಿನ ಜಗಲಿ ಗೋಡೆಗಳಿಗಾದರೂ ಸುಣ್ಣ ಹಾಕಿಸಬೇಕಾದುದು. ಮತ್ತು ಚಪ್ಪರವನ್ನು ಹಾಕಿಸಬೇಕಾದುದು. ಚಪ್ಪರವನ್ನು ಹಾಕಿಸಲು ಅಮಲ್ದಾರರು ಜವಾಬ್ದಾರಿ ವಹಿಸಲಿಲ್ಲ. ಅದು

ಯಾವಾಗಲೂ ಶಾನುಭೋಗನ ಕೆಲಸ. ಅಮಲ್ದಾರರು ಬಂದಾಗ ಡೆಪ್ಯುಟಿ ಕಮಿಶನರು ಬಂದಾಗ ಸಬ್‌ಡಿವಿಜನ್ ಆಫೀಸರು ಬಂದಾಗ ಮತ್ತು ಅವರಿಗೆ ಬೇಕಾದ ಇತರ ಅಧಿಕಾರಿಗಳು ಬಂದಾಗ ಚಪ್ಪರವನ್ನು ಹಾಕಿಸುವುದು ಶ್ಯಾನುಭೋಗನ ಹಕ್ಕು. ಅಂತಹ ಚಪ್ಪರಕ್ಕೆ ಹತ್ತು ಇಪ್ಪತ್ತು ಮುವತ್ತು ಆಳುಗಳು ಬೇಕಾಗುತ್ತವೆ. ಅದಕ್ಕೆ ದುಡ್ಡು ಖರ್ಚುಮಾಡಲು ಪ್ರಾರಂಭಿಸಿದರೆ, ತಿಂಗಳಿಗೆ ಎರಡುಸಲ ಅಧಿಕಾರಿಗಳು ಬರುವುದು ಖಂಡಿತವಾದುದರಿಂದ, ಪಂಚಾಯ್ತಿ ಹಣ ಚಪ್ಪರಗಳಿಗೇ ಸಾಲದೆ ಪಂಚಾಯ್ತಿಯ ಇತರ ಕೆಲಸಗಳೆಲ್ಲಾ ನಿಂತೇ ಹೋಗಬೇಕಾಗುತ್ತದೆ. ಮತ್ತು ಆ ಖರ್ಚನ್ನು ಪಂಚಾಯ್ತಿಯ ಲೆಕ್ಕದಲ್ಲಿ ತೋರಿಸುವಂತೆ ಇಲ್ಲ. ಈಗ ಕಟ್ಟಬೇಕಾದ ಚಪ್ಪರಕ್ಕಂತೂ ನೂರಾರು ರೂಪಾಯಿಗಳು ಖರ್ಚಾಗುತ್ತಿದ್ದುವು. ೫೦೦-೬೦೦ ಬಿದಿರು ಗಳುಗಳೂ ೬೦-೭೦ ಅಡಿಕೆ ಮರಗಳೂ ೪ ಗಾಡಿ ಮಾವಿನ ಸೊಪ್ಪು ೧೦ ಗಾಡಿ ಬಗಿನೆಗರಿಗಳೂ ಬೇಕಾಗುತ್ತಿದ್ದವು. ಕೊನೆಯ ಪಕ್ಷ ಇನ್ನೂರು ಆಳುಗಳು ಬೇಕಾಗುತ್ತಿದ್ದರು. ಅಮಲ್ದಾರರು ಒಂದು ವಿಷಯವನ್ನು ಶ್ಯಾನುಭೋಗರಿಗೆ ವಹಿಸಿ ಉಳಿದ ಕಡೆಗಳಲ್ಲೆಲ್ಲಾ ಕಣ್ಣಿಗೆ ಕಾಣುವ ವರೆಗಿನ ಕಸವನ್ನು ತೆಗೆಸಿ ಚಪ್ಪರ ಏಳುವುದನ್ನೇ ನಿರೀಕ್ಷಿಸುತ್ತಾ ಕುಳಿತರು.

ಬರಬರುತ್ತಾ ಮಂತ್ರಿಗಳು ಬರುವ ದಿನ ಸಮೀಪಿಸಿತು. ಅಮಲ್ದಾರರು ಬಂದು ಹೋಗುವುದು ಹೆಚ್ಚಾಯಿತು. ಆದರೆ ಚಪ್ಪರ ಮಾತ್ರ ಏಳಲಿಲ್ಲ. ಶ್ಯಾನುಭೋಗನನ್ನು ಕರಸಿ ಗದರಿಸಿದಾಗ "ಚಪ್ಪರ ಏಳುತ್ತೆ ಹೀಗೆ ಕೋಪಿಸಿಕೊಳ್ಳಬೇಡಿ. ನಿಮಗೆ ಯಾಕೆ ಯೋಚನೆ. ಆ ವೇಳೆಗೆ ಎಲ್ಲಾ ಸಿದ್ಧವಾಗುತ್ತೆ" ಎಂದರು. ಜಹಗಿರ್‌ದಾರರನ್ನು ಕರೆಸಿ ಕೇಳಿದಾಗ "ನಿಮಗೆ ಯಾಕೆ ತೊಂದರೆ. ಎಲ್ಲಾ ಶ್ಯಾನುಭೋಗರು ಮಾಡುತ್ತಾರೆ. ಈಗಲೇ ಯಾಕೆ ಗಾಬರಿ. ಆ ವೇಳೆಗೆ ಎಲ್ಲಾ ಆಗುತ್ತೆ" ಎಂದರು. ಅಮಲ್ದಾರರು ಕಂಟ್ರಾಕ್ಟರನನ್ನು ವಿಚಾರಿಸುವಲ್ಲಿ ಅವನು "ಇದಕ್ಕೆ ಬೇಕಾದ ಮರಗಳು ನನ್ನಲ್ಲಿಲ್ಲ" ಎಂದನು. ಅಮಲ್ದಾರರು "ಇನ್ನೂ ಅವಕಾಶವಿದೆಯಲ್ಲ" ಎಂದುಕೊಂಡು ಸುಮ್ಮನಾದರು.

ಮಂತ್ರಿಗಳು ಬರುವ ದಿನ ಇನ್ನೂ ಸಮೀಪಿಸಿತು. ಅವರ ಪ್ರೋಗ್ರಾಂ ಎಲ್ಲಾ ಕಡೆಗೂ ಬಂದಿತು. ಜಿಲ್ಲಾಧಿಕಾರಿಗಳಿಗೂ ಅಮಲ್ದಾರ್ ಸಬ್

ಡಿವಿಜನ್ ಸಾಹೇಬರುಗಳಿಗೂ ಎದೆ ಅವಲಕ್ಕಿ ಕುಟ್ಟುತ್ತಿದ್ದಿತು. ನಾಳೆ ಬೆಳಿಗ್ಗೆ ಅವರು ಮಲ್ಲಿಗೆಹಳ್ಳಿಗೆ ಬರುತ್ತಾರೆ ಎನ್ನುವಾಗ, ಜಿಲ್ಲಾಧಿಕಾರಿಗಳು ಕೊನೆಯ ಸಾರಿ ರಸ್ತೆಗೆ ಹಾಕಿರುವ ಮೇಲು ಮಣ್ಣನ್ನೂ, ಮಲ್ಲಿಗೆಹಳ್ಳಿಯ ಸಿದ್ಧತೆಗಳನ್ನೂ. ದಾರಿಯಲ್ಲಿ ಉದ್ದಕ್ಕೂ ಹಳ್ಳಿಯವರು ಹಾಕಿರುವ ತೋರಣಗಳನ್ನೂ ನೋಡಿಕೊಂಡು ಹೋದರೆ ರಾತ್ರಿ ಸುಖವಾಗಿ ಒಂದೆರಡು ಗಂಟೆಗಳಾದರೂ ನಿದ್ರೆ ಬರುವುದೆಂದು ತಮ್ಮ ಮೋಟಾರಿನಲ್ಲಿ ಅಮಲ್ದಾರರನ್ನೂ ಕರೆದುಕೊಂಡು ಬಂದರು. ರಸ್ತೆಯನ್ನೂ, ರಸ್ತೆಗೆ ಅಡ್ಡಲಾಗಿ ಮಗ್ಗಲು ಹಳ್ಳಿಗಳವರು ಹಾಕಿದ್ದ ತೋರಣಗಳನ್ನೂ ನೋಡಿ ಜಿಲ್ಲಾಧಿಕಾರಿಗಳಿಗೆ ಸಮಾಧಾನವಾಯಿತು. ಅವರು ಅಮಲ್ದಾರರಿಗೆ "ಮಲ್ಲಿಗೆಹಳ್ಳಿಯಲ್ಲಿ ಎಲ್ಲಾ ಸರಿಯಾಗಿದ್ದರೆ ಈ ದಾರಿಯಲ್ಲಿ ನಮಗೆ ಯೋಚನೆ ಇಲ್ಲ. ಅಲ್ಲಿ 'ಪೆಂಡಾಲು' ಚೆನ್ನಾಗಿದೆ ತಾನೇ. ಒಳ್ಳೆ ಅಗಲವಾಗಿ ಹಾಕಿದ್ದಾರೆಯೋ. 'ಪ್ಲಾಟುಫಾರಂ' ಸ್ವಲ್ಪ ವಿಶಾಲವಾಗಿರುವುದು ತಾನೇ. ಮಾಡಲ್ ವಿಲೇಜು. ಒಳ್ಳೆ 'ಇಂಪ್ರೆಶನ್' ಬರಬೇಕು ಎಂದರು. ಅಮಲ್ದಾರರು "ಅಲ್ಲಿಯದು ತಾವು ಯೋಚಿಸಬೇಡಿ ಸಾರ್. ಅವರು ಯಾವಾಗಲೂ ಅಪ್ ಟು ದಿ ಮಾರ್ಕ್. ಅದು ವಿದ್ಯಾವಂತರ ಗ್ರಾಮ" ಎಂದರು. ಜಿಲ್ಲಾಧಿಕಾರಿಗಳು ಅದು ಸರಿ. ಆದರೆ (ಕಟ್ಟೆಯ ಮಾತನ್ನು ಜ್ಞಾಪಿಸಿಕೊಂಡು) "ಈಚೀಚೆಗೆ ಅವರು ಸ್ವಲ್ಪ ಬಾಲ ಬಿಚ್ಚುತ್ತಿದ್ದಾರೆ. ಮೊನ್ನೆ ಅವರು ಹೇಳಿದ್ದು ನೋಡಿ. ದೇವಸ್ಥಾನದ ದುಡ್ಡನ್ನು ಮಶೀದಿಗಳಿಗೆ ಕೊಡುತ್ತಿದ್ದಾರೆ ಎಂದು ಹೇಳಿದರಲ್ಲ. ಸ್ವಲ್ಪ ಹೆಚ್ಚಿಕೊಂಡಿದ್ದಾರೆ" ಎಂದರು. ಅಮಲ್ದಾರರು "ಇಲ್ಲ ಸಾರ್, ಅವರು ಬಹಳ ಯೋಗ್ಯರು" ಎಂದರು. ಸಾಹೇಬರು ಗಡ್ಡವನ್ನು ನೀವಿಕೊಳ್ಳುತ್ತಾ "ಸರಿ, ಸರಿ" ಎಂದರು.

ಜಿಲ್ಲಾಧಿಕಾರಿಗಳು ಮಲ್ಲಿಗೆಹಳ್ಳಿಗೆ ಬಂದು ಟ್ರಾವಲರ್ಸ್ ಬಂಗಲೆಯಲ್ಲಿ ಇಳಿದುಕೊಂಡು ಮೋಟಾರನ್ನು ಅನೇಕ ಸಲ ಕೂಗಿಸಿದನಂತರ ಮೊದಲು ಕಂಟ್ರಾಕ್ಟರ್ ಬಂದನು. ಅನಂತರ ಅವನ ಕೈಲಿ ಶ್ಯಾನುಭೋಗರಿಗೆ ಹೇಳಿಕಳುಹಿಸಿದರು. ಶ್ಯಾನುಭೋಗರು ರಸಬಾಳೆ ಹಣ್ಣುಗಳು, ಎಳನೀರು, ಕಾಫಿ, ಉಪ್ಪಿಟ್ಟು, ಪಾನಕ ತೆಗೆಸಿಕೊಂಡು ಕೈಯಲ್ಲಿ ನಾಲ್ಕು ನಿಂಬೆಹಣ್ಣನ್ನು ತೆಗೆದುಕೊಂಡು ಬಂದರು. ಅಧಿಕಾರಿಗಳಿಬ್ಬರೂ ಬಂದ

ಸುಸ್ತಿಗೆ ಮೊದಲು ಪಾನಕವನ್ನು ಕುಡಿದು ಅನಂತರ ಉಪ್ಪಿಟ್ಟು ತಿಂದು ಕಾಫಿ ಕುಡಿದರು. ಆಮೇಲೆ ಸುದಾರಿಸಿಕೊಂಡು ಕೆಲವು ಬಾಳೆಹಣ್ಣು ಗಳನ್ನು ತಿಂದು ಎಳನೀರನ್ನು ಕುಡಿದು ಆಯಾಸ ಪರಿಹಾರ ಮಾಡಿ ಕೊಂಡರು. ಅವರು ತಿಂದು ಕುಡಿಯುತ್ತಿರುವಾಗ, ಹುಲಿ ಕರಡಿಗಳು ಆಹಾರವನ್ನು ತೆಗೆದುಕೊಳ್ಳುತ್ತಿರುವಾಗ ಅವುಗಳನ್ನು ಹೇಗೆ ಕೆಣಕ ಬಾರದೋ ಹಾಗೆ ಶ್ಯಾನುಭೋಗ ಪಟೇಲರು ಅವರಿಗೆ ಕಾಣದಂತೆ ದೂರದಲ್ಲಿ "ಟಿ. ಬಿ.ಯ" ಹೊರಗಡೆ ನಿಂತಿದ್ದರು. ಅವರು ಧರ್ ಎಂದು ತೇಗಿ ದುದು ಕೇಳಿಸಿದನಂತರ ಶ್ಯಾನುಭೋಗರು ಒಳಗೆ ಹೋದರು. ಜಿಲ್ಲಾಧಿ ಕಾರಿಗಳು ಶ್ಯಾನುಭೋಗರು ಕೊಟ್ಟಿದ್ದ ನಿಂಬೆಯ ಹಣ್ಣನ್ನು ಕೈಯಲ್ಲಿ ಅಲ್ಲಾಡಿಸುತ್ತಾ "ಏನ್ರಿ ಎಲ್ಲಾ ಸಿದ್ಧವಾಗಿದೆಯೋ. ಚಪ್ಪರ ಗಿಪ್ಪರ. ಪ್ಲಾಟುಫಾರಂ ಸ್ವಲ್ಪ ಅಗಲವಾಗಿತಾನೆ ಮಾಡಿದ್ದೀರಿ. ಅಮಲ್ದಾರ್ ನಡೆ ಯಿರಿ. ಒಂದು ರೌಂಡ್ ಹೋಗಿಬರೋಣ" ಎಂದರು. ಶ್ಯಾನು ಭೋಗರು ಏನೂ ಜವಾಬು ಕೊಡಲಿಲ್ಲ. ಅಮಲ್ದಾರರೂ ಡೆಪ್ಯುಟಿ ಕಮಿಷ ನರೂ ಶ್ಯಾನುಭೋಗನ ಉತ್ತರವನ್ನೇ ನಿರೀಕ್ಷಿಸದೆ ಊರೊಳಕ್ಕೆ ಹೊರಟರು. ಶ್ಯಾನುಭೋಗನೂ ಅವರ ಹಿಂದೆ ಹಿಂದೆ ಹೋದನು.

ಜಿಲ್ಲಾಧಿಕಾರಿಗಳೂ ಅಮಲ್ದಾರರೂ ಮುಂದೆ ಮುಂದೆ ಸರಸರನೆ ಪೆಂಡಾಲ್ ಇರಬೇಕಾದ ಪ್ರೈಮರಿ ಸ್ಕೂಲಿನ ಕಡೆಗೆ ಹೊರಟರು. ದೂರ ದಿಂದ ನೋಡುವಾಗಲೇ ಸ್ಕೂಲಿನ ಮುಂದೆ ಎಂದಿನಂತೆ ಇರುವುದು ಅವರ ಕಣ್ಣಿಗೆ ಬಿದ್ದಿತು. ಅಮಲ್ದಾರರಿಗೆ ಮೈ ಬೆವರಿತು. ಜಿಲ್ಲಾಧಿಕಾರಿ ಗಳು ಜಿಗುಪ್ಸೆಯಿಂದ "ಎಲ್ರಿ ನಿಮ್ಮ ಪೆಂಡಾಲು. ಏನು ಸ್ಥಳ ಬದಲಾ ಯಿಸಿದಿರಾ? ನನಗೆ ತಿಳಿಸದೆ ಯಾಕೆ ಸ್ಥಳ ಬದಲಾಯಿಸಿದಿರಿ?" ಎಂದು ಗರ್ಜಿಸಿದರು. ಅಮಲ್ದಾರರು ಹಿಂದಿರುಗಿ ಶ್ಯಾನುಭೋಗರನ್ನು ನೋಡಿ ದರು. ಶ್ಯಾನುಭೋಗ ವಿಧೇಯನಾಗಿ ಅವರ ಮುಖವನ್ನೇ ನೋಡುತ್ತಾ ಮಾತನಾಡದೆ ನಿಂತನು. ಅಮಲ್ದಾರರು "ಎಲ್ರ್ರಿ ಚಪ್ಪರ" ಎಂದರು. ಜಿಲ್ಲಾಧಿಕಾರಿಗಳು "ನಿಮಗೆ ಮೈಮೇಲೆ ಜ್ಞಾನವಿದೆಯೇನ್ರಿ. ಏನ್ರಿ, ದೆಯ್ಯದ ಹಾಗೆ ನೋಡ್ತಾ ಇದೀರಿ. ಮಾತಾಡ್ರಿ. ಎಲ್ರ್ರಿ ಪೆಂಡಾಲ್" ಎಂದು ಗದ್ದರಿಸಿದರು. ಶ್ಯಾನುಭೋಗ, ಸುಮಾರು ಹತ್ತು ನಿಮಿಷ ಅವರು ಆರ್ಭಟಿಸುತ್ತಿದ್ದುದನ್ನು ಕೇಳುತ್ತಿದ್ದ. ಸುಸ್ತಾಗುವವರೆಗೆ ಸಾಹೇಬರು

ಅವನನ್ನು 'ಚೆನ್ನಾಗಿ ಬೈದರು. ಅನಂತರ ಎರಡು ಗಳಿಗೆ ಸುದಾರಿಸಿಕೊಂಡು "ಯಾಕ್ರಿ ಪೆಂಡಾಲ್ ಕಟ್ಟಲಿಲ್ಲ" ಎಂದರು. ಶ್ಯಾನುಭೋಗ "ಆಳುಗಳು ಸಿಕ್ಕಲಿಲ್ಲ ಸ್ವಾಮಿ" ಎಂದ. ಅಮಲ್ದಾರರು "ಮೊದಲು ಯಾಕೆ ಹೇಳಲಿಲ್ಲ. ಈಗ ಬಗಳ್ತೀರೆಲ್ಲ" ಎಂದರು. ಶ್ಯಾನುಭೋಗ ಶಾಂತ ವಾಗಿಯೇ ಇದ್ದ. ಜಿಲ್ಲಾಧಿಕಾರಿಗಳು "ಈಗ ಏನ್ರಿ ಮಾಡುವುದು. ಬೆಳಿಗ್ಗೆ ೧೦ ಗಂಟೆಗೆ ಮಂತ್ರಿಗಳು ಬರ್‍ತಾರಲ್ರಿ. ಏನ್ರಿ ನಾವು ಮಣ್ಣು ಹುಯ್ಕೊಳೋದು? ತಲೆಗೆ ತಂದ್ರೆಲ್ರಿ" ಎಂದರು. ಅನಂತರ ಅಮಲ್ದಾ ರರನ್ನು ನೋಡಿ "ಇಲ್ಲಿ ಯಾರೂ ಕಂಟ್ರಾಕ್ಟರ್ ಇಲ್ಲವೇನ್ರಿ" ಎಂದರು. ಅಮಲ್ದಾರರು "ಅದಕ್ಕೇನು ಸ್ವಾಮಿ ಇದ್ದಾನೆ. ಅವನ ಹತ್ತಿರವೇ ಈ ಕೆಲಸಗಳನ್ನೆಲ್ಲಾ ಮಾಡಿಸಿದೆ" ಎಂದರು. ಸಾಹೇಬರು "ಹಾಗಾದರೆ ಸರಿ. ಅವನನ್ನು ಟಿ ಬಿ.ಗೆ ಕರೆಸಿ" ಎಂದು ಹೇಳಿ, ಶ್ಯಾನುಭೋಗನ ಕಡೆ ಕೋಪದ ಕೆಂಡವನ್ನು ಉಗುಳುತ್ತಾ "ನಿಮಗೂ ನಿಮ್ಮ ಊರಿನವರಿಗೂ ಗ್ರಹಚಾರ ವಕ್ರಿಸಿದೆ. ಮಂತ್ರಿಗಳಿಗೆ ತಿಳಿದರೆ ನಿಮ್ಮ ಊರು ಸುಟ್ಟಾರು. ಅವರ ವರೆಗೆ ಯಾಕೆ? ನಾನೇ ಸುಡುತ್ತೇನೆ. ನಿಮ್ಮ ಗ್ರಹಚಾರಕಾಲ ಒದಗಿತು ಎಂದುಕೊಳ್ಳಿ" ಎಂದು ಸರಸರನೆ ಹೊರಟರು. ಶ್ಯಾನು ಭೋಗರು ಹಿಂದೆ ಹೊರಟರು. ಪಟೇಲರೂ ಇನ್ನೂ ಕೆಲವು ಹಳ್ಳಿಗಳ ಶ್ಯಾನುಭೋಗರೂ ಆ ವೇಳೆಗೆ ಬಂದು ನೆರೆದರು. ಶ್ಯಾನುಭೋಗರು ನಿಧಾನ ವಾಗಿ ಜಿಲ್ಲಾಧಿಕಾರಿಗಳ ಹಿಂದೆ ಹೊರಟರು. ಜಿಲ್ಲಾಧಿಕಾರಿಗಳು ಹಿಂದಿ ರುಗಿ "ತೊಲಗಿ. ನಿಮಗೇನು ಕೆಲಸ ನಮ್ಮ ಜತೆಯಲ್ಲಿ" ಎಂದು ಕಿರಚಿದರು. ಶಾನುಭೋಗರು "ಧಣಿ ಚಿತ್ತ" ಎಂದು ಜತೆಯವರೊಡನೆ ಮನೆಗಳಿಗೆ ಹೋದರು.

ಟಿ.ಬಿ.ಗೆ ಹೋದಕೂಡಲೇ ಅಮಲ್ದಾರರು ಕಂಟ್ರಾಕ್ಟರರನ್ನು ಕರೆಸಿ ದರು. ಕಂಟ್ರಾಕ್ಟರು ಪಡ್ಕಾನೆಯಲ್ಲಿ ಕುಡಿಯುತ್ತಿದ್ದವನು ಸಾಹೇಬರು ಕರಸಿದರೆಂಬುದನ್ನು ಕೇಳಿ ಓಡಿಬಂದನು. ಅವನು ಪೂರ್ಣವಾಗಿ ಕುಡಿ ದಿರಲಿಲ್ಲವಾಗಿ, ಅಮಲ್ದಾರರು ಹೇಳಿದ ಮಾತುಗಳು ಅವನಿಗೆ ತಿಳಿದುವು. ಅಮಲ್ದಾರರು ನಿಧಾನವಾಗಿ ಹೇಳುತ್ತಿದ್ದುದನ್ನು ಕಂಡು, ಜಿಲ್ಲಾಧಿಕಾರಿ ಗಳು "ಆ ಪುರಾಣಕ್ಕೆಲ್ಲ ಈಗ ಎಲ್ಲ್ರಿ ಹೊತ್ತು. ಏನಯ್ಯ ಕಂಟ್ರಾಕ್ಟರ್ ನಾಳೆ ಬೆಳಿಗ್ಗೆ ೭ ಗಂಟೆ ಒಳಗೆ ಸ್ಕೂಲು ಮುಂದೆ ಪೆಂಡಾಲು ಆಗಬೇಕು.

ಈಗಲೆ ಆಳುಗಳನ್ನು ಬಿಟ್ಟುಬಿಡು. ಖರ್ಚಾದಷ್ಟು ಆಗಲಿ. ಪಂಚಾಯ್ತಿಯಿಂದ ಕೊಡಿಸುತ್ತೇನೆ" ಎಂದರು. ಈ ಊರಿಗೆ ಪುಂಡುಗಂದಾಯ ಹಾಕಿ ವಸೂಲ್ಮಾಡುತ್ತೇನೆ ಎಂದರು. ಕಂಟ್ರಾಕ್ಟರನು "ಸಾಧ್ಯವಿಲ್ಲ ಸ್ವಾಮಿ" ಎಂದನು. ಸಾಹೇಬರು ಕಿಡಿಕಿಡಿಯಾಗಿ "ಯಾಕೆ" ಎಂದರು. ಕಂಟ್ರಾಕ್ಟರನು "ಸಾಮಾನಿಲ್ಲ ಬುದ್ಧಿ. ಅಡಿಕೆ ಮರಗಳು ಮಾವಿನಸೊಪ್ಪು ಬಗಿನೆ ಗರಿ ಎಲ್ಲಾ ಈಗ ಎಲ್ಲಿ ಸಿಕ್ಕುತ್ತೆ?" ಎಂದನು. ಸಾಹೇಬರು ಅಮಲ್ದಾರರ ಮೇಲೆ ಹುಚ್ಚಾಪಟ್ಟೆ ರೇಗಿದರು. "ಮಾವಿನ ಸೊಪ್ಪಿಗೇನಯ್ಯ ದರಿದ್ರ. ರಸ್ತೆ ಮರವನ್ನೆಲ್ಲ ಜೋಳಿಸು. ಮಂತ್ರಿಗಳ ಕಣ್ಣಿಗೆ ಬೀಳುವ ಮರಗಳನ್ನು ಮುಟ್ಟಬೇಡ. ಜೋಕೆ." ಎಂದರು. ಕಂಟ್ರಾಕ್ಟರನಿಗೆ ಇಂತಹ ದೊಡ್ಡ ಧಣಿ ಹೀಗೆ ಹಾರಾಡುವುದನ್ನು ಕಂಡು ಸ್ವಲ್ಪ ನಗು ಬಂತು. ಅವನು "ಬುದ್ಧಿ, ಗಳುಗಳಿಲ್ಲದೆ ಬರಿಯ ಸೊಪ್ಪು ಹೇಗೆ ನಿಲ್ಲುತ್ತೆ" ಎಂದನು. ಜಿಲ್ಲಾಧಿಕಾರಿಗಳು ಅಮಲ್ದಾರರಿಗೆ "ಅಡಕೆ ಮರ, ಅಡಕೆ ಗಳುಗಳಿಗೇನ್ರಿ ಈ ಊರಲ್ಲಿ ದರಿದ್ರ? ಎಲ್ಲರೂ ತೋಟಗಾರರೆ. ಪ್ರತಿಯೊಂದು ಮನೆ ಬಾಗಿಲಿನ ಜಗಲಿಯ ಮೇಲೂ ತೊಲೆಯ ಮೇಲೆ ಹತ್ತು ಇಪ್ಪತ್ತು ಮರದ ತುಂಡುಗಳು ಬಿದ್ದಿರುತ್ತವೆ. ಮನೆಗೆ ಇಪ್ಪತ್ತು ಗಳು ಸಿಕ್ಕಿದರೆ ಸಾಕು. ಯಾವ ಯಾವ ಮನೆಯ ಬಾಗಿಲಿನಲ್ಲಿದೆಯೋ ನೋಡಿಕೊಂಡು ಬನ್ನಿ; ಕಮಾಂಡಿಯರ್ ಕಮಾಂಡಿಯರ್" ಎಂದು ಕಿರಚಿದರು. ಆ ವೇಳೆಗೆ ರಾತ್ರೆ ೧೧ ಗಂಟೆಯಾಯಿತು. ಜಿಲ್ಲಾಧಿಕಾರಿಗಳಿಗೆ ಹೆಡ್‌ಕ್ವಾರ್ಟರಿನಲ್ಲಿ ಅನೇಕ ಕೆಲಸಗಳಿದ್ದುವು. ಹೇಗಾದರೂ ಹೆಡ್‌ಕ್ವಾರ್ಟರ್‌ಗೆ ಸೇರಿದರೆ ಸಾಕು ಎಂದು ಅವರು ಕಾತರರಾಗಿದ್ದರು. ಅಮಲ್ದಾರರೂ ಕಂಟ್ರಾಕ್ಟರೂ ಕಗ್ಗತ್ತಲೆಯಲ್ಲಿ ಕೈಯಲ್ಲಿ ಒಂದು ಸಣ್ಣ ಲಾಂದ್ರವನ್ನು ಹಿಡಿದುಕೊಂಡು ಊರೊಳಕ್ಕೆ ಬಂದರು. ಊರಿನಲ್ಲಿ ಆಗಲೇ ಜನರ ಸದ್ದು ಅಡಗಿತ್ತು. ಅಮಲ್ದಾರರನ್ನು ನೋಡಿ ಒಂದೆರಡು ನಾಯಿಗಳು ಬಗುಳಿದುವು. ಅವರು ಕೊಳ್ಳಿ ದೆವ್ವಗಳಂತೆ ಪ್ರತಿಯೊಂದು ಮನೆಯ ಬಾಗಿಲಿಗೂ ಹೋಗಿ ಜಗಲಿಯ ಮೇಲಿನ ತೊಲೆಗಳ ಮೇಲೆ ನೋಡಿದರು. ಅಲ್ಲಿ ಅಡಿಕೆ ಮರಗಳು ಒಂದಾಗಲಿ ಕಾಣಲಿಲ್ಲ. ಗಳುಗಳ ಹೆಸರೇ ಇರಲಿಲ್ಲ.

ಅಮಲ್ದಾರರು ಕಂಟ್ರಾಕ್ಟರೊಂದಿಗೆ "ಏನಯ್ಯ, ಕೈಯಿಂದ

ಇನ್ನೂರು ರೂಪಾಯಿ ಹೋದರೂ ಹೋಗಲಿ. ಸದ್ಯ ನಾಳೆ ಕೆಲಸ ಮಾನ ಉಳಿದರೆ ಸಾಕು. ಅನಂತರ ಈ ಊರವರಿಗೆ ನರಕ ಕಾಣಿಸ್ತೇನೆ" ಎಂದರು. ಕಂಟ್ರಾಕ್ಟರು "ಸ್ವಾಮಿ. ಅದು ಮುಂದಲ ಮಾತು. ಈಗ ಸದ್ಯ ನಾಳೆ ಮಂತ್ರಿಗಳು ಬಂದರೆ, ಇವರಿಗೆ ನರಕ ಕಾಣಿಸುವುದಿರಲಿ, ನಿಮ್ಮ ಪಾಡು ಹೇಳಿ ಸ್ವಾಮಿ. ಈಗ ದೊಡ್ಡ ಸಾಹೇಬರ ಎದುರಿಗೆ ನೀವು ಬದುಕಿದ್ದರೂ ಕೂಡ ಸತ್ತಂತೆ ಆಯಿತಲ್ಲ" ಎಂದನು. ಅಷ್ಟು ಹೊತ್ತಿಗೆ ಅವರು ಊರ ಮುಂದಲ ಅರಳಿ ಮರದ ಹತ್ತಿರಕ್ಕೆ ಬಂದರು. ಅಮಲ್ದಾರರು 'ಹಸಿದ ತೋಳದ ಮುಂದೆ ಕುರಿ ಹೋದಂತೆ ಸಾಹೇಬರ ಎದುರಿಗೆ ಹೇಗೆ ಹೋಗಲಿ. ಬೆಳಿಗ್ಗೆ ಮಂತ್ರಿಗಳು ಬರುತ್ತಾರಲ್ಲ. ಅಲ್ಲಯ್ಯ ನಿನಗೆ ಗೊತ್ತಿಲ್ಲದ್ದೇನು? ಇದಕ್ಕೆ ಏನೂ ದಾರಿಯೇ ಇಲ್ಲ ವೇನಯ್ಯ" ಎಂದರು. ಕಂಟ್ರಾಕ್ಟರು "ದಾರಿ ಇಲ್ದೆ ಏನು ಸ್ವಾಮಿ. ಶ್ಯಾನುಭೋಗರಿಗೆ ಹೇಳಿದರೆ ಬೆಳಿಗಿನ ವೇಳೆಗೆ ಚಪ್ಪರ ತಯಾರಾಗುತ್ತೆ" ಎಂದನು. ಅಮಲ್ದಾರರು "ಇಲ್ಲಿಗೆ ಬಂದ ಕೂಡಲೇ ನನಗೆ ಅದು ಗೊತ್ತಾ ಯಿತು. ಆ ಕಟ್ಟೆಯ ಮಾತು ಬಂದಂದಿನಿಂದ ಹೀಗೆ ನಮ್ಮ ಮಾತಿಗೆ ಬೆಲೆ ಹೋಯಿತು. ಇದು ಬಡಕೊಂಡರೂ ಸಾಹೇಬರಿಗೆ ಗೊತ್ತಾಗುತ್ತಿಲ್ಲ. ಇದನ್ನ ಹೇಳಿದ್ರೆ ನಮ್ಮ ಮೇಲೆ ಬೀಳುತ್ತಾರೆ. ಆದ್ದಾಯಿತು ಇರೋ ವಿಚಾರ ಹೇಳಿಬಿಡತ್ತೀನಿ. ಅದಿರ್ಲಿ; ಈಗ ಶ್ಯಾನುಭೋಗರು ತಾನೇ ಎಲ್ಲಿಂದ ಗಳು ಬಿದರು ತರ್ತಾರೆ. ಆಗಲೇ ಅರ್ಧ ರಾತ್ರಿ ಆಯ್ತಲ್ಲ. ಆಳು ಎಲ್ಲಿ ಸಿಕ್ಕುತ್ತಾರೆ. ನನ್ನ ಸರ್ವಿಸಿನಲ್ಲೇ ನನಗೆ ಇಂತಹ ಅವಮಾನವಾಗ ಲಿಲ್ಲ," ಎಂದುಕೊಂಡು ಟಿ.ಬಿ.ಗೆ ಹೋದರು. ಜಿಲ್ಲಾಧಿಕಾರಿಗಳು ದೀಪದ ಎದುರಿಗೆ ಕುರ್ಚಿಯಮೇಲೆ ತೂಗಡಿಸುತ್ತಾ ಕುಳಿತಿದ್ದರು. ಅವರ ಡ್ರೈವರು ಕಾರಿನಲ್ಲಿ ತೂಗಡಿಸುತ್ತಿದ್ದನು. ಹುಲ್ಲುಹಳ್ಳಿಯ ಶ್ಯಾನು ಭೋಗ ಅಡಿಗೆಮಾಡಿ ತೆಗೆದುಕೊಂಡು ಬಂದು, ಟಿ ಬಿ.ಯ ಅಡಿಗೆ ಮನೆ ಯಲ್ಲಿ ಇಟ್ಟುಕೊಂಡು ಕೂತಿದ್ದನು. ಕುಳವಾಡಿಗಳು ಮೂರುಜನ ಟಿ.ಬಿ. ಕಾಂಪೌಂಡಿನ ಮಾವಿನ ಮರದ ಕೆಳಗೆ ತಮ್ಮ ದುಪಟಿಗಳನ್ನು ಹೊದೆದುಕೊಂಡು ತಮ್ಮ ತಲೆಯ ಸಮೀಪದಲ್ಲಿ ದೊಣ್ಣೆಗಳನ್ನು ಇಟ್ಟು ಕೊಂಡು ಮಲಗಿದ್ದರು. ಟಿ.ಬಿ. ಪೂರ್ಣವಾಗಿ ನಿಶ್ಶಬ್ದವಾಗಿದ್ದಿತು. ಅಮಲ್ದಾರರು ಬಾಗಿಲಿಗೆ ಬಂದರೂ ಸಾಹೇಬರು ಕುರ್ಚಿಯಮೇಲೆ ಕೂತು

ಕೊಂಡೇ ಭರ್ ಭರ್ ಎಂದು ಗೊರಕೆ ಹೊಡೆಯುತ್ತಿದ್ದರು. ಅಮಲ್ದಾರರು ಬಾಗಿಲಿನಲ್ಲಿ ಒಂದು ಸಲ ಕೆಮ್ಮಿದರು. ಸಾಹೇಬರು ಬೆಚ್ಚಿ ಬಿದ್ದು "ಎಲ್ಲಿ?" ಎಂದರು. ಅಮಲ್ದಾರರನ್ನು ನೋಡಿದ ಮೇಲೆ ಸಾಹೇಬರ ಕೋಪ ಮೊದಲಿನಂತೆಯೇ ಪ್ರಾರಂಭವಾಯಿತು.

ಅಮಲ್ದಾರರು ಸಾಹೇಬರಿಗೆ "ಸ್ವಾಮಿ ಈ ಚಪ್ಪರ ಶ್ಯಾನುಭೋಗನಿಂದ ಹೊರತು ಮತ್ತಾರಿಂದಲೂ ಸಾಧ್ಯವಿಲ್ಲ" ಎಂದರು. ಸಾಹೇಬರಿಗೆ ಮಾತು ಕೇಳಿ ಬೇಜಾರಾಗಿತ್ತು. ಅವರು "ಹಾಗಾದರೆ ಶ್ಯಾನುಭೋಗ ಯಾಕೆ ಪೆಂಡಾಲ್ ಕಟ್ಟಲಿಲ್ಲ" ಎಂದರು. ಅಮಲ್ದಾರರು "ಕಟ್ಟೆಯ ಮಾತು ಬಂದಾಗಿನಿಂದ ಅವರು ಹೀಗೆ ನಮ್ಮ ಮಾತನ್ನು ಸರಿಯಾಗಿ ನಡೆಸುತ್ತಿಲ್ಲ" ಎಂದರು. ಸಾಹೇಬರು "ಅದಕ್ಕೆ ಅವರ ತಲೆ ತೆಗೀತೇನೆ ಅಂತ ಹೇಳಿದೆನಲ್ಲ ಇನ್ನೇನಾಗಬೇಕು" ಎಂದರು. ಅಮಲ್ದಾರರು "ಸ್ವಾಮಿ ಕ್ಷಮಿಸಬೇಕು. ಈಗ ಅವರ ತಲೆ ತೆಗೆಯುವುದಿರಲ್ಲಿ ನಮ್ಮ ತಲೆ ನಾಳೆ ಹನ್ನೊಂದು ಗಂಟೆಗೆ ಹೋಗುತ್ತೆ" ಎಂದರು. ಸಾಹೇಬರು ಒಂದು ಗಳಿಗೆ ಯೋಚಿಸಿ "ನೀವು ಶುದ್ಧ ಮುಟ್ಠಾಳರು. ಒಂದು ಚಪ್ಪರ ಹಾಕಿಸುವುದಕ್ಕೆ ನಿಮಗೆ ಯೋಗ್ಯತೆಯಿಲ್ಲ. ಹೋಗಲಿ ಆ ಕನ್ನೋಜಿ ಶ್ಯಾನುಭೋಗನನ್ನು ಕರೆಯಿರಿ" ಎಂದರು. ಕೂಡಲೇ ಕಂಟ್ರಾಕ್ಟರನು ಶ್ಯಾನುಭೋಗರ ಮನೆಗೆ ಬಂದನು. ಶ್ಯಾನುಭೋಗರೇ ಎಂದು ಒಂದು ಸಲ ಮೆಲ್ಲಗೆ ಕರೆದ ಕೂಡಲೇ ಶ್ಯಾನುಭೋಗರು ಹೊರಕ್ಕೆ ಬಂದರು. "ಅಮಲ್ದಾರರು ಬರಹೇಳಿದರೇನಯ್ಯ; ನಡಿ ಸಾಹೇಬರ ಅಪ್ಪಣೆ ಕಾಯುತ್ತಲೇ ಇದ್ದೆ" ಎಂದು ಹೊರಟರು.

ಶ್ಯಾನುಭೋಗ ಬರದಿದ್ದರೆ ಏನು ಮಾಡಲಿ ಎಂದು ಯೋಚಿಸುತ್ತಿದ್ದ ಅಮಲ್ದಾರರಿಗೆ ದೂರದಲ್ಲಿ ಲಾಂದ್ರದ ಬೆಳಕಿನಲ್ಲಿ ಇಬ್ಬರನ್ನೂ ಕಂಡು ಮನಸ್ಸು ಸಮಾಧಾನವಾಯಿತು. ಅವರು ಎದುರಿಗೆ ಬಂದ ಕೂಡಲೇ ಜಿಲ್ಲಾಧಿಕಾರಿಗಳು "ಏನ್ರಿ ಬಹಳ ಪುಂಡರಾಗಿದ್ದೀರಿ. ನಾವು ಇಲ್ಲಿ ಬಂದು ಸಾಯ್ತ ಬಿದ್ದಿದ್ರು ನಮ್ಮನ್ನು ಬದುಕಿದ್ರ ಸತ್ರ ಅಂತ ಕೇಳೋರಿಲ್ಲ. ಮನೇಲಿ ಸುಖವಾಗಿ ಮಲಗಿಬಿಟ್ರಿ ಅಲ್ವೆ" ಎಂದರು. ಶ್ಯಾನುಭೋಗರು "ತಮ್ಮ ಅಪ್ಪಣೆಯಾದುದರಿಂದ ಹೋದೆ. ಈಗ ಮತ್ತೆ ಅಪ್ಪಣೆಯಾಯಿತು, ಬಂದೆ ಸ್ವಾಮಿ" ಎಂದರು. ಸಾಹೇಬರು

"ಈಗ ಇಲ್ಲಿ ನನ್ನ ಅಪ್ಪಣೆ ನಡೆಯುವಂತೆ ಇಲ್ಲ. ನೀವು ಈ ಹೂಟ ಯಾಕೆ ಮಾಡಿದ್ದೀರಿ ನಮಗೆ ಗೊತ್ತು. ನಿಮ್ಮ ಕಲ್ಲು ಕಟ್ಟೆಗೆ ಇಷ್ಟೊಂದು ಆಟ ಹೂಡಬೇಕಾಯ್ತೆ. ಹೇಗಾದರೂ ಆಗಲಿ. ಈಗ ನಮ್ಮ ಮಾನ "ಬಚಾವ್" ಮಾಡಿ. ನಾಳೆ ಹೇಗೂ ದೊಡ್ಡ ದಣಿಗಳು ಬರ್ತಾರೆ. ಅವರನ್ನು ತೋಪಿನ ಬಳಿಗೆ ಕರೆದುಕೊಂಡುಹೋಗಿ ತೋರಿಸೋಣ. ನೀವೂ ಹೇಳಿಕೊಳ್ಳಿ. ನಾನೂ ಹೇಳುತ್ತೇನೆ. ಅನಂತರ ರಿಪೋರ್ಟು ಮಾಡಲು ನನ್ನ ಬಳಿಗೆ ಬರುತ್ತೆ. ಎಲ್ಲಾ ಸರಿಯಾಗಿ ಬರೀತೇನೆ. ಈಗ ಹೋಗಿ ಮೊದಲು ಪೆಂಡಾಲು ಹಾಕಿ" ಎಂದರು. ಶ್ಯಾನುಭೋಗರು "ಧಣಿಯ ಅಪ್ಪಣೆ" ಎಂದುಕೊಂಡು ಊರೊಳಕ್ಕೆ ಹೋದರು. ಇತ್ತ ಡೆಪ್ಯುಟಿ ಕಮಿಶನರು ಊಟಮಾಡಿಕೊಂಡು, ಅಮಲ್ದಾರರನ್ನು ಮತ್ತಷ್ಟು ಬೈದು "ನೀವು ಬೆಳಗಿನವರೆಗೆ ಇಲ್ಲಿಯೇ ಇರಿ" ಎಂದು ಹೇಳಿ ಡಿಸ್ಟ್ರಿಕ್ಟ್ ಹೆಡ್‌ಕ್ವಾರ್ಟರಿಗೆ ಹೊರಟುಹೋದರು. ಅಮಲ್ದಾರರು "ಶ್ಯಾನುಭೋಗನ ತಲೆಮೇಲೆ ಬಿದ್ದ ಭಾರ. ಇನ್ನು ನನಗೆ ಯಾಕೆ ಯೋಚನೆ" ಎಂದು ಕೊಂಡು ಸುಖವಾಗಿ ಮಲಗಿದರು.

ಶ್ಯಾನುಭೋಗರು ಊರೊಳಕ್ಕೆ ಹೋದರು. ಪರಿಸ್ಥಿತಿ ಹೀಗೆ ಬಂದೀತೆಂದು ಅವರು ತಿಳಿಯಲಿಲ್ಲ. ಅಮಲ್ದಾರರು ಡಿಸ್ಟ್ರಿಕ್ಟ್ ಹೆಡ್‌ಕ್ವಾರ್ಟರಿನಿಂದ ಲಾರಿಯಲ್ಲಿ ಮರ, ಗಳುಗಳನ್ನು ತಂದು ಚಪ್ಪರ ಕಟ್ಟುತ್ತಾರೆಂದು ಅವರು ತಿಳಿದಿದ್ದರು. ಹೇಗೂ ಎರಡುಮೂರು ದಿನಗಳ ಮುಂಚೆಯಾದರೂ ಅಮಲ್ದಾರರು ಬರುತ್ತಾರೆ. ಆಮೇಲೆ ಗಳು ಗರಿಗಳನ್ನು ಒದಗಿಸಲು ಅವಕಾಶವಿರುತ್ತದೆ ಎಂದು ಅವರು ತಿಳಿದಿದ್ದವರು ಕೊನೆಯ ದಿವಸದ ವರೆಗೆ ಇನ್ನೇನು ಈಗ ಬರುತ್ತಾರೆ ಆಗ ಬರುತ್ತಾರೆ ಎಂದುಕೊಂಡು ಸುಮ್ಮನೆಯೇ ಆಗಿದ್ದರು. ಆದರೆ ಈಗ ಬಂದ ಪರಿಸ್ಥಿತಿ ಕಣ್ಣಿಗೆ ಕತ್ತಲೆ ಕವಿಸುವುದಾಗಿದ್ದಿತು. ಆದರೆ ಆ ನಾದಿರ್‌ಷಾ ಇದಕ್ಕೆ ಹೆದರುವ ಪ್ರಾಣಿಯಾಗಿರಲಿಲ್ಲ. ಅವನು ಮೊದಲು ಪಂಚಾಯ್ತಿಯ ನಾಲ್ಕು ಪೆಟ್ರೊಮ್ಯಾಕ್ಸ್ ದೀಪಗಳನ್ನೂ, ದೇವಸ್ಥಾನದ ನಾಲ್ಕು ಪೆಟ್ರೊಮ್ಯಾಕ್ಸ್ ದೀಪಗಳನ್ನೂ, ಸಂತೆ ಕಂಟ್ರಾಕ್ಟರಿನ ಎರಡು ದೀಪಗಳನ್ನೂ ಹೆಂಡದ ಅಂಗಡಿಯ ಒಂದು ದೀಪವನ್ನೂ, ಆಂಜನೇಯ ನಾಟಕ ಸಂಘದ ಒಂದು ದೀಪವನ್ನೂ ತಂದನು. ಕಾಲುಗಂಟೆ ಒಳಗಾಗಿ ಮನೆಗೆ ಬಂದು ಆಳಿ

ನಂತೆ ಸುಮಾರು ೧೫೦ ಆಳುಗಳನ್ನು ಸೇರಿಸಿದನು. ಮುಖ್ಯವಾಗಿ ಬೇಕಾಗಿದ್ದುದು ಗಳು. ಗ್ರಾಮಸ್ಥರೆಲ್ಲಾ ಸೇರಿ "ಗಳುವಿಗೆ ಏನು ಮಾಡೋಣ, ಮಾವಿನ ಸೊಪ್ಪು; ಚಿಂತೆಯಿಲ್ಲ. ಬಗಿನೆ ಗರಿಗಳು ತೋಟಗಳಲ್ಲಿವೆ. ಆದರೆ ಗಳು? ಅವರಿವರ ಮನೆಗಳಲ್ಲಿ ಹುಡುಕುವುದರಲ್ಲಿ ಸುಮಾರು ೫೦-೬೦ ದೊರೆಯುವುದಾಯಿತು.

ಎಲ್ಲರೂ ಯೋಚನಾಪರರಾಗಿದ್ದಾಗ ಶ್ಯಾನುಭೋಗ "ಹಜಾಮರ ನಿಂಗನ ಮನೆಗೆ ನಡೆಯಿರಿ" ಎಂದ. ತೀಕ್ಷ್ಣ ಬುದ್ಧಿಗಳವರಿಗೆ ಶ್ಯಾನುಭೋಗನ ಅಭಿಪ್ರಾಯ ತತ್‌ಕ್ಷಣ ಗೊತ್ತಾಯಿತು. ಉಳಿದವರು "ಹಜಾಮನ ಮನೆಯಲ್ಲಿ ಏನು ಸಿಕ್ಕುತ್ತೆ" ಎಂದುಕೊಂಡರು. ನಿಂಗನ ಮನೆ ಬ್ರಾಹ್ಮಣರ ಬೀದಿಯ ಉತ್ತರಕ್ಕೆ ಕೋಟೆಯ ಒಕ್ಕಲಿಗರ ಕೇರಿಯಲ್ಲಿದೆ. ಅದು ದೊಡ್ಡದಾದ ಎರಡು ತೊಟ್ಟಿಯ ವಿಶಾಲವಾದ ಹೆಂಚಿನ ಮನೆ. ಒಂದು ಕಾಲದಲ್ಲಿ ಅದು ಛತ್ರವಾಗಿದ್ದಂತೆ ತೋರುತ್ತದೆ. ಹಿಂದೆ ಆ ಮನೆಯಲ್ಲಿ ಹದಿನಾರು ಸಂಸಾರಗಳು ವಾಸವಾಗಿದ್ದುವಂತೆ. ಈಚೆಗೆ ಆ ಮನೆ ಪಾಳು ಬಿದ್ದಿತ್ತು. ಆ ಮನೆಯ ಈಗಿನ ಯಜಮಾನನಾದ ಮುನಿಯಪ್ಪ ಕೊಡಗಿನಲ್ಲಿ ಹೋಗಿ ಸೇರಿಕೊಂಡಿದ್ದನು. ಮಲ್ಲಿಗೆಹಳ್ಳಿಯ ಹೆಂಡದ ಕಂಟ್ರಾಕ್ಟರು ಆ ಮನೆಯ ಬೀಗದ ಕೈಯನ್ನು ತನ್ನಲ್ಲಿ ಇಟ್ಟುಕೊಂಡು, ಮುನಿಯಪ್ಪ ಮಲ್ಲಿಗೆ ಹಳ್ಳಿಗೆ ಬಂದಾಗ ಅವನನ್ನು ಪಡ್ಕಾನೆಯಲ್ಲಿ ಚೆನ್ನಾಗಿ ಸತ್ಕರಿಸಿ ಕಳುಹಿಸುತ್ತಿದ್ದನು. ಶ್ಯಾನುಭೋಗ ಜನರೊಂದಿಗೆ ಆ ಮನೆಯ ಮುಂದೆ ಹೋಗಿ ನಿಂತನು. ಇಪ್ಪತ್ತು ಜನ ಸೂರಿನಮೇಲೆ ಏರಿ ಕಣ್ಣುಮುಚ್ಚಿ ತೆರೆಯುವುದರೊಳಗಾಗಿ ಹೆಂಚುಗಳನ್ನು ಕೆಳಕ್ಕೆ ಇಳಿಸಿದರು. ಮತ್ತೊಂದು ಗಳಿಗೆ ಎನ್ನುವುದರೊಳಗಾಗಿ ಗಳುಗಳೆಲ್ಲಾ ಕೆಳಗೆ ಬಂದವು. ಮನೆಯು ಮುಂಡವಿಲ್ಲದ ರುಂಡದಂತೆ ಬೋಳಾಗಿ ನಿಂತಿತು. ಬೆಳಗಿನ ಜಾವ ಐದು ಗಂಟೆ ವೇಳೆಗೆ ಸ್ಕೂಲು ಬಯಲನ್ನೆಲ್ಲಾ ಆಕ್ರಮಿಸಿಕೊಂಡು, ಮೂರು ಮೈಲಿಗಳವರೆಗೆ ಬಾಳೆ ಕಂದುಗಳೂ ಬಾವುಟಗಳೂ ಕಾಣುತ್ತಿದ್ದ "ಪೆಂಡಾಲು" ನಂದನ ವನದಂತೆ ಸಿದ್ಧವಾಯಿತು. ಬೆಳಗಾದ ಮೇಲೆ ಅಮಲ್ದಾರರು ಚಪ್ಪರವನ್ನು ಬಂದು ನೋಡಿದರು. ಅವರ ಸಂತೋಷಕ್ಕೆ ಪಾರವಿಲ್ಲದುದಾಯಿತು. ಸಂತೋಷಕ್ಕಿಂತ ಹೆಚ್ಚಾಗಿ ಆಶ್ಚರ್ಯವೂ ಉಂಟಾಯಿತು. ಈ ಗಳುಗಳು ಮಾತ್ರ ಸಿಕ್ಕಿದ್ದರೆ

ನಾನೇ ಚಪ್ಪರ ಮಾಡಿಸಬಹುದಾಗಿದ್ದಿತು. ಗಳುಗಳು ಎಲ್ಲಿಯವೋ ಎಂದು ಅವರು ವಿಸ್ಮಯಗೊಂಡರು.

# ೩. ಮಂತ್ರಿಗಳ ಆಗಮನ

ಮಂತ್ರಿಗಳು ಠಾಕೊ ಠಾಕ್ ಹನ್ನೊಂದು ಗಂಟೆಗೆ ಮಲ್ಲಿಗೆಹಳ್ಳಿಗೆ ಬಂದರು. ಅವರ ಜತೆಯಲ್ಲಿ ಅವರ ಕಾರಿನಲ್ಲಿಯೇ ಜಿಲ್ಲಾಧಿಕಾರಿಗಳೂ ಬಂದರು. ಜಿಲ್ಲಾಧಿಕಾರಿಗಳ ಕಣ್ಣಿಗೆ ದೂರದಿಂದಲೇ ಪೆಂಡಾಲು ಕಂಡಿತು. ಅವರು ಸಮಾಧಾನದ ನಿಟ್ಟುಸಿರನ್ನು ಬಿಟ್ಟರು. ಅನಂತರ ಮಂತ್ರಿಗಳ ಸಭೆ ಪ್ರಾರಂಭವಾಯಿತು. "ನೀನೆ ಇಂದ್ರ ಚಂದ್ರ ದೇವೇಂದ್ರ ಲಕ್ಷ್ಮೀಪುತ್ರ ಪ್ರಾಜ್ಞ ಸರಸ್ವತಿಯುಮುರುಕು, ತನ್ನ ಕಾರ್ಯದಲ್ಲಿ ತಾನು ಆಸಕ್ತ, ಸ್ವಕಾರ್ಯದುರಂಧರ ಪರಹಿತವಿಮುಖ ಆಂಗ್ಲಭಾಷಾ ಸೇವಾಧುರೀಣ, ಸ್ವಜನಪುರಸ್ಕಾರನಿಪುಣ ಎಂಬ ಬಿರುದುಗಳನ್ನುಳ್ಳ ಅನೇಕ ಸ್ವಾಗತ ಪದ್ಯಗಳನ್ನು ರಿಟೈರ್ಡ್ ಸ್ಕೂಲು ಉಪಾಧ್ಯಾಯರೂ ಗರ್ಲ್ಸ್ ಸ್ಕೂಲು ಉಪಾಧ್ಯಾಯರೂ ದೇವಸ್ಥಾನದ ಅರ್ಚಕರೂ ಪಠಿಸಿದರು. ಮಂತ್ರಿಗಳು ಅಮಲ್ದಾರಿಯಿಂದ, ಕೇವಲ ಸರ್ವಿಸಿನಿಂದಲೂ ಸೀನಿಯಾರಿಟಿಯಿಂದಲೂ ಈ ಪದವಿಗೆ ಏರಿದ್ದರು. ಆ ಹೊಗಳಿಕೆಯ ಮಾತುಗಳೆಲ್ಲ ನಿಜವಾಗಿಯೂ ತಮ್ಮ ಅರ್ಹತೆಗಳೆಂದೇ ಅವರು ತಿಳಿದು ಆನಂದಿತರಾದರು. ಗ್ರಾಮಸ್ಥರು ಬಿನ್ನವತ್ತಳೆಯನ್ನು ಓದಲು ಮೊದಲುಮಾಡಿ "ನೀವು ಮೊದಲು ಅಮಲ್ದಾರರಾಗಿ ಇಲ್ಲಿ ಇದ್ದಕಾಲದಿಂದ ನಮ್ಮಲ್ಲಿ ನಿಮಗೆ ವಿಶ್ವಾಸವಿದೆ" ಎಂದೂ ಮುಂದಾಗಿ ಪ್ರಾರಂಭಿಸಿದರು. ಮಂತ್ರಿಗಳಿಗೆ ತಾವು ಅಮಲ್ದಾರರಾಗಿದ್ದುದನ್ನು ಜ್ಞಾಪಿಸುವುದು ಸ್ವಲ್ಪವೂ ಇಷ್ಟವಿರಲಿಲ್ಲ. ತಾನು ಹುಟ್ಟುವಾಗಲೇ ಮಂತ್ರಿಯಾಗಿ ಹುಟ್ಟಿದೆನೆಂದೂ ಮಂತ್ರಿತ್ವದ ಹೊರತು ತಮಗೆ ಮತ್ತಾವುದು ಅರ್ಹವೇ ಅಲ್ಲವೆಂದು, ಅವರಿಗೆ ಮಂತ್ರಿಗಳಾದ ಮೇಲೆ ನಂಬಿಕೆ ದೃಢವಾಗಿದ್ದಿತು. ತಾನು ಅಮಲ್ದಾರನಾಗಿದ್ದುದು ಇತರರಿಗೆ ತಿಳಿಯಬಾರದೆಂಬುದೂ ಅವರ ಅಭಿಲಾಷೆಯಾಗಿದ್ದಿತು. "ತಾನು ಬರಿಯ ಸೀನಿಯಾರಿಟಿ ಸಿವಿಲ್ ಲಿಸ್ಟ್ ಇವುಗಳಿಂದ ಈ ಪದವಿಗೆ ಬರಲಿಲ್ಲ.

ತನ್ನಲ್ಲಿರುವ ಯಾವುದೋ ಅದ್ಭುತವಾದ ಶಕ್ತಿಯಿಂದ ಬಂದೆ. ಎದುರಿಗೆ ಇರುವ ಅಮಲ್ದಾರ್ ಡೆಪುಟಿಕಮಿಶನರಿಗೆ " ಓ ಇವರೂ ಅಮಲ್ದಾರರಾಗಿದ್ದವರೇ ಎಂಬ ಭಾವ ಬರಬಾರದೆಂದು ಅವರು ಯಾವಾಗಲೂ ಕಾತರರಾಗಿರುತ್ತಿದ್ದರು. ಪತ್ರಿಕಾಕರ್ತರೂ ಬಾತ್ಮಿದಾರರೂ ಹಸ್ತಾಕ್ಷರದ ಬೇಟೆಗಾರರೂ, ಇವರಿಂದ ಚಂದಾ ವಸೂಲ್ಮಾಡಬೇಕೆಂಬ ಬಯಕೆಯಿಂದ ಸಭೆಯಲ್ಲಿ ಇವರನ್ನು ಅಧ್ಯಕ್ಷರನ್ನಾಗಿ ಕೂರಿಸುತ್ತಿದ್ದವರೂ ಬಂದು "ನಿಮ್ಮ ಜೀವನದ ಕತೆ ಹೇಳಿ. ನೀವು ಬುದ್ಧಿಯಿಂದ ಗದ್ದಿಗೆಗೆ ಏರಿದುದು. ಅರ್ಧಮನೆಯಿಂದ ಅರಮನೆಗೆ ಏರಿದುದು, ಮಣ್ಣಿನಲ್ಲಿ ಹೊರಳುತ್ತಿದ್ದವರು ಹೊನ್ನಿನಲ್ಲಿ ಹೊಳೆಯುತ್ತಿರುವುದು. ಇದರ ಸ್ಫೂರ್ತಿದಾಯಕವಾದ ಇತಿಹಾಸವನ್ನು ಹೇಳಿ. ಮುಂದೆ ಬರುವ ಯುವಕರಿಗೆ ಮೇಲುಪಂಗ್ತಿಯಾಗಿರಲಿ" ಎಂದು ಕೇಳಿದಾಗ ಮಂತ್ರಿಗಳು " ಅದೆಲ್ಲ ಹಿಂದಲ ಪುರಾಣ. ಈಗ ಯಾಕೆ? ಈಗಿನ ನನ್ನ ಯೋಗ್ಯತೆಯನ್ನೂ ಕಾರ್ಯಧ್ಯಕ್ಷತೆಯನ್ನೂ ತೀಕ್ಷ್ಣಬುದ್ಧಿಯನ್ನೂ ಕುರಿತು ಪ್ರಸ್ತಾಪಿಸಿ" ಎಂದು ಹೇಳುತ್ತಿದ್ದರು. ಮಲ್ಲಿಗೆಹಳ್ಳಿಯ ಬಿನ್ನವತ್ತಲೆಯಲ್ಲಿ ತಮ್ಮ ಅಮಲ್ದಾರಿ ವಿಚಾರ ಪ್ರಸ್ತಾಪ ಬಂದಾಗ ಮಂತ್ರಿಗಳು " ಮೊದಲು ನನಗೆ ಬಂದ ಹಸ್ತಪ್ರತಿಯಲ್ಲಿ ಇದು ಇದ್ದದ್ದು ನನ್ನ ದೃಷ್ಟಿಗೆ ಸರಿಯಾಗಿ ಬೀಳಲಿಲ್ಲ. ಆ ಮೂರ್ಖ ಪರ್ಸನಲ್ ಕ್ಲಾರ್ಕು ಯಾವ ಅವೇಳೆಯಲ್ಲಿ ಓದಿದನೊ, ಅವನನ್ನು ಸರಿಯಾಗಿ ಗದರಿಸಬೇಕು," ಎಂದುಕೊಂಡು ಕುರ್ಚಿಯಲ್ಲಿ ಆಚೆ ಈಚೆ ಅಶಾಂತಿಯಿಂದ ತಿರುಗಿದರು. ಅನಂತರ ಹಳ್ಳಿಯವರ ಅರಿಕೆಗಳು ಬಂದಾಗ "ಅದೆಲ್ಲಾ ಗೊತ್ತೇ ಇದೆ. ಯೋಚಿಸುತ್ತೇವೆ. ಕೊನೆಯ ಮಾತುಗಳನ್ನು ಓದಿಬಿಡಿ" ಎಂದರು. ಓದುತ್ತಿದ್ದವರು "ಭಗವಂತ ತಮಗೂ ತಮ್ಮ ಕುಟುಂಬಕ್ಕೂ ಆರೋಗ್ಯವನ್ನೂ ಐಶ್ವರ್ಯವನ್ನೂ ಕೊಟ್ಟು ಜನ್ಮ ಜನ್ಮಾಂತರಗಳಲ್ಲಿಯೂ ನಮ್ಮ ಮೇಲೆ ತಾವೇ ಅಧಿಕಾರಿಗಳಾಗುವಂತೆ ಕರುಣಿಸಲಿ" ಎಂದು ಮುಗಿಸಿದರು. ಮಂತ್ರಿಗಳು ಅತ್ಯಂತ ಹೆಮ್ಮೆಯಿಂದಲೂ ಪ್ರಸನ್ನತೆಯಿಂದಲೂ ಮುಖವನ್ನು ನಾಲ್ಕು ಕಡೆಗೂ ತಿರುಗಿಸಿ ಉಬ್ಬಿ ನೋಡಿದರು. ನೆರೆದಿದ್ದವರೆಲ್ಲಾ ಚಪ್ಪಾಳೆ ಹೊಡೆದರು.

ಶ್ಯಾನುಭೋಗರು ಜಿಲ್ಲಾಧಿಕಾರಿಗಳ ಕಡೆ ನೋಡಿದರು. ಜಿಲ್ಲಾಧಿ

ಕಾರಿಗಳ ಮುಖದಲ್ಲಿ ಆಗಲೇ ಉದ್ಧತಭಾವ ಮೂಡುತ್ತಿದ್ದಿತು. ಅವ ರಿಗೆ, ಆಗಲೇ ಶ್ಯಾನುಭೋಗನ ತಲೆಹರಟೆಯ ಜ್ಞಾಪಕ ಪ್ರಾರಂಭ ವಾಗಿತ್ತು. ಅವರು ಮಂತ್ರಿಗಳನ್ನು, ಮೊದಲೇ ವ್ಯಾಗ್ದಾನ ಮಾಡಿದ್ದಂತೆ, ನದಿಯ ಬಳಿಗೆ ಕರೆದುಕೊಂಡು ಹೋಗುವ ಮಾತನ್ನೇ ಎತ್ತದೆ ಮಂತ್ರಿಗಳ ಕಣ್ಣಿಗೆ ಕಾಣುವಂತೆ ಪದೇ ಪದೇ ಗಡಿಯಾರವನ್ನು ನೊಡುತ್ತಿದ್ದರು. ಶ್ಯಾನುಭೋಗರು ಒಂದು ಸಲ ಜಿಲ್ಲಾಧಿಕಾರಿಗಳ ಸಮೀಪಕ್ಕೆ ಬಂದು ತುಟಿಯಮೇಲೆ ಬೆರಳುಗಳನಿಟ್ಟುಕೊಂಡು " ದೇವಸ್ಥಾನದ ಕಡೆಗೆ ದಯ ಮಾಡಿ" ಎಂದರು. ಸಾಹೇಬರು ನುಂಗುವಂತೆ ಶ್ಯಾನುಭೋಗನನ್ನು ನೋಡಿದರು. ಆ ನೋಟದಲ್ಲಿದ್ದ ತಿರಸ್ಕಾರವನ್ನು ಕಂಡು ಶ್ಯಾನುಭೋಗ ರಿಗೆ ಭಯವೂ, ಇಂತಹವರ ಅಧಿಕಾರದಲ್ಲಿ ಇಷ್ಟು ಪ್ರಜೆಗಳ ಯೋಗ ಕ್ಷೇಮವಿರುವುದಲ್ಲಾ ಎಂಬ ಕನಿಕರವೂ ಉಂಟಾಯಿತು. ಮಂತ್ರಿಗಳು ನಿಧಾನವಾಗಿ ನಡೆಯುತ್ತಾ ಊರಿನ ಸುತ್ತ ಹೊರಟರು. ಅವರು ಎರಡು ಬೀದಿಗಳನ್ನು ಸುತ್ತಿಕೊಂಡು ಮೂರನೆಯ ಬೀದಿಗೆ ತಿರುಗುವಾಗ ದೂರ ದಲ್ಲಿ ನದಿಯ ತೀರದ ದೇವಸ್ಥಾನದಲ್ಲಿ ಓಲಗದ ಸದ್ದು ಆಯಿತು. ಮುಂದುಗಡೆ ಹೋಗುತ್ತಿದ್ದ ಶ್ಯಾನುಭೋಗರು ಸ್ವಾಭಾವಿಕವಾಗಿ ದೇವ ಸ್ಥಾನದ ಕಡೆಗೆ ಹೊರಟರು. ಮಂತ್ರಿಗಳೂ ಜಿಲ್ಲಾಧಿಕಾರಿಗಳೂ ಎಲ್ಲರೂ ದೇವಸ್ಥಾನದ ಕಡೆಗೆ ಹೊರಟರು.

ಕರಿಕಲ್ಲು ಬಂಡೆಯಿಂದ, ತೋಪಿನ ಮಧ್ಯದ ದಡವನ್ನು ನದಿಯು ಕೊರೆದಿದ್ದಿತೆಂದು ಹಿಂದೆ ಹೇಳಿದ್ದೆವಷ್ಟೆ. ಸರ್ಕಾರದಿಂದ ಅದರ ಕಟ್ಟಡಕ್ಕೆ ಯಾವ ವಿಧವಾದ ಸಹಾಯವೂ ಬರುವುದಿಲ್ಲವೆಂಬುದನ್ನು ತಿಳಿದು ಮಲ್ಲಿಗೆ ಹಳ್ಳಿ ಗ್ರಾಮಸ್ಥರು ತಾವೇ ಕಲ್ಲುಕಟ್ಟೆ ಕಟ್ಟಲು ಪ್ರಾರಂಭಿಸಿದ್ದರು. ಅವರು ಪ್ರತಿದಿನವೂ ಬೆಳಿಗ್ಗೆ ಮನೆಗೆ ಒಂದು ಆಳಿನಂತೆ ನದಿಯ ತೀರಕ್ಕೆ ಬರುವುದು; ಕರಿಕಲ್ಲುಗಳನ್ನು ಎಬ್ಬಿ ದಡದಲ್ಲಿ ಕಟ್ಟಡವಾಗಿ ಕಟ್ಟುವುದು; ಒಬ್ಬರು ಎತ್ತಲು ಸಾಧ್ಯವಿಲ್ಲದ ಕಲ್ಲುಗಳನ್ನು ಎರಡು ಮೂರು ಜನರು ಎತ್ತುವುದು; ಹೀಗೆ ಸುಮಾರು ಎರಡು ಗಂಟೆ ಕೆಲಸಮಾಡಿ ಸರದಿಯ ಪ್ರಕಾರ ಒಬ್ಬೊಬ್ಬರ ಮನೆಯಲ್ಲಿ ನಿತ್ಯಾ ಕಾಫಿ ತಿಂಡಿ ಹೊಡೆಯುವುದು; ಈ ರೀತಿ ಮಾಡುತ್ತಿದ್ದರು. ಮನೆಗೆ ಒಂದು ಆಳು ಬರಬೇಕೆಂದು ಗೊತ್ತು ಮಾಡಿದ್ದರೂ, ಒಬ್ಬಂಟಿಗರಾಗಿದ್ದವರು, ಬಲಹೀನರಾಗಿದ್ದವರು ಖಂಡಿತ

ಬರುವುದೇ ಇಲ್ಲವೆಂದು ಮೊಂಡುಬಿದ್ದವರು, "ಈ ದೇವರುಗಳಿಂದಲೇ ಲೋಕ ಕೆಟ್ಟಿರುವುದು. ಇವರೂ ಈ ದೇವಸ್ಥಾನವೂ ಹೋದರೆ ಯಾರಿಗೂ ನಷ್ಟವಿಲ್ಲ. ಇದರಿಂದ ಜಗತ್ತಿಗೆ ಕ್ಷೇಮವಾದೀತು" ಎಂದವರೂ, "ದೇವರ ಗುಡಿ ದೇವರದು. ಅದರ ಯೋಗಕ್ಷೇಮ ಅವನದು. ಅದನ್ನು ಕಟ್ಟಿಕೊಂಡು ನಮಗೇನು" ಎಂದವರೂ ಹೋಗುತ್ತಾ, ಸುಮಾರು ೪೦ ಜನ ನಿತ್ಯಾ ಕೆಲಸಕ್ಕೆ ಬರಲು ಪ್ರಾರಂಭಿಸಿದರು. ಪ್ರಾರಂಭದಲ್ಲಿ, ತಮ್ಮ ಸ್ವಂತ ಪ್ರಚಾರವನ್ನು ಮಾಡಿಕೊಳ್ಳುತ್ತಿದ್ದ ಕೆಲವರೂ, ತಮ್ಮ ಪ್ರಸಿದ್ಧಿಗಾಗಿ ಹಂಬಲಿಸುತ್ತಿದ್ದ ಕೆಲವರೂ, ಮುಖಂಡರೆಂದುಕೊಂಡು ಚುನಾವಣೆಗೆ ನಿಲ್ಲುತಿದ್ದವರೂ, ಇಲ್ಲೂ ಬ್ರಾಹ್ಮಣ ಬ್ರಾಹ್ಮಣೇತರ ಪ್ರಶ್ನೆಯನ್ನು ತಂದರು. ಆದರೆ ಏಳು ತಲೆಗಳಿಂದಲೂ ನರಸಿಂಹಸ್ವಾಮಿಯ ಭಕ್ತನಾಗಿದ್ದ ರಾಮೇಗೌಡ ಅವರನ್ನು ಕುರಿತು "ಏ ಇದು ನಮ್ಮ ಅಪ್ಪ ಅಜ್ಜ ಮುತ್ತಜ್ಜನ ದೇವರಲ್ಲವೆ? ಈ ಹೊಳೆ ಈ ದೇವರು ಈ ತೋಪು ಇವು ನಮ್ಮದಲ್ಲ, ಬ್ರಾಹ್ಮರದು ಅಂತ ಹೇಳಿದವರು ಯಾರು? ಏ ತಿಮ್ಮಪ್ಪ, ಪ್ರಜಾಪತಿ ಸಬೇಲಿ ಹೋಗಿ ಕೂತ್ಕೊಳೋಕೆ ನಿನಗೆ ಓಟು ಬೇಕು ಅಂದೆ. ಕೊಟ್ಟೊ. ದೇವರತಾಕೆ ಹೋಗೋಕು ನಿನಗೆ ನಮ್ಮ ಓಟು ಬೇಕೆ? ಈ ನೂತ್ನ ಸಾಕು, ದೇವಸ್ಥಾನ ಹೋದ್ರೆ ನಮ್ಮ ಆಸ್ತಿಹೋಯ್ತು. ಮುಂದಲ ಸಲ ಓಟು ತಕೊಳೊವಾಗ, ನಮ್ಮ ದೇವ್ರು ಅವರ ದೇವ್ರು ನಮ್ಮ ತೋಪು ಅವರ ತೋಪು' ಈ ಮಾತು ಆಡೀವಂತೆ. ಈಗ ನಡಿ ಕೆಲಸಕ್ಕೆ" ಎಂದನು. ಅಂತು ಎಲ್ಲರೂ ಏಳುವ ಹೊತ್ತಿಗೆ ನದಿಯ ತೀರದಲ್ಲಿ ಸೇರಿಬಿಡುತ್ತಿದ್ದರು. ಕಲ್ಲುಗಳನ್ನು ಒಡೆಯುವುದರಲ್ಲಿ ಸುಬ್ಬಾಭಟ್ಟ, ಬೋರೆಗೌಡ, ನರಸಾಬೋಯಿ, ಗಂಗಾಜೆಟ್ಟಿ ಇವರು ನಿಪುಣರಾದರು. ಅವುಗಳನ್ನು, ಒಡ್ಡರಂತೆ ಸರಪಣಿಗಳಲ್ಲಿ ಕಟ್ಟಿ, ಎಂತಹ ದೊಡ್ಡ ಕಲ್ಲನ್ನಾದರೂ ಹೊರುವುದರಲ್ಲಿ ಹಳ್ಳಿ ಅಯ್ನೋರು, ನರಸಿಂಹಭಟ್ಟರು, ಪುಟ್ಟೀಗೌಡ, ಕರಿಯ ಇವರು ಹೆಸರಾದವರಾದರು. ಉಳಿದವರು ಒಬ್ಬರ ತಲೆಯ ಮೇಲೆ ಒಬ್ಬರು ಆಳುಹೊರೆಯ ಕಲ್ಲುಗಳನ್ನು ಹೊರಿಸುತ್ತಾ ತಾವೂ ಹೊತ್ತು ತಂದು ಹಾಕುತ್ತಿದ್ದರು. ಹೊಳೆಯ ಮರಳು ಅವರ ಹಾಸ್ಯದಿಂದಲೂ ಉತ್ಸಾಹದಿಂದಲೂ ಪ್ರತಿ ಧ್ವನಿತವಾಯಿತು. ಅವರು ಕೆಲಸದಲ್ಲಿ ಹುಟ್ಟು ಒಡ್ಡರಿಗಿಂತ ನಿಪುಣರಾದರು. ಒಂದು ತಿಂಗಳು ಹೀಗೆ

ನಡೆದ ಕೆಲಸ ಕೆಲಸಗಾರರ ಆಸೆ ಉತ್ಸಾಹಗಳನ್ನು ಹೆಚ್ಚಿಸಿದುವು. ಕಟ್ಟೆಯ ತಳಹದಿಯು ನಿಧಾನವಾಗಿ ಒಂದು ಆಕಾರಕ್ಕೆ ಬಂದಿತು. ಅನಂತರ ಮನೆಯಲ್ಲಿ ಮಾಡುತ್ತಿದ್ದ ಕಾಫಿ ತಿಂಡಿ ನಿಲ್ಲಿಸಿ ದೇವಸ್ಥಾನದಲ್ಲಿ ಹುಳಿಯನ್ನ ಮೊಸರನ್ನ ಮಾಡಿಸಿ ಕೆಲಸಗಾರರು, ಕೆಲಸದನಂತರ ನದಿಯಲ್ಲಿ ಸ್ನಾನಮಾಡಿ ಹುಳಿಯನ್ನ ಮೊಸರನ್ನ ಹೊಡೆದು "ಸುಬ್ಬಾ ಭಟ್ಟನ ಎದುರಿಗೆ ಒಡ್ಡರು ಬರಬೇಕಾದರೆ ಎದೆ ಮುಟ್ಟಿನೋಡಿಕೊಂಡು ಬರಬೇಕು. ನರಸಿಂಹಭಟ್ಟ, ಪುಟ್ಟೇಗೌಡ, ಕರಿಯ ಇವರು ಈ ಪ್ರಾಂತದ 'ಕ್ವಾರಿಗಳನ್ನೆಲ್ಲಾ' ಹಿಡಿಯ ಬಹುದು. ಹಳ್ಳಿ ಅಯ್ಯನೋರ ಗಡ್ಡ ಕಲ್ಲಿನ ಕೆಳಗೆ ಸಿಕ್ಕಿಕೊಂಡು ಒಂದು ಭಾಗ ಕಿತ್ತುಹೋಯಿತು. ಅಯ್ಯ, ನೀನು ಬರಿಯ ಕೈಯಲ್ಲಿ ಮಕ್ಕಳನ್ನು ಮುಟ್ಟಬೇಡ. ನಿನ್ನ ಕೈ ಕುದುರೆಯ ಕರಾರ್‌ನಂತೆ ಇದೆ. ಪಾಪ ಮಕ್ಕಳ ಚರ್ಮಕ್ಕೆ ಹತ್ತರಿ ಕೊಟ್ಟಂತೆ ಆಗುತ್ತೆ," ಎಂಬುದಾಗಿ ಒಬ್ಬರನ್ನು ಒಬ್ಬರು ಹಾಸ್ಯ ಮಾಡಿಕೊಂಡು ಮನೆಗಳಿಗೆ ಬರುತ್ತಿದ್ದರು.

ಈ ಕೆಲಸ ಕೇವಲ ಸ್ವಾಭಾವಿಕವಾಗಿ ಗದ್ದಲವಿಲ್ಲದಂತೆ ನಡೆಯುತ್ತಿದ್ದಿತು. ಮಲ್ಲಿಗೆ ಹಳ್ಳಿಯವರು ಹೇಗೆ ನದಿಯ ಸುತ್ತ ಒಬ್ಬೊಬ್ಬರು ಒಂದೊಂದು ಸಸಿ ನೆಟ್ಟು ಅದಕ್ಕೆ ಬೇಲಿ ಕಟ್ಟಿ ನಿತ್ಯಾ ಬೆಳಿಗ್ಗೆ ಸಾಯಂಕಾಲ ಬಂದು ನೋಡಿಕೊಂಡು ನೀರುಹಾಕಿ ಗದ್ದಲವಿಲ್ಲದಂತೆ ಆಳಿಗೆ ಒಂದು ಮರದಂತೆ ಎಳಿಸಿ ದೊಡ್ಡ ತೋಪನ್ನು ಎಬ್ಬಿಸಿದರೋ ಹಾಗೆಯೇ ಕಟ್ಟೆಯ ಕೆಲಸವೂ ಸ್ವಭಾವಿಕವಾಗಿ ಹುಡುಗಾಟ ಹುಡುಗಾಟವಾಗಿ ಸಾಗಿಹೋಯಿತು. ಅದನ್ನು ಕುರಿತು ಯಾರೂ ಹೆಚ್ಚಾಗಿ ಮಾತನಾಡುತ್ತಿರಲಿಲ್ಲ. ಹೊಳೆಗೆ ಮುಖ ತೊಳೆಯುವುದಕ್ಕೆ ಬಂದಂತೆ ಬಂದು ೨-೩ ಗಂಟೆಗಳನಂತರ ಸ್ನಾನ ಮಾಡಿಕೊಂಡು ಮನೆಗೆ ಹೋಗಿಬಿಡುತ್ತಿದ್ದರು. ಗಂಗಾಜಟ್ಟಿಯ ಹೆಂಡತಿಯೂ ಸುಬ್ಬಾಭಟ್ಟರ ಹೆಂಡತಿಯೂ ತಮ್ಮ ಗಂಡಂದಿರು ಕಲ್ಲುಗಳನ್ನು ಹೊತ್ತುಕೊಂಡು ಹೋಗುತ್ತಿರುವುದನ್ನು ನೋಡಿ ಹಾಸ್ಯ ಮಾಡುತ್ತಿದ್ದರು. ಸುಬ್ಬಾಭಟ್ಟರ ಹೆಂಡತಿ 'ಹಿತ್ತಲ ದಾರಿಯಲ್ಲಿ ಒಂದು ಸಣ್ಣ ಕಲ್ಲು ಎದ್ದುನಿಂತಿದೆ. ಅದನ್ನ ಕಿತ್ತುಹಾಕಿ ಅಂತ ನಿತ್ಯಾ ಹೇಳ್ತೀನೆ. ನನ್ನ ಮಾತೆಲ್ಲೋ ಅವರ ಜ್ಞಾನವೆಲ್ಲೋ.' ಎಷ್ಟೋ ದಿವಸ ಅವರೇ ಎಡವಿದ್ದಾರೆ. ಆದರೆ ಇಲ್ಲಿ ನೋಡಿ. ಹಣೆ

ಬರಹ' ಎನ್ನುತ್ತಿದ್ದರು. ಈ ಕಷ್ಟದ ಎದುರಿಗೆ, ಊರು ಒಟ್ಟಿನ ಕೆಲಸದ ಎದುರಿಗೆ ಜನರ ಸಣ್ಣ ಸಣ್ಣ ವ್ಯಾಜ್ಯಗಳೂ ವ್ಯತ್ಯಾಸಗಳೂ ಮರೆಯಾದವು. ತಮ್ಮ ಗಂಡಂದಿರ, ತಂದೆಯರ ಅಣ್ಣ ತಮ್ಮಂದಿರ ಈ ಸರ್ಕಸ್ಸನ್ನು ನೋಡುವುದಕ್ಕಾಗಿಯೂ, ಅವರು ಅಲ್ಲಿರುವಾಗಲೇ ತಮ್ಮ ಕೆಲಸವೂ ಆಗಿ ಹೋಗಲೆಂದೂ ಹೆಂಗಸರೂ ಪ್ರಾತಃಕಾಲವೇ ನದಿಗೆ ಬಂದುಬಿಡುತ್ತಿದ್ದರು. ಹೊಳೆಯು ಸಂತೆಯಾಗಿ ಅವರ ಧ್ವನಿಗಳಿಂದಲೂ, ಬಳೆಗಳ ಶಬ್ದಗಳಿಂದಲೂ ಬಣ್ಣ ಬಣ್ಣದ ಸೀರೆಗಳಿಂದಲೂ ಅರಸಿನ ಕುಂಕುಮಗಳಿಂದಲೂ ನಗುವಿನಿಂದಲೂ ಆನಂದ ಸಾಗರವಾಗುತ್ತಿದ್ದಿತು.

ಮಂತ್ರಿಗಳೂ ಜಿಲ್ಲಾಧಿಕಾರಿಗಳೂ ಶ್ಯಾನುಭೋಗರೂ ಪುರಜನರೂ ದೇವಸ್ಥಾನದಿಂದ ಮುಂದೆ ೧೦ ಮಾರು ನಡೆದು ನದಿಯು ದಡವನ್ನು ಕೊರೆದುಕೊಂಡು ತೋಪನ್ನು ನುಂಗುತ್ತಿದ್ದ ಕಡೆಗೆ ಬಂದರು. ಶ್ಯಾನುಭೋಗರೂ ಪ್ರಜೆಗಳೂ "ಹೀಗೆ ನದಿ ಕೊರೆಯುತ್ತಿದೆ" ಎಂದು ಹೇಳಿದರು. ಮಂತ್ರಿಗಳು "ಇದೇನು ಸಣ್ಣ ಕಟ್ಟೆಯಂತೆ ಹಾಕಿದ್ದೀರಿ" ಎಂದರು. ಅನಂತರ ವಿಷಯಗಳೆಲ್ಲ ಅವರಿಗೆ ಸ್ಪಷ್ಟವಾಗಿ ತಿಳಿದುವು. ಅವರೂ ನಗುತ್ತಾ ಹಿಂದೆ ಬರುತ್ತಿದ್ದ ಇಂಜನೀಯರ್ ಸಾಹೇಬರನ್ನು ಕುರಿತು "ಇದು ಸುಮಾರು ಎಷ್ಟರ ಕೆಲಸ ನಡೆದಿದೆ" ಎಂದರು. ಇಂಜನೀಯರು ಒಂದುವರೆ ಸಾವಿರ ರೂಪಾಯಿನ ಕೆಲಸ ನಡೆದಿದೆ" ಎಂದರು. ಮಂತ್ರಿಗಳು ಊರಿನವರ ಒಗ್ಗಟನ್ನು ಪ್ರಶಂಸಿಸಿ ಜಿಲ್ಲಾಧಿಕಾರಿಗಳಿಗೆ "ಇದನ್ನು ಇವರ ಕಂಟ್ರಿಬ್ಯೂಷನ್ ಆಗಿ ತೆಗೆದುಕೊಂಡು ಇದರ ಎಸ್ಟಿಮೇಟ್ ಮಾಡಿಸಿ ಕಳುಹಿಸಿ" ಎಂದರು. ಜಿಲ್ಲಾಧಿಕಾರಿಗಳು ಅತಿ ಬಿಸಿ ಕಾಫಿಯನ್ನು ನುಂಗುವಾಗ ಗಂಟಲು ಸುಡುತ್ತಿದ್ದರೆ ಮುಖವನ್ನು ಹೇಗೆ ಮಾಡುತ್ತಾರೋ ಹಾಗೆ ಮಾಡುತ್ತಾ "ಸರಿ" ಎಂದರು. ಆರು ತಿಂಗಳೊಳಗಾಗಿ, ಜಿಲ್ಲಾಧಿಕಾರಿಗಳು ಇನ್ನೂ ಒಂದೆರಡು "ತೋದೆ" ಗಳನ್ನು ಹಾಕಿದಮೇಲೆ ರಿಕಾರ್ಡುಗಳೆಲ್ಲಾ ಪೂರ್ಣವಾಗಿ ಎಂಟು ಸಾವಿರ ರೂಪಾಯಿನ ಕಲ್ಲು ಕಟ್ಟೆ ಕೆಲಸ ನಡೆದು ದೇವಸ್ಥಾನ ಭದ್ರವಾಯಿತು. ಹೊಸ ಇಂಜನೀಯರ್ ಸಾಹೇಬರು ಒಂದು ಸಲ ಗ್ರಾಮಕ್ಕೆ ಬಂದಾಗ ಗ್ರಾಮಸ್ಥರೊಂದಿಗೆ ನೀವು ತಳಹದಿಯ ಕೆಲಸ ಅಷ್ಟು ಭದ್ರವಾಗಿ ಮಾಡದೆ

ಇದ್ದಿದ್ದರೆ ನಿಮಗೆ ಸರ್ಕಾರದವರು ಒಲಿಯುತ್ತಿರಲಿಲ್ಲ. ಒಳ್ಳೆಯ ಒಡ್ಡರನ್ನು ಹೊಂದಿಸಿದ್ದಿರಿ. ನಮಗೆ ಅಂತಹ ಒಳ್ಳೆಯ ಕೆಲಸಗಾರರು ಸಿಕ್ಕುವುದು ಕಷ್ಟ. ಎಲ್ಲಾ ಕಳ್ಳರೆ, ಮುಂಗಡವಾಗಿ ಕೊಟ್ಟ ದುಡ್ಡನ್ನೇ ಹೊಡಕೊಂಡು ಹೋಗ್ತಾರೆ" ಎಂದರು. ಶ್ಯಾನುಭೋಗರು ಸುತ್ತಾ ಇದ್ದ ಸುಬ್ಬಾಭಟ್ಟ, ರಾಮೇಗೌಡ, ಕರಿಯ, ಹಳ್ಳಿಯ ಅಯ್ಯ, ಗಂಗಜೆಟ್ಟಿ, ಇವರ ಕಡೆ ನೋಡುತ್ತಾ ನಮಗೆ ಸಿಕ್ಕಿದ್ದ ಒಡ್ಡರೂ ಕಳ್ಳರೇ, ಎಲ್ಲರೂ ಮುಂಗಡ ಹೊಡೆದುಕೊಂಡೇ ಹೋದರು; ಭಗವಂತನೇ ಅವರನ್ನು ಕಾಪಾಡಬೇಕು" ಎಂದರು.

---

## ೪. ಅಮಲ್ದಾರರಿಗೆ ಚಳಿಸುತ್ತಿರುವ ತೋರಣ

ಈ ಕತೆಯು ಪ್ರಾರಂಭವಾಗುವ ಕಾಲದಲ್ಲಿ, ಕಂದಾಯದ ವಸೂಲಿ ಮುಗಿದನಂತರ ಅಮಲ್ದಾರರು ತಾಲ್ಲೂಕು ಜಮಾಬಂದಿಗೆ ಬರುವುದಾಗಿ ಗೊತ್ತಾಯಿತು. ಕೂಡಲೆ ಶ್ಯಾನುಭೋಗರಲ್ಲಿ ಒಳ್ಳೆಯ ಗುಜು ಗುಜು ಪ್ರಾರಂಭವಾಯಿತು. ಅಮಲ್ದಾರರು ಬಂದರೆ ತೋರಿಸಬೇಕಾಗುವುದೆಂದು ಶೇಕದಾರರು ಹೆಂಡದ ಕಂಟ್ರಾಕ್ಟರನ ಕುದುರೆಯನ್ನು ಮನೆಯ ಬಾಗಿಲಿನಲ್ಲಿ ಕಟ್ಟಿ ಹಾಕಿಕೊಂಡರು. ಶ್ಯಾನುಭೋಗರುಗಳು ಕೊಳೆ ರುಮಾಲುಗಳನ್ನೂ ಗುಂಡಿಗಳಿಲ್ಲದ ದ್ರೋಣ ಕವಚಗಳಾಗಿದ್ದ ತಮ್ಮ ಅಂಗಿಗಳನ್ನೂ ಹೊಂಚಿ ಇಟ್ಟುಕೊಂಡರು. ಮಲ್ಲಿಗೆಹಳ್ಳಿಯ ಶ್ಯಾನುಭೋಗಗಾರಿಗೂ ಅಧಿಕಾರಿಗಳ ಎದುರಿಗೆ ಚೆನ್ನಾಗಿ ಒಗೆದ ಒಳ್ಳೆಯ ಬಟ್ಟೆಗಳನ್ನು ಹಾಕಿಕೊಳ್ಳಲು ಇಷ್ಟವಿರಲಿಲ್ಲ. ಯಾಕೆಂದರೆ ಹಿಂದೆ ಬಂದಿದ್ದ ಒಬ್ಬ ಅಮಲ್ದಾರ ಆಕಾಶರಾಯರು ಒಳ್ಳೆ ಬಟ್ಟೆಗಳನ್ನು ಹಾಕಿಕೊಂಡು ಜರ್ಬಾಗಿ ಮದುವೆಯ ವರನಂತೆ ನಿಂತಿದ್ದ ಮುತ್ತೂರಾಯರನ್ನೂ, ಶರಾಯಿ ಸ್ವಲ್ಪ ಅಗಸನ ಇಸ್ತ್ರಿ ತೂತಾಗಿ, ಕೋಟಿನ ತೋಳಿನ ತುದಿ ಹರಿದಿದ್ದ ಹಳ್ಳಿಗಳ ಮೇಲಿನ ತಿರುಗಾಟದಿಂದ ಪೂರ್ಣವಾಗಿ ಕೊಳೆಯಾಗಿ ಕೊಳೆಯ ಒಂದು ಎರಡನೆಯ ಪಟ್ಟೆಯನ್ನೇ ಹೊಂದಿದ್ದ ತಮ್ಮ ಉಡುಪು

ಗಳನ್ನು ಹೋಲಿಸಿಕೊಂಡು, ಮುತ್ತೂರಾಯರನ್ನು ಕೋಪದಿಂದ "ಏನಯ್ಯ ನೀನೇನು ಶ್ಯಾನುಭೋಗನೋ ಸಬ್ ಡಿವಿಜನ್ ಆಫೀಸರೋ?. ಒಳ್ಳೆಯ ಶಿಸ್ತುಗಾರ ಪುಟ್ಟಸ್ವಾಮಿ ಯಾದೆಯೆಲ್ಲ ಎಂದು ಗದರಿಸಿದ್ದರು." ಶ್ಯಾನುಭೋಗರು ಒಳ್ಳೆಯ ಬಟ್ಟೆಗಳನ್ನು ಹಾಕಿಕೊಳ್ಳಬಾರದು, ಗಡ್ಡ ಮೀಸೆಗಳನ್ನು ಬೆಳೆಸಿಯೇ ಇರಬೇಕು' ಎಂಬುದು ಆಕಾಶರಾಯರ ಅಭಿಪ್ರಾಯವಾಗಿತ್ತು. ಪಟೇಲರು ಶಾಲುಗಳನ್ನು ಹೊದೆದುಕೊಂಡು ಬಂದರೂ ಅವರು ಅದನ್ನು ಸಹಿಸುತ್ತಿರಲಿಲ್ಲ. ಅಲ್ಲಿಂದ ಮುಂದೆ ಶ್ಯಾನುಭೋಗ ಪಟೇಲರು ಅಮಲ್ದಾರರ ಎದುರಿಗೆ ಒಳ್ಳೆಯ ಬಟ್ಟೆಗಳನ್ನು ಹಾಕಿಕೊಳ್ಳುತ್ತಿರಲಿಲ್ಲ. ಗೌರವಕ್ಕಾಗಿ ಕೋಟು ಹಾಕಿಕೊಂಡರೂ ಅದರ ಜೇಬಿನ ತುಂಬ ಒಂದು ಹೊರೆ ಕಾಗದಗಳನ್ನಿಟ್ಟುಕೊಂಡು ಮೊದಲನೆಯ ಕಾಜಾಕ್ಕೆ ಎರಡನೆಯ ಗುಂಡಿಯನ್ನು ಎಳೆದು ಹಾಕಿಕೊಂಡು ಹೋಗುತ್ತಿದ್ದರು.

ಅಮಲ್ದಾರರು ಜಮಾಬಂದಿಗೆ ಬರುತ್ತೇವೆಂದಕೂಡಲೇ ಶ್ಯಾನುಭೋಗರಲ್ಲಿ ಗುಜುಗುಜು ಪ್ರಾರಂಭವಾಯಿತು. ಅಮಲ್ದಾರರನ್ನು ಇಳಿಸುವುದು ಎಲ್ಲಿ ? ಎಷ್ಟು ದಿವಸ ಕ್ಯಾಂಪು ನಿಲ್ಲಿಸಬೇಕು, ಯಾವ ಯಾವ ಹೊತ್ತು ಯಾವ ಯಾವ ತಿಂಡಿ ಮಾಡಬೇಕು. ಊಟದ ವೈಖರಿಗಳೇನು? ಊಟ ತಿಂಡಿ ಕಾಫಿಗೆ ಹಾಕಬೇಕಾದ ಚಂದಾ ಎಷ್ಟು ? ಗುಮಾಸ್ತರ ಮಾಮೂಲಿಗೆ ಹಾಕಬೇಕಾದ ಚಂದಾ ಎಷ್ಟು ? ಹೊಸದಾಗಿ ಬದಲಿ ಮಾಡುತ್ತಿರುವ ಶ್ಯಾನುಭೋಗ ಪಟೇಲರುಗಳಿಂದ ಎಷ್ಟು ಹೆಚ್ಚು ಚಂದಾ ವಸೂಲ್ಮಾಡಬೇಕು ? ಇವುಗಳನ್ನೆಲ್ಲಾ ಅವರು ಚರ್ಚಿಸಿದರು. ಈ ಜಮಾಬಂದಿಯಲ್ಲಿ ಹಿಂದಲ ಕಂದಾಯದ ಬಾಕಿ ಉಳಿದಿರುವುದೆಷ್ಟು ? ಮುಂದಲ ವರುಷದ ಒಟ್ಟು ಬರಬೇಕಾದ ಕಂದಾಯ ಈ ಗ್ರಾಮಕ್ಕೆ ಎಷ್ಟು ? ಯಾರಾದರೂ ಜಮೀನು ರಾಜೀನಾಮೆ ಕೊಟ್ಟಿದ್ದಾರೆಯೇ ? ಇನ್ನಾವುದಾದರೂ ಬೀಳು ಪಾಳುಬಿದ್ದಿದ್ದ ಜಮೀನುಗಳು ಸಾಗುವಳಿಗೆ ಬಂದಿವೆಯೆ ? ಜನರು ನೀರನ್ನು ಸರ್ಕಾರದ ಅಪ್ಪಣೆ ಇಲ್ಲದೆ ಒದಗಿಸಿಕೊಂಡು ಸಾಗುವಳಿ ಮಾಡಿದ್ದಾರೆಯೆ ? ರೈತರು ಸರ್ಕಾರಿ ಜಮೀನು ಒತ್ತುವರಿಮಾಡಿದ್ದಾರೆ ಎಂಬುದಾಗಿ ತಕರಾರು ತಕ್ತೆ ಶ್ಯಾನುಭೋಗನಿಂದ ಬಂದಿದೆಯೆ ? ಒಟ್ಟಿನಲ್ಲಿ ಅವರಿಗೆ ಏನಾದರೂ ಜುಲ್ಮಾನೆ ವಿಧಿಸಬೇಕೆ?

ಇದರಿಂದ ಗ್ರಾಮದ ಕಂಧಾಯ ಹೆಚ್ಚುವುದೆಷ್ಟು ಅಥವ ಹಿಂದೆ ವಿಧಿಸಿದ್ದ ಯಾವುದಾದರೂ ಜುಲ್ಮಾನೆ ವಜಮಾಡಿದರೆ ಗ್ರಾಮದ ಕಂದಾಯ ಕಡಿಮೆಯಾಗುವುದೆಷ್ಟು? ಹುಲ್ಲುಬನ್ನಿ ಅಮರಾಯಿ ದೇವಸ್ಥಾನ ಮುಂತಾದ ಸಾರ್ವಜನಿಕ ಪ್ರದೇಶಗಳಲ್ಲಿ ಏನಾದರೂ ಹುಣಸೆ ಹಿಪ್ಪೆ ಮುಂತಾದ ಮರಗಳಿದ್ದರೆ ಅವುಗಳ ಫಸಲು ಹರಾಜು, ನಾಲೆ ಏರಿ ಮೇವು ಪಾಚುವಾರಿ (ಮೀನು) ಹರಾಜು ಇವೆಲ್ಲಾ ಜಮಾಬಂದಿಯಲ್ಲಿ ನಿರ್ಣಯವಾಗುತ್ತವೆ.

ಹಿಂದೆ, ಜಮಾಬಂದಿ ಎಂಬುದು ಅಮಲ್ದಾರರ ದರ್ಬಾರಾಗಿ ಜಬರ್ಾಗಿ ನಡೆಯುತ್ತಿದ್ದಿತು. ಆಗಿನ ಅಮಲ್ದಾರರುಗಳಿಗೂ ತಮ್ಮ ನಿಜವಾದ ಅಧಿಕಾರಗಳು ಯಾವುವು? ಬರಿಯ ಜರ್ಬಿನ ಅಧಿಕಾರಗಳು ಯಾವುವು ಎಂಬುವು ತಿಳಿದಿರಲಿಲ್ಲ. ಆಗ ಅರ್ಜಿದಾರರ ಕೂಟವೂ ಹೆಚ್ಚಾಗಿತ್ತು. ಯಾವ ಯಾವ ಅರ್ಜಿ ಬಂದರೂ ಅವುಗಳನ್ನೆಲ್ಲಾ ಅವರು ಸ್ವೀಕರಿಸಿ, ದಬರ್ಾರಿನಲ್ಲಿ ಗುಮಾಸ್ತೆಯಿಂದ ಓದಿಸಿ ಅರ್ಜಿದಾರರನ್ನು ಕರೆಸಿ "ಆಗಲಿ ಯೋಚಿಸುತ್ತೇವೆ" ಎಂದು ಹೇಳುತ್ತಿದ್ದರು. ಒರ ಬರುತ್ತಾ ಯೋಚಿಸುವುದೊಂದೇ ಅವರ ಕೆಲಸವೆಂಬುದು ರೈತರಿಗೆ ತಿಳಿದ ಮೇಲೆ ರೈತರು ಬಂದು ಅರ್ಜಿಗಳನ್ನು ಕೊಡುವುದು ಕಡಿಮೆಯಾಯಿತು. ಅದರ ಜತೆಯಲ್ಲಿ ಅಮಲ್ದಾರರ ದಬರ್ಾರಿನ ಜರಬೂ ಕಡಿಮೆಯಾಗಿ ಹೋಯಿತು.

ಅಮಲ್ದಾರರ ಜಮಾಬಂದಿ ಕ್ಯಾಂಪು ಎಂಬ ಸುದ್ದಿ ಬಂದ ಕೂಡಲೇ ಶ್ಯಾನುಭೋಗರು "ಇನ್ನೂ ನೋಡೋಣ, ಈಗ ಪುರುಸತ್ತಿಲ್ಲ. ಲೆಕ್ಕಗಳು ಇನ್ನೂ ಆಗಿಲ್ಲ. ಇನ್ನೂ ಲ ದಿನದ ಆಚೆ ಮಾತಲ್ಲವೆ? ಅಷ್ಟು ಹೊತ್ತಿಗೆ ಏನೇನಾಗುತ್ತೊ? ಗುಮಾಸ್ತರಿಗೆ ಹೇಳಿ ತಾರೀಖನ್ನು ಮುಂದೆ ಹಾಕಿಸೋಣ" ಎಂದುಕೊಳ್ಳುತ್ತಿದ್ದರು. ಮಲ್ಲಿಗೆಹಳ್ಳಿಯ ಶ್ಯಾನುಭೋಗ ಮಾತ್ರ "ಇದೊಂದು ಪಿಶಾಚಿ ಮುಗಿದೇ ಹೋಗಲಿ. ಲೆಕ್ಕವಾಗಿಲ್ಲದಿದ್ದರೆ ಚಿಂತೆಯಿಲ್ಲ. ತಾಲ್ಲೂಕು ಕಛೇರಿಯ ಗುಮಾಸ್ತರ ಗ್ಯಾಂಗೆ ಬರುತ್ತೆಲ್ಲ. ಅವರೇ ಲೆಕ್ಕಮಾಡುತ್ತಾರೆ. ಲೆಕ್ಕದ್ದೇನ್ರಯ್ಯ ಮಾತು. ನೀವೇನು ಇವತ್ತಿನ ಶ್ಯಾನುಭೋಗರೆ? ನಿಮ್ಮ ಮಾಮೂಲು ಒದಗಿಸಿಕೊಳ್ಳಿ. ನಾನು ಲೆಕ್ಕ ಆಯಿತು ಎನ್ನಿಸುತ್ತೇನೆ" ಎಂದರು. ಅಮಲ್ದಾರರ ಗುಮಾಸ್ತರು ಮೊದಲ

ದಿನ ಸಾಯಂಕಾಲ ಬರುವವರೆಗೆ ಶ್ಯಾನುಭೋಗರಿಗೆ ಅವರು ಖಂಡಿತ ಬರುವರೆಂಬುವ ವಿಷಯದಲ್ಲಿ ನಂಬಿಕೆ ಇರಲಿಲ್ಲ. ನಾಳೆ ಅಮಲ್ದಾರರು ಬರಬೇಕು ಎನ್ನುವಾಗ ಇವತ್ತಿನ ಸಾಯಂಕಾಲ ಅಮಲ್ದಾರರ ಗುಮಾಸ್ತರೆಲ್ಲಾ ಒಂದೊಂದು ಪೆಟ್ಟಿಗೆ ಕಾಗದ, ಮಲ್ಲಿಗೆಹಳ್ಳಿ ನದಿಯಲ್ಲಿ ಒಗೆದುಕೊಂಡು ಹೋಗೋಣವೆಂದು ಕೊಳೆಯಾದ ಬಟ್ಟೆ ಗಂಟುಗಳು ಇವುಗಳನ್ನೆಲ್ಲಾ ತೆಗೆದುಕೊಂಡು ಮಲ್ಲಿಗೆಹಳ್ಳಿಯಲ್ಲಿ ಇಳಿದರು. ತಾಲ್ಲೂಕು ಜಮಾಬಂದಿ ಆಗ ಶಾಸ್ತ್ರೋಕ್ತವಾಗಿ ಪ್ರಾರಂಭವಾಯಿತು.

ಹಳ್ಳಿ ಅಯ್ಯನವರ ಮನೆ ಜಗಲಿಯೇ ಜಮಾಬಂದಿ ಲೆಕ್ಕದ ಚಾವಡಿ. ಆ ಚಾವಡಿ ಒಳ್ಳೆಯ ಅಗಲವಾಗಿದೆ. ಹಳ್ಳಿ ಅಯ್ಯನೋರ ಮನೆ ಹೊಸದಾಗಿ ಕಟ್ಟಿದುದು. ಅದರ ಗೋಡೆಗಳು ಒಂದೊಂದು ಮಾರು ಅಗಲವಾಗಿವೆ. ಕೂಲಿಗಳು ಗೋಡೆ ಹಾಕಿದರೆ ಸರಿಯಾಗಿ ಹಾಕದೆ, ಮಣ್ಣಿನ ಉಂಡೆಯನ್ನು ಸರಿಯಾಗಿ ಬಿಚ್ಚಿ ಅದಕ್ಕೆ ನೀರು ಕೂಡಿಸದೆ ಕೆಲಸ ಸಾಗಿಸುತ್ತಾರೆಂದು ಹಳ್ಳಿಯ ಅಯ್ನೋರೆ ಮನೆಯ ಗೋಡೆಗಳನ್ನೆಲ್ಲಾ ಹಾಕಿದ್ದರು. ಹೊಲೆಯರು ಮಣ್ಣನ್ನು ತುಳಿದು ಉಂಡೆ ಕಲಸಿಕೊಟ್ಟು ಬ್ರಾಹ್ಮಣರು ಅದನ್ನು ತೆಗೆದುಕೊಂಡು ಗೋಡೆಹಾಕಿದುದು ನಮ್ಮ ಪ್ರಾಂತ್ಯದಲ್ಲಿ ಅದೇ ಮೊದಲು. ಅದರಲ್ಲಿಯೂ ಕೇವಲ ವೈದಿಕರಾಗಿ ಹಳ್ಳಿಗಾಡಿನಲ್ಲಿರುವ ಜನರು, ಒಂದು ಕಡೆಯಿಂದ ಹೊಲೆಯ ಮಣ್ಣಿನ ಉಂಡೆ ಎಸೆಯುವುದು ಮತ್ತೊಂದು ಕಡೆಯಿಂದ ಬ್ರಾಹ್ಮಣ ಅದನ್ನು ಆತುಕೊಳ್ಳುವುದು ಎಂಬುದನ್ನು ಊಹಿಸುವುದಕ್ಕೂ ಶಕ್ತರಾಗಿರಲಿಲ್ಲ. ಅಯ್ನೋರು ಹೀಗೆ ಗೋಡೆ ಹಾಕಲು ಪ್ರಾರಂಭಿಸಿದಾಗ ಕೆಲವರಂತೂ ಬಹಳ ಮೂಗು ಮುರಿದರು. ಆದರೆ ನಾಲ್ಕಾರು ದಿನಗಳಲ್ಲಿ ಅದೇ ಸರಿಯಾಯಿತು. ಹಳ್ಳಿ ಅಯ್ಯನವರು ಮನೆ ಕಟ್ಟಲು ತೆಗೆದಿದ್ದ ತಳಹದಿ ಒಂದು ಭಾವಿಯಂತೆ ತೋರುತ್ತಿದ್ದಿತು. ಮಲ್ಲಿಗೆಹಳ್ಳಿಯ ಹಳೆಯ ಕೋಟೆಯನ್ನು ಕಡಿದು ಅವರು ರಾಶಿರಾಶಿಯಾಗಿ ಮಣ್ಣನ್ನು ಸಾಗಿಸತೊಡಗಿದರು. ವಾಸ್ತವವಾಗಿಯೂ ಅವರು ಹಾಕುತ್ತಿದ್ದ ಗೋಡೆಗಳು ಅತಿ ದಪ್ಪವಾಗಿದ್ದುವು. ಹಾಸ್ಯಗಾರರು ಕೋಟೆ ಮಣ್ಣೆಲ್ಲಾ ಇವರ ಮನೆಗೇ ಆಯಿತು. ಯಾವ ಇಂಪೀರಿಯಲ್ ಬ್ಯಾಂಕಿಗೂ ಇಂತಹ ಗೋಡೆ ಇಲ್ಲ. ಮುಂದೆ ಯಾವಾಗಲಾದರೂ ಊರಿಗೆ ಮತ್ತೆ ಕೋಟೆ

ಕಟ್ಟಬೇಕಾದರೆ ಇವರ ಮನೆ ಉರುಳಿಸಿದರೆ ಸಾಕು. ಬೇಕಾದಷ್ಟು ಮಣ್ಣು ಸಿಕ್ಕುತ್ತದೆ ಎನ್ನುತ್ತಿದ್ದರು. ಅಮಲ್ದಾರರ ಗುಮಾಸ್ತರೆಲ್ಲ ಈ ಜಗಲಿಗೆ ಬಂದರು. ಕೂಡಲೇ ಲೆಕ್ಕದ ಬರಹಕ್ಕಾಗಿ ಅವರ ಮಧ್ಯ ದಲ್ಲಿ ಒಂದು ಪೆಟ್ರೋಮ್ಯಾಕ್ಸ್ ದೀಪವನ್ನು ಇಟ್ಟು ಎಲ್ಲಾ ಶ್ಯಾನು ಭೋಗರಿಗೂ ಹೇಳಿ ಕಳುಹಿಸಿದುದಾಯಿತು. ಅವರು ತಮ್ಮ ಮನೆಗ ಳಲ್ಲಿ ದಿಕ್ಕಾಪಾಲಾಗಿ ಎಂಜಲು ಹಾಳೆಗಳಂತೆ ಅಲ್ಲಲ್ಲಿ ಬಿದ್ದಿದ್ದ ಶ್ಯಾನು ಭೋಗಿ ಕಾಗದ ಪತ್ರಗಳನ್ನೆಲ್ಲಾ ಜೋಡಿಸಿ ಚೌಕದಲ್ಲಿ ತುಂಬಿಕೊಂಡು ಚಾವಡಿಗೆ ಬಂದರು. ಒಬ್ಬ ಶ್ಯಾನುಭೋಗನ ಲೆಕ್ಕವೂ ಮುಗಿದಿರ ಲಿಲ್ಲ. ಯಾವಾಗಲೂ ಆಗುತ್ತಿದ್ದುದೇ ಹೀಗೆ. ಗುಮಾಸ್ತರ ಮಾಮೂಲು ಸರಿಯಾಗಿ ನಡೆದರೆ ಲೆಕ್ಕಗಳೆಲ್ಲಾ ಸರಿಯಾಗುತ್ತಿದ್ದುವು. ಶ್ಯಾನು ಭೋಗರು ತಮ್ಮ ತಮ್ಮ ದಫ್ತರಗಳನ್ನು ಮಧ್ಯದಲ್ಲಿ ಎಸೆದು ಹರಟೆ ಹೊಡಿಯುತ್ತಾ ಕುಳಿತಿರುತ್ತಿದ್ದರು. ರಾತ್ರಿಯೆಲ್ಲಾ ಗುಮಾಸ್ತರು ಲೆಕ್ಕ ಗಳನ್ನು ಬರೆದರು. ರೆಡ್‌ಇಂಕ್ ಶಾಮಯ್ಯಂಗಾರ್ರು (ಇವರು ಯಾವ ಕಾಗದವನ್ನೂ ಲೆಕ್ಕವನ್ನೂ ಕೆಂಪು ಶಾಯಿಯಲ್ಲಿ ಬರೆಯುತ್ತಿದ್ದುದ ರಿಂದ ಇವರಿಗೆ ಆ ಹೆಸರೇ ಖಾಯಂ ಆಯಿತು) ಮಧ್ಯೆ ಮಧ್ಯೆ ಒಂದೆ ರಡು ಹಾಡುಗಳನ್ನು ಹಾಡಿದರು. ಅದನ್ನು ಕೇಳಿ ಸುತ್ತ ಮುತ್ತ ಇದ್ದ ನಾಯಿಗಳು ಒಂದೇ ಸಮನಾಗಿ ಬಗಳುವುದಕ್ಕೆ ಪ್ರಾರಂಭಿಸಿದುವು. ಕೆಲವು ಮನೆಗಳಲ್ಲಿ ಮಲಗಿದ್ದ ಮಕ್ಕಳು ಎದ್ದು ಅಳಲು ಪ್ರಾರಂಭಿ ಸಿದುವು.

ಹೊಸದಾಗಿ ಬಂದಿದ್ದ ಅಮಲ್ದಾರರು ಬಹಳ ಜೋರಾದ ಆಸಾಮಿ. ಶ್ಯಾನುಭೋಗ ಪಟೇಲರು ರೈತರಲ್ಲಿ ಜೋರು ಮಾಡುವುದೂ, ಮೇಲಧಿ ಕಾರಿಗಳಲ್ಲಿ ವಿಧೇಯರಾಗಿರುವುದೂ ಅವರಿಗೆ ಚೆನ್ನಾಗಿ ಗೊತ್ತಿದ್ದಿತು. ಬಂದಕೂಡಲೆ ಅವರು ತಮ್ಮದು ಬಹಳ ಸ್ಟ್ರಿಕ್ಟ್ ಎಂದೂ ಕೇಳ ಅಧಿಕಾರಿಗಳಲ್ಲಿ ಆಲಸ್ಯ ಔದಾಸೀನ್ಯವನ್ನು ತಾವು ಸಹಿಸುವುದಿಲ್ಲವೆಂದೂ ಪ್ರಕಟಿಸಿದರು. ತಾನು ಯಾವ ಹೋಬಳಿಗೆ ಹೋದರೂ ಆಯಾ ಗ್ರಾಮದ ಶ್ಯಾನುಭೋಗ ತನ್ನ ಗಡಿಯಲ್ಲಿ ಬಂದು ಕಾದಿದ್ದು ತನ್ನನ್ನು ಎದುರುಗೊಂಡು ಕರೆದುಕೊಂಡು ಹೋಗಬೇಕೆಂದೂ ಹಾಗೆ ಮಾಡ ದವರಿಗೆ ಜುಲ್ಮಾನೆ ವಿಧಿಸುವುದಾಗಿಯೂ ಪ್ರಕಟಿಸಿದರು. ಇದು ಮಲ್ಲಿಗೆ

ಹಳ್ಳಿ ಶ್ಯಾನುಭೋಗರಿಗೆ ಬಹಳ ವಿಚಿತ್ರವಾಗಿ ತೋರಿತು. ಅವರಲ್ಲಿ ಕೆಲವರು ಇದು ಒಳ್ಳೆಯ ದರ್ಬಾರೇ ಆಗಿಹೋಯಿತು ಎಂದುಕೊಂಡರು. ಹೆಡ್‌ಗುಮಾಸ್ತರು "ನೋಡಿ ಚಪ್ಪರ ತೋರಣ ಎಲ್ಲಾ ಬಹಳ ಜೋರಾಗಿರಲಿ. ಅಮಲ್ದಾರರು ಇಲ್ಲಿಗೆ ಇದೇ ಮೊದಲಸಲ ಬರುತ್ತಿರುವುದು" ಎಂದರು. ನಾದಿರ್‌ಷಾ ಶ್ಯಾನುಭೋಗರು "ಯೋಚಿಸಬೇಡಿ" ಎಂದರು.

ಶ್ಯಾನುಭೋಗರು ಕುಳವಾಡಿಗಳನ್ನು ಕರೆದು "ನೋಡಿ ಹಸಿರು ಚಪ್ಪರ ಹೇಗಿರಬೇಕು ಗೊತ್ತೇ. ಎಲ್ಲಿಂದ ಎಲ್ಲಿ ನೋಡಿದರೂ ಬರಿಯ ಚಿಗುರು ಕಾಣಬೇಕು. ಚಪ್ಪರದ ಕೆಳಗೆ ಒಂದು ಸ್ವಲ್ಪವಾದರೂ ಸೂರ್ಯ ರಶ್ಮಿ ಬೀಳಬಾರದು. ತಂಪಾಗಿರಬೇಕು" ಎಂದರು. ಕುಳವಾಡಿಗಳು ಚಪ್ಪರದ ಮೇಲೆ ಅಸಾಧ್ಯವಾದ ಹಸಿರು ಎಲೆಗಳನ್ನು ಹರಡಿಬಿಟ್ಟರು. ಅದರ ಭಾರಕ್ಕೆ, ನಿಲ್ಲಿಸಿದ್ದ ಗಳು ಬಾಗುವಂತೆ ಇತ್ತು. ರಾತ್ರಿ ಒಳ್ಳೆಯ ಬಿರುಗಾಳಿ ಬಂದು ಚಪ್ಪರಕ್ಕೆ ಹೂಳಿದ್ದ ಗಳು ಅಲ್ಲಾಡುತ್ತಿದ್ದಿತು. ಶ್ಯಾನುಭೋಗರು "ಇದರ ಮೇಲೆ ಯಾವ ಆನೆ ಕುಳಿತು ಕುಣಿಯಬೇಕು. ಒಂದೆರಡು ಗಂಟೆ ಇದ್ದರೆ ಆಯಿತು" ಎಂದರು. ಅಮಲ್ದಾರರು ಬೆಳಿಗ್ಗೆ ೯ ಗಂಟೆಗೆ ಬರುವುದು ಗೊತ್ತಾಗಿದ್ದಿತು. ಸುಮಾರು ೮ ಗಂಟೆ ಹೊತ್ತಿಗೆ ಎಲ್ಲಾ ಶ್ಯಾನುಭೋಗರೂ, ಹೋಬಳಿಯ ಸುಮಾರು ೮೦ ಮಂದಿ ಪಟೇಲರೂ ಇನ್ನೂ ಕೆಲವು ಅರ್ಜಿದಾರರೂ ರಸ್ತೆಯ ಮುಂದೆ ನಿಂತರು. ಅವರ ಪೈಕಿ ಭರತಪುರಿಯ ಶ್ಯಾನುಭೋಗ-ಅವನಿಗೆ ವಯಸ್ಸು ೭೦ ರ ಹತ್ತಿರ ಆಗಿದೆ. ಶ್ಯಾನುಭೋಗತನದ ಸುವರ್ಣ ಮಹೋತ್ಸವ ಅವನಿಗೆ ಆಚರಿಸಬೇಕು—ಅವನು ಬುಡಬುಡಕೆ ದಾಸಯ್ಯನ ಕೋಟಿನಂತೆ ಒಂದು ಉದ್ದವಾದ ಕೋಟನ್ನು ಧರಿಸಿ ತಲೆಗೆ ಒಂದು ಹರಕು ಶಾಲು ಲಪ್ಪಟ್ಟಿ ಸುತ್ತಿ ಕೈಯ್ಯಲ್ಲಿ ತನಗೆ ಎತ್ತುವುದಕ್ಕೇ ಆಗದ ಒಂದು ದೊಣ್ಣೆಯನ್ನು ಹಿಡಿದುಕೊಂಡು ಊರಿಕೊಂಡು ಎಲ್ಲರಿಗಿಂತ ಮುಂಚೆ ನಿಂತನು. ಅವನ ಎದುರಿಗೆ ಅವನಷ್ಟೇ ಮುದುಕನಲ್ಲದಿದ್ದರೂ ಶ್ಯಾನುಭೋಗತನದಲ್ಲಿ ಅಷ್ಟೇ ಅನುಭವವನ್ನು ಹೊಂದಿದ್ದ ದೇವ ಮಂದಿರದ ಶ್ಯಾನುಭೋಗ ಜಟಾಯು ನಿಂತನು. ಸಂಪಾತಿಗಳಂತೆ ನಿಂತಿದ್ದ ಆ ಇಬ್ಬರನ್ನು ನೋಡಿ ಜನರಿಗೆ ನಗು ಬರುತ್ತಿದ್ದಿತು. ಜೀವಮಾನದಲ್ಲಿ ಒಂದು

ಸಲವಾದರೂ ಪಟೇಲಿ ನಕಾಶೆಯು ಡಬ್ಬದ ಕೊಳವೆ ಹಿಡಿದರೆ ತಮ್ಮ ಜನ್ಮಸಾರ್ಥಕವಾಯಿತೆಂದುಕೊಂಡಿದ್ದ ಕೆಲವು ಬದಲಿ ಪಟೇಲರೂ ತಮ್ಮ ನಕಾಶೆಗಳನ್ನು, ಬಂದೂಕಗಳನ್ನು ಹಿಡಿದಂತೆ ಹಿಡಿದು ನಿಂತಿದ್ದರು. ಯಾವ ಅಧಿಕಾರಿ ಊರಿಗೆ ಬಂದರೂ ಅವರಿಗೆ ತಪ್ಪದೆ ಮಾಲೆಯನ್ನು ಹಾಕುತ್ತಿದ್ದ ಸಾಹುಕಾರ ಅನಂತುವು ಕೈಯ್ಯಲ್ಲಿ ಹೂವಿನ ಹಾರ ಮತ್ತು ನಿಂಬೆಹಣ್ಣನ್ನು ಹಿಡಿದುಕೊಂಡು ನಿಂತಿದ್ದರು. ಹರಿಜನರು, ಜನರನ್ನು ಹೆಚ್ಚಾಗಿ ಸೇರಿಸಲು ಆಗಲೇ ಒಂದೆರಡು ಸಲ ಓಲಗ ತಮಟೆಮಾಡಿ ತಮಟೆಗಳನ್ನು ಬೆಂಕಿಯಲ್ಲಿ ಕಾಯಿಸಿಕೊಂಡು ಸುಖವಾಗಿ ನಿಂತಿದ್ದರು.

ತನ್ನ ವ್ಯವಸಾಯದಲ್ಲಿ ತಾನು ತೊಡಗಿ ತನ್ನ ಜೀವನವನ್ನು ಬೆವರಿನಿಂದ ಸಂಪಾದಿಸಿಕೊಳ್ಳುತ್ತ ಹೆಂಡದ ಜ್ಞಾನದಲ್ಲಿರುವ ಹೊಲೆಯರ ಕುಳವಾಡಿ, ಅಧಿಕಾರಿಗಳು ಮಲ್ಲಿಗೆಹಳ್ಳಿಗೆ ಬರುವಾಗ ದೂರದಿಂದಲೇ ಅವರನ್ನು ನೋಡಿ ಕೊಂಬಿನ ಕೂಗಿನಿಂದ ಊರಿನವರನ್ನು ಸಿದ್ಧವಾಗಿರಲೆಂದು ಎಚ್ಚರಿಸುವುದು ಪದ್ಧತಿ. ಒಂದೊಂದು ಸಲ ಕುಳವಾಡಿ ಕೈಗೆ ಸಿಕ್ಕುತ್ತಿರಲಿಲ್ಲ. ಇದರಿಂದ ಬೇಸರಗೊಂಡ ಶ್ಯಾನುಭೋಗರು ಎರಡು ಕೊಂಬುಗಳನ್ನು ಪಂಚಾಯ್ತಿಯ ಖರ್ಚಿನಿಂದ ತರಿಸಿ ತಮ್ಮ ಮನೆಯಲ್ಲಿಟ್ಟಿದ್ದರು. ಜನರು "ನೀವು ಒಂದನ್ನು ಊದುವುದಕ್ಕೆ ಕಲಿತು ಕೊಳ್ಳಿ ಮತ್ತೊಂದಕ್ಕೆ ಚೆನ್ನಾಗಿ ಹುಳಿ ಹಾಕಿಸಿ (ಪಟೇಲರು ವೈದಿಕರಾದುದರಿಂದ) ತುಳಸೀ ದಳಗಳನ್ನು ಅದಕ್ಕೆ ಸಿಕ್ಕಿಸಿ ಪಟೇಲರಿಗೆ ಕೊಡಿ. ಈ ಜಂಬದ ಕುಳವಾಡಿಗಳು ಬರದೆ ಕದ್ದುಕೂತರೆ ನೀವೇ ಊದಬಹುದು ಅವರ ಹಂಗಿಲ್ಲದೆ" ಎಂದು ಹಾಸ್ಯಮಾಡುತ್ತಿದ್ದರು. ಅಮಲ್ದಾರರು ಬರುವ ದಿವಸ ಇಬ್ಬರು ಕುಳವಾಡಿಗಳೂ ದೂರದಲ್ಲಿ ನಿಂತುಕೊಂಡು ಊರಿನವರಿಗೆ ಎಚ್ಚರಿಕೆಕೊಡಲು ಸಿದ್ಧರಾಗಿದ್ದರು. ಕೆಲವು ವಿನೋದಗಾರರು ಚಪ್ಪರದ ಸುತ್ತ ನಿಂತುಕೊಂಡು 'ಇದು ಮಹಾರಾಜರ ಸ್ವಾಗತಕ್ಕಿಂತ ಹೆಚ್ಚಾಯಿತು' ಎನ್ನುತ್ತಿದ್ದರು. ಅಮಲ್ದಾರರು ಬರುವುದಕ್ಕೆ ಸುಮಾರು ೧೦-೧೫ ನಿಮಿಷಗಳು ಮುಂಚೆ, ಚಪ್ಪರದ ಕಂಬಕ್ಕೆ ಯಾರೋ ಸ್ವಲ್ಪ ಒರಗಿಕೊಂಡು ನಿಂತಾಗ ಮೊದಲೇ ಅಲ್ಲಾಡುತ್ತಿದ್ದ ಅಭದ್ರವಾಗಿದ್ದ ಕಂಬ ಮೇಲಿನ ಅನೇಕ ಗಾಡಿಗಳ ಸೊಪ್ಪಿನ ಭಾರ

ದಿಂದ ಇದ್ದಕ್ಕಿದ್ದಂತೆ ಕೆಳಕ್ಕೆ ಕುಸಿದುಹೋಯಿತು. ಜನರು, ಅದರಿಂದ ಯಾವ ಅಪಾಯವೂ ಯಾರಿಗೂ ಉಂಟಾಗುವುದಿಲ್ಲವೆಂದು ತಿಳಿದಿದ್ದರೂ ಹೋ ಹೋ ಎಂದು ಕೂಗಿಯೇ ಬಿಟ್ಟರು. "ಅಮಲ್ದಾರರು ಬರುವುದಕ್ಕೆ ಮುಂಚೆ ಹೀಗೆ ಆಯಿತಲ್ಲ. ಮತ್ತೊಂದು ಚಪ್ಪರವನ್ನು ಕಟ್ಟುವುದಕ್ಕೂ ಈಗ ಅವಕಾಶವಿಲ್ಲವಲ್ಲಾ" ಎಂದು ಶ್ಯಾನುಭೋಗರಿಗೆ ಸ್ವಲ್ಪ ಚಿಂತೆಯಾಯಿತು. ಚಪ್ಪರ ಮುರಿದು ಬಿದ್ದುದರಿಂದ ವಾತಾವರಣವೂ ಪರಿಸ್ಥಿತಿಯೂ ಒಂದು ರೀತಿಯಲ್ಲಿ ಹಗುರವಾಯಿತು. ಹೊಸ ಅಮಲ್ದಾರರ ವಿಷಯದಲ್ಲಿ ಉಂಟಾಗಿದ್ದ ಭಯವೂ ಅಪರಿಚಯವೂ ಮಾಯವಾಗಿ "ಅವರು ನಮ್ಮವರೇ; ಇರುವಂತೆ ಸ್ವಾಭಾವಿಕವಾದ ರೀತಿಯಲ್ಲಿ ಆದರಿಸೋಣ" ಎಂಬ ಭಾವ ಜನರಿಗೆ ಉಂಟಾಯಿತು.

ಚಂದ್ರವಳ್ಳಿಯ ಶ್ಯಾನುಭೋಗರು ನಗುತ್ತಾ ಮಲ್ಲಿಗೆಹಳ್ಳಿಯ ನಾದಿರ್‌ಷಹನಿಗೆ "ಸ್ವಾಮಿ ಈಗ ಒಂದು ಉಪಾಯಮಾಡಿ. ಹೇಗೂ ಚಪ್ಪರ ಬಿದ್ದುಹೋಯಿತು. ಈಗ ಬೇರೆ ಚಪ್ಪರ ಹಾಕುವುದು ಕಷ್ಟ. ಕುಳವಾಡಿಗಳಲ್ಲಿ ಇಬ್ಬರ ಮೈಗೆ ಮಾವಿನ ಸೊಪ್ಪು ಕಟ್ಟಿ ಆಚೆ ಈಚೆ ನಿಲ್ಲಿಸಿಬಿಡಿ" ಎಂದರು. ಬಿದ್ದ ಚಪ್ಪರವನ್ನೂ ಗಳುಗಳನ್ನೂ ಸರಸರನೆ ಆಚೆಗೆ ಸಾಗಿಸಿದುದಾಯಿತು. ಆಚೆ ಒಬ್ಬ ಕುಳವಾಡಿ ಈಚೆ ಒಬ್ಬ ಕುಳವಾಡಿ ನಿಂತುಕೊಂಡು, 'ಗಳು ತನ್ನಿ ನೆಟ್ಟು ಈ ತೋರಣ ಕಟ್ಟಿ ಅದಕ್ಕೆ ಬಾಳೆ ಕಂದು ಕಟ್ಟೋಣ' ಎಂದನು. ಇಬ್ಬರು ರೈತರು ಚಪ್ಪರಕ್ಕೆ ಕಟ್ಟಿದ್ದ ಬಾಳೆಯ ಕಂದುಗಳು ಕೆಳಗೆ ಬಿದ್ದಿದ್ದುವನ್ನು ತಂದು ಇಬ್ಬರು ಕುಳವಾಡಿಗಳಿಗೆ ಒಂದೊಂದು ಕೊಟ್ಟು ಅಲ್ಲೇ ಬಿದ್ದಿದ್ದ ಗಳುಗಳನ್ನು ತರಲು ಹೋದರು. ಅಷ್ಟು ಹೊತ್ತಿಗೆ ದೂರದಿಂದ ಕೊಂಬಿನ ಕೂಗು ಗಾಳಿಯ ಮೇಲೆ ಬಂದಿತು. ತತ್‌ಕ್ಷಣ ಎಲ್ಲರೂ ತಮ್ಮ ತಮ್ಮ ಸ್ಥಳಗಳಲ್ಲಿ ನಿಂತುಕೊಂಡರು. ಗಳುವಿಗಾಗಿ ಹೋದವರು ಅದನ್ನು ಮರೆತು ಅಮಲ್ದಾರರು ಬರುವಕಡೆ ತಿರುಗಿ ನಿಂತುಕೊಂಡರು. ಆಚೆ ಈಚೆ ಕುಳವಾಡಿಗಳೂ ಬಾಳೆಯ ಕಂದುಗಳನ್ನು ಹಿಡಿದುಕೊಂಡಿದ್ದವರು, ತಮ್ಮ ಕೈಯ್ಯಲ್ಲಿದ್ದ ಮಾವಿನ ತೋರಣವನ್ನು ಸಾಧ್ಯವಾದಷ್ಟು ಮೇಲಕ್ಕೆ ಎತ್ತಿಕೊಂಡು ನಿಂತರು. ಉದ್ದವಾಗಿದ್ದ ಆ ಕಂದುಗಳ ಮರೆಯಲ್ಲಿ ಕುಳವಾಡಿಗಳು ಇರುವುದು ಕಾಣುತ್ತಲೇ ಇರಲಿಲ್ಲ.

ಅಮಲ್ದಾರರು ಬಸ್ಸಿನ ಮೊದಲನೆಯ ಸೀಟಿನಿಂದ ಇಳಿದರು. ಕೂಡಲೇ ದೇವಸ್ಥಾನದ ಅರ್ಚಕರೂ ಸ್ಕೂಲಿನ ಸಂಸ್ಕೃತ ಪಂಡಿತರೂ ಆಶೀರ್ವಚನವನ್ನು ಹೇಳಲು ತಟ್ಟೆಯಲ್ಲಿ ನಿಂಬೆಹಣ್ಣು ಹೂವುಗಳನ್ನು ಇಟ್ಟುಕೊಂಡು ಮುಂದೆ ಬಂದರು. ಅಮಲ್ದಾರರು ಬಾಯಲ್ಲಿದ್ದ ಬತ್ತಿಯನ್ನು ಕೈಯ್ಯಲ್ಲಿ ಹಿಡಿದುಕೊಂಡು ಹೊಗೆಬಿಡುತ್ತಾ ನಿಂತರು. ಸ್ವಭಾವದಿಂದ ಧೈರ್ಯಶಾಲಿಯಾದ ಅರ್ಚಕ, ಅದನ್ನು ನೋಡಿ ಎರಡು ಹೆಜ್ಜೆ ಹಿಂದಕ್ಕೆ ಸರಿದನು. ಅವನ ಬಾಯಿಂದ ವೇದದ ವಾಕ್ಯಗಳು ಹೊರಡಲು ತಿರಸ್ಕರಿಸಿದುವು. ಅಮಲ್ದಾರರು ಇನ್ನೂ ಪೂರ್ಣವಾಗಿ ಸೇದಿ ಮುಗಿಸದೇ ಇದ್ದ ಬತ್ತಿಯ ಕಡೆ ಆಸೆಯಿಂದ ನೋಡುತ್ತಾ ಅದನ್ನು ದೂರಕ್ಕೆ ಎಸೆದು ತಲೆಯ ಮೇಲಿದ್ದ ಕುಕ್ಕೆ ಟೋಪಿಯನ್ನು ತೆಗೆದು ಮುಖವನ್ನು ಬೀಸಿಕೊಳ್ಳುತ್ತಾ ಸ್ವಲ್ಪ ವಿನಯದಿಂದಲೇ ಅರ್ಚಕನ ಮುಖವನ್ನು ನೋಡಿದರು. ಅರ್ಚಕನು ಮುಂದೆ ಬಂದು ಸ್ಪಷ್ಟವಾಗಿ ಆಶೀರ್ವಚನವನ್ನು ಹೇಳಿದನು. ಅವನ ಹಿಂದೆ ಇದ್ದ ಪಂಡಿತನು ಕೇವಲ ಅವನಿಗೆ ಹಿಮ್ಮೇಳವಾಗಿ ಮಾತ್ರ ಇದ್ದನು. ಅರ್ಚಕನ ಮುಖ "ನಿಮ್ಮ ಪ್ರಸನ್ನತೆಗಾಗಿ ನನ್ನ ವೇದವನ್ನು ತಿರಸ್ಕರಿಸಲಾರೆ" ಎಂಬಂತೆ ಇತ್ತು. ಇದ್ದಕ್ಕಿದ್ದಂತೆ ಅಮಲ್ದಾರರಿಗೂ ಅರ್ಚಕನಿಗೂ ಒಂದು ವಿಧವಾದ ಒಪ್ಪಂದ ಅವರ ಕಣ್ಣುಗಳಲ್ಲಿಯೇ ಆಯಿತು. ಅಲ್ಲಿಂದ ಮುಂದೆ ಅಮಲ್ದಾರರು ಮಲ್ಲಿಗೆಹಳ್ಳಿಗೆ ಬಂದರೂ ಅರ್ಚಕನ ಬಾಯಿಂದ ವೇದ ಹೊರಡಲು ಹಿಂದೆಗೆಯಲಿಲ್ಲ. ಅಮಲ್ದಾರರ ಬಾಯಿಂದ ಬತ್ತಿಯೂ ಮರೆಯಾಗದಿರಲಿಲ್ಲ.

ಆದಿಕರ್ನಾಟಕ ಓಲಗದವರು ತಮ್ಮ ವಾದ್ಯಗಳನ್ನು ಬಾರಿಸಿದರು. ಕೂಡಲೇ ಎಲ್ಲರೂ ಊರಕಡೆ ಹೊರಟರು. ಈ ಗದ್ದಲ ಸಂಭ್ರಮದಲ್ಲಿ ಅಚೆ ಈಚೆ ಬಾಳೆ ಕಂದುಗಳನ್ನು ಹಿಡಿದುಕೊಂಡು ಮಧ್ಯದಲ್ಲಿ ನೇತುಬಿದ್ದಿದ್ದ ತೋರಣವನ್ನು ತಮ್ಮ ಕೈಹೋದಷ್ಟು ಮೇಲಕ್ಕೆ ಎತ್ತಿನಿಲ್ಲಿಸಿಕೊಂಡಿದ್ದ ಕುಳವಾಡಿಗಳನ್ನು ಯಾರೂ ಗಮನಿಸಲೇ ಇಲ್ಲ. ಎಲ್ಲರೂ ಊರಕಡೆಗೆ ಹೊರಟಂತೆ ಅವರೂ ಊರ ಕಡೆಗೆ ಹೊರಟೇಬಿಟ್ಟರು. ಅಮಲ್ದಾರರ ಮುಂದುಗಡೆ ಅಚೆ ಈಚೆ ಎರಡು ಬಾಳೆಯ ಕಂದುಗಳೂ ಮಧ್ಯದಲ್ಲಿ ತೋರಣವೂ ನಡೆದುಕೊಂಡೇ ಹೊರಟಿತು.

ಸುಮಾರು ಹತ್ತು ಹೆಜ್ಜೆ ಹೋದಮೇಲೆ ಶ್ಯಾನುಭೋಗರಿಗೆ ವಿಚಾರ ಗಮನಕ್ಕೆ ಬಂದಿತು. ಅವರಿಗೂ ಬಹು ನಗು ಬಂದಿತು. ಆದರೆ ಕುಳವಾಡಿಗಳನ್ನು ಅವರು ತಡೆಯಲಿಲ್ಲ. ಓಲಗ ತಮಟೆಗಳೊಂದಿಗೆ ಮೆರವಣಿಗೆ ಅಮಲ್ದಾರರು ಇಳಿದುಕೊಂಡಿದ್ದ ಟಿ. ಬಿ.ಯ ಬಾಗಿಲಿಗೆ ಹೋಯಿತು. ಈ ಚಲಿಸುತ್ತಿದ್ದ ಬಾಳೆ ಕಂದುಗಳನ್ನೂ ಮಾವಿನ ತೋರಣವನ್ನೂ ನೋಡಿ ಜನರು ಬಗೆ ಬಗೆಯಾಗಿ ನಗುತ್ತಿದ್ದರು. ಅರ್ಧದಾರಿ ಹೋದನಂತರ ಅಮಲ್ದಾರರಿಗೆ ಈ ಚಲಿಸುತ್ತಿದ್ದ ತೋರಣ ಕಂಡಿತು. ಒಂದು ಗಳಿಗೆ ಅವರಿಗೆ "ಇದೇನು ಎಷ್ಟು ನಡೆದರೂ ಈ ತೋರಣ ಸಿಕ್ಕುವುದೇ ಇಲ್ಲವಲ್ಲ" ಎನ್ನಿಸಿತು. ಆಮೇಲೆ ಅವರು ಓಲಗ ತಮಟೆಗಳಂತೆ ಇದೂ ಒಂದು ಕ್ರಮವೇನೋ ಎಂದುಕೊಂಡು ಸುಮ್ಮನಾದರು. ಕುಳವಾಡಿಗಳ ಮೈಯಲ್ಲಿದ್ದ ಬಾಳೆಕಂದುಗಳನ್ನು ದನಗಳು ಮೇಯುವುದಕ್ಕೆ ಬಂದಾಗ ಆದ ಸ್ವಲ್ಪ ಗದ್ದಲದ ಹೊರತು ಇನ್ನಾವ ವಿಶೇಷಗಳೂ ಸಂಭವಿಸಲಿಲ್ಲ. ಟಿ.ಬಿ. ಯ ಬಾಗಿಲಿನಲ್ಲಿ ಕುಳವಾಡಿಗಳು ಆಚೆ ಈಚೆ ನಿಂತುಕೊಂಡರು. ಅಮಲ್ದಾರರು ಸದ್ಯ ಈ ಮೆರವಣಿಗೆ ಮುಗಿಯಿತಲ್ಲಾ ಎಂದು ನಿಟ್ಟುಸಿರುಬಿಟ್ಟುಕೊಂಡು ಒಳಕ್ಕೆ ಹೋದರು. ಪದ್ಧತಿಯಂತೆ ಆಯಾಸ ಪರಿಹಾರಗಳೆಲ್ಲಾ ಆದಮೇಲೆ ಅಮಲ್ದಾರರು ಶ್ಯಾನುಭೋಗರನ್ನು ಕರೆಸಿ "ಏನ್ರಿ ಇನ್ನು ಮುಂದೆ ಈ ನಡೆಯೋ ತೋರಣ ಬೇಡ" ಎಂದು ಅಪ್ಪಣೆಮಾಡಿದರು.

---

## ೫. ತಕರಾರು ತಕ್ತೆಯ ನಾಶ-ಶ್ಯಾನುಭೋಗನ ಪರಿಹಾರ ಮಾರ್ಗ

ಶ್ಯಾನುಭೋಗರ "ಮಾಮೂಲುಗಳು" ಹೆಡ್ ಗುಮಾಸ್ತರಿಗೆ ಇನ್ನೂ ಸರಿಯಾಗಿ ತಲಪಿರಲಿಲ್ಲ. ಚಂದ್ರವಳ್ಳಿ ಶ್ಯಾನುಭೋಗ ಪೋಟಿಗೆ ತೆಗೆದುಕೊಳ್ಳುವಾಗ, ಹೆಡ್ ಗುಮಾಸ್ತರಿಗೂ ಶಿರಸ್ತೇದಾರರಿಗೂ ಕೊಡಬೇಕಾದ ಮಾಮೂಲನ್ನು ಸರಿಯಾಗಿ ಕೊಡದೆ, ಅವರು ಬೇರೆ ಕಡೆ ನೋಡುತ್ತಿರುವಾಗ ಕಳ್ಳನಂತೆ ಕಛೇರಿಯಿಂದ ಕದ್ದು ಭರಬಿದ್ದಿದ್ದನು.

ಆದುದರಿಂದ ಅವನ ಲೆಕ್ಕ ಇನ್ನೂ ಆಗಿರಲಿಲ್ಲ. ಮೊಗ್ಗಿನಹಳ್ಳಿ ಫರ್ಕಾ ಶ್ಯಾನುಭೋಗ ತನ್ನ ತಮ್ಮನಿಗೆ ಮತ್ತೊಂದು ಫರ್ಕಾ ಶ್ಯಾನುಭೋಗಿಯನ್ನು ಬದಲಿಯಾಗಿ ಕೊಡಿಸಿ ಕೊಡಬೇಕಾಗಿದ್ದ ಮಾಮೂಲನ್ನು ಕೊಡುತ್ತೇನೆಂದು ಹೇಳಿ ಕೊಡದೆ, ಪೋಟಿಗೆ ತೆಗೆದುಕೊಳ್ಳುವುದಕ್ಕೂ ಹೋಗದೆ ಪೋಟಿಕೆಯನ್ನು ಕೂತ ಜಾಗದಿಂದಲೇ ಕಂದಾಯಕ್ಕೆ ವಜಾ ಕಟ್ಟಿಸಿದ್ದನು. ಆದುದರಿಂದ ಅವನ ಲೆಕ್ಕವೂ ಆಗಿರಲಿಲ್ಲ. ಅಲ್ಲದೆ ಕ್ಯಾಂಪು ನಡೆದಷ್ಟು ದಿನವೂ ಶ್ಯಾನುಭೋಗರು ಒಂದೊಂದು ದಿನ ಒಂದೊಂದು ಹೊಸ ಹೊಸ ಭಕ್ಷ್ಯ ತಿಂಡಿ ಮಾಡುತ್ತಿದ್ದರು. ಗುಮಾಸ್ತರು ಒಬ್ಬರನ್ನೊಬ್ಬರು ಪ್ರೋತ್ಸಾಹಿಸಿಕೊಂಡು, ಕಛೇರಿಯಲ್ಲಿ ಒಬ್ಬರ ಮೇಲೆ ಒಬ್ಬರಿಗೆ ಇದ್ದ ಅಸೂಯೆಯನ್ನು ಮರೆಸಲು ಪರಸ್ಪರವಾಗಿ ಪ್ರಶಂಸಿಸುತ್ತಾ "ಇಲ್ಲಿಯ ಜಮಾಬಂದಿಯೆ ಜಮಾಬಂದಿ. ಹೀಗೆ ಯಾವ ಹೋಬಳಿಯಲ್ಲೂ ಏರ್ಪಾಡಿಲ್ಲ ಎಲ್ಲಾ ಹೀಗೆ ನಡೆದುಹೋದರೆ ಲೆಕ್ಕ ಆಗುವುದರಲ್ಲಿ ಸಂದೇಹವಿಲ್ಲ ಇಲ್ಲಿಯೂ ಒಬ್ಬಿಬ್ಬರು ಪುಂಡರು ಇಲ್ಲ ಎಂದಲ್ಲ. ಈಗ ನೋಡಿ ಚಂದ್ರವಳ್ಳಿ ಶ್ಯಾನುಭೋಗರು ಯಾವುದಕ್ಕೂ ಜಗ್ಗುವುದಿಲ್ಲ ಬೆಂಕಿಗೆ ಸುಡುವುದಿಲ್ಲ. ನೀರಿಗೆ ಕರುಗುವುದಿಲ್ಲ. ಒಡೆದು ಮೂಡಿದ್ದಲ್ಲ. ಕಡೆದು ಮಾಡಿದ್ದಲ್ಲ" ಎಂದುಕೊಂಡು ಭಕ್ಷ್ಯವನ್ನು ಬಡಿಸುತ್ತಿದ್ದ ಮತ್ತೊಬ್ಬ ಶ್ಯಾನುಭೋಗರನ್ನು ನೋಡುತ್ತಾ "ಆದರೂ ಇಂತಹವರು ಇರುವವರೆಗೆ ಎಲ್ಲಾ ಸರಿದೂಗಿಸಿಕೊಂಡು ಹೋಗುತ್ತಾರೆ" ಎಂದು ಪ್ರಶಂಸಿಸಿದರು. ಶ್ಯಾನುಭೋಗರು "ತಮ್ಮ ಕೃಪೆಯಿದ್ದರೆ ಸಾಕು ಸ್ವಾಮಿ." ಎಂದು ಹೇಳಿ ಇನ್ನೆರಡು ಸಜ್ಜಪ್ಪಗಳನ್ನು ತಳ್ಳಿದರು. ಶ್ಯಾನುಭೋಗರುಗಳಿಗೂ ಮನೆಯಲ್ಲಿ ಒಳ್ಳೆಯ ಊಟ ಅಪರೂಪವಾಗಿತ್ತು. ತಾಲ್ಲೂಕು ಕಛೇರಿ ಅಧಿಕಾರಿಗಳಿಗೆ ಹೇಗೆ ಜಮಾಬಂದಿಯ ಕಾಲದಲ್ಲಿಯೇ ತಮ್ಮ ಬಾಯ ಚಪಲಗಳೆಲ್ಲಾ ತೀರಬೇಕಾಗಿದ್ದುವೋ ಹಾಗೆಯೇ ಶ್ಯಾನುಭೋಗರಿಗೂ ಈ ಜಮಾಬಂದಿಯ ಕಾಲಗಳಲ್ಲಿಯೇ ಒಳ್ಳೆಯ ಊಟ ದೊರಕುತ್ತಿದ್ದುದು. ಸರ್ಕಾರದ ಉತ್ಪತ್ತಿಯು ಕೋಟಿ ಕೋಟಿ ಸಂಖ್ಯೆಗಳಲ್ಲಿ ಹೆಚ್ಚುತ್ತಿದ್ದರೂ ರೈತನ ಮಕ್ಕಳಿಗೆ ಒಂದು ತೊಟ್ಟು ಹಾಲು ದೊರೆಯುವುದು ದುರ್ಲಭವಾಗಿರುವಾಗ ಶ್ಯಾನುಭೋಗರಿಗೆ ಒಳ್ಳೆಯ ಊಟ ಎಲ್ಲಿ ದೊರಕಬೇಕು ? ಅವರು ತಮ್ಮ ಪೋಟಿಗೆಯ ಹಣವನ್ನು

ಹಾಳು ಜಮೀನುಗಳ ಹಾಳು ಕಂದಾಯಕ್ಕೆ ಸರ್ಕಾರಕ್ಕೇ ತೆತ್ತು ಅಧಿಕಾರಿಗಳು "ರೈತರು ಸೋಮಾರಿಗಳು ಕೊಬ್ಬಿದ್ದಾರೆ. ಮನಸ್ಸು ಮಾಡಿದರೆ ಇನ್ನಷ್ಟು ಕಂದಾಯವನ್ನು ಸುಲಭವಾಗಿ ಕೊಡಬಲ್ಲರು" ಎಂದು ಹೇಳಿದಾಗ ಅವರಂತೆಯೇ ಹೌದು ಎನ್ನುತ್ತಲೂ ರೈತರು "ಅಧಿಕಾರಿಗಳಿಗೆ ಸಹಾನುಭೂತಿಯಿಲ್ಲ ಅವರ ಸಂಬಳ ಅವರ ಭತ್ಯ ಅವರ ತಿಂಡಿ ಇದೇ ಅವರ ಜ್ಞಾನ" ಎಂದಾಗ ಅವರಂತೆಯೇ ತಲೆಯಲ್ಲಾಡಿಸುತ್ತಲೂ ಕಾಲ ಹಾಕುತ್ತಿದ್ದರು.

ಅಮಲ್ದಾರರು ಒಳ್ಳೆಯ ಜರಬಾದ ಆಸಾಮಿಯಾಗಿದ್ದರು. ಅವರ ಧ್ವನಿಯು ಒಡಕಿಲ್ಲದ ಕಂಚಿನಂತೆ ಇತ್ತು ಅವರ ಮೈ ಎಗ್ಜಿಕ್ಯುಟಿವ್ ಆಫೀಸರವರ ಯೋಗ್ಯತೆಗೆ ಮೀರಿದಷ್ಟು ದಪ್ಪವಾಗಿದ್ದಿತು. ಅವರು ಸಾಮಾನ್ಯವಾಗಿ ಕುಳಿತಿರುವಾಗಲೂ ತಮ್ಮ ದೇಹದ ಭಾರದಿಂದಲೇ ಆಯಾಸದಿಂದ ಏದುತ್ತಾ ಬೆವರುತ್ತಿದ್ದರು. ಊಟವಾದನಂತರ ಸುಧಾರಿಸಿಕೊಳ್ಳುವುದಕ್ಕೇ ಅವರಿಗೆ ೨–೩ ಗಂಟೆಗಳು ಬೇಕಾಗುತ್ತಿದ್ದುವು. ಅಲ್ಲದೆ ಆ ಸಲದ ವಸೂಲಿಯಲ್ಲಿ ಅವರಿಗೆ ಡಿಸ್ಟ್ರಿಕ್ಟಿನಲ್ಲಿ ಮೊದಲನೆಯ ಹೆಸರು ಬಂದಿದ್ದಿತು. ಕಂದಾಯದ ವಸೂಲಿಯಲ್ಲಿ ಮೊದಲು, ಲೋಕಲ್ ಫಂಡು ವಿದ್ಯಾಸೆಸ್ಸು ರೈಲ್ವೆ ಸೆಸ್ಸು ಪಂಚಾಯ್ತಿ ಕಂದಾಯ (ಎರಡರ ಶ್ಯಾನುಭೋಗನೂ ಒಬ್ಬನೇ ಆದಾಗ) ಇವುಗಳನ್ನೆಲ್ಲಾ ಮುರಿದುಕೊಂಡು ಅನಂತರ ಪ್ರತಿತಿಂಗಳೂ ಶೇಕಡ ೨೫ ರಂತೆ ನಾಲ್ಕು ಕಂತುಗಳಲ್ಲಿ ಕಂದಾಯ ವಸೂಲ್ಮಾಡುವುದು ಪದ್ಧತಿ. ಇದರಲ್ಲಿ ಅಮಲ್ದಾರರು ಅವರವರ ಶಕ್ತ್ಯಾನುಸಾರವಾಗಿ ಮೊದಲನೆಯ ಕಂತಿನಲ್ಲಿಯೇ ಶೇಕಡ ೩೩, ಕೆಲವು ವೇಳೆ ಶೇಕಡ ೪೦ ರಂತೆ ಸಹ ವಸೂಲ್ಮಾಡುತ್ತಾರೆ. ಯಾವ ಅಮಲ್ದಾರ ಕಂದಾಯವನ್ನು ಹೆಚ್ಚು ಹೆಚ್ಚು ಶಿಸ್ತಿನಿಂದ ಹೆಚ್ಚು ಹೆಚ್ಚು ಕ್ರೌರ್ಯದಿಂದ ವಸೂಲ್ಮಾಡುತ್ತಾನೋ ಅವನ ಕೀರ್ತಿ ಸರ್ಕಾರದಲ್ಲಿ ಅಷ್ಟು ಅಷ್ಟು ಹೆಚ್ಚುತ್ತದೆ. ಕಂದಾಯದಲ್ಲಿ ಸರಿಯಾದ 'ಪರ್ಸೆಂಟೇಜ್' ಕೊಡುವ ಅಮಲ್ದಾರರನ್ನು ಹಿಂದೆ ಯಾವ ತಪ್ಪು ಮಾಡಿದ್ದರೂ ಕ್ಷಮಿಸುತ್ತಾರೆ. ಅವನ ಪ್ರಮೋಶನ್ ಖಂಡಿತ. ಅವನು ಕಂದಾಯಕ್ಕಾಗಿ ದನಗಳನ್ನು ಹಿಡಿಸಿ ಹರಾಜು ಹಾಕಿಸಬಹುದು; ಉಳುವ ಎತ್ತನ್ನು ಹಿಡಿಯಕೂಡದೆಂದು ಸರ್ಕಾರದ ಅಪ್ಪಣೆ ಇದ್ದರೂ ಹಿಡಿಯಿಸಬಹುದು. ಮನೆಯ

ಹಂಚನ್ನು ಕೆಳಕ್ಕೆ ಇಳಿಸಬಹುದು. ಕಟಾವಾಗದಿರುವ ಪೈರನ್ನು ಜಪ್ತಿ ಮಾಡಬಹುದು. ಗುಡ್ಡೆ ಒಟ್ಟಿರುವ ಪೈರನ್ನು ತಾನೇ ಬಡಿಸಿ ರೇಖೆಮಾಡಿಸಿ ಬಂದದ್ದರಲ್ಲಿ ಚೆಲ್ಲಾಡಿದುದು ಹೋಗ್ತಾ, ಗುಡ್ಡೆಕಾಯಿದ ಆಳಿಗೆ ಮನ ಬಂದುದನ್ನು ಕೊಟ್ಟುದು ಹೋಗ್ತಾ, ಪೈರನ್ನು ಅರ್ಧ ಬೆಲೆಗೆ ಮಾರಿ, ಅದರಿಂದಲೂ ಕಂದಾಯ ವಸೂಲಾಗದಿದ್ದರೆ ಮುಂದಲ ವರುಷದ ಪೈರನ್ನು ಜಪ್ತಿಮಾಡಿಸಬಹುದು.

ಕಂದಾಯದ ವಸೂಲಿಯಲ್ಲಿ ಸರ್ಕಾರದವರು ಮಾಡಿರುವ ಕಾನೂನುಗಳಿಗೂ ಆಚರಣೆಯಲ್ಲಿ ಅಧಿಕಾರಿಗಳು ಅನುಸರಿಸುತ್ತಿರುವ ದೌಷ್ಟ್ಯಕ್ಕೂ ಸಂಬಂಧವೇ ಇಲ್ಲ. ಕಂದಾಯದ ವಸೂಲಿ ಎಂದರೆ ಮಹಮ್ಮದ್ ಬಿನ್ ತೊಗಲಕ್ಕನ ದರ್ಬಾರು. ಅವನು ಹೇಗೆ ಜನರನ್ನು ಬೇಟೆಯಾಡುತ್ತಿದ್ದನೋ ಅಮಲ್ದಾರ್ ಆಕಾಶರಾಯರ ಕಡೆಯ ಅಧಿಕಾರಿಗಳೂ ಹಾಗೆ ಜನರನ್ನು ಬೇಟೆಯಾಡುತ್ತಿದ್ದರು. ಸರ್ಕಾರದ ದೃಷ್ಟಿಯಿಂದ ಕಂದಾಯದ ವಸೂಲಿ ಒಂದು ಯುದ್ಧಕಾಲ. ಆಗ ಯಾರು ಏನುಬೇಕಾದರೂ ಮಾಡಬಹುದು. ಸರ್ಕಾರದ ಟ್ರೆಜರಿ ಭರ್ತಿಯಾದರೆ ಸಾಕು. ರೆವಿನ್ಯೂ ಅಧಿಕಾರಿಗಳಿಗೆಲ್ಲಾ ವಿಶೇಷ ಅಧಿಕಾರ ಆ ಕಾಲದಲ್ಲಿ ತಾನಾಗಿಯೇ ಬರುತ್ತದೆ ಶ್ಯಾನುಭೋಗನು ಅಮಲ್ದಾರರ ಅಧಿಕಾರವನ್ನೂ, ಅಮಲ್ದಾರರು ಡೆಪುಟಿ ಕಮಿಶನರ ಅಧಿಕಾರವನ್ನೂ, ಡೆಪುಟಿ ಕಮಿಶನರು ಸರ್ವಾಧಿಕಾರವನ್ನೂ ಚಲಾಯಿಸುತ್ತಾರೆ. ಆಗ ಅಧಿಕಾರಿಗಳ ಮೇಲೆ ಮೇಲಧಿಕಾರಿಗಳಿಗೆ ದೂರು ಹೇಳಿದರೂ ನಡೆಯುವುದಿಲ್ಲ. ಅವರದು ಆಗ ಒಂದೇ ಜವಾಬು "ನೀನ್ಯಾಕೆ ಕಂದಾಯ ಬಾಕಿ ನಿಲ್ಲಿಸಿಕೊಂಡೆ." ಆಗ ಅಮಲ್ದಾರರು ಮದ್ಯವನ್ನು ಕುಡಿದವರಂತೆ ಮತ್ತರಾಗಿ ಮನಬಂದ ದರ್ಬಾರು ನಡೆಸುತ್ತಾರೆ. ಒಬ್ಬನ ಕಂದಾಯವನ್ನು ಇನ್ನೊಬ್ಬರಿಂದ ವಸೂಲ್ಮಾಡುತ್ತಾರೆ. ಒಬ್ಬನಿಂದ ಮತ್ತೊಬ್ಬನಿಗೆ ಕಂದಾಯ ಸಾಲಕೊಡಿಸಿ ಪತ್ರ ಬರೆಸಿಕೊಡುತ್ತಾರೆ. ತಮ್ಮ ಜವಾನರಿಂದ ರೈತರ ಆಡು ಕುರಿ ಹಂದಿಗಳನ್ನು ತಾವೇ ಮಾರಿಸಿ ಕಂದಾಯಕ್ಕೆ ಜಮಾ ಹಿಡಿಯುತ್ತಾರೆ. ಹೆಂಗಸರ ಒಡವೆಗಳನ್ನು ಅಕ್ಕಸಾಲೆಗಳಿಗೆ ಮಾರಿಸುತ್ತಾರೆ. ಅಂತೂ ಖಾತೆ ಬೇಬಾಕಾಗಬೇಕು. ಅಮಲ್ದಾರರು ಬಂದು ಪ್ರತಿಯೊಬ್ಬರನ್ನೂ ಕರೆಸಿ, ರೈತರು ಯಾವ ಕಷ್ಟಸುಖಗಳನ್ನು ಹೇಳಿದರೂ ಕೇಳದೆ 'ಅಯ್ಯೋ; ನನ್ನ

ಪರ್ಸೆಂಟೇಜ್ ಎಲ್ಲಿ. ಈ ತಾಲ್ಲೂಕಿಗೆ ಬಂದು ನನ್ನ ಮಾನ ಹೋಯ್ತು. ನೋಡಿ ಈ ಲಿಸ್ಟು. ನಾನು ಮೂರನೆಯವನು ಡಿಸ್ಟ್ರಿಕ್ಟಿಗೆ. ಇದು ವರೆಗೂ ನಾನು ಮೊದಲನೆಯವನೇ ಆಗಿದ್ದೆ.'' ಎನ್ನುತ್ತಾರೆ. ಕಂದಾಯದ ಕಾಲದಲ್ಲಿ ಅಮಲ್ದಾರರಿಗೆ ಪರ್ಸೆಂಟೇಜು ಪರ್ಸೆಂಟೇಜು ಎಂಬುದೇ ಜಪವಾಗುತ್ತದೆ. ಅವರಿಗೆ ಆಗ ಇರುವುದು ತಮ್ಮ ಪ್ರಮೋಶನ್ ಜ್ಞಾನವೇ. ನಮ್ಮ ತಾಲ್ಲೂಕಿನ ಅಮಲ್ದಾರರು ಆಕಾಶರಾಯರು ಕಂದಾಯದ ವಸೂಲಿಯಲ್ಲಿ ಗಟ್ಟಿಗನಾದ ಶ್ಯಾನುಭೋಗನಿಗೆ ತಾಲ್ಲೂಕು ಕಛೇರಿಯಲ್ಲಿ ಹೂವಿನ ಹಾರವನ್ನು ತರಿಸಿ ಇತರ ಶ್ಯಾನುಭೋಗರ ಎದುರಿಗೆ ಹಾಕಿ ಪ್ರಶಂಸಿಸುತ್ತಿದ್ದರು.

ಮಲ್ಲಿಗೆಹಳ್ಳಿಗೆ ಜಮಾಬಂದಿಗೆಬಂದಿದ್ದ ಅಮಲ್ದಾರ ಆಕಾಶರಾಯರು ಆ ವರುಷ ಕಂದಾಯದ ವಸೂಲಿಯಲ್ಲಿ ಡಿಸ್ಟ್ರಿಕ್ಟಿಗೆ ಹೆಸರಾದವರು. ಶ್ಯಾನುಭೋಗ ಪಟೇಲರಿಗೆ ೩೦೦ ರೂಪಾಯಿ ಜುಲ್ಮಾನೆ ವಿಧಿಸಿದರು. ಗ್ರಾಮದ ಕಂದಾಯವನ್ನೆಲ್ಲಾ ಖಿರದಿಗೆ ಜಮಾಕಟ್ಟಿ. ಅನಂತರ ಪೋಟಿಗೆಯಿಂದ ಅದನ್ನು ವಜಾಕೊಟ್ಟು, ತಾನು ನಿಧಾನವಾಗಿ ವಸೂಲ್ಮಾಡಿಕೊಳ್ಳಬೇಕೆಂಬ ಸಲಹೆಗೆ ಒಪ್ಪದಿದ್ದ ಮುಕುಂದೂರು ಶ್ಯಾನುಭೋಗನನ್ನು ಸಸ್ಪೆಂಡ್ ಮಾಡಿದರು. ಚಂದ್ರವಳ್ಳಿಯ ಪಟೇಲ ಆ ಊರಿನ ಕಾಳಮ್ಮನ ಕರೆಯುವ ಹಸುವನ್ನು ಕಂದಾಯದ ಬಾಕಿಗೆ ದೊಡ್ಡಿಗೆ ಕೂಡಲು ಹಿಂದೆಗೆದುದಕ್ಕೆ ಅವನನ್ನೂ ಸೆಸ್ಪೆಂಡ್ ಮಾಡಿದರು. ಅನೇಕ ಶ್ಯಾನುಭೋಗರ ಪೋಟಿಗೆಗಳನ್ನು ಕೊಡದೆ ಹಿಡಿದೇಬಟ್ಟರು. ಕಡಿಮೆ ಕಂದಾಯ ಕೊಡಬೇಕಾದ ರೈತರನ್ನು ಕಂಡರೆ ಜೋರುಮಾಡುತ್ತಿದ್ದರು. ಹೆಚ್ಚು ಕಂದಾಯ ಕೊಡಬೇಕಾದ ಸಾಹುಕಾರರನ್ನು ಕಂಡರೆ ಕಂದಾಯ ವಸೂಲಾಗುವ ವರೆಗೆ ವಿಧೇಯರಾಗುತ್ತಿದ್ದರು. ಒಟ್ಟಿನಲ್ಲಿ ಎಲ್ಲರನ್ನೂ ಹೆದರಿಸುತ್ತಿದ್ದರು.

ಹೀಗೆ ಜನರನ್ನು ಹುರಿದು ಕಂದಾಯವನ್ನು ವಸೂಲ್ಮಾಡಿದ್ದುದರಿಂದ ಡೆಪುಟಿ ಕಮಿಶನರೇ ಅಮಲ್ದಾರ ಆಕಾಶರಾಯರಿಗೆ ವಿಧೇಯರಾದವರಂತೆ ನಡೆಯುತ್ತಿದ್ದರು. ಅಮಲ್ದಾರರ ಎಲ್ಲಾ ಕೆಲಸಗಳಲ್ಲಿಯೂ, ಅವರು ಈ ರೀತಿ ಡಿಸ್ಟ್ರಿಕ್ಟಿಗೆ ಮೊದಲನೆಯವರಾಗಿದ್ದುದು ಗೊತ್ತಾಗುತ್ತಿದ್ದಿತು.

ತಾಲ್ಲೂಕಿನ ಪ್ರಜೆಗಳೆಲ್ಲಾ ಅಮಲ್ದಾರರ ಹೆಸರನ್ನು ಕೇಳಿದರೇ ನಡುಗುತ್ತಿದ್ದರು. ಅಮಲ್ದಾರರ ಎದುರಿಗೆ ಯಾವ ಬಾಕಿಯೂ ನಿಲ್ಲುವಂತೆ ಇರಲಿಲ್ಲ. ಅಮಲ್ದಾರರ ಹೆಸರನ್ನು ಕೇಳಿದ ಕೂಡಲೇ ಅನೇಕ ದಿವಸಗಳಿಂದ ಬಾಕಿ ನಿಂತಿದ್ದ ಮನೆಗಂದಾಯ, ಕೆರೆ ಕಾಂಟ್ರಿಬ್ಯುಶನ್, ಇರುವೆಟೇಶನ್ ಸೆಸ್ (ಇರ್ರಿಗೇಶನ್ ಸೆಸ್) ಇವೆಲ್ಲಾ ಉದುರಿಹೋಗುತ್ತಿದ್ದುವು. ಬಕನನ್ನು ಏಕಚಕ್ರನಗರಕ್ಕೆ ಬಾರದಂತೆ ಜನ ಹೇಗೆ ಇಟ್ಟಿದ್ದರೋ ಹಾಗೆ ಅಮಲ್ದಾರರು ಬರುತ್ತಾರೆ ಎಂದು ಕೇಳಿದರೇನೇ ಕಂದಾಯ ಕೊಡುವವರಿಗೆ ಗಾಬರಿಯಾಗಿ ಅಮಲ್ದಾರರು ದೂರದಲ್ಲಿರುವಾಗಲೇ ಬೇಬಾಕ್ ಮಾಡುತ್ತಿದ್ದರು. ಇವರ ಪರ್ಸೆಂಟೇಜ್ ಪ್ಲೇಗಿಗೆ ಸಿಕ್ಕಿದ ಅನೇಕ ಒಡರೈತರು "ಸಾಹೇಬ್ರ ಸಾವಾಸ ಬಲು ಕಷ್ಟ. ತಲೆ ಮೇಲೆ ಕೈಯಿಟ್ಟರೆ ಇಸ್ಯಾಕೆ ಭಸ್ಮಾಸುರ" ಎನ್ನುತ್ತಿದ್ದರು.

ಸಾಹೇಬರು ಮಲ್ಲಿಗೆಹಳ್ಳಿಗೆ ಜಮಾಬಂದಿಗೆ ಬಂದ ದಿವಸ ಯಾವ ಕೆಲಸವನ್ನೂ ಮಾಡದೆ ಸುಧಾರಿಸಿಕೊಂಡರು. ಅವರ ಆಕಾರಕ್ಕೆ ಆ ಒಂದು ಫರ್ಲಾಂಗು ನಡಿಗೆಯೇ ಸಾಕಾಗಿದ್ದಿತು. ಕುಳಿತ ಜಾಗದಲ್ಲಿಯೇ ಏನಾದರೂ ಕೆಲಸಮಾಡೋಣವೆಂದರೆ, ಅಮಲ್ದಾರರ ಮುಖ್ಯ ಅಸ್ತ್ರವಾದ ತಕರಾರು ತಃಖ್ತೆಯನ್ನೂ ಅದಕ್ಕೆ ಸಂಬಂಧಪಟ್ಟ ಅರ್ಜಿಗಳನ್ನೂ ಗುಮಾಸ್ತ ಮರೆತು ಬಂದಿದ್ದನು. ಅಮಲ್ದಾರರು ಅವನ ಮೇಲೆ ಸಿಕ್ಕಾಪಟ್ಟೆ ರೇಗಿ ತಾಲ್ಲೂಕು ಹೆಡ್‌ಕ್ವಾರ್ಟರಿಗೆ ಅವನನ್ನು ನಾದಿರ್‌ಷಾ ಶ್ಯಾನುಭೋಗನ ಬೈಸಿಕಲ್ಲು ಮೇಲೆ ಕಳುಹಿಸಿದರು. ಗುಮಾಸ್ತ ಕಛೇರಿಗೆ ಹೋಗಿ ತಕರಾರು ತಃಖ್ತೆಯ ಕಟ್ಟನ್ನು ಬೈಸಿಕಲ್ಲಿನ ಹಿಂದಲ ಕ್ಯಾರಿಯರ್‌ಗೆ ಕಟ್ಟಿಕೊಂಡು ಕಛೇರಿಯಿಂದ ಮಲ್ಲಿಗೆಹಳ್ಳಿಯ ಕಡೆಗೆ ಹೊರಟನು. ಮಲ್ಲಿಗೆಹಳ್ಳಿಯ ಊರಬಾಗಿಲಿಗೆ ಬಂದು ಗುಮಾಸ್ತ ಹಿಂದಿರುಗಿ ತನ್ನ ಕ್ಯಾರಿಯರನ್ನು ನೋಡಿದನು. ಅಲ್ಲಿ ಅವನು ಕಟ್ಟಿದ್ದ ಕಟ್ಟು ಇರಲಿಲ್ಲ. ಗುಮಾಸ್ತನಿಗೆ ಮೈನಡುಗಿತು ಬಾಯಿ ಒಣಗಿತು. ಕೈಕಾಲಿನಲ್ಲಿ ಶಕ್ತಿ ಉಡುಗಿತು. ಎದೆ ಡವಡವ ಎನ್ನತೊಡಗಿತು. ಬೈಸಿಕಲ್ಲು ಅವನ ಸ್ವಾಧೀನ ತಪ್ಪಿ ಅವನು ಬೀಳುವಂತಾದನು. ಅವನ ಕಣ್ಣಿಗೆ ಕತ್ತಲೆ ಕವಿಯಿತು. ಅವನು ಕಷ್ಟದಿಂದ ಬೈಸಿಕಲ್ಲಿನಿಂದ ಇಳಿದು ರಸ್ತೆಯ ಮರವನ್ನು ಒರಗಿಕೊಂಡು ನಿಟ್ಟುಸಿರು ಬಿಡುತ್ತಾ ಕುಳಿತುಬಿಟ್ಟನು

ಅವನು ಬೈಸಿಕಲ್ಲಿಗೆ ಕಟ್ಟಿದ್ದ ತಕರಾರು ತಃಖ್ತೆಯ ಗಂಟು ದಾರಿಯಲ್ಲಿ ಎಲ್ಲಿಯೋ ಬಿದ್ದು ಹೋಗಿದ್ದಿತು.

ಮಲ್ಲಿಗೆಹಳ್ಳಿ ನಾದಿರ್‌ಷಾ ಶ್ಯಾನುಭೋಗರು ಆ ದಾರಿಯಲ್ಲಿ ಹೋಗುತ್ತಿದ್ದವರು, ಮೃತ್ಯುವನ್ನು ಕಂಡು ಹೆದರಿದವನಂತೆ ಕುಳಿತಿದ್ದ ಗುಮಾಸ್ತನನ್ನು ನೋಡಿದರು. "ಏನು ಸ್ವಾಮಿ. ಇಲ್ಲಿ ಕೂತಿರಿ. ಸುಸ್ತಾಯಿತೆ ?" ಎಂದರು. ಗುಮಾಸ್ತನ ಬಾಯಲ್ಲಿ ಮಾತು ಹೊರಡಲಿಲ್ಲ. ಅವನು ಸುಮ್ಮನೆ ಆ ಎಂದನು. ಗುಮಾಸ್ತನ ಮುಖದಲ್ಲಿ ಪ್ರೇತಕಳೆ ಆಡುತ್ತಿತ್ತು. ಜನರ ಮುಖಸ್ವಭಾವವನ್ನು ಚೆನ್ನಾಗಿ ಬಲ್ಲ ಶ್ಯಾನುಭೋಗರು ಗುಮಾಸ್ತನ ಹತ್ತಿರಕ್ಕೆ ಬಂದರು. ಗುಮಾಸ್ತನಿಗೆ ಅವರಿಗೆ ಹೇಳಿದರೆ ಹೇಗೋ ಎಂಬ ಭಯ. ಅವನು ಅವರ ಮುಖವನ್ನೇ ದುರದುರನೆ ನೋಡಿದನು. ಶ್ಯಾನುಭೋಗ ಘಾಟಿ. ಅವನಿಗೆ ಗುಮಾಸ್ತ ಕಛೇರಿಗೆ ಯಾಕೆ ಹೋಗಿದ್ದ ಎಂಬುದು ಗೊತ್ತಿತ್ತು. ಅಲ್ಲದೆ ಕಛೇರಿಯ ಗುಮಾಸ್ತರಲ್ಲಿ ಗುಟ್ಟು ಯಾವುದಾದರೂ ಉಳಿಯುವುದುಂಟೆ ? ಶ್ಯಾನುಭೋಗ ಬೈಸಿಕಲ್ಲನ್ನು ನೋಡಿ "ಎಲ್ಲಿ ತಕರಾರು ತಃಖ್ತೆ ಅರ್ಜಿಗಳು. ಎಲ್ಲಾದರೂ ಕೆಡವಿಕೊಂಡು ಬಂದಿರಾ ?" ಎಂದನು. ಗುಮಾಸ್ತನಿಗೆ ಶ್ಯಾನುಭೋಗನ ತೀಕ್ಷ್ಣ ದೃಷ್ಟಿಯ ಎದುರಿಗೆ ನಿಲ್ಲುವುದು ಸಾಧ್ಯವಾಗಲಿಲ್ಲ. ಅವನ ಸಮಾಚಾರವನ್ನು ತಿಳಿದ ಶ್ಯಾನುಭೋಗನು "ಅಯ್ಯೋ ಇದಕ್ಕೆ ಯಾಕೆ ಯೋಚನೆ. ಆ ಹಾಳುಮುಂಡೆ ಕಾಗದ ಯಾರಿಗೆತಾನೆಬೇಕು. ದಾರೀಲೆ ಬಿದ್ದಿರುತ್ತದೆ. ನೆಟ್ಟಗೆ ಬಂದ ದಾರಿಯಲ್ಲಿ ಹಿಂದಕ್ಕೆ ಹೋಗಿ. ದಾರಿಯಲ್ಲಿ ಬರುವವರನ್ನೆಲ್ಲಾ ವಿಚಾರಿಸಿ. ಹಾಗೂ ಸಿಕ್ಕದಿದ್ದರೆ ಹೆದರಬೇಡಿ. ತಾಲ್ಲೂಕು ಕಛೇರಿಯ ಸಮುದ್ರಕ್ಕೆ ಹೋದ ಕಾಗದ ಯಾವುದು ತಾನೆ ಹಿಂದಿರುಗುತ್ತೆ. ತಾಲ್ಲೂಕು ಕಛೇರಿಯಿಂದ ಒಬ್ಬ ಮನುಷ್ಯನನ್ನೇ ಹಾರಿಸಿದರೂ ಅದು ತಿಳಿಯಬೇಕಾದರೆ ನಾಲ್ಕು ವರುಷಬೇಕು. ಹೀಗಿರುವಾಗ ಈ ಮುಂಡೆ ಸತ್ತ ಕಾಗದಗಳಿಗೆ ಯಾಕೆ ಯೋಚನೆ. ದಾರಿಯಲ್ಲಿ ಸಿಕ್ಕಿದರಂತೂ ಸರಿ. ಇಲ್ಲದಿದ್ದರೆ ಹೆದರಿಕೊಂಡು ಕೈಕಾಲು ಬುದ್ಧಿ ಕೆಡಿಸಿಕೊಳ್ಳಬೇಡಿ. ಧೈರ್ಯವಾಗಿ ಬನ್ನಿ ಎಲ್ಲ ಸರಿಮಾಡೋಣ" ಎಂದರು.

ಗುಮಾಸ್ತನಿಗೇನೋ ಹಿಂದಕ್ಕೆ ಹೋಗಿ ಹುಡುಕಬೇಕೆಂಬುದು

ಗೊತ್ತಿದ್ದಿತು. ಸ್ವಲ್ಪ ಸುಧಾರಿಸಿಕೊಂಡು ಹೋಗೋಣವೆಂದು ಅವನು ಕುಳಿತಿದ್ದನು. ಆದರೆ ಶ್ಯಾನುಭೋಗರ ಮಾತನ್ನು ಕೇಳಿ ಅವನಿಗೆ ಸ್ವಲ್ಪ ಧೈರ್ಯ ಬಂದಿತು. "ನನ್ನ ಕೆಲಸದ ಬಾಯಲ್ಲಿ ಇನ್ನು ಮಣ್ಣು" ಎಂದು ಕೊಂಡಿದ್ದ ಅವನಿಗೆ ಶ್ಯಾನುಭೋಗರು ಹೇಳಿದ ಮೇಲೆ ತನ್ನ ತಪ್ಪು ಅಷ್ಟು ದೊಡ್ಡದಾಗಿ ಕಾಣಲಿಲ್ಲ. ಹೇಗೋ ಶ್ಯಾನುಭೋಗರ ಮಾತನ್ನು ಜ್ಞಾಪಿಸಿ ಕೊಂಡಂತೆ ಅವನಿಗೆ ಧೈರ್ಯ ಹೆಚ್ಚಾಗುತ್ತಿದ್ದಿತು. ಅವನು ಮತ್ತೆ ತಾಲ್ಲೂಕು ಕಛೇರಿಯವರೆಗೆ ಹೋಗಿ ಎಲ್ಲಿಯೂ ಗಂಟನ್ನು ಕಾಣದೆ ಸತ್ತು ಸುಣ್ಣವಾಗಿ ರಾತ್ರಿ ೧೨ ಗಂಟೆ ವೇಳೆಗೆ ಮಲ್ಲಿಗೆಹಳ್ಳಿಗೆ ಬಂದು, ಗುಮಾಸ್ತರ ಕ್ಯಾಂಪಿನಲ್ಲಿ ಮಲಗಿದರೆ ಎಲ್ಲಿ ಮಾತುಕತೆಗಳಿಂದಾಗಲಿ ತನ್ನ ಮುಖಭಾವದಿಂದಾಗಲಿ ತನ್ನ ತಪ್ಪು ಹೊರಬೀಳುವುದೋ ಅಥವಾ ತಾನೇ ಮಾತಾಡಬೇಕಾಗುವುದೋ ಎಂದು ಬೆದರಿ ಆ ಅವೇಳೆಯಲ್ಲಿ ಶ್ಯಾನುಭೋಗನನ್ನು ಎಬ್ಬಿಸಿ ಅವನ ಮನೆಯಲ್ಲಿ ಮಲಗಿದನು. 'ಸ್ವಾಮಿ ದಾರಿಯಲ್ಲಿ ೩—೪ ಸಲ ಬಾವಿ ಬಿದ್ದು ಪ್ರಾಣ ಕಳೆದುಕೊಳ್ಳಬೇಕೆಂದು ಯೋಚಿಸಿದೆ. ಆದರೆ ಹೆಂಡತಿ ಮಕ್ಕಳ ಯೋಚನೆ ಬಂತು. ನೀವು ಕೊಟ್ಟಿದ್ದ ಧೈರ್ಯ ಜ್ಞಾಪಿಸಿಕೊಂಡು ಬಂದೆ. ಇನ್ನು ಆ ಹುಲಿಯ ಎದುರಿಗೆ ಹೇಗೆ ಹೋಗಲಿ" ಎಂದನು. ಶ್ಯಾನುಭೋಗನು "ಈಗ ನಿಮಗೆ ಸುಸ್ತಾಗಿದೆ. ಎರಡು ಸಲ ಬೈಸಿಕಲ್ಲಿನ ಮೇಲೆ ಹೋಗಿ ಬಂದಿದ್ದೀರಿ. ಮಲಗಿಕೊಳ್ಳಿ. ಯಾವ ಹುಲಿಯನ್ನು ಬೇಕಾದರೂ ಬೆಳಿಗ್ಗೆ ನೋಡೋಣ" ಎಂದನು. ಗುಮಾಸ್ತ ಮಲಗಿಕೊಂಡರೂ ಕನಸಿನಲ್ಲಿ ಸಹ ಒಂದೆರಡು ಸಲ ಹುಲಿಯನ್ನು ನೋಡಿ ಬೆಚ್ಚಿಬಿದ್ದನು.

ಬೆಳಗಾದ ಮೇಲೆ ಸಾಹೇಬರು ತಕರಾರುಗಳನ್ನು ವಿಚಾರಿಸಲು ಹಳ್ಳಿಗೆ ಹೊರಡಬೇಕೆಂದು ಯೋಚಿಸಿ ಗುಮಾಸ್ತನಿಗೆ ಹೇಳಿ ಕಳುಹಿಸಿದರು. ನಾದಿರ್‌ಷಾ ಶ್ಯಾನುಭೋಗರು ಹೋಗಿ "ಗುಮಾಸ್ತ ನಮ್ಮ ಮನೆಯಲ್ಲಿ ಅಸ್ವಾಸ್ಥವಸ್ತೆಯಲ್ಲಿ ಬಿದ್ದಿದ್ದಾರೆ. ಬೈಸಿಕಲ್ಲಿನ ಮೇಲೆ ಬರುವಾಗ ಈ ಊರು ಬಾಗಿಲಿನಲ್ಲಿಯೇ ತಲೆ ತಿರುಗಿತಂತೆ. ನಾನು ನೆನ್ನೆ ರಾತ್ರಿ ಕರ ಹುಡುಕಿಕೊಂಡು ಹೋಗಿದ್ದಾಗ ಊರು ಬಾಗಿಲಿನಲ್ಲಿ ಗುಮಾಸ್ತರು ಜ್ಞಾನವಿಲ್ಲದೆ ಬಿದ್ದಿದ್ದರು. ಬೈಸಿಕಲ್ಲು ಒಂದು ಕಡೆ ಬಿದ್ದಿತ್ತು. ಎತ್ತಿ ಕೊಂಡು ಬಂದು ಶೈತ್ಯೋಪಚಾರ ಮಾಡಿದೆ. ಬೆಳಿಗ್ಗೆ ಕಣ್ಣು ಬಿಟ್ಟಿದ್ದಾರೆ"

ಎಂದರು. ಅಮಲ್ದಾರರು "ನನಗೆ ಗೊತ್ತು. ಅವನು ಶುದ್ಧ ನಾಲಾಯಕ್ಕು. ಹೋಗಲಿ ಆ ತಕರಾರು ಕಟ್ಟುಗಳನ್ನೆಲ್ಲಾ ತೆಗೆದುಕೊಂಡು ಬನ್ನಿ" ಎಂದರು. ಶ್ಯಾನುಭೋಗನು "ಅಯ್ಯೋ ಸ್ವಾಮಿ. ಸಾಹೇಬರೇ ಹೋಗುವಾಗ ಗಡ್ಡಕ್ಕೆ ಅತ್ತರು ಎಂಬಂತೆ ಅವರ ಪ್ರಾಣವೇ ಹೋಗ್ತಾ ಇರುವಾಗ ಇನ್ನು ಆ ಸತ್ತ ಕಾಗದ ನೋಡುವರಾರು ? ಬೈಸಿಕಲ್ಲಿನಲ್ಲಿ ಕಟ್ಟು ಇಲ್ಲ. ಎಲ್ಲಿ ಕೆಡವಿದನೋ ಗೊತ್ತಿಲ್ಲ" ಎಂದರು. ಸಾಹೇಬರು "ಹಾಳಾಯ್ತು. ನಮ್ಮ ತಲೆಗೆ ಬಂತು. ನನ್ನ ಅಧಿಕಾರಕ್ಕೇ ಸಂಚಕಾರ ಬಂತೆಲ್ರಿ. ತಕರಾರು ಕಟ್ಟು ಪೂರ್ತಾ ಹೋದರೆ ಹೇಗರಿ ಮೇಲಧಿಕಾರಿಗಳಿಗೆ ಜವಾಬುಕೊಡುವುದು. ಅವ ಡಿಸ್‌ಮಿಸ್ ಆಗೋದಿರಲಿ. ನಾನೂ ಡಿಸ್‌ಮಿಸ್ ಆಗುತ್ತೇನೆಲ್ರಿ" ಎಂದರು. ಶ್ಯಾನುಭೋಗರು "ಮಹಾಸ್ವಾಮಿ ತಾವು ಅಷ್ಟು ಗಾಬರಿಪಡಬೇಕಾದುದಿಲ್ಲ. ಸದ್ಯ ಗುಮಾಸ್ತರ ಪ್ರಾಣ ಉಳಿಯಿತಲ್ಲ ಅದಕ್ಕೆ ಸಂತೋಷಪಡೋಣ. ಸುತ್ತಲ ಹಳ್ಳಿಗಳಲ್ಲಿ ತಕರಾರುಗಳು ಯಾರು ಯಾರ ಮೇಲೆ ಇದೆ ನನಗೆ ಗೊತ್ತು. ಏನು, ಪಂಚಾಂಗ ಹೋದರೆ ನಕ್ಷತ್ರ ಹೋಯಿತೆ ? ತಾವೇ ಕಣ್ಣಾರ ನೋಡಿ ನೋಡಿ ರೈತನನ್ನು ಕರಸಿ ಎಚ್ಚರಿಕೆಕೊಟ್ಟು ಶಿಕ್ಷೆ ವಿಧಿಸಿಬಿಡಿ" ಎಂದರು. ಅಮಲ್ದಾರರು "ಅದು ಹೇಗರಿ ಮಾಡುವುದು. ರೈತ ಅಪೀಲು ಹಾಕಿದರೆ, ಡೆಪ್ಯುಟಿ ಕಮಿಶನರು ರಿಕಾರ್ಡು ತರ್ತಾ ಎನ್ನುತ್ತಾರೆಲ್ಲ. ಈಗೇನು ರೈತರು ಪ್ರತಿಯೊಂದಕ್ಕೂ ಅಪೀಲು ಅಂತ ಹೊರಟು ಬಿಡುತ್ತಾರೆ ಹಾಳಾದವರಿಗೆಲ್ಲಾ ವಕೀಲರ ಕುಮ್ಮುಕು" ಎಂದರು.

ತಕರಾರು ತಖ್ತೆ ಎಂಬುದು ಶ್ಯಾನುಭೋಗರ ಬುಸುನಾಗಪ್ಪ. ರೈತನನ್ನು ಹೆದರಿಸುವುದಕ್ಕೆ ಅವರು ಇಟ್ಟಿರುವ ಅಸ್ತ್ರ ಅದು. ಶ್ಯಾನುಭೋಗ ತಂದ ತಕರಾರು ತಖ್ತೆಗೆ ಜುಲ್ಮಾನೆ ಹಾಕದೆ ಇದ್ದರೆ ಅವನು ಮುಂದೆ ತಕರಾರನ್ನು ಎಲ್ಲಿ ತರುವುದೇ ಇಲ್ಲವೊ ಎಂದು ಅಮಲ್ದಾರರು ಬಂದವುಗಳಿಗೆಲ್ಲಾ ಜುಲ್ಮಾನೆ ವಿಧಿಸಿಯೇ ವಿಧಿಸುತ್ತಾರೆ. ಈ ಜುಲ್ಮಾನೆ ಹಣ ಸಮಯಾನುಸಾರ ಸಾವಿರಾರು ರೂಪಾಯಿಗಳಿಗೆ ಹೋಗುತ್ತೆ. ಗ್ರಾಮದ ಕಂದಾಯ ಇಷ್ಟು. ತಕರಾರು ತಖ್ತೆ ಜುಲ್ಮಾನೆ ಇಷ್ಟು ಎಂದು ಕೆಲವು ಅಮಲ್ದಾರರು ಹೆಮ್ಮೆಪಡುತ್ತಾರೆ. ಚಂದ್ರವಳ್ಳಿ ಶ್ಯಾನುಭೋಗ, 'ಶ್ಯಾನುಭೋಗ ಎನ್ನುವವನು ಇಕ್ಕಳ

ತಂಡಸ. ರೈತನೇ ಹುಳು. ಸರ್ಕಾರವೇ ಬೆಂಕಿ. ಕೋರ್ಟು ಕಛೇರಿಗಳೇ ಬೆಂಕಿ. ಈ ಇಕ್ಕಳದಿಂದ ಹುಳುಗಳನ್ನು ಆ ಬೆಂಕಿಗೆ ಹಾಕುತ್ತಾರೆ' ಎಂದು ಹೇಳುತ್ತಿದ್ದ ಅರ್ಥವೂ ಇದೆಯೆ. ತಕರಾರು ತಖ್ತೆಯನ್ನು ಬಿಟ್ಟ ಶ್ಯಾನುಭೋಗ ಹಲ್ಲುಮುರಿದ ಹಾವಿನಂತೆ; ತನ್ನ ಮನೆಗೆ ಅವರೆಕಾಯಿ ತರಕಾರಿ ಬೇಕಾದರೆ, ಶೇಕದಾರರಿಗೆ ಆಗಾಗ್ಗೆ ಹಾಲು ಮೊಸರು ಬೆಣ್ಣೆ ಬೇಕಾದರೆ, ಅಮಲ್ದಾರರ ಕುದುರೆಗೆ ಹುರುಳಿಯೂ ಅವರು ಬಂದಾಗ ಹಳ್ಳಿ ತಿರುಗಲು ಗಾಡಿಯೂ ಬೇಕಾದರೆ ತಕರಾರು ತಖ್ತೆಗಳು ಇರಲೇಬೇಕು. ತಕರಾರು ತಖ್ತೆ ಜ್ಞಾಪಕ ಬಂದಾಗ ಅಮಲ್ದಾರರು "ಇದ್ದ ಮ್ಯಾಜಿಸ್ಟ್ರೇಟ್ ಪವರ್ ಹೊಯ್ತು. ಈಗ ನಾವು ಹಳ್ಳಿಗಳಿಗೆ ಹೋದರೆ ಒಂದು ನಾಯಿ ಸಹ ಬಗಳುವುದಿಲ್ಲ. ಪರ್ಸೆಂಟೇಜ್ ಕೊಡದಿದ್ದರೆ ಸರ್ಕಾರದವರು ಗಳಿಗೆಗೆ ಒಂದು ಸಲ ನಾಲಾಯಕ್ಕು ಎನ್ನುತ್ತಾರೆ. ಸದ್ಯ ತಕರಾರು ತಖ್ತೆ ಇರುವುದರಿಂದ ಕ್ಯಾಂಪುಗಳಲ್ಲಿ ಸ್ವಲ್ಪ ಉಪ್ಪು ಹುಟ್ಟುತ್ತೆ' ಎನ್ನುತ್ತಿದ್ದರು. ಅಮಲ್ದಾರರು "ರೈತರು ಅಪೀಲು ಹೋದರೆ ಏನುಮಾಡಲಿ" ಎಂಬುದಾಗಿ ಕೇಳಿದಾಗ ಅದನ್ನೇ ಕಾಯ್ದುಕೊಂಡು ಕೂತಿದ್ದ ಶ್ಯಾನುಭೋಗರು "ಮಹಾಸ್ವಾಮಿ. ತಮ್ಮ ಅಪ್ಪಣೆ ಮೇಲೆ ಅಪೀಲು ಹೋಗುವವರು ಯಾರು? "ತಮ್ಮ ಯಾವ ಆರ್ಡರು ತಾನೆ ಅಪೀಲಿನಲ್ಲಿ ಇದುವರೆಗೆ ಹೆಚ್ಚು ಕಡಿಮೆಯಾಗಿದೆ. ಅಪೀಲಿಗೆ ಅವಕಾಶವೇ ಇಲ್ಲದಂತೆ ಆರ್ಡರು ಅಪ್ಪಣೆಮಾಡಿಬಿಡಿ ಸ್ವಾಮಿ" ಎಂದರು. ಅಮಲ್ದಾರರಿಗೆ ಪೀಕಲಾಟಕ್ಕೆ ಬಂದಿತು. "ಅಲ್ಲಿ ೬೦-೭೦ ತಕರಾರು ಅರ್ಜಿಗಳಿವೆ. ಒಬ್ಬೊಬ್ಬರೂ ಬೇಲಿ ಒತ್ತಿಸಿದ್ದಾರೆ, ಸರ್ಕಾರಿ ನೀರನ್ನು ಉಪಯೋಗಿಸಿದ್ದಾರೆ. ಬೀಳು ಜಮೀನಿನಲ್ಲಿ ಪೈರು ಮಾಡಿದ್ದಾರೆ. ನೀವು ಹೇಳುವುದಕ್ಕೆ ಅರ್ಥವೇ ಇಲ್ಲ. ಅಪೀಲು ಹೋಗದಂತೆ ಮಾಡಬೇಕಾದರೆ ಒಂದು ಕಾಸನ್ನೂ ಜುಲ್ಮಾನೇನೆ ಹಾಕಕೂಡದು. ಮೂರು ಕಾಸು ಜುಲ್ಮಾನೆ ವಿಧಿಸಿದರೆ ಅದಕ್ಕೂ ಅಪೀಲು ಹೋಗಿಯೇ ಹೋಗುತ್ತಾರೆ" ಎಂದರು. ಶ್ಯಾನುಭೋಗರು "ನಾನೂ ಹೇಳುವುದೂ ಅದೇ ಸ್ವಾಮಿ. ತಕರಾರು ತಖ್ತೆಯವರನ್ನೆಲ್ಲಾ ಕರೆಸಿ ಎಚ್ಚರಿಕೆ ಕೊಟ್ಟು ಮುಂದೆ ಹಾಗೆ ಮಾಡದಂತೆ ಹೇಳಬೇಕು. ಅಲ್ಲದೆ ಸ್ವಾಮಿ ಈ ಎಲ್ಲಾ ತಕರಾರು ಅರ್ಜಿಗಳಲ್ಲೂ ರೈತನದು ತಪ್ಪಿಲ್ಲ. ನಮ್ಮ ಶ್ಯಾನುಭೋಗರ

ಸ್ವಭಾವ ಸ್ವಾಮಿಯವರಿಗೆ ಗೊತ್ತಿದೆ. ಇದರಲ್ಲಿ ಇನ್ನೊಂದು ವಿಚಾರವೂ ಇದೆ. ಈ ತಕರಾರು ತಖ್ತೆ ಗೈರುವಿಲೆ ಆದುದು ತಮ್ಮ ಆಫೀಸಿನಲ್ಲಿರುವ ಬಾಕಿ ಗುಮಾಸ್ತರಿಗೆ ತಿಳಿಯಬಾರದು ಸ್ವಾಮಿ. ಅಭಿವೃದ್ಧಿಗೆ ಬರುತ್ತಿರುವ ಮನುಷ್ಯನಿಗೆ ಎಲ್ಲೆಲ್ಲೂ ಶತ್ರುಗಳು ಇರುತ್ತಾರೆ. ಆಗ ಅವನು ಹಲ್ಲುಗಳ ನಡುವೆ ನಾಲಿಗೆ ಹೇಗೋ ಹಾಗೆ ಎಚ್ಚರಿಕೆಯಿಂದ ಇರಬೇಕು'' ಎಂದರು.

ಅಮಲ್ದಾರರು ಸ್ವಲ್ಪ ಹೊತ್ತು ಯೋಚಿಸಿದರು. ಮೊದಲು ತಕರಾರು ತಖ್ತೆ ಹಾಳುಮಾಡಿದ ಗುಮಾಸ್ತನನ್ನು ತಿನ್ನುವಷ್ಟು ಕೋಪ ಅವರಿಗೆ ಉಂಟಾಯಿತು. ಅನಂತರ ಜುಲ್ಮಾನೆ ಹಾಕುವ ಅವಕಾಶ ಹೋಯಿತಲ್ಲ ಎಂದು ಪಶ್ಚಾತ್ತಾಪವುಂಟಾಯಿತು. ಈ ಬಡ ಶ್ಯಾನುಭೋಗ ನನ್ನ ಮೇಲೆ ತನಗೆ ಒಂದು ಶಕ್ತಿ ಒಂದಿರುವಂತೆ ಮಾತನಾಡುತ್ತಾನೆ. ಈಗ ಸದ್ಯಕ್ಕೆ ನನ್ನ ಕೈ ಸ್ವಲ್ಪ ಬೀಳಾಗಿದೆ. ಇವನು ಶ್ಯಾನುಭೋಗ ಎಂಬುದನ್ನು ಮರೆತರೆ, ಇವನು ಹೇಳುತ್ತಿರುವ ಮಾತು ಸರಿಯಾಗಿ ಕಾಣುತ್ತದೆ ಎಂದು ಕೊಂಡು ''ಹೋಗಲಿ. ಈ ವಿಚಾರ ಗುಟ್ಟಾಗಿಡಿ. ಆ ಹಾಳು ಅಪ್ರಯೋಜಕ ಗುಮಾಸ್ತನಿಗೆ ಏನೂ ಹೇಳಬೇಡಿ. ನನ್ನ ಕಣ್ಣಿಗೆ ಅವನು ಈವತ್ತು ನಾಳೆ ಬೀಳದಿರಲಿ. ಬಿದ್ದರೆ ಅವನ ಜೀವಕ್ಕೆ ನಾನು ಹೊಣೆಯಲ್ಲ. ಎಲ್ಲಿ ಗಾಡಿ ತರಿಸಿ. ಹತ್ತಿರ ಹತ್ತಿರದ ಹಳ್ಳಿಗಳಿಗೆ ಹೋಗಿ ಬರೋಣ. ಯಾವ ಯಾವ ಹಳ್ಳಿಗಳಲ್ಲಿ ತಕರಾರು ಇದೆಯೋ ಅವುಗಳಲ್ಲಿ ಗಾಡಿ ಸುಲಭವಾಗಿ ಹೋಗುವುದಕ್ಕೆ ದಾರಿ ಇರುವ ಹಳ್ಳಿಗಳಿಗೆ ಹೋಗಿ ಬರೋಣ. ಶ್ಯಾನುಭೋಗರನ್ನು ಆಯಾ ಊರುಗಳಲ್ಲಿ ಇರುವಂತೆ ಹೇಳಿ ಹಿಂದಿರುಗುವ ವೇಳೆಗೆ ಮಧ್ಯಾಹ್ನವಾಗುತ್ತೆ. ಬಿಸಿಲು ಜೋರಾಗಬಹುದು. ದಾರಿಯಲ್ಲಿ ತೋಟ ಗೀಟ ಸಿಕ್ಕುತ್ತೋ....'' ಎಂದರು ಶ್ಯಾನುಭೋಗರು ''ಅದೆಲ್ಲಾ ಪಟೇಲರು ಏರ್ಪಾಡು ಮಾಡುತ್ತಾರೆ'' ಎಂದು ಹೇಳಿ ಮನೆಗೆ ಬಂದರು. ಗುಮಾಸ್ತನು ''ಸ್ವಾಮಿ, ನಿಮ್ಮಿಂದ ನಾನು ಬದುಕಿದೆ'' ಎಂದನು.

ಅಧಿಕಾರಿಗಳು ಯಾವಾಗ ಮಲ್ಲಿಗೆಹಳ್ಳಿಗೆ ಬಂದರೂ ಜತೆಯಲ್ಲಿ ನಾಲ್ಕಾರು ಹಳ್ಳಿಗಳನ್ನಾದರೂ ಹೋಗಿ ನೋಡದೆ ಇರುತ್ತಿರಲಿಲ್ಲ. ಶ್ಯಾನುಭೋಗರು ''ಒಂದು ಹಳ್ಳಿಗೆ ಹೋಗವುದಕ್ಕೂ ರಸ್ತೆಯಿಲ್ಲ. ರೈತರೆಲ್ಲಾ ಇಲ್ಲೀ ಬರುತ್ತಾರೆ. ಆ ದಾರಿಯಲ್ಲಿ ಒಂದು ಸಲ ಹೋಗಿ ಬರಬೇಕಾದರೆ ಮೈ ಮೂಳೆಗಳು ಮುರಿಯುತ್ತವೆ. ಗಾಡಿ ಪುಡಿ ಪುಡಿಯಾಗುತ್ತದೆ.

ಎತ್ತಿನ ಕಾಲು ಉಳುಕುತ್ತದೆ" ಎಂದು ಹೇಳಿದರೂ ಅಧಿಕಾರಿಗಳು "ಇಲ್ಲ. ನಾವು ತಿಂಗಳಿಗೆ ಇಷ್ಟು ಹಳ್ಳಿ ನೋಡಿದೆವೆಂದು ಸರ್ಕಾರಕ್ಕೆ ತಿಳಿಸಲೇ ಬೇಕು. ಪ್ರತಿ ತಿಂಗಳೂ ರಸ್ತೆ ಸಮೀಪದ ಹಳ್ಳಿಗಳನ್ನೇ ಬರೆಯುವುದಕ್ಕೆ ಆಗುವುದಿಲ್ಲ" ಎನ್ನುತ್ತಿದ್ದರು. ಅಧಿಕಾರಿಗಳು ಮಲ್ಲಿಗೆಹಳ್ಳಿಯಲ್ಲಿ ಯಾವಾಗ ಕ್ಯಾಂಪು ಮಾಡಿದರೂ ಇವರನ್ನು ಯಾವ ಹಳ್ಳಿಗೆ ಕರೆದು ಕೊಂಡು ಹೋಗಬೇಕು ಎಂಬುದೇ ಶ್ಯಾನುಭೋಗರಿಗೆ ಯೋಚನೆಯಾಗು ತ್ತಿದ್ದಿತು. ಯಾಕೆಂದರೆ ಮಲ್ಲಿಗೆಹಳ್ಳಿಯಿಂದ ಯಾವ ಹಳ್ಳಿಗೂ ರಸ್ತೆ ಯಿರಲಿಲ್ಲ. ಕಷ್ಟಪಟ್ಟು ಯಾವುದಾದರೂ ಒಂದು ಹಳ್ಳಿಯನ್ನು ಸೇರಿದರೆ ಅಲ್ಲಿಂದ ಮುಂದಲ ಹಳ್ಳಿಗೆ ಹೋಗಲು ದಾರಿಯಿರಲಿಲ್ಲ. ಸಾಮಾನ್ಯ ವಾದ ರಸ್ತೆಯಲ್ಲಿ ಸುಲಭವಾಗಿ ಇಪ್ಪತ್ತು ಮೈಲಿ ಹೋಗುತ್ತಿದ್ದ ಎತ್ತು, ಎರಡು ಕಡೆಯೂ ಮೂರು ಅಡಿ ಹಳ್ಳಬಿದ್ದಿದ್ದ ರಸ್ತೆಯಲ್ಲಿ ಎರಡು ಮೈಲಿ ಹೋಗುವವೇಳೆಗೆ ಸುಸ್ತಾಗಿ ಮುಂದಕ್ಕೂ ಹೋಗದೆ ಹಿಂದಕ್ಕೂ ಹೋಗದೆ ನಿಂತುಬಿಡುತ್ತಿದ್ದಿತು. ರೆವಿನ್ಯೂ ಅಧಿಕಾರಿಗಳು, ಡಿಪಿಡಬ್ಲ್ಯೂ, ಇಂತಹವರು ಅಕಸ್ಮಾತ್ತಾಗಿ ಆ ಕಡೆಗಳಿಗೆ ಹೋಗಬೇಕಾಗಿ ಬಂದರೆ, ಅರ್ಧದೂರ ಹೋಗಿ ಹಾಗೇ ಹಿಂದಿರುಗಿಬಿಡುತ್ತಿದ್ದರು. ಅಲ್ಲಿಂದ ಮುಂದೆ ಅವರಿಗೆ ಅದರ ಯೋಚನೆಯೇ ಬರುತ್ತಿರಲಿಲ್ಲ. ರಸ್ತೆಯಿಲ್ಲ ಎಂದು ಎಷ್ಟು ಹೊಡೆದುಕೊಂಡರೂ ರೈತರ ಮಾತು ಯಾರ ಗಮ ನಕ್ಕೂ ಬೀಳುತ್ತಿರಲಿಲ್ಲ. ಕೆಲವು ಉದ್ಧತರಾದ ಅಧಿಕಾರಿಗಳಂತೂ "ಕಂಟ್ರಿ ಕಾರ್ಟು ಹೋಗದ ದಾರಿ ಯಾವುದೂ ಇಲ್ಲ. ಯಾವ ಜಾಡಿ ನಲ್ಲಿ ಬೇಕಾದರೂ ಹೋಗುತ್ತೆ. ಇಲ್ಲಿಗೆಲ್ಲಾ ರಸ್ತೆ ರಸ್ತೆ ಅಂತ ಕೂತು ಕೊಂಡರೆ ಪೂರೈಸುವುದಿಲ್ಲ" ಎನ್ನುತ್ತಿದ್ದರು. ಅಮಲ್ದಾರರು ಸರ್ಕಾರಿ ಕಂದಾಯವನ್ನು ಟ್ರೆಜರಿಗೆ ಕಟ್ಟಿಸುತ್ತಿದ್ದರು. ಗ್ರಾಮ ಪಂಚಾಯ್ತಿ ಕಂದಾಯವನ್ನೂ ವಸೂಲ್ಮಾಡಿ ಟ್ರೆಜರಿಗೆ ಕಟ್ಟಿಸಿಬಿಡುತ್ತಿದ್ದರು. ಕೆಲವು ಶ್ಯಾನುಭೋಗರಂತೂ "ಗ್ರಾಮಪಂಚಾಯ್ತಿ ಕಂದಾಯ ನಾನು ವಸೂ ಲ್ಮಾಡಿ ಟ್ರೆಜರಿಗೆ ಕಟ್ಟುವುದೇ ಹೊರತು, ಟ್ರೆಜರಿಯಿಂದ ಒಂದು ಕಾಸನ್ನೂ ಹಿಂದಕ್ಕೆ ತೆಗೆದುಕೊಂಡಿಲ್ಲ. ಅಲ್ಲಿ ಹತ್ತು ರೂಪಾಯಿ ತೆಗೆದು ಕೊಂಡರೆ ನಮ್ಮ ಕೈಗೆ ಬರುವ ಹೊತ್ತಿಗೆ ಮೂರು ರೂಪಾಯಿ ಬರು ತ್ತದೆ" ಎನ್ನುತ್ತಿದ್ದರು. ಹೀಗೆ ಈ ತಂದೆ ತಾಯಿಯ ಜಗಳದಲ್ಲಿ ಕೂಸು

ಬಡವಾಗಿ, ಪಂಚಾಯ್ತಿ ಹಣ ಒಂದೊಂದು ಗ್ರಾಮದ್ದೂ ಸರ್ಕಾರದಲ್ಲಿ ಸಾವಿರಾರು ರೂಪಾಯಿ ನಿಂತುಹೋಯಿತು. "ಸರ್ಕಾರದ ಉತ್ಪತ್ತಿ ಹೆಚ್ಚಿಸಿಕೊಳ್ಳಲು ಪಂಚಾಯ್ತಿ ಕಂದಾಯ ಒಂದು ದಾರಿಯಾಯಿತು" ಎಂದು ರೈತರು ಹಾಸ್ಯಮಾಡುವುದು ಪ್ರತಿಗ್ರಾಮದಲ್ಲಿಯೂ ವಾಡಿಕೆಯಾಯಿತು.

ಸ್ವಲ್ಪ ಗಾಡಿ ಜಾಡು ಇದ್ದ ಗ್ರಾಮಕ್ಕೇ ಪ್ರತಿ ಅಧಿಕಾರಿಗಳೂ ಹೋಗುತ್ತಿದ್ದರು. ಒಂದು ಸಲ ಜಿಲ್ಲಾಧಿಕಾರಿಗಳು, ಸಬ್‌ಡಿವಿಜನ್ ಅಮಲ್ದಾರ್ ಇಬ್ಬರನ್ನೂ ಕರೆಸಿ "ಏನ್ರಿ ಈ ಕಾಲ್ಲೂಕಿನಲ್ಲಿ ಈ ಹಳ್ಳಿಗಳೇ ಹೊರತು ಬೇರೆ ಹಳ್ಳಿಗಳಿಲ್ಲವೇನ್ರಿ. ನಿಮ್ಮ ಡೈರಿಯಲ್ಲಿಯೂ ಈ ಗ್ರಾಮಗಳೇ, ಅಮಲ್ದಾರ್ರ ಡೈರಿಯಲ್ಲಿಯೂ ಈ ಗ್ರಾಮಗಳೇ, ಶೇಕದಾರನ ಡೈರಿಯಲ್ಲಿಯೂ ಈ ಗ್ರಾಮಗಳೇ. ನಾನು ಟೂರ್ ಹೋಗಿದ್ದಾಗಲೂ ಈ ಹಳ್ಳಿಗಳಿಗೇ ಹೋಗಿದ್ದೆ. ಈ ತಾಲ್ಲೂಕಿನ ಮುನ್ನೂರು ಹಳ್ಳಿಗಳ ಪೈಕಿ ಎಲ್ಲಾ ಅಧಿಕಾರಿಗಳೂ ಈ ಮೂರು ಹಳ್ಳಿಗಳಿಗೇ ಹೋಗುವುದಾಯಿತು" ಎಂದರು. ಆದರೆ ಸಬ್‌ಡಿವಿಜನ್‌ರಾಗಲಿ ಅಮಲ್ದಾರರಾಗಲಿ "ಉಳಿದ ಹಳ್ಳಿಗಳಿಗೆ ರಸ್ತೆಗಳಿರಲಿಲ್ಲ" ಎಂದು ಹೇಳಲಿಲ್ಲ. "ರಸ್ತೆ ಇಲ್ಲ" ಎಂಬ ಮಾತನ್ನು ಹೇಳಕೂಡದೆಂಬುದು ಅವರಲ್ಲಿ ಒಬ್ಬರಿಗೊಬ್ಬರಿಗೆ ಸಂಕೇತವಾಗಿದ್ದಂತೆ ತೋರಿತು. ಅವರು "ಈ ಸಲ ಅಲ್ಲಿ ಸ್ವಲ್ಪ ಹೆಚ್ಚು ಕೆಲಸ ಬಿದ್ದಿತ್ತು" ಎಂದುಕೊಂಡು ಸುಮ್ಮನಾದರು.

ಅಧಿಕಾರಿಗಳು ಹಳ್ಳಿಗಳಿಗೆ ಹೊರಡುತ್ತೇವೆಂದರೆ, ಯಾವ ರೈತನೂ ಗಾಡಿ ತರುತ್ತಿರಲಿಲ್ಲ. ಅದರಲ್ಲಿ ಅಧಿಕಾರಿಗಳನ್ನು ತಿರಸ್ಕರಿಸುವ ಮನೋಭಾವ ರೈತರಿಗೆ ಇರಲಿಲ್ಲ. ತಮ್ಮ ವಸ್ತುಗಳನ್ನು ಸುರಕ್ಷಿತವಾಗಿಟ್ಟುಕೊಳ್ಳಬೇಕು ಎಂಬುದು ಮಾತ್ರ ಅವರ ಅಭಿಪ್ರಾಯವಾಗಿತ್ತು. ಅಮಲ್ದಾರರು ಬರುವುದಕ್ಕೆ ಮೂರು ದಿವಸ ಮುಂಚೆ ರೈತರು ತಮ್ಮ ಎತ್ತು ಗಾಡಿಗಳನ್ನು ನೆಂಟರ ಮನೆಗೆ ಸಾಗಿಸಿಬಿಡುತ್ತಿದ್ದರು. ಕೆಲವರು ಗಾಡಿಯ ಪಟ್ಟಿ ಕಿತ್ತು ಹೊಸದಾಗಿ ಪಟ್ಟೀ ಬಿಡಿಸುತ್ತಿದ್ದರು. ಇದಕ್ಕೆ ಮುಖ್ಯವಾಗಿ ಎರಡು ಕಾರಣಗಳಿದ್ದುವು. ಹಳ್ಳಿಗಳಿಗೆ ರಸ್ತೆ ಪೂರ್ಣವಾಗಿ ಇಲ್ಲದುದರಿಂದ ಆ ಮಾರ್ಗದಲ್ಲಿ ಹಳ್ಳ ತಿಟ್ಟುಗಳಲ್ಲಿ ಹೋದರೆ ಎತ್ತು

ಗಾಡಿ ಖಂಡಿತ ಉಳಿಯುತ್ತಿರಲಿಲ್ಲ. ಎತ್ತು ಗಾಡಿ ಅಧಿಕಾರಿಗಳ ಕೈಗೆ ಸಿಕ್ಕಿದ ಮೇಲೆ ಅದರ ಅವಸ್ಥೆ ಯುದ್ಧಕ್ಕೆ ಹೋದ ಸಿಪಾಯಿಯಂತೆ. ಅದರ ಮೇಲೆ ಎಷ್ಟು ಜನ ಬೇಕಾದರೂ ಕೂತುಬಿಡುತ್ತಿದ್ದರು. ಗಾಡಿಯವನನ್ನು ಇಳಿಸಿ ಗಾಡಿಹೊಡೆಯಲು ಬೇರೆ ಒಬ್ಬನನ್ನು ಕೂರಿಸುತ್ತಿದ್ದರು. ರೈತ ತನ್ನ ಕಣ್ಣಿಗಿಂತ ಹೆಚ್ಚು ಅಕ್ಕರೆಯಿಂದ, ಮಕ್ಕಳಿಗೆ ಕೊಡುವ ಹಾಲನ್ನೂ ಹೆಂಡತಿಗೆ ಉಡುವ ಸೀರೆಯನ್ನೂ ತಪ್ಪಿಸಿ ತಿಂಡಿ ಹಾಕಿ ಬೆಳಗಿನಿಂದ ರಾತ್ರಿಯವರೆಗೆ ಬದುಗಳ ಮೇಲೆ ಹಿಡಿದುಕೊಂಡು ಮೆಯಿಸಿದ್ದ ಎತ್ತುಗಳನ್ನು ಸಾಯಂಕಾಲದವರೆಗೆ ಒಂದೇ ಸಮನಾಗಿ ಗಾಡಿಗೆ ಹೂಡಿಬಿಡುತ್ತಿದ್ದರು. ಇವೆಲ್ಲಾ ಆದರೂ ಚಿಂತೆಯಿಲ್ಲ ಎಂದರೆ ಬಂದ ಅಧಿಕಾರಿಗೆ ಎತ್ತು ಗಾಡಿ ಇಂತಹ ರೈತನದು ಎಂಬುದು ಕೂಡ ಗೊತ್ತಾಗುತ್ತಿರಲಿಲ್ಲ. ಅದರ ಪ್ರಶಂಸೆಯನ್ನೆಲ್ಲಾ ಶ್ಯಾನುಭೋಗ ಪಟೇಲರೇ ವಹಿಸಿಕೊಳ್ಳುತ್ತಿದ್ದರು. "ರೈತ ಈ ರೀತಿ ತನ್ನ ಸರ್ವಸ್ವವನ್ನೂ ಅಮಲ್ದಾರರ ಉಪಯೋಗಕ್ಕೆ ಕೊಡುತ್ತಿದ್ದರೂ ಸಮಯದಲ್ಲಿ ಅವನನ್ನು ಅಮಲ್ದಾರರು ಸಂರಕ್ಷಿಸುವುದಿಲ್ಲ. ಶ್ಯಾನುಭೋಗ ಪಟೇಲ ಅಮಲ್ದಾರ ಎಲ್ಲರೂ ಒಂದಾಗಿ ಅವನನ್ನು ಮಟ್ಟಹಾಕುತ್ತಾರೆ—ಎಲ್ಲರೂ ಒಟ್ಟಾಗಿ ಅವನ ಉಳುವ ಎತ್ತನ್ನೂ ಉಣ್ಣುವ ರಾಗಿಯನ್ನೂ ಕರೆಯುವ ಹಸುವನ್ನೂ ಹರಾಜುಹಾಕಿ ಕಂದಾಯವನ್ನು ಒಂದು ಗಳಿಗೆಯೂ ವಾಯಿದೆ ಕೊಡದೆ ವಸೂಲ್ಮಾಡುತ್ತಾರೆ. ಈ ಕಾರಣದಿಂದ ಯಾವ ರೈತನಿಗೂ ಅಧಿಕಾರಿಗಳಲ್ಲಿ ನಂಬಿಕೆಯೂ ವಿಶ್ವಾಸವೂ ಉಂಟಾಗುವುದಿಲ್ಲ. ಇದೊಂದು ದರೋಡೆಗಾರರ ಗುಂಪು. ಒಬ್ಬೊಬ್ಬನ ಕೈಯಲ್ಲಿ ಒಂದೊಂದು ಚೀಲ ಇರುತ್ತದೆ. ಅವರವರಿಗೆ ದೊರೆತಷ್ಟು ಅವರವರು ತುಂಬಿಕೊಂಡು ಹೋಗುತ್ತಾರೆ. ಶ್ಯಾನುಭೋಗನ ಚೀಲ ಸಣ್ಣದು. ಅಮಲ್ದಾರ್ರ ಚೀಲ ದೊಡ್ಡದು. ಡೆಪ್ಯುಟಿಕಮಿಶನರ ಚೀಲ ಅದಕ್ಕೂ ದೊಡ್ಡದು" ಎಂಬ ಹರಿದಾಸರ ಮಾತಿನಲ್ಲಿ ಅವನ ನಂಬಿಕೆ ದಿನ ದಿನಕ್ಕೂ ಅನುಭವದಿಂದ ಹೆಚ್ಚು ಹೆಚ್ಚು ದೃಢವಾಗುತ್ತದೆ.

ಅಮಲ್ದಾರ ಆಕಾಶರಾಯರು ಊರಿಗೆ ಬಂದ ಮೂರನೆ ಬೆಳಿಗ್ಗೆ "ತಕರಾರು ತಖ್ತೆಯನ್ನು ಪರೀಕ್ಷಿಸಿದಂತೆಯೂ ಆಯಿತು. ಹಳ್ಳಿಗಳಿಗೆ ಹೋಗಿ ಬಂದಂತೆಯೂ ಆಯಿತು" ಎಂದುಕೊಂಡು ಮಲ್ಲಿಗೆಹಳ್ಳಿ

ಶ್ಯಾನುಭೋಗರಿಗೆ "ಗಾಡಿ ತರಿಸಿ" ಎಂದರು. ಶ್ಯಾನುಭೋಗರು ಮಲ್ಲಿಗೆಹಳ್ಳಿ ತೋಪನಿಗೆ ಹೇಳಿಕಳುಹಿಸಿದರು. ತೋಪನ ಹೆಸರು ತಕರಾರು ತಖ್ತೆಯಲ್ಲಿ ಸೇರಿತ್ತು. ಅವನು ಹಿಂದೆ ಮೂರು ಯಾತ ಕಟ್ಟಿ ಕೆರೆ ನೀರನ್ನು ಸರ್ಕಾರಿ ಅಪ್ಪಣೆಯಿಲ್ಲದೆ ಈರುಳ್ಳಿ ಬೆಳೆಯಲು ಉಪಯೋಗಿಸಿದಾಗ ಅವನಿಗೆ ೫೦ ರೂ. ಜುಲ್ಮಾನೆ ಬಿದ್ದಿತ್ತು. ತೋಪ "ಜುಲ್ಮಾನೆ ಹಾಕಿರುವುದು ಹೆಚ್ಚು. ಈ ಉದ್ಯಮದಲ್ಲಿ ನನಗೆ ಮುನ್ನೂರು ರೂಪಾಯಿ ನಷ್ಟವಾಗಿದೆ. ನಾನು ಪಾಪರ್ ಆದೆ. ಪೈರು ಬೆಳೆದಿದ್ದರೆ ಈ ಜುಲ್ಮಾನೆ ಕೊಡಲು ಹಿಂದೆಗೆಯುತ್ತಿರಲಿಲ್ಲ. ಪೈರು ಬೆಳೆಯದ ಇರುವುದಕ್ಕೆ ನನ್ನ ಔದಾಸೀನ್ಯ ಕಾರಣವೂ ಅಲ್ಲ. ರಾತ್ರಿ ರಾತ್ರಿ ಗ್ಯಾಸ್ ಮಡಗಿ ನೀರು ಹಾಯಿಸಿದೆ. ಪೈರು ಬೆಳೆದಿದ್ದರೆ ೧|| ಸಾವಿರ ರೂಪಾಯಿ ಲಾಭ ಬರಬೇಕಾಗಿತ್ತು. ಊರವರಿಗೆ ಇದೊಂದು ಹೊಸ ಕಸಬು ಕಲಿಸೋಣ ಅಂತ ಮಾಡಿದೆ. ನಷ್ಟವಾದ್ದಕ್ಕೇನೋ ನಾನೇ ಕಾರಣ. ಇನ್ನೇನು ಪೈರು ಕೈಗೆ ಬಂತು ಅನ್ನುವಾಗ ಕೈಲಿದ್ದ ದುಡ್ಡು ಮುಗಿಯಿತು. ವಿಧಿಯಿಲ್ಲದೆ ಇದರ ನಿಗ ಬಿಟ್ಟೆ. ಇಲ್ಲದೆ ಇದ್ದಿದ್ದರೆ ಇಂತಹ ಹತ್ತು ಜುಲ್ಮಾನೆಗೂ ಹೆದರುತ್ತಿರಲಿಲ್ಲ. ಈಗ ದಯವಿಟ್ಟು ಜುಲ್ಮಾನು ಮಾಫಿಮಾಡಿ. ಬೇಕಾದರೆ ಮುಂದೆ ಮತ್ತೆ ಪೈರು ತೆಗೆದಾಗ ಈ ಜುಲ್ಮಾನೇನು ಸೇರಿಸಿ ಕೊಡುತ್ತೇನೆ" ಎಂದು ಅನೇಕ ಅರ್ಜಿಹಾಕಿಸಿದ್ದನು. ಶ್ಯಾನುಭೋಗರು "ಅಮಲ್ದಾರರು ಜಮಾಬಂದಿಗೆ ಬಂದಾಗ ಮತ್ತೆ ಅರ್ಜಿಕೊಡುವೆಯಂತೆ" ಎಂದು ಹೇಳಿದ್ದರು.

ಶ್ಯಾನುಭೋಗರು ಹೇಳಿ ಕಳುಹಿಸಲು ತೋಪ ಬಂದ. ಶ್ಯಾನುಭೋಗರು ಅವನಿಗೆ "ಚಂದ್ರವಳ್ಳಿಗೆ ಗಾಡಿ ಬೇಕು" ಎಂದರು. ತೋಪನ ಬಳಿ ಗಾಡಿ ಇರಲಿಲ್ಲ. ಶ್ಯಾನುಭೋಗರು "ನಿನ್ನ ತಕರಾರು ಜುಲ್ಮಾನೆ ವಜಾ ಮಾಡುತ್ತಾರೆ. ಇವತ್ತು ಹಿಂದೆಗೆಯಬೇಡ" ಎಂದರು. ತೋಪನಿಗೆ ಒಳ್ಳೆಯ ಪೀಕಲಾಟಕ್ಕೆ ಬಂದಿತು. "ಒಂದು ದಿನ ಗಾಡಿ ಹೋದರೆ ಜುಲ್ಮಾನೆ ಮಾಫಿಯಾಗುವುದಲ್ಲವೆ? ಆದರೆ ಅಯ್ಯೋ ಭಗವಂತ ಗಾಡಿ ಎಲ್ಲಿಂದ ತರಲಿ" ಎಂದು ಅವನಿಗೆ ಯೋಚನೆ ಬಂತು. ಈ ಅಮಲ್ದಾರರಿಗಂತೂ, ಅವರ ಆಕಾರವನ್ನು ನೋಡಿ ಯಾರೂ ಗಾಡಿ ಎತ್ತು ಕೊಡುತ್ತಿರಲಿಲ್ಲ. "ಮುಂದೆ ಕೂತರೆ ಮುಂಭಾರ, ಹಿಂದೆ ಕೂತರೆ ಹಿಂಭಾರ ಎತ್ತಿನ

ಕಾಲು ಮೇಲಕ್ಕೆ ಹೋಗುತ್ತದೆ. ಎತ್ತು ನೊಗಕ್ಕೆ ನೇತು ಬೀಳುತ್ತದೆ. ಮಧ್ಯದಲ್ಲಿ ಕೂತರೆ ಇರ್ಚಿ ಮುರಿಯುತ್ತದೆ. ಹತ್ತಿದರೆ ಇಳಿಯುವುದಕ್ಕೆ ಆಗುವುದಿಲ್ಲ. ಇಳಿದರೆ ಹತ್ತುವುದಕ್ಕೆ ಆಗುವುದಿಲ್ಲ'' ಎಂದು ನಾದಿರ್‌ಷಾ ಅವರನ್ನು ಹಾಸ್ಯಮಾಡುತ್ತಿದ್ದನು. ಕೊನೆಯಲ್ಲಿ ಪೇಟೆಯ ಅಮ್ಮು ಸಾಹೇಬನ ಗಾಡಿಯನ್ನೂ ಕಳಸೇಗೌಡನ ಎತ್ತನ್ನೂ ಜತೆಮಾಡಿ ತೋಪ ತಂದನು. ಅಮ್ಮು ಸಾಹೇಬನೂ ಕಳಸೇಗೌಡನೂ ಗಾಡಿ ಎತ್ತುಗಳ ಜತೆಯಲ್ಲಿ ತೋಪ ಹೋಗಬೇಕೆಂದು ಅವನಿಂದ ಮಾತು ತೆಗೆದುಕೊಂಡು ತಮ್ಮ ತಮ್ಮ ಮಾಲುಗಳನ್ನು ಅವನಿಗೆ ಕೊಟ್ಟರು.

ತಕರಾರು ತಖ್ತೆಗಳು ಮುಖ್ಯವಾಗಿ ಮಲ್ಲಿಗೆಹಳ್ಳಿ ಸುತ್ತಲ ಮೂರು ಗ್ರಾಮುಗಳಲ್ಲಿದ್ದುವು. ಅಲ್ಲಿಗೆ ಹೋಗಿ ಬರುವುದಕ್ಕೆ ಮಧ್ಯಾಹ್ನ ೩ ಗಂಟೆಗಳಾದರೂ ಆಗುತ್ತಿದ್ದುವು. ಮಲ್ಲಿಗೆಹಳ್ಳಿ ನಾದಿರ್ ಷಾ ಶ್ಯಾನುಭೋಗರೂ ಶೇಕದಾರರೂ "ನಾವು ಅಮಲ್ದಾರರ ಜತೆಯಲ್ಲಿ ಅಲ್ಲಿಯವರೆಗೆ ಇದ್ದರೆ ಉದ್ದಕ್ಕೂ ಕಂದಾಯ, ತಕರಾರು ತಖ್ತೆ ಇವುಗಳಲ್ಲಿ ನಮ್ಮ ಜೀವ ತಿನ್ನುತ್ತಾರೆ. ಇವರ ಜತೆಗೆ ಮತ್ತಾರನ್ನಾದರೂ ಹಾಕಿ ನಾವು ಹಿಂದುಗಡೆ ದೂರದಲ್ಲಿ ಬರುತ್ತಿದ್ದರೆ, ಕರೆದಾಗ ಬಂದು ಕೇಳಿದ್ದಕ್ಕೆ ಏನೋ ಒಂದು ಜವಾಬು ಕೊಡಬಹುದು. ಗಾಡಿಯಲ್ಲಿ ಇವರ ಜತೆಯಲ್ಲಿ ಯಾರನ್ನು ಕೂರಿಸೋಣ'' ಎಂದು ಕೊಂಡು ಕೊನೆಗೆ ಸಾಹುಕಾರ್ ಅನಂತುವನ್ನು ಕೂರಿಸಿ ಬಿಡೋಣ'' ಎಂದು ಪಿತೂರಿ ಮಾಡಿದರು. ಶೇಕದಾರರು "ಇದು ಮೊದಲೆ ಗೊತ್ತಾಗಿದ್ದರೆ ಅವರ ಗಾಡಿಯನ್ನೇ ತೆಗೆದು ಕೊಳ್ಳಬಹುದಾಗಿದ್ದಿತಲ್ಲ'' ಎಂದರು. ಅರ್ಧ ಗಂಟೆಯೊಳಗಾಗಿ ಗಾಡಿ ಬಂದು ಸಿದ್ಧವಾಯಿತು. ಅನಂತುವೂ ಕೈಯಲ್ಲಿ ಕೊಡೆ ಹಿಡಿದುಕೊಂಡು ಬಂದು ಕೂತರು. ತೋಪ ತಾನೇ ಗಾಡಿ ಹೊಡೆಯುತ್ತೇನೆಂದು ಹೇಳಿದರೂ ಕೇಳದೆ, ತಳವಾರ ಕರಿಯ ಅವನನ್ನು ಕೆಳಕ್ಕೆ ಇಳಿಸಿ ತಾನೇ ಮೂಕಿ ಮೇಲೆ ಕೂತನು. ಮುಂದುಗಡೆ ಒಬ್ಬ ಕುಳವಾಡಿಯೂ ಹಿಂದುಗಡೆ ಶ್ಯಾನುಭೋಗ ಶೇಕದಾರರೂ ನಡೆದುಕೊಂಡು ಹೊರಟರು. ಗಾಡಿಯ ಮಧ್ಯದಲ್ಲ ಅಮಲ್ದಾರರು ಕುಳಿತಿದ್ದರು. ಅವರ ಈಚೆ ಕಡೆ ಬಿಟ್ಟಿದ್ದ ಜಾಗದಲ್ಲಿ ಅನಂತು ಕುಳಿತಿದ್ದರು.

ಎತ್ತು ಒಳ್ಳೆಯ ಬಲವಾಗಿದ್ದರೂ ಮುಂದು ಮುಂದೆ ದಾರಿ ತೋರಿ

ಸುತ್ತಾ ಹೋಗುತ್ತಿದ್ದ ತೋಪನ ಜತೆಗೆ ಅವು ನಡೆಯಲಾರದಾದವು. ಅನಂತು ಗಳಿಗ್ಗೊಂದು ಸಲ ತಳವಾರನನ್ನು "ಅದಲಿಸು ಕಳಸನ ಎತ್ತ ಲ್ಲವೆ? ಇದು ಒಳ್ಳೆಯ ದೊಡ್ಡ ಹೆಜ್ಜೆಯಲ್ಲಿ ಹೋಗುವ ಎತ್ತು" ಎನ್ನು ತ್ತಿದ್ದರು. ದಾರಿ ಅಟ್ಟಾವಾದ್ದಕ್ಕೂ ಒಳಗೆ ಕೂತಿದ್ದ ಭಾರಕ್ಕೂ, ಎತ್ತು ಮುಂದೆ ಹೆಜ್ಜೆ ಇಡುವುದಕ್ಕೇ ಹಿಂದೆಗೆಯುತ್ತಿದ್ದಿತು. ಬಲಿಷ್ಟನಾದ ಆಳಾ ಗಿದ್ದ ತೋಪ ಯಾವಾಗಲೂ ಎರಡು ಫರ್ಲಾಂಗು ಮುಂದೆಯೇ ಇರುತ್ತಿ ದ್ದನು. ಒಂದು ಸಲ ಸಾಹೇಬರು ಕರಿಯನಿಗೆ "ಏನಯ್ಯ ಅವನನ್ನು ಒಂದು ಸಲವೂ ಹಿಂದಕ್ಕೆ ಕೆಡವುವುದಕ್ಕೆ ಆಗುವುದಿಲ್ಲವೇ. ನೋಡು ಒಳ್ಳೆ ಕುದುರೆಯಂತೆ ಹೋಗುತ್ತಿದ್ದಾನೆ. ಯಾವಾಗಲೂ ಮುಂದೆಯೇ ಇದ್ದಾನಲ್ಲ" ಎಂದರು. ತಳವಾರನು ಮನಸ್ಸಿನಲ್ಲಿ "ನೀವು ಇಳಿದರೆ ಎತ್ತು ಗಾಳಿಗಿಂತ ವೇಗವಾಗಿ ಹೋಗುತ್ತದೆ" ಎಂದುಕೊಂಡನು. ಆದರೆ ಅವನು ಯಾವ ಪ್ರತ್ಯುತ್ತರವನ್ನೂ ಕೊಡದೆ ಎತ್ತನ್ನು ಮಾತ್ರ ಅದಲಿ ಸಿದನು.

ಸುಮಾರು ಒಂದೂವರೆ ಗಂಟೆ ಕಾಲ ಹೋಗುವುದರೊಳಗೆ ಮುಖ್ಯ ವಾದ ತಕರಾರು ಇದ್ದ ಹನುಮನಹಳ್ಳಿ ದೊರಕಿತು. ಆ ಗ್ರಾಮದಲ್ಲಿ ಶ್ಯಾನುಭೋಗ ಸುಮಾರು ೧೦ ಜನಗಳ ಮೇಲೆ ತಕರಾರು ತಃಖ್ತೆ ದಾಖ ಲ್ಮಾಡಿದ್ದನು. ಸರ್ಕಾರದ ಓಣಿಯ ಬೇಲಿಯನ್ನು ಒತ್ತಿ ಅವರೆಲ್ಲರೂ ಒಂದೋ ಎರಡೋ ಸಾಲು ಹೆಚ್ಚಾಗಿ ಹಸಿರು ಮೆಣಸಿನ ಗಿಡಗಳನ್ನು ಹಾಕಿದ್ದರೆಂಬುದೇ ಶ್ಯಾನುಭೋಗನ ತಕರಾರು. ರೈತರೂ ಶ್ಯಾನುಭೋ ಗರೂ, ಅಮಲ್ದಾರರನ್ನು ಊರಬಾಗಿಲಿನ ಹನುಮಂತರಾಯನ ಗುಡಿಯ ಮುಂದೆ ಎದುರುಗೊಂಡರು. ಹನುಮನಹಳ್ಳಿ ಪಟೇಲನ ಕೈಯಲ್ಲಿ ಒಂದು ಮರದ ತಟ್ಟೆಯಲ್ಲಿ ನಾಲ್ಕು ಬಾಳೆಯಹಣ್ಣು ಎರಡು ನಿಂಬೆ ಹಣ್ಣು ಒಂದು ತೆಂಗಿನಕಾಯಿ ಇದ್ದುವು. ಪಟೇಲ ತಟ್ಟೆಯನ್ನು ಮುಂದಕ್ಕೆ ನೀಡಿದನು. ಆ ಬಾಳೆಹಣ್ಣು ಕಾಯಾಗಿ ಇನ್ನೂ ಹಸುರಾ ಗಿಯೇ ಇದ್ದಿತು. ನಿಂಬೆಹಣ್ಣು ಕಿಂಡುಕಿಂಡಾಗಿ ಹಸುರಾಗಿ ಗೆಜ್ಜಗ ದಂತೆ ಇತ್ತು. ಮೊದಲೇ ಸುಸ್ತಾಗಿದ್ದ ಅಮಲ್ದಾರರಿಗೆ ಆ ಹಣ್ಣನ್ನು ನೋಡಿ ಬಹಳ ಕೋಪ ಬಂತು. ಕೆರೆಯ ಕೆಳಗೆ ದೂರದಲ್ಲಿ ಕಾಣುತ್ತಿದ್ದ ತೋಟ ಗಳನ್ನು ನೋಡಿ ಅವರು "ಏನಯ್ಯ ಪಟೇಲ ನಿನ್ನ ತೋಟದಲ್ಲಿ ಬೆಳೆ

ಯುವ ಬಾಳೆಹಣ್ಣು ಇದೆಯೋ. ಇಷ್ಟೆಯೋ" ಎಂದರು. ಪಟೇಲನು "ಅಯ್ಯೋ ಬುದ್ಧಿ ತೋಟದಲ್ಲಿ ಒಂದೊಂದು ಗೇಣು ಉದ್ದದ ಘನಂದಾರಿ ಬಾಳೆಹಣ್ಣು ಬಿಡ್ತಿತ್ತು. ನಾಲ್ಕು ವರುಷದಿಂದ ಕೆರೇಲಿ ನೀರಿಲ್ಲ. ಎಲ್ಲಾ ಎಟ್ಟಿ ಹಿಡೀತು. ಬಾಳೆಯೆಲ್ಲಾ ಒಣಗಿತು. ಕೆರೆ ತುಂಬಿ ಐದು ವರುಷವಾಯಿತೆಲ್ಲ ಬುದ್ಧಿ. ಹಾಳುಗಂದಾಯ ತೆರ್ತಾ ಇದೀವಿ. ಹೋದ ವರುಷ ಅರ್ಜಿ ಕೊಟ್ಟೊ ಸ್ವಾಮಿ. ರಿಮಿಶನ್ ಏನೂ ಬರಲಿಲ್ಲ" ಎಂದನು.

ಅಮಲ್ದಾರರಿಗೆ ರಿಮಿಶನ್ ಎಂಬ ಮಾತನ್ನು ಕೇಳಿದ ಕೂಡಲೇ ಬೇಜಾರಾಯಿತು. ಅವರಿಗೆ ಎಲ್ಲಿ ಹೋದರೂ ರಿಮಿಶನ್ ರಿಮಿಶನ್ ಎಂಬುವ ಮಾತೇ ಕೇಳಿಸುತ್ತಿತ್ತು. ಸಾಲದುದಕ್ಕೆ ಅವರಿಗೆ ತಾಲ್ಲೂಕು ಕಛೇರಿಗೆ ರೆಮಿಶನ್ ಅರ್ಜಿಗಳು ಬಂದುದು ಒಂದೂ ಜ್ಞಾಪಕವಿರಲಿಲ್ಲ. ತಾಲ್ಲೂಕು ಕಛೇರಿಗೆ ಯಾವ ಕಾಗದ ಹೋದರೂ ಅದು ವಾಪಸು ಬರುತ್ತಿರಲಿಲ್ಲವೆಂಬುದು ಎಲ್ಲರಿಗೂ ತಿಳಿದ ವಿಷಯ. ವಾಪಸು ಬರುವುದೂ, ಅದಕ್ಕೆ ಸರಿಯಾದ ಸಮುಜಾಯಿಷಿಯಾದ ಜವಾಬು ಬರುವುದೂ ಇರಲಿ. ಆ ಕಾಗದ ಕಛೇರಿಗೆ ಬಂದ ತಾರೀಖು, ಅದಕ್ಕೆ ಒಂದು ದಾಖಲೆ, ಅದು ಯಾರಲ್ಲಿದೆ ಎಂಬುದು ಯಾವುದೂ ಗೊತ್ತಾಗುತ್ತಿರಲಿಲ್ಲ ಹಳ್ಳಿಗಳಲ್ಲಿ ಹೋದ ಕಡೆಗಳಲ್ಲೆಲ್ಲಾ ರೈತರು "ನಾವು ಬರೆದಿದ್ದ ಅರ್ಜಿ ಏನಾಗಿದೆ" ಎಂದು ಕೇಳುತ್ತಿದ್ದರು. ಅನೇಕರು ತಾಲ್ಲೂಕು ಕಛೇರಿಗೆ ಹೋಗಿ ಅರ್ಜಿಯ ವಿಚಾರ ಕೇಳಿದಾಗ ಅಮಲ್ದಾರರು ರೆವಿನ್ಯೂ ಗುಮಾಸ್ತನನ್ನು ವಿಚಾರಿಸುತ್ತಿದ್ದರು. ಅವನು ಹೊರೆಹೊರೆಯಾಗಿ ಬಿದ್ದಿದ್ದ ಅನೇಕ ಕಾಗದಗಳಿಂದ ಈ ಅರ್ಜಿಯನ್ನು ಹುಡುಕಲು ಪ್ರಾರಂಭಿಸುತ್ತಿದ್ದನು. ಸುಮಾರು ಅರ್ಧ ಗಂಟೆ ಒಂದು ಗಂಟೆ ಹುಡುಕುವ ಹೊತ್ತಿಗೆ ಅಮಲ್ದಾರರು ಆ ವಿಷಯ ಮರೆಯುತ್ತಿದ್ದರು. ರೈತರು ನಿಲ್ಲುವುದಕ್ಕೆ ಜಾಗವಿಲ್ಲದೆ ಗುಮಾಸ್ತರುಗಳಿಂದಲೂ ಜವಾನರಿಂದಲೂ ಕಂಬದಿಂದ ಕಂಬದ ಬಳಿಗೆ ತಳ್ಳಿಸಿಕೊಂಡು ಬಿಸಿಲಿನಲ್ಲಿ ಒಣಗಿ, ರೆವಿನ್ಯೂ ಗುಮಾಸ್ತೆಯಿಂದ "ನಿಮ್ಮ ಅರ್ಜಿಗೆ ಬೆಂಕಿ ಬಿತ್ತು. ನೀವು ಯಾವಾಗ ಬಂದರೂ ಕೇಳುವುದು ಇದೊಂದೇ. ಈ ಅರ್ಜಿ ಯಾವ ನೂರು ರೂಪಾಯ ನೋಟು ಅಂತ ಹೊಡ್ಕೋತೀರಿ. ಇನ್ನೊಂದು ಕಾಗದ ಗೀಚಿಕೊಂಡು ಬನ್ನಿ ಕೊಡಿ. ಎಂದು ಗದರಿಸಿಕೊಂಡು ಹೋಗುತ್ತಿದ್ದರು. ಯಾವ ತಾಲ್ಲೂಕು ಕಛೇರಿ

ಯಲ್ಲಿಯೂ ರೈತರಿಗೆ ಕೂರಲು ಬೆಂಚು ಕುರ್ಚಿಗಳಿಲ್ಲ. ಸ್ವಲ್ಪ ಜಾಗ
ಕೂಡ ಇಲ್ಲ. ರೈತರು “ಈಟೊಂದು ಕಂದಾಯ ತಂದು ಸುರಿದು ಸುರಿದು
ಇವರ್ಗೆಲ್ಲಾ ಸಂಬಳ ಸಾರಿಕೆ ನಡೆಸ್ತೀವಿ. ಇಲ್ಲಿ ಕೂರೋಕೆ ನಮಗೆ
ಈಟೆಂಬ ಜಾಗ ಇಲ್ವಲ್ಲ. ಇವರ ಹಡೆ ಹಾಳಾಗ” ಎಂದು ಬೈದು
ಕೊಂಡು ಊರುಗಳಿಗೆ ಬರುತ್ತಿದ್ದರು. ಅಮಲ್ದಾರರು ಹನುಮನ
ಹಳ್ಳಿ ಪಟೇಲನನ್ನು ನಾಲ್ಕು ಬಾಳೆಹಣ್ಣು ಎರಡು ನಿಂಬೆಹೀಚು ತಂದ
ಕಾರಣದಿಂದ ಬೈಯಬೇಕೆಂದು ಯೋಚಿಸುತ್ತಿದ್ದವರು ತೋಟ ಒಣಗಿ
ಹೋದುದನ್ನು ಕೇಳಿ ಏನೋ ಒಂದು ಉಪಾಯದ ಧ್ವನಿಯಿಂದ “ಮನೆ
ಹಿತ್ತಲಲ್ಲಿ ಎಲ್ಲರೂ ಒಂದೊಂದು ಹಣ್ಣಿನ ಗಿಡ, ಬಾಳೆ ಗಿಡ ಹಾಕಬೇಕು.
ತೋಟನೇ ನೆಚ್ಚಿಕೊಂಡ್ರೆ ಹೇಗೆ ಆಗುತ್ತೆ. ಮನೇಲಿ ಒಂದು ಗಿಡ
ಹಾಕಿದ್ರೆ ಮನೆಯೋರಿಗೆಲ್ಲಾ ವರ್ಷಾಕಾಲವೂ ಬಾಳೆಹಣ್ಣು ನಿಂಬೆಹಣ್ಣು
ದೊರಕುತ್ತೆ. ನಿತ್ಯ ಒಂದು ನಿಂಬೆ ಹಣ್ಣು ತೆಗೆದುಕೊಂಡರೆ ಯಾವ
ಡಾಕ್ಟರೂ ಬೇಡ. ಏನು ಸಾಹುಕಾರ್ರೆ” ಎಂದು ಅನಂತುವಿನ ಮುಖ
ನೋಡಿದರು. ಅಮಲ್ದಾರರು ಗಂಭೀರವಾಗಿ ಈ ಮಾತುಗಳನ್ನು ಹೇಳು
ತ್ತಿದ್ದರೂ, ರೈತರೂ ಶ್ಯಾನುಭೋಗರೂ ಅವರ ಮಾತನ್ನು ಸ್ವಲ್ಪ
ನಗುತ್ತಾ ಕೇಳುತ್ತಿದ್ದಂತೆ ತೋರಿತು. ಮೊದಲು ಮೊದಲು ಅಮಲ್ದಾ
ರರು “ಇವರು ನನ್ನ ಮಾತನ್ನು ಕೇಳಿ ಸಂತೋಷಪಡುತ್ತಿದ್ದಾರೆ.
ಯೋಗಿಸುತ್ತೀರೆಲ್ಲಾ. ಆ ನೀರನ್ನು ಎಲ್ಲಾದರೂ ಚೆಲ್ಲಲೇಬೇಕಲ್ಲ. ಅದನ್ನು
ಹಿತ್ತಲಲ್ಲಿ ಆ ನಿಂಬೆ ಗಿಡದ ಬೊಡ್ಡೆಗೆ ಚೆಲ್ಲಿ” ಎಂದರು. ಪಟೇಲರು
“ನೀರು ಚೆಲ್ಲುವುದು ಎಲ್ಲಿ ಬಂತು ಸ್ವಾಮಿ. ನಮ್ಮ ಕೈಕಾಲುಗಳಿ
ಗೆಲ್ಲಾ ನೀರು ಹೊತ್ತುಕೊಂಡುಬಂದರೆ ಮನೆ ಹೆಣ್ಣುಮಕ್ಕಳು ಉಳಿ
ಯುತ್ತಾರೆಯೆ ಸ್ವಾಮಿ. ನಿತ್ಯಾ ಕಾಲು ತೊಳೆಯೋಕೆ ನೀರೆಲ್ಲಿದೆ.
ಎಲ್ಲೋ ಒಂದು ನಾಲ್ಕು ಹನಿ ನೀರು ಹಾಕಿಕೊಂಡು ಕೈತೊಳೆದು
ಊಟಮಾಡಿ ಏಳುತ್ತೇವೆ. ಆ ನೀರನ್ನು ಕೋಳಿ ಹುಂಜ ಕುಡಿದು
ಬಿಡುತ್ತೆ” ಎಂದನು. ಸಾಹೇಬರಿಗೆ ಗಾಬರಿಯಾಯಿತು. ಇಂತಹ
ಮಾತು ಬಂದರೆ ಮಾತನ್ನು ಬೇರೆ ಕಡೆಗೆ ತಿರುಗಿಸಬೇಕೆಂಬುದು ಅವ
ರಿಗೆ ಮೇಲಧಿಕಾರಿಗಳಿಂದ ಬಂದ ಸೂಚನೆಯಾಗಿದ್ದಿತು. ಜಿಲ್ಲಾಧಿಕಾರಿ
ಗಳೂ, ಅಸೆಂಬ್ಲಿ ಕೌನ್ಸಿಲುಗಳಲ್ಲಿ ಸರ್ಕಾರದ ಪ್ರತಿನಿಧಿಗಳೂ ಇಂತಹ

ಮಾತು ಬಂದಾಗ ಎಷ್ಟು ಉಪಾಯದಿಂದ ಎಷ್ಟು ಸುಲಭವಾಗಿ ಮಾತನ್ನು ಬೇರೆ ಕಡೆ ತಿರುಗಿಸುತ್ತಾರೆಂಬುದನ್ನು ಅವರು ಕಂಡು ಇದೇ ಅವರ ಜಯದ ಗುಟ್ಟು ಎಂದುಕೊಂಡಿದ್ದರು. ಈಗ ಪಟೇಲನ ಮಾತನ್ನು ಕೇಳಿ ಅಮಲ್ದಾರರು "ಯಾಕೆ ನಿಮ್ಮ ಊರಿಗೆ ಬಾವಿ ಇಲ್ಲವೇ" ಎಂದರು. ಪಟೇಲನು ಸ್ವಲ್ಪ ಹೊತ್ತು ಯೋಚಿಸಿ "ಇದೆ" ಎಂದನು. ಅಮಲ್ದಾರರು "ಹಾಗಾದರೆ ನೀವು ಯಾಕೆ ನೀರಿಗೆ ಅರ್ಧ ಮೈಲಿ ಹೋಗಬೇಕು" ಎಂದರು. ಗ್ರಾಮಸ್ಥರು "ಬಾವಿಯಲ್ಲಿ ನೀರಿಲ್ಲ ಸ್ವಾಮಿ" ಎಂದರು. ಅಮಲ್ದಾರರು ಶೇಕದಾರರನ್ನು ಕರೆದು "ಏನ್ರಿ ಪಂಚಾಯಿತ್ತಿಯಿಂದ ಅರ್ಧ ಹಣ ತೆಗೆದುಕೊಂಡು ಸರ್ಕಾರದಿಂದ ಅರ್ಧ ಹಣಕೊಟ್ಟು ಈ ಊರಿಗೆ ಒಂದು ಬಾವಿ ಸಾಂಕ್ಷನ್ ಮಾಡಿದ ಜ್ಞಾಪಕ ಏದೆಯಲ್ಲ" ಎಂದರು. ಶೇಕದಾರರು "ಹೌದು ಸ್ವಾಮಿ. ಹಣ ಸಾಂಕ್ಷನ್ ಆಗಿ ಪೆಮೆಂಟ್ ಆಗಿದೆ" ಎಂದರು. ಅಮಲ್ದಾರ್ರು ಕೋಪದಿಂದ "ಹಾಗಾದರೆ ಯಾಕೆ ಬಾವಿಯಲ್ಲಿ ನೀರಿಲ್ಲ. ಯಾರು ಕಂಟ್ರಾಕ್ಟರು. ಸರಿಯಾಗಿ ಜರೀಬ್ ನೋಡಿ ಹಣ ಪಾವತಿಯಾಯಿ ತೇನ್ರಿ. ಪಂಚಾಯಿತ್ತಿಯ ಓವರ್ಶಿ ಏನು ಹೇಳ್ತಾನೆ. ಇದರಲ್ಲಿ ಎಷ್ಟು ದಿನದಿಂದ ನೀರಿಲ್ಲ" ಎಂದರು. ಶೇಕದಾರ್ರು ಬೆಬ್ಬೆ ಎಂದರು. ಅಮ ಲ್ದಾರರು "ನೀವು ಹೇಳ್ರಿ" ಎಂದು ಪಟೇಲರನ್ನು ಕೇಳಿದರು. ಪಟೇ ಲನು "ಸ್ವಾಮಿ ನಾನು ಕಂಡ ಲಾಗಾಯ್ತು ಈ ಬಾವಿಯಲ್ಲಿ ನೀರು ಇಲ್ಲ" ಎಂದನು. ಅಮಲ್ದಾರರು "ಹಾಗಾದರೆ ನೀರು ಬರುವುದಕ್ಕೆ ಮುಂಚೆಯೇ ಪೆಮೆಂಟ್ ಯಾಕೆ ಮಾಡಿಸಿದಿರಿ ಶೇಕ್‌ದಾರ್. ಹೋಗಲಿ. ಕಂಟ್ರಾಕ್ಟರ್ ಯಾರು? ಇನ್ನೊಂದು ಹತ್ತು ಅಡಿ ಇಳಿಸುವಂತೆ ಹೇಳೋಣ" ಎಂದರು. ಕೊನೆಯಲ್ಲಿ ಹೊಸದಾಗಿ ಬಾವಿಯನ್ನೇ ತೆಗೆ ದಿರಲಿಲ್ಲವೆಂದೂ ಹಿಂದೆ ಗ್ರಾಮಸ್ಥರು ಯಾವ ಕಾಲದಲ್ಲಿಯೋ ತೆಗೆ ದಿದ್ದ ಒಂದು ಹಳೆ ಬಾವಿಯನ್ನೇ ಶೇಕದಾರರೂ ಪಂಚಾಯಿತಿ ಓವರ್ ಶಿಯರೂ ಪಂಚಾಯಿತ್ತಿ ಛೇರ್ಮನ್ನರೂ ಅಳತೆಮಾಡಿಸಿ ಜರೀಬುಮಾಡಿಸಿ ಹಣವನ್ನು ಕಛೇರಿಯಿಂದ ಪಡೆದರೆಂದೂ ಗೊತ್ತಾಯಿತು. ಅಷ್ಟು ಹೊತ್ತಿಗೆ ದೂರದಲ್ಲಿ ಪಂಚಾಯಿತ್ತಿ ಓವರ್‌ಶಿಯರು, ಅಮಲ್ದಾರ್ರು ಹನುಮನಹಳ್ಳಿಗೆ ಹೋಗಿದ್ದಾರೆಂದು ಕೇಳಿ ಬೀಳುವುದನ್ನೂ ಕಾಣದೆ

ಒಂದೇ ಉಸಿರಿಗೆ ಓಡಿಬಂದರು. ಅವರು ಬಂದಕೂಡಲೆ ಅಮಲ್ದಾರರು "ಏನ್ರಿ ಈ ಬಾವಿಯಲ್ಲಿ ನೀರೆ ಇಲ್ಲವಂತೆಲ್ಲ" ಎಂದರು. ಓವರ್‌ಶಿಯರ್ ಅವರು ಯಾವುದೋ ಗುರುತನ್ನು ಸೂಚಿಸುವಂತೆ "ಅದೇ ಆವತ್ತು ಅರಿಕೆಮಾಡಿಕೊಂಡೆನಲ್ಲ. ಇತರ ಬಾಬುಗಳ ಜತೆಯಲ್ಲಿ" ಎಂದರು. ಅಮಲ್ದಾರರು ಆಗ ತಿಳುವಿನ ಬೆಳಕನ್ನು ಮುಖದಲ್ಲಿ ಹರಿಸಿ "ಹೊ" ಎಂದರು. "ಕಂಟ್ರಾಕ್ಟರಿಗೆ ಹೇಳಿ ಇನ್ನೂ ಹತ್ತು ಅಡಿ ಆಳ ತೋಡಿಸಿ. ನೀರು ಬಂದ ವಿಚಾರ ನನಗೆ ತಿಳಿಸಬೇಕು" ಎಂದರು. ಪಂಚಾಯ್ತಿ ಓವರ್‌ಶಿಯರು ಅಪ್ಪಣೆ ಎಂದರು.

ಇಷ್ಟು ಮಾತುಗಳೂ ಅಮಲ್ದಾರರು ಗಾಡಿ ಮೇಲೆ ಕುಳಿತಿರುವಾಗಲೇ ನಡೆದುವು. ಮಾತು ಪ್ರಾರಂಭವಾದಕೂಡಲೇ ಅನಂತು ಗಾಡಿಯಿಂದ ಕೆಳಗೆ ಇಳಿದು ಛತ್ರಿಯನ್ನು ಒರಗಿಕ್ಕೊಂಡು ನಿಂತರು. ತಳವಾರ ಕರಿಯ ಕೊಳ್ಳುಬಿಟ್ಟು ಗಾಡಿ ಮೂಕಿಯನ್ನು ಇಳಕಿದನು. ಅಮಲ್ದಾರರು ಗಾಡಿಯಲ್ಲಿ ಕುಳಿತುಕೊಂಡೇ ತಮ್ಮ ಎದುರಿಗೆ ಬಂದಿದ್ದ ನಜರಿನ ತಟ್ಟೆಯನ್ನು ತೆಗೆದುಕೊಂಡು ಮಾತುಗಳನ್ನು ಮುಂದುವರಿಸುತ್ತಿದ್ದರು. "ಹಾಳುಪ್ರಾರಬ್ಧ ಈ ಗಾಡಿಯಿಂದ ಇಳಿಯಬೇಕಲ್ಲ" ಎಂದು ಅವರಿಗೆ ಯೋಚನೆಯಾಗಿತ್ತು. ಗಾಡಿ ಭದ್ರವಾಗಿರಲೆಂದು ಅದರ ತಟ್ಟಿಗಳಿಗೆ ಆಚೆ ಈಚೆ ಸೇರಿಸಿ ಒಂದು ಹಗ್ಗ ಕಟ್ಟಿತ್ತು. ಅದರ ಸಂದಿಯಲ್ಲಿ ಮೆಲ್ಲಗೆ ತಲೆತೂರಿಸಿಕೊಂಡು ಈಚೆಗೆ ಬರುವುದು ಅಮಲ್ದಾರರಿಗೆ ಕಷ್ಟವಾಯಿತು. ಅವರು ಒಂದು ಸಲ ಅರ್ಧ ಎದ್ದು ತಳವಾರನಿಗೆ ಮೂಕಿಯ ಮೇಲೆ ಕುಳಿತುಕೊ ಎಂದರು. ತಳವಾರನು ಮೂಕಿಯ ಮೇಲೆ ಕುಳಿತನು. ಅಷ್ಟುಹೊತ್ತಿಗೆ ಅಮಲ್ದಾರರು ಬಂದಿದ್ದಾರೆ ಎಂದು ಕೇಳಿ ಕೂಲಿ ಮಠದ ಹುಡುಗರೆಲ್ಲಾ ಮಠಬಿಟ್ಟು ಈಚೆಗೆ ಬಂದುಬಿಟ್ಟರು. ಸಾಹೇಬರು ಹಿಂದುಗಡೆಯಿಂದ ಇಳಿಯಬೇಕೆಂದು ಮೆಲ್ಲಗೆ ಸ್ವಲ್ಪ ಹಿಂದಕ್ಕೆ ಸರಿದರು. ಕರಿಯ ಕುಳಿತಿದ್ದರೂ ಮೂಕಿ ಎದ್ದೇ ಎದ್ದಿತು. ಆಗ ಸಾಹೇಬರು ಮತ್ತೆ ಮುಂದಕ್ಕೆ ವಾಲಿ ಮೂಕಿಯನ್ನು ಸರಿಪಡಿಸಿದರು. ಕರಿಯನಿಗೆ ಇದ್ದಕ್ಕಿದ್ದಂತೆ ಒಂದು ಯೋಚನೆ ಹೊಳೆಯಿತು. ಅವನು ಕಷ್ಟಪಟ್ಟು ಮೂಕಿಯನ್ನು ಮೇಲಕ್ಕೆ ಎತ್ತಿ ಅದನ್ನು ಹನುಮಂತರಾಯನ ಗುಡಿಯ ಜಗುಲಿಗೆ ಒರಗಿಸಿ ಪೂರ್ಣ

ವಾಗಿ ಮೂಕಿ ಎತ್ತಿದನು. ಮೂಕಿ ಜಗಲಿ ನೇರಕ್ಕೆ ಬಂದಿತು. ಸಾಹೇಬರು ಮೆಲ್ಲನೆ ಜಗಲಿಗೆ ಜಾರಿಕೊಂಡರು.

ಅಮಲ್ದಾರರು ದಾರಿಯಲ್ಲಿ ಒಂದು ಸಲ ಹನುಮನಹಳ್ಳಿ ಶ್ಯಾನುಭೋಗನನ್ನು "ಅಲ್ಲಿ ಪಾತ್ರೆ ಪದಾರ್ಥಗಳಿವೆಯೇನ್ರಿ" ಎಂದರು. ಹೊಟ್ಟೇಲಿ ಬರಬೇಕಾಗುವುದೋ ಎಂಬುದೇ ಯೋಚನೆಯಾಗಿತ್ತು. ಅವರು ಪಟೇಲನ ಬಾಳೆಹಣ್ಣನ್ನು ತೆಗೆದು ಎಲ್ಲಿ ಕೊಳ್ರಿ ಎಂದು ಶ್ಯಾನುಭೋಗರಿಗೆ ಕೊಟ್ಟರು. ಶ್ಯಾನುಭೋಗನಿಗೆ ಆಶ್ಚರ್ಯವಾಗುವುದಿರಲಿ. ಎಲ್ಲರಿಗೂ ಆಶ್ಚರ್ಯವಾಯಿತು. ಅಮಲ್ದಾರರು ಈ ಒಳ್ಳೆಯ ಗುಣಗಳನ್ನು ತಮ್ಮ ಮೇಲಧಿಕಾರಿಗಳಲ್ಲಿ ತೋರಿಸುತ್ತಿದ್ದರೇ ಹೊರತು ಇಂತಹ ರೈತರಲ್ಲಿಯೂ ಶ್ಯಾನುಭೋಗರಲ್ಲಿಯೂ ತೋರಿಸುತ್ತಿರಲಿಲ್ಲ. ಅಮಲ್ದಾರರು ಹನುಮಂತರಾಯನ ಗುಡಿಯಲ್ಲಿ ಸ್ವಲ್ಪಹೊತ್ತು ಮಾತನಾಡುತ್ತಾ ಕುಳಿತಿರುವ ವೇಳೆಗೆ ಒಳಗೆ ಶ್ಯಾನುಭೋಗನ ಪಾತ್ರೆ ಪದಾರ್ಥಗಳ ಶಬ್ದವಾಯಿತು. ಅಮಲ್ದಾರರು ಶ್ಯಾನುಭೋಗನನ್ನು ಕರೆದು "ಆ ಬಾಳೆಹಣ್ಣು ಸೀಕರಣೆ ಮಾಡಿಬಿಡಿ" ಎಂದರು. ಶ್ಯಾನುಭೋಗ "ಸದ್ಯ ಬಾಳೆಹಣ್ಣು ಊಟಕ್ಕೆ ಸಿಕ್ಕಿತು" ಎಂದುಕೊಂಡಿದ್ದವನಿಗೆ ಇದನ್ನು ಕೇಳಿ ಸಮಸ್ಯೆ ಪರಿಹಾರವಾಯಿತು. "ಇಂಥದ್ದು ಏನೋ ಬರುತ್ತೆ ಅಂತ ನಾನು ತಿಳಿದುಕೊಂಡಿರಬಹುದಾಗಿತ್ತು" ಎಂದುಕೊಂಡು ಅವನು ಒಳಕ್ಕೆ ಹೋದನು. ಅಮಲ್ದಾರರು, ಶ್ಯಾನುಭೋಗ ಸಿದ್ಧ ಮಾಡಿದ್ದ ರೊಟ್ಟಿಯನ್ನೂ ಸೀಕರಣೆಯನ್ನೂ ಹೊಡೆದರು. ಊರನ್ನೆಲ್ಲಾ ೩-೪ ಸಲ ಗಸ್ತುಹೊಡೆದರೂ ಕಾಫಿಗೆ ಹಾಲು ಸಿಕ್ಕಲಿಲ್ಲ. ಕರೆಯುವ ಹಸು ಎಮ್ಮೆ ಒಂದೂ ಇಲ್ಲದ ಗ್ರಾಮವಿದೆ ಎಂಬುದು ಆವತ್ತೇ ಅಮಲ್ದಾರರಿಗೆ ಗೊತ್ತಾದುದು. ನಿತ್ಯಾ ತಾಲ್ಲೂಕು ಹೆಡ್‌ಕ್ವಾರ್ಟರಿನಲ್ಲಿ ದುಡ್ಡುಕೊಟ್ಟು ಹಾಲುಕೊಳ್ಳುತ್ತಿದ್ದ ಅವರಿಗೆ ಹಳ್ಳಿಯಲ್ಲಿ ಹಾಲಿನ ಕಷ್ಟ ಎಷ್ಟು ಎಂಬುದು ತಿಳಿದಿರಲಿಲ್ಲ. ಮತ್ತು ಹಳ್ಳಿಗಳಿಗೆ ಬಂದಾಗ ಶ್ಯಾನುಭೋಗ ಪಟೇಲರು ಎಲ್ಲೆಲ್ಲೋ ಬೇಟೆಯಾಡಿ ಹಾಲು ತಂದು ಕೊಟ್ಟುಬಿಡುತ್ತಿದ್ದುದರಿಂದ, ಮಗುವಿಗೆ ಒಂದು ತೊಟ್ಟು ಹಾಲು ಸಿಕ್ಕದ ಹಳ್ಳಿಗಳು ಇರುವುವೆಂಬುದು ಅವರಿಗೆ ತಿಳಿದಿರಲಿಲ್ಲ. ಈಗ ಹನುಮನ ಹಳ್ಳಿಯನ್ನು ನೋಡಿ ಅವರಿಗೆ ನಿಜವಾಗಿ ಕನಿಕರವೂ,

ಗಾಬರಿಯೂ ಉಂಟಾಯಿತು. ಆದರೆ ಕಾಫಿಯ ಯೋಚನೆಯಲ್ಲಿ ಆ ಭಾವ ಅವರ ಮನಸ್ಸಿನಲ್ಲಿ ಹೆಚ್ಚು ಕಾಲ ನಿಲ್ಲಲು ಅವಕಾಶವಾಗಲಿಲ್ಲ. ಶೇಕದಾರರು ಥರ್ಮೊಸ್‌ಫ್ಲಾಸ್ಕಿನಲ್ಲಿ ತಂದಿದ್ದ ಕಾಫಿಯನ್ನು ಕೊಟ್ಟರು. ಅನಂತರ ಅಮಲ್ದಾರರು ತಕರಾರು ತಖ್ತೆಗಳ ವಿಚಾರಣೆ ಪ್ರಾರಂಭಿಸಿದರು.

ಆ ವರುಷ ಹಳ್ಳಿಯವರ ಅದೃಷ್ಟವೇ ಅದೃಷ್ಟ. ತಕರಾರು ತಖ್ತೆಗೆ ಹಿಂದಲ ವರುಷ ೫೦–೧೦೦ ಜುಲ್ಮಾನೆ ಬಿದ್ದಿದ್ದವರಿಗೆಲ್ಲಾ ವಜಾ ಆಗಿ ಹೋಯಿತು. ಶ್ಯಾನುಭೋಗರು "ಈ ಕಳ್ಳರು ಬೇಲಿ ಒತ್ತಿಸಿಕೊಂಡು ಒಂದೊಂದು ತುಂಡಿಗೆ ನಾಲ್ಕು ಪಣ ಎಂಟು ಮೊಣ ಮೆಣಸಿನಕಾಯಿ ಬೆಳೆದುಕೊಂಡರು. ನನಗೆ ಬಾಳಕಕ್ಕೆ (ಉಪ್ಪು ಮೆಣಸಿನಕಾಯಿ) ಸಹ ೧ ಸೇರು ಕಾಯಿ ಕೊಡಲಿಲ್ಲ. ಇವರಿಗೆ ಖಂಡಿತ ಅಲ್ಪ ಸ್ವಲ್ಪವಾದರೂ ಜುಲ್ಮಾನೆ ಹಾಕಬೇಕು" ಎಂದು ಗೊಣಗುಟ್ಟುತ್ತಿದ್ದರು. ಶೇಕದಾರರಿಗೂ ಅದೇ ಅಭಿಪ್ರಾಯವಿತ್ತು. ಶ್ಯಾನುಭೋಗ ಶೇಕದಾರರಿಂದಲೇ ಹುಟ್ಟುವ ತಕರಾರು ತಖ್ತೆಗಳು ಅವರಿಂದಲೇ ಫೈಸಲಾಗಬೇಕೆ ಹೊರತು ಅವರಿಗೆ ಗೊತ್ತಿಲ್ಲದೆ ಅಮಲ್ದಾರರಿಂದಲೂ ಸಹ ತೀರ್ಮಾನವಾಗುವುದು ಅವರಿಗೆ ಇಷ್ಟವಿರಲಿಲ್ಲ. ತಕರಾರಿನ ಸೃಷ್ಟಿ ಸ್ಥಿತಿ ಲಯಗಳಿಗೆ ಶ್ಯಾನುಭೋಗ ಶೇಕದಾರರೇ ಬ್ರಹ್ಮ. ಹನುಮನ ಹಳ್ಳಿಯಲ್ಲಿ, ಅಮಲ್ದಾರರು ಕೈನಲ್ಲಿ ಹತ್ತು ಹನ್ನೆರಡು ತಕರಾರು ಅರ್ಜಿಗಳನ್ನು ಇಟ್ಟುಕೊಂಡು ಇಷ್ಟು ನಮ್ರವಾಗಿ ಮಾತನಾಡುವದರ ಕಾರಣ ಆ ಹಳ್ಳಿಯ ಶೇಕದಾರ ಶ್ಯಾನುಭೋಗರಿಗೆ ತಿಳಿಯಲಿಲ್ಲ. ಯಾಕೆಂದರೆ ಅಮಲ್ದಾರರು ತಕರಾರು ತಖ್ತೆ ನಾಶವಾದ ಸಂಗತಿಯನ್ನು ಯಾರಿಗೂ ತಿಳಿಸಿರಲಿಲ್ಲ. ಮಲ್ಲಿಗೆಹಳ್ಳಿ ನಾದಿರ್‌ಷಾವಿಗೆ ಮಾತ್ರ ಈ ಸಂಗತಿ ಗೊತ್ತಾಗಿದ್ದಿತು. ಶೇಕದಾರರು ಒಬ್ಬೊಬ್ಬನಾಗಿ ಕರೆಸಿದ ಕೂಡಲೇ ಅಮಲ್ದಾರರು ಅವನಿಗೆ ಎಚ್ಚರಿಕೆ ಕೊಟ್ಟು "ಇನ್ನು ಸರ್ಕಾರಿ ಜಮೀನುಗಳನ್ನು ಒತ್ತಬೇಡಿ. ಶ್ಯಾನುಭೋಗ ತಳದ ತಂದೆ. ಏನಾದರೂ ಒಂದು ಚೂರು ತರ್ಕಾರಿ ಗಿರ್ಕಾರಿ ಕೊಡಿ. ಈ ಪ್ರಪಂಚ ಸಾಕೋನೆ ರೈತ. ಒಬ್ಬ ಶ್ಯಾನುಭೋಗ ಶೇಕದಾರರಿಗೆ ಹೊಟ್ಟೆ ತುಂಬುವುದು ನಿಮಗೆ ಕಷ್ಟವೆ? ಪ್ರತಿಯೊಂದಕ್ಕೂ ಸರ್ಕಾರ ಬಂದು ಎಲ್ಲಿ ವಿಚಾರಣೆ ಮಾಡುತ್ತೆ. ನೀವು ನೀವು ಸರಿಹೋಗಬೇಕು. ಇಲ್ಲದಿದ್ದರೆ

ಶ್ಯಾನುಭೋಗರು ತಕರಾರು ತರುತ್ತಾರೆ. ನಾವು ಜುಲ್ಮಾನೆ ಹಾಕುತ್ತೇವೆ" ಎಂದರು. ರೈತರಿಗೆ ಬಹು ಸಂತೋಷವಾಯಿತು. ಶ್ಯಾನುಭೋಗ ಶೇಕದಾರರಿಗೂ ಸಂತೋಷವೇ ಆಯಿತು. ಅಲ್ಲಿಂದ ಈಚೆಗಾಗಲೀ ಹಿಂದೆಯಾಗಲಿ ಅಮಲ್ದಾರರು ಹೀಗೆ ತಕರಾರು ತಖ್ತೆಯನ್ನು ಪೂರ್ಣವಾಗಿ ವಜಾ ಮಾಡಿದುದ ರೈತರಿಗೆ ಜ್ಞಾಪಕವಿಲ್ಲ. ಈ ವಿಷಯ ಬಂದಾಗ ಮಲ್ಲಿಗೆಹಳ್ಳಿ ಶ್ಯಾನುಭೋಗರು ಮಾತ್ರ ಏನೋ ರಹಸ್ಯವನ್ನು ತಿಳಿದವರಂತೆ ಒಂದು ವಿಧವಾಗಿ ನಗುತ್ತಿದ್ದುದು ಕಾಣುತ್ತಿದ್ದಿತು.

ಆ ದಿವಸ ಅಮಲ್ದಾರರು ಉಳಿದ ಎರಡು ಹಳ್ಳಿಗಳಿಗೂ ಹೋಗಲೇ ಇಲ್ಲ. ಅವರು ಶ್ಯಾನುಭೋಗ್ ನಾದಿರ್ ಷಾ ನೊಂದಿಗೆ "ಸರ್ಕಾರಕ್ಕೆ ಮೂರು ಕಾಸು ಫಾಯಿದೆ ಇಲ್ಲ. ತಕರಾರು ತಖ್ತೆ ವಜಾ ಮಾಡಿದ ಮೇಲೆ ಇನ್ನು ಯಾಕೆ ಹಳ್ಳಿಗಳಿಗೆ ಹೋಗಬೇಕು. ರೈತರನ್ನೆಲ್ಲ ಇಲ್ಲಿಗೆ ಕರಸಿಬಿಡಿ. ಇಲ್ಲಿಂದಲೇ ಹೇಳಿ ಕಳುಹಿಸಿ ಬಿಡೋಣ" ಎಂದರು. ಶೇಕದಾರರು ನಾಯ್ಕನಹಳ್ಳಿ ನಾರನಹಳ್ಳಿ ಈ ಎರಡು ಗ್ರಾಮಗಳ ತಕರಾರು ತಖ್ತೆಗಳ ರೈತರನ್ನು ಮಲ್ಲಿಗೆಹಳ್ಳಿಗೆ ಬರುವಂತೆ ಹೇಳಿದರು. ಸುತ್ತ ಜನ ನಿಂತಿದ್ದುದನ್ನು ಕಂಡು ಅಮಲ್ದಾರರು "ಗಾಡಿ ಊರ ಹೊರಕ್ಕೆ ಬರಲಿ. ಅಲ್ಲಿ ಅದರ ಮೇಲೆ ಕುಳಿತುಕೊಳ್ಳೋಣ" ಎಂದು ಹೇಳಿ ಊರಿನ ಹೊರಬಾಗಿಲಿನವರೆಗೆ ಬಂದು, ಅಲ್ಲಿ ಎತ್ತಿನ ಕೊರಳು ಬಿಡಿಸಿ ಅನಂತುವನ್ನು ಮೊದಲು ಗಾಡಿಗೆ ಕೂರಿಸಿ ಅನಂತರ ತಾವೂ ಹತ್ತಿ ಮಲ್ಲಿಗೆಹಳ್ಳಿ ಕಡೆ ಹೊರಟರು.

---

## ೬. ಅಮಲ್ದಾರರ ಬೇಬಿ ಷೋ

---

ಆ ಸಾಯಂಕಾಲ ತಾಲ್ಲೂಕು ಜಮಾಬಂದಿ ಆಯಿತು. ಆ ಜಮಾಬಂದಿ ಎಂಬುದು ಎಂತಹ ಅಮಲ್ದಾರರ ದರ್ಬಾರು ಎನ್ನುವುದು ಎದುರಿಗೆ ನೋಡಿದವರಿಗೆ ಮಾತ್ರ ಗೊತ್ತಾಗುತ್ತದೆ. ಆವೇಳೆಗಳಲ್ಲಿ ಅಮಲ್ದಾರರಿಗೆ ನಿಜವಾಗಿಯೂ ತಾವು ತಾಲ್ಲೂಕಿನ ಧೊರೆ ಎಂಬ ಭಾವ ಹೆಚ್ಚು ದೃಢವಾಗುತ್ತದೆ. ಮಲ್ಲಿಗೆಹಳ್ಳಿ ಜಮಾಬಂದಿಯಲ್ಲಿ ಆ ಭಾವ ಅಮಲ್ದಾರರಿಗೆ ಪೂರ್ಣವಾಗಿ ಬರುವುದಕ್ಕೆ ಒಂದು ತೊಂದರೆ

ಇತ್ತು. ಅದೇನೆಂದರೆ ಮಾರನೆ ದಿನವೇ ಸಬ್‌ಡಿವಿಜನ್‌ರು ಮಲ್ಲಿಗೆ ಹಳ್ಳಿಯಲ್ಲಿ ಹುಜೂರು ಜಮಾಬಂದಿ ಇಟ್ಟುಕೊಂಡಿದ್ದರು. ಆದುದರಿಂದ ತಾವು ಮಾಡಿದ ಹೆಚ್ಚು ಕಮ್ಮಿಗಳು ಯಾವುವು ಅವರ ಗಮನಕ್ಕೆ ಬರುವುವೋ ಎಂದೂ ಅಮಲ್ದಾರರಿಗೆ ಗಾಬರಿಯಾಗಿತ್ತು. ಅಲ್ಲದೆ ಮರುದಿವಸವೇ ಯಾವಾಗ ಮತ್ತೊಬ್ಬ ಮೇಲಧಿಕಾರಿ ಬರುವುದು ರೈತರಿಗೆ ತಿಳಿದುಹೋಯಿತೋ, ಆಗ ರೈತರ ಮುಖವನ್ನು ನೋಡಿದರೆ ಅಮಲ್ದಾರರಿಗೆ ಸ್ವಲ್ಪ ಸಂಕೋಚವುಂಟಾಗುತ್ತಿದ್ದಿತು. ಅಷ್ಟೆ ಅಲ್ಲದೆ ಮಾರನೆ ದಿವಸ ಹುಜೂರು ಜಮಾಬಂದಿಗೆ ಬರುವ ಸಬ್‌ಡಿವಿಜನ್ ಸಾಹೇಬರ ಎದುರಿಗೆ ಬಿಬ್ಬಿಷೊ (ಬೇಬಿಷೊ ಎಂಬ ಮಕ್ಕಳ ಪ್ರದರ್ಶನಕ್ಕೆ ಹಳ್ಳಿಯವರು ಬಿಬ್ಬಿಷೊ ಎನ್ನುತ್ತಾರೆ) ಬೇರೆ ಅಮಲ್ದಾರರು ನಡೆಸಬೇಕಾಗಿತ್ತು. ಅದಕ್ಕಾಗಿ ಅವರು ಅನೇಕ ಪಂಚಾಯ್ತಿಗಳಿಂದ ಆಮೇಲೆ ಖರ್ಚುಪಟ್ಟಿಗೆ ರುಜುಹಾಕಿಸಬಹುದೆಂದುಕೊಂಡು ಹಣ ಖರ್ಚುಹಾಕಿಸಿ ತರಿಸಿ ಇಟ್ಟಿದ್ದರು. ಆ ಹಣಕ್ಕೆ ಅವರು ಬಹುಮಾನ ಹೊಂದುವ ಮಕ್ಕಳ ಅಳತೆಯನ್ನೇ ನೋಡದೆ ಗಾಳಿಗೆ ಹಾರಿಹೋಗುವ, ಮುಟ್ಟಿದರೆ ಹರಿಯುವಂತಿರುವ, ಜಲ್ಲಿಕಾಗದಕ್ಕೆ ಸಮಾನವಾದ ಕೆಲವು ತೆಳುವಾದ ಇಮಿಟೇಶನ್ ರೇಶಿಮೆಯ ಲಂಗ ನಿಕ್ಕರುಗಳನ್ನೂ ಚಮಚ, ಶೇವಿಂಗ್ ಸೆಟ್ಟು ಸಾಬೂನು ಪೆಟ್ಟಿಗೆ ಬಣ್ಣದ ಬಣ್ಣದ ಕರವಸ್ತ್ರಗಳು ರಬ್ಬರು ಹಾಕಿದ ಹಾಲು ಸೀಸೆಗಳು ಇವುಗಳನ್ನೆಲ್ಲಾ ತರಿಸಿಟ್ಟಿದ್ದರು. ಪ್ರತಿಯೊಂದು ಹೋಬಳಿಗೂ ಒಂದು ಮಕ್ಕಳ ಪ್ರದರ್ಶನ (ಬೇಬಿಷೊ) ಮಾಡಲೇಬೇಕೆಂದೂ ಅದಕ್ಕಾಗಿ ಪಂಚಾಯ್ತಿಯಿಂದ ಇಷ್ಟು ಹಣ ಖರ್ಚುಮಾಡಲೇಬೇಕೆಂದೂ ಅಮಲ್ದಾರರಿಗೆ ಆರ್ಡರು ಬಂದಿತ್ತು. ಜಿಲ್ಲಾಧಿಕಾರಿಗಳೂ "ಪ್ರತಿ ತಿಂಗಳೂ ಎಷ್ಟೆಷ್ಟು ಬೇಬಿಷೊಮಾಡಿದಿರಿ" ಎಂದು ರಿಪೋರ್ಟು ಕೇಳುತ್ತಿದ್ದರು. ಮರುದಿವಸ ಬೆಳಿಗ್ಗೆ ಎಲ್ಲರೂ, ತಮ್ಮ ತಮ್ಮ ಮಕ್ಕಳನ್ನು ಬೇಬಿ ಷೋವಿಗೆ ಸ್ಕೂಲಿಗೆ ಕರೆತರಬೇಕೆಂದೂ ಅಲ್ಲಿ ಒಳ್ಳೆಯವಾಗಿರುವ ಮಕ್ಕಳನ್ನು ಚುನಾಯಿಸುವರೆಂದೂ ಅವರಿಗೆ ಸಾಯಂಕಾಲ ಸಭೆಯಲ್ಲಿ ಸಬ್‌ಡಿವಿಜನ್ ಸಾಹೇಬರು ಬಹುಮಾನವನ್ನು ಹಂಚುವರೆಂದೂ ಅಮಲ್ದಾರರು ಹೇಳಿ ಜಮಾಬಂದಿಯನ್ನು ಬರಖಾಸ್ತು ಮಾಡಿದರು.

ಸಬ್‌ಡಿವಿಜನ್ ಸಾಹೇಬರು ಸಾಯಂಕಾಲ ೫ ಗಂಟೆಗೆ ಬಂದ ಹುಜೂರ್ ಜಮಾಬಂದಿಯ ಸಭೆಯಲ್ಲಿಯೇ ಬೇಬಿಷೋವಿನಲ್ಲಿ ಗೆದ್ದ ಮಕ್ಕಳಿಗೆ ಬಹುಮಾನಗಳನ್ನು ಕೊಟ್ಟು, ಜಮಾಬಂದಿಯನ್ನು ಮುಂದು ವರಿಸಿ ಮಾರನೆ ದಿನ ಮಧ್ಯಾಹ್ನದ ವೇಳೆಗೆ ಮುಗಿಸಿಬಿಡುವುದಾಗಿ ಕಾರ್ಯಕ್ರಮವನ್ನು ಕಳುಹಿಸಿದ್ದರು. ಆ ಬೆಳಿಗ್ಗೆ ಹುಜೂರ್ ಗುಮಾಸ್ತರು ಪಾಳೆಗಾರರಂತೆ ಬಂದು ತಮಗಾಗಿ ಬಿಡಿಸಿದ್ದ ಜಗಲಿಯ ಮೇಲೆ ಕುಳಿತರು. ಅಮಲ್ದಾರರು ಬೆಳಿಗ್ಗೆ ೮ ಗಂಟೆ ವೇಳೆಗೆ ಸ್ಕೂಲಿಗೆ ಬಂದು ಕುಳಿತರು. ಬಹುಮಾನಕ್ಕೆ ಅರ್ಹವಾದ ಮಕ್ಕಳನ್ನು ಆರಿಸುವುದು ಆಗಿನ ಕಾರ್ಯಕ್ರಮವಾಗಿದ್ದಿತು. ಅವರ ಸುತ್ತ ಮಲ್ಲಿಗೆಹಳ್ಳಿಯ ಇಪ್ಪತ್ತು ಶ್ಯಾನುಭೋಗರೂ ಜಮಾಬಂದಿಗಾಗಿ ಬಂದಿದ್ದ ಕೆಲವು ಪಟೇಲರೂ ಕುಳಿತರು. ಬಾಗಿಲಿನಲ್ಲಿ ಅಮಲ್ದಾರರ ಜವಾನನೂ ತಳವಾರನೂ ನಿಂತರು. ದೂರದಲ್ಲಿ ಕುಳವಾಡಿಗಳು ದೊಣ್ಣೆಗಳನ್ನು ಹಿಡಿದುಕೊಂಡು ಬೀಡಿ ಸೇದುತ್ತಾ ನಿಂತಿದ್ದರು. ಅಮಲ್ದಾರರು ೨-೩ ನಿಮಿಷಗಳನಂತರ "ಎಲ್ಲಿ ಯಾರೂ ಬರಲಿಲ್ಲ. ಸಾಹುಕಾರರನ್ನು ಕರೆಯಿರಿ. ರಿಟೈರ್ಡ್ ಪೋಸ್ಟುಮಾಸ್ಟರು ಎಲ್ಲಿ? ಅವಧಾನಿ ಎಲ್ಲಿ? ಸ್ಕೂಲು ಮೇಷ್ಟರು ಯಾಕೆ ಬಂದಿಲ್ಲ. ಕಂಟ್ರಾಕ್ಟರು ಎಲ್ಲಿ" ಎಂದರು. ತಳವಾರನು ಎಲ್ಲರನ್ನೂ ಕರೆಯುವುದಕ್ಕೆ ಅರ್ಧ ದಾರಿ ಹೋಗುತ್ತಿರುವಾಗ ಅವರೆಲ್ಲ ಎದುರಿಗೆ ಬರುತ್ತಿರುವುದು ಕಂಡುದರಿಂದ ಅವನು ಹಿಂದಿರುಗಿದನು. ಎಲ್ಲರೂ ಬಂದು ಕುಳಿತನಂತರ ಅಮಲ್ದಾರರು "ಏನ್ರಿ. ಸಾವಿರ ಪ್ರಜೆಗಳಿರುವ ಗ್ರಾಮದಲ್ಲಿ ಶೇಕದಾರರು ಶ್ಯಾನುಭೋಗರು ಹೊರತು ಮತ್ತಾರೂ ಬೇಬಿ ಷೋವಿಗೆ ಬರಲೇ ಇರಲಿಲ್ಲವೆಲ್ಲ ಎಂದರು. ನಾದಿರ್‌ಷಾ "ಕೆಲಸ ಪ್ರಾರಂಭಿಸೋಣ. ನಿಧಾನವಾಗಿ ಬರುತ್ತಾರೆ ನಡೀತಾ ಇರಲಿ" ಎಂದರು. ಅಮಲ್ದಾರರು ತಮ್ಮ ಸ್ವಾಭಾವಿಕವಾದ ಹುದ್ದೆಯ ದೆಸೆಯಿಂದ ಕುರ್ಚಿಯ ಮೇಲೆ ಯಾರೂ ಹೇಳದಿದ್ದರೂ ತಮ್ಮ ಪಾಡಿಗೆ ತಾವೇ ಅಧ್ಯಕ್ಷರಾಗಿ ಕುಳಿತರು. ಅನಂತರ "ಒಬ್ಬೊಬ್ಬರಾಗಿ ತಮ್ಮ ಮಕ್ಕಳನ್ನು ಕರೆದುಕೊಂಡು ತಾಯಂದಿರು ಬರಲಿ. ಎಲ್ಲರನ್ನೂ ಒಟ್ಟಾಗಿ ನುಗ್ಗುವುದಕ್ಕೆ ಬಿಡಬೇಡ. ದೊಂಬಿಯಾದರೆ ಸರಿಯಾಗಿ ಬಹುಮಾನಕ್ಕೆ ಚುನಾಯಿಸಲು ಸಾಧ್ಯವಾಗುವುದಿಲ್ಲ" ಎಂದರು. ತಳವಾರನು "ಅಪ್ಪಣೆ" ಎಂದನು.

ಸುಮಾರು ಅರ್ಧಗಂಟೆಯವರೆಗೆ ಅವರೆಲ್ಲಾ ನೆಟ್ಟ ಕಣ್ಣನ್ನು ತೆಗೆಯದೆ ಬಾಗಿಲುಗಳ ಕಡೆಯೇ ನೋಡುತ್ತಿದ್ದರು. ಬೀದಿಯಲ್ಲಿ ದನ ಓಡಾಡುವ ಸದ್ದಾದರೂ ಯಾರೋ ಮಗುವನ್ನು ಕರೆದುಕೊಂಡು ಬಂದಿದ್ದಾರೆಂದು ಅವರು ಉತ್ಸಾಹಿಗಳಾಗುತ್ತಿದ್ದರು. ಆದರೆ ಎಷ್ಟು ಹೊತ್ತಾದರೂ ಒಂದು ಮಗುವಾಗಲೀ, ಒಬ್ಬ ತಾಯಿಯಾಗಲೀ ಬರ ಲಿಲ್ಲ. ಕುಳಿತು ಕುಳಿತು ಅಮಲ್ದಾರರಿಗೆ ಬೇಸರಿಕೆಯಾಯಿತು. " ನೀವು ಸರಿಯಾಗಿ ಎಲ್ಲರಿಗೂ ಹೇಳಿಸಿದಿರಾ " ಎಂದು ಅವರು ಶ್ಯಾನುಭೋಗನ ಮೇಲೂ ಶೇಕದಾರರ ಮೇಲೂ ರೇಗಿದರು. ಶ್ಯಾನುಭೋಗರು " ಕುಳ ವಾಡಿ ತುಟಿ ಊದುವವರೆಗೆ ರಾತ್ರಿಯೆಲ್ಲಾ ಸಾರಿದ್ದಾನೆ. ತಮಟೆ ಹತ್ತು ಸಲ ಕಾಯಿಸಿಯಾಯಿತು " ಎಂದರು. ಅಮಲ್ದಾರರು " ಯಾರೂ ಯಾರ ಮನೆಯಲ್ಲಿ ಮಕ್ಕಳಿವೆಯೋ ಅವರನ್ನೆಲ್ಲಾ ಕರೆದುಕೊಂಡು ಬರು ವಂತೆ ತಾಯಿಂದಿರಿಗೆ ಹೇಳಿ ಎಂದು ಅಪ್ಪಣೆಮಾಡಿದರು. ತಳವಾ ರನು ಮನೆ ಮನೆಗೂ ಹೊರಟನು ಪಾಪ. ಆ ದಿನ ಅವನಿಗೆ ಆದ ಅನು ಭವವನ್ನು ತಳವಾರ ಎಂದಿಗೂ ಮರೆಯುವಂತೆ ಇಲ್ಲ. ಅವನು ಹೋಗಿ ಕರೆದ ಮೊದಲನೆಯ ತಾಯಿಯು " ಮಗುವಿಗೆ ಹಾಕುವುದಕ್ಕೆ ಅಂಗಿ ಇಲ್ಲ. ನೀನೇ ಕರೆದುಕೊಂಡು ಹೋಗು " ಎಂದಳು. ತಳವಾರನು " ಮಗುವನ್ನು ನೀನೇ ಕರೆದುಕೊಂಡು ಬಾ " ಎಂದನು. ತಾಯಿಯು " ಈಗ ಮನೆಕೆಲಸ ಬಿಟ್ಟು ಎಲ್ಲಿ ಬರಲಿ ಹೋಗು " ಎಂದಳು. ಮುಂದಲ ಮನೆಗೆ ಹೋದಾಗ ಮಗುವಿನ ತಂದೆ ಮನೆಯಲ್ಲಿದ್ದನು. ತಳವಾರನು " ಮಗುವಿಗೆ ಅಂಗಿ ಬರುತ್ತದೆ " ಎಂದುದನ್ನು ಕೇಳಿ ತಂದೆ ಮಗು ವನ್ನು ಕರೆದುಕೊಂಡು ಹೊರಟನು. ಆದರೆ ತಳವಾರನು " ನಿನ್ನ ಹೆಂಡತಿ ಬರಲಿ. ಸಾಹೇಬರ ಅಪ್ಪಣೆಯಾಗಿದೆ " ಎಂದನು. ಗಂಡನಿಗೆ ಕೋಪಬಂತು " ಹೋಗು ನಿನ್ನ ಬಹುಮಾನವೇ ಬೇಡ " ಎಂದನು. ತಳವಾರನಿಗೆ ಪ್ರತಿಯೊಂದು ಮನೆಯಲ್ಲಿಯೂ ಒಂದೊಂದು ಜವಾಬು ಬಂತು. ಒಂದೆರಡು ಕಡೆ ಮಾರಾಮಾರಿಯಾಗುವ ಪ್ರಸಂಗ ಬಂತು. " ನಿನ್ನ ಸಾಹೇಬರಿಗೆ ಸ್ವಂತ ಮಕ್ಕಳಿಲ್ಲವೇ ? ಆ ಮಕ್ಕಳನ್ನು ನೋಡಿ ಸಂತೋಷಪಡಲಿ. ಹಾಗೂ ನಮ್ಮ ಮಕ್ಕಳನ್ನು ನೋಡಬೇಕಾದರೆ ನಮ್ಮ ಮನೆಗೆ ಬಂದು ನೋಡಿಕೊಂಡು ಹೋಗಲಿ " ಎಂದು ಕೆಲ

ವರು ತಾಯಂದಿರು ಬಾರಿಸಿದರು. ಒಬ್ಬಿಬ್ಬ ಮುದುಕರು "ಶೇಕದಾರರಿಗೆ ಶ್ಯಾನುಭೋಗರಿಗೆ ಪಂಚಾಯ್ತಿ ದುಡ್ಡು ಬಾಯಲ್ಲಿ ಹಾಕ್ಕೊಳ್ಳೋಕೆ ಇದೊಂದು ದಾರಿ ಸಿಕ್ಕಿತು" ಎಂದುಕೊಂಡರು. ಕೊನೆಗೆ ತಳವಾರ ಏಟುತಿನ್ನದೆ ಅಮಲ್ದಾರರ ಬಳಿಗೆ ಬರುವ ವೇಳೆಗೆ ಸಾಕಾಗಿ ಹೋಯಿತು.

ಅಮಲ್ದಾರರು ಪ್ರತಿ ಮನೆ ಬಾಗಿಲಿಗೂ ಹೊರಟರು. ಮನೆಗಳ ಬಾಗಿಲಿನಲ್ಲಿ ಇವರು ನಿಂತುಕೊಂಡು ಮಕ್ಕಳನ್ನು ತಾಯಂದಿರು ಕರೆದುಕೊಂಡು ಬಂದ ಹೊರತು ಮುಂದೆ ಹೋಗುವುದಿಲ್ಲವೆಂದು ಮೊಂಡು ಬಿದ್ದು ನಿಂತೇಬಿಡುತ್ತಿದ್ದರು. ಅವರು ಆಕಾರದಲ್ಲಿ ಒಳ್ಳೆ ರಾಕ್ಷಸನಾಗಿ ಇದ್ದುದಕ್ಕೂ ಪ್ರತಿ ಮನೆಯ ಬಾಗಿಲಿನಲ್ಲಿಯೂ ೨೦–೩೦ ಜನ ನಿಂತುಕೊಂಡು ಮಕ್ಕಳನ್ನು ಎತ್ತಿಕೊಂಡು ಬಾ ಎಂದು ಕೂಗಾಡುತ್ತಿದ್ದುದಕ್ಕೂ ತಾಯಂದಿರು ಹೆದರಿದರು. ಅದರಲ್ಲಿಯೂ ಆರು ತಿಂಗಳ ೯ ತಿಂಗಳ ಮಕ್ಕಳನ್ನು ಎತ್ತಿಕೊಂಡು ಬರಬೇಕಾದರೆ, ಪಾಪ ಆ ತಾಯಂದಿರಿಗೆ ಉಟ್ಟುಕೊಳ್ಳಲು ಸರಿಯಾದ ಬಟ್ಟೆಗಳು ಸಹ ಇರಲಿಲ್ಲ. "ರೈತರು ಮನಸ್ಸುಮಾಡಿದರೆ ಇನ್ನಷ್ಟು ಕಂದಾಯವನ್ನಾದರೂ ಸುಲಭವಾಗಿ ಕೊಡಬಲ್ಲರು" ಎಂದು ಹೇಳುತ್ತಿದ್ದ ಅಮಲ್ದಾರರಿಗೆ ಸಹ ಅವರ ದಾರಿದ್ರ್ಯವನ್ನು ಕಂಡು ಬಹಳ ಕನಿಕರವುಂಟಾಯಿತು. ರೈತರ ಬಡತನ ಇಷ್ಟರ ಮಟ್ಟಿಗೆ ಎಂಬುದು ಅವರಿಗೆ ಗೊತ್ತಿರಲಿಲ್ಲ. ಅನೇಕರು ಈ ವಿಚಾರ ಹೇಳಿದ್ದಾಗ ಅವರು ನಂಬಿರಲಿಲ್ಲ. ಹೇಳಿದ್ದವರ ಮೇಲೆಯೇ ಕೋಪಿಸಿಕೊಂಡಿದ್ದರು. ಕೊನೆಯಲ್ಲಿ ಅಂತೂ ಇಂತು ಕೆಲವು ಮಕ್ಕಳನ್ನು ಆರಿಸಿಯಾಯಿತು. ಅವರನ್ನೆಲ್ಲಾ ಸಾಯಂಕಾಲ ಸಬ್‌ಡಿವಿಜನ್ ಜಮಾಬಂದಿ ದರ್ಬಾರಿಗೆ ಬರಬೇಕೆಂದು ಅಮಲ್ದಾರರು ಹೇಳಿ ತಮ್ಮ ಬಿಡಾರಕ್ಕೆ ಹೋದರು. ಆದರೆ ಯಾವ ಕನಿಕರದ ಮನೋಭಾವದಿಂದ ಅವರು ತಮ್ಮ ಬಿಡಾರಕ್ಕೆ ಹೋದರೋ ಆ ಆರ್ದ್ರ ಮನೋಭಾವ ಅವರಲ್ಲಿ ಹೆಚ್ಚುಕಾಲ ಉಳಿಯಲಿಲ್ಲ. ಅದರ ಕಾರಣ ಮುಂದಲಂತೆ ಇತ್ತು.

ಅಮಲ್ದಾರರ ಬಿಡಾರದ ವ್ಯವಸ್ಥೆಯನ್ನು ಹೆಡ್‌ಗುಮಾಸ್ತರು ನೋಡಿಕೊಳ್ಳುತ್ತಿದ್ದಂತೆ ಸಬ್‌ಡಿವಿಜನ್ನರ ವ್ಯವಸ್ಥೆ ಅಮಲ್ದಾರರು ನೋಡಿ

ಕೊಳ್ಳಬೇಕಾಗಿತ್ತು. ಅದು ನಿರಂಕುಶ ಸರ್ಕಾರಿ ಅಧಿಕಾರಿಗಳ ಸ್ವಭಾವ. ಅವರಲ್ಲಿ ೧೫ ರೂಪಾಯಿ ಸಂಬಳದ ಶೇಕದಾರ್ರ ಆಳು ೧೭ ರೂಪಾಯಿ ನವರನ್ನು "ಸಾಹೇಬ" ಎಂದು ಕರೆಯಬೇಕು. ಅವರು ತೋರಿ ಸುವ ಜಬೂರ್ ಹಾಗೆಯೇ ಇರುತ್ತದೆ. ಅವರು ಒಬ್ಬೊಬ್ಬರೂ ಒಬ್ಬೊಬ್ಬ ಪಾಳೆಯಗಾರರಂತೆಯೇ. ಸಬ್‌ಡಿವಿಜನರ 'ಕಿಟ್' ಪೂರ್ಣ ವಾಗಿ ಬಂದು ಟಿ. ಬಿ. ಯಲ್ಲಿ ಇಳಿದಿತ್ತು. ಅಮಲ್ದಾರರಿಗೆ ಸಬ್ ಡಿವಿ ಜನ್‌ರನ್ನು ಕಂಡರೆ ಎರಡು ರೀತಿಯಲ್ಲಿ ಭಯವಿತ್ತು. ಮೊದಲನೆಯದಾಗಿ ಹೆಡ್‌ಕ್ವಾರ್ಟರಿನಲ್ಲಿ ಅಮಲ್ದಾರರ ಮನೆಯ ಎದುರಿಗೆ ಸಬ್‌ಡಿವಿಜನರ ಮನೆ ಇತ್ತು. ಎಲ್ಲರಿಗೂ ಗೊತ್ತಿರುವಂತೆ, ಸಬ್‌ಡಿವಿಜನರ ಮನೆಯ ಎದುರಿಗೆ ಎಲ್ಲಾದರೂ ಅಮಲ್ದಾರರು ಇರುವುದುಂಟೆ? ಗೊರಿಲ್ಲಾ ಕಪಿಯ ಎದುರಿಗೆ ಸಾಧಾರಣ ಕಪಿ ಇರುವುದೆ? ಆದುದರಿಂದ ಸಬ್ ಡಿವಿಜನ್ ಎದುರಿಗೆ ಬಂದಕೂಡಲೇ ಅಮಲ್ದಾರರು ರಾತ್ರಿ ರಾತ್ರಿ ಇದ್ದದ್ದು ಇದ್ದಂತೆ ನಿಂತಲ್ಲಿ ನಿಲ್ಲದೆ ಓಡಬೇಕಾಗಿತ್ತು. ಆದರೆ ಅದಕ್ಕೆ ಅವಕಾಶವಿರಲಿಲ್ಲ. ಯಾಕೆಂದರೆ ಹಿಂದಲ ಅಮಲ್ದಾಲರಿಗೆ ಡಿ. ಪಿ. ಡಬ್‌ಲ್‌ಯು ಕಂಟ್ರಾಕ್ಟರೊಂದಿಗೆ ಬಹಳ ಸ್ನೇಹ ಬಂದುದರಿಂದ ಅಮ ಲ್ದಾರರು ಕಂಟ್ರಾಕ್ಟರ ಮನೆಯನ್ನು ತಮಗೆ ಇಷ್ಟಬಂದಂತೆ ಸರಿಮಾಡಿಸಿ ಕೊಂಡು ಅದನ್ನು ಅಮಲ್ದಾರ್ರ ಕ್ವಾರ್ಟರ್ಸ್ ಮಾಡಿ ಸರ್ಕಾರಕ್ಕೆ ಸರಿ ಯಾದ ಬಾಡಿಗೆಗೆ ಗೊತ್ತುಮಾಡಿಕೊಟ್ಟು ತಾವು ಅಲ್ಲಿ ಇರತೊಡಗಿದರು. ಅವರಿಗೆ ವರ್ಗವಾದಾಗ ಹೊಸ ಅಮಲ್ದಾರರು ಬಂದವರೂ ಅದೇ ಮನೆಗೆ ಬಾಡಿಗೆಗೆ ಬಂದರು. ಅವರು ಅಲ್ಲಿಗೆ ಬಂದ ೧೫ ದಿನಗಳ ನಂತರ, ಸಬ್‌ಡಿವಿಜನ್ ಆಫೀಸರು ಹಿಂದೆ ಇದ್ದ ಮನೆಯಲ್ಲಿ ಇಲಿ ಬಿದ್ದುದರಿಂದ, ಖಾಲಿ ಬಿದ್ದಿದ್ದ ಅಮಲ್ದಾರರ ಮನೆಯ ಎದುರು ಮನೆಗೆ ಬಂದರು. ಅವರು ಬಂದುದು ನೋಡಿಯೇ ಅಮಲ್ದಾರರಿಗೆ ಕಾಲಿಗೆ ಮುಳ್ಳು ಹೊಕ್ಕಂತೆ ಆಯಿತು. ಹೊಟ್ಟೆನೋವು ಬಂದಂತೆ ಆಯಿತು. ಮನೆ ಬದಲಾಯಿಸೋಣವೆಂದರೆ ಸರ್ಕಾರದವರು ಅದು ಅಮಲ್ದಾರರ ಕ್ವಾರ್ಟರ್ಸ್ ಎಂದು ಮಾಡಿ ಅಮಲ್ದಾರರ ಸಂಬಳದಿಂದ ಬಾಡಿಗೆ ಹಿಡಿ ಯುತ್ತಿದ್ದುದರಿಂದ ಅದಕ್ಕೆ ಅವಕಾಶವಿರಲಿಲ್ಲ.

ಅನಂತರ ಅಮಲ್ದಾರಿಣಿಗೂ ಸಬ್‌ಡಿವಿಜನ್ ರಾಣಿಗೂ ಸ್ಪರ್ಧೆ

ಪ್ರಾರಂಭವಾಯಿತು. ಮೊದಲು ಮೊದಲು ಈ ಸ್ಪರ್ಧೆ ಬರಿಯ ಸೀರೆ ರವಿಕೆ, ಮಕ್ಕಳ ಬಟ್ಟೆಗಳು ಮನೆಯ ಅಡಿಗೆ ಕಸೂತಿಗಳ ಮೊದಲಿಗಳು ಇವುಗಳಲ್ಲಿ ಪ್ರಾರಂಭವಾದುವು. ಆದರೆ ಮಹಿಳಾ ಸಮಾಜದಲ್ಲಿ ಸೇರಿದಾಗ, ಹೊರಗೆ ಆಫೀಸರ್ ಕ್ಲಬ್‌ನಲ್ಲಿ ಹೇಗೆ ಮೇಲು ಕೀಳಗಳೋ ಹಾಗೆಯೇ ಮಹಿಳಾ ಸಮಾಜದಲ್ಲಿಯೂ ಜಿಲ್ಲಾಧಿಕಾರಿಣಿ ಮೊದಲನೆಯವರು, ಸಬ್‌ಡಿವಿಜನ್ ರಾಣಿ ಎರಡನೆಯವರು, ಅಮಲ್ದಾರಿಣಿ ಮೂರನೆಯವರು, ಶಿರಸ್ತೆದಾರಿಣಿ ನಾಲ್ಕನೆಯವರು. ದರ್ಜೆವಾರು ಮೇಲಿನವರು ಇಲ್ಲದಿರುವಾಗ ಅವರ ಕೇಳಗಿನವರೇ ಮುಖ್ಯರು. ಅಮಲ್ದಾರಿಣಿ ಎಷ್ಟೇ ದೊಡ್ಡವಳಾದರೂ ಸಬ್‌ಡಿವಿಜನ್ ರಾಣಿ ಮಾತನಾಡುತ್ತಿರುವಾಗ, ಶಿರಸ್ತೆದಾರಿಣಿ ಅಮಲ್ದಾರಿಣಿಯ ಪರ ಹಿಡಿಯುವುದಕ್ಕೆ ಆಗುವುದಿಲ್ಲ. ಅವಳು ಸಬ್‌ಡಿವಿಜನ್ ರಾಣಿಯ ಪರವನ್ನೇ ಹಿಡಿಯಬೇಕು. ಅಲ್ಲಿ ಜಿಲ್ಲಾಧಿಕಾರಿಣಿ ಇದ್ದರೆ ಜಿಲ್ಲಾಧಿಕಾರಿಣಿಯ ಪರವನ್ನೇ ಹಿಡಿಯಬೇಕು. ಇಲ್ಲದಿದ್ದರೆ ಅವರು ತಮ್ಮ ತಮ್ಮ ಮನೆಗಳಲ್ಲಿ ಹೋಗಿ ಗಂಡಂದಿರ ಕೀಲು ತಿರುಗಿಸುತ್ತಾರೆ. ಸರಿ ಮರುದಿನ ಮೇಲಧಿಕಾರಿ ಕೆಳ ಅಧಿಕಾರಿಯನ್ನು ಕ್ಲಬ್ಬಿನಲ್ಲಿ ಠರಾಯಿಸುತ್ತಾರೆ. ಅಲ್ಲಿಂದ ಮುಂದೆ ಜಿಲ್ಲಾಧಿಕಾರಿಣಿಯ ಅಧಿಕಾರ ನಿರ್ವಿವಾದವಾಗಿ ಸ್ಥಾಪಿತವಾಗುತ್ತದೆ.

ಸಬ್‌ಡಿವಿಜನ್ ರಾಣಿಗೆ ಹೀಗೆ, ಮಹಿಳಾ ಸಮಾಜದಲ್ಲಿ ಅಮಲ್ದಾರಿಣಿಯನ್ನು ಪಾದಾಕ್ರಾಂತಳನ್ನಾಗಿ ಮಾಡಿಕೊಂಡುದು ಮಾತ್ರವೇ ಸಾಲಲಿಲ್ಲ. ತನ್ನ ಮನೆಯ ಎದುರಿಗೆ ಅಮಲ್ದಾರಿಣಿ ತನ್ನ ಸ್ವಂತ ಮನೆಯಲ್ಲಿ ಪ್ರಬಲವಾಗಿರುವುದೂ ಅವಳಿಗೆ ಒಪ್ಪಿಗೆಯಾಗಿರಲಿಲ್ಲ. ಅಮಿಲ್ದಾರಿಣಿ ತನ್ನ ಗಂಡನಿಗೆ ಹೆಂಡತಿಯಾಗಿ, ಮನೆಗೆ ಯಜಮಾನಿಯಾಗಿ ತನ್ನ ಮಕ್ಕಳಿಗೆ ತಾಯಿಯಾಗಿ ತಾಲ್ಲೂಕು ಕಛೇರಿಯ ಜವಾನರಿಗೆ "ಅಮ್ಮಾ ಅವ್ರು" ಆಗಿರುವುದು ಸಹ ಸಬ್‌ಡಿವಿಜನ್ ರಾಣಿಗೆ ಸಹಿಸುತ್ತಿರಲಿಲ್ಲ. ಸಾಲದುದಕ್ಕೆ ಅಮಲ್ದಾರರು ಸ್ವಲ್ಪ ವಯಸ್ಸಾದವರಾಗಿ ತುಂಬು ಸಂಸಾರಿಗಳಾಗಿದ್ದರು. ಅವರ ಹೆಂಡತಿ ದೊಡ್ಡ ಜಮೀನ್ದಾರರ ಮನೆಯಿಂದ ಬಂದವರು. ಅವರ ಎಲ್ಲಾ ಸ್ವಭಾವದಲ್ಲೂ ಒಳ್ಳೆಯ ಧಾರಾಳವೂ ದೊಡ್ಡಸ್ತಿಕೆಯೂ ಕಾಣುತ್ತಿದ್ದಿತು. ಅವರ ಮನೆಯಲ್ಲಿ ಹಬ್ಬ ವ್ರತಗಳಾದರೆ ತಾಲ್ಲೂಕು ಕಛೇರಿಯ ಗುಮಾಸ್ತ ಜವಾನರನ್ನೆಲ್ಲಾ

ಊಟಕ್ಕೆ ಕರೆಯುತ್ತಿದ್ದರು. ಆಗ ಅವರ ಮನೆಯಲ್ಲಿ ಭಾರಿ ಮದುವೆ ಯಂತಹ ಸಂಭ್ರಮ ನಡೆಯುತ್ತಿದ್ದಿತು. ಬರುವವರು ಬರುತ್ತಿದ್ದರು. ಹೋಗುವವರು ಹೋಗುತ್ತಿದ್ದರು. ನಿತ್ಯಗಟ್ಟಲೆಯಲ್ಲಿಯೂ ಭಿಕ್ಷುಕರ ಸಂಜೆಗವಳದವರ ಸಂಖ್ಯೆ ಅಮಲ್ದಾರರ ಮನೆಯಲ್ಲಿ ಹೆಚ್ಚಾಗಿರುತ್ತಿದ್ದಿತು. ಆದರೆ ಸಬ್‌ಡಿವಿಜನ್ ರಾಣಿ ರಿಟೈರ್ಡ್ ಶೇಕದಾರನ ಮಗಳಾಗಿದ್ದರು. ಅವರ ತಂದೆ ಶೇಕದಾರಿಯಿಂದ ರಿಟೈರ್ ಆದಮೇಲೆ ಬದಲಿ ಫಿರ್ಕಾ ಗಳಲ್ಲಿ ಕೆಲವು ಸಲ ಶ್ಯಾನುಭೋಗರಾಗಿಯೂ ಕೆಲಸಮಾಡಿದ್ದರು. ಅವರ ಮಗಳಾದ ಸಬ್‌ಡಿವಿಜನ್ ರಾಣಿಯು ಒಳ್ಳೆಯ ಚೌಕಾಶಿಯ ಹುಡುಗಿ ಯಾಗಿದ್ದಳು. ಸಬ್‌ಡಿವಿಜನ್ ಸಾಹೇಬರು ನೆಟ್ಟಗೆ ಟ್ರೆಜರಿ ಅಸಿಸ್ಟೆಂಟ ರಾಗಿ ಅಧಿಕಾರವನ್ನು ಹೊಂದಿದವರು. ಅವರಿಗೆ ಹೊಸದಾಗಿ ಕೆಲಸ ವಾಗುವ ಎಲ್ಲಾ ಪ್ರೊಬೇಶನರುಗಳಿಗೂ ಇರುವಂತೆ ತಾವು ಖಂಡಿತ ದಿವಾನರಾಗುತ್ತೇವೆಂದು ನಂಬಿಕೆ ಇದ್ದಿತು. ಆದುದರಿಂದ ಅವರು ಈಗಿ ನಿಂದಲೇ ಒಂದು ಕಾಶನ್ನೂ ಪೋಲುಮಾಡದೆ ಕಾಸಿಗೆ ಕಾಸು ಕೂಡ ಹಾಕಲು ಪ್ರಾರಂಭಿಸಿದ್ದರು. ಸ್ವಭಾವದಿಂದಲೇ ಜಿಪುಣೆಯಾಗಿದ್ದ ಅವರ ಹೆಂಡತಿಗೆ ಆ ಮಾರ್ಗದಲ್ಲಿ ಹೆಚ್ಚು ಪಾಠವನ್ನು ಕಲಿಸುವ ಆವಶ್ಯಕತೆಯುಂಟಾಗಲಿಲ್ಲ. ಅವರ ಚೌಕಶಿಯನ್ನು ಕಂಡು ಅವರ ಆಳುಗಳಿಗೆ ಸಹ ತಿರಸ್ಕಾರವುಂಟಾಗಿತ್ತು. ಆಳುಗಳಿಗೆ ತಿಳಿಯದ ವಿಚಾರ ಯಾವುದೂ ಇಲ್ಲ. ನಿತ್ಯವೂ ಅಮಿಲ್ದಾರಿಣಿಯ ಆಳುಗಳೂ ಸಬ್‌ಡಿವಿ ಜನ್ ರಾಣಿಯ ಆಳುಗಳೂ ಸೇರಿಕೊಂಡು ತಮ್ಮ ತಮ್ಮ ಯಜಮಾನ ಯಜಮಾಂತಿಯ ಸ್ವಭಾವವನ್ನು ಚೆನ್ನಾಗಿ ಒಂದು ಚೂರನ್ನೂ ಬಿಡದೆ ಚರ್ಚಿಸುತ್ತಿದ್ದರು. ಅವರು ಚರ್ಚಿಸುತ್ತಿದ್ದುದನ್ನು ಕೇಳಿದ್ದರೆ, ಅಮಿ ಲ್ದಾರಿಣಿ ಸಬ್‌ಡಿವಿಜನ್ ರಾಣಿಯವರಿಗೆ " ಎಲಾ ಇವರಿಗೆ ನಮ್ಮ ಸಮಾ ಚಾರ ಇಷ್ಟು ಚೆನ್ನಾಗಿ ಗೊತ್ತಾಗಿದೆಯೆಲ್ಲಾ " ಎಂದು ನಾಚಿಕೆಯಾ ಗುತ್ತಿದ್ದಿತು. ಇಬ್ಬರು ಜವಾನರೂ ಅಮಿಲ್ದಾರಿಣಿ ಮಹಾತಾಯಿ ; ಸಬ್‌ಡಿವಿಜನ್ ಅಮ್ಮಾಅವ್ರು " ಜೆಲ್ಲು " ಎಂಬ ಸಿದ್ಧಾಂತಕ್ಕೆ ಬಂದಿದ್ದರು.

ಅಮಿಲ್ದಾರರ ಮನೆಗೆ ಯಾರಾದರೂ ರೈತರು ೪ ಬಾಳೆ ಎಲೆಗ ಳನ್ನೋ ಒಂದು ಹಲಸಿನ ಹಣ್ಣನ್ನೋ ತಂದುಕೊಟ್ಟರೆ ಸಬ್‌ಡಿವಿಜನ್

ರಾಣಿ ಗಂಡನನ್ನು ಕರೆದು "ಅಲ್ಲಿ ನೋಡಿ ನಿಮ್ಮ ಮುಖಕ್ಕೆ! ನಿಮ ಗಿಂತ ಕೆಳಗೆ ಇರುವವರು ಹೇಗೆ ತರಿಸುತ್ತಿದ್ದಾರೆ" ಎನ್ನುತ್ತಿದ್ದರು. ಈ ವಿಚಾರ ಆಳಿನ ಮೂಲಕ ಅಮಿಲ್ದಾರಿಣಿಯವರಿಗೆ ತಿಳಿದು ಅವರು "ಸದ್ಯ ಇದೆಲ್ಲಿಯ ಪ್ರಾರಬ್ಧ ನನ್ನ ಮನೆಯ ಎದುರಿಗೆ" ಎಂದುಕೊಂಡು, ತರುತ್ತಿದ್ದವರಿಗೆ "ಇನ್ನು ಮುಂದೆ ನೀವು ಏನು ತಂದರೂ ಹಿತ್ತಲು ಬಾಗಿಲಿನಿಂದ ತಂದುಕೊಡಿ" ಎಂದು ಹೇಳುತ್ತಿದ್ದರು. ಬರ ಬರುತ್ತಾ ಅಮಿಲ್ದಾರರಿಗೆ ಸಂತೆಯಿಂದ ಸಾಮಾನು ತರುವುದೂ ಸೌದೆಗಾಡಿ ವಗೈರೆ ವ್ಯಾಪಾರಮಾಡಿ ಹಾಕಿಸಿಕೊಳ್ಳುವುದೂ ಕಷ್ಟವಾಯಿತು. ಯಾವ ಸಾಮಾನುಗಳನ್ನು ಕರೀದಿಗೆ ತಂದರೂ ಸಬ್‌ಡಿವಿಜನ್ ರಾಣಿಯವರು ತಮ್ಮ ಆಳಿನಿಂದ ಅದು ಯಾವ ಊರು ಎಂದು ಕೇಳಿಸಿ ಗಂಡನು ಬಂದ ಕೂಡಲೇ "ಇಂಥ ಊರಿನವನು ಅವರಿಗೆ ಸೌದೆಗಾಡಿ ಹಾಕಿದ. ನೀವು ಸುಮ್ಮನೆ ದುಡ್ಡುಕೊಟ್ಟು ಸೌದೆ ತರುತ್ತೀರಿ. ನಾನು ಮಾತ್ರ ಗಂಡ ಸಾಗಿರಬೇಕಾಗಿತ್ತು. ಬಂದದ್ದರಲ್ಲಿ ಮುಕ್ಕಾಲು ನಾನು ತೆಗೆದುಕೊಂಡು ಕಾಲು ಪಾಲು ಅವಳಿಗೆ ಕೊಡುತ್ತಿದ್ದೆ" ಎನ್ನುತ್ತಿದ್ದರು. ಅಮಲ್ದಾರರಿಗೆ ಮನೆಗೆ ಸಂಸಾರಕ್ಕೆ ಬೇಕಾದ ಅಕ್ಕಿ ಬೇಳೆಗಳನ್ನು ತಂದುಕೊಳ್ಳುವುದೂ ಕಷ್ಟಕ್ಕೆ ಬಂದಿತು. ಅವರ ಹೆಂಡತಿಯವರು ಸಬ್‌ಡಿವಿಜನ್ ರಾಣಿ ಯನ್ನು ಕುರಿತು ಈ ಬ್ರಹ್ಮೇತಿಯಿಂದ ನಾನು ಬಾಯಿಗೆ ಬೇಕಾದ್ದನ್ನ ತಿನ್ನೋಕೆ ಕೂಡ ಸಾಧ್ಯವಿಲ್ಲ" ಎನ್ನುತ್ತಿದ್ದರು.

ಹೀಗೆ ಹೆಂಡತಿಯರ ವ್ಯಾಜ್ಯಗಳಿಂದ ಅಮಲ್ದಾರ ಸಬ್‌ಡಿವಿಜನ ರಲ್ಲಿ ಅಂತರವು ಹೆಚ್ಚಾಯಿತು. ಅಮಲ್ದಾರರಿಗೆ ಯಾವುದು ಇಷ್ಟ ವಾಗಿದ್ದಿತೋ ಅದನ್ನು ಸಬ್‌ಡಿವಿಜನ್ ಸಾಹೇಬರು ದ್ವೇಷಿಸುತ್ತಿದ್ದರು. ಅಮಲ್ದಾರರಿಗೆ ಮಲ್ಲಿಗೆಹಳ್ಳಿಯನ್ನು ಕಂಡರೆ ಸ್ವಲ್ಪ ವಿಶ್ವಾಸವಿತ್ತು. ಸಬ್‌ಡಿವಿಜನ್ ಸಾಹೇಬರಿಗೆ ಮಲ್ಲಿಗೆಹಳ್ಳಿಯನ್ನು ಕಂಡರೆ ಆ ಒಂದು ಕಾರಣಕ್ಕಾಗಿಯೇ ದ್ವೇಷವಿದ್ದಿತು. ಆದರೆ ಊಟ ತಿಂಡಿಗೆ ಒಳ್ಳೆಯ ವ್ಯವಸ್ಥೆಮಾಡಿಬಿಟ್ಟರೆ ಸಬ್‌ಡಿವಿಜನ್‌ರಿಗೆ ಯಾರ ಮೇಲಿದ್ದ ಕೋಪವೂ ಮರೆಯಾಗುತ್ತಿದ್ದಿತು. ಸಬ್‌ಡಿವಿಜನರು ಬರುವ ಬೆಳಿಗ್ಗೆ ಅಮಲ್ದಾರರು ಮಲ್ಲಿಗೆಹಳ್ಳಿಯವರಿಗೆ "ನೋಡಿ ಅಡಿಗೆಮನೆ ಉಗ್ರಾಣ ಲಕ್ಷಣವಾಗಿರಲಿ. ಡಬ್ಬಿಗಳಲ್ಲಿ ಸಾಮಾನುಗಳನ್ನೆಲ್ಲಾ ಹಾಕಿ ಚೀಟಿ ಅಂಟಿಸಿಬಿಡಿ. ತರ್ಕಾರಿ

ನಿಂಬೆಹಣ್ಣು ಸ್ನಾನಕ್ಕೆ ಬಿಸಿನೀರು ಒಣಗಿದ ಸೌದೆ ಎಲ್ಲಾ ಸಿದ್ಧವಾಗಿರಲಿ" ಎಂದು ಹೇಳಿದ್ದರು. ಅಮಲ್ದಾರರ ಕ್ಯಾಂಪಿಗೆ ಮೂರು ದಿವಸಗಳಿಂದ ತರ್ಕಾರಿ ಲೋಕಾನೆಲ್ಲ ಬೇಟೆಯಾಡಿ ಒದಗಿಸಿ ಶ್ಯಾನುಭೋಗರಿಗೆ ಸಾಕಾಗಿತ್ತು. ಇನ್ನಾವ ತರ್ಕಾರಿಯೂ ದೊರೆಯದೆ ಅವರು ಇವರ ಮನೆ ಹಾಳಾಗಲಿ ಎಂದುಕೊಂಡು ತಾಲ್ಲೂಕು ಹೆಡ್ ಕ್ವಾರ್ಟರಿನಿಂದ ಒಂದೊಂದು ಮಣ ಆಲುಗೆಡ್ಡೆ ಈರುಳ್ಳಿ ತರಿಸಿಹಾಕಿಸಿದ್ದರು. ಸಬ್ ಡಿವಿಜನ್ ಸಾಹೇಬರು ಮಲ್ಲಿಗೆಹಳ್ಳಿಗೆ ಹೋದವರೇ ನೆಟ್ಟಗೆ ತಮ್ಮ ಕ್ಯಾಂಪಿನ ಅಡಿಗೆ ಮನೆಗೆ ಹೋದರು. ಅವರಿಗೆ ಅಲ್ಲಿ ಹೋದ ಕೂಡಲೇ ಈರುಳ್ಳಿ ಆಲುಗೆಡ್ಡೆಗಳು ಕಣ್ಣಿಗೆ ಬಿದ್ದುವು. ಮೊದಲೇ ಮಲ್ಲಿಗೆಹಳ್ಳಿಯ ಮೇಲೆ ಕೋಪವಿದ್ದ ಅವರಿಗೆ ಆ ತರ್ಕಾರಿಗಳನ್ನು ಕಂಡು ಮೈ ಉರಿಯ ಹತ್ತಿತು. ಹಳ್ಳಿಯಲ್ಲಿ ಹಸಿ ಹಸಿ ಹಸಿರು ತರ್ಕಾರಿಗಳನ್ನು ತಿನ್ನೋಣ ಎಂದು ಬಂದರೆ ಇಲ್ಲೂ ಈ ಆಪದ್ಬಾಂಧವ ಅನಾಥರಕ್ಷಕ ಬಂತಲ್ಲಾ ಎಂದು ಅವರು ಮೊರೆದರು. ಆ ಸಲದ ಅವರ ಕ್ಯಾಂಪಿನಲ್ಲಿ ಮಲ್ಲಿಗೆಹಳ್ಳಿಯಲ್ಲಿ ಅವರ ಕೋಪಕ್ಕೆ ಸಿಕ್ಕದೆ ಯಾರೂ ಉಳಿಯಲಿಲ್ಲ.

ಆ ಸಾಯಂಕಾಲ ಅಮಲ್ದಾರರ ಬೆಬಿಷೋ ಬಹುಮಾನ ಹಂಚಲು ಸಬ್ ಡಿವಿಜನ್ ಸಾಹೇಬರು ಒಪ್ಪಿಯೇ ಇರಲಿಲ್ಲ. ಆದರೆ ಅಮಲ್ದಾರರು, ಜಿಲ್ಲಾಧಿಕಾರಿಗಳು ಪ್ರತಿತಿಂಗಳು ಎಷ್ಟು ಷೋಗಳು ನಡೆದಿವೆ ಎಂಬುದಾಗಿ ಕೇಳುತ್ತಿದ್ದಾರೆ ಎಂಬ ಸರ್ಕ್ಯುಲರ್‌ನ್ನು ತೋರಿಸಿದ ಮೇಲೆ ಸಬ್ ಡಿವಿಜನರು ಒಪ್ಪಿದರು. ಜಮಾಬಂದಿ ದರಬಾರಿನಲ್ಲಿ ಶ್ಯಾನುಭೋಗರುಗಳೂ, ಪಟೇಲರೂ ಅರ್ಜಿದಾರರಾದ ರೈತರೂ ಹಳ್ಳಿಯ ಕೆಲವರು ರೈತರೂ ನೆರೆದಿದ್ದರು. ಸ್ಕೂಲಿನ ಮೇಜವನ್ನು ತರಿಸಿ ಶೇಕದಾರರು ಅದರ ಮೇಲೆ ಬಹುಮಾನದ ಸಾಮಾನುಗಳನ್ನೆಲ್ಲಾ ಇಟ್ಟಿದ್ದರು. ಬಹಳ ಹೊತ್ತು ಕಳೆದ ನಂತರ ಬಹುಮಾನಹೊಂದಿದ ಮಕ್ಕಳ ತಾಯಂದಿರು ಬಂದು ಮಕ್ಕಳೊಡನೆ ದೂರದಲ್ಲಿ ನಿಂತರು. ಕಾರ್ಯಕ್ರಮದಲ್ಲಿ ಅಮಲ್ದಾರರ ಭಾಷಣ ಎಂದು ಇತ್ತು. ಅಮಲ್ದಾರರು ಇಂಗ್ಲೀಷಿನಲ್ಲಿ ಭಾಷಣವನ್ನು ಪ್ರಾರಂಭಿಸಿದರು. ಆ ಭಾಷಣ ಯಾರಿಗೂ ತಿಳಿಯಲಿಲ್ಲವಾದರೂ ಹಳ್ಳಿಯವರು ಅದನ್ನು ಪ್ರತಿಭಟಿಸಲಿಲ್ಲ. ಅವರಿಗೆ ಅದರ ಕಡೆಗೆ ಲಕ್ಷ್ಯವೇ ಇರಲಿಲ್ಲ. "ಇವ ಏನೋ ಹೇಳ್ಕೋತಾನೆ ಹೇಳ್ಕೊಳ್ಳಿ" ಎಂದು

ಅವರು ತೆಪ್ಪಗೆ ತಮ್ಮ ತಮ್ಮ ತಾಪತ್ರಯಗಳನ್ನು ಕುರಿತು ಯೋಚಿಸುತ್ತಾ ಕುಳಿತಿದ್ದರು. ಅನಂತರ ದನಗಳ ಡಾಕ್ಟರರ ಉಪನ್ಯಾಸವಾಯಿತು. ಅವರು ಮುಕ್ಕಾಲು ಇಂಗ್ಲೀಷು ಕಾಲುಭಾಗ ತಪ್ಪು ತಪ್ಪು ಕನ್ನಡ ಈ ಭಾಷೆಯಲ್ಲಿ ಮಾತನಾಡಿದರು. " ದಿನಕ್ಕೆ ಮೂರು ಪಾವಾದರೂ ಹಾಲು ಕುಡಿಯಬೇಕು. ಇಂಗ್ಲೆಂಡಿನಲ್ಲಿ ಹೀಗೆ ಅಮೆರಿಕಾದಲ್ಲಿ ಹಾಗೆ. ಹಾಲು ಸರಿಯಾಗಿ ಜೀರ್ಣವಾಗದ ಮಕ್ಕಳಿಗೆ ಹಾಲನ್ನು ನೀರಾಗಿ ಮಾಡಿ ಓವಲ್‌ಟಿನ್ ಜತೆಯಲ್ಲಿ ಕೊಡಿ. ಸಕ್ಕರೆ ಹಾಕಬಾರದು. ಗ್ಲೂಕೋಸ್ ತಂದು ಅದರ ಪುಡಿ ಸಕ್ಕರೆಯಾಗಿ ಉಪಯೋಗಿಸಿ. ಆರು ತಿಂಗಳ ಮಕ್ಕಳಿಗೆ ದಿನಕ್ಕೆ ಕೊನೆಪಕ್ಷ ಅರ್ಧ ಸೇರಿಗೆ ಕಡಿಮೆ ಇಲ್ಲದೆ ಹಾಲು ಕೊಡಿ " ಎಂದು ಉಪನ್ಯಾಸ ಮಾಡಿದರು. ಅವರು ಹೇಳುತ್ತಿರುವಾಗ ರೈತರೂ ದೂರದಲ್ಲಿ ನಿಂತಿದ್ದ ಮಕ್ಕಳ ತಾಯಂದಿರೂ ಒಂದು ವಿಧವಾದ ಹಾಸ್ಯದಿಂದಲೂ ತಿರಸ್ಕಾರದಿಂದಲೂ ನಗುತ್ತಿರುವಂತೆ ಅವರಿಗೂ ಅಮಲ್ದಾರರಿಗೂ ಸಬ್‌ಡಿವಿಜನ್ ಸಾಹೇಬರಿಗೂ ತೋರಿತು. ಸಬ್‌ಡಿವಿಜನ್‌ರಿಗೆ ಇವರು ಯಾಕೆ ತಿರಸ್ಕಾರದಿಂದ ನಗುತ್ತಾರೆ ಎಂದು ಕೋಪಬಂತು. ಆಗಲಿ ಕೊನೆಯಲ್ಲಿ ಅಧ್ಯಕ್ಷ ಭಾಷಣದಲ್ಲಿ ಇವರಿಗೆ ಸರಿಯಾದ ಬುದ್ಧಿವಾದ ಹೇಳೋಣ ಎಂದುಕೊಂಡರು. ಅನಂತರ ಬಹುಮಾನ ವಿನಿಯೋಗ ಪ್ರಾರಂಭವಾಯಿತು.

ಶೇಕದಾರರು ಪ್ರತಿಯೊಂದು ಬಹುಮಾನ ಹೊಂದಿದವರಿಗೂ ಒಂದೊಂದು ಅಂಗಿ ಸಿದ್ಧವಾಗಿಟ್ಟಿದ್ದರು. ಕೆಲವು ಹೆಣ್ಣು ಮಕ್ಕಳಿಗೂ ಬಹುಮಾನ ಬರಬಹುದೆಂದು ತಿಳಿದು ಲಂಗಗಳನ್ನೂ ತಂದಿದ್ದರು. ಆದರೆ ತಾಯಂದಿರು ಬಹುಮಾನಕ್ಕೆ ಯಾವ ಹೆಣ್ಣು ಮಕ್ಕಳನ್ನೂ ಕಳುಹಿಸಲೇ ಇಲ್ಲ. ಅಮಲ್ದಾರರು ಶೇಕದಾರರನ್ನು " ಎಷ್ಟು ಬಹುಮಾನಗಳಿವೆ " ಎಂದು ಕೇಳಿದಾಗ ಅವರು ತಂದ ಸಾಮಾನುಗಳ ಲೆಕ್ಕನೋಡಿ ೨೨ ಎಂದು ಹೇಳಿದ್ದರು. ಅದರಂತೆ ಅಮಲ್ದಾರರು ಒಬ್ಬರಾದ ಮೇಲೆ ಒಬ್ಬರಂತೆ ಇಪ್ಪತ್ತೆರಡು ಮಕ್ಕಳನ್ನು ಆರಿಸಿ ತಾಯಂದಿರನ್ನು ಬಲಾತ್ಕಾರದಿಂದ ಬಹುಮಾನ ತೆಗೆದುಕೊಳ್ಳಲು ಒಪ್ಪಿಸಿದ್ದರು. ಅಮಲ್ದಾರರು ಮಕ್ಕಳ ಹೆಸರನ್ನು ಹೇಳಿ ಮಗುವಿನ

ವಯಸ್ಸು ತಾಯಿ ತಂದೆಗಳ ಹೆಸರು ಇವುಗಳನ್ನು ಹೇಳಿದ ನಂತರ ಶೇಕದಾರರು ಒಂದೊಂದು ಅಂಗಿಯನ್ನು ತೆಗೆದು ಸಬ್‌ಡಿವಿಜನ್‌ರ ಕೈಗೆ ಕೊಡುತ್ತಿದ್ದರು. ಬಹುಮಾನವನ್ನು ವಿನಿಯೋಗಿಸಲು ಸಬ್‌ಡಿವಿಜನರು ಎದ್ದುನಿಂತು ೧, ೨ ನಿಮಿಷ ನೋಡಿದರೂ ಒಂದು ಕಡೆಯಲ್ಲಿ ಮಕ್ಕಳನ್ನು ಎತ್ತಿಕೊಂಡು ನಿಂತಿದ್ದ ತಾಯಂದಿರು ಅವುಗಳನ್ನು ತೆಗೆದುಕೊಳ್ಳಲು ಮುಂದೆ ಬರಲಿಲ್ಲ. ಹೋಬಳೀ ಗುಮಾಸ್ತರೇ ಒಂದು ಹಿಡಿಯೊಳಗೆ ಅಡಕವಾಗುತ್ತಿದ್ದ ಆ ಕೆಂಪು ಹಸಿರು ನೀಲಿಯ ತೆಳ್ಳನೆಯ ಅಂಗಿಗಳನ್ನು ತೆಗೆದುಕೊಂಡು ಹೋಗಿ ಮಕ್ಕಳ ತಾಯಂದಿರಿಗೆ ಕೊಡುತ್ತಿದ್ದರು. ಅವರು ಅವುಗಳನ್ನು ತೆಗೆದುಕೊಂಡುದಕ್ಕೇ ನಾಚಿಕೆಪಟ್ಟವರಂತೆ ತೆಗೆದುಕೊಂಡು ಅವುಗಳ ಕಡೆ ಸಹ ನೋಡದೆ ನಿಂತಿದ್ದರು. ಶ್ಯಾನುಭೋಗರು "ನಾನು ಹೋಗು ಅನ್ನುವವರೆಗೆ ನೀವು ಹೋಗಕೂಡದೆಂದು" ಮೊದಲೇ ಹೇಳಿದ್ದುದರಿಂದ ಅವರು ಹೋಗಲಾರದೆ ಶ್ಯಾನುಭೋಗರ ಕಡೆಯೇ ನೋಡುತ್ತಾ ನಿಂತಿದ್ದರು. ಬಹುಮಾನಗಳ ವಿನಿಯೋಗ ಮುಕ್ಕಾಲು ಆಗುವವರೆಗೆ ಸಭೆ ಒಳ್ಳೆಯ ಗಂಭೀರವಾಗಿಯೇ ಇದ್ದಿತು. ಆದರೆ ಪೇಟೆ ನಿರ್ವಾಣಿಯ ಮಗುವಿಗೆ ಬಹುಮಾನ ಒಂದಾಗ ನೆರೆದಿದ್ದವರೆಲ್ಲರೂ ದೂರದಲ್ಲಿದ್ದ ಸ್ತ್ರೀಯರೂ ಘೊಳ್ಳೆಂದು ನಕ್ಕರು. ನಿರ್ವಾಣಿಯು ಕಳೆದ ವರುಷ, ತನ್ನ ಹೆಂಡತಿ ೬—೭ ತಿಂಗಳು ಗರ್ಭಿಣಿಯಾಗಿದ್ದಾಗ, ಸತ್ತುಹೋಗಿದ್ದನು. ಅವನ ಗಂಡುಮಗುವಿಗೆ ಅಮಲ್ದಾರರು ಒಂದು ಬಹುಮಾನವನ್ನು ಕೊಟ್ಟಿದ್ದರು. ಶೇಕದಾರರು ಬಹುಮಾನಗಳನ್ನು ಕೊಂಡುಕೊಳ್ಳುವಾಗ ಇರಲಿ ಬೇಕಾಗುತ್ತೆ ಎಂದು ಶೇವಿಂಗ್‌ಸೆಟ್ಟು, ಚಮಚಗಳು ಸಾಬೂನು ಪೆಟ್ಟಿಗೆ ಎಲ್ಲವನ್ನೂ ತೆಗೆದುಕೊಂಡಿದ್ದರು ಒಂದೊಂದಾಗಿ ಬಂದ ಬಂದವರಿಗೆ ಬಹುಮಾನವನ್ನು ಕೊಡುತ್ತಿದ್ದರು. ನಿರ್ವಾಣಿಯ ಮಗನ ಸರದಿ ಬಂದಾಗ ಶೇವಿಂಗ್ ಪೆಟ್ಟಿಗೆಯನ್ನು ಎತ್ತಿಕೊಟ್ಟರು. ಸಬ್‌ಡಿವಿಜನ್ ಸಾಹೇಬರಿಗೂ ಅದು ಶೇವಿಂಗ್‌ಪೆಟ್ಟಿಗೆ ಎಂಬುದು ಗೊತ್ತಾಯಿತು. ಅವರಿಗೆ ಅಮಲ್ದಾರರ ಮೇಲೆ ಮೊದಲೇ ಇದ್ದ ಸಿಟ್ಟು ಇನ್ನೂ ಹೆಚ್ಚಾಯಿತು. ಅಷ್ಟರಲ್ಲಿ ಪದ್ಧತಿಯಂತೆ ಹೋಬಳಿ ಗುಮಾಸ್ತನೇ ಕೈ ಒಡ್ಡಿ ಪೆಟ್ಟಿಗೆಯನ್ನು ತೆಗೆದುಕೊಂಡು ನಿರ್ವಾಣಿಯ ಹೆಂಡತಿ ಕಡೆಗೆ ಹೊರಟನು. ಪೆಟ್ಟಿಗೆ ನೋಡುವುದಕ್ಕೆ ಬಹಳ ಅಚ್ಚುಕಟ್ಟಾಗಿ

ಲಕ್ಷಣವಾಗಿತ್ತು. ಅವದಾನಿ ಅದನ್ನು ಹೋಬಳಿ ಗುಮಾಸ್ತೆಯ ಕೈಯಿಂದ ತೆಗೆದುಕೊಂಡು ಸ್ವಲ್ಪ ಬಿಚ್ಚಿನೋಡಿದನು. ಅವನಿಗೆ ನಗು ಬಂತು. ಅದನ್ನು ನೋಡಿ ಸುತ್ತಿನವರೂ ನಕ್ಕರು. ಹೋಬಳಿ ಗುಮಾಸ್ತೆ ಪೆಟ್ಟಿಗೆ ಯನ್ನು ತೆಗೆದುಕೊಂಡು ಹೋಗಿ ನಿರ್ವಾಣಿಯ ಹೆಂಡತಿಗೆ ಕೊಟ್ಟನು. ಅದನ್ನು ಬಿಚ್ಚಿನೋಡಿ ಹೆಂಗಸರೆಲ್ಲರೂ ಘೊಳ್ಳೆಂದು ನಕ್ಕರು. ನಿರ್ವಾ ಣಿಯ ಹೆಂಡತಿಗೆ ಬಹಳ ನಾಚಿಕೆಯಾಯಿತು.

ಇನ್ನುಮೇಲೆ ಆ ತಾಯಂದಿರನ್ನೆಲ್ಲ ಕಳುಹಿಸಿಬಿಡೋಣವೆಂದು ನಾದಿರ್‌ಷಾ ಶ್ಯಾನುಭೋಗರು "ಇನ್ನು ನಿಮ್ಮ ಮನೆಗಳಿಗೆ ಹೊರಡಿ" ಎಂದರು. ಶಾಸ್ತ್ರಿ, ಎಲ್ಲಾದರಲ್ಲೂ ತಾನು ಬಾಯಿ ಹಾಕದಿದ್ದರೆ ಕೆಲಸ ಪೂರ್ತಿ ಆಗುವುದಿಲ್ಲವೆಂದು ತಿಳಿದ್ದಾನೆ. ಮತ್ತು ತಾನು ಹೇಳುವ ಮಾತುಗಳೆಲ್ಲಾ ವಿವೇಕದ ಚೂಡಾರತ್ನಗಳೇ ಎಂದು ತಿಳಿದಿದ್ದಾನೆ. ಅವನು ತಾಯಂದಿರನ್ನು ಕುರಿತು ಅಂಗಿಗಳನ್ನೆಲ್ಲಾ ಮಕ್ಕಳಿಗೆ ಹಾಕಿ ಎಂದನು. ತಾಯಂದಿರು ತಮ್ಮ ತಮ್ಮ ಕೈಗೆ ಬಂದಿದ್ದ ಅಂಗಿಗಳನ್ನು ಹಾಕಲು ಪ್ರಯತ್ನಿಸಿದರು. ಆಗ ಶೇಕದಾರನ ಅವಿವೇಕ ಚೆನ್ನಾಗಿ ಎಲ್ಲರಿಗೂ ಗೊತ್ತಾಯಿತು. ಶೇಕದಾರ ಅಂಗಿಗಳನ್ನು ಕೊಂಡುಕೊಳ್ಳು ವಾಗ ಏನೋ ಮನಸ್ಸಿಗೆ ಬಂದ ಅಳತೆಗಳನ್ನು ತೆಗೆದುಕೊಂಡಿದ್ದನು. ಸಭೆಯಲ್ಲಿ ಬಹುಮಾನ ಕೊಡುವಾಗಲೂ ಆಯಾ ವಯಸ್ಸಿನ ಹುಡು ಗರಿಗೆ ಸರಿಯಾದ ಅಳತೆಯನ್ನು ನೋಡಿ ಕೊಡಲಿಲ್ಲ. ಕೊಡುವುದಕ್ಕೆ ಹೊರಟಿದ್ದರೆ ಅಳತೆಗೆ ಸರಿಯಾಗಿ ಸಿಕ್ಕುತ್ತಲೂ ಇರಲಿಲ್ಲ. ತಾಯಂದಿರು ಅಂಗಿಗಳನ್ನು ಬಿಚ್ಚಿದಾಗ ಮೊದಲನೆಯದಾಗಿ ಜವರೇಗೌಡನ ಹೆಂಡ ತಿಗೆ, ತನ್ನ ೬ ತಿಂಗಳ ಮಗುವಿಗಾಗಿ ೨॥ ವರುಷದ ಮಗುವಿಗಾಗುವ ಅಂಗಿ ಸಿಕ್ಕಿತು. ಸುಬ್ಬಾಭಟ್ಟನ ಎರಡು ವರುಷದ ಗಂಡು ಮಗುವಿಗೆ ಒಂದು, ೬ ತಿಂಗಳು ಮಗುವಿಗೆ ಆಗುವ ಲಂಗ ಸಿಕ್ಕಿತು. ಅದನ್ನು ಹಾಕು ವುದಕ್ಕಾಗದೆ ಸುಬ್ಬಾಭಟ್ಟನ ಹೆಂಡತಿ ಸಾಹಸಪಡುತ್ತಿರುವಾಗ ಹೋಬಳಿ ಗುಮಾಸ್ತರು ಹಾಕಿ ಹಾಕಿ ಎಂದರು. ಈ ರೀತಿ ತಾಯಂದಿರಿಗೆ ದೊರೆ ತಿದ್ದ ಅಂಗಿಗಳು ಅವರ ಮಕ್ಕಳಿಗೆ ಒಬ್ಬರಿಗಾಗಲಿ ಸರಿಹೋಗಲಿಲ್ಲ. ಈ ಶೇಕದಾರ ಯಾವ ಕೆಲಸ ಮಾಡಲಿ ಹೀಗೆಯೇ ಎಂದು ಜನಗಳಲ್ಲಿ ಗುಜುಗುಜು ಪ್ರಾರಂಭವಾಯಿತು.

ಸಬ್‌ಡಿವಿಜನ್ ಸಾಹೇಬರು ಇದೆಲ್ಲವನ್ನೂ, ತಮಗೆ ಮಾಡಿದ ಅವಮಾನವೆಂದೇ ತಿಳಿದುಕೊಂಡರು. ಸದ್ಯ ಈ ನಾಟಕ ಮುಗಿದರೆ ಸಾಕು ಎಂದುಕೊಂಡು ಬಹುಮಾನಕ್ಕಾಗಿ ತಂದಿದ್ದ ಸಾಬೂನು ಪೆಟ್ಟಿಗೆಯನ್ನೂ ಬಣ್ಣದ ಕರವಸ್ತ್ರಗಳನ್ನೂ ಮೇಜದ ಕೆಳಗಿನಿಂದ ತಳ್ಳಿ, ತಮ್ಮ ಉಪನ್ಯಾಸವನ್ನು ಪ್ರಾರಂಭಿಸಲು ಎದ್ದು ನಿಂತರು. ಅವರೂ ಹಾಲಿಗೆ ಬಹಳ ಪ್ರಾಮುಖ್ಯತೆ ಕೊಟ್ಟು ಮಾತನಾಡಿದರು. ಹೀಗೆ ಅವರ ಭಾಷಣ ಮುಂದುವರಿಯುತ್ತಿರುವಾಗ ನಿರ್ವಾಣಿಯ ಹೆಂಡತಿ ಮಗುವನ್ನು ಎತ್ತಿಕೊಂಡು ಬಲಗೈಯ್ಯಲ್ಲಿ ಬಹುಮಾನವಾಗಿ ದೊರೆತಿದ್ದ ಕ್ಷೌರದ ಪೆಟ್ಟಿಗೆಯನ್ನು ಹಿಡಿದುಕೊಂಡು ಮುಂದೆ ಬಂದಳು. ಅವಳ ಹಿಂದುಗಡೆ ನಿಧಾನವಾಗಿ ಉಳಿದ ತಾಯಂದಿರೂ ತಮ್ಮ ತಮ್ಮ ಮಕ್ಕಳನ್ನೂ ಎತ್ತಿ ಕೊಂಡು ಕೈಯ್ಯಲ್ಲಿ ತಮಗೆ ದೊರೆತಿದ್ದ ಬಹುಮಾನಗಳನ್ನು ಹಿಡಿದು ಕೊಂಡು ಮುಂದೆ ಬಂದರು.

ಹೆಂಗಸರು ಹತ್ತಿರ ಬಂದುದನ್ನು ನೋಡಿ ಸಾಹೇಬರು ತಮ್ಮ ಉಪನ್ಯಾಸವನ್ನು ಇದ್ದಕ್ಕಿದ್ದಂತೆ ನಿಲ್ಲಿಸಿದರು. ಅಮಲ್ದಾರರು ಮುಂಕಾಗಿ ಹೆಂಗಸರ ಕಡೆ ನೋಡಲು ಪ್ರಾರಂಭಿಸಿದರು ಮನುಷ್ಯನ ಹೃದಯದ ಸ್ವಭಾವವನ್ನು ಚೆನ್ನಾಗಿ ಬಲ್ಲ ನಾದಿರ್‌ಷಾ ಶ್ಯಾನುಭೋಗನಿಗೆ ಮಾತ್ರ ಅವರು ಮುಂದೆ ಬಂದ ಉದ್ದೇಶ ಸುಮಾರಾಗಿ ತಿಳಿಯಿತು. ನಿರ್ವಾ ಣಿಯ ಹೆಂಡತಿಯು ತನ್ನ ಮಾತು ಸಾಹೇಬರಿಗೆ ಕೇಳುವಷ್ಟು ಸಮೀ ಪಕ್ಕೆ ಬಂದು "ಸ್ವಾಮಿ 'ಮಗುವಿಗೆ ಹಾಲು ಕೊಡಿ ಹಾಲು ಕೊಡಿ' ಅಂತ ಒಂದೇ ಸಮನೆ ಎಲ್ಲಾ ಬಡ್ಕೋತೀರಿ. ಈ ಮಗಿಗೆ ಒಂದು ತಿಂಗಳಾಗಿದ್ದಾಗ ಒಂದೇ ಪಾವು ಹಾಲು ಕೊಡ್ತ ಇದ್ದ ಗುಳ್ಳ ಹಸುನ, ಒಡೆದ ಕೆರೆ ಕೆಳಗಿನ ಗದ್ದೆ ಕಂದಾಯಕ್ಕೆ ನೀವು (ಅಮಲ್ದಾರರಿಗೆ) ಜಪ್ತಿ ಹರಾಜು ಮಾಡಿಸಲಿಲ್ಲವೆ? ಅಲ್ಲಿಂದ ಇಲ್ಲಿಗಂಟ ಹಾಲಿರಲಿ. ಮಗೀಗೆ ಮಜ್ಜಿಗೆ ಮುಖ ತೋರಿಸಿಲ್ಲ: ಹೋಗಲಿ. ನೀವೇನೋ ಇನಾಮು ಕೊಡ್ತೀರಿ ಅಂತ ಶೇಕದಾರ್ರು ಸುಬೇದಾರ್ರು ನೆನ್ನೆ ಇಂದ ಬಡ್ಕೊಂಡು ನಮ್ಮ ಇಲ್ಗೆ ಮನೆ ಬದ್ಕ ಬಿಡಿಸಿ ಕರ್ಕೊಂಡ್ಬಂದ್ರು. ನೀವು ಏನೋ ಮಕ್ಕಳಿಗೆ ಇಷ್ಟು ಹಾಲು ಸಕ್ರೆ ಹಣ್ಣು ಪೇಪರ್‌ಮಿಂಟ್ ಬಿಸ್ಕತ್ತು ಬೆಲ್ಲ, ಒಳ್ಳೆ ಬಟ್ಟೆ ಎಂತಾದಾರ್ರು ಕೊಡ್ತೀರಿ ಅಂತ ಬಂದ್ರೊ, ಇಲ್ಲಿ

ನೋಡಿದ್ರೆ ಹಳೆ ಪಳೆ ಇಕ್ಕೊಳ್ಳೋಕೆ ಆಗದ ನಾಲ್ಕು ಲಂಗ ಕೊಟ್ರಿ, ಈ ಲಂಗ ನೀವೇ ಮಡಿಕೊಳ್ಳಿ. ಈ ಚೌರದ ಪೆಟ್ಟಿಗೆ ನನ್ಗ್ಯಾಕೆ. ನಿಮ್ಮ ಮಕ್ಳ ತಾಯಿರ್ಗೆ ಕೊಡಿ ಎಂದು ಹೇಳಿ ಆ ಶೇವಿಂಗ್ ಸೆಟ್ಟನ್ನು ನೆಲದಮೇಲೆ ಎಸೆದಳು. ಹಿಂದೆ ನಿಂತಿದ್ದ ತಾಯಂದಿರೆಲ್ಲಾ ತಮ್ಮ ಕೈನಲ್ಲಿದ್ದ ಬಹುಮಾನಗಳಾದ ಲಂಗ ಅಂಗಿಗಳನ್ನು ಸರಸರನೆ ನೆಲದ ಮೇಲೆ ಎಸೆದು ಮನೆಗಳಿಗೆ ಹೊರಟುಹೋದರು. ಮಲ್ಲಿಗೆಹಳ್ಳಿಯ ಸ್ತ್ರೀಯರು ಅಷ್ಟು ಧೈರ್ಯವಾಗಿ ಹಾಗೆ ವರ್ತಿಸುವರೆಂದು ಯಾರೂ ನಿರೀಕ್ಷಿಸಿರಲಿಲ್ಲ. ಅವರ ವರ್ತನೆ ನೋಡಿ ಗ್ರಾಮಸ್ಥರೆಲ್ಲಾ "ಡಂಗ್" ಆದರು. ಸಬ್‌ಡಿವಿಜನ್ ಅಮಲ್ದಾರ್ ಶೇಕದಾರರ ಉಸಿರು ಪೂರ್ಣ ವಾಗಿ ಅಡಗಿಯೇ ಹೋಯಿತು. ತಾವು ಹಾಗೆ ಮಾಡುವ ಧೈರ್ಯ ತಮಗೆ ಹೇಗೆ ಉಂಟಾಯಿತೆಂದು ಮಲ್ಲಿಗೆಹಳ್ಳಿ ಸ್ತ್ರೀಯರು ಇಂದಿಗೂ ತಾವೂ ಅಶ್ಚರ್ಯಪಡುತ್ತಿದ್ದಾರೆ. ನಿರ್ವಾಣಿ ಹೆಂಡತಿ "ನನಗೆ ಹುಚ್ಚು ಹತ್ತಿತ್ತು. ಇಲ್ಲದೆ ಇದ್ದಿದ್ದರೆ ಅಂತಂತ ದೊಡ್ಡ ಮನುಸರ ಮುಂದೆ ಹಾಗೆ ಹೋಗಿ ಗಂಡುಬೀರಿಹಂಗೆ ಬೊಗಳ್ತಿದ್ನ" ಎನ್ನುತ್ತಾಳೆ—

ಈ ಅನಿರೀಕ್ಷಿತವಾದುದು ನಡೆದ ನಂತರ ಸಭೆ ಸರಸರನೆ ಭರ ಖಾಸ್ತು ಆಯಿತು. ಸಬ್‌ಡಿವಿಜನ್ ಸಾಹೇಬರು ಅಮಲ್ದಾರ್ರ ಮುಖದ ನೀರು ಇಳಿಸಿದರು. ಅಮಲ್ದಾರ್ರು ಶೇಕದಾರ್ರ ಮುಖದ ನೀರು ಇಳಿ ಸಿದರು. ಶೇಕದಾರ್ರು, ಸಾಮಾನುಗಳನ್ನು ತಮಗೆ ಮಾರಿದ ಅಂಗಡಿ ಯವನ ಮುಖದ ನೀರು ಇಳಿಸುತ್ತೇನೆ ಎಂದು ಪ್ರತಿಜ್ಞೆಮಾಡಿದರು. ಆ ಕ್ರೋಧದಲ್ಲಿ ಆ ರಾತ್ರಿ ಜಮಾಬಂದಿ ನಡೆಯಲಿಲ್ಲ. ಆವತ್ತು ಜಮಾ ಬಂದಿ ಮುಗಿಯುತ್ತೆ ಮರುದಿವಸದ ಖರ್ಚು ಇಪ್ಪತ್ತು ರೂಪಾಯಿ ಉಳಿ ಯುತ್ತೆ ಎಂದು ಶ್ಯಾನುಭೋಗರು ಹಾಕಿದ್ದ ಲೆಕ್ಕ ತಲೆಕೆಳಕಾ ಯಿತು.

ಅಮಲ್ದಾರರೂ ಸಬ್‌ಡಿವಿಜನರೂ ಮಾರನೆ ಬೆಳಿಗ್ಗೆ ಹಳ್ಳಿಗಳಿಗೆ ಹೊರಟರು. ಮಧ್ಯಾಹ್ನ ಒಂದು ಗಂಟೆಗೆ ಬಂದು ಜಮಾಬಂದಿ ನಡೆ ಸುವುದಾಗಿ ಹೇಳಿದ್ದರು. ದಾರಿಯಲ್ಲಿ ಗೋವಿಂದನ ಹಳ್ಳಿ ಜೋಡಿದಾ ರರು ಅನೇಕ ಬಗೆಯ ಒಳ್ಳೆಯ ಅಡಿಗೆಗಳನ್ನು ಮಾಡಿಸಿ ಅಲ್ಲೇ ಊಟಕ್ಕೆ ಏಳಿ ಎಂದುದರಿಂದ ಇಬ್ಬರು ಆಫೀಸರುಗಳೂ ಎದ್ದರು.

ಊಟವಾದ ಮೇಲೆ ವಿಶ್ರಮಿಸಿಕೊಂಡು ಮಧ್ಯಾಹ್ನದ ಕಾಫಿ ಅಲ್ಪಾಹಾರ ಇವುಗಳನ್ನು ಮಾಡಿಕೊಂಡು ಮತ್ತೆ ಮಲ್ಲಿಗೆಹಳ್ಳಿಗೆ ಬರುವ ವೇಳೆಗೆ ರಾತ್ರಿಯಾಯಿತು. ಆ ರಾತ್ರಿ ಗ್ಯಾಸು ದೀಪಗಳ ಬೆಳಕಿನಲ್ಲಿ ಹುಜೂರು ಜಮಾಬಂದಿ ನಡೆಯಿತು. ಪಟೇಲರು ಹೊಟ್ಟೆಗೆ ಹಿಟ್ಟಿಲ್ಲದೆ ತೂಕಡಿಸುತ್ತಾ ಬಾಕಿ ನಿಂತಿದ್ದ ಕಂದಾಯಗಳಿಗೆ ಸಬೂಬುಗಳನ್ನು ಹೇಳಿದರು. ಮಾರನೆ ಬೆಳಿಗ್ಗೆ ಹುಜೂರ್ ಸಾಹೇಬರು ಹೊರಡುವುದಕ್ಕೆ ಮುಂಚೆ ಶ್ಯಾನುಭೋಗರ ಆತಿಥ್ಯವಾಯಿತು. ಗುಮಾಸ್ತರುಗಳು ಒಬ್ಬರನ್ನೊಬ್ಬರು ಪ್ರಶಂಸಿಸಿದರು. ಗುಮಾಸ್ತರು ಶ್ಯಾನುಭೋಗರನ್ನೂ ಶ್ಯಾನುಭೋಗರು ಗುಮಾಸ್ತರು, ತಾಲ್ಲೂಕು ಕಛೇರಿ ಗುಮಾಸ್ತರು ಹುಜೂರಿನ ಗುಮಾಸ್ತರನ್ನು ಪ್ರಶಂಸಿಸಿದರು. ಬದಲಿ ಶ್ಯಾನುಭೋಗಿ ನೋಡುತ್ತಿದ್ದವರು ಕೊಡಬೇಕಾದ ಮಾಮೂಲನ್ನು ಕೊಟ್ಟನಂತರ ಅವರಿಗೇ ಅದು ಮುಂದಕ್ಕೂ ದೊರೆಯಿತು. ಒಬ್ಬೊಬ್ಬ ಶ್ಯಾನುಭೋಗನಿಗೆ ಊಟಕ್ಕಾಗಿ ಎರಡು ರೂಪಾಯಿ ಖರ್ಚು ತಾಲ್ಲೂಕು ಮತ್ತು ಹುಜೂರು ಗುಮಾಸ್ತರ ಮಾಮೂಲಿಗಾಗಿ ನಾಲ್ಕು ರೂಪಾಯಿ ಖರ್ಚು ಬಿದ್ದುವು. ಹುಜೂರು ಜಮಾಬಂದಿ ಬರಖಾಸ್ತಾಯಿತು. ಹುಜೂರ್ ಸಾಹೇಬರನ್ನು ಮಧ್ಯಾಹ್ನ ಕಳುಹಿಸಿ ಅಮುಲ್ದಾರರು ಸಾಯಂಕಾಲ ಹೊರಡುವುದಕ್ಕಾಗಿ ನಿಂತರು. ಹುಜೂರು ಸಾಹೇಬರ ಮೋಟಾರ್ ಡ್ರೈವರನಿಗೂ ಪರಿಚಾರಕನಿಗೂ ಮಾಮೂಲುಗಳನ್ನು ಸರಿಯಾಗಿ ಕೊಟ್ಟುದಾಯಿತು. ಹುಜೂರು ಸಾಹೇಬರು ತಮ್ಮ ಮೇಲೆ ಪ್ರಯೋಗಿಸಿದ್ದ ಕೋಪದಲ್ಲಿ ಸ್ವಲ್ಪ ಭಾಗವನ್ನು ಶ್ಯಾನುಭೋಗರ ಮೇಲೆ ಬಿಡಬೇಕೆಂದು ಅಮುಲ್ದಾರ್ರು ಪ್ರಯತ್ನಿಸಿ ಶ್ಯಾನುಭೋಗರ ಲೆಕ್ಕ ಸರಿಯಾಗಿಲ್ಲ ಎಂದು ಗದರಿಸಿದಾಗ ಒಂದು ಸಲ ನಾದಿರ್‌ಷಾ ನಗುತ್ತಾ ಬಿಡಿ ಸ್ವಾಮಿ. ಈಗಿನ ಶ್ಯಾನುಭೋಗರಿಗೆ ಲೆಕ್ಕದ ಹೊರೆ ಅಸಾಧ್ಯವಾಗಿದೆ. ಪಂಚಾಯ್ತಿ ಬೇರೆ ಸೇರಿತು. ಶ್ಯಾನುಭೋಗನಿಗೆ ಅವನ ಲೆಕ್ಕ ಹೊರಲು ಒಂದು ಕತ್ತೆ ಮತ್ತು ಒಂದು ಕಾಗದಿ ಅಗತ್ಯವಾಗಿ ಬೇಕಾಗಿದೆ. ಕತ್ತೆಗಳನ್ನು ಯಾರೂ ದೊಡ್ಡಿಗೆ ಕೂಡದಂತೆ ಲೈಸನ್ಸ್ ಕೊಡಬೇಕು. ಅದು ಎಲ್ಲಿ ಬೇಕಾದರೂ ಮೈಯ್ಯಬಹುದು. ಆ ರಿಕಾರ್ಡು ಆಫ್‌ರೈಟ್ ಲೆಕ್ಕವಿದೆಯಿಲ್ಲ ನಾಲ್ಕು ಮೊಳ ಉದ್ದವಿದೆ. ಒಂದು ಕಡೆಯಿಂದ ಇನ್ನೊಂದು ಕಡೆಗೆ

ಕೈ ಎಟಕೋದಿಲ್ಲ. ಒಂದು ಮುನ್ನೂರು ಕಾಲಂ ಇದೆ ಅದರಲ್ಲಿ. ಫಾರಂನ ಒಂದು ಕೊನೆಯಲ್ಲಿ ಕೂತರೆ, ಕಾಲಂಗಳನ್ನೆಲ್ಲಾ ಭರ್ತಿಮಾಡುತ್ತಾ ಟ್ರಾಲಿಯಲ್ಲಿ ಇನ್ನೊಂದು ಕಡೆಗೆ ಹೋಗಬೇಕು. ಪಟೇಲರು ವೈದಿಕರು. ಕತ್ತೆಯನ್ನು ಅವರು ಮುಟ್ಟುವುದಿಲ್ಲ. ಅವರ ಕತ್ತೆಗೆ ಕೃಷ್ಣಾಜಿನದ ಇಲ್ಲವೆ ಮಡಿರೇಸಿಮೆಯ ಹೊದ್ದಿಕೆಯಾಗಬೇಕು ಎಂದರು. ಅಮಲ್ದಾರರು " ನಿಮಗೆ ಹೇಳುವುದಕ್ಕೆ ಯಾರಿಂದ ಆಗುತ್ತೆ " ಎಂದು ಸುಮ್ಮನಾದರು.

---

## ೭. ರಂಗಪ್ಪನವರ ಸಂಸಾರ

---

ಮಲ್ಲಿಗೆಹಳ್ಳಿಯಲ್ಲಿ ಕೋಟೆಯೊಳಗಿನ ದೇವಸ್ಥಾನದ ಎದುರು ಬೀದಿಯಲ್ಲಿ ಒಂದರ ಎದುರಿಗೆ ಒಂದರಂತೆ ಎರಡು ಮನೆಗಳಿವೆ. ಅವುಗಳಲ್ಲಿ ಒಂದು ಉತ್ತಮವಾದ ದೊಡ್ಡದಾದ ಮಂಗಳೂರು ಹೆಂಚಿನ ಹೊಸದಾಗಿ ಕಟ್ಟಿದ ಕಟ್ಟಡ. ಇನ್ನೊಂದು ಹಳೆಯಕಾಲದ ಸಣ್ಣ ನಾಡು ಹಂಚಿನ ಮನೆ. ಮಂಗಳೂರು ಹೆಂಚಿನ ಮನೆಯನ್ನು ನೋಡಿದ ಕೂಡಲೇ ಇದು ಯಾರೋ ದೊಡ್ಡ ಸಾಹುಕಾರರ ಮನೆ ಎಂದು ಗೊತ್ತಾಗುವುದು. ಹಾಗೆಯೇ ಅದರ ಎದುರಿನ ಮನೆಯನ್ನು ನೋಡಿದರೂ ಅದರ ಯಜಮಾನನ ದಾರಿದ್ರ್ಯ ವ್ಯಕ್ತವಾಗುವುದು. ಆದರೂ ಆ ಎರಡು ಮನೆಗಳೂ ಅಣ್ಣತಮ್ಮಂದಿರ ಮನೆಗಳೇ. ಈ ಎರಡು ಮನೆಗಳ ಒಡೆಯರೂ ಮಲ್ಲಿಗೆಹಳ್ಳಿ ಶ್ಯಾಮಭೋಗ ರಂಗಣ್ಣನವರ ಇಬ್ಬರು ಮಕ್ಕಳು. ಸಣ್ಣದು ರಂಗಣ್ಣನವರ ಹಿರಿಯ ಮಗ ಶ್ರೀನಿವಾಸನ ಮನೆ. ಇವನಿಗೆ ಊರಿನಲ್ಲಿ ಯಜಮಾನರು ಎಂದೇ ಹೆಸರು ದೊಡ್ಡ ಮಂಗಳೂರು ಹೆಂಚಿನ ಮನೆ ರಂಗಣ್ಣನವರ ಕಿರಿಮಗ, ಶ್ರೀನಿವಾಸನ ತಮ್ಮ ರಾಮಕೃಷ್ಣನದು. ಇವನನ್ನು ಜನರು ಹೆಸರು ಹಿಡಿದು ಕರೆಯುತ್ತಿರಲಿಲ್ಲ. ಊರಿನ ಕುಬೇರರು ಎಂದೇ ಕರೆಯುತ್ತಿದ್ದರು. ಈ ಕುಬೇರ ಎಂಬುದು ಕೆಲವರ ಬಾಯಿನಲ್ಲಿ ಸರಿಯಾಗಿ ಹೊರಡದೆ ಪುಬೇರ ಎಂದು ಆಗಿ ಕೊನೆಗೆ ರಾಮಕೃಷ್ಣನಿಗೆ ಪುಬೇರಪ್ಪನವರೆಂದೇ ಹೆಸರಾಯಿತು.

ಈ ಇಬ್ಬರು ಅಣ್ಣತಮ್ಮಂದಿರ ತಂದೆ ರಂಗಣ್ಣನವರು ತಮ್ಮ ಆಸ್ತಿಯನ್ನು ಇಬ್ಬರು ಮಕ್ಕಳಿಗೂ ಸಮಾನವಾಗಿಯೇ ಹಂಚಿದ್ದರು. ಇಬ್ಬರಿಗೂ ಅವರು ಕೊಟ್ಟದ್ದು ಒಂದೊಂದು ಸಣ್ಣ ಹೆಂಚಿನ ಮನೆಯೇ. ಇಬ್ಬರಿಗೂ ಊಟಕ್ಕೆ ಆಗುವಷ್ಟು ಭತ್ತ ಬರುವಂತೆ ಜಮೀನನ್ನು ಕೊಟ್ಟಿದ್ದರು. ಚಿನ್ನ ಬಣ್ಣ ಸ್ವಲ್ಪ ಲೇವಾದೇವಿ ಒಬ್ಬೊಬ್ಬರಿಗೆ ಐದು ಸಾವಿರ ರೂಪಾಯಿನಷ್ಟು ಆಸ್ತಿ ಬಂದಿದ್ದಿತು. ರಗಣ್ಣನವರು ಶ್ಯಾನುಭೋಗರಾದರೂ ಹಳೆಯ ಕಾಲದ ಶ್ಯಾನುಭೋಗರು; ಒಳ್ಳೆಯ ಗಂಭೀರ ಸ್ವಭಾವದ ಸಾತ್ವಿಕ ಪುರುಷರು. ಅವರ ಮುಖದಲ್ಲಿ ತೇಜಸ್ಸು ಶಾಂತಿ ಯಾವಾಗಲೂ ತುಂಬಿದ್ದಿತು. ಅವರು ಕೋಪಿಸಿಕೊಂಡುದನ್ನೇ ಜನ ಕಾಣರು. ಅವರ ಸಂಸ್ಕೃತ ಶಾಸ್ತ್ರಪಾಂಡಿತ್ಯ ಇವು ಅದ್ಭುತವಾಗಿದ್ದವು. ಶಾಸ್ತ್ರವಿಚಾರಗಳಲ್ಲಿ ಅವರಿಗೆ ತಿಳಿಯದುದೇ ಇಲ್ಲವೆಂಬಂತೆ ತೋರುತ್ತಿದ್ದಿತು. ಅವರು ಜ್ಞಾನ ವೈರಾಗ್ಯಗಳ ಅಪಾರನಿಧಿಯಾಗಿದ್ದರು. ಅವರಿಗೆ ಪ್ರಪಂಚದ ವ್ಯವಹಾರ ಅಷ್ಟಾಗಿ ತಿಳಿದಿರಲಿಲ್ಲ. ಅವರು ಯಾವುದೋ ಪೂರ್ವಕಾಲದ ಋಷಿಯಂತೆ ಯಾವುದೋ ಮತ್ತೊಂದು ಜಗತ್ತಿನಿಂದ ಇಲ್ಲಿ ಕೆಲವು ಕಾಲ ಇದ್ದು ಹೋಗಲು ಬಂದವರಂತೆ ತೋರುತ್ತಿದ್ದರು. ಅವರು ಬದುಕಿರುವವರೆಗೆ ಮಲ್ಲಿಗೆಹಳ್ಳಿಯ ಗಾಂಭೀರ್ಯ ಯೋಗ್ಯತೆ ಚೆನ್ನಾಗಿ ಉಳಿದಿತ್ತು. ಮಲ್ಲಿಗೆಹಳ್ಳಿಗೆ ಬಂದ ಪರಸ್ಥಳದವರು ಅವರನ್ನು ವಂದಿಸಿ ಅವರ ಆಶೀರ್ವಾದವನ್ನು ಪಡೆಯದೆ ಮುಂದೆ ಹೋಗುತ್ತಿರಲಿಲ್ಲ. ಅವರನ್ನು ನೋಡಿದರೆ ದೇವರನ್ನು ನೋಡಿದಹಾಗೆ ಎಂದು ಸುತ್ತಮುತ್ತಲ ಜನ ಹೇಳುತ್ತಿದ್ದರು. ರಂಗಣ್ಣನವರು ಬದುಕಿರುವವರೆಗೆ ಮಲ್ಲಿಗೆಹಳ್ಳಿ ಪ್ರಾಂತದಲ್ಲಿ ಹೀಗೆ ಹೆಸರಾದರು. ಸ್ವರ್ಗಸ್ಥರಾದಾಗ ಅವರಿಗೆ ೯೩ ವಯಸ್ಸಾಗಿದ್ದಿತು. ಆದರೆ ಅವರ ದೇಹದ ಮೇಲೆ ವಯಸ್ಸಿನ ಚಿಹ್ನೆಗಳು ತೋರಿರಲಿಲ್ಲ. ಅವರು ಸಾಯುವ ದಿನದವರೆಗೆ ಪ್ರತಿದಿನವೂ ಬೆಳಿಗ್ಗೆ ನದಿಗೆಹೋಗಿ ಸ್ನಾನಮಾಡಿಕೊಂಡು ಬರುವುದನ್ನು ಬಿಟ್ಟಿರಲಿಲ್ಲ. ಅವರನ್ನು ನೋಡಿದವರು "ನಾವು ನೋಡಿದಾಗಿನಿಂದ ಇವರು ಹೀಗೆಯೇ ಇದ್ದಾರೆ" ಎನ್ನುತ್ತಿದ್ದರು. ರಂಗಣ್ಣನವರ ಹಲ್ಲು ಕಿವಿ ಕಣ್ಣು ಮೊದಲಿನಂತೆ ಕೊನೆಯವರೆಗೆ ಚುರುಕಾಗಿಯೇ ಇದ್ದವು. ಅವರು ವಯಸ್ಸಾದವರಾಗಿ ಮೃತರಾಗುವಂತೆ ತೋರುತ್ತಿರಲಿಲ್ಲ. ಬೇರೆ ಜಗತ್ತಿನ ಜೀವ

ಇಲ್ಲಿ ಬಂದು ನಾಲ್ಕು ದಿನ ಇದ್ದುಕೊಂಡು ತನ್ನ ಲೋಕಕ್ಕೆ ಮತ್ತೆ ಬಂದಂತೆ ಹೋಗುತ್ತಿದೆ'' ಎಂದು ತೋರುತ್ತಿದ್ದಿತು.

ರಂಗಣ್ಣನವರ ನಂತರ ಅವರ ಹಿರಿಯ ಮಗ ಶ್ರೀನಿವಾಸ—ಯಜಮಾನರು ಅವರ ಸ್ಥಾನವನ್ನು ತೆಗೆದುಕೊಂಡರು. ಅವರು ಎಲ್ಲಾ ವಿಧದಲ್ಲಿಯೂ ರಂಗಣ್ಣನವರಿಗೆ ಸಮಾನರಾಗಿದ್ದರು. ಅವರ ಪಾಂಡಿತ್ಯವೂ ಸಾತ್ವಿಕಸ್ವಭಾವವೂ ಜನರ ಮನಸ್ಸನ್ನು ವಿಶೇಷವಾಗಿ ಆಕರ್ಶಿಸಿದವು. ಸುತ್ತಮುತ್ತಲ ಹಳ್ಳಿಗಳಲ್ಲಿ ಯಾರು ಶಾಸ್ತ್ರ ವಿಚಾರವನ್ನು ಕೇಳಬೇಕಾದರೂ ಯಜಮಾನರಲ್ಲಿಗೆ ಬರುತ್ತಿದ್ದರು. ಯಜಮಾನರು ಪ್ರತಿದಿನವೂ ಮಧ್ಯಾನ್ಹದ ಊಟವಾದನಂತರ ಸಾಮಾನ್ಯವಾಗಿ ಭಾರತ ರಾಮಾಯಣ ಭಾಗವತ ಗ್ರಂಥಗಳನ್ನು ಪುರಾಣ ಹೇಳುತ್ತಿದ್ದರು. ಯಾರಾದರೂ ಒಬ್ಬರು ಸಂಸ್ಕೃತ ಗ್ರಂಥವನ್ನು ಓದುವುದು, ಯಜಮಾನರು ಅದಕ್ಕೆ ಕನ್ನಡದಲ್ಲಿ ವ್ಯಾಖ್ಯಾನಮಾಡುವುದು ಇದೇ ಪದ್ಧತಿಯಾಗಿದ್ದಿತು. ಈಚೆಗೆ ಅವರ ಮಗ ವೇದಾಂತನೇ ಓದುತ್ತಿದ್ದನು. ಯಜಮಾನರು ಬರಿಯ ಸಂಸ್ಕೃತ ಮಾತುಗಳಿಗೆ ಕನ್ನಡ ಜೋಡಿಸುವ ಒಣ ಪುರಾಣಕಾರರಾಗಿರಲಿಲ್ಲ. ಅವರು ತುಂಬ ವ್ಯವಹಾರ ಚತುರರಾಗಿ ಆವೇಶಪೂರಿತರಾದ ಕವಿಗಳಾಗಿದ್ದುದರಿಂದ ಅವರು ಹೇಳುತ್ತಿದ್ದ ಮಾತುಗಳು ನೆಟ್ಟಗೆ ಕೇಳುವವರ ಮನಸ್ಸನ್ನು ಹೋಗುತ್ತಿದ್ದವು. ಅವರು ಹೇಳುತ್ತಿದ್ದಾಗ ಭಾರತ ರಾಮಾಯಣದ ಸಂಗತಿಗಳು ತಮ್ಮ ಕಣ್ಣು ಮುಂದೆ ನಡೆಯುತ್ತಿರುವಂತೆ ಕೇಳುವವರಿಗೆ ಭಾಸವಾಗುತ್ತಿದ್ದವು. ಯಜಮಾನರು ಕತೆಯನ್ನು ಈ ರೀತಿ ನಿಜವಾಗಿ ಎದುರಿಗೆ ತೋರಿಸಬಲ್ಲವರಾದುದರಿಂದಲೂ ಮೂಲ ಕವಿಗಳ ಆಶಯ, ಸ್ವಾತಂತ್ರ್ಯ, ಅಲಂಕಾರ ಮುಂತಾದುವನ್ನೆಲ್ಲಾ ಕರತಲಾಮಲಕಮಾಡಿಕೊಂಡಿದ್ದುದರಿಂದಲೂ, ಊರಿನವರೆಲ್ಲಾ ಬೇರೆ ಬೇರೆ ಸ್ವಾರಸ್ಯಗಳಿಗಾಗಿ ಅವರ ಪುರಾಣ ಪಠಣಕ್ಕೆ ಬರುತ್ತಿದ್ದರು. ಬರಬರುತ್ತಾ, ಒಂದು ದಿನ ಯಜಮಾನರು ಏನಾದರೂ ಕಾರಣದಿಂದ ಪುರಾಣ ಹೇಳುವುದು ತಪ್ಪಿದರೆ ಜನರಿಗೆ ಏನುಮಾಡುವುದಕ್ಕೂ ತೋರದ ಬೇಸರಿಕೆಯುಂಟಾಗುತ್ತಿದ್ದಿತು. ಪಾಠಶಾಲೆಯ ಹುಡುಗರು ಭಾರತದ ಅರ್ಜುನನ ಗೋಗ್ರಹಣ ಪರ್ವದ ಶೌರ್ಯದ ಇತಿಹಾಸವನ್ನು ಕೇಳುತ್ತಾ ಸ್ಕೂಲಿಗೆ ಹೋಗುವುದನ್ನೇ ಮರೆತು ನಿಂತುಬಿಡುತ್ತಿದ್ದರು. ಶನಿವಾರ—ಆವತ್ತು

ಮಲ್ಲಿಗೆಹಳ್ಳಿ ಸಂತೆಯಾದುದರಿಂದ ಮಧ್ಯಾಹ್ನದ ಸ್ಕೂಲು ಇಲ್ಲ— ಮಧ್ಯಾಹ್ನ ಮತ್ತು ಭಾನುವಾರ ಸ್ಕೂಲಿನ ಹುಡುಗರೆಲ್ಲಾ ಪುರಾಣ ಶ್ರವಣಕ್ಕಾಗಿ ಯಜಮಾನರ ಮನೆಯ ಜಗಲಿಯ ಮೇಲೆ ನೆರೆಯುತ್ತಿದ್ದರು. ಅವರಲ್ಲಿ ಪರಸ್ಪರ ಭಾರತದಲ್ಲಿ ಅತಿ ಧೀರರು ಯಾರು ಎಂಬ ಪ್ರಶ್ನೆ ಏಳುತ್ತಿದ್ದಿತು. ಕೆಲವರು ಅರ್ಜುನನ ಪಕ್ಷವನ್ನೂ ಕೆಲವರು ಕರ್ಣನ ಪಕ್ಷವನ್ನೂ ಹಿಡಿಯುತ್ತಿದ್ದರು. ಇದ್ದಕ್ಕಿದ್ದಂತೆ ಅವರಲ್ಲಿ "ನಾನು ಕರ್ಣ ನಾನು ಅರ್ಜುನ, ಎಲ್ಲಿ ಕಾಳಗವನ್ನು ಹೂಡೋಣ ಹೊ" ಎಂದು ವಿನೋದದ ಕಾಳಗ ಪ್ರಾರಂಭವಾಗುತ್ತಿದ್ದಿತು. ಸಾಧಾರಣವಾಗಿ ಲೋವರ್‌ಸೆಕಂಡರಿ ಪರೀಕ್ಷೆಗೆ ಭಾರತ ರಾಮಾಯಣ ಗದ್ಯಭಾಗ ಪಠ್ಯ ಪುಸ್ತಕವಾಗಿರುತ್ತದೆ. ಉಪಾಧ್ಯಾಯರು "ಯಜಮಾನರ ಪುರಾಣದಿಂದ ಸದ್ಯ ನಮಗೆ ಈ ಹುಡುಗರಿಗಾಗಿ ತಲೆಹೊಡೆದುಕೊಳ್ಳುವುದು ತಪ್ಪಿದೆ. ನಮ್ಮ ಒಂದು ಕೆಲಸ ಅವರು ಹಗುರವಮಾಡಿದ್ದಾರೆ. ಈ ಪಾಠ ನಾವು "ಕರಿಕುಲಂಗೆ" ಅನುಸಾರವಾಗಿ ಎಷ್ಟು ಹೇಳಿದರೂ ಈ ಹುಡುಗರಿಗೆ ತಿಳಿಯುವುದಿಲ್ಲ ಎಂದು ಸಮಾಧಾನಪಟ್ಟುಕೊಳ್ಳುತ್ತಿದ್ದರು. ಯಜಮಾನರಿಗೂ ಹುಡುಗರು ಎಂದರೆ ಪ್ರಾಣ. ಅವರು ಶನಿವಾರ ಭಾನುವಾರ ಯಾವುದಾದರೂ ನೆಪದಿಂದ ಪುರಾಣದನಂತರ ಹುಡುಗರಿಗಾಗಿ ಸಿಹಿ ವಿನಿಯೋಗವಮಾಡಿಸದೆ ಇರುತ್ತಿರಲಿಲ್ಲ. ಯಜಮಾನರ ಸಣ ಮನೆಯಲ್ಲಿ ಶನಿವಾರ ಭಾನುವಾರ ದೊಡ್ಡ ಜಾತ್ರೆಯೇ ಆಗುತ್ತಿದ್ದಿತು.

ಯಜಮಾನರು ಹೀಗೆ ಇರುವಾಗ ಅವರ ಆಸ್ತಿ ಹಣ ಹೆಚ್ಚುವುದೆಂತು? ಮತ್ತೊಬ್ಬನ ಗಂಟು ತನಗೆ ಬರದಿದ್ದರೆ ತನ್ನ ಹಣ ಹೇಗೆ ಹೆಚ್ಚುವುದು? ಯಜಮಾನರ ತಮ್ಮ ರಾಮಕೃಷ್ಣ ಈ ಹಣ ಹೆಚ್ಚಿಸುವುದರಲ್ಲಿ ಒಳ್ಳೆಯ ಪರಿಶ್ರಮವುಳ್ಳ ಕಿರಾತರಾಗಿದ್ದರು. ಅವರ ಕೈಗೆ ಸಿಕ್ಕಿದ ಹಣ ಯಕ್ಷಣಿಯಿಂದಲೋ ಎಂಬಂತೆ ಒಂದು ಗಳಿಗೆಯೊಳಗೆ, ಒಂದಕ್ಕೆ ಹತ್ತರಷ್ಟಾಗುತ್ತಿದ್ದಿತು. ಹೀಗೆ ಹಣ ಹೆಚ್ಚಿಸಿಕೊಳ್ಳಲು ಎಲ್ಲರೂ ಪ್ರಯತ್ನಪಡುತ್ತಿರುವವರೇ ಆದರೂ ಆ ಚಂಚಲೆ ಒಬ್ಬೊಬ್ಬರಿಗೆ ಮಾತ್ರ ಒಲಿಯುತ್ತಾಳೆ. ಆದರೆ ಅದಕ್ಕೆ ತೆರುವ ದರವನ್ನು ತೆರಲೇಬೇಕು. ರಾಮಕೃಷ್ಣ ತಿಂಗಳಿಗೆ ಇಪ್ಪತ್ತೈದು ದಿನ ಕೋರ್ಟಿನ ಬಾಗಿಲು ಕಾಯುತ್ತಿದ್ದರು. ಬೆಳಿಗ್ಗೆ ಹಾಸನ, ಸಾಯಂಕಾಲ ನರಸೀ

ಪುರ, ನಾಳೆ ಮೈಸೂರು, ನಾಡಿದ್ದು ಬೆಂಗಳೂರು ಹೀಗೆ ತಿಂಗಳು ತಿಂಗಳೂ ತಿರುಗುತ್ತಲೇ ಇರುತ್ತಿದ್ದರು. ಪ್ರಾಣಿ ಒಂದು ದಿನವೂ ಮನೆಯಲ್ಲಿ ಸುಖವಾಗಿ ನಿರ್ಯೋಚನೆಯಿಂದ ಇರಲಿಲ್ಲ ಅವರ ಹೆಂಡತಿ "ಒಂದು ದಿನವೂ ಮನೆಯಲ್ಲಿ ಸುಖವಾಗಿ ಊಟಮಾಡಿಕೊಂಡು ಇರಬಾರದೆಂಬುದು ನಿಮಗೆ ಶಾಪವೆಂದು ತೋರುತದೆ ಎನ್ನುತ್ತಿದ್ದರು. ರಾಮಕೃಷ್ಣ ಹಬ್ಬ ಹರಿದಿನ ನೆಂಟರಿಷ್ಟರ ಮದುವೆ ಯಾವುದಕ್ಕೂ ಮನೆಯಲ್ಲಿ ನಿಲ್ಲುತ್ತಿರಲಿಲ್ಲ. ಊರಿನವರು ಅವನಿಗೆ ಧನಪಿಶಾಚಿ ಎಂದೇ ಹೆಸರಿಟ್ಟಿದ್ದರು. ಈ ಧನಪಿಶಾಚಿ ಮಾಡುತ್ತಿದ್ದ ಅನ್ಯಾಯಗಳಿಗೂ ಮಿತಿ ಇರಲಿಲ್ಲ. ಅವರನ್ನು ಕಂಡರೆ ಬೆಂಕಿಯನ್ನು ಕಂಡಂತೆ, ತೊನ್ನು ಹತ್ತಿದವರನ್ನು ಕಂಡಂತೆ ಜನ ಹೆದರುತ್ತಿದ್ದರು. ವಿಧಿಯಿಲ್ಲದ ಹೊರತು ಯಾರೂ ಅವರಲ್ಲಿ ವ್ಯವಹಾರ ಮಾಡಲು ಇಷ್ಟಪಡುತ್ತಿರಲಿಲ್ಲ. ಅವರ ಜಮೀನುಗಳನ್ನು ಸಾಗುವಳಿ ಮಾಡುತ್ತಿದ್ದವರು ಜಮೀನಿನಲ್ಲಿ ಪೈರು ಬೆಳೆಯಲಿ ಬಿಡಲಿ ಮೊದಲು ರಾಮಕೃಷ್ಣನ ಗುತ್ತಿಗೆ ತಂದು ಅಳೆದುಬಿಡುತ್ತಿದ್ದರು ರೈತರಿಂದ ಯಾರಿಗಾದರೂ ಹಣ ಬರಬೇಕಾಗಿದ್ದರೆ ಹಣವನ್ನು ಕೇಳಿ ಕೇಳಿ ಸುಸ್ತಾದ ಆ ಸಾಧು ಪ್ರಾಣಿ ಕೊನೆಗೆ ಒಂದು ದಿನ "ಈ ಲೇವಾದೇವಿ ರಾಮಕೃಷ್ಣನಿಗೆ ವಹಿಸುತ್ತೇವೆ" ಎಂದರೆ ರೈತ ಮರುದಿನವೇ ಹಣತಂದು ತೀರ್ಮಾನ ಮಾಡುತ್ತಿದ್ದನು. ರಾಮಕೃಷ್ಣ ಯಾರದಾದರೂ ಜಮೀನಿನ ಸಮೀಪದ ಜಮೀನನ್ನು ಕೊಂಡುಕೊಂಡರೆ ಆ ಜಮೀನಿನ ನಾಲ್ಕು ಕಡೆಯವರೂ ಹಾಸಿಗೆಯಲ್ಲಿ ಹಾವನ್ನು ಕಂಡಂತೆ ಹೆದರುತ್ತಿದ್ದರು. ಒಂದೊಂದು ಸಲ ರೈತರ ನಡವಳಿಕೆಯಿಂದಲೇ ರಾಮಕೃಷ್ಣ ಹಾಗೆ ಜೋರಾಗುತ್ತಿದ್ದರು. ಮಲ್ಲಿಗೆಹಳ್ಳಿ ಅರ್ಚಕನ ಗದ್ದೆಯನ್ನು ನಿಂಗ ಗುತ್ತಿಗೆಗೆ ಮಾಡಿಕೊಂಡಿದ್ದನಷ್ಟೆ. ಆದರೆ ಅರ್ಚಕ ಏನೂ ಅರಿಯದ ಸಾಧುವಾದುದರಿಂದ ನಿಂಗ ಅವನಿಗೆ ಸರಿಯಾಗಿ ಗುತ್ತಿಗೆ ಕೊಡುತ್ತಿರಲಿಲ್ಲ. ಅದು ಉತ್ತಮವಾದ ಜಮೀನಾಗಿದ್ದುದರಿಂದ ಒಳ್ಳೆಯ ರೈತರು ಬೇಕಾದ ಹಾಗೆ ದೊರೆಯುತ್ತಿದ್ದರು. ಅರ್ಚಕ "ಜಮೀನನ್ನಾದರೂ ಬಿಡು" ಎಂದು ನಿಂಗನನ್ನು ಗೋಗರೆದನು. ಹತ್ತು ವರುಷಗಳಿಂದ ಗುತ್ತಿಗೆ ಅರ್ಧ ಮುಕ್ಕಾಲು ತಿಂದು ನಿಂಗನ ಹಲ್ಲಿಗೆ ರಸ ಇಳಿದಿದ್ದಿತು. ಬಡ ಅರ್ಚಕ ಏನೂ ಕೆಲಸಕ್ಕೆ ಬಂದ ಮನುಷ್ಯನಾಗಿ ತೋರಲಿಲ್ಲ.

ಅಲ್ಲದೆ ಅರ್ಚಕನಿಗೆ ಕೋರ್ಟು ಕಛೇರಿ ಎಂದರೆ ಬಹಳ ಭಯವಿದ್ದಿತು. ಆದುದರಿಂದ ನಿಂಗನು "ಆಗುವುದು ಆಯಿತು. ನಾಲ್ಕು ವರುಷ ಈ ಗದ್ದೆ ನನ್ನ ಕೈಯ್ಯಲ್ಲಿದ್ದರೆ ಆಮೇಲೆ ಚಿಂತೆಯಿಲ್ಲ ಎಂದುಕೊಂಡು "ಗುತ್ತಿಗೆಗೆ ಮಾಡೋಕೆ ಬರೋರ್‍ಯಾರು ನೋಡುತೇನೆ" ಎಂದು ಗದರಿಸಿದನು. ಕೊನೆಗೆ ಅರ್ಚಕನು ವಿಧಿಯಿಲ್ಲದೆ "ಅಪ್ಪಾ ನಾನೇನೋ ನೀನು ಬದುಕಲಿ ನಾನೂ ಬದಕೋಣ ಅಂತ ನಿನಗೆ ಇಷ್ಟು ಕೇಳಿದೆ. ನೀನು ಕೇಳಲಿಲ್ಲ. ನಿನ್ನ ಹತ್ತಿರ ವ್ಯವಹರಿಸಿದರೆ ನಿನ್ನನ್ನು ನಾನು ತಿನ್ನಬೇಕು. ಇಲ್ಲದಿದ್ದರೆ ನನ್ನನ್ನು ನೀನು ತಿಂದುಬಿಡುವೆ. ಇಬ್ಬರ ಪ್ರಾಣವೂ ಉಳಿಯಲಿ ಎಂದರೆ ನಿನ್ನ ಹತ್ತಿರ ವ್ಯವಹರಿಸುವುದಕ್ಕಾಗುವುದಿಲ್ಲ." ಎಂದು ಹೇಳಿ ರಾಮಕೃಷ್ಣನಲ್ಲಿಗೆ ಹೋಗಿ ಅವನಿಗೇ ಒಂದು ಗುತ್ತಿಗೆ ಕರಾರು ಮಾಡಿಕೊಟ್ಟನು. "ಹತ್ತು ವರುಷದಿಂದ ಗುತ್ತಿಗೆ ಬಾಕಿ ಇದೆ. ವಸೂಲ್ಮಾಡಿಕೊಳ್ಳಿ ಆ ಹಕ್ಕನ್ನೂ ನಿಮಗೇ ಕೊಟ್ಟಿದ್ದೇನೆ" ಎಂದು ಬರೆದುಕೊಟ್ಟನು. ರಾಮಕೃಷ್ಣ ನಿಂಗನನ್ನು ಮಾತನಾಡಿಸದೆ ದಾವಾ ಹಾಕಿ ಬಡಿದು ಒಂದು ಕಾಸನ್ನೂ ಬಿಡದೆ ವಸೂಲ್ಮಾಡಿದನು. ನಿಂಗ ಮತ್ತೆ ತಲೆ ಎತ್ತಲಿಲ್ಲ. ರಾಮಕೃಷ್ಣನ ದೃಷ್ಟಿಗೆ ಬಿದ್ದವನು ಮತ್ತೆ ತಲೆ ಎತ್ತುವ ಸಂಭವವಿರಲಿಲ್ಲ.

ಇಂತಹ ಉದಾಹರಣೆಗಳು ಮಲ್ಲಿಗೆಹಳ್ಳಿಯಲ್ಲಿ ಎಷ್ಟೋ ನಡೆದು ಹೋಗಿವೆ. ಕುಳ್ಳ, ಪೇಟೆಯ ಚಿಕ್ಕನಿಗೆ ಮದುವೆಗಾಗಿ ಇನ್ನೂರು ರೂಪಾಯಿ ಕೊಟ್ಟಿದ್ದನು. ಕುಳ್ಳನಿಗೆ ಚಿಕ್ಕನನ್ನು ಹಣ ಕೇಳಿ ಕೇಳಿ ಸಾಕಾಯಿತು. ಹೀಗೆ ಆರು ವರುಷಗಳು ಕಳೆದನಂತರ ಕುಳ್ಳ "ಬಟ್ತೀನೆಲ್ಲ ಸೋಡಿ ಬಿಡ್ತೇನೆ. ಅಸಲು ಕೊಟ್ಟುಬಿಡು" ಎಂದು ಚಿಕ್ಕನನ್ನು ಕೇಳತೊಡಗಿದನು. ಚಿಕ್ಕ "ಕೊಟ್ಟೆ ಕೊಟ್ಟೆ" ಎಂದೇ ಕಾಲ ಹಾಕುತ್ತಾ ಬಂದನು. ಕೊನೆಯಲ್ಲಿ ಒಂದುದಿನ ಚಿಕ್ಕನು "ಅಸಲಿನಲ್ಲಿ ಐವತ್ತು ರೂಪಾಯಿ ಬಿಡಿ" ಎಂದನು. ಕುಳ್ಳನು "ಅಪ್ಪಾ ಬಿಡುತ್ತಿದ್ದೆ. ಆದರೆ ಏನುಮಾಡಲಿ? ನಾನು ರಾಮಕೃಷ್ಣಪ್ಪನವರ್ಗೆ ಹಣ ಕೊಡಬೇಕು. ಬಡ್ಡಿಯೇ ಐದುನೂರಕ್ಕೆ ಮೇಲಾಗಿದೆ. ಈಗ ಕತ್ತಿಗೆ ಹಾಕಿದ್ದಾರೆ. ರಾಮಕೃಷ್ಣಪ್ಪನವರ ಸಹವಾಸ ನಿನಗೇ ಗೊತ್ತು. ಬೆಂಕಿ. ಗೆಂಡೆ ಮಾರಿದ ಹಣ ನಿನ್ತಾವ ಇರೋದ್ನ ಕೊಡು. ನನ್ನ ಅಸಲು ಪೂರಾ ಕೊಟ್ಟುಬಿಡು. ನನಗೂ ಕಷ್ಟಕಾಲ. ಮುಂದೆ ನೋಡೋಣ"

ಎಂದನು. ಆದರೆ ಚಿಕ್ಕನು ಹಣವನ್ನು ಕೊಡಲಿಲ್ಲ. ಕುಳ್ಳನು ಚಿಕ್ಕನ ಕಾಗದವನ್ನು ರಾಮಕೃಷ್ಣನಿಗೆ ಹವಾಲ್ತಿ ಮಾಡಿ ಕೊಟ್ಟನಂತರ ಚಿಕ್ಕ ನಾಲ್ಕುನೂರಕ್ಕಿಂತ ಹೆಚ್ಚು ಕೊಡಬೇಕಾಯಿತು. ಕುಳ್ಳನು "ಎಲ್ಲಿಯ ವರೆಗೆ ಚಿಕ್ಕನಂತಹ ಭಂಡರು ಇರುತ್ತಾರೆಯೋ ಅಲ್ಲಿಯವರೆಗೆ ರಾಮ ಕೃಷ್ಣನಂತಹ ಕಾಡುಕಿಚ್ಚು ಇದ್ದೇ ಇರುತ್ತದೆ. ಒಂದರಿಂದ ಒಂದು ಹುಟ್ಟುತ್ತದೆ, ಒಂದನ್ನ ಒಂದು ಪೋಷಿಸುತ್ತದೆ" ಎಂದನು.

ಹೀಗೆ ಮಾಡಿ ರಾಮಕೃಷ್ಣಪ್ಪನವರು ಒಳ್ಳೆಯ ಕುಬೇರರಾದರು; ಹಳೆಯ ಮನೆಯನ್ನು ಕೆಡವಿ ಅದರ ಸ್ಥಳದಲ್ಲಿ ಹೊಸ ಮಂಗಳೂರು ಹಂಚಿನ ಮನೆ ಕಟ್ಟಿಸಿದರು. ಒಂದುಸಲ ಅವರು ತಮ್ಮ ಅಣ್ಣಂದಿರು ಯಜಮಾನರೊಂದಿಗೆ "ಇಲ್ಲಿ ನೋಡಿ ನಾವೂ ನೀವೂ ಒಂದೇ ಸಮನಾಗಿ ಪ್ರಾರಂಭಿಸಿದೆವು. ನಿಮಗಿಂತ ಹೆಚ್ಚಾಗಿ ನನಗೆ ಯಾರೂ ಏನನ್ನೂ ಪ್ರಾರಂಭದಲ್ಲಿ ಕೊಡಲಿಲ್ಲ. ಆದರೂ ಈಗ ನನ್ನ ಆಸ್ತಿ ಲಕ್ಷಕ್ಕೆ ಮೀರಿತು. ನಿಮ್ಮದು ಇದ್ದಂತೆಯೇ ಇದೆ" ಎಂದರು. ಯಜಮಾನರು "ನಿನ್ನಹಾಗೆ ಹಣವನ್ನು ವೃದ್ಧಿಮಾಡುವ ಶಕ್ತಿ ನನಗೆ ಇಲ್ಲ. ಆದರೆ ನೀನು ಹಣ ಸಂಪಾದಿಸಿದುದೇ ಅಂತಹ ಮಹತ್ಕಾರ್ಯವಾಗಲಿಲ್ಲ. ಇದಕ್ಕಿಂತ ಇನ್ನೂ ಎಷ್ಟೋ ಮಹತ್ಕಾರ್ಯಗಳಿಗೆ ನಿನ್ನ ಶಕ್ತಿ ತಿರುಗಿಸಬಹುದಾಗಿದ್ದಿತು. ಇನ್ನು ಇರುವುದೇನು? ಕೊನೆಯಲ್ಲಿ ನನಗೂ ಎರಡು ಗಾಡಿ ನಿನಗೂ ಎರಡು ಗಾಡಿ ಸೌದೆ. ನೀನು ಕೂಡಿಟ್ಟಿರುವ ಹಣದಿಂದ ನಿನ್ನ ನಂತರ ನಿನ್ನ ಮಗ ಅನಂತು ಮೋಜು ಮಾಡುವನು" ಎಂದರು.

ಒಂದುದಿನ ಮಲ್ಲಿಗೆಹಳ್ಳಿಯಿಂದ ರಾಮಕೃಷ್ಣ ಹೊರಟು ಕೋರ್ಟಿಗೆ ಹೋಗುತ್ತಿದ್ದರು. ಅವತ್ತು ಲಿಮಿಟೇಷನ್ ಆಗುವ ಒಂದು ಪತ್ರವನ್ನು ಅವರು ದಾವಾ ಮಾಡಬೇಕಾಗಿದ್ದಿತು. ಮಲ್ಲಿಗೆಹಳ್ಳಿಯಿಂದ ನಾಲ್ಕುಮೈಲಿ ಹೋದ ನಂತರ ಬಸ್ಸು ರಸ್ತೆಯಲ್ಲಿ ಕೆಟ್ಟು ನಿಂತುಹೋಯಿತು. ಆ ವೇಳೆಗೆ ಮಧ್ಯಾಹ್ನ ಒಂದು ಗಂಟೆಯಾಗಿದ್ದಿತು. ಬಸ್ಸಿನ ಯಾವುದೋ ಭಾಗ ಹೋಗಿದ್ದುದರಿಂದ ರಾತ್ರಿಗೆ ಮುಂಚಿತವಾಗಿ ಬಸ್ಸು ಸರಿಯಾಗುವ ಸಂಭವವಿಲ್ಲವೆಂದು ಸಾರಥಿ ಹೇಳಿದನು. ರಾಮಕೃಷ್ಣಪ್ಪನವರ ಜೇಬಿನಲ್ಲಿ ಅವತ್ತೇ "ಲಿಮಿಟೇಶನ್" ಆಗುವ ಪತ್ರ ಇದ್ದುದರಿಂದ ಅವರು ಬಸ್ಸಿನಿಂದ ಇಳಿದು ನಡೆದುಕೊಂಡೇ ಹಾಸನಕ್ಕೆ ಹೊರಟರು. ಸುಸ್ವಾದುದ

ರಿಂದ ದಾರಿಯಲ್ಲಿ ಒಂದು ಕಡೆ ಗುತ್ತಿಯ ನೆಳಲಿನಲ್ಲಿ ಮಲಗಿದರು ಹಾಗೆಯೇ ಪ್ರಾಣ ಹೋಯಿತು. ಮಾರನೆಯ ದಿನ ಸಾಯಂಕಾಲದ ವೇಳೆಗೆ ಮಲ್ಲಿಗೆಹಳ್ಳಿಗೆ ಸುದ್ದಿ ಗೊತ್ತಾಯಿತು. ಹೋಗಿ ನೋಡುವಲ್ಲಿ ನಾಯಿ ನರಿಗಳು ಶವವನ್ನು ಗುರುತು ಸಿಕ್ಕದಂತೆ ಮಾಡಿಬಿಟ್ಟಿದ್ದವು. ಆದರೆ ರಾಮಕೃಷ್ಣಪ್ಪನವರ ಜೇಬಿನಲ್ಲಿದ್ದ ಕಾಗದ ಪತ್ರಗಳು ಹಾಗೆಯೇ ಇದ್ದವು.

ಸಾಯುವ ವೇಳೆಗೆ ರಾಮಕೃಷ್ಣಪ್ಪನವರಿಗೆ ಎರಡು ಲಗ್ನಗಳಾಗಿದ್ದವು. ಮೊದಲನೆ ಹೆಂಡತಿಯು ಒಂದು ಹುಡುಗಿಯನ್ನು ಹೆತ್ತು ಸ್ವರ್ಗಸ್ಥಳಾಗಿದ್ದಳು. ಆ ಹುಡುಗಿಯ ಹೆಸರು ಸುಭದ್ರೆ. ಎರಡನೆಯ ಹೆಂಡತಿಯ ಮಗನೇ ಅನಂತು. ರಾಮಕೃಷ್ಣಪ್ಪನವರು ಸಾಯುವ ವೇಳೆಗೆ ಅನಂತುವಿನ ತಾಯಿ ಸ್ವರ್ಗಸ್ಥಳಾಗಿ ಎರಡು ವರುಷಗಳಾಗಿದ್ದುವು. ರಾಮಕೃಷ್ಣಪ್ಪನವರ ಅಣ್ಣಂದಿರು ಯಜಮಾನರಿಗೆ ವೇದಾಂತನೆಂಬ ಮಗನಿದ್ದನು. ಆತ ತನ್ನ ತಂದೆಯಂತೆಯೇ ಒಳ್ಳೆಯ ಸಂಸ್ಕೃತ ಪಂಡಿತನಾಗಿದನು.

ಅನಂತುವಿನ ಅಕ್ಕ ಸುಭದ್ರೆ, ರಾಮಕೃಷ್ಣಪ್ಪನವರು ಇರುವಾಗಲೇ ವಿಧವೆಯಾದಳು. ಆಕೆಯ ಗಂಡ ಅಪ್ಪಣ್ಣ ಡಾಕ್ಟರ್ ಆಗಿದ್ದವನು ಮಲೇರಿಯಾ ಜ್ವರ ಪೀಡಿತರನ್ನು ಗುಣಪಡಿಸುವುದರಲ್ಲಿ ತಾನೇ ಮಲೇರಿಯಾಕ್ಕೆ ತುತ್ತಾದನು. ಆ ಮಲೆನಾಡಿಗೆ ಯಾವ ಡಾಕ್ಟರರೂ ಹೋಗುತ್ತಿರಲಿಲ್ಲ. ಅಲ್ಲಿಗೆ ವರ್ಗವಾದವರೆಲ್ಲಾ ರಜಾ ತೆಗೆದುಕೊಂಡೇ ಹಿಂದಕ್ಕೆ ಬರುತ್ತಿದ್ದರು. ಅಪ್ಪಣ್ಣನಿಗೂ ಅವನ ಹಿತೈಷಿಗಳು "ನೀನೂ ರಜಾ ತೆಗೆದುಕೋ ಆ ಮಲೆನಾಡಿನಲ್ಲಿ ಯಾಕೆ ಸಾಯುತ್ತೀ. ಪುರುಷಗರ್ಭ ಪಂಡಿತ ಎಂದರು. ಹಾಗೆಯೇ ಮಾಡುವ ಉದ್ದೇಶದಿಂದ ಅಪ್ಪಣ್ಣ ಒಂದುಸಲ ನೋಡಿಕೊಂಡು ಬರೋಣವೆಂದು ತನ್ನನ್ನು ವರ್ಗ ಮಾಡಿದ್ದ ಮಲೆನಾಡಿಗೆ ಹೋದನು. ಅಲ್ಲಿಯ ಜನಗಳ ಜ್ವರವನ್ನು ನೋಡಿ ಅವನು ಬೆಚ್ಚಿಬಿದ್ದ. ಮಲೇರಿಯಾದಿಂದ ನಿತ್ಯ ಹಳ್ಳಿಗಳು ಬರಿದಾಗುತ್ತಿದ್ದವು. ಜನರು ಆರ್ತರಾಗಿ ಡಾಕ್ಟರ ಕಡೆಯೇ ನೋಡುತ್ತಿದ್ದರು. "ಇಲ್ಲಿಂದ ಓಡುವವನು ಹೇಡಿ ನಿರ್ದಯ ಕರ್ತವ್ಯಭ್ರಷ್ಟ ಏನಾದರೂ ಆಗಲಿ ಇಲ್ಲಿಯೆ ಇರುತ್ತೇನೆ" ಎಂದು ಅಪ್ಪಣ್ಣ ಮಲೆನಾಡಿನಲ್ಲಿಯೇ ಉಳಿದನು.

ಬರಬರುತ್ತಾ ಜನರ ಮುಖದಲ್ಲಿ ಗೆಲವು ಕಾಣತೊಡಗಿತು. ಅವರಿಗೆ ಬಾಳಿನಲ್ಲಿ ಉತ್ಸಾಹವುಂಟಾಗತೊಡಗಿತು. ಆದರೆ ಡಾಕ್ಟರ್ ಅಪ್ಪಣ್ಣನಿಗೆ ಆ ಹೊಸ ಹವ ಒಗ್ಗಲಿಲ್ಲ. ಮಲೆನಾಡಿಗೆ ಹೋದ ಆರೇ ತಿಂಗಳಿನಲ್ಲಿ ಅವನೇ ಮಲೇರಿಯಾಕ್ಕೆ ತುತ್ತಾದನು. ವೈದೇಹಿ ಎಂಬ ರೂಪವತಿಯಾದ ಮಗಳನ್ನೂ ಸುದರ್ಶನನೆಂಬ ಅತಿ ತುಂಟನಾದ ಮಗನನ್ನೂ ಬೇಕಾದಷ್ಟು ಸಾಲವನ್ನೂ ಹೆಂಡತಿಯ ತಲೆಯ ಮೇಲೆ ಹೇರಿ ಅಪ್ಪಣ್ಣ ಕಣ್ಮರೆಯಾದನು. ಅಪ್ಪಣ್ಣ ಸಾಯುವಾಗ ಅವನ ಹೆಂಡತಿ ಗರ್ಭಿಣಿಯಾಗಿದ್ದಳು. ಗಂಡ ಸತ್ತ ಮೂರು ತಿಂಗಳಿಗೆ ಸುಭದ್ರ ಇನ್ನೊಂದು ಹೆಣ್ಣಸು ಹೆತ್ತಳು. ಆ ಹೆಣ್ಣಿಗೆ ಸೀತೆಯೆಂದು ಹೆಸರಿಟ್ಟರು. ಸುಭದ್ರೆಯು ತನ್ನ ಮೂರು ಮಕ್ಕಳನ್ನೂ ಕಟ್ಟಿಕೊಂಡು ಅನಂತುವಿನ ಮನೆಯಲ್ಲಿಯೇ ಬಂದು ನಿಂತಳು.

---

## ೮. ತಿಪ್ಪಯ್ಯ ಉಪಾಧ್ರಿ

---

ಆಗ ಮಲ್ಲಿಗೆಹಳ್ಳಿಯ ಸ್ಕೂಲು ಇದ್ದುದು ಪೇಟೆಯ ಮಧ್ಯದಲ್ಲಿ; ಈಗಲೂ ಸ್ಕೂಲು ಇರುವುದು ಅಲ್ಲಿಯೇ. ಸ್ಕೂಲು ಸುತ್ತಮುತ್ತಲ ಅನೇಕ ಮನೆಗಳ ಸಂಧಿಯಲ್ಲಿ ಅದೂ ಒಂದು ಹಂಚಿನ ಮನೆಯಾಗಿ ತೋರುತ್ತದೆ. ಸುತ್ತಮುತ್ತ ಎಲ್ಲಾ ಮನೆಗಳಿಂದಲೂ ಯಾವಾಗಲೂ ಅಡಿಗೆಯ ಮತ್ತು ಬೆರಣಿಯ ಹೊಗೆ ಹೊರಡುತ್ತಿರುವುದರಿಂದ ದೂರದಿಂದ ನೋಡಿದರೆ ಸ್ಕೂಲು ಒಂದು ಆಲೆ ಮನೆಯಂತೆಯೂ ಹೆಂಚಿನ ಗೂಡಿನಂತೆಯೂ ಕಾಣುತ್ತದೆ. ಸ್ಕೂಲಿನಲ್ಲಿ ಇಪ್ಪತ್ತುನಾಲ್ಕು ಘಂಟೆಯೂ ಹೊಗೆಯಾಡುತ್ತಿರುವಂತೆಯೇ ಕಾಣುತ್ತದೆ. ಸುತ್ತಲಿನ ಮನೆಯ ಅಡಿಗೆಯ ಹೊಗೆಯೂ, ಅಡಿಗೆಯ ಖಾರದ ವಾಸನೆಯೂ ಮಾಂಸದ ವಾಸನೆಯೂ ತರಗತಿಗಳಿಗೆ ಪದೇ ಪದೇ ಬರುತ್ತಿರುತ್ತದೆ. ಸ್ಕೂಲಿನ ವಿದ್ಯಾರ್ಥಿಗಳಿಗೂ ಉಪಾಧ್ಯಾಯರಿಗೂ ಯಾವಾಗಲೂ ಹೊಗೆಯಿಂದ ನೆತ್ತಿಯ ಮೇಲೆ ಬೆವರಿನ ಹನಿಗಳೂ ಸುತ್ತಲ ಅಡಿಗೆ ಮನೆಯ ಖಾರದ ವಾಸನೆಗಳಿಂದ ಕೆಮ್ಮಲೂ ಉಂಟಾಗುತ್ತಲೇ ಇರುತ್ತದೆ. ಅಡಿಗೆ ಮನೆಯ

ವಾಸನೆ ಹಿತಕರವಾಗಿರುವಾಗ ಹುಡುಗರು ಮೂಗಿನ ಸೊಳ್ಳೆಗಳನ್ನು ಅರಳಿಸಿಕೊಂಡು ವಾಸನೆಯನ್ನು ಆಘ್ರಾಣಿಸುತ್ತಾರೆ. ಮಾಂಸದ ವಾಸನೆ ಬಂದಾಗ ಬ್ರಾಹ್ಮಣ ಉಪಾಧ್ಯಾಯರು ಶಿಶಿ ಎಂದುಕೊಂಡು ಮೂಗನ್ನು ಶಿಂಡಿಸಿಕೊಂಡು ಕೈಯಲ್ಲಿರುವ ಪುಸ್ತಕದಿಂದ ಮುಖದ ಮೇಲೆ ಗಾಳಿ ಬೀಸಿಕೊಳ್ಳುತ್ತಾರೆ. ಇದ್ದಕ್ಕಿದ್ದಂತೆ ಹಿಂದಲ ಮನೆಯ ಹಿತ್ತಲಿನಲ್ಲಿ ಹಂದಿಯು ಕಿರ್ರ್ರೋ ಎಂದು ಕಿರುಚಲು ಪ್ರಾರಂಭಿಸುತ್ತದೆ. ಕೆಲವು ಹುಡುಗರು ಧ್ವನಿಯನ್ನು ಕೇಳಿ ಭಯದಿಂದ ಬರೆಯುತ್ತಿರುವುದನ್ನು ಮರೆಯುತ್ತಾರೆ. "ಹಂದಿ ಇರಿಯುತ್ತಾರೆ" ಎಂದು ಕೆಲವು ಹುಡುಗರು ಹೇಳುತ್ತಾರೆ. ಹಂದಿಯ ಕೀರಲಾಟವನ್ನು ಕೇಳಿದ ಕೂಡಲೇ ಉಪಾದ್ರಿ ಕೆನ್ನೆಮೇಲೆ ಕೈಯಿಟ್ಟುಕೊಂಡು ಪಾಠ ಹೇಳುವುದನ್ನು ಬಿಟ್ಟು ಕುಳಿತು ಕೊಳ್ಳುತ್ತಾರೆ. ಸ್ಕೂಲಿನ ಮಗ್ಗುಲಿನ ಒಬ್ಬ ಕಂಚುಗಾರ ಸಾಹೇಬ ಸೊರಬದಿಂದ ಬಂದವನು ಕೆಲಸ ಮಾಡುತ್ತಿರುತ್ತಾನೆ. ಇಪ್ಪತ್ತುನಾಲ್ಕು ಗಂಟೆಯೂ ಅವನ ಕೊಟ ಕೊಟ ಶಬ್ದದಿಂದ ಊರಿಗೆ ನಿದ್ರೆಯಿಲ್ಲ. ಕೊಟ ಕೊಟ ಕೊಟ ಕೊಟ ಕೊಟ ಕೊ ಕೊ ಕೊ ಕೊ ಟ ಟ ಟ ಟ! ಕೊಟ್ಟೋನು ಕೆಟ್ಟ. ಮೇಷ್ಟರಿಗೆ ಬೆನ್ನಿನಲ್ಲಿ ಹೇಳು ಬಿಟ್ಟಂತೆ ಆಗುತ್ತದೆ. ಹುಡುಗರು ಪಾಠದ ಜ್ಞಾನವನ್ನು ಬಿಟ್ಟು ಆ ಕೊಟ ಕೊಟಕ್ಕೆ ತಾಳ ಹಾಕುತ್ತಾ ಕುಳಿತುಬಿಡುತ್ತಾರೆ. ಮೇಷ್ಟರು ಸ್ಕೂಲಿಗೆ ಬರುವುದಕ್ಕೆ ಮುಂಚೆ ಹುಡುಗರು ಕೊಟ ಕೊಟ ನಾದಕ್ಕೆ ಅನುಸಾರವಾಗಿ ಜಗಲಿ ಮೇಲೇ ಕುಣಿಯುತ್ತಲೇ ಇರುತ್ತಾರೆ. ಕಂಚುಗಾರನು ಶಾಂತನಾಗಿ ಕಬ್ಬಿಣದ ಕುದುರೆಯ ಮೇಲೆ ಕುಳಿತು ತಾನು ಮಾಡುತ್ತಿರುವ ಕಿರು ಕುಳದ ಜ್ಞಾನವೇ ಇಲ್ಲದೆ ಗಡ್ಡವನ್ನು ಸೀವುತ್ತಾ ಬಿಂದಿಗೆಯನ್ನು ಮಟ್ಟ ಕುಟ್ಟುತ್ತಾನೆ. ಉಪಾದ್ರಿಗೆ ಮೈ ಬೆಂಕಿಯಾಗುತ್ತದೆ. ಇವನನ್ನು ಯಾರಾ ದರೂ ಕೊಲ್ಲಬಾರದೇ? ಆ ಸುತ್ತಿಗೆಯಿಂದಲೇ ಇವನ ತಲೆಗೆ ಒಂದು ಬಿಡಬಾರದೇ? ಇವನ ಸಾಮಾನನ್ನು ಯಾರಾದರೂ ಕದ್ದರೆ ಮೂರು ದಿನವಾದರೂ ಶಾಂತಿ ದೊರಕೀತಲ್ಲ ಎಂದು ಅವರು ಯೋಚಿಸುತ್ತಾರೆ. ಅಷ್ಟುಹೊತ್ತಿಗೆ ಒಕ್ಕಲಗಿತ್ತಿಯೊಬ್ಬಳು ನಾಲೆಗೆ ಹೊರಟು, ಎಡಗೈಯಲ್ಲಿ ತೊಳೆಯಬೇಕಾಗಿರುವ ಪರಕೆಯನ್ನೂ ಬಲಗೈಯಲ್ಲಿ ಗಂಗಳವನ್ನೂ ಹಿಡಿದುಕೊಂಡು ಕಂಚುಗಾರನ ಎದುರಿಗೆ ನಿಂತು "ಏ ಸಾಬಯ್ನೂ

ಮಗೀಗೆ ರಾತ್ರಿಯಿಂದ ಜರ. ನಿದ್ರೆಯೇ ಇಲ್ಲ, ಸ್ವಲ್ಪ ಜೊಂಪು ಹತ್ತೋ ವೇಳ್ಗೆ ನಿನ್ನ ಕೊಟ ಕೊಟ, ಯಾಕೆ ಹಿಂಗೆ ಪರಾಣ ತೆಗೀತೀಯ. ಹೊತ್ತಾರೆ ಸಂಜೆ, ಸಂಜೆ ಹೊತ್ತಾರೆ ಯಾಕೆ ಹಿಂಗೆ ಬಡ್ಕೋತೀಯ ಸಟಾಗೆ ನಿದ್ರೆ ಬರಲಿ ಸ್ವಲ್ಪ ಸದ್ದು ನಿಲ್ಲಿಸು'' ಎನ್ನುತ್ತಾಳೆ. ಸ್ಕೂಲು ಎದುರು ಮನೆಯ ಜಗುಲಿಯ ಮೇಲೆ ಬಟ್ಟೆ ಅಂಗಡಿ ಇಟ್ಟಿರುವ ದರ್ಜಿ ವ್ಯಾಪಾರಿಗೂ ಗಿರಾಕಿಗೂ ಚರ್ಚೆ ನಡೆದಿದೆ. ಗಿರಾಕಿ ವ್ಯಾಪಾರಿ ಕೊಟ್ಟ ಬಟ್ಟೆ ಬೇಡವೆಂದು ಹೇಳುತ್ತಿದ್ದಾನೆ. ಮತ್ತಾವುದೋ ಬಟ್ಟೆಯನ್ನು ತೋರಿಸಿ ಇಂತಹುದನ್ನು ಕೊಡು ಎನ್ನುತ್ತಾನೆ. ವ್ಯಾಪಾರಿಯ ಹತ್ತಿರ ಆ ಬಟ್ಟೆ ಮುಗಿದುಹೋಗಿದೆ. ಅವನು ತನಗೆ ಬಟ್ಟೆ ಕಳುಹಿಸಿದ ಮಿಲ್ ಏಜೆಂಟನನ್ನು ಬಯ್ಯುತ್ತಾ ''ನೀನು ಕೇಳುತ್ತಿರುವ ಬಟ್ಟೆಯ ಬಣ್ಣ ಹೋಯಿತು. ಮಿಲ್‌ನವನ ಮೇಲೆ ದಾವಾ ಹಾಕಿದ್ದೇನೆ'' ಎನ್ನುತ್ತಾನೆ. ಗಿರಾಕಿಗೆ ಈ ಮಾತಿನಿಂದ ಸಮಾಧಾನವಾದಂತೆ ತೋರುವುದಿಲ್ಲ. ಅವನು ಇನ್ನೂ ಮಾತನಾಡುತ್ತಿರುವಾಗಲೇ ದರ್ಜಿಯ ಯಂತ್ರ ಡಡಡಡನೆ ಶಬ್ದವನ್ನು ಪ್ರಾರಂಭಿಸುತ್ತದೆ. ಆದರ ಪಗ್ಗುಲಲ್ಲಿರುವುದು ಕಮ್ಮಾರ ಚೆನ್ನಾಚಾರಿಯ ಕುಲುಮೆ. ಅವನು ಮನೆಯ ಮುಂದೆ ದುಂಡಾಗಿ ಬೆರಣಿ ಒಟ್ಟಿ ಗಾಡಿಪಟ್ಟಿಗೆ ಬೆಂಕಿ ಕೊಟ್ಟಿದ್ದಾನೆ. ಕುಲುಮೆಯಿಂದ ಗಾಡಿಯ ಇರ್ಚಿಯನ್ನು ತೆಗೆದು ಅಡಿಗಲ್ಲಿನಮೇಲೆ ಇಟ್ಟು ಗಾಡಿಯವ ನಿಂದ ಸುತ್ತಿಗೆಯಲ್ಲಿ ಅದರ ಮೇಲೆ ಹೊಡೆಸುತ್ತಾನೆ. ಬೆಂಕಿಯ ಹೂ ಬಾಣಗಳ ಬೆಳಕಿನಲ್ಲಿ ಆಚಾರಿಯ ಮುಖಬಣ್ಣ, ನಾಟಕದ ಅಭಿನಯ ಕಾರರು ಬಣ್ಣ ಬಳಿದುಕೊಂಡಂತೆ ಕಾಣುತ್ತದೆ.

ಕುಲುಮೆಯ ಏಟಿನ ಸದ್ದು ಕೇಳಿಸಿದ ಕೂಡಲೇ ಹುಡುಗರು ಆ ಕಡೆ ತಿರುಗಿ ಬೆಂಕಿಯ ಹೂ ಬಾಣಗಳನ್ನು ನೋಡುತ್ತಾರೆ. ಸ್ಕೂಲಿನ ಬಲದ ಮಗ್ಗುಲಲ್ಲಿರುವುದು ಚಿಲ್ಲರೆ ಅಂಗಡಿ. ರೈತರು ಎಲೆ ಅಡಿಕೆ ಹೊಗೆಸೊಪ್ಪು ಬೀಡಿಗಳನ್ನು ತೆಗೆದುಕೊಂಡು ಸ್ಕೂಲಿನ ಜಗಲಿ ಚೆನ್ನಾ ಗಿರುವುದರಿಂದ ಅಲ್ಲಿ ಬಂದು ಕುಳಿತುಕೊಂಡು ಎಲೆ ಅಡಿಕೆ ಅಗೆಯುತ್ತಾ ಬೀಡಿ ಸೇದುತ್ತಾರೆ. ಎಲೆ ಅಡಿಕೆ ಉಗಳನ್ನು ಪಿಚಕಾರಿಯಿಂದ ನೀರನ್ನು ಎರಚಿದಂತೆ ತುಟಿಗಳ ಮೇಲೆ ಬೆರಳುಗಳನ್ನಿಟ್ಟು ಬೆರಳಿನ ಸಂದಿನಿಂದ ಬಿಡುತ್ತಾರೆ. ಸ್ಕೂಲನ್ನು ಮುಚ್ಚಿರುವ ವೇಳೆಯಲ್ಲಿ ಜಗಲಿಯ

ಮೇಲೆಯೇ ಉಗಳುತ್ತಾರೆ. ಕೆಲವು ಪೋಷಕರು ಹೆಚ್ಚು ಸದರದಿಂದ ಮೇಷ್ಟರಿಗೆ ವಿಶ್ವಾಸವನ್ನು ತೋರಿಸುವವರಾಗಿ ಸ್ಕೂಲಿನ ಒಳಕ್ಕೆ ಬಂದು ಕುಳಿತುಕೊಂಡು ಬೀಡಿ ಸೇದುತ್ತಾ ಮಕ್ಕಳನ್ನು "ಹಾಗೆ ಒರಿ ಹೀಗೆ ಒರಿ" ಎಂದು ಒಯ್ಯುತ್ತಾರೆ. ಕೆಲವರು ಸ್ಕೂಲು ಬಾಗಿಲು ತೆರೆದಾಗ ಹುಡುಗರ ಜತೆಯಲ್ಲಿ ಒಳಗೆ ಬಂದು ಕುಳಿತವರು ದೆಯ್ಯಗಳಂತೆ, ಸ್ಕೂಲು ಬಿಡುವವರೆಗೆ ಮೇಷ್ಟರ ಮೇಲೆ ನೆಟ್ಟ ಕಣ್ಣನ್ನು ತೆಗೆಯದೇ ಕುಳಿತೇ ಇರುತ್ತಾರೆ. ಗಿಡ್ಡಪ್ಪ ಸ್ಕೂಲಿನ ಕಂಬಕ್ಕೆ ಆಡುಗಳನ್ನು ಕಟ್ಟಿಹಾಕಿ ಸ್ಕೂಲಿನ ಹಿತ್ತಿಲಿನ ಹೆಬ್ಬೈಮರದ ಸೊಪ್ಪನ್ನು ಕುಡ್ಲುಗಣೆಯಿಂದ ಮುರಿದು ಅವಕ್ಕೆ ಹಾಕುತ್ತಾನೆ ರೈತರು ದನಗಳನ್ನು ಬಿಟ್ಟುಕೊಂಡು ಕಾವಲಿಗೆ ಹೋಗುತ್ತಿರುವಾಗ ಇದ್ದಕ್ಕಿದ್ದಂತೆ ಒಂದು ಕರು ಸ್ಕೂಲಿನೊಳಕ್ಕೆ ನುಗ್ಗಿ ಸ್ಕೂಲನ್ನೆಲ್ಲಾ ಗಂಭೀರವಾಗಿ ತಿರುಗಿಕೊಂಡು ಬಾಗಿಲಿನಲ್ಲಿ ಸಗಣಿ ಗಂಜಲ ಹಾಕಿ ಹೋಗುತ್ತದೆ. ಏಳುವ ಹೊತ್ತಿಗೆ ರೈತರ ಹೆಂಗಸರು ತಮ್ಮ ಮನೆಯ ಕಸವನ್ನು ಎದುರು ಮನೆಯವರು ಗುಡಿಸಿಕೊಂಡು ಹೋದ ಕಾರಣದಿಂದ ಅನೇಕ ಸಹಸ್ರನಾಮಗಳನ್ನು ಪ್ರಾರಂಭಿಸುತ್ತಾರೆ. ಹೀಗೆ ಮಲ್ಲಿಗೆಹಳ್ಳಿ ಸ್ಕೂಲು ಸ್ಕೂಲಿನಲ್ಲಿ ನಡೆಯುವ ಪಾಠಗಳ ಶ್ರೇಷ್ಠತೆಯಿಂದ ಅಲ್ಲದಿದ್ದರೂ ಯಾವಾಗಲೂ ಜೇನುಗೂಡಿನಂತೆ ಚಟುವಟಿಕೆಯುಳ್ಳದುದಾಗಿ ಇರುತ್ತದೆ.

ಮಲ್ಲಿಗೆಹಳ್ಳಿಯ ಪ್ರೈಮರಿ ಸ್ಕೂಲಿನಲ್ಲಿ ಆಗ ಇದ್ದುದು ಎರಡೇ ತೊಟ್ಟಿಗಳು. ಈಗಲೂ ಹಾಗೆಯೇ ಬಾಗಿಲಿನಿಂದ ಒಳಕ್ಕೆ ಹೋದ ಕೂಡಲೇ ಸಿಗುವ ತೊಟ್ಟಿಯಲ್ಲಿ ಎ, ಬಿ, ೧, ೨, ೩ನೆಯ ತರಗತಿಗಳು ಇರುತ್ತಿದ್ದವು. ಅದರ ಮಗ್ಗಲಿನ ಮತ್ತೊಂದು ತೊಟ್ಟಿಯಲ್ಲಿ ೪-೫ನೆಯ ತರಗತಿಗಳು ಇರುತ್ತಿದ್ದವು ಆಗಿನ ಸರ್ಕಾರಿ ಹುಕುಂನಂತೆ ಕೆಲವು ಸ್ಕೂಲುಗಳಲ್ಲಿ ಮೂರನೆಯ ತರಗತಿಯವರೆಗೆ ಮಾತ್ರ ಪ್ರಾಥಮಿಕ ಪಾಠ ಲೆಕ್ಕಗಳನ್ನು ಮಾಡಿದರೆ ಸಾಕಾಗಿದ್ದಿತು. ಆದುದರಿಂದ ಸರ್ಕಾರದವರು ಅಂತಹ ಸ್ಕೂಲುಗಳಿಗೆ ಕೊಡುವಂತೆ ಮಲ್ಲಿಗೆಹಳ್ಳಿಗೂ ಒಬ್ಬರೇ ಉಪಾಧ್ಯಾಯರನ್ನು ಕೊಟ್ಟಿದ್ದರು. ಆದರೆ ಮಲ್ಲಿಗೆಹಳ್ಳಿಗೆ ಬಂದ ಕೆಲವು ಉಪಾಧ್ಯಾಯರುಗಳು ೪-೫ನೆಯ ತರಗತಿಗಳನ್ನೂ ಮಾಡುತ್ತಿದ್ದರು. ಆಗಿನ ಸರ್ಕಾರ ಅದನ್ನೂ ಅಷ್ಟಾಗಿ ಪ್ರತಿಭಟಿಸುತ್ತಿರಲಿಲ್ಲ. ಆದರೆ ಆ ತರಗತಿಗಳು ಬೇರೆ ಬೇರೆ ಕೊಠಡಿಗಳಲ್ಲಿದ್ದುದರಿಂದ ಉಪಾ

ಧ್ಯಾಯರಿಗೆ ಸ್ವಲ್ಪ ಕಷ್ಟವಾಗುತ್ತಿದ್ದಿತು. ಅವರು ಅದಕ್ಕೆ ಒಂದು ಉಪಾಯವನ್ನು ಮಾಡುತ್ತಿದ್ದರು. ಉಪಾಧ್ರಿ ತೊಟ್ಟಿಯಲ್ಲಿ ಕುಳಿತು ಕೊಳ್ಳುವ ಕಡೆ ಅವರ ತಲೆಯ ನೇರಕ್ಕೆ ಸರಿಯಾಗಿ ನಾಲ್ಕು ಐದನೆಯ ತರಗತಿಗಳು ಕಾಣುವಂತೆ ತೊಟ್ಟಿಯ ಗೋಡೆಯಲ್ಲಿ ಸುಮಾರು ಹತ್ತು ಹನ್ನೆರಡು ಅಂಗುಲ ಅಗಲದ ಒಂದು ತೂತನ್ನು ಕೊರೆದಿದ್ದರು. ಉಳಿದ ತರಗತಿಗಳಿದ್ದ ತೊಟ್ಟಿಯಲ್ಲಿ ಕುಳಿತೇ ಉಪಾಧ್ರಿಗೆ ನಾಲ್ಕು ಐದನೆಯ ತರಗತಿಗಳಿಗೆ ಕಿಟಕಿಯ ಮೂಲಕ ಪಾಠ ಹೇಳಲು ಅನುಕೂಲವಾಗಿ ದ್ದಿತು. ಹೊರಗಡೆಯಿಂದ ನೋಡುವವರಿಗೆ ನಾಲ್ಕು ಐದನೆಯ ತರಗತಿ ಗಳಿಗೆ ಉಪಾಧ್ಯಾಯರೇ ಇಲ್ಲವೆಂಬಂತೆ ತೋರುತ್ತಿದ್ದಿತು. "ಆದರೂ ಹುಡುಗರು ಎಷ್ಟು ಗಂಭೀರವಾಗಿದ್ದಾರೆ" ಎಂದು ಆಶ್ಚರ್ಯವಾಗು ತ್ತಿದ್ದಿತು. ಮಲ್ಲಿಗೆ ಹಳ್ಳಿಯ ಸ್ಕೂಲಿಗೆ ಗಾಂಭೀರ್ಯವಿದ್ದುದು ನಾಲ್ಕು ಐದನೆಯ ತರಗತಿಗಳಿಂದ ಮಾತ್ರವೇ.

ಆಗ ಮಲ್ಲಿಗೆಹಳ್ಳಿಯ ಸ್ಕೂಲಿಗೆ ಜವಾನ ಇರಲಿಲ್ಲ ಸ್ಕೂಲಿನ ನೆಲ ವನು ಸರದಿಯಂತೆ ಹುಡುಗರೇ ನಿತ್ಯಾ ಒಬ್ಬೊಬ್ಬರು ಗುಡಿಸಬೇಕಾಗಿ ದ್ದಿತು. ಹುಡುಗರು ಕುಳಿತ ಸ್ಥಳದಲ್ಲಿ ನೆಲ ಗುಂಡಿಬಿದ್ದು ಬೇಕಾದಂತೆ ಧೂಳು ಏಳುತ್ತಿದ್ದಿತು. ಉಪಾಧ್ಯಾಯರು ಪ್ರತಿಯೊಬ್ಬ ಹುಡುಗನೂ ಮನೆಯಿಂದ ಒಂದೊಂದು ಚಾಪೆಯನ್ನೋ ಅಥವ ಗೋಣಿ ಚೀಲದ ಚೂರನ್ನೋ ತರಬೇಕೆಂದು ವಿಧಿಸಿದ್ದರು. ಗೋಣಿಚೀಲ, ಚಾಪೆಗಳನ್ನು ತರದವರು ನಿಂತುಕೊಂಡೇ ಪಾಠವನ್ನು ಕಲಿಯಬೇಕಾಗಿದ್ದಿತು.

ಈಗ ಪ್ರೈಮರಿ ಸ್ಕೂಲಿನ ಉಪಾಧ್ಯಾಯರನ್ನು ಮೂರು ದಿನಕ್ಕೆ ಒಂದು ಸಲ ಯಾಕೆ ಬೇರೆ ಬೇರೆ ಸ್ಥಳಕ್ಕೆ ವರ್ಗ ಮಾಡುತ್ತಾರೋ ತಿಳಿಯದು. ಬಹುಶಃ ಇದಕ್ಕೆ ಉಪಾಧ್ಯಾಯರೂ ಬಹುಮಟ್ಟಿಗೆ ಕಾರಣ ರಾಗಿರಬಹುದು. ಉಪಾಧ್ಯಾಯರಿಗೆ ತಾವು ಹೋದ ಕಡೆಯನ್ನೇ ಸ್ಥಳ ವನ್ನಾಗಿಮಾಡಿಕೊಂಡು ಬೇರೆ ಕಡೆ ಪೋಗುವ ಆಸೆಯನ್ನು ಬಿಟ್ಟು ಸ್ಥಳದವರೊಂದಿಗೆ ಹೊಂದಿಕೊಂಡುಹೋಗುವ ಶಕ್ತಿ ಇಲ್ಲವೆಂದು ಕಾಣು ತ್ತದೆ. ಈಗ ಕೆಲವು ಉಪಾಧ್ಯಾಯರಂತೂ ತಮ್ಮನ್ನು ತಮ್ಮ ಊರಿನಿಂದ ಎಷ್ಟು ದೂರದ ಹಳ್ಳಿಯ ಸ್ಕೂಲಿಗೆ ವರ್ಗಮಾಡಿದರೂ ಸಂಸಾರಗಳನ್ನು ಕರೆದುಕೊಂಡೇ ಹೋಗುವುದಿಲ್ಲ. ಮತ್ತೆ ತಮ್ಮ ಊರಿಗೇ ಅಥವ ತಮಗೆ

ಬೇಕಾದ ಕಡೆಗೆ ಬಂದು ಸೇರಿಕೊಳ್ಳುವುವೆಂಬ ನಂಬಿಕೆ ಅವರಿಗೆ ಚೆನ್ನಾಗಿರುತ್ತದೆ. ನಮಗೆ ತಿಳಿದ ನೆಲ್ಲುಹಳ್ಳಿಯ ಒಬ್ಬ ಉಪಾಧ್ಯಾಯರು ಹತ್ತು ಮೈಲಿಯಲ್ಲಿರುವ ತಮ್ಮ ಊರಿನಿಂದ ಸ್ಕೂಲಿಗೆ ಪ್ರತಿ ಮಂಗಳ ವಾರವೂ ಬಂದು ಮಂಗಳವಾರ, ಬುಧವಾರ, ಗುರುವಾರ, ಶುಕ್ರವಾರ ಈ ನಾಲ್ಕು ದಿನ ಮಾತ್ರ ಸ್ಕೂಲು ಮಾಡಿ ಶುಕ್ರವಾರ ಊರಿಗೆ ಹಿಂದಕ್ಕೆ ಹೋಗಿ ಮಂಗಳವಾರ ಮತ್ತೆ ಸ್ಕೂಲಿಗೆ ಬರುತ್ತಾರೆ. ಮಂಗಳವಾರ ಊರಿನಲ್ಲಿ ಊಟಮಾಡಿಕೊಂಡು ಇನ್ನು ಮೂರು ದಿನಗಳಿಗೆ ಆಗುವಷ್ಟು ರೊಟ್ಟಿಯನ್ನು ಕಟ್ಟಿಕೊಂಡು ಸ್ಕೂಲಿಗೆ ಬಂದಿರುತ್ತಾರೆ ಹೀಗೆ ವಾರಕ್ಕೆ ನಾಲ್ಕು ದಿನ ಸ್ಕೂಲಿನಲ್ಲಿಯೂ ಮೂರು ದಿನ ಊರಿನಲ್ಲಿಯೂ ಇದ್ದು ನಾಲ್ಕು ಐದು ವರುಷಗಳ ಕಾಲ ಸ್ಕೂಲು ಇದ್ದ ಗ್ರಾಮದಲ್ಲಿ ಒಲೆಗೆ ಬೆಂಕಿಯನ್ನೇ ಹಾಕದೆ ವರ್ಗಮಾಡಿಕೊಂಡು ಹೋಗುತ್ತಾರೆ. ನವಿಲೆ ಗ್ರಾಮದಲ್ಲಿ ಉಪಾಧ್ಯಾಯರು ಮುಚ್ಚಿಕೊಂಡು ಹೋದ ಸ್ಕೂಲಿನ ಬಾಗಿಲನ್ನು ಅನಂತರ ಗ್ರಾಮಸ್ಥರೂ, ಸರ್ಕಾರದವರೂ ಬಡಗಿಗಳಿಂದ ಒಡೆಯಿಸಿ ಮುಂದೆ ಬಂದ ಉಪಾಧ್ಯಾಯರಿಗೆ "ಛಾರ್ಜು" ಕೊಡಿಸಿ ದರು ರಾಮಪುರದ ಉಪಾಧ್ಯಾಯರು ಕಾಶೀ ರಾಮೇಶ್ವರಗಳಲ್ಲಿ ಸಹ ಇದ್ದುಕೊಂಡು ಸಂಬಳವನ್ನು ಮನಿಆರ್ಡರ್ ಮೂಲಕ ತರಿಸಿಕೊಂಡು ಅಲ್ಲಿಂದಲೇ ಸ್ಕೂಲನ್ನು ನಡೆಸಿದ್ದಾರೆ. ಉಪಾಧ್ಯಾಯರ ಮೇಲೆ ಗ್ರಾಮಸ್ಥರು ಚಾಡಿ ಹೇಳಿದರೆ ಉಪಾಧ್ಯಾಯರು ಸ್ಕೂಲನ್ನೇ ಸುತ್ತಿ ಕೊಂಡು ಬಾಗಿಲು ಜೋಡುಗಳನ್ನು ಹೆಗಲಿಗೆ ಹಾಕಿಕೊಂಡು, ಹಾಜರಿ ಸಂಖೆ ಕಮಿಮೆ ಮಾಡಿ ಸ್ಕೂಲನ್ನು ಮುಚ್ಚಿಸಿ ಹೋಗಿಬಿಡುತ್ತಾರೆ. ಅನಂತರ ಮೇಲಧಿಕಾರಿಗಳಲ್ಲಿ, ಹೋಗಿ ಅವರ ಗುಮಾಸ್ತರುಗಳನ್ನು ಕೈಗೆ ಹಾಕಿಕೊಂಡು ತಮ್ಮ ಮೇಲೆ ಬಂದ ಅಪವಾದವನ್ನು ಸರಿಪಡಿಸಿಕೊಂಡು ಬೇರೆ ಊರಿಗೆ ವರ್ಗವಾಗುತ್ತಾರೆ. ಕೆಲವು ಉಪಾಧ್ಯಾಯರಂತೂ ಮೇಲಧಿಕಾರಿಗಳಲ್ಲಿ, ವರ್ಗಕ್ಕೆ ಇಷ್ಟುರೂಪಾಯಿ ಪ್ರಮೋಷನ್‌ಗೆ ಇಷ್ಟು, ಸ್ಕೇಲ್ ಬದಲಾವಣೆಗೆ ಇಷ್ಟು ಈ ರೀತಿ ಕ್ರಮವಾದ ಸ್ಕೇಲನ್ನೇ ಸ್ಥಾಪಿಸಿ ಕೊಂಡಿದ್ದಾರೆಂದೂ ಹೇಳುತ್ತಾರೆ. ಏನೆ ಇರಲಿ ಮಲ್ಲಿಗೆಹಳ್ಳಿಯಲ್ಲಿ ಸುದರ್ಶನ ಓದಲು ಪ್ರಾರಂಭಿಸಿದಾಗ ಇಂತಹ ಉಪಾಧ್ಯಾಯರುಗಳು ಇದ್ದಂತೆ ತೋರುವುದಿಲ್ಲ.

ಆಗ ಮಲ್ಲಿಗೆಹಳ್ಳಿಯ ಪ್ರೈಮರಿ ಸ್ಕೂಲಿನ ಉಪಾದ್ರು, ಮೇಟ್ರು ತಿಪ್ಪಯ್ಯ, ಒಳ್ಳೆಯ ಸಾಧು ಪ್ರಾಣಿಯಾಗಿದ್ದರು. ಸಾಧು ಎಂದರೆ ಮಂಕನೆಂದಾಗಲಿ ಏನೂ ತಿಳಿಯದವನೆಂದಾಗಲಿ ಅರ್ಥವಲ್ಲ. ಯೋಗ್ಯನೆಂದೇ ಅರ್ಥ. ತಿಪ್ಪಯ್ಯ ಉಪಾದ್ರಿಯನ್ನು ಒಂದುಸಲ ನೋಡಿದವರು ಮತ್ತೆ ಮರೆಯುವಂತೆ ಇರಲಿಲ್ಲ. ಆಳು ಒಳ್ಳೆಯ ಕಠ್ರಗೆ ಆಜಾನುಬಾಹುವಾಗಿ ಕಟ್ಟುಮಸ್ತಾಗಿ ಗರುಡಿ ಮಾಡಿದವನಂತೆ ಖಡಾಖೋಡಾಗಿದ್ದರು. ಅವರು ಸ್ವಭಾವದಿಂದ ಒರಟರು. ಅವರ ಧ್ವನಿಯೂ ಭಯವನ್ನುಂಟು ಮಾಡುವುದಾಗಿದ್ದಿತು. ಅವರ ಮೈಕಟ್ಟನ್ನು ನೋಡಿದರೆ ಯಾವ ಇನಿಸ್ಪೆಕ್ಟರಿಗೂ ಸಂತೋಷವೂ ಭಯವೂ ಉಂಟಾಗುತ್ತಿದ್ದಿತು.

ತಿಪ್ಪಯ್ಯ ಉಪಾದ್ರಿ ಹಳೆಯಕಾಲದ ಮೇಷ್ಟರು. ಅವರಿಗೆ ಯಾವ ಪರೀಕ್ಷೆ ಪ್ಯಾಸ್ ಆಗಿದ್ದಿತೋ ಯಾರಿಗೂ ತಿಳಿಯದು. ಆದರೆ ಅವರು ಯಾವ ಪಾಠವನ್ನೂ ಚೆನ್ನಾಗಿ ಹೇಳುತ್ತಿದ್ದರು. ಭಾಷೆ (ಅಂದರೆ ಲೋವರ್ ಸಕಂಡರಿ ಪರೀಕ್ಷೆಯ ಕನ್ನಡ ಪಠ್ಯಪುಸ್ತಕ) ಗಣಿತ ಇವುಗಳನ್ನು ಅವರು ಹುಡುಗರ ಮನಸ್ಸಿಗೆ ಹಿಡಿಯುವಂತೆ ಹೇಳುತ್ತಿದ್ದರು. ಅವರ ಆಕಾರವನ್ನು ಕಂಡು ಇನಿಸ್ಪೆಕ್ಟರೇ ಹೆದರುತ್ತಿದ್ದರೆಂದಮೇಲೆ ಹುಡುಗರು ಹೆದರುತ್ತಿದ್ದುದು ಆಶ್ಚರ್ಯವೇನು? ತಿಪ್ಪಯ್ಯ ಉಪಾದ್ರಿ ಹುಡುಗರಿಗೆ ತಾವು ವಿಧಿಸುತ್ತಿದ್ದ ಶಿಕ್ಷೆಯನ್ನು ಶಿಕ್ಷೆಯೆಂದು ಗಣಿಸಿಯೇ ಇರಲಿಲ್ಲ. ಪಾಠದಂತೆ ಏಟೂ ಒಂದು ನಿತ್ಯಕ್ರಮ ಎಂದು ಅವರು ಭಾವಿಸಿದ್ದರು. "ಇದಕ್ಕೂ ಪಾಠಕ್ಕೂ ಸಂಬಂಧವಿಲ್ಲ. ಹುಡುಗರು ಇದನ್ನು ಕಂಡು ಸಂತೋಷಪಡುವುದಿಲ್ಲ" ಎಂದು ಯಾರಾದರೂ ಹೇಳಿದ್ದರೂ ಉಪಾದ್ರಿ ಅದನ್ನು ನಂಬುತ್ತಿರಲಿಲ್ಲ. ಕುರ್ಚಿ ಕೂರಿಸುವುದರಲ್ಲಿಯೂ, ಹುಡುಗರನ್ನು ಕೋದಂಡ ಹಾಕುವುದರಲ್ಲಿಯೂ ಕಿವಿ ಹಿಡಿಯುವ ಶಿಕ್ಷೆಯನ್ನು ಕೊಡುವುದರಲ್ಲಿಯೂ ಉಪಾದ್ರಿ ಆ ಪ್ರಾಂತ್ಯದಲ್ಲೆಲ್ಲಾ ಹೆಸರುವಾಸಿಯಾದರು.

ಹೀಗೆ ತಿಪ್ಪಯ್ಯ ಉಪಾದ್ರಿ ಹುಡುಗರನ್ನು ನಿರ್ದಾಕ್ಷಿಣ್ಯವಾಗಿ ಸದೆಬಡಿಯುತ್ತಿದ್ದುದರಿಂದ ಸ್ಕೂಲಿಗೆ ಹೋಗಲು ಹುಡುಗರು ಹೆದರುತ್ತಿದ್ದರೂ ಪೋಷಕರಿಗೇನೋ ಉಪಾದ್ರಿಯ ಯೋಗ್ಯತೆಯಲ್ಲಿಯೂ, ಹುಡುಗರನ್ನು ತಯಾರು ಮಾಡುವ ಅವರ ಶಕ್ತಿಯಲ್ಲಿಯೂ ನಂಬಿಕೆ ಚೆನ್ನಾಗಿದ್ದಿತು. ತಿಪ್ಪಯ್ಯ ಉಪಾದ್ರಿ ಸ್ಕೂಲಿನಲ್ಲಿ ಪೆಟ್ಟಿಗೆಯ ಮೇಲೆ ಕುಳಿತು ಠೀವಿಯಿಂದ

[ಉಪಾದ್ರಿ ಸ್ವಲ್ಪ ಸ್ಥೂಲವಾದ ಆಸಾಮಿಯಾಗಿದ್ದುದರಿಂದ ಅವರು ಕುರ್ಚಿಯಲ್ಲಿ ಹಿಡಿಸುತ್ತಿರಲಿಲ್ಲ. ಆದುದರಿಂದ ಅವರು ಕುರ್ಚಿಯಮೇಲೆ ಹಾಜರಿ ರಿಜಿಸ್ಟರ್ ಮುಂತಾದುವುಗಳನ್ನಿಟ್ಟು ಸಾದಿಲ್ವಾರಿನ ಪೆಟ್ಟಿಗೆಯ ಮೇಲೆಯೇ ಕುಳಿತುಕೊಳ್ಳುತ್ತಿದ್ದರು.] ಒಂದು ಅಡಿ ಉದ್ದವಾದ ಸ್ಲೇಟಿನ ಕಟ್ಟನ್ನು ಕೈಯ್ಯಲ್ಲಿ ಹಿಡಿದುಕೊಂಡು ಹುಡುಗರನ್ನು ಗದರಿಸುವುದನ್ನು ಕಂಡು ಪೋಷಕರು "ಮೇಟ್ರು ಒಳ್ಳೆಯ ದರ್ಪದಿಂದ ಇದ್ದಾರೆ. ನಮ್ಮ ಹುಡುಗರಿಗೆ ಅಕ್ಷರ ಕಲಿಸಬೇಕಾದರೆ ಇಂಥವರೇ ಇರಬೇಕು" ಎನ್ನುತ್ತಿದ್ದರು.

ವಿದ್ಯಾರ್ಥಿಗಳಿಗೆ ತಿಪ್ಪಯ್ಯ ಉಪಾದ್ರಿಯ ಮೇಲೆ ಸ್ವಲ್ಪವೂ ವಿಶ್ವಾಸ ವಿರಲಿಲ್ಲ ಮೇಷ್ಟರಿಗೆ ಯಾವುದಾದರೂ ಉಪಾಯ ಸಂಭವಿಸಿದ್ದರೂ ಅವರು ಯಾರೂ ದುಃಖಿಸುತ್ತಿರಲಿಲ್ಲ. "ಹಾಳಾದ ಮೇಷ್ಟ್ರು ಒಂದು ದಿನವೂ ಗೈರ್‌ಹಾಜರ್ ಆಗುವುದಿಲ್ಲವಲ್ಲ? ಮಳೆ ಬರಲಿ ಬಿಸಿಲು ಕಾಯುತ್ತಿರಲಿ ಬೇಕಾದ್ದಾಗಲಿ ಇವರು ಸ್ಕೂಲಿಗೆ ಒಂದೇ ಬರುತ್ತಾರಲ್ಲ ಇವರಿಗೆ ಯಾವ ಕಾಯಿಲೆಯೂ ಬರುವುದೇ ಇಲ್ಲವಲ್ಲ? ಮೇಷ್ಟರಿಗೆ ಒಂದು ದಿನ ಜ್ವರ ಬಂದರೆ ನಮಗೆ ಒಂದುದಿನ ರಜಾ ಬರುತ್ತೆ" ಎಂಬುದೇ ಹುಡುಗರ ಯೋಚನೆಯಾಗಿದ್ದಿತು. ಉಪಾದ್ರಿಯ ಭಯಂಕರವಾದ ಶಿಕ್ಷೆಗಳನ್ನು ಕಂಡು ಹುಡುಗರು ಹೆದರುತ್ತಿದ್ದುದೇನೂ ಆಶ್ಚರ್ಯವಲ್ಲ. ಉಪಾಧ್ಯಾಯರಿಗೆ ಹುಡುಗರನ್ನು ಹೊಡೆಯಲು ಬಡಿಯಲು ಸ್ವಲ್ಪವೂ ಸಂಕೋಚವೇ ಇರಲಿಲ್ಲ. ಆ ಹೊಡತ ಬಡಿತ ನಿರ್ದಯೆ ಎಂದು ಕೆಲವರು ಹೇಳಿದರೂ ಉಪಾದ್ರಿ ಅದನ್ನು ಒಪ್ಪುತ್ತಿರಲಿಲ್ಲ. ಹುಡುಗರು ಪಾಠ ಒಪ್ಪಿಸದೆ ತಪ್ಪಿದರೆ ಉಪಾಧ್ಯಾಯರು ಅವರ ಎರಡು ಕಿವಿಗಳನ್ನೂ ತಮ್ಮ ಎರಡು ಕೈಗಳಿಂದಲೂ ಹಿಡಿದು ಹುಡುಗರನ್ನು ನೆಲದಿಂದ, ತಮ್ಮ ಕೈ ಮೇಲಕ್ಕೆ ಹೋಗುವಷ್ಟು ಎತ್ತರವೂ ಎತ್ತುತ್ತಿದ್ದರು. ಆ ಅಂತರಾಳದಲ್ಲಿ ಕೈ ಸೋಲುವವರೆಗೆ ಹುಡುಗನನ್ನು ಹಿಡಿದುಕೊಂಡಿದ್ದು ಅನಂತರ ನೆಲಕ್ಕೆ ಕುಕ್ಕರಿಸುತ್ತಿದ್ದರು. ಅಷ್ಟು ಹೊತ್ತಿಗೆ ಹುಡುಗನಿಗೆ ಅರ್ಧ ಜೀವವಾಗಿರುತ್ತಿದ್ದಿತು. ನೆಲದ ಮೇಲೆ ಕುಕ್ಕರಿಸಿದ ಕೂಡಲೇ ವಿದ್ಯಾರ್ಥಿ ಚೇತರಿಸಿಕೊಳ್ಳುವುದಕ್ಕೆ ಮುಂಚೆ ಉಪಾದ್ರಿ ಅವನ ಎರಡು ಕೆನ್ನೆಗಳಿಗೂ ಎರಡು ಏಟುಗಳನ್ನು ಬಿಡುತ್ತಿದ್ದರು. ಇಂತಹ ಶಿಕ್ಷೆ ಜೀವಮಾನದಲ್ಲಿ ಒಂದು

ಸಲ ಆದರೂ ಚೇತರಿಸಿಕೊಳ್ಳುವುದು ಕಷ್ಟ. ಕೆಲವು ಹುಡುಗರಿಗೆ ಉಪಾದ್ರು ದಿನಕ್ಕೆ ನಾಲ್ಕು ಐದು ಸಲ ಈ ವ್ಯಾಯಾಮವನ್ನು ಮಾಡಿಸುತ್ತಿದ್ದರು. ಹುಡುಗರು ಉಪಾಧ್ಯಾಯರನ್ನು ಕಂಡರೆ ನಡುಗುತ್ತಿದ್ದರು. ಸಂತೆಯಲ್ಲಿ ತತ್ವ ಬೋಧಿಸಿದಂತೆ ಆ ಪೇಟೆಯ ಗದ್ದಲದಲ್ಲಿ ಸ್ಕೂಲನ್ನು ನಡೆಸಬೇಕಾದರೆ ತಮಗೆ ಇಷ್ಟು ಅದಬ್ಬು ಆವಶ್ಯಕವೆಂಬುದು ಉಪಾದ್ರಿಗೆ ಅನುಭವದಿಂದ ತೋರಿರಬೇಕು.

ಉಪಾದ್ರು ಬಹಳ ಘಾಟಿ ಇಸವು ಎಂದು ಮೊದಲೇ ಹೇಳಿದೆ. ಸುಮಾರಾಗಿ ನೋಡಿದರೆ ಮಲ್ಲಿಗೆಹಳ್ಳಿಯವರು ಈ ಘಾಟಿತನವನ್ನು ಪ್ರಶಂಸಿಸುತ್ತಿದ್ದಂತೆಯೇ ತೋರುತ್ತಿದ್ದಿತು. ಅವರು ಉಪಾಧ್ಯಾಯರ ಚಾಕಚಕ್ಯವನ್ನೂ ಸಾಹಸವನ್ನೂ ಮೆಚ್ಚುಕೆಯಿಂದ ಮಾತನಾಡುತ್ತಿದ್ದರು. ಮೇಷ್ಟರು ಲೋವರ ಸೆಕಂಡರಿಗೆ ಹುಡುಗರನ್ನು ಕಟ್ಟಿಸಿದಾಗಲೆಲ್ಲಾ ಫಲಿತಾಂಶ ಚೆನ್ನಾಗಿ ಬರುತ್ತಿದ್ದಿತು. ಊರಿನವರು ತನ್ನನ್ನು ಆಕ್ಷೇಪಣೆ ಅಥವ ಹಾಸ್ಯಮಾಡಿದರೆ ಉಪಾದ್ರು "ಅಯ್ಯೋ ಹೋಗಿ ಸ್ವಾಮಿ ನನಗೆ ಕೊಡೋದು ತಿಂಗಳಿಗೆ ಹತ್ತು ರೂಪಾಯಿ. ಅದಕ್ಕೆ ಸರಿಯಾದ ಕೆಲಸವನ್ನು ಮಾಡುತ್ತಿದ್ದೇನೆ" ಎನ್ನುತ್ತಿದ್ದರು.

ತೆಗೆದುಕೊಳ್ಳುವ ಸಂಬಳಕ್ಕೆ ಸರಿಯಾಗಿ ಕೆಲಸ ಮಾಡಬೇಕು. ಗೊತ್ತುಮಾಡಿರುವ ಪಾಠಗಳನ್ನೆಲ್ಲಾ ಮುಗಿಸಬೇಕು, ಭಾನುವಾರ ಬೇಕಾದರೂ ಸ್ಕೂಲು ಮಾಡಬೇಕು. ಮಧ್ಯೆ ಏನಾದರೂ ರಜ ಬೇಕಾದರೆ ರಜ ತೆಗೆದುಕೊಳ್ಳಬೇಕು. ಆದರೆ ಸರ್ಕಾರದವರು ರಜಾ ಕೊಡುವುದಕ್ಕೆ ಅನೇಕ ಕಿರುಕುಳಗಳನ್ನು ಇಟ್ಟಿದ್ದಾರೆ. ಆದುದರಿಂದ ನಾವೂ ಸ್ವಲ್ಪ ಉಪಾಯ ಮಾಡಬೇಕು. ಶಠಸ್ಯಪ್ರತಿಶಾಠ್ಯಂ ಎಂದು ತಿಪ್ಪಯ್ಯ ಹೇಳುತ್ತಿದ್ದರು. ಅವರು ಒಂದೊಂದು ಸಲ ಸ್ಕೂಲು ಇದ್ದ ದಿನಗಳಲ್ಲಿ ತಮ್ಮ ಊರಿಗೋ ಹಾಸನಕ್ಕೋ ಹೋಗಬೇಕಾಗಿ ಬಂದಾಗ ಇನಿಸ್ಪೆಕ್ಟರಿಗೆ ರಜಾ ರಿಪೋರ್ಟನ್ನು ಬರೆದು ಅದನ್ನು ಸ್ಕೂಲಿನ ಹಾಜರಿ ಗೈರು ಹಾಜರಿ ರಿಜಸ್ಟರ್‌ನಲ್ಲಿ ಇಟ್ಟು ಸ್ಕೂಲಿನ ಬೀಗದ ಕೈಯನ್ನು ಊರಿನ ಪಟೇಲನ ಕೈಯ್ಯಲ್ಲಿ ಕೊಟ್ಟು ಹೋಗುತ್ತಿದ್ದರು. ಇನಿಸ್ಪೆಕ್ಟರು ಏನಾದರೂ ಉಪಾಧ್ಯಾಯರ ಗೈರು ಹಾಜರಿಯಲ್ಲಿ ಬಂದರೆ, ಸ್ಕೂಲಿನ ಬಾಗಿಲನ್ನು ತೆರೆದು

ರಿಜಿಸ್ಟರಿನಲ್ಲಿಟ್ಟಿದ್ದ ರಜಾ ರಿಪೋರ್ಟನ್ನು ನೋಡಿ ರಜಾ ಮಂಜೂರ್ಮಾಡಿ ಹೋಗುತ್ತಿದ್ದರು. ಅವರು ಬರದೆ ಇದ್ದರೆ ಉಪಾಧ್ಯಾಯರಿಗೆ ರಜ ಉಳಿದುಕೊಳ್ಳುತ್ತಿದ್ದಿತು. ಉಪಾಧ್ಯಾಯರು ಸ್ಕೂಲಿಗೆ ಹಿಂದಿರುಗಿದ ಮೇಲೆ ರಿಜಿಸ್ಟರಿನಲ್ಲಿದ್ದ ರಜಾ ರಿಪೋರ್ಟನ್ನು ಹರಿದು ಹಾಕುತ್ತಿದ್ದರು. ಆವತ್ತಿನ ಪಾಠವನ್ನೂ ಮುಂದಲ ಭಾನುವಾರ ಮಾಡುತ್ತಿದ್ದರು.

ಒಂದು ಸಲ ತಿಪ್ಪಯ್ಯ ಉಪಾದ್ರು ಚೆನ್ನಾಚಾರಿಯ ಕುದುರೆ ಏರಿಕೊಂಡು ಹಾಸನಕ್ಕೆ ಸ್ವಂತ ಕೆಲಸಕ್ಕೆ ಹೋಗಿದ್ದರು. ಪದ್ಧತಿಯಂತೆ ಸ್ಕೂಲಿನ ರಿಜಿಸ್ಟರಿನಲ್ಲಿ ರಜಾ ರಿಪೋರ್ಟನ್ನು ಇಟ್ಟಿದ್ದರು. ಹಾಸನದ ಪೇಟೆಯ ಬಾಗಿಲಿಗೆ ಬರುವ ವೇಳೆಗೆ ಎದುರಿಗೆ ಇನಿಸ್ಪೆಕ್ಟರ್ ಸಾಹೇಬರು ಬರುತ್ತಿರುವುದು ಉಪಾದ್ರ ಕಣ್ಣಿಗೆ ಬಿದ್ದಿತು. ಇನಿಸ್ಪೆಕ್ಟರನ್ನು ನೋಡಿ ಉಪಾದ್ರಿಗೆ ಭಯವಾಯಿತು. ಅವರು ತಪ್ಪಿಸಿಕೊಳ್ಳೋಣವೆಂದು ಆಚೆ ಈಚೆ ನೋಡಿದರು. ಅಡ್ಡದಾರಿಗಳಾಗಲಿ ಓಣಿಗಳಾಗಲಿ ಕಣ್ಣಿಗೆ ಬೀಳಲಿಲ್ಲ. ಅವರು ಕುದುರೆಯನ್ನು ವಿಧಿಯಿಲ್ಲದೆ ಮುಂದಕ್ಕೇ ಬಿಟ್ಟರು. ಇನಿಸ್ಪೆಕ್ಟರು ಎದುರಿಗೆ ಬಂದು "ಏನು ತಿಪ್ಪಯ್ಯ ಉಪಾದ್ರೆ ಮಲ್ಲಿಗೆಹಳ್ಳಿಯಿಂದ ಯಾವಾಗ ಬಂದಿರಿ" ಎಂದು ಕೇಳಿದರು. ಉಪಾದ್ರು ಇನಿಸ್ಪೆಕ್ಟರ ಕಡೆ ದುರದುರನೆ ನೋಡುತ್ತಾ "ಸ್ವಾಮಿ ನನ್ನ ಹೆಸರು ತಿಪ್ಪಯ್ಯನಲ್ಲ. ನಾನು ಮಲ್ಲಿಗೆಹಳ್ಳಿಯಿಂದ ಬರಲಿಲ್ಲ. ತಾವು ಯಾರೋ ನನಗೆ ತಿಳಿಯದು" ಎಂದು ಕುದುರೆಯನ್ನು ಮುಂದುವರಿಸಿದರು. ಉಪಾದ್ರು ಸಾಹೇಬರಿಗೆ ಹೇಳುವಾಗಲೇನೋ ಹಾಗೆ "ಗಫ" ಬಿಟ್ಟರು. ಆದರೆ ಎರಡು ಹೆಜ್ಜೆ ಮುಂದೆ ಹೋದನಂತರ ಅವರಿಗೆ ಭಯ ಪ್ರಾರಂಭವಾಯಿತು. ಆ ಇನಿಸ್ಪೆಕ್ಟರು ಹೊಸದಾಗಿ ಬಂದಿದ್ದರು. ಅವರು ಯುವಕರಾಗಿದ್ದುದರಿಂದ ಸ್ವಲ್ಪ ಜೋರಾದ ಅಧಿಕಾರಿಗಳಾಗಿದ್ದರು; ಒಳ್ಳೆಯ ಉತ್ಸಾಹಿಗಳಾಗಿಯೂ ಇದ್ದರು. ಉಪಾದ್ರು "ಈ ಇನಿಸ್ಪೆಕ್ಟರು ಹಿಂದಲವರಂತೆ ಮಂಕರಲ್ಲ. ವಿಷಯಗಳನ್ನು ಬೇಗ ಮರೆಯುವವರೂ ಅಲ್ಲ. ನನ್ನ ಮಾತನ್ನು ಕೇಳಿ ಅವರು ಈಗಲೇ ನಮ್ಮ ಸ್ಕೂಲಿನ ಕಡೆ ಹೊರಟರೆ ನನ್ನ ಗತಿಯೇನು? ಎಂದು ಯೋಚಿಸಿದರು. ತಮ್ಮ ಭಯಕ್ಕೆ ತುಂಬ ಆಧಾರವಿರುವಂತೆ ಅವರ ಮನಸ್ಸಿಗೆ ತೋರಿತು. ಅವರು ತಮ್ಮ ಕೆಲಸ ಎಷ್ಟಕ್ಕೆ ಆಯಿತೋ ಅಷ್ಟಕ್ಕೇ ಬಿಟ್ಟು ಕುದುರೆಯನ್ನು

ನಾಗಾಲೋಟದಲ್ಲಿ ಓಡಿಸುತ್ತಾ ಮಲ್ಲಿಗೆಹಳ್ಳಿಗೆ ಬಂದು ನೆಟ್ಟಗೆ ಸ್ಕೂಲಿಗೆ ಹೋಗಿ ಕುಳಿತರು. ಅಷ್ಟುಹೊತ್ತಿಗೆ ಸಾಯಂಕಾಲ್ಲ ಐದುವರೆ ಗಂಟೆ ಆಯಿತು.

ಇನಿಸ್ಪೆಕ್ಟರ್ ಸಾಹೇಬರಿಗೆ ಉಪಾದ್ರು ಸುಮ್ಮನೆ ನಮಸ್ಕಾರ ಮಾಡಿ ಅವರು ಕೇಳಿದ ಮಾತಿಗೆ ಪ್ರತ್ಯುತ್ತರ ಕೊಟ್ಟು ಹೊರಟು ಹೋಗಿದ್ದರೆ ಇನಿಸ್ಪೆಕ್ಟರು ಆ ವಿಚಾರ ಮರೆತುಬಿಡುತ್ತಿದ್ದರು. ಅವರು ಕಛೇರಿಯಲ್ಲಿ ತಿಪ್ಪಯ್ಯನ ವಿಚಾರ ಜ್ಞಾಪಿಸಿಕೊಂಡು ಅವನು ರಜಾಕ್ಕೆ ಬರೆದಿದ್ದಾನೆಯೇ ಎಂದು ನೋಡುತ್ತಿದ್ದರೋ ಇಲ್ಲವೋ ತಿಳಿಯದು ಆದರೆ ತಿಪ್ಪಯ್ಯ ಉಪಾದ್ರ ಉತ್ತರದಿಂದ ಇನಿಸ್ಪೆಕ್ಟರಿಗೆ ದವಡೆಗೆ ಹೊಡೆದಂತೆ ಆಯಿತು. ಅವರು "ನನಗೆ ಚೆನ್ನಾಗಿ ಜ್ಞಾಪಕವಿದೆ. ಇವನು ತಿಪ್ಪಯ್ಯ ಮಲ್ಲಿಗೆಹಳ್ಳಿ ಉಪಾಧ್ಯಾಯ. ಇದೇನು ಅಲ್ಲ ಅನ್ನುತ್ತಾನೆ. ಹಾಗಾದರೆ ನನ್ನ ಜ್ಞಾಪಕಶಕ್ತಿ ಅಷ್ಟು ಕಡಿಮೆಯಾಯಿತೆ? ನೋಡೋಣ ಎಂದು ಕೊಂಡು ಬೈಸಿಕಲ್ಲನ್ನು ಹತ್ತಿ ಹದಿನೈದು ಮೈಲಿ ದೂರದಲ್ಲಿದ್ದ ಮಲ್ಲಿಗೆಹಳ್ಳಿಗೆ ಸಾಯಂಕಾಲ ಆರು ಗಂಟೆಗೆ ತಲಪಿದರು. ಇನಿಸ್ಪೆಕ್ಟರು ರಸ್ತೆಯ ಬಳಿ ಟಿ.ಬಿ.ಯ ಹತ್ತಿರ ಬರುತ್ತಿರುವಾಗಲೇ ತಮ್ಮ ಸ್ಕೂಲಿನಿಂದ ಅವರನ್ನು ನೋಡಿದ ಉಪಾಧ್ಯಾಯರು "ಹಾ ನೋಡಿದೆಯ ದೇವರೇ ನನಗೆ ಹಿಂದಿರುಗುವಂತೆ ಬುದ್ಧಿ ಕೊಟ್ಟ. ಇಲ್ಲದಿದ್ದರೆ ಎಲ್ಲಾ ತಳೆಕೆಳಕು ಆಗುತ್ತಿದ್ದಿತು" ಎಂದುಕೊಂಡು "ಶಿಕ್ಷಣ ಕ್ರಮ" ವೆಂಬ ಪುಸ್ತಕವನ್ನು ಓದುತ್ತಾ ಕುರ್ಚಿಯ ಮೇಲೆ ಕುಳಿತರು.

ಇನಿಸ್ಪೆಕ್ಟರು ಸ್ಕೂಲಿನ ಹತ್ತಿರಕ್ಕೆ ಬಂದುದನ್ನು ನೋಡಿದ ಕೂಡಲೇ ಉಪಾದ್ರು ಅವರೆದುರಿಗೆ ಸರಸರನೆ ತಾವು ಮೇಜಿನ ಮೇಲೆ ಎಸೆದಿದ್ದ ಕೋಟನ್ನೂ ಗೂಟಕ್ಕೆ ತಗಲಹಾಕಿದ್ದ ರುಮಾಲನ್ನೂ ಹಾಕಿಕೊಂಡು "ನಮಸ್ಕಾರ ನನ್ನೊಡೆಯ. ದಯಮಾಡಬೇಕು ದೇವರು" ಎಂದರು. ಇನಿಸ್ಪೆಕ್ಟರು ಒಳಗೆ ಬಂದವರೇ ಕುಳಿತುಕೊಳ್ಳುವುದಕ್ಕಿಂತ ಮೊದಲೇ "ನೀವು ಇಲ್ಲಿ ಎಷ್ಟುಹೊತ್ತಿನಿಂದ ಇದ್ದೀರಿ" ಎಂದು ಕೇಳಿದರು. ಉಪಾದ್ರು "ಸುಮಾರು ಮೂರುಕಾಲು ಗಂಟೆಯಿಂದ ಇದ್ದೇನೆ" ಎಂದರು ಆಗ ಮಧ್ಯಾನ್ಹದ ಸ್ಕೂಲು ಮೂರು ಗಂಟೆಗೆ ನಡೆಯಬೇಕಾಗಿದ್ದಿತು. ಇನಿಸ್ಪೆಕ್ಟರು "ಮೂರುಕಾಲು ಗಂಟೆಯೇ? ಮೂರು ಗಂಟೆಗೆ ಯಾಕೆ ಬರಲಿಲ್ಲ"

ಎಂದರು. ಉಪಾದ್ರು "ಸ್ವಲ್ಪ ಪ್ರಕೃತಿ ಕೆಟ್ಟಿತ್ತು. ತಲೆ ಶೂಲೆ ಒಂದು ಗಳಿಗೆ ಸಾವಕಾಶವಾಯಿತು. ಕ್ಷಮಿಸಬೇಕು" ಎಂದರು. ಇನಿಸ್ಪೆಕ್ಟರು "ಆಶ್ಚರ್ಯ ಇವನನ್ನು ಮೂರುಕಾಲು ಗಂಟೆಯಲ್ಲಿ ಹಾಸನದಲ್ಲಿ ನೋಡಿದೆ" ಎಂದು ಗೊಣಗುಟ್ಟಿದರು. ಆ ಗೊಣಗಾಟವನ್ನು ಕೇಳಿ ಉಪಾದ್ರು "ಏನಪ್ಪಣೆ ಸ್ವಾಮಿ" ಎಂದರು. ಇನಿಸ್ಪೆಕ್ಟರು "ಏನೂ ಇಲ್ಲ" ಎಂದರು.

ಇನಿಸ್ಪೆಕ್ಟರು "ಆರು ಗಂಟೆಯಾದರೂ ಯಾಕೆ ಮನೆಗೆ ಇನ್ನೂ ಹೋಗಿಲ್ಲ" ಎಂದು ಕೇಳಿದರು. ಉಪಾದ್ರು "ಮನೆಯಲ್ಲಿ ಏನು ಕೆಲಸದೇವರು? ಹೋದರೆಮನೆ; ಬಂದರೆ ಸ್ಕೂಲು, ಎಲ್ಲಿ ಕುಳಿತಿದ್ದರೂ ಒಂದೆ; ಏನೋ ವಿಷಯ, ಗ್ರಂಥದಲ್ಲಿ ನೋಡಬೇಕಾಗಿದ್ದಿತು. ಮನೆಯಲ್ಲಿ ಮಕ್ಕಳು ಮರಿ ಕಿರೋ ಎನ್ನುತ್ತವೆ. ಅದಕ್ಕಾಗಿ ಇಲ್ಲಿಯೇ ಗ್ರಂಥಾವಲೋಕನ ಮಾಡುತ್ತಿದ್ದೆ" ಎಂದರು. ಇನಿಸ್ಪೆಕ್ಟರು ಉಪಾದ್ರ ಮೇಲೆ ಎರಡು ಕಣ್ಣುಗಳನ್ನೂ ಪೂರ್ಣವಾಗಿ ನೆಟ್ಟು ಅವರನ್ನೇ ನುಂಗುವಂತೆ ನೋಡುತ್ತಿದ್ದರು. ಆದರೆ ಆ ದೃಷ್ಟಿಯಿಂದ ಉಪಾದ್ರು ಅಧೀರರಾಗಲಿಲ್ಲ. ತಮ್ಮ ಜೀವನದಲ್ಲಿ ಅದು ದೊಡ್ಡ ಪರೀಕ್ಷೆಯ ಕಾಲವೆಂದು ಅವರು ತಿಳಿದರು. ಇನಿಸ್ಪೆಕ್ಟರು "ಇವತ್ತು ಏನು ಪಾಠ ಹೇಳಿದಿರಿ" ಎಂಬುದಾಗಿ ಕೇಳಿದರು. ಉಪಾದ್ರಿಗೆ ಸ್ವಲ್ಪ ಯೋಚನೆಗೆ ಬಂದಿತು. ಆದರೂ ಅವರು ಸರಾಗವಾಗಿ "ಗಣಿತ ಹೇಳಿದೆ. ರೀಡರ್ ಹೇಳಿದೆ. ನೀತಿ ಕತೆಗಳು ಭೂಗೋಳ ನಿತ್ಯದ ಪಾಠಗಳಿವೆಯೆಲ್ಲ" ಎಂದರು. ಇನಿಸ್ಪೆಕ್ಟರ್ "ಎಲ್ಲಿ ಹಾಜರಿ ಗೈರು ಹಾಜರಿ ಕೊಡಿ" ಎಂದರು. ಉಪಾದ್ರು ಸಾಹೇಬರ ಕೈಗೆ ರಿಜಿಸ್ಟರ್ ಕೊಟ್ಟರು. ಸಾಹೇಬರು ರಿಜಿಸ್ಟರನ್ನು ನೋಡಿದ ನಂತರ ತಮ್ಮಲ್ಲಿಯೇ ತಮಗೆ ಉಂಟಾದ ಅಸಮಾಧಾನದಿಂದ, ಯೋಚಿಸುತ್ತಾ ಅದರ ಹಾಳೆಗಳನ್ನೆಲ್ಲ ಸುಮ್ಮನೆ ತಿರವೆ ಹಾಕುತ್ತಿದ್ದರು. ಹಾಳೆಗಳ ಮಧ್ಯದಲ್ಲಿ ಒಂದು ಕಾಗದ ಇನಿಸ್ಪೆಕ್ಟರ ಕಣ್ಣಿಗೆ ಬಿದ್ದಿತು. ಅದನ್ನು ಓದಿ ಸಾಹೇಬರು "ಇದೇನು" ಎಂಬುದಾಗಿ ಉಪಾದ್ರ ಮುಂದೆ ಹಿಡಿದರು. ಅದು ಉಪಾದ್ರು ಆ ಬೆಳಿಗ್ಗೆ ಹಾಸನಕ್ಕೆ ಹೊರಡುವುದಕ್ಕೆ ಮುಂಚೆ ಇನಿಸ್ಪೆಕ್ಟರು ಬಂದರೆ ಇರಲಿ ಎಂದು ಪದ್ಧತಿಯಂತೆ ಬರೆದಿಟ್ಟಿದ್ದ ರಜಾ ಕಾಗದವಾಗಿದ್ದಿತು. ಹಿಂದಿರುಗಿದ ಮೇಲೆ, ಪ್ರಯಾಣ ಶ್ರಮ ಮತ್ತು ಗಾಬರಿಯಲ್ಲಿ ಅವರು ಅದನ್ನು ಹರಿದು

ಹಾಕುವುದನ್ನು ಮರೆತಿದ್ದರು. ಉಪಾಧ್ರಿಗೆ ತಾವು ಅಲ್ಲಿಯವರೆಗೆ ಮಾಡಿದ ತಂತ್ರವೆಲ್ಲಾ ವ್ಯರ್ಥವಾದಂತೆ ತೋರಿತು. ಅವರು "ನಾನು ಇದರಲ್ಲಿ ಖಂಡಿತ ಸೋಲಕೂಡದು" ಎಂದುಕೊಂಡು "ಬೆಳಿಗ್ಗೆ ಹುಷಾರಿಲ್ಲದುದ ರಿಂದ ರಜಾ ತೆಗೆದುಕೊಳ್ಳಬೇಕೆಂದು ಮಾಡಿದ್ದೆ. ಆದರೆ ಮನೆಯಲ್ಲಿ ಕುಳಿತಿರುವುದಕ್ಕೆ ಬೇಜಾರಾದುದರಿಂದ ಇಲ್ಲಿಗೇ ಬಂದೆ" ಎಂದರು. ಇನಿಸ್ಪೆಕ್ಟರು ಅರ್ಜಿಯಲ್ಲಿ "ಹಾಸನಕ್ಕೆ ಹೋಗಲು ರಜಾಬೇಕು" ಎಂದು ಬರೆದಿದ್ದೀರಲ್ಲಾ ಎಂದರು. ಉಪಾಧ್ರಿಗೆ ಪ್ರಾಣಸಂಕಟಕ್ಕೆ ಬಂದಿತು. ಅವರು ತಲೆನೋವು ಬಂದುದರಿಂದಲೇ ಹಾಸನಕ್ಕೆ ಹೋಗುವ ಯೋಚನೆ ಬಿಟ್ಟೆ ಮಹಾಸ್ವಾಮಿ" ಎಂದರು. ಕೊನೆಯಲ್ಲಿ ಇನಿಸ್ಪೆಕ್ಟರು ನಿಮ್ಮ ಹತ್ತಿರ ಕುದುರೆ ಇದೆಯೇ ಎಂಬುದಾಗಿ ಕೇಳಿದರು. ಉಪಾಧ್ರಿ ಸ್ವಲ್ಪ ನಗು ಮುಖವನ್ನು ತೋರಿಸುತ್ತಾ "ಮಹಾಸ್ವಾಮಿಯವರು ಗರೀಬನನ್ನು ಹಾಸ್ಯ ಮಾಡಬಾರದು. ನಾನೇ ಹೊಟ್ಟೆಗೆ ಹುಲ್ಲು ತಿನ್ನುತ್ತಿದ್ದೇನೆ. ಇನ್ನು ಕುದುರೆಗೆ ಏನನ್ನು ಹಾಕಲಿ" ಎಂದರು. ಸಾಹೇಬರು ಉಪಾಧ್ರಿ ಯಿಂದ ಯಾವ ವಿಚಾರವನ್ನೂ ತಿಳಿಯುವುದರಲ್ಲಿ ನಿರಾಶರಾದರು. ಅವರು ಇವನು ಅಸಲ್ ಕೊರಮ. ಕನ್ನೋಜಿಯಾಗಿರಬೇಕು. ಇಲ್ಲ ನಾನು ಮುಟ್ಠಾಳನಾಗಿರಬೇಕು" ಎಂದುಕೊಂಡು ಕೊನೆಯದಾಗಿ "ಈ ದಿವಸ ನೀವು ಹಾಸನಕ್ಕೆ ಬಂದಿದ್ದಿರಾ" ಎಂದರು. ಉಪಾಧ್ರಿ "ಗಂಜಿ ಹೋಗದ ಗಂಟಲಿನಲ್ಲಿ ಹಲಸಿನ ತೊಳೆ ತುರುಕಿದರು ಅಂದಹಾಗೆ ಸ್ಕೂಲಿಗೇ ಬರೋಕೆ ತಲೆನೋವಿನಲ್ಲಿ ನರಳುತ್ತಿದ್ದೆ, ದೇವರು. ಹಾಸನಕ್ಕೆ ಹೇಗೆ ಹೋಗೋದು? ನನಗೆ ಅಷ್ಟುದೂರ ನಡಿಯೋದಕ್ಕೆ ಆಗು ತ್ತದೆಯೆ?" ಎಂದರು.

ಇನಿಸ್ಪೆಕ್ಟರು ಪುಸ್ತಕಗಳಿಗೆಲ್ಲಾ ರುಜು ಹಾಕಿ "ನಾನು ಅರ್ಕಲ ಗೂಡಿಗೆ ಹೋಗುತ್ತೇನೆ. ಅಲ್ಲಿ ನನ್ನ ಹಿಂದಲ ಸ್ನೇಹಿತ ಶಿರಸ್ತೆದಾರನಾಗಿ ದ್ದಾನೆ. ಬಹು ದಿವಸಗಳಿಂದ ಬನ್ನಿ ಎಂದು ಕರೆಯುತ್ತಿದ್ದಾನೆ" ಎಂದರು. ಉಪಾಧ್ರಿಗೆ ಇನಿಸ್ಪೆಕ್ಟರು ಊರುಬಿಟ್ಟು ಹೋಗುವುದು ಬೇಕಾಗಿದ್ದಿತು. ಯಾಕೆಂದರೆ ಅವರು ಹಳ್ಳಿಯೊಳಕ್ಕೆ ಬಂದರೆ ಎಲ್ಲಿ ಯಾರಾದರೂ ತಾನು ಅಂದು ಊರಿನಲ್ಲಿ ಇರಲಿಲ್ಲ ಎಂಬ ವಿಚಾರ ಅವರ ಕಿವಿಗೆ ಹಾಕುತ್ತಾರೋಎಂದು ಅವರು ಹೆದರಿದ್ದರು. ಉಪಾಧ್ರಿ ಸ್ವಾಭಾ

ಏಕವಾಗಿ ಘಾಟಿಯಾದರೂ ಅತಿಥಿ ಸತ್ಕಾರಪರರಾಗಿದ್ದರು. ಬೈಸಿಕಲ್‌ನಲ್ಲಿ ದಣಿದು ಬಂದಿದ್ದ ಇನಿಸ್ಪೆಕ್ಟರಿಗೆ ಏನಾದರೂ ಆತಿಥ್ಯ ಮಾಡಬೇಕೆಂದು ಅವರ ಮನಸ್ಸು ತವಕಪಡುತ್ತಿದ್ದಿತು. ಅವರು ಶೃಂಗಾರ ತೋಟದಿಂದ ಎಳನೀರನ್ನೂ ಬಾಳೆಯ ಹಣ್ಣುಗಳನ್ನೂ ತರಿಸಿ ಇನಿಸ್ಪೆಕ್ಟರಿಗೆ ಕೊಟ್ಟರು. ಅನಂತರ ನದೀ ತೀರದವರೆಗೆ ಸಾಹೇಬರ ಜತೆಯಲ್ಲಿಯೇ ಹೋಗಿ ಅವರನ್ನು ಅರ್ಕಲ್‌ಗೂಡಿನ ಕಡೆಗೆ ಬೈಸಿಕಲ್ಲು ಏರಿಸಿದರು.

ಇನ್ನೂ ಯುವಕರಾಗಿದ್ದ ಇನಿಸ್ಪೆಕ್ಟರಿಗೆ ತಿಪ್ಪಯ್ಯ ಉಪಾಧ್ರಿಯನ್ನು ಕಂಡು ಬಹಳ ವಿನೋದವಾಯಿತು. ಅವರು ಮಧ್ಯೆ ಮಧ್ಯೆ ಪದೇ ಪದೇ ನಗುತ್ತಿದ್ದರು. ಅವರಿಗೆ ಉಪಾಧ್ರರಲ್ಲಿ ಒಂದು ವಿಧವಾದ ಮೆಚ್ಚಿಕೆ ಸಹ ಉಂಟಾಯಿತು. ಅವರು ಬೈಸಿಕಲ್ಲನ್ನು ಏರುವಾಗ ಉಪಾಧ್ರು "ಸ್ವಾಮಿಯವರಿಗೆ ಹಾಸನದಿಂದ ಇಲ್ಲಿಗೆ ಬಂದು ದಣಿವಾಗಿದೆ. ನಮ್ಮ ಮನೆಯಲ್ಲಿ ರಾತ್ರಿ ಉಳಿದಿದ್ದರೆ ಕುಚೇಲನ ಆತಿಥ್ಯ ಸ್ವೀಕರಿಸಿ ಸುದಾರಿಸಿಕೊಳ್ಳಬಹುದಾಗಿದ್ದಿತು. ಆದರೆ ಚಿತ್ತಕ್ಕೆ ಬರಲಿಲ್ಲ" ಎಂದರು. ಸಾಹೇಬರು ನಗುತ್ತಾ "ನಿಮಗೂ ನನ್ನಷ್ಟೇ ಆಯಾಸವಾಗಿದೆ. ಆದರೆ ಕುದುರೆ ಸವಾರಿ ಮಾಡಿದರೆ ಬೈಸಿಕಲ್ಲಿನ ಸವಾರಿಯಷ್ಟು ಸುಸ್ತಾಗುವುದಿಲ್ಲ ನಿಜ" ಎಂದು ಹೇಳಿ ತಮ್ಮನ್ನೇ ನೋಡುತ್ತಿದ್ದ ಉಪಾಧ್ರು ಉತ್ತರವನ್ನು ನಿರೀಕ್ಷಿಸದೆ ಹೊರಟುಹೋದರು ಉಪಾಧ್ರು "ಏನಾದರೂ ಗೊತ್ತಾಯಿತೋ ಕಾಣೆ. ಆದದ್ದಾಗಲಿ. ನಾನು ಮಾಡುವುದನ್ನು ಮಾಡಿಯಾಯಿತು" ಎಂದು ಮನೆಯ ಹಾದಿ ಹಿಡಿದರು.

ಆದರೆ ಅದು ಬಹಳ ವರುಷಗಳ ಮಾತಾಗಿದ್ದಿತು. ಈಚೆಗೆ ಉಪಾಧ್ರಿಗೆ ಮುಪ್ಪು ಬಂದಿತ್ತು. ಸಂಸಾರ ತಾಪತ್ರಯ, ಸಾಲ ಹೆಚ್ಚಾಗಿದ್ದಿತು. ಸಾಲದುದಕ್ಕೆ ಘಾಟಿತನ ಯಾವಾಗಲೂ ನಡೆಯುವುದಿಲ್ಲ. ಈಚೆಗೆ ಬಂದ ಅಧಿಕಾರಿಗಳು ಮೇಲಧಿಕಾರಿಗಳಿಗೆ ಗುಲಾಮರಾಗಿದ್ದಂತೆ ಕೆಳಗಿನ ಅಧಿಕಾರಿಗಳನ್ನು ಗುಲಾಮರನ್ನಾಗಿ ಮಾಡಿಕೊಂಡರು. ಇನಿಸ್ಪೆಕ್ಟರ್ ಸಾಹೇಬರಿಗೆ ವಿದ್ಯಾ ಡೈರೆಕ್ಟರ ಭಯ ಹೆಚ್ಚಿದಷ್ಟೂ ಅವರು ಉಪಾಧ್ಯಾಯರನ್ನು ಹೆದರಿಸುವುದು ಹೆಚ್ಚಾಯಿತು. ಡೈರೆಕ್ಟರ್‌ರವರು ಇನಿಸ್ಪೆಕ್ಟರನ್ನು ಜವಾನರನ್ನು ಕಂಡಂತೆ ಕಾಣುತ್ತಿದ್ದರು. ಸಾದಿಲ್ವಾರಿನಲ್ಲಿ ಒಂದಾಣೆ ಎರಡಾಣೆ ಹೆಚ್ಚು ಕಡಿಮೆ ಇದೆಯೆಂದು ಇನಿಸ್ಪೆಕ್ಟರುಗಳನ್ನೇ ವಜಾ

ಮಾಡಿದ್ದರು. ಅವರ ಆಡಳಿತದಲ್ಲಿ ಮುಕ್ಕಾಲೆಲ್ಲಾ ಮೇಷ್ಟರಿಗೆ ಜುಲ್ಮಾನೆ ಹಾಕುವುದೇ ಕಸಬಾಗಿ ಹೋಯಿತು. ಆ ಡೈರೆಕ್ಟರುಗಳೇ ಒಬ್ಬರು ಮಾಡಿದುದನ್ನು ಒಬ್ಬರು ಒಪ್ಪುತ್ತಿರಲಿಲ್ಲ. ಒಬ್ಬರು ಅನೇಕ ವರುಷಗಳ ಕಾಲ ಮಾಡಿದ ಏರ್ಪಾಡುಗಳನ್ನು ಮತ್ತೊಬ್ಬರು ಬಂದು ಒಂದೇ ಏಟಿಗೆ ವಜಾ ಮಾಡಿಬಿಡುತ್ತಿದ್ದರು. ಆ ರೂಲ್ಸುಗಳು ಅನೇಕ ವೇಳೆ ಪರಸ್ಪರ ವಿರುದ್ಧವಾಗಿರುತ್ತಿದ್ದವು. ಆ ಪರಸ್ಪರ ವಿರುದ್ಧವಾದವುಗಳನ್ನು ಸಮನ್ವಯಿಸಲು ಉಪಾಧ್ಯಾಯರುಗಳಿಗೆ ಸಾಧ್ಯವಿಲ್ಲದಿರುವಾಗ ಡೈರೆಕ್ಟರ್ ಸಾಹೇಬರು ತಮ್ಮ ತಪ್ಪನ್ನು ಮುಚ್ಚಿಕೊಳ್ಳಲು ಹೈಸ್ಕೂಲು ಹೆಡ್ಮಾಸ್ಟರನ್ನೂ ಸಹ ವಜಾ ಮಾಡಿಬಿಡುತ್ತಿದ್ದರು. ಹಾಜರಿ ಗೈರ್‌ಹಾಜರಿ, ಪರೀಕ್ಷೆ, ಪ್ರಮೋಷನ್ ಲೈಬ್ರೇರಿ ಫೀಜು ಇವುಗಳಲ್ಲಿ ಯಾವ ಮಿಲಿಟರಿ ಖುಲ್ಲಿಯೂ ಇಲ್ಲದ ಮಾರ್ಶಿಯಲ್ ಲಾ ಕಾನೂನುಗಳನ್ನು ಜಾರಿ ಮಾಡುತ್ತಿದ್ದರು. ಕೆಳಗಿನ ಅಧಿಕಾರಿಗಳಿಂದಲೂ, ವಿದ್ಯಾರ್ಥಿಗಳಿಂದಲೂ ಹೆಡ್ಮಾಸ್ಟರುಗಳಿಂದಲೂ ವರುಷಕ್ಕೆ ಸಾವಿರಾರು ರೂಪಾಯಿ ಜುಲ್ಮಾನೆ ವಸೂಲ್ಮಾಡಿ ಸರ್ಕಾರ ಖಜಾನೆಗೆ ಸೇರಿಸುತ್ತಿದ್ದರು. ಯುದ್ಧ ಭೂಮಿಗೆ ಹೊರಡುವ ಸಿಪಾಯಿಗಳು, ಹೊರಡುವುದು ಹೆಚ್ಚು ಕಡಿಮೆ ಆದರೆ ಅವರಿಗೆ ಹೇಗೆ ಕೋರ್ಟ್ ಮಾರ್ಶಲ್ ಮಾಡಿ ದಂಡ ವಿಧಿಸುತ್ತಾರೆಯೋ ಹಾಗೆ ೬-೭-೮-೯ ವಯಸ್ಸಿನ ಹುಡುಗರು ತರಗತಿಗೆ ಬರುವುದು ಒಂದು ನಿಮಿಷ ಸಾವಕಾಶವಾದ ತಪ್ಪಿಗೆ ಅವರನ್ನು ವಜಾ ಮಾಡದುದಕ್ಕಾಗಿ ಉಪಾಧ್ಯಾಯರನ್ನೇ "ಡಿಸ್‌ಮಿಸ್" ಮಾಡುತ್ತಿದ್ದರು. ಈ ಡೈರೆಕ್ಟರ್ ಸಾಹೇಬರ ಆಡಳಿತದಲ್ಲಿ ಪರೀಕ್ಷೆ ಎಂಬುದು ಒಂದು ಯಜ್ಞವಾಯಿತು. ಅರ್ಧ ಅಂಕ ಹೆಚ್ಚು ಕಡಿಮೆಯಾದ ವಿದ್ಯಾರ್ಥಿಯನ್ನು ಪ್ರೈಮರಿ ಸ್ಕೂಲಿನಲ್ಲಿ ಮೇಲಿನ ತರಗತಿಗೆ ಹಾಕಿದುದಕ್ಕೆ ಈ ಸಾಹೇಬರು ಉಪಾಧ್ಯಾಯರನ್ನೇ "ಡಿಸ್‌ಮಿಸ್" ಮಾಡಿದರು. ಇಪ್ಪತ್ತು ಮುವ್ವತ್ತು ವರುಷಗಳ ಹಿಂದಿನ ಸ್ಕೂಲಿನ ಪುಸ್ತಕ ಭಂಡಾರಗಳನ್ನು ಹುಡುಕಿಸಿ ಕಳೆದುಹೋಗಿದ್ದ ಪುಸ್ತಕಗಳ ಬೆಲೆಯನ್ನು ಆಗ ಉಪಾಧ್ಯಾಯನಾಗಿದ್ದವನ ನಿವೃತ್ತ ವೇತನದಿಂದ ಕಟ್ಟಿಸುತ್ತಿದ್ದರು. ತಮ್ಮನ್ನು ಹೊಗಳಿ ತಮಗೆ ವಿಧೇಯರಾಗಿ ಬಾಲ ಬಡಿಯುತ್ತಿದ್ದ ಅನಾಮಧೇಯನ್ನೆಲ್ಲಾ ಮೇಲೆ ಎತ್ತುತ್ತಿದ್ದರು. ಈ ಡೈರೆಕ್ಟರ್ ಸಾಹೇಬರ ಮೇಲೆ ಸರ್ಕಾರಕ್ಕೆ ದೂರು ಹೇಳಿದರೆ, ಸಾಹೇ

ಬರು ಬಿಳಿಯವರಾದುದರಿಂದ ಅವರಿಗಿಂತ ಹಿರಿಯರಾದ ಮೇಲಧಿಕಾರಿಗಳೂ ಸಹ ಸುಮ್ಮನೆಯೇ ಇರುತ್ತಿದ್ದರು. ಆ ಬಿಳಿಯವರಿಗೆ ಮೇಲಧಿಕಾರಿಗಳಲ್ಲಿಯೂ ಗೌರವವಿರುತ್ತಿರಲಿಲ್ಲ. ಅವರು ಮೇಲಧಿಕಾರಿಗಳ ಮಾತನ್ನು ಕೇಳುತ್ತಲೂ ಇರಲಿಲ್ಲ. ಮೇಲಧಿಕಾರಿಗಳು ತಮ್ಮವರನ್ನು ಮೆಟ್ಟುತ್ತಿದ್ದರೇ ಹೊರತು, ಬಿಳಿಯ ತಮ್ಮ ಕೆಳ ನೌಕರನಲ್ಲಿ ಸಹ ತಮ್ಮ ಆತ್ಮ ಗೌರವಕ್ಕೆ ಅನುಗುಣವಾಗಿ ನಡೆಯುವ ಧೈರ್ಯವುಳ್ಳವರಾಗಿರಲಿಲ್ಲ. ಅತ್ಯಲ್ಪನಾದ ಬಿಳಿಯವನು, ಎಷ್ಟೇ ಮೇಲಧಿಕಾರಿಯಾದರೂ ಕರಿಯವನನ್ನು ತುಚ್ಛಭಾವದಿಂದಲೇ ನೋಡುತ್ತಿದ್ದರೂ, ಆ ಬಿಳಿಯವನನ್ನೇ ಮೇಲಧಿಕಾರಕ್ಕೆ ನಿಯಮಿಸುತ್ತಿದ್ದುದು ನಮ್ಮವರ ತಪ್ಪೇ ಹೊರತು ಆ ಉದ್ಧತತನ ಬಿಳಿಯವರ ತಪ್ಪಲ್ಲ. ಒಂದೊಂದು ಸಲ ಬಣ್ಣದವರಾದ ನಮ್ಮ ಮೇಲಧಿಕಾರಿಗಳು, ನಮ್ಮವರ ಬಾಯಿಗೆಲ್ಲಾ ಕುಕ್ಕೆ ಕಟ್ಟಿ ಮೇಲಕ್ಕೆ ತಂದಿರುವ ಬಿಳಿಯವರ ತಲೆಹರಟೆಯನ್ನು ಸಹಿಸಲಾರದೆ ಸರ್ಕಾರದವರೆಗೆ ದೂರು ಹೋದರೂ, ಆ ಮಹಾ ಮಹಾ ಪ್ರಭೃತಿಗಳೂ ಸಹ ನಮ್ಮವರನ್ನೇ ಬೈದುಬಿಡುತ್ತಿದ್ದರು. ಬಿಳಿಯವರು ನಮ್ಮ ಸರ್ಕಾರದ ಅಡಿಯಾಳಾಗಿದ್ದರೂ, ನಮ್ಮ ಸರ್ಕಾರವೇ ಬಿಳಿಯವರ ಅಡಿಯಾಳಾಗಿದ್ದಂತೆ ತೋರಿತು. ಇಂತಹ ವಿದ್ಯಾ ಡೈರೆಕ್ಟರ ಕೆಳಗಿನ ಅಧಿಕಾರಿಗಳೆಲ್ಲಾ ತಮ್ಮ ಮೇಲಧಿಕಾರಿಯ ಜರ್ಬನ್ನು ಅನುಕರಿಸುತ್ತಾ ಕೆಳಗಿನವರನ್ನು ತುಳಿಯುತ್ತಿದ್ದರು. ಆ ಗುಲಾಮಗಿರಿಯ ವಾತಾವರಣದಲ್ಲಿ ಆತ್ಮ ಗೌರವದ ಸೂಚನೆ ತೋರುವುದೂ ತಪ್ಪಾಗಿದ್ದಿತು. ಸೇವಾ ಬುದ್ಧಿಗೂ ವಿಧೇಯತೆಗೂ ಒಂದು ಮಿತಿಯನ್ನಿಟ್ಟುಕೊಂಡಿದ್ದ ತಿಪ್ಪಯ್ಯ ಉಪಾಧ್ಯಾಯರಿಗೆ ಈ ಹೊಸ ಬದಲಾವಣೆಗಳಿಂದ ನೀರಿನಿಂದ ಮೀನನ್ನು ಮೇಲಕ್ಕೆ ಎಸೆದಂತೆ ಆಯಿತು.

---

# ೯ " ನಮಾಜು ಮಾಡೋಕೆ ಹೋದ್ರೆ ಮಸೀದಿ ತಲೇ ಮೇಲೆ "

ಇನಿಸ್ಪೆಕ್ಟರು ಸಾಧಾರಣವಾಗಿ ಹಳ್ಳಿಗಳಿಗೆ ಬಂದಾಗ ಮೇಷ್ಟರುಗಳ ಮನೆಯಲ್ಲಿ ಊಟಮಾಡುವುದು ವಾಡಿಕೆ. ಇದರಿಂದ ಯಾರಿಗೂ ಏನೂ ತೊಂದರೆ ಇಲ್ಲ. ಹಳ್ಳಿಗಳಲ್ಲಿ ಹೋಟಲುಗಳು ಇರುವುದಿಲ್ಲ. ಅಲ್ಲದೆ ಪಟ್ಟಣಗಳಲ್ಲಿ ಹೋಟಲುಗಳಲ್ಲಿ ಅನ್ನ ಮಾರುವುದು ಪದ್ಧತಿಯಾದರೂ ಪರಸ್ಥಳದಿಂದ ಹಳ್ಳಿಗಳಿಗೆ ಬಂದವರಿಗೆ ಊಟ ಹಾಕುವುದು ಗೃಹಸ್ಥರ ಧರ್ಮ. ಮಲ್ಲಿಗೆಹಳ್ಳಿಗೆ ಬಂದ ಇನಿಸ್ಪೆಕ್ಟರು ಸಾಧಾರಣವಾಗಿ ಅಲ್ಲಿಯ ಮೇಷ್ಟರುಗಳ ಮನೆಯಲ್ಲಿ ಊಟ ಮಾಡುವುದು ಪದ್ಧತಿಯಾಗಿತ್ತು. ಒಂದು ಸಲ ಇನಿಸ್ಪೆಕ್ಟರು ಮಲ್ಲಿಗೆಹಳ್ಳಿಗೆ ಬಂದಾಗ ಸಂಸಾರ ಸಮೇತ ವಾಗಿ ಬಂದರು. ಆಗ ಮಲ್ಲಿಗೆಹಳ್ಳಿಯಲ್ಲಿ ಅಂಗಡಿಗಳು ಇರಲಿಲ್ಲ. ಒಂದು ಚಿಲ್ಲರೆ ಅಂಗಡಿ ಸಹ ಇಲ್ಲದ ಊರು ಎಲ್ಲಿಯಾದರೂ ಉಂಟೆ ಎಂದುಕೊಂಡು ಇನಿಸ್ಪೆಕ್ಟರು ಯಾವ ಸಾಮಾನನ್ನೂ ತರದೆ ಬಂದಿದ್ದರು. ತಿಪ್ಪಯ್ಯ ಉಪಾಧ್ರು, ತಾವು ಸಂತೆಯಿಂದ, ತಮ್ಮ ಮನೆಯ ಉಪಯೋ ಗಕ್ಕಾಗಿ ತರಿಸಿಟ್ಟಿದ್ದ ಅಡಿಗೆ ಸಾಮಾನುಗಳನ್ನು ಕೊಟ್ಟು ಹಾಲು ಮೊಸರು ತುಪ್ಪ ಒದಗಿಸಿದರು. ಹೊರಡುವಾಗ ಇನಿಸ್ಪೆಕ್ಟರು ಸಾಮಾ ನುಗಳ ಬೆಲೆಯನ್ನೆಲ್ಲಾ ಲೆಕ್ಕ ಹಾಕಿ ತಾವು ಕೊಟ್ಟರೆ ಎಲ್ಲಿ ತಿಪ್ಪಯ್ಯ ತೆಗೆದುಕೊಳ್ಳುವುದಿಲ್ಲವೋ ಎಂದುಕೊಂಡು ತಮ್ಮ ಹೆಂಡತಿಯ ಕೈಯ್ಯಲ್ಲಿ ಕೊಟ್ಟು ಉಪಾದ್ರು ಹೆಂಡತಿಗೆ ಕೊಡುವಂತೆ ಹೇಳಿದರು. ಉಪಾದ್ರು ಹೆಂಡತಿ " ಎಲ್ಲಾದರೂ ಉಂಟೇನಮ್ಮ. ನೀವು ನಮ್ಮೂರಿಗೆ ಲಕ್ಷ್ಮಿ ಬಂದಂತೆ ಬಂದಿರಿ. ಎರಡು ದಿವಸ ಇಲ್ಲಿ ನೀವು ಅಡಿಗೆ ಮಾಡಿಕೊಂಡು ದಕ್ಕೆ ನಿಮ್ಮ ಹತ್ತಿರ ದುಡ್ಡು ತೆಗೆದುಕೊಳ್ಳಲೇ? ನಿಮ್ಮ ಕೃಪೆ ಒಂದಿದ್ದರೆ ಸಾಕು " ಎಂದರು. ಇನಿಸ್ಪೆಕ್ಟರಿಗೂ ಅವರ ಹೆಂಡತಿಗೂ, " ಆ ಮಾತನ್ನೂ ಅದರ ಹಿಂದಲ ಸಂಸ್ಕಾರವನ್ನೂ ಕಂಡು ಆಶ್ಚರ್ಯವೂ ಸಂತೋಷವೂ ಆಯಿತು. ಆದರೆ ಕೆಲವು ಪುಂಡರು " ಇನಿಸ್ಪೆಕ್ಟರು ಮೇಷ್ಟರುಗಳ ಹತ್ತಿರವೆಲ್ಲಾ ಪಡಿಭತ್ಯ ವಸೂಲ್ಮಾಡುತ್ತಾರೆ " ಎಂದು ಏ. ಜಿ. ಸಾಹೇಬ

ರಿಗೆ ಅರ್ಜಿ ಕೊಟ್ಟರು. ಅವರು ಬಂದು ಸ್ಕೂಲಿನಲ್ಲಿ ಕೋರ್ಟು ನಡೆಸು ವಂತೆ ವಿಚಾರಣೆ ನಡೆಸಿದರು. ತಿಪ್ಪಯ್ಯ ಉಪಾದ್ರಿಗೆ ವಿರೋಧವಾಗಿ ಅವರ ಎದುರಿಗೆ ಯಾರೂ ಧೈರ್ಯವಾಗಿ ಚಾಡಿ ಹೇಳುತ್ತಿರಲಿಲ್ಲ. ಅರ್ಜಿ ಬರೆದವನು "ನಾನು ಬರೆಯಲೇ ಇಲ್ಲ. ಇದು ನನ್ನ ಅಕ್ಷರವೇ ಅಲ್ಲ" ಎಂದನು. ಅರ್ಜಿಯ ಕೆಳಗೆ ಹಾಕಿದ್ದ ಅನೇಕ ರುಜುಗಳ ಹೆಸರಿನವರು, ಅವು ತಮ್ಮ ರುಜುಗಳೇ ಅಲ್ಲವೆಂದೂ, ತಾವು ಅರ್ಜಿಯಲ್ಲಿ ಬರೆದಿರುವ ಅಭಿಪ್ರಾಯಗಳಿಗೆ ಒಪ್ಪುವುದಿಲ್ಲವೆಂದೂ ಹೇಳಿದರು. ಇನಿಸ್ಪೆಕ್ಟರಿಗೆ ವಿರೋಧವಾಗಿ ವಿಚಾರಣೆಯಲ್ಲಿ ಏನೂ ಹೊರಡಲಿಲ್ಲ. ಆದರೂ, ಕೆಳ ಅಧಿಕಾರಿಗಳ ಮೇಲೆ ಜಬರು ತೋರಿಸುವ ಸಮಯವನ್ನೇ ಕಾಯುತ್ತಿರುವ ಮೇಲಧಿಕಾರಿಗಳು, ಕೆಳಗಿನವರನ್ನು ಶಿಕ್ಷಿಸುವ ಯಾವ ಸಂದರ್ಭವನ್ನೂ ಬಿಡುವುದಿಲ್ಲ. ಐ. ಜಿ. ಸಾಹೇಬರು ಇನಿಸ್ಪೆಕ್ಟರನ್ನು ಬೇರೆ ಕಡೆಗೆ ವರ್ಗಾ ಯಿಸಿದರು. ೧೨ ವರ್ಷಗಳಿಂದ ಮಲ್ಲಿಗೆಹಳ್ಳಿಯಲ್ಲಿಯೇ ಇದ್ದು ಅದನ್ನೇ ಸ್ವಲ್ಪ ಹೆಚ್ಚು ಕಡಿಮೆ ಸ್ವಗ್ರಾಮವಾಗಿ ಮಾಡಿಕೊಂಡಿದ್ದ ತಿಪ್ಪಯ್ಯ ನವರಿಗೂ ಮಲೆನಾಡಿನ ಭರತಪುರಕ್ಕೆ ವರ್ಗವಾಯಿತು. ಹೊಸದಾಗಿ ಬಂದ ಇನಿಸ್ಪೆಕ್ಟರಿಗೆ ಹಳೆಯವರು, "ಪ್ರಾಣ ಹೋದರೂ ಈ ಊರಿನಲ್ಲಿ ಜಲಪಾನ ಮಾಡಬೇಡಿ" ಎಂದು ಹೇಳಿ ತಾವು ವರ್ಗಹೊಂದಿದ ಸ್ಥಳಕ್ಕೆ ಹೋದರು. ಅಲ್ಲಿಂದ ಈಚೆಗೆ ವಿದ್ಯಾಅಧಿಕಾರಿಗಳು ಮಲ್ಲಿಗೆಹಳ್ಳಿ ಎಂದರೆ ಹೆಡೆ ತುಳಿದ ಹಾವಿನಂತೆ ಮೇಲೆ ಬೀಳುವುದಕ್ಕೆ ಬರುತ್ತಿದ್ದರು.

ತಿಪ್ಪಯ್ಯ ಉಪಾದ್ರಿಗೆ ಹೊಸದಾಗಿ ವರ್ಗವಾದ ಭರತಪುರಿ ಪೂರ್ಣ ವಾಗಿ ಮಲೆನಾಡಿನ ಮಧ್ಯದಲ್ಲಿದೆ. ಆ ಹಳ್ಳಿಯ ಸುತ್ತಲೂ ಅಸಾಧ್ಯವಾದ ಕಾಡು. ಊರಿನ ಮುಂದೆ ನಿಂತಿದ್ದರೂ ಮರಗಳ ಗುಂಪಿನ ದೆಸೆಯಿಂದ ಊರು ಎಲ್ಲಿದೆ ಎಂಬುದು ಗೊತ್ತಾಗುವುದಿಲ್ಲ. ಆ ಊರಿಗೆ ವರ್ಗ ಮಾಡಿದುದು ತಿಪ್ಪಯ್ಯ ಉಪಾದ್ರಿಗೆ ಶಿಕ್ಷೆ ಮಾಡುವುದಕ್ಕಾಗಿ. ಭರತ ಪುರಕ್ಕೆ ಗಾಡಿ ದಾರಿ ಇಲ್ಲದುದರಿಂದ ಇನಿಸ್ಪೆಕ್ಟರು ಅಲ್ಲಿಗೆ ವರುಷಕ್ಕೆ ಒಂದು ಸಲ ಕೂಡ ಹೋಗುತ್ತಿರಲಿಲ್ಲ. ಆದರೆ ತಿಪ್ಪಯ್ಯ ಉಪಾದ್ರಿ ತನ್ನನ್ನು ಎಲ್ಲಿಗೆ ವರ್ಗಮಾಡಿದರೂ ದುಃಖಪಡುವವನಾಗಿರಲಿಲ್ಲ. ಅವರಿಗೆ ಎಲ್ಲಾ ಕಡೆಯಲ್ಲಿಯೂ ಎಲ್ಲರಿಗೂ ಬೇಕಾದವರಾಗಿ ಕಚಾ ಯಿಸುವ ಶಕ್ತಿ ಇದ್ದಿತು. ಅವರು ಹೋದಕಡೆ ಹುಡುಗರು ಸ್ಕೂಲಿಗೆ

ಬರಲಿ ಬಿಡಲಿ, ಉಪಾದ್ರು ಪಾಠ ಹೇಳಲಿ ಬಿಡಲಿ, ರೈತರಿಗೆ ಉಪಾದ್ರಲ್ಲಿ ವಿಶ್ವಾಸ ಹೆಚ್ಚುತ್ತಿದ್ದಿತು. ಮಲ್ಲಿಗೆಹಳ್ಳಿಯಲ್ಲಿ ಬಹುಕಾಲವಿದ್ದು ಅದನ್ನೇ ಊರುಮಾಡಿಕೊಂಡಿದ್ದ ಉಪಾದ್ರು, ಭರತಪುರದಲ್ಲಿ ಇರುವಷ್ಟುದಿನವೂ ಒಬ್ಬರೇ ಇದ್ದರು. ಅವರ ಸಂಸಾರವೆಲ್ಲಾ ಮಲ್ಲಿಗೆಹಳ್ಳಿಯಲ್ಲಿಯೇ ಇದ್ದಿತು. ಭರತಪುರಿಯ ಪಟೇಲನು ಅವರಿಗೆ ನಿತ್ಯಾ ಬೆಳಿಗ್ಗೆ ಒಂದು ಮೊರದಲ್ಲಿ ಅರ್ಧ ಸೇರು ಅಕ್ಕಿ, ತರಕಾರಿ ಅಥವಾ ಕಾಳು, ಉಪ್ಪು, ಮೆಣಸಿನಕಾಯಿ ಮುಂತಾದ ಅಡಿಗೆ ಪದಾರ್ಥಗಳನ್ನೆಲ್ಲಾ ತಂದುಕೊಡು ತ್ತಿದ್ದನು. ಅವನ ಹೊರತು ಮತ್ತಾರಿಂದಲೂ ತೆಗೆದುಕೊಳ್ಳಲು ಉಪಾದ್ರಿಗೆ ಅವಕಾಶವಿರಲಿಲ್ಲ. ಮತ್ತಾರಿಂದಲಾದರೂ ತೆಗೆದುಕೊಂಡರೆ 'ಪಟೇಲ ನಾಲ್ಕು ದಿನ ಉಪಾದ್ರಿಗೆ ಪಡಿ ಕೊಟ್ಟ. ಕೈ ಗುಡ್ಡಾಯಿತು' ಎಂದು ಜನ ಹಾಸ್ಯಮಾಡುತ್ತಿದ್ದುದರಿಂದ ಪಟೇಲ ಅದಕ್ಕೆ ಅವಕಾಶ ಕೊಡುತ್ತಿರಲಿಲ್ಲ. ಉಪಾದ್ರು, ಉಪಾದ್ರ ಕೆಲಸವನ್ನು ಮಾಡುವುದಲ್ಲದೆ, ತಮ್ಮ ಚಾಕಚಕ್ಯದಿಂದ ಊರಿನವರಿಗೆಲ್ಲಾ ಬೇಕಾದವರಾಗಿದ್ದರು. ಪಟೇಲ, ಶ್ಯಾನುಭೋಗರ ವ್ಯಾಜ್ಯ ಹರಿಸುವುದಕ್ಕೆ, ಅಣ್ಣತಮ್ಮಂದಿರ ಆಸ್ತಿ ಪಾಲುಮಾಡಿಕೊಳ್ಳುವುದಕ್ಕೆ, ತಂದೆ ಮಕ್ಕಳ ನ್ಯಾಯ ಮಾಡುವು ದಕ್ಕೆ, ಕಂದಾಯ ಕಡಿಮೆ ಮಾಡಿಸಲು ಸರ್ಕಾರಕ್ಕೆ ಅರ್ಜಿಕೊಡುವುದಕ್ಕೆ, ದೇವಸ್ಥಾನದ ಪೂಜಾರಿಗೂ, ಕುಳವಾಡಿಗೂ ಉಂಟಾದ ನ್ಯಾಯ ಬಗೆಹರಿಸುವುದಕ್ಕೆ ಎಲ್ಲದಕ್ಕೂ ಉಪಾದ್ರು ಜನರಿಗೆ ಬೇಕಾಗಿದ್ದರು. ಈ ನ್ಯಾಯಗಳ ಮಧ್ಯೆ ಅವರು ಸ್ಕೂಲಿನಲ್ಲಿ ಯಾವಾಗ ಪಾಠ ಮಾಡುತ್ತಿ ದ್ದರೋ ತಿಳಿಯದು. ಆದರೆ ಪಂಚಾಯ್ತಿ ಮಾಡುವಾಗ, ವ್ಯಾಜ್ಯ ಮಾಡುವ ಎರಡು ಪಕ್ಷಗಳಿಗೂ ಕೋರ್ಟಿಗೆ ಹೋಗಿ ಖರ್ಚು ಮಾಡು ವುದು ತಪ್ಪಿ ಫಾಯಿದೆಯಾದರೂ, ಪಂಚಾಯ್ತಿ ಮಾಡುವ ಮಧ್ಯಸ್ಥ ಗಾರನಿಗೆ ಯಾವುದಾದರೂ ಒಂದು ಪಕ್ಷದವರ ಅಸಮಾಧಾನ ಸಂಭವಿಸು ತ್ತದೆ. ಒಂದು ಸಲ ಪಟೇಲ ಶ್ಯಾನುಭೋಗರ ಪಂಚಾಯ್ತಿಯಲ್ಲಿ ಉಪಾದ್ರು ಶ್ಯಾನುಭೋಗನಿಗೆ ವಿರೋಧವಾಗಿ ತೀರ್ಪು ಕೊಟ್ಟರು. ಶ್ಯಾನು ಭೋಗನಿಗೆ ಸಿಟ್ಟು ಬಂತು. ಅವನು " ನಮ್ಮ ನ್ಯಾಯ ನಾವು ನಡಸ್ಕೋ ತೀವಿ. ನಮ್ಮ ಗಂಜಿ ನಾವು ಕುಡಿಕೋತೀವಿ. ಅದ ಕಟ್ಕೊಂಡು ಇವರ್ಗೇನು? ಈ ನ್ಯಾಯ ಇವರು ನಡೆಸೋಕೆ ಬಂದ್ರೆ ಮಠ ನಡೆಸೋರು

ಯಾರು? ಇವರಿಗೆ ಸಂಬಳ ಕೊಡೋದು ನ್ಯಾಯ ನಡೆಸೋಕೋ ಮಠ ನಡೆಸೋಕೋ" ಎಂದು ಕೂಗಾಡಿದ. ಪಟೇಲನು "ಏ ಶ್ಯಾನು ಭೋಗಯ್ಯಾ, ಉಪಾದ್ರು ಮಠ ನಡಸೋದ್ನ ನಡಸ್ತಾರೆ. ಅದ ಕಟ್ಕೊಂಡು ನಿಮಗೇನು? ಹಾಗಾದ್ರೆ ನಿಮ್ಮ ಮಗನ್ನ ಯಾಕೆ ಮಠಕ್ಕೆ ಕಳಿಸ್ತಾ ಇಲ್ಲ? ಆವತ್ತು ಕೇಳಿದ್ದಕ್ಕೆ ಏನು ಹೇಳಿದ್ರಿ. "ಓದಿ ನನ್ಮಗ ದಿವಾನನಾಗೋದು ಅಷ್ಟರಲ್ಲೇ ಇದೆ. ಮನೇಲಿ ದನ ಮೇಯಿಸಿದರೆ ನಿತ್ಯ ಒಂದು ಸೇರು ಹಾಲು ಧಾರಾಳವಾಗಿ ಸಿಕ್ಕುತ್ತೆ" ಅನ್ನಲಿಲ್ವೇ? ಊರು ಮುಂದಲ ಯಾಲಕ್ಕಿ "ಮಗ ಆಡು ಹಿಡ್ಕೊಂಡು ಹೊಯ್ತಾನೆ. ಓದೋಕೋದ್ರೆ ಆಡು ಮೇಯಿಸೋರ್ಯಾರು" ಅನ್ಲಿಲ್ವೆ? ನ್ಯಾಯ ನಿಮಗೆ ವಿರೋಧವಾಯ್ತು, ಅಂತ ಹೀಗೆ ಆಡ್ತೀರಾ ಎಂದನು.

ತಿಪ್ಪಯ್ಯ ಉಪಾದ್ರಿ ರೈತರ ಅನುಕೂಲಗಳನ್ನು ನೋಡಿಕೊಂಡು, ಅವರಿಗೆ ವಿರಾಮವಿದ್ದ ಕಾಲದಲ್ಲಿ ಮಾತ್ರ ಪಾಠ ಹೇಳುತ್ತಿದ್ದರು. ರೈತರ ಮಕ್ಕಳು ಬೆಳಿಗ್ಗೆ ಹೊಲ ಉಳುವುದಕ್ಕೆ, ದನ ಮೇಯಿಸುವುದಕ್ಕೆ, ಸಗಣಿ ಎತ್ತುವುದಕ್ಕೆ ಹೋದರೆ ಉಪಾದ್ರು ಮಧ್ಯಾಹ್ನದ ಹೊತ್ತೇ ಪಾಠ ಮಾಡುತ್ತಿದ್ದರು. ಬಿತ್ತನೆಯ ಕಾಲದಲ್ಲಿ, ಹರತೆಯ ಕಾಲದಲ್ಲಿ, ಸುಗ್ಗಿಯ ಕಾಲದಲ್ಲಿ ರೈತರಿಗೆ ಯಾವಾಗಲೂ ಕೆಲಸವಿದ್ದಾಗ ಉಪಾದ್ರು ಮಠ ನಡೆಸುತ್ತಲೇ ಇರಲಿಲ್ಲ. ರೈತರಿಗೆ ಕೆಲಸ ಕಡಿಮೆ ಇದ್ದಾಗ ಭಾನುವಾರ ಮುಂತಾದ ರಜಾ ದಿನಗಳನ್ನೂ ಕೊಡದೆ, ದಿನಕ್ಕೆ ೮-೧೦ ಗಂಟೆ ಪಾಠ ಮಾಡುತ್ತಿದ್ದರು. ಸರ್ಕಾರದಿಂದ ಹುಕುಂ ಇಲ್ಲದೆ ಇದ್ದರೂ ರೈತರಿಗೆ ರಾತ್ರಿಯ ಪಾಠಶಾಲೆ, ರಾಮಾಯಣ, ಭಾರತ ಮುಂತಾದ ಪುರಾಣ ಕತೆಗಳನ್ನೂ, ತಮಗೆ ತಿಳಿದಿದ್ದ ಎಲ್ಲಾ ಭಾಗಗಳನ್ನೂ, ಅವು ಪಾಠಗಳ ಭಾಗಗಳಾಗಿರಲಿ ಅಥವ ಬಿಡಲಿ ರೈತರಿಗೂ ಹುಡುಗರಿಗೂ ಹೇಳಿಕೊಡುತ್ತಿದ್ದರು.

ರೈತರಿಗೆ ವ್ಯವಸಾಯದ ಕೆಲಸ ಹೆಚ್ಚಾದಾಗ ಉಪಾದ್ರು ಒಂದೊಂದು ಸಲ ತಮ್ಮ ಸಂಸಾರವನ್ನು ಬಿಟ್ಟಿದ್ದ ಮಲ್ಲಿಗೆಹಳ್ಳಿಗೆ ಬಂದು ಒಂದು ತಿಂಗಳು, ಎರಡು ತಿಂಗಳು ಇದ್ದು ಬಿಡುತ್ತಿದ್ದರು. ಆ ಕಾಲದಲ್ಲಿ ಸರ್ಕಾರಕ್ಕೆ ಬರೆದು ರಜಾ ತೆಗೆದುಕೊಳ್ಳುತ್ತಿದ್ದರೋ ಇಲ್ಲವೋ ತಿಳಿಯದು. ಪ್ರಾಯಶಃ ರಿಜಿಸ್ಟರಿನಲ್ಲಿ ರಜಾ ರಿಪೋರ್ಟನ್ನು ಇಟ್ಟು ಬರುತ್ತಿದ್ದರೆಂದು

ಕಾಣುತ್ತದೆ. ನಮ್ಮ ಊರಿನವರು ಯಾರಾದರೂ "ಏನ್ರೀ, ನೀವು ಇಲ್ಲಿ ಕುಳಿತಿರುವಾಗ ಇನ್‌ಸ್ಪೆಕ್ಟರು ಸಾಹೇಬರು ಬಂದರೆ ನಿಮ್ಮ ಗತಿ ಏನ್ರೀ?" ಎಂದರೆ ಅವರು "ಇನ್‌ಸ್ಪೆಕ್ಟರ್ ಸಾಹೇಬರು ಈ ವರ್ಷ ಬಂದಾಯ್ತು ಸ್ವಾಮಿ, ಇನ್ನು ಅವರು ಬರುವುದು ಮುಂದಲ ವರ್ಷವೇ ವರುಷಕ್ಕೆ ಒಂದು ಸಲ ಬರುವುದಕ್ಕೆ ತಾನೇ ಎಲ್ಲಿದೆ ಅವರಿಗೆ ಪುರುಸತ್ತು? ಹೋದ ವರುಷ ಕಟ್ಟೆಪುರದ ಸಂತೆಗೆ ಬಂದಿದ್ದರು. ಅಲ್ಲಿಗೇ ಸಾದಿಲ್ವಾರು ಲೆಕ್ಕ, ಹಾಜರಿ ಗೈರುಹಾಜರಿ ಇಂದಾಗೆ ಎಲ್ಲಾ ತೆಗೆದುಕೊಂಡು ಹೋಗಿ ಹಾಜರ್ಮಾಡಿದೆ. ಅಲ್ಲಿ ಇನಿಸ್ಪೆಕ್ಷನ್ ಆಯಿತು. ಅವರು ತಮ್ಮ ಡೈರಿ ಬುಕ್ಕಿನಲ್ಲಿ ಇಂಗ್ಲಿಷಿನಲ್ಲಿ ಏನೇನೋ ಬರೆದುಕೊಂಡರು. ನಮ್ಮ ಸ್ಕೂಲಿನ ಪುಸ್ತಕಗಳಲ್ಲಿ ಸಹ ಇಂಗ್ಲಿಷಿನಲ್ಲಿ ಬರೆದರು. 'ಇದು ಏನು ಅಪ್ಪಣೆ ಮಾಡಿದ್ದೀರೋ ತಿಳಿದರೆ ಫಿದವಿಯು ತಪ್ಪನ್ನು ತಿದ್ದಿಕೊಳ್ಳುತ್ತೇನೆ. ಈ ಗರೀಬನಿಗೆ ಇಂಗ್ಲಿಷು ಪರಿಚಯವಿಲ್ಲ.' ಎಂದೆ. ಇನ್‌ಸ್ಪೆಕ್ಟರು ಸ್ವಲ್ಪ ಕೋಪದಿಂದ "ನಿಮಗೆ ಪರಿಚಯವಿದೆ ಅಂತ ನಾನು ನಿಮಗೆ ಹೇಳಿದೆನೇ? ಏನೋ ಬರೆದಿದ್ದೇನೆ. ಅದ ಕಟ್ಕೊಂಡು ನಿಮಗೇನು" ಎಂದು ಹೇಳಿ ಹೊರಟುಹೋದರು. ಹದಿನೈದು ದಿನಗಳ ಮೇಲೆ "ನಾವು ನಿಮ್ಮ ಸ್ಕೂಲಿಗೆ ಬಂದು ಇನ್‌ಸ್ಪೆಕ್ಷನ್ ಮಾಡಿದುದು ಸರಿಯಷ್ಟೆ................" ಎಂದೂ ಮುಂತಾಗಿ ಇಂಡಾರ್ಸ್ ಕೊಟ್ಟಿದ್ದರು. ಪಾಪ, ಪಾಪ ಆ ದೊಡ್ಡ ಮನುಷ್ಯರು ಆ ಕಾಡು ದಾರಿಯಲ್ಲಿ ಹೇಗೆ ನಡೆದಾರು. ಮಳೆ ಹಿಡಿದರೆ ಒಂದೇ ಸವನೆ ಮೂರು ತಿಂಗಳು ಜಡಿ. ದನಗಳನ್ನು ಕೂಡ ಹೊರಕ್ಕೆ ಬಿಡುವಂತಿಲ್ಲ. ಹೊಳೆ ಕಟ್ಟಿಕೊಂಡು ಊರು ಪ್ರಪಂಚದಿಂದ ಬೇರೆ ಯಾಗಿ ದ್ವೀಪವಾಗುತ್ತದೆ. ಆ ಊರಿಗೆ ಯಾವ ಅಧಿಕಾರಿಗಳೇ ಆಗಲಿ ವರ್ಷಕ್ಕೆ ಒಂದು ಸಲವೂ ತಲೆ ಹಾಕುವುದು ಅಪರೂಪ. ತಮ್ಮ ಆಡಳಿತ ದಲ್ಲಿ ಅಮಲ್ದಾರ್ ಸಾಹೇಬರೂ, ಶೇಕ್‌ದಾರ್ ಸಾಹೇಬರೂ ಒಂದೊಂದು ಸಲ ಬಂದು ಹೋದರೆ ತಮ್ಮ ಕರ್ತವ್ಯ ಮಾಡಿದಂತಾಯಿತೆಂದು ತಿಳಿಯು ತ್ತಾರೆ. ಊರಿಗೆ ಹೊರಗಿನಿಂದ ಯಾರು ಬರಬೇಕಾದರೂ ೩-೪ ಮೈಲ ದೂರದಲ್ಲಿ ನಾವು ಹೋಗಿ ನಿಂತಿದ್ದು ಅವರನ್ನು ಕರೆತರಬೇಕು. ಇಲ್ಲದಿದ್ದರೆ ಆ ಕಾಡಿನಲ್ಲಿ ಅವರಿಗೆ ಸುತರಾಂ ದಾರಿ ಸಿಕ್ಕುವುದಿಲ್ಲ. ಹಿಂದೆ ಒಬ್ಬ ಇನಿಸ್ಪೆಕ್ಟರು ಬರುತ್ತೇನೆಂದು ಇಂಡಾರ್ಸು ಕೊಟ್ಟರು. ಗ್ರಾಮಕ್ಕೆ

ಟಪಾಲು ಸರಿಯಾಗಿ ಬರುವುದಿಲ್ಲ. ಕಾಗದ, ಇನಿಸ್ಪೆಕ್ಟರು ಬರಬೇಕಾ ದುದಕ್ಕಿಂತ ಇಪ್ಪತ್ತು ದಿನ ತಡವಾಗಿ ಬಂದಿತು. ಆ ನಡುವೆ ಇನಿಸ್ಪೆಕ್ಟರು ಆಳಿನೊಡನೆ ಬಂದಿದ್ದು, ನಮ್ಮ ಹಳ್ಳಿಗೆ ಮೂರು ಮೈಲಿ ಸುತ್ತಿನ ಗಿಡದಲ್ಲಿ ಬೆಳಗಿನಿಂದ ರಾತ್ರಿಯವರೆಗೆ ಅಲೆದಾಡಿ ಆಳನ್ನು ಚೆನ್ನಾಗಿ ಬೈದು ದಾರಿ ಸಿಕ್ಕದೆ ಮತ್ತೆ ಕಟ್ಟೆಪುರಕ್ಕೆ ಹಿಂದಿರುಗಿದರು" ಎನ್ನುತ್ತಿದ್ದರು.

ತಿಪ್ಪಯ್ಯ ಉಪಾಧ್ರಿ ಮಲ್ಲಿಗೆಹಳ್ಳಿಯಲ್ಲಿದ್ದಾಗ ಅವರಿರುವ ಊರಿನಲ್ಲಿ ನೀರನ್ನೂ ಸಹ ಮುಟ್ಟುವುದಿಲ್ಲವೆಂದು ಪ್ರತಿಜ್ಞೆಮಾಡಿದ್ದ ಇನಿಸ್ಪೆಕ್ಟರು ಒಂದು ಸಲ ಭರತಪುರಿಗೆ ಬಂದರು. ಮತ್ತೆ ಅಲ್ಲಿ ತಿಪ್ಪಯ್ಯ ಉಪಾಧ್ರಿ ಇದ್ದುದರಿಂದ ಅವರಿಗೆ ಬೇಜಾರಾಯಿತು. ರಸ್ತೆಯ ಮಗ್ಗುಲಲ್ಲಿರುವ ಮಲ್ಲಿಗೆಹಳ್ಳಿಯಲ್ಲಿ ಉಪಾಧ್ರ ಮನೆಯಲ್ಲಿ ಊಟಮಾಡುವುದಿಲ್ಲವೆಂದು ಪ್ರತಿಜ್ಞೆಮಾಡಿ ಅದರಂತೆ ನಡೆಯುವುದು ಸುಲಭ. ಆದರೆ ಭರತಪುರಿ ಯಂತಹ ಹಳ್ಳಿಗೆ ಹೋದರೆ ಆಗ ಅದರ ಕಷ್ಟ ಗೊತ್ತಾಗುತ್ತದೆ. ಊರಿ ನಿಂದ ನಾಲ್ಕು ಮೈಲಿ ಗಿಡವನ್ನು ದಾಟಿ ಬಂದು ಉಪಾಧ್ರು ಇನಿಸ್ಪೆಕ್ಟ ರನ್ನು ಜತೆಯಲ್ಲಿ ಕರೆದುಕೊಂಡು ಭರತಪುರದ ತಮ್ಮ ಸ್ಕೂಲಿಗೆ ಹೋದರು. ಆ ಕಲ್ಲುದಾರಿಯಲ್ಲಿ ನಡೆಯುವ ವೇಳೆಗೆ ಇನಿಸ್ಪೆಕ್ಟರಿಗೆ ಸಾಕು ಸಾಕಾಗಿ ಹೋಯಿತು. ಸ್ಕೂಲು ತಲಪಿದಕೂಡಲೇ ಉಪಾಧ್ರು ಇನಿಸ್ಪೆಕ್ಟರ ಮುಂದೆ ಹಾಜರಿ ಗೈರುಹಾಜರಿ ಸಾದಿಲ್ವಾರು ಇಂದಾಗೆ ರಿಜಿಸ್ಟರುಗಳನ್ನು ಇಟ್ಟು ಕೈಕಟ್ಟಿ ನಿಂತುಕೊಂಡರು. ಇನ್‌ಸ್ಪೆಕ್ಟರು ಲೆಕ್ಕ ನೋಡುತ್ತಿರಲು ಉಪಾಧ್ರು ಹುಡುಗರಿಗೆ ಪಾಠ ಹೇಳಲು ಪ್ರಾರಂಭಿಸಿ ದರು. ಆವತ್ತು ಊರಿನ ಹುಡುಗರೆಲ್ಲಾ ಮಠದಲ್ಲಿ ಸೇರಿದ್ದರು. ಎಷ್ಟು ಹೊತ್ತಾದರೂ ಉಪಾಧ್ರ ಪಾಠ ಮುಗಿಯಲೇ ಇಲ್ಲ. ಆ ಕಡೆ ಇನಿಸ್ಪೆಕ್ಟ ರಿಗೆ ರಿಜಿಸ್ಟರಿನ ಮೇಲೆ ಗಮನವೇ ಇರಲಿಲ್ಲ. ಇನ್‌ಸ್ಪೆಕ್ಟರ್ ಸಾಹೇಬರವ ರಾದರೆ ತಾನೆ ಏನು? ಅವರಿಗೆ ಹಸಿವಿಲ್ಲವೆ? ಅವರ ಹೊಟ್ಟೆ ತಾಳ ಹಾಕು ತ್ತಿತ್ತು. ಯಾವತ್ತೂ ಹೆಚ್ಚಾಗಿ ನಡೆಯದಿದ್ದವರು ಆ ಕಲ್ಲುಮುಳ್ಳಿನಲ್ಲಿ ನಡೆದಿದ್ದುದರಿಂದ ಅವರಿಗೆ ಆಯಾಸವೂ ಹೆಚ್ಚಾಗಿದ್ದಿತು. ಅವರು ಪದೇ ಪದೇ ಉಪಾಧ್ರ ಕಡೆಯೇ ನೋಡುತ್ತಿದ್ದರು. ಕೊನೆಗೆ ಉಪಾಧ್ರನ್ನು "ಪಾಠ ಸಾಕುಮಾಡಿ. ಹೂ, ಕಾಫಿ ಗೀಫಿ ಮಾಡಿ, ಒಲೆ ಹತ್ತಿಸಿ", ಎಂದರು. ಉಪಾಧ್ರು ಒಂದು ಗಳಿಗೆಯೊಳಗಾಗಿ ಕಾಫಿ ಮಾಡಿ ಅಡಿಗೆ

ಮಾಡಿದರು. ಇನ್‌ಸ್ಪೆಕ್ಟರಿಗೆ, ಒಬ್ಬ ಮನುಷ್ಯ ತಮಗೆ ಕಾಫಿ ಮಾಡಿ ಕೊಟ್ಟು ಅನ್ನಾ ಹಾಕಿದ ಮಾತ್ರಕ್ಕೆ ಅವನು ಕೆಟ್ಟವನೆನ್ನಲು ಕಾರಣವಿಲ್ಲವೆಂಬ ಅಂಶ ಚೆನ್ನಾಗಿ ಮನದಟ್ಟಾಯಿತು. ಅದು ಮನುಷ್ಯ ಮನುಷ್ಯನಿಗೆ ತೋರಿಸತಕ್ಕ ಗೌರವವೆಂದೂ, ಅದರ ವಿಚಾರದಲ್ಲಿ ಇಲ್ಲದ ದೊಡ್ಡಸ್ತಿಕೆಯನ್ನು ತೋರಿಸುವುದು ಮೂರ್ಖತನವೆಂದೂ ಅವರು ಅಂದುಕೊಂಡರು.

ಆದರೆ ಶ್ಯಾನುಭೋಗನ ಅಸಮಾಧಾನದಿಂದ ಇನಿಸ್ಪೆಕ್ಟರಿಗೆ ಉಪಾದ್ರಿ ಮೇಲೆ ಅರ್ಜಿಗಳು ಹೋದುವು. ಶ್ಯಾನುಭೋಗನಿಗೆ ವಿರೋಧವಾಗಿ ಉಪಾದ್ರು ನ್ಯಾಯಗಳನ್ನು ತೀರ್ಮಾನಮಾಡಿದ್ದುದೇ ಆ ಅರ್ಜಿಗಳಿಗೆ ಕಾರಣವಾಗಿದ್ದಿತೆಂದು ಹಿಂದೆ ಹೇಳಿದೆವು. ಇನಿಸ್ಪೆಕ್ಟರು ಉಪಾದ್ರಿಗೆ "ನಿಮ್ಮ ಸಂಸಾರದೊಂದಿಗೆ ನೀವು ಭರತಪುರಿಯಲ್ಲಿ ಇರಬೇಕು. ಪದೇ ಪದೇ ಊರಿಗೆ ಹೋಗಲು ಪ್ರಾರಂಭಿಸಿದರೆ ನಿಮಗೆ 'ಸಸ್ಪೆಂಟು ಭರತಪುರ' ಮಾಡುತ್ತೇವೆ" ಎಂಬುದಾಗಿ ಇಂಡಾರ್ಸ್ ಕೊಟ್ಟರು. ಮೊದಲು ನಾಲ್ಕು ತಿಂಗಳು ಉಪಾದ್ರು, "ಆಗಲಿ, ಹೆಂಡತಿ ಮಕ್ಕಳನ್ನು ಕರೆಸುತ್ತೇನೆ" ಎಂದುಕೊಂಡೇ ಕಾಲಹಾಕಿದರು. ಅಷ್ಟರಲ್ಲಿ ಶ್ಯಾನುಭೋಗನ ನಾರಾಯಣಿಗಳು (ಮೂಗರ್ಜಿಗಳು) ಇನಿಸ್ಪೆಕ್ಟರಿಗೆ ಜೋರಾದವು. ಇನಿಸ್ಪೆಕ್ಟರು ಯಾವ ವರುಷವೂ ಉಪಾದ್ರಹಳ್ಳಿಗೆ ಎರಡು ಸಲ ಬರದವರು, "ಅರ್ಜಿಗಳ ಕಾವಿನಿಂದ ಆ ವರುಷ ಮತ್ತೆ ಬಂದೇ ಬಿಟ್ಟರು. ಅಷ್ಟು ಹೊತ್ತಿಗೆ ಉಪಾದ್ರ ಹೆಂಡತಿ ಮಲ್ಲಿಗೆಹಳ್ಳಿಯಲ್ಲಿ ಗರ್ಭಿಣಿಯಾಗಿದ್ದುದರಿಂದ ಆ ಕಾಡುದಾರಿಯಲ್ಲಿ ಆಕೆಯನ್ನು ಕರೆದುಕೊಂಡುಹೋಗಲು ಸಾಧ್ಯವಿರಲಿಲ್ಲ ಉಪಾದ್ರು ಏನೇನೋ ನಬೂಬು ಹೇಳಿಕೊಂಡು ಮತ್ತೆ ನಾಲ್ಕು ತಿಂಗಳು ಕಳೆದರು. ಆ ವಾಯಿದೆ ಕಳೆಯುವುದರೊಳಗಾಗಿ ಶ್ಯಾನುಭೋಗನ ನಾರಾಯಣಿ ಮತ್ತೆ ಜೋರಾಯಿತು. ಮತ್ತೆ ತಮಗೆ ಬಂದ ಇಂಡಾರ್ಸಿಗೆ ಉಪಾದ್ರು ತಮ್ಮ ಹೆಂಡತಿ ಬಾಣಂತಿಯಾದುದರಿಂದ ಕರೆದುಕೊಂಡು ಬರಲು ಸಾಧ್ಯವಿಲ್ಲವೆಂದು ಹೇಳಿಬಿಟ್ಟರು. ಶ್ಯಾನುಭೋಗನಿಗೂ ಅರ್ಜಿಬರೆದು ಬರೆದು ಬೇಸರಿಕೆಯಾಯಿತು. ಅವನು ಐಜಿ ಸಾಹೇಬರಿಗೆ, "ಇನಿಸ್ಪೆಕ್ಟರಿಗೆ ಉಪಾದ್ರನ್ನು ಕಂಡರೆ ಭಯ," ಎಂದು ಅರ್ಜಿ ಬಿಟ್ಟನು. ಆಗ ಐಜಿ ಸಾಹೇಬರು ಇನಿಸ್ಪೆಕ್ಟರಿಗೆ ವಾಣ ಬಿಟ್ಟರು. ಇನಿಸ್ಪೆಕ್ಟರು ಉಪಾದ್ರಿಗೆ "ನೀವು ಈ ಹುಕುಂ ಕಂಡ

ನಾಲ್ಕು ದಿನಗಳೊಳಗಾಗಿ ನಿಮ್ಮ ಹೆಂಡತಿಯನ್ನು ಕರೆದುಕೊಂಡು ಬಂದು ಭರತಪುರಿಯಲ್ಲಿ ಸಂಸಾರ ನಡೆಯಿಸದೆ ಇದ್ದರೆ ನಿಮ್ಮನ್ನು ಸಸ್ಪೆಂಟು ಮಾಡುತ್ತೇನೆ'' ಎಂದು ಇಂಡಾರ್ಸ್ ಕೊಟ್ಟರು. ಉಪಾದ್ರು ನಿರುಪಾಯ ರಾಗಿ '' ನನ್ನ ಹೆಂಡತಿ ನನ್ನ ಮಾತನ್ನು ಕೇಳುವುದಿಲ್ಲ, ' ನೀನು ಬೇಕಾದ ಕಡೆ ಇರು. ನಾನು ಬರುವುದಿಲ್ಲ' ಎನ್ನುತ್ತಾಳೆ. ಆದುದರಿಂದ ನನಗೆ ಹೆಂಡತಿ ಇದ್ದರೂ ಇಲ್ಲದಂತೆಯೇ ಸರಿ. ನಾನು ವಿಧುರ. ನಾನು ಹೆಂಡತಿಯು ಜೊತೆಯಲ್ಲೇ ಇರಬೇಕೆಂಬುದು ಸರ್ಕಾರಿ ಹುಕುಂ ಆದರೆ ನಾನು ಇಲ್ಲೇ ಬೇರೆ ಹೆಂಡತಿಯನ್ನು ತಾಲಿ ಕಟ್ಟಿಕೊಳ್ಳಬೇಕು. ಇಲ್ಲಿರುವ ವರೆಲ್ಲಾ ಒಕ್ಕಲಿಗರು. ಬ್ರಾಹ್ಮಣನಾದ ನನಗೆ ಯಾರೂ ಹೆಣ್ಣು ಕೊಡುವು ದಿಲ್ಲ. ಅಪ್ಪಣೆಯಾಗಬೇಕು'' ಎಂದು ಬರೆದುಹಾಕಿದರು. ಇನಿಸ್ಪೆಕ್ಟರು ವಿಧಿಯಿಲ್ಲದೆ ಸುಮ್ಮನಾದರು. ಶ್ಯಾನುಭೋಗನಿಗೆ ಮಾತ್ರ ಸಮಾಧಾನ ವಾಗಲಿಲ್ಲ. ಇನಿಸ್ಪೆಕ್ಟರು ಆ ರೀತಿ ಇಂಡಾರ್ಸ್ ಕೊಟ್ಟಿರುವುದೂ ಅದಕ್ಕೆ ಪ್ರತಿಯಾಗಿ ಉಪಾದ್ರು ಹಾಗೆ ಪ್ರತ್ಯುತ್ತರ ಕೊಟ್ಟಿರುವುದೂ ಅವನಿಗೆ ತಿಳಿದಿರಲಿಲ್ಲ. '' ತಾನು ಎಷ್ಟೇ ನಾರಾಯಣಿಗಳನ್ನು ಬಿಟ್ಟರೂ ಇನಿಸ್ಪೆಕ್ಟರು ಉಪಾದ್ರ ಪರ ವಹಿಸಿ ಸುಮ್ಮನೆ ಕೂತಿದ್ದಾರೆಲ್ಲಾ'' ಎಂಬುದೇ ಅವನ ಅಸಮಾಧಾನವಾಗಿತ್ತು. ಅಲ್ಲದೆ '' ಈ ಉಪಾದ್ರು ಪದೇ ಪದೇ ಊರಿಗೆ ಹೋಗೋದ್ನ ತಪ್ಪಿಸ್ತೇನೆ'' ಎಂಬುದಾಗಿ ಊರಿನವರ ಎದುರಿಗೆ ಜಂಬ ಕೊಚ್ಚಿಕೊಂಡಿದ್ದುದರಿಂದ ತನ್ನ ಮೂಗು ಉಳಿಯುವುದಕ್ಕಾಗಿ ಯಾದರೂ ಈ ಉಪಾದ್ರನ್ನು ನಾಲ್ಕು ದಿನ ಆಚೆ ಈಚೆ ಅಲ್ಲಾಡದಂತೆ ಭರತಪುರಿಯಲ್ಲಿ ಕೊಳೆಹಾಕಬೇಕೆಂದು ಅವನು ಸರ್ವಸಾಹಸವನ್ನೂ ಮಾಡುತ್ತಿದ್ದನು. ಈ ಉದ್ದೇಶದಿಂದ ಶ್ಯಾನುಭೋಗನು ತಾಲ್ಲೂಕ್ ಹೆಡ್‌ಕ್ವಾರ್ಟರಿಗೆ ಹೋಗಿ ಇನಿಸ್ಪೆಕ್ಟರನ್ನು ಅವರ ಕಛೇರಿಯಲ್ಲಿ ಕಂಡನು. ಶ್ಯಾನುಭೋಗನ ಅಹವಾಲುಗಳನ್ನೆಲ್ಲಾ ಕೇಳಿ ಸಾಹೇಬರು '' ಉಪಾದ್ರು ಹೆಂಡತಿ ಅವನ ಮಾತು ಕೇಳೋದಿಲ್ಲ. ಅವನಿರೋ ಮಲೆನಾಡಿಗೆ ಅವಳು ಬರುವುದಿಲ್ಲವಂತೆ. ನಿಮ್ಮ ಊರಿನಲ್ಲಿ ಅವನಿಗೆ ಬೇಕಾದ್ರೆ ಬೇರೆ ಮದುವೆ ಮಾಡಿಸಿ. ಹೆಣ್ಣು ಗೊತ್ತುಮಾಡಿ. ಅವನನ್ನು ನಾನು ಒಪ್ಪಿಸುತ್ತೇನೆ. ಸಂಸಾರದೊಂದಿಗೆ ಅಲ್ಲಿಯೇ ಇರಲಿ'' ಎಂದರು. ಶ್ಯಾನುಭೋಗನು ಕಣ್ಣು ಕಣ್ಣು ಬಿಡುತ್ತಾ '' ನಮಾಜ ಮಾಡೋಕೆ

ಹೋದ್ರೆ ಮಸೀತಿ ತಲೇಮೇಲೆ ಬಿತ್ತು. ಒಳ್ಳೇ ಗ್ರಹಚಾರ. ಸದ್ಯ ಬೆಳೆದು ನಿಂತಿರೋ ನನ್ನ ಮಗಳಿಗೆ ವರ ಸಿಕ್ಕಿದರೆ ಸಾಕಾಗಿದೆ. ಇವರ ಮದ್ವೆ !'' ಎಂದುಕೊಂಡು ಇನಿಸ್ಪೆಕ್ಟರನ್ನು ಬೈದುಕೊಂಡು ಊರಿಗೆ ಬಂದು, ಉಪಾಧ್ರಿಗೂ ಅವರ ಹೆಂಡತಿಗೂ ಉಂಟಾಗಿದ್ದ ತಿಕ್ಕಾಟವನ್ನು ಪ್ರಚಾರ ಮಾಡುತ್ತಾ; ಇದ್ದುದರಲ್ಲಿ ಸ್ವಲ್ಪ ಸಮಾಧಾನ ಹೊಂದಿದರು.

ಅಲ್ಲಿಗೆ ಉಪಾಧ್ರಿಗೆ ಶ್ಯಾನುಭೋಗನ ಕಾಟ ತಪ್ಪಿತು. ಉಪಾಧ್ರು ಹುಡುಗರನ್ನು ಹೊಡೆಯುವುದು ಹೊರತು ಅವರ ಮೇಲೆ ಜನರಿಗೆ ಯಾವ ಆಕ್ಷೇಪಣೆಯೂ ಇರಲಿಲ್ಲ. ಆದರೆ, ಹೊಡೆಯದೆ ಇದ್ದರೆ ಹುಡುಗರಿಗೆ ಪಾಠ ಹತ್ತುವುದಿಲ್ಲವೆಂಬ ನಂಬಿಕೆ ಗ್ರಾಮಸ್ಥರಿಗೂ ಚೆನ್ನಾಗಿದ್ದಿತು. ಆ ವರುಷದ ಉಪಾಧ್ರ ಸ್ಕೂಲಿನಲ್ಲಿ ಹುಡುಗರು ಬಹಳ ಚೆನ್ನಾಗಿ ಲೋವರ್ ಸೆಕೆಂಡರಿ ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದರು. ಶ್ಯಾನುಭೋಗರ ಮಗನಿಗೂ ತೇರ್ಗಡೆಯಾಯಿತು. ಶ್ಯಾನುಭೋಗರು ಉಪಾಧ್ರ ಮೇಲಿನ ಕತ್ತಿಯನ್ನು ನೆಲದ ಮೇಲಿಟ್ಟು ಸುಮ್ಮನಾದರು. ಹೀಗೆ ಉಪಾಧ್ರು ಒಬ್ಬಂಟಿಗರಾಗಿಯೇ ಕೆಲವು ವರ್ಷ ಭರತಪುರದ ಹಳ್ಳಿಯಲ್ಲಿದ್ದು ಮತ್ತೆ ಇನಿಸ್ಪೆಕ್ಟರನ್ನು ಮರುಳುಮಾಡಿ ಮಲ್ಲಿಗೆಹಳ್ಳಿಗೆ ವರ್ಗವನ್ನು ಹೊಂದಿದರು. ಹೀಗೆ ತಿಪ್ಪಯ್ಯ' ಉಪಾಧ್ರು ಮಲ್ಲಿಗೆಹಳ್ಳಿಗೆ ಎರಡನೆಯ ಸಲ ಬಂದಕೂಡಲೇ ಸುದರ್ಶನನೂ ಸ್ಕೂಲಿಗೆ ಸೇರಿದನು.

## ೧೦. ಉಪಾಧ್ರ ಸಾದಿಲ್ವಾರು ಲೆಕ್ಕ

ಮಲ್ಲಿಗೆಹಳ್ಳಿ ತಮ್ಮ ಊರಿನ ಸ್ಕೂಲೇ ಆದರೂ ಉಪಾಧ್ರಿಗೆ ಆ ಸ್ಕೂಲನಲ್ಲಿ ಹಿಂದ ಇದ್ದಷ್ಟು ಉತ್ಸಾಹವಿರಲಿಲ್ಲ. ಬರುತ್ತಿದ್ದ ೧೦ ರೂಪಾಯಿ ಸಂಬಳ ಸಾಕಾಗುತ್ತಿರಲಿಲ್ಲ. ಮನೆಯ ತುಂಬ ಮಕ್ಕಳಾಗಿದ್ದರು. ಸರ್ಕಾರದವರು ಒಂದು ರೂಪಾಯನ್ನು ಸಹ ಬಡ್ತಿ ಕೊಟ್ಟಿರಲಿಲ್ಲ. ಉಪಾಧ್ರು ಮೊದಲಿನಂತೆ ಹುಡುಗರನ್ನು ಹೊಡೆಯುತ್ತಿದ್ದರು. ಮೊದಲಿನಂತೆ ಪಾಠ ಹೇಳುತ್ತಿದ್ದರು. ಆದರೆ ಆಗ ಅವರಿಗೆ ಇದ್ದ ಹುರುಪೂ

ತಾನೇ ಸ್ಕೂಲೆಂಬ ತಾದಾತ್ಮ್ಯ ಭಾವವೂ ಈಗ ಇರಲಿಲ್ಲ. ಅವರು ಒಬ್ಬಂಟಿಗರಾಗಿ, ಹಾಸನದಲ್ಲಿ ಹಿಂದೆ ಇನ್‌ಸ್ಪೆಕ್ಟರನ್ನು ಎದುರಿಗೆ ಕಂಡಾಗ ಥಳಕು ಮಾಡಿಕೊಂಡು ಬಂದಿದ್ದಾಗ ಬರುತ್ತಿದ್ದ ೧೦ ರೂಪಾಯೇ ಈಗಲೂ ಬರುತ್ತಿತ್ತು. ಆದರೆ ಈಗ ನಾಲ್ಕು ಹೆಣ್ಣು ಒಂದು ಗಂಡು. ಸಂಸಾರ ಹೆಚ್ಚಾಗಿದ್ದಿತು. ದೇವರು ಸಂಸಾರವನ್ನು ಒಂದಕ್ಕೆ ನಾಲ್ಕರಷ್ಟು ಹೆಚ್ಚಿಸಿ ಉತ್ಪತ್ತಿಯನ್ನು ಮಾತ್ರ ಮೊದಲಿದ್ದಂತೆಯೇ ಇಟ್ಟಿದ್ದುದರಿಂದ ಉಪಾಧ್ರಿಗೆ ದೇವರ ಮೇಲೂ ಮನುಷ್ಯನ ಮೇಲೂ ಕೋಪ ಹೆಚ್ಚಾಗಿದ್ದಿತು.

ಅನಂತುವಿನ ಅಕ್ಕನ ಮಗ ಸುದರ್ಶನನಿಗೆ ಸ್ಕೂಲಿಗೆ ಹೋಗುವುದು ಸೇರುತ್ತಿರಲಿಲ್ಲ. ಅವನು ಸ್ಕೂಲಿಗೆ ಸೇರಿದ ಮೊದಲನೆಯ ವಾರದಲ್ಲಿಯೇ ದಿವಸಕ್ಕೆ ಒಂದರಂತೆ ಸ್ಲೇಟುಗಳನ್ನು ಒಡೆಯಲು ಪ್ರಾರಂಭಿಸಿದನು. ಸಾಧಾರಣವಾಗಿ ಮನೆಯವರು ಯಾರಾದರೂ ಸ್ಕೂಲಿನವರೆಗೆ ಕರೆದುಕೊಂಡು ಬಂದು ಬಿಟ್ಟುಹೋಗದಿದ್ದರೆ ಅವನು ಮನೆಯಿಂದ ಹೊರಟವನು ಸ್ಕೂಲಿಗೆ ಹೊಗದೆ ದಾರಿಯ ಆಂಜನೇಯನ ಗುಡಿಯಲ್ಲಿಯೋ, ಅರಳೀ ಮರದ ನೆರಳಿನಲ್ಲಿಯೋ ಅಥವಾ ನಾಲೆಯ ಮೆಟ್ಟಲುಗಳ ಮೇಲೋ ಆಟವಾಡಿಕೊಂಡು ಸ್ಕೂಲನ್ನು ಬಿಟ್ಟಾಗ ಉಳಿದ ಹುಡುಗರ ಜತೆಯಲ್ಲಿ ಮನೆಗೆ ಬರುತ್ತಿದ್ದನು. ಒಂದು ದಿನ ಮಳೆಗಾಲ, ಅನಂತನು ಸುದರ್ಶನನ ಕೈಯಲ್ಲಿ ಮುರುಕು ಹಲಗೆಯನ್ನೂ ಬಳಾಪಿನ ಚೂರನ್ನೂ ಕೊಟ್ಟು ಅವನನ್ನು ಗುದ್ದಿ ಸ್ಕೂಲಿಗೆ ಅಟ್ಟಿದನು. ಜತೆಯ ಹುಡುಗರು ಮುಂದೆ ಹೋಗುತ್ತಿರಲು ಸುದರ್ಶನನು, "ನನ್ನ ಬಳಪ ಹಾಳಾಯ್ತು. ಇನ್ನೊಂದು ತೆಕೊಂಡು ಬರ್‍ತೀನಿ" ಎಂದು ಹೇಳಿ ಮನೆ ಕಡೆ ದೌಡಾಯಿಸಿದನು. ಹುಡುಗರು ಕಣ್ಮರೆಯಾದಕೂಡಲೇ, ಸ್ಕೂಲಿನ ದಾರಿಯಲ್ಲಿದ್ದ ಕೋಟೆ ಅಗಳಿನ ಕಡೆ ನೀರು ಹರಿಯಲು ಮಾಡಿದ್ದ ಚರಂಡಿಯಲ್ಲಿ ಅಡಗಿಕೊಂಡನು. ಆ ಚರಂಡಿಯ ಮೇಲೆ ಕಲ್ಲುಗಳನ್ನು ಹರಡಿ ತಿರುಗಾಡುವ ರಸ್ತೆಯನ್ನು ಮಾಡಿದ್ದರು. ಇದ್ದಕ್ಕಿದ್ದಂತೆ ಜೋರಾಗಿ ಮಳೆ ಬರಲು ಪ್ರಾರಂಭವಾಯಿತು. ಸುದರ್ಶನನಿಗೆ ಮೊದಲು ಮಳೆಯಿಂದ ತೊಂದರೆ ಆಗಲಿಲ್ಲ. ಚರಂಡಿ ಬಂದೂಬಸ್ತಾಗಿ ಅದರ ಮೇಲೆ ಗಾಡಿಗಳು ಕೂಡ ಓಡಾಡಲು ಒಳ್ಳೆ ಅನುಕೂಲವಾಗುವಂತೆ ಕಟ್ಟಿದ್ದುದರಿಂದ ಮೇಲಿನಿಂದ

ನೀರು ಒಳಕ್ಕೆ ಸೋರುವ ಭಯವಿರಲಿಲ್ಲ. ಆದರೆ, ಆ ಚರಂಡಿಯನ್ನು ಕಟ್ಟಿದ್ದುದು ತುರುಮಂದೆಯ ಸುತ್ತಮುತ್ತಲಿನ ಎತ್ತರವಾದ ಹೊಲಗಳ ನೀರೆಲ್ಲಾ ಹರಿದು ಬಾದು ಅಗಳಿಗೆ ಸೇರುವುದಕ್ಕಾಗಿ. ಮಲ್ಲಿಗೆಹಳ್ಳಿಯಲ್ಲಿ ಸಾಮಾನ್ಯವಾಗಿ ಮಳೆ ಬಂದರೆ ಬರುವಂತೆ, ಅಡ್ಡಮಳೆ ಪಟಪಟನೆ ಬಾಣಗಳೋಪಾದಿಯಲ್ಲಿ ಒಂದೇ ಏಟಿಗೆ ಬಹು ಜೋರಾಗಿಯೇ ಬಂದು ಬಿಟ್ಟಿತು. ಒಂದೆರಡು ಗಳಿಗೆಯೊಳಗಾಗಿ ನೀರು ದಡದಡನೆ ಚರಂಡಿಯ ಕಡೆಗೆ ನುಗ್ಗಲಾರಂಭಿಸಿತು. ಮೊದಲು ಮೊದಲು ಸುದರ್ಶನನು ಚರಂಡಿ ಯನ್ನು ಬಿಟ್ಟು ಹೋಗಬೇಕೆಂದು ಯೋಚಿಸಿದನು. ಆದರೆ ಹೊರಗೆ ಮಳೆ ಜೋರಾಗಿ ಸುರಿಯುತ್ತಿತ್ತು. ಚರಂಡಿಯಲ್ಲಿ ನೀರು ವೇಗವಾಗಿ ಬರಲಾರ ದೆಂದು ತಿಳಿದು ಅವನು ಅಲ್ಲಿಯೇ ಕುಳಿತನು. ಒಂದು ಗಳಿಗೆಯೊಳಗೆ ಚರಂಡಿಯಲ್ಲಿ ನೀರು ಅರ್ಧಕ್ಕೆ ಹರಿಯುತ್ತಿತ್ತು. ಸುದರ್ಶನನು ಎದ್ದು ನಿಲ್ಲುವುದಕ್ಕೆ ಪ್ರಯತ್ನಿಸಿದನು. ಆದರೆ ಚರಂಡಿಯ ಎತ್ತರವು ಸಾಲದುದ ರಿಂದ ಅವನು ಬಗ್ಗಿಕೊಂಡೇ ನಿಂತಿರಬೇಕಾಯಿತು. ಅವನ ಟೋಪಿ ನೀರಿಗೆ ಬಿದ್ದು ವೇಗವಾಗಿ ದೋಣಿಯಂತೆ ತೇಲಿಕೊಂಡು ಹೋಗಲು ಪ್ರಾರಂಭಿಸಿತು.

ಟೋಪಿಯನ್ನು ತೆಗೆದುಕೊಳ್ಳಲು ಸುದರ್ಶನನು ಮುಂದೆ ನುಗ್ಗಿ ದನು. ನೀರಿನ ನಡುವೆ ಚರಂಡಿಯಲ್ಲಿ ಬಿದ್ದಿದ್ದ ಒಂದು ಕಲ್ಲು ಅವನ ಕಾಲಿಗೆ ತಗಲಿತು. ಸುದರ್ಶನನು ನೆಲದ ಮೇಲೆ ಮುಗ್ಗರಿಸಿದನು. ನೀರು ಅವನ ಮೇಲೆ ಹರಿದುಕೊಂಡು ಹೋಗಲು ಪ್ರಾರಂಭವಾಯಿತು. ಸುದರ್ಶನನಿಗೆ ಅಸಾಧ್ಯವಾದ ಭಯವುಂಟಾಯಿತು. ಅಂಜುಪುರುಕನಾದ ಹುಡುಗನಾಗಿದ್ದರೆ ಅವನು ಆ ಚರಂಡಿಯಿಂದ ಜೀವದೊಡನೆ ಹೊರಗೆ ಬರುತ್ತಿರಲಿಲ್ಲ. ಚರಂಡಿಯು ಸುಮಾರು ಇಪ್ಪತ್ತು ಅಡಿ ಇದೆ. ಸುದರ್ಶನ ಅದರ ಒಂದು ಕೊನೆಯಿಂದ ಸುಮಾರು ನಾಲ್ಕು ಅಡಿ ಒಳಗೆ ಇದ್ದನು. ನೀರು ಅವನ ಎದುರುಕಡೆಯಿಂದ ನುಗ್ಗುತ್ತಿತ್ತು. ನೀರಿನ ಆರ್ಭಟ ಬಹು ಜೋರಾಗಿದ್ದಿತು. ಪ್ರವಾಹ ಎದುರು ಕಡೆಯಿಂದ ಬರುತ್ತಿದ್ದುದರಿಂದ ನಾಲ್ಕು ಅಡಿ ದಾಟುವುದೂ ಸಾಧ್ಯವಿರಲಿಲ್ಲ. ಚರಂಡಿ ಯನ್ನು ದಾಟಬೇಕಾದರೆ ಪ್ರವಾಹದ ವೇಗಕ್ಕೆ ಅನುಗುಣವಾಗಿ, ಪ್ರವಾಹದ ಜತೆಯಲ್ಲಿ ಹಿಂದುಮುಂದಾಗಿ ೧೬ ಅಡಿ ಹೋಗಬೇಕಾಗಿತ್ತು.

ಚರಂಡಿಯನ್ನು ದಾಟಲು ಅದರ ಹೊರತು ಬೇರೆ ದಾರಿಯಿರಲಿಲ್ಲ. ಸುದರ್ಶನ ಹಗಲು ಹೊತ್ತಿನಲ್ಲಿಯೂ ಮಳೆಯಿಲ್ಲದಾಗಲೂ ಯಾವಾಗಲೂ ಆ ಚರಂಡಿಯನ್ನು ದಾಟಿರಲಿಲ್ಲ. ಅವನು ಅದರ ಒಳಕ್ಕೆ ಯಾವಾಗಲೂ ಹೋಗಿಯೇ ಇರಲಿಲ್ಲ. ಈಗ ಆ ಮಾರ್ಗವನ್ನು ಹೊಟ್ಟೆ ಮೇಲೆ ತೆವಳಿಕೊಂಡು ನೀರಿನ ಜತೆಯಲ್ಲಿ ಹೋಗಬೇಕಾದರೆ ಅವನಿಗೆ ಬಹಳ ಭಯವಾಯಿತು. ಸುದರ್ಶನನಲ್ಲದೆ ಬೇರೆ ಹುಡುಗರಾಗಿದ್ದರೆ ಅವರು ಅಲ್ಲಿಯೇ ಭಯದಿಂದ ನೀರು ಕುಡಿದು ಸಾಯುತ್ತಿದ್ದರು. ಆದರೆ ಸುದರ್ಶನ ಧೈರ್ಯಶಾಲಿಯಾದುದರಿಂದ ಹೊರಟೇಬಿಟ್ಟನು. ನೀರಿನಲ್ಲಿದ್ದ ಎರಡು ಮುಳ್ಳುಗುತ್ತಿಗಳು ಸುದರ್ಶನನ ಕಾಲಿಗೆ ಚುಚ್ಚಿ ನೂರಾರು ಸೂಜಿಗಳಂತೆ ಹಿಂಸಿಸಿದವು. ಸುದರ್ಶನ ಅದಾವುದನ್ನೂ ಗಮನಿಸದೆ ನುಗ್ಗಿ ಹೊರಕ್ಕೆ ಬಂದನು. ಸುದರ್ಶನನ ಈ ಸಾಹಸ ಗೊತ್ತಾದಕೂಡಲೇ ಹುಡುಗರು ಅವನನ್ನು ಬಹಳ ಹೊಗಳಿದರು. ಅವನಿಗೆ ಅವರ ಧೈರ್ಯದಲ್ಲಿ ಬಹಳ ಮೆಚ್ಚುಗೆಯಾಯಿತು.

ಸುದರ್ಶನ ಅಕ್ಷರಾಭ್ಯಾಸದಲ್ಲಿಯೇ ತನ್ನ ಉಪಾಧ್ಯಾಯರಿಗೆ ಬಹಳ ಕಷ್ಟ ಕೊಟ್ಟನು. ಅವನು ಅಕ್ಷರಗಳನ್ನೆಲ್ಲಾ ತಲೆಕೆಳಗಾಗಿ ಬರೆಯುತ್ತಿದ್ದನು. ಉಪಾದ್ರು ತಲೆ ಹೊಡೆದುಕೊಂಡುದೆಲ್ಲಾ ವ್ಯರ್ಥವಾಯಿತು. ಕೊನೆಗೆ ಅದೇ 'ಸರಿಹೋಗುವುದೆಂದು ಸುಮ್ಮನಾದರು. ಸುದರ್ಶನ ಮಲ್ಲಿಗೆಹಳ್ಳಿಯ ಸ್ಕೂಲಿಗೆ ಸೇರಿದ ದಿನವೇ ಒಂದು ವಿನೋದ ನಡೆಯಿತು. ಸ್ಕೂಲಿಗೆ ಹೋಗುವುದಕ್ಕೆ ಮುಂಚೆ ಸುದರ್ಶನ ಒಂದು ದುಂಬಿಯನ್ನು ಹಿಡಿದು ಅದರ ಕಾಲಿಗೆ ದಾರವನ್ನು ಕಟ್ಟಿ ಜೇಬಿನಲ್ಲಿಟ್ಟುಕೊಂಡಿದ್ದನು. ಅವನನ್ನು ಕರೆದುಕೊಂಡು ಬಂದು ಅನಂತು "ಕಳಾಸಿಗೆ ಸೇರಿಸಿ" ಎಂದು ಉಪಾದ್ರಿಗೆ ಹೇಳುತ್ತಿರುವಾಗ ದುಂಬಿಯು ಜೈ ಎಂದು ಶಬ್ದ ಮಾಡುತ್ತಾ ಜೇಬಿನಿಂದ ಹೊರಕ್ಕೆ ಹೊರಟಿತು. ದಾರದ ಒಂದು ತುದಿಯನ್ನು ಸುದರ್ಶನ ತನ್ನ ಗುಂಡಿಗೆ ಕಟ್ಟಿದ್ದುದರಿಂದ, ದುಂಬಿ ಅವನ ತಲೆಯ ಸುತ್ತಾ ಹಾರಲು ಪ್ರಾರಂಭಿಸಿತು. ಅದನ್ನು ನೋಡಿ ಹುಡುಗರೆಲ್ಲಾ ಘೊಳ್ಳೆಂದು ನಕ್ಕರು. ಉಪಾದ್ರಿಗೂ ಮೊದಲು ನಗು ಬಂತು. ಆದರೆ ಹುಡುಗರೆಲ್ಲಾ ನಕ್ಕುದನ್ನು ನೋಡಿ ಅವರಿಗೆ ಸ್ವಲ್ಪ ಸಿಟ್ಟು ಬಂತು. ಅವರು ಒಂದು ಕಡೆಯಿಂದ ಎಲ್ಲಾ ಹುಡುಗರಿಗೂ ಸ್ಲೇಟಿನ ಕಟ್ಟಿನಲ್ಲಿ

ಒಂದೊಂದು ಬಿಗಿಯುತ್ತಾ ಬಂದರು. ಸುದರ್ಶನ "ನೋಡಿ ನಿಮಗೆ ಹೇಗಾಯಿತು" ಎಂಬಂತೆ, ಹುಡುಗರಿಗೆಲ್ಲಾ ಒಂದೊಂದು ಬಾಳೆಹಣ್ಣು ಅಥವ ಪೆಪರ್‌ಮೆಂಟು ಹಂಚಿಸುವವನಂತೆ ಹುಡುಗರನ್ನೂ ಮೇಷ್ಟರನ್ನೂ ಸಂತೋಷದಿಂದಲೇ ನೋಡುತ್ತಿದ್ದನು. ಉಪಾದ್ರು ಅವನಿಗೂ ಒಂದು ಬಿಟ್ಟರು. ಹುಡುಗರು ಏಟಿನ ಮಧ್ಯದಲ್ಲಿಯೇ ನಗುತ್ತಲೂ ಇದ್ದರು. ಅಂತೂ ಸ್ಕೂಲಿಗೆ ಆವತ್ತು, ಕಟ್ಟಿದ್ದ ಗಂಟಲು ಬಿಟ್ಟಿತು. ಅಲ್ಲಿಂದ ಮುಂದೆ ಸ್ಕೂಲಿನಲ್ಲಿ ಯಾವಾಗಲೂ ಗದ್ದಲವೇ ಹೆಚ್ಚಾಯಿತು.

ಈ ಮಧ್ಯೆ ಉಪಾದ್ರು ಮೈಸೂರಿಗೆ ಹೋಗಿ ಸರ್ಕಾರದವರ ಅಪ್ಪಣೆ ಯಂತೆ ಎಲ್ಲೋ ಅದ್ಯಾವುದೋ ಟ್ರೈಯನಿಂಗ್ ಮಾಡಿಕೊಂಡು ಬಂದರು. ಬಂದವರೇ ಪಾಠಕ್ರಮ ಡೈರಿ ಚರ‍್ಯಪತ್ರಿಕೆ, ಬ್ರಷ್‌ವರ್ಕ್ ಶುಚಿತ್ವ ಕಿಂಡರ್ ಗಾರ್ಟನ್ ಅದು ಇದು ಎಂಬುದಾಗಿ ಏನೇನೋ ಪ್ರಾರಂಭಿಸಿದರು. ಎಲ್ಲಾದಕ್ಕಿಂತ ಮುಖ್ಯವಾಗಿ ಅವರು ಹುಡುಗರಿಗೆ ಏಳುವ ಹೊತ್ತಿಗೆ ನೆತ್ತಿಯ ಮೇಲೆ ನಾಮ ಏರಿಸದೆ ಬರಕೂಡದೆಂದು ಕಟ್ಟಾಜ್ಞೆ ಮಾಡಿದ್ದರು. ಮೂರು ದಿವಸಕ್ಕೆ ಒಂದು ಸಲ ಅವರು ಎಲ್ಲಾ ಹುಡುಗರನ್ನೂ ಕರೆದುಕೊಂಡು ಹೋಗಿ ಹೊಳೆಯಲ್ಲಿಯೂ ನಾಲೆಯಲ್ಲಿಯೂ ಮುಳುಗಿಸುತ್ತಿದ್ದರು. ಶುಚಿತ್ವದಲ್ಲಿಯಂತೂ ಮಲ್ಲಿಗೆಹಳ್ಳಿಯ ಹುಡುಗರಿಗೆ ಸಮಾನವಾದವರು ಯಾವ ಸ್ಕೂಲಿನಲ್ಲಿಯೂ ಇಲ್ಲವೆಂದು ಇನಿಸ್ಪೆಕ್ಟರೇ ಹೇಳುತ್ತಿದ್ದರು.

ಸುದರ್ಶನ ಪಾಠದಲ್ಲಿ ಹಿಂದಾಗಿದ್ದರೂ ಆಟ ಚೇಷ್ಟೆಗಳಲ್ಲಿ ಬಹಳ ಮುಂದಾಗಿದ್ದನು. ಆ ಆಟಗಳನ್ನು ಉಪಾದ್ರು ಮೈಸೂರಿನಲ್ಲಿ ಹೊಸದಾಗಿ ಕಲಿತುಕೊಂಡು ಬಂದಿದ್ದುದರಿಂದ, ಅವುಗಳನ್ನು ಆಡುವ ಉತ್ಸಾಹದಲ್ಲಿ ಸುದರ್ಶನ ಉಪಾದ್ರ ಪ್ರೇಮಕ್ಕೆ ಪಾತ್ರವಾದನು. ಆದರೆ ಅವನ ಉತ್ಸಾಹ ಆಟಕ್ಕೇ ಮುಕ್ತಾಯವಾಗಿತ್ತು. ಈ ಆಟಗಳ ಪೈಕಿ ಕಳ್ಳನ ಆಟ ಒಂದು. ಹುಡುಗರೆಲ್ಲಾ ಸುತ್ತಾ ಬಗ್ಗಿಕೊಂಡು ದುಂಡಾಗಿ ಕುಳಿತಿರುವುದು. ತಳವಾರನೆನಿಸಿಕೊಳ್ಳುವ ಒಬ್ಬ ಕೈಯಲ್ಲಿ ದೊಣ್ಣೆ ಹಿಡಿದುಕೊಂಡು ಅವರ ಸುತ್ತಾ ಸುತ್ತುತ್ತಾ ಆ ದೊಣ್ಣೆಯಿಂದ ಒಬ್ಬನಿಗೆ ತಿವಿಯುವುದು; ತಿವಿಸಿಕೊಂಡವನು ಎದ್ದು ತಳವಾರನ ಅಂಗಿಯನ್ನು ಹಿಡಿದುಕೊಂಡು ಅವನ ಹಿಂದೆ ಓಡುವುದು; ಅನಂತರ ಮತ್ತೊಬ್ಬನಿಗೆ ತಿವಿಯುವುದು. ಅವನು

ಏಳುವುದು. ಹೀಗೆ ಒಬ್ಬನ ಹಿಂದೆ ಒಬ್ಬ, ಹಿಂದಲವನ ಅಂಗಿಯನ್ನು ಹಿಡಿದುಕೊಂಡು ಎಲ್ಲರೂ ಒಟ್ಟಾಗಿ

ತಳವಾರ ಬರುವಾ ಆಳನು ಕೂಡಿ
ಮುಂದಿಯೆಲ್ಲ ವೇಳಿರಿ ಹಿಂದವನ ಸೇರಿ
ಮುಂದೆ ಮುಂದೆ ಮುಂದಕ್ಕೆ
ಹಿಂದೆ ಹಿಂದೆ ಹಿಂದಕ್ಕೆ
ನೆಟ್ಟನೊಂದು ಗಂಟೆ ದಿಟ್ಟರಾಗಿ ಹೋಗಿ
ತಳವಾರ ಬರುವಾ ಆಳನು ಕೂಡಿ

ಈ ರೀತಿ ಹೇಳಿಕೊಂಡು ಹುಡುಗರು ಸುತ್ತಾ ಒಬ್ಬರ ಹಿಂದೆ ಒಬ್ಬರು ತಿರುಗುತ್ತಿದ್ದರು. ಈ ಆಟದಲ್ಲಿ ಯಾವಾಗಲೂ ಸುದರ್ಶನನೇ ತಳವಾರನಾಗುತ್ತಿದ್ದನು. ಅವನು ಬಹಳ ಬಲವಾಗಿ ಓಡುತ್ತಿದ್ದುದರಿಂದ, ಅವನ ಹಿಂದಿನ ಹುಡುಗರಿಗೆ ಅವನನ್ನು ಅನುಸರಿಸುವುದೇ ಕಷ್ಟವಾಗುತ್ತಿದ್ದಿತು. ಹುಡುಗರು ಅವನ ವೇಗವನ್ನು ತಾಳಲಾರದೆ ಹಣ್ಣೆಲೆಗಳು ಮರದಿಂದ ಉದುರುವಂತೆ ಕೆಳಕ್ಕೆ ಬೀಳುತ್ತಿದ್ದರು. ಒಂದು ಸಲ ತಳವಾರ ಹುಡುಗರೊಂದಿಗೆ ಓಡುತ್ತಿರುವಾಗ ಅವನ ವೇಗದಲ್ಲಿಯೂ ಅವನ ಜೋರಿನಲ್ಲಿಯೂ ದೊಣ್ಣೆಯು ಉಪಾಧ್ಯಾರಿಗೆ ತಗಲಿತು. ಸುದರ್ಶನ ಇತರ ಹುಡುಗರನ್ನು ದೊಣ್ಣೆಯಿಂದ ತಿವಿಯುವಂತೆ ತನ್ನನ್ನೂ ತಿವಿದನೆಂದು ಉಪಾದ್ರು ತಿಳಿದು ಸುದರ್ಶನನನ್ನು ಕಿವಿಹಿಡಿದು ನಿಲ್ಲಿಸಿ ಅಲ್ಲಿಂದ ಮುಂದೆ ಎರಡು ದಿನ ಸುದರ್ಶನ ತಳವಾರನ ಆಟಕ್ಕೆ ಸೇರಕೂಡದೆಂದು ಆಜ್ಞೆ ಮಾಡಿದರು.

ಉಪಾದ್ರು ಹುಡುಗರಿಗೆ ಹೇಳಿಕೊಡುತ್ತಿದ್ದ ಮತ್ತೊಂದು ಆಟ ಗಡಿಯಾರದ ಆಟ. ಈ ಆಟ ಒಳ್ಳೆಯ ವಿಚಿತ್ರವಾಗಿದ್ದಿತು. ಅದು ಕೂಡ ಉಪಾದ್ರು ಹೊಸದಾಗಿ ಕಲಿತ ಕಿಂಡರ್‌ಗಾರ್ಟನ್ ಆಟಗಳ ಕ್ರಮಗಳಿಗೆ ಸೇರಿದುದು. ಉಪಾದ್ರು ಹುಡುಗರನ್ನೆಲ್ಲಾ ಸುತ್ತಾ ನಿಲ್ಲಿಸಿಕೊಂಡು ಈ ರೀತಿ ಹೇಳಿಕೊಡುತ್ತಿದ್ದರು. "ದೊಡ್ಡ ಗಡಿಯಾರಂ" ಟೀಕ್ ಟೀ-ಕ್ ಟ್ಯಾ-ಕ್ ಟ್ಯಾ-ಕ್ ಟೀಕ್ ಟ್ಯಾಕ್ ಟೀಕ್ ಟಾಕ್; ಸಣ್ಣ ಗಡಿಯಾರಂ ಟೀಕ್ ಟೀಕ್ ಟ್ಯಾಕ್ ಟ್ಯಾಕ್ ಟ್ಯಾಕ್ ಟೀಕ್ ಟೀಕ್ ಟ್ಯಾಕ್ ಟ್ಯಾಕ್ ಟೀಕ್‌ಟೀಕ್ ಟ್ಯಾಕ್‌ಟ್ಯಾಕ್. ಕೈಗಡಿಯಾರಂ ಟಿಕಿಟಿಕಿಟಿಕಿಟಿಕಿ ಟಿಕಿ ಟಿಕಿ ಟಿಕಿ ಟಿಕಿ ಕ್‌ಕ್‌ಕ್‌ಕ್‌ಕ್. ಉಪಾದ್ರು ದೊಡ್ಡ ಗಡಿಯಾರಂ, ಚಿಕ್ಕ

ಗಡಿಯಾರಂ, ಕೈಗಡಿಯಾರಂ ಎನ್ನುವುದು, ಹುಡುಗರು ಟಿಕ್ ಟ್ಯಾಕ್ ಟೀಕ್‌ಟೀಕ್ ಟ್ಯಾಕ್‌ಟ್ಯಾಕ್ ಟಿಕಟಿಕ ಎನ್ನುವುದು ಇದೇ ಆಟದ ಕ್ರಮ ವಾಗಿದ್ದಿತು.

ಒಂದು ದಿವಸ ಉಪಾದ್ರು ಸ್ಕೂಲಿಗೆ ಬರುವುದು ಸ್ವಲ್ಪ ಸಾವಕಾಶ ವಾಯಿತು. ಸುದರ್ಶನನು ಹುಡುಗರನ್ನೆಲ್ಲಾ ಸುತ್ತಾ ನಿಲ್ಲಿಸಿಕೊಂಡು ಗಡಿಯಾರದ ಆಟವನ್ನು ಆಡಿಸುತ್ತಿದ್ದನು. ಸ್ಕೂಲಿನಲ್ಲೆಲ್ಲಾ ಟಿಕ್‌ಟಿಕ್ ಶಬ್ದ ತುಂಬಿಹೋಗಿತ್ತು. ಉಪಾದ್ರು ಅರ್ಧ ಫರ್ಲಾಂಗು ದೂರದಲ್ಲಿ ಬರುತ್ತಿರುವಾಗಲೇ ಅವರಿಗೆ ಟಿಕಟಿಕ ಶಬ್ದ ಬಹು ಜೋರಾಗಿ ಕೇಳಿಸಿತು. ಉಪಾದ್ರು ಇದು ಎಷ್ಟು ಒಳ್ಳೆಯ ಆಟ. ಯಾವ ಸ್ಕೂಲಿನಲ್ಲಿಯೂ ಈ ಆಟ ಹೇಳಿಕೊಡುತ್ತಿಲ್ಲ ಎಂದುಕೊಂಡು ಒಳಕ್ಕೆ ಬಂದರು. ಸ್ಕೂಲಿನ ಒಳಕ್ಕೆ ಕಾಲಿಟ್ಟಕೂಡಲೇ ಉಪಾಧ್ಯಾಯರ ಮುಖದಲ್ಲಿ ಕೋಪ ತೋರಿತು. ಅವರ ದೃಷ್ಟಿಯು ಮೊದಲು ಗೋಡೆಯ ಮೇಲೆ ಇದ್ದ ಹಲಗೆಯ ಕಡೆ ಹೋಯಿತು ಆ ಬೋರ್ಡಿನ ಮೇಲೆ ಒಂದು ಚಿತ್ರ. ಶೀಮೆಸುಣ್ಣದಿಂದ ಬರೆದಿದ್ದರು. ಅದಕ್ಕೆ ಸಾಬರಂತೆ ಗಡ್ಡ ಮೀಸೆಗಳನ್ನು ಬಿಟ್ಟಿದ್ದರು. ಬಾಯಲ್ಲಿ ಬಲವಾದ ಒಂದು ಚುಟ್ಟ ಕೊಟ್ಟಿದ್ದರು. ಅದರಿಂದ ಕರ್ರಗೆ ಹೊಗೆ ಬರುವಂತೆ ಕಾಣುತ್ತಿತ್ತು. ತಲೆಗೆ ಒಂದು ಹ್ಯಾಟನ್ನು ಸಿಕ್ಕಿಹಾಕಿದ್ದರು. ಚಿತ್ರದ ಕೆಳಗೆ ನಮ್ಮ ಮೇಷ್ಟರು ಎಂದು ಬರೆದಿದ್ದರು. ಸುದರ್ಶನ ಬೋರ್ಡಿನ ಮುಂದೆ ನಿಂತುಕೊಂಡು ಉಪಾಧ್ಯಾಯರಂತೆ ಅವರ ಧ್ವನಿಯಲ್ಲಿಯೇ ದೊಡ್ಡ ಗಡಿಯಾರಂ ಮುಂತಾದುವನ್ನು ಹೇಳುತ್ತಿದ್ದುದನ್ನು ಹುಡುಗರು ನೆಟ್ಟ ಮನಸ್ಸಿನಿಂದ ಕೇಳುತ್ತಾ ಬೋರ್ಡಿನ ಮೇಲಿದ್ದ ಚಿತ್ರದ ಕಡೆ ನೋಡುತ್ತಾ ಹೊ ಎಂಬುದಾಗಿ ಅರಚುತ್ತಾ ತಮ್ಮ ವಿನೋದದಲ್ಲಿ ತಾವು ತೊಡಗಿದ್ದರು. ಉಪಾಧ್ಯಾಯರು ಬಂದುದನ್ನು ಅವರಾರೂ ನೋಡಲೇ ಇಲ್ಲ. ಉಪಾದ್ರು ಧ್ವನಿ ಸ್ವಲ್ಪ ದಪ್ಪವಾಗಿದ್ದಿತು. ಅವರು ಮಾತನಾಡುತ್ತಿರುವಾಗ ಗಂಟಲಿನಿಂದ ಮಾತನಾಡುವಂತೆ ತೋರುತ್ತಿದ್ದಿತು. ಆಗಲೇ ಯಾರನ್ನೂ ಅಣಕಿಸುವುದನ್ನು ಚೆನ್ನಾಗಿ ಕಲಿತಿದ್ದ ಸುದರ್ಶನನು ಉಪಾದ್ರು ಸ್ಕೂಲಿಗೆ ಹೋಗುವ ವೇಳೆಗೆ ಸರಿಯಾಗಿ ಅವರ ಧ್ವನಿಯಲ್ಲಿ ಅವರನ್ನು ಅಣಕಿಸುತ್ತಿದ್ದನು. ಹುಡುಗರು ಹುಚ್ಚೆದ್ದು ಕುಣಿದಾಡುತ್ತಿದ್ದರು. ಉಪಾದ್ರಿಗೆ ಬಹಳ ಕೋಪವುಂಟಾಯಿತು.

ಈಚೀಚೆಗೆ ಸುದರ್ಶನ ಮಾಡುತ್ತಿದ್ದ ಚೇಷ್ಟೆಗಳು ಉಪಾಧ್ರಿಗೆ ಬಹಳ ಬೇಸರಿಕೆಯನ್ನೂ ಕೋಪವನ್ನೂ ಉಂಟುಮಾಡತೊಡಗಿದ್ದುವು. ಅವರ ಸರ್ವಿಸ್‌ನಲ್ಲೆಲ್ಲಾ ಅಂತಹ ಚೇಷ್ಟೆಯ ಹುಡುಗ ಅವರಿಗೆ ಸಿಕ್ಕಿರಲಿಲ್ಲ. ಮತ್ತು ಅವನು ಇತರ ಹುಡುಗರಂತೆ ಹೆದರದೆ, ಹೆಚ್ಚು ಹೆಚ್ಚಾಗಿ ಶಿಕ್ಷೆ ವಿಧಿಸಿದಷ್ಟೂ ಇನ್ನೂ ಚೇಷ್ಟೆಯನ್ನು ಹೆಚ್ಚಾಗಿ ಮಾಡುತ್ತಲೇ ಇದ್ದನು. ಈಚೆಗೆ ಸ್ವಲ್ಪ ವಯಸ್ಸಾಗುತ್ತಿದ್ದ ಉಪಾಧ್ರ ಹೊಟ್ಟೆ ಮುಂದಕ್ಕೆ ಬರುತ್ತಿದ್ದುದನ್ನು ಮಡಕೆಯೋಪಾದಿಯಲ್ಲಿ ಚಿತ್ರಿಸಿದ್ದನು. ಉಪಾಧ್ರಿಗೆ ಸುದರ್ಶನ ಇನ್ನು ಮುಂದೆ ತನ್ನನ್ನು ಹಾಸ್ಯಮಾಡದಂತೆ ನೋಡಿಕೊಳ್ಳಬೇಕೆಂದೂ, ಸ್ವಲ್ಪ ಮನಸ್ಸು ಕಠಿಣವಾಯಿತು. ಆದುದರಿಂದ ಅವರು ಸುದರ್ಶನನನ್ನು ತಮ್ಮ ಮುಂದೆ ನಿಲ್ಲಿಸಿಕೊಂಡು ಅವನ ಕಿವಿಗಳನ್ನು ಎರಡು ಕೈಗಳಿಂದಲೂ ಹಿಡಿದು ಮೇಲಕ್ಕೆ ಎತ್ತಿ ಕುಕ್ಕರಿಸಿ "ಮುಟ್ಠಾಳ ನನ್ನನ್ನು ಹಾಸ್ಯ ಮಾಡುವುದನ್ನು ತೋರಿಸುತ್ತೇನೆ. ನಿನ್ನನ್ನು ಮನೆಗೆ ಊಟಕ್ಕೆ ಬಿಡುವುದಿಲ್ಲ. ಒಳಗೆ ಕೂಡಿ ಬೀಗ ಹಾಕುತ್ತೇನೆ. ಒಂದು ದಿವಸ ಅನ್ನ ಇಲ್ದೆ ಹೊಟ್ಟೆ ಪದ ಹೇಳಿದರೆ ನಿನಗೆ ಗೊತ್ತಾಗುತ್ತೆ" ಎಂದರು. ಈ ವಿಧವಾದ ಶಿಕ್ಷೆ ಆ ಮೇಷ್ಟರ ಕಾಲದಲ್ಲಿ ಸಾಮಾನ್ಯವಾಗಿತ್ತು. ಎರಡು ದಿವಸಕ್ಕೆ ಮೂರು ದಿವಸಕ್ಕೆ ಒಬ್ಬೊಬ್ಬ ಹುಡುಗನಿಗೆ ಉಪವಾಸ ಮಾಮೂಲಾಗಿ ನಡೆಯುತ್ತಿದ್ದಿತು. ಆದುದರಿಂದ ಈ ಶಿಕ್ಷೆಯನ್ನು ಕೇಳಿ ಹುಡುಗರಾಗಲಿ ಸುದರ್ಶನನಾಗಲಿ ಹೆಚ್ಚು ಗಾಬರಿ ಪಡಲಿಲ್ಲ.

ಬೆಳಿಗ್ಗೆ ಹತ್ತೂವರೆ ಗಂಟೆಗೆ ಸ್ಕೂಲು ಮುಗಿಯಿತು. ಸುದರ್ಶನ ಅಳುತ್ತಾ ನಿಂತಿದ್ದರೂ ಉಪಾದ್ರು, ಅವನನ್ನು ಸ್ಕೂಲಿನಲ್ಲಿ ಬೀಗ ಹಾಕಿ ಕೂಡಿ, ಉಳಿದ ಹುಡುಗರೊಂದಿಗೆ ನಗುತ್ತಾ ಹೊರಟುಹೋದರು. ಸುದರ್ಶನನಿಗೆ ಸ್ಕೂಲಿನಲ್ಲಿ ಒಬ್ಬನೇ ಇರಲು ಅಷ್ಟೇನೂ ಭಯವಾಗಲಿಲ್ಲ. ಉಳಿದ ಹುಡುಗರು ಹೆದರುತ್ತಿದ್ದರು. ಆದರೆ ಸುದರ್ಶನನಿಗೆ ಹಸಿವು ಅಸಾಧ್ಯವಾಗಿ ಹೆಚ್ಚಾಯಿತು. ಬೆಳಿಗ್ಗೆ ಏಳುವ ಹೊತ್ತಿಗೆ ಒಂದು ಗುಕ್ಕು ತಂಗಳು ತಿಂದುಕೊಂಡು ಬಂದು ಸಾಯಂಕಾಲದವರೆಗೆ ಹಸಿದುಕೊಂಡಿರುವುದು ಸಣ್ಣ ಹುಡುಗರಿಗೆ ಸುಲಭವಲ್ಲ. ಈ ಆಧುನಿಕ ಕಾಲದಲ್ಲಿಯೂ ಕೆಲವು ಮಾಧ್ಯಮಿಕ ಶಾಲಾ ಉಪಾಧ್ಯಾಯರು 10-11 ವರುಷಗಳ ಮಕ್ಕಳನ್ನು, ಅವರ ತಪ್ಪಿಗಾಗಿ ಸ್ಕೂಲಿನಲ್ಲಿ ಕೂರಿಸಿ ತಾವು ಮಾತ್ರ

ಮನೆಗೆ ಹೋಗಿ ಊಟ ಮಾಡಿಕೊಂಡು ಬರುವುದು ನಮ್ಮ ಅನುಭವಕ್ಕೇ ಬಂದಿದೆ. ಹೀಗಿರುವಾಗ ಇದು ಹಿಂದೆ ಹಳ್ಳಿಯ ಸ್ಕೂಲಿನಲ್ಲಿ ಸಂಭವಿಸಿದ್ದುದು ಆಶ್ಚರ್ಯವಲ್ಲ. ಉಪಾಧ್ಯಾಯರು ಬೀಗ ಹಾಕಿಕೊಂಡು ಹೋದ ಒಂದು ಗಳಿಗೆಯನಂತರ ಸುದರ್ಶನನಿಗೆ ಹೊಟ್ಟೆ ಅಸಾಧ್ಯವಾಗಿ ಹಿಂಸೆ ಕೊಡಲಾರಂಭಿಸಿತು. ಅವನು "ಸುಮ್ಮನೆ ಕೂತಿದ್ರೆ ಹಸಿವಿನ ಜ್ಞಾನ. ಏನಾದರೂ ಕೆಲಸಮಾಡೋಣ" ಎಂದುಕೊಂಡು ಅಲ್ಲೆ ಬಿದ್ದಿದ್ದ ಪರಕೆಯನ್ನು ತೆಗೆದುಕೊಂಡು ಸ್ಕೂಲನ್ನು ಗುಡಿಸಲು ಪ್ರಾರಂಭಿಸಿ ಒಂದೆರಡು ಸಲ ಪರಕೆ ಬೀಸಿ ಕೊನೆಗೆ ಬೇಜಾರಾಗಿ ಸಿಟ್ಟಿನಿಂದ ಉಪಾಧ್ಯಾಯರ ಮೇಜಿನ ಮೇಲೆ ಪರಕೆಯನ್ನು ಬಡಿದನು.. ಹಸಿವಿನ ಕಾಟ ಗಳಿಗೆ ಗಳಿಗೆಗೂ ಏರುತ್ತಲೇ ಇದ್ದಿತು.

ಸ್ಕೂಲಿನ ಒಂದು ಮೂಲೆಯಲ್ಲಿ ಒಂದು ಮಡಿಕೆ ಇತ್ತು. ಅದರಲ್ಲಿ ಉಪಾದ್ರು ಸುಣ್ಣ ಸುಡಿಸಿ ಕರಗಿಸಿ ಇಟ್ಟಿದ್ದರು. 4-5 ದಿನಗಳೊಳಗಾಗಿ ಇನಿಸ್ಪೆಕ್ಟರು ಸ್ಕೂಲಿಗೆ ಬರುವವರಾಗಿದ್ದುದರಿಂದ ಸ್ಕೂಲನ್ನೆಲ್ಲಾ ಬೆಳ್ಳಗೆ ಮಾಡಿಸಿಟ್ಟಿರಬೇಕೆಂಬುದು ಉಪಾದ್ರ ಆಸೆಯಾಗಿದ್ದಿತು. ಉಪಾಧ್ಯಾಯರು ಕುಳಿತುಕೊಳ್ಳುವ ಪೆಟ್ಟಿಗೆಯ ಹಿಂದೆ ಗೋಡೆಯ ಮೇಲೆ ಅವರು ಏನೇನೋ ಸೀಸದ ಕಡ್ಡಿಯಲ್ಲಿ ಬರೆದಿದ್ದರು. ಸುದರ್ಶನ ೮-೧೦ ಸಲ ಸುಣ್ಣವನ್ನು ತೆಗೆದು ಆ ಬರವಣಿಗೆಯ ಮೇಲೆ ಬಳಿದುಬಿಟ್ಟನು. ಆ ವೇಳೆಗೆ ಸುಣ್ಣದಲ್ಲಿದ್ದ ನೀರೂ ಮುಗಿದುಹೋಯಿತು. ಹಸಿವಿನಿಂದ ಬಳಲಿದ್ದ ಸುದರ್ಶನ ಸುಣ್ಣದ ಪರಕೆಯನ್ನು ಮೇಜಿನ ಮೇಲೆಯೇ ಒಗೆದು ನೆಲದ ಮೇಲೆಯೇ ಮಲಗಿಬಿಟ್ಟನು.

ಸುಮಾರು ಮೂರುವರೆ ಗಂಟೆಗೆ ಉಪಾದ್ರು ಸ್ಕೂಲಿಗೆ ಬಂದು ಬಾಗಿಲು ತೆರೆದರು. ಸ್ಕೂಲಿನ ಒಳಕ್ಕೆ ಕಾಲಿಟ್ಟ ಕೂಡಲೇ ಹೊಸ ಸುಣ್ಣದ ವಾಸನೆ ಅವರ ಮೂಗಿಗೆ ಹೊಡೆಯಿತು. ಒಮ್ಮೆದೊಮ್ಮೆ ಅವರ ದೃಷ್ಟಿ ತಾವು ಕುಳಿತುಕೊಳ್ಳುತ್ತಿದ್ದ ಪೆಟ್ಟಿಗೆಯ ಹಿಂದಲ ಗೋಡೆಯ ಕಡೆಗೆ ಹೋಯಿತು. ಗೋಡೆಯನ್ನು ನೋಡಿ ಅವರ ಮೈ ಜುಮ್ಮೆಂದಿತು. ಅವರು ಬರೆದಿದ್ದ ಲೆಕ್ಕಗಳೆಲ್ಲಾ ಅಲ್ಲಿ ಮರೆಯಾಗಿದ್ದುವು. ಅವರು ಎರಡು ಕೈಗಳಿಂದಲೂ ಸುದರ್ಶನನನ್ನು ಅಲ್ಲಾಡಿಸಿ ಎತ್ತಿ ಕೂರಿಸಿದರು. ಸುದರ್ಶನ ಕಣ್ಣು ಬಿಟ್ಟಾಗ ಅವನಿಗೆ, ಸುತ್ತಾ ಗಾಬರಿಗೊಂಡ ಉಪಾಧ್ಯಾಯರೂ ತನ್ನನ್ನೇ ನೋಡುತ್ತಿದ್ದ ಹುಡುಗರೂ ಕಣ್ಣಿಗೆ ಬಿದ್ದರು.

ಉಪಾಧ್ಯಾಯರಿಗೆ ತಿಂಗಳಿಗೆ ಒಂದು ಸಲ ಸಂಬಳದ ಜತೆಯಲ್ಲಿ ಎಂಟಾಣೆ ಸಾದಿಲ್ವಾರು ಬರುತ್ತಿದ್ದಿತು. ಆಗಿನ ಉಪಾದ್ರ ಸಂಬಳ ಹತ್ತು ರುಪಾಯಿ ಇದ್ದುದರಿಂದ ಉಪಾದ್ರು ಆ ಸಾದಿಲ್ವಾರನ್ನೂ ತಮ್ಮ ಸ್ವಂತಕ್ಕೇ ಉಪಯೋಗಿಸುತ್ತಿದ್ದರು. ಅವರು ತಮ್ಮ ಹದಿನೈದು ವರುಷದ ಸರ್ವಿಸ್ಸಿನಲ್ಲಿ ಒಂದು ಗಜ ಕಾಗದವನ್ನಾಗಲಿ ಒಂದು ಸೀಸಕಡ್ಡಿಯನ್ನಾಗಲಿ ಕೊಂಡಿರಲಿಲ್ಲಾ. ಮೂರು ತಿಂಗಳಿಗೆ ಆರು ತಿಂಗಳಿಗೆ ಇನಿಸ್ಪೆಕ್ಟರ್ ಸಾಹೇಬರಿಗೆ ಒಂದು ಕಾಗದ ಬರೆಯಬೇಕಾಗಿ ಬಂದರೆ ಆಗ ಶ್ಯಾನುಭೋಗರಿಂದ ಒಂದು ಗಜ ಕಾಗದ ತೆಗೆದು ರಾಗಿಯ ಶಾಯಿಯಲ್ಲಿ ಹಕ್ಕಿಗರಿಯ ಕಡ್ಡಿಯಿಂದ ಬರೆದು ಕಳುಹಿಸುತ್ತಿದ್ದರು. ಆದರೆ ಇನಿಸ್ಪೆಕ್ಟರಿಗೆ ಎಂಟಾಣೆ ಸಾದಿಲ್ವಾರ ಖರ್ಚನ್ನು ತೋರಿಸಲೇಬೇಕಾಗಿದ್ದಿತು. ಇಲ್ಲದಿದ್ದರೆ ಇನಿಸ್ಪೆಕ್ಟರು ಈ ಸ್ಕೂಲಿಗೆ ಸಾದಿಲ್ವಾರು ಗ್ರಾಂಟು ಕೊಡಬೇಡಿರೆಂದು ನಿಲ್ಲಿಸಿಬಿಡುವ ಸಂಭವವಿದ್ದಿತು. ಕೆಲವೆಡೆ ಹಾಗೂ ನಡೆದಿದ್ದಿತು. ಆದುದರಿಂದ ಉಪಾದ್ರು ಗೋಡೆಯ ಮೇಲೆ ಒಂದು ವರುಷದ ಸಾದಿಲ್ವಾರನ್ನೂ ಬರೆದಿಟ್ಟಿದ್ದರು. ಇನಿಸ್ಪೆಕ್ಟರು ಬಂದಾಗ "ಸ್ವಾಮಿ ನನಗೆ ತಿಂಗಳಿಗೆ ಕೊಡುವ ಸಾದಿಲ್ವಾರು ಗ್ರಾಂಟು ಸಾಲದು. ಶಾಯಿ ಕಡ್ಡಿ ಕಾಗದಗಳಿಗೆ ದುಡ್ಡಿಲ್ಲ. ಆದುದರಿಂದ ಲೆಕ್ಕವನ್ನೆಲ್ಲಾ ಗೋಡೆಯ ಮೇಲೆ ಮಸಿಯಲ್ಲಿ ಬರೆದಿದ್ದೇನೆ. ಖಾವಂದಿರು ಪರಾಂಬರಿಸಬೇಕು. ಈಗ ಬರುವ ಸಾದಿಲ್ವಾರು ಎಂಟಾಣೆಯನ್ನು ಒಂದು ರೂಪಾಯಿಗೆ ಏರಿಸಿದ ಹೊರತು ನನ್ನ ಕಾಗದ ಲೇಖನಿಯ ಖರ್ಚು ಹುಟ್ಟುವುದಿಲ್ಲ" ವೆಂದು ಹೇಳಿ ಸಾದಿಲ್ವಾರು ಗ್ರಾಂಟನ್ನು ಒಂದು ರೂಪಾಯಿಗೆ ಏರಿಸಿಕೊಳ್ಳಬೇಕೆಂದು ಅವರು ಒಂದು ವರುಷದಿಂದಲೂ ಹವಣಿಸಿಕೊಂಡಿದ್ದರು. "ಗೋಡೆಯ ಮೇಲೆ ಲೆಕ್ಕಗಳನ್ನು ಬರೆದು ಇನಿಸ್ಪೆಕ್ಟರಿಗೆ ತೋರಿಸಿದರೆ ನನ್ನ ಪ್ರಾಮಾಣಿಕತೆಯಲ್ಲಿ ಅವರಿಗೆ ನಂಬಿಕೆ ಬರುತ್ತೆ. ಅದರ ಪರಿಣಾಮ ನನ್ನ ಉದ್ದೇಶ ಸಾಧನೆಗೆ ಸಹಕಾರಿಯಾಗುತ್ತೆ ಎಂದು ಉಪಾಧ್ಯಾಯರಿಗೆ ಚೆನ್ನಾಗಿ ಗೊತ್ತಾಗಿದ್ದಿತು. ಆದರೆ ಈಗ ಸುದರ್ಶನನು ಒಂದೇ ಏಟಿಗೆ ಉಪಾದ್ರ ಆಸೆಗಳಿಗೆಲ್ಲಾ ಮಣ್ಣು ಹಾಕಿಬಿಟ್ಟನು.

ಸುದರ್ಶನ, ಇನ್ನೂ ಅರ್ಧ ನಿದ್ರೆಯಲ್ಲಿ ಕಣ್ಣು ಬಿಟ್ಟಕೂಡಲೇ ಉಪಾದ್ರು "ನನ್ನ ಲೆಕ್ಕಾನೆಲ್ಲಾ ಅಳಿಸಿಬಿಟ್ಟೆಯೆಲ್ಲೋ "ಒಂದು ವರು

ಷದ ಸಾದ್ವಿಲಾರು ಲೆಕ್ಕ ಇನಿಸ್ಪೆಕ್ಟರಿಗೆ ಹೇಗೊ ಕೊಡೋದು. ಅಯ್ಯೊ ಅಯ್ಯೊ" ಎನ್ನುತ್ತಿರುವುದು ಕೇಳಿಸಿತು. ಸುದರ್ಶನ ಚೆನ್ನಾಗಿ ಕಣ್ಣೊರಸಿಕೊಂಡು ಎದ್ದು ನಿಂತ. ಉಪಾದ್ರಿ "ಮುಟ್ಠಾಳ ಯಾರೊ ನಿನಗೆ ಸುಣ್ಣ ಹಾಕೋಕೆ ಹೇಳ್ದೋರು" ಎಂದರು. ಸುದರ್ಶನನು "ನೀವೇ ಸುಣ್ಣ ಹಾಕ್ಬೇಕು ಅಂತ ನಮಗೆ ಹೇಳಿದ್ರೆಲ್ಲ. ಕೂತು ಬೇಜಾರಾಯ್ತು. ನಾನೇ ಹಾಕಿದೆ" ಎಂದನು. ಉಪಾದ್ರಿಗೆ ಮಿತಿಮೀರಿದ ಕೋಪವುಂಟಾಯಿತು. ಅವರು "ಇವತ್ತು ನಿನ್ನ ಚರ್ಮ ಸುಲಿತೀನಿ. ನಿನ್ನ ಹುಟ್ಟಿದಹಬ್ಬ ತೋರಿಸ್ತೀನಿ" ಎಂಬುದಾಗಿ ಹೇಳಿ ಸ್ಲೇಟಿನ ಕಟ್ಟನ್ನು ತೆಗೆದುಕೊಂಡು ಸುದರ್ಶನನಿಗೆ ಬಿಡಲು ಪ್ರಾರಂಭಿಸಿದರು. ಎಲ್ಲಾ ಹುಡುಗರೂ ಮೇಷ್ಟರ ಕೆಂಪಾದ ಮುಖವನ್ನು ನೋಡುತ್ತಾ ಭಯದಿಂದ ನಡುಗುತ್ತಾ ನಿಂತಿದ್ದರು. ನಾಲ್ಕು ಐದು ಏಟುಗಳು ಬಿದ್ದ ಕೂಡಲೇ ಸುದರ್ಶನನು "ಸಾಕು ಸಾರ್ ಸಾಕು ಸಾರ್" ಎಂದನು. ಉಪಾದ್ರಿ ಮತ್ತಷ್ಟು ಕೋಪದಿಂದ "ಸಾಕು ಸಾರ್; ಏನು ಇದು ನಿನಗೆ ಕಡಲೆಪುರಿಯೋ ತಿಂಡಿಯೋ ಸಾಕು ಎನ್ನುವುದಕ್ಕೆ" ಎಂಬುದಾಗಿ ಮತ್ತೆ ನಾಲ್ಕು ಏಟುಗಳನ್ನು ಕೊಟ್ಟರು. ಸುದರ್ಶನನು ಸಾಕು ಸಾಕು ಎಂದು ಕೂಗುತ್ತಿದ್ದುದನ್ನು ಕೇಳಿ ಹುಡುಗರಿಗೆ ಬಹು ನಗು ಬಂದಿತು. ಉಪಾದ್ರಿಗೂ ಬಹಳ ನಗು ಬಂದಿತು. ಎಲ್ಲರೂ ಗಟ್ಟಿಯಾಗಿ ನಕ್ಕುಬಿಟ್ಟರು.

ಉಪಾದ್ರಿ, ಹುಡುಗರನ್ನು ಸ್ಕೂಲಿಗೆ ಬರಲು ಎಚ್ಚರಿಸುವುದಕ್ಕೂ ಮತ್ತು ಸ್ಕೂಲಿನಿಂದ ಅವರ ಬಿಡುಗಡೆಯನ್ನು ಸೂಚಿಸುವುದಕ್ಕೂ ಅನುಕೂಲವಾಗುವಂತೆ ತಮಗೆ ಒಂದು ಗಂಟೆ ಬೇಕೆಂದು ಸರ್ಕಾರವನ್ನು ಕೆಲವು ದಿನಗಳಿಂದ ಕೇಳುತ್ತಲೇ ಇದ್ದರು. ಆದರೆ ಸರ್ಕಾರದವರು ಅವರ ಪ್ರಾರ್ಥನೆಗೆ ಕಿವಿಗೊಟ್ಟಿರಲಿಲ್ಲ. ಉಪಾದ್ರಿ ಗಂಟಲು ಒಳ್ಳೆಯ ಕಂಚಿನ ಗಂಟಲಿನಂತೆ ಇತ್ತು. ಅವರು ಸ್ಕೂಲು ಬಿಡುವ ಹೊತ್ತಾದ ಕೂಡಲೇ ಮೂರು ಸಲ "ರೆಡಿ" (Ready) ಎಂಬುದಾಗಿ ಕೂಗುತ್ತಿದ್ದರು. ಒಂದು ಸಲ ಕೂಗಿದುದಕ್ಕಿಂತ ಎರಡನೆಯ ಸಲ ಕೂಗಿದುದು ಹೆಚ್ಚು ಗಟ್ಟಿಯಾಗಿಯೂ, ಮೂರನೆಯ ಸಲದ ಕೂಗು ಅದಕ್ಕಿಂತ ಹೆಚ್ಚು ಗಟ್ಟಿಯಾದ ಕಿರಚಾಟವಾಗಿಯೂ ಕೇಳಿಸುತ್ತಿದ್ದಿತು. ಮೊದಲು ರೆಡಿ ಎಂದ ಕೂಡಲೇ ಹುಡುಗರೆಲ್ಲಾ ಸ್ಲೇಟು ಪುಸ್ತಕಗಳನ್ನು

ಜೋಡಿಸಿಕೊಂಡು ಸಿದ್ಧರಾಗಬೇಕಾಗಿದ್ದಿತು. ಎರಡನೆಯ ಸಲ ಧ್ವನಿ ಕೇಳಿದ ಕೂಡಲೆ ಎಲ್ಲಾ ಹುಡುಗರೂ ಎದ್ದು ನಿಲ್ಲಬೇಕಾಗಿದ್ದಿತು. ಮೂರನೆಯ ಸಲದ ಧ್ವನಿಯನ್ನು ಕೇಳಿದ ಕೂಡಲೇ ಹುಡುಗರು ತೊಟ್ಟಿಯ ಮಧ್ಯಕ್ಕೆ ಬಂದು ಸ್ಕೂಲು ಬಿಡುವುದಕ್ಕೆ ಮುಂಚಿನ ಸಾಯಂಕಾಲದ ಪ್ರಾರ್ಥನೆಗೆ ಸೇರಬೇಕಾಗಿದ್ದಿತು. ಆ ತೊಟ್ಟಿಯಲ್ಲಿ ಉಪಾದ್ರು ಈ ರೀತಿ



ಟಾರಿನಲ್ಲಿ ಗೆರೆ ಹಾಕಿದ್ದರು. ಹುಡುಗರು ಚಚ್ಚೌಕವಾಗಿ ಮೂರು ಕಡೆ, ನಾಲ್ಕನೆಯ ಕಡೆಯಲ್ಲಿ ಕುದುರೆ ಲಾಳದಂತೆ ಸ್ವಲ್ಪ ಒಳಕ್ಕೆ ಬಗ್ಗಿರುವ ಸಾಲಿನಲ್ಲಿ ಹೀಗೆ ಕೈಯಲ್ಲಿ ಸ್ಲೇಟು ಪುಸ್ತಕಗಳನ್ನು ಹಿಡಿದುಕೊಂಡು ನಿಲ್ಲುತ್ತಿದ್ದರು. ಉಪಾದ್ರು ಮಧ್ಯದಲ್ಲಿ ನಿಂತುಕೊಂಡು

ಕಾಯ್ಕೆ ದೇವಾ ಜಾರ್ಜ ಭೂಪಾಲನಂ ಸದಾ
ದಾಯಾಳುವಂ | ಈಯ್ಕೆ ಶ್ರೇಯಂಗಳಂ
ಜಾಯಾಮಂ ಕೀರ್ತಿಯಂ ಈ ನೃಪತಿಯೆ ನಮ್ಮನ್ನು
ಸಾಲಾಹಲೆಂದುಂ || ಎಂದು

ಹೇಳುತ್ತಿದ್ದರು. ಉಪಾಧ್ಯಾಯರು ಬೆಳಗಿನ ಹೊತ್ತು ಸ್ವಾಮಿ ದೇವನೆಯನ್ನೂ, ಕಾಯೌ ಶ್ರೀಗೌರಿಯನ್ನೂ, ಸಾಯಂಕಾಲದ ಹೊತ್ತು ಉತ್ತಮೋತ್ತಮ ನಿನ್ನ ಪಾದದ ಭಕ್ತಿಯೇ ಸ್ಥಿರವಲ್ಲವೇ ಎಂಬುದನ್ನೂ, ಈ ಜಾರ್ಜ ಭೂಪಾಲನನ್ನೂ ಹೇಳುತ್ತಿದ್ದರು. ಅದೇನು ಕಾರಣದಿಂದಲೋ ಸುದರ್ಶನನಿಗೆ ಬಾಲ್ಯದಲ್ಲಿಯೂ ಆ ಜಾರ್ಜ ಭೂಪಾಲನ ಹಾಡನ್ನು ಕೇಳಿದರೆ ಆಗುತ್ತಿರಲಿಲ್ಲ. ಸ್ಕೂಲು ಮುಗಿದು ಆಟಕ್ಕೆ ಹೋಗುವ ವೇಳೆಯಲ್ಲಿ ಇದನ್ನು ಪ್ರಾರಂಭಿಸುತ್ತಾರೆಲ್ಲ ಎಂದೊ ಏನೋ ಅವನು ಜಾರ್ಜ್ ಭೂಪಾಲನಂ ಎಂದು ಬಂದಾಗಲೆಲ್ಲಾ ಜಾರ್ಜ ಭೇತಾಳನಂ ಎಂದೇ ಹೇಳುತ್ತಿದ್ದನು. ಮುಂದೆ ಸುದರ್ಶನ ದೊಡ್ಡವನಾದ ಮೇಲೂ ಜಾರ್ಜ ಎಂಬ ಹೆಸರನ್ನು ಕೇಳಿದರೂ ಆ ಹಾಡನ್ನು ಜ್ಞಾಪಿಸಿಕೊಂಡರೂ ಅವನಿಗೆ ಮೈ ಉರಿಯುತ್ತಿದ್ದಿತು. ಸುದರ್ಶನನಿಗೆ ಆ ಹಾಡನ್ನು ಹೇಳುವಾಗಲೂ ಸ್ವಲ್ಪ ಹೆಚ್ಚು ಕಡಿಮೆ ಪ್ರತಿ ಸಾಯಂಕಾಲವೂ ಏಟು ಬೀಳುತ್ತಿದ್ದಿತು.

---

# ೧೧. ಗಣಪತಿಯನ್ನು ಕುರಿತ ಉಪನ್ಯಾಸ

ಅದು ಗೌರಿ ಹಬ್ಬದ ಕಾಲವಾಗಿದ್ದಿತು. ಆಗ ಹುಡುಗರಿಗೆ ಗೌರಿ ಹಬ್ಬಕ್ಕೆ ನಾಲ್ಕು ದಿನ ಮುಂಚಿತವಾಗಿಯೇ ಸಂಭ್ರಮಗಳು ಪ್ರಾರಂಭ ವಾಗುತ್ತಿದ್ದುವು. ಗೌರಿ ಹಬ್ಬದ ದಿನ, ವಿನಾಯಕನ ಹಬ್ಬದ ದಿನ, ಅವು ಗಳ ಜತೆಗೆ ಹಾಗೂ ಹೀಗೂ ಇನ್ನೊಂದು ದಿನ ಅಂತೂ ಹುಡುಗರಿಗೆ ಮೂರು ದಿನ ಸ್ಕೂಲಿಗೆ ರಜಾ ಸಿಕ್ಕುತ್ತಿದ್ದಿತು. ನಾಲ್ಕನೇ ದಿನ ಅವರೇ ಬರದೆ ಕದಿಯುತ್ತಿದ್ದರು. ಆ ನಾಲ್ಕು ಐದು ದಿನ ಹುಡುಗರು ಮೇಷ್ಟ ರನ್ನೂ ಪಾಠ ಬಳಪಗಳನ್ನೂ ಬೆತ್ತ ಕೋದಂಡಗಳನ್ನೂ ಪೂರ್ಣವಾಗಿ ಮರೆಯುತ್ತಿದ್ದರು. ಆಗಿನ ಹುಡುಗರಿಗೆ, ಗೌರಿ ಹಬ್ಬಕ್ಕೂ ಪೆಟ್ಲಿಗೂ ಗಂಟು. ಆ ಪೆಟ್ಲನ್ನು ಮಾಡಲು ಆಗಿನ ಹುಡುಗರು ತೋರಿಸುತ್ತಿದ್ದ ಉತ್ಸಾಹ ಅತಿಶಯವಾಗಿತ್ತು. ಪೆಟ್ಲು ಎಂದರೆ ನಿಮಗೆ ಗೊತ್ತಿರಬಹುದು. ಅರ್ಧ ಅಡಿ ಮುಕ್ಕಾಲು ಅಡಿ ಉದ್ದವಾದ ಬಾಗಿಲ್ಲದೆ ನೇರವಾದ ಒಂದು ಕಿರು ಬಿದರಿನ ತುಂಡನ್ನು ತೆಗೆದುಕೊಳ್ಳಬೇಕು. ಅದರ ಎರಡು ಕಡೆ ಗಳಲ್ಲಿಯೂ ಗಿಣ್ಣುಗಳಿರಕೂಡದು. ಆ ಬಿದಿರಿನ ಒಳಗಿನ ಟೊಳ್ಳು ತೂತು ಸಣ್ಣದಾಗಿರಬೇಕು. ಬಿದರಿನ ಒಂದು ಕಡೆಯನ್ನು ಸಣ್ಣಗೆ ಹೆರಿಯಬೇಕು. ಮತ್ತೊಂದು ಬಿದಿರಿನ ತುಂಡನ್ನು ತೆಗೆದುಕೊಂಡು ಅದನ್ನು ಮಧ್ಯಕ್ಕೆ ಸೀಳಿ, ಮೊದಲಿನ ಕೊಳವೆಯೊಳಕ್ಕೆ ಹಿಡಿಯುವಂತೆ ಅದನ್ನು ಸಣ್ಣಗೆ ಹೆರೆಯಬೇಕು. ಅಂದರೆ ಒಂದು ಪೆಟ್ಲು ಆಯಿತು. ಈ ಪೆಟ್ಲಿನ ಒಳಗೆ ಕಾಯನ್ನು ಇಟ್ಟು ಎರಡನೆಯ ಕಡ್ಡಿಯಿಂದ (ಇದಕ್ಕೆ ಗಜ ಎಂದು ಹೆಸರು) ಅದನ್ನು ಒಳಕ್ಕೆ ಜೋರಾಗಿ ನೂಕಿದರೆ ಸಣ್ಣ ಪಟಾಕಿಯಂತೆ ಸದ್ದಾಗುವುದು. ಪೆಟ್ಲಿಗೆ ಉಪಯೋಗಿಸುವುದೇ ಒಂದು ತರಹ ಕಾಯಿ. ಇದಕ್ಕೆ ಪೆಟ್ಲುಕಾಯಿ ಎಂದೇ ಹೆಸರು. ಪೆಟ್ಲು ದಪ್ಪವಾಗಿ ಅದರ ತೂತು ದೊಡ್ಡದಾಗಿದ್ದರೆ ಅದಕ್ಕೆ ಹೊನೆಗೊಗೆಕಾಯಿ ಎಂಬುದನ್ನು ಉಪಯೋಗಿ ಸುತ್ತಾರೆ.

ಅಂದಿನ ಕಾಲದಲ್ಲಿ ಪೆಟ್ಲು ಇಲ್ಲದ ಹುಡುಗರೇ ಅಪರೂಪವಾಗಿ ದ್ದರು. ಹುಡುಗರು ಗೌರಿಹಬ್ಬಕ್ಕೆ ನಾಲ್ಕು ದಿನ ಮುಂಚೆಯೇ ಪೆಟ್ಟು

ಬೀಟೆಗೆ ಹೊರಡುತ್ತಿದ್ದರು. ಮನೆಗಳಲ್ಲಿ ಬಿದ್ದಿದ್ದ ಬಿದುರು ತುಂಡುಗಳನ್ನೆಲ್ಲಾ ಪಟ್ಲಿಗಾಗಿ ಹಾರಿಸಿಬಿಡುತ್ತಿದ್ದರು. ಯಾವ ಮನೆಯಲ್ಲಿ ನೋಡಿದರೂ ಹುಡುಗರು ಮಚ್ಚನ್ನೂ ಕೈಬಾಚಿಯನ್ನೂ ಹಿಡಿದುಕೊಂಡು ಕೊಟಕೊಟನೆ ಸದ್ದು ಮಾಡುತ್ತಿದ್ದರು. ಶಾಸ್ತ್ರಜ್ಞರೂ ವೈಜ್ಞಾನಿಕರೂ ತಮ್ಮ ಶೋಧನೆಗಳಿಗೆ ಬೇಕಾದ ಅತಿ ಸೂಕ್ಷ್ಮವಾದ ಯಂತ್ರಗಳನ್ನು ಎಷ್ಟು ಎಚ್ಚರಿಕೆಯಿಂದ ನಿರ್ಮಿಸುತ್ತಾರೋ ಹುಡುಗರೂ ಕೂಡ ಪಟ್ಲನ್ನು ಸಿದ್ಧ ಮಾಡಿಕೊಳ್ಳಲು ಅಷ್ಟೇ ಕಷ್ಟಪಡುತ್ತಿದ್ದರು. ಆಗ ಹುಡುಗರಿಗೆ ಪಟ್ಲಿಗಿಂತ ದೊಡ್ಡದ್ದು ಜಗತ್ತಿನಲ್ಲಿ ಯಾವುದೂ ಇರಲಿಲ್ಲ. ಪಟ್ಲು ಇದ್ದರೆ ಸಾಕು. ಜಗತ್ತನ್ನು ಜಯಿಸಬಹುದು ಎಂದು ಹುಡುಗರು ಯೋಚಿಸುತ್ತಿದ್ದರು. ಪಟ್ಲನ್ನು ಹುಡುಗರೇ ಮಾಡಿಕೊಳ್ಳುತ್ತಿದ್ದುದರಿಂದ ಅವರಿಗೆ ಅದರ ಮೇಲೆ ಅಷ್ಟು ಅಭಿಮಾನವುಂಟಾಗುತ್ತಿದ್ದಿತು. ಆಗಿನ ಅವರ ಉತ್ಸಾಹವೇನು! ಗೌರಿಹಬ್ಬದಲ್ಲಿ ಎಲ್ಲರ ಪಟ್ಲುಗಳಿಗಿಂತ ತಮ್ಮ ಪಟ್ಲು ಜೋರು, ಮುಂದು ಆಗಬೇಕೆಂಬುದು ಪ್ರತಿಯೊಂದು ಹುಡುಗನ ಆಸೆಯಾಗಿದ್ದಿತು. ತನ್ನ ಪಟ್ಲು ಇತರರ ಪಟ್ಲಿಗಳಿಗಿಂತ ಸುಂದರವಾಗಿರಬೇಕು. ಅದರ ಗುರಿ ಚೆನ್ನಾಗಿರಬೇಕು ಎಂಬುದೇ ಹುಡುಗರ ಆಸೆಯಾಗಿತ್ತು. ಆ ಪಟ್ಲನ್ನು ಸಿಂಗರಿಸಲು ಹುಡುಗರು ಆಗ ಪಡುತ್ತಿದ್ದ ಶ್ರಮವನ್ನು, ಈಗ ಹಿರಿಯರಾದವರು ಇನ್ನೂ ಅತ್ಯಂತ ಮುಖ್ಯವಾದ ವಿಚಾರಗಳಲ್ಲಿಯೂ ತೆಗೆದುಕೊಳ್ಳುವುದಿಲ್ಲ. ಸುದರ್ಶನನು, ಬೀದಿಯಲ್ಲಿ ಎಲ್ಲಿಯೋ ಬಿದ್ದಿದ್ದ ಒಂದು ಗಾಜಿನ ಚೂರುಕಿನಿಂದಲೇ ಆ ಪಟ್ಲಿನ ಮೇಲೆ ರಾಮ ಕೃಷ್ಣ ಈಶ್ವರ ಇವರುಗಳ ಚಿತ್ರಗಳನ್ನು ಕೊರೆದನು. ನರಸಿಂಹನು, ಪಟೇಲರ ಬಾಗಿಲಿನಲ್ಲಿ ಗಾಡಿಯಲ್ಲಿದ್ದ ಚಾವಟಿಯನ್ನು ಕದ್ದು ಅದರ ಬಣ್ಣ ಬಣ್ಣದ ಕುಚ್ಚುಗಳನ್ನೆಲ್ಲಾ ಪಟ್ಲಿಗೆ ಕಟ್ಟಿ ಪಟ್ಲನ್ನು ಬಣ್ಣದ ದೊಣ್ಣೆಯಂತೆ ಮಾಡಿದನು. ಹುಡುಗರು ಪಟ್ಲಿಗೆ ಬಳಿಯುತ್ತಿದ್ದ ಬಣ್ಣಗಳೇನು? ಅವುಗಳ ಅಲಂಕಾರವೇನು; ಪಟ್ಲುಗಳು ಕಾಮನ ಬಿಲ್ಲಿನಂತೆ ತೋರುತ್ತಿದ್ದುವು. ಅವುಗಳನ್ನು ಹಿಡಿದುಕೊಂಡಿದ್ದ ಹುಡುಗರು, ಗೌರಿ ಹಬ್ಬಕ್ಕಾಗಿ ತಂದಿದ್ದ ಹೊಸಬಟ್ಟೆಗಳಲ್ಲಿ ಅಲಂಕೃತರಾಗಿ, ಕೊಳಲುಗಳನ್ನು ಹಿಡಿದ ಮುದ್ದುಕೃಷ್ಣನಂತೆ ತೋರುತ್ತಿದ್ದರು.

'ಮಲ್ಲಿಗೆಹಳ್ಳಿಯಲ್ಲಿ ಸ್ಮಾರ್ತರು ಮಾಧ್ವರ ಸಂಖೆ ಹೆಚ್ಚಾಗಿಲ್ಲ.

ಇರುವ ಬ್ರಾಹ್ಮಣರೆಲ್ಲಾ ನಾಮದ ಐಯಂಗಾರಿಗಳೇ. ಐಯಂಗಾರ್‍ರ ಹೆಂಗಸರೂ ಸಹ ಗೌರಿ ಪೂಜೆ ಮಾಡುತ್ತಾರಾದರೂ, ಸಂಪ್ರದಾಯಾನುಸಾರವಾಗಿ ಅವರು ಸ್ಮಾರ್ತಮಾಧ್ವರ ಸ್ತ್ರೀಯರಷ್ಟು ವೈಭವದಿಂದ ಗೌರಿ ಪೂಜೆ ಮಾಡುವುದಿಲ್ಲ. ಮಲ್ಲಿಗೆಹಳ್ಳಿಯ ಗೌರಿಪೂಜೆಯ ಮುಖ್ಯ ಪೂಜಾರಿ ನರಸಿಂಹ ಜೋಯಿಸ. ಹುಡುರ ಮನಸ್ಸಿನಲ್ಲಿ ಯಾವಾಗಲೂ ಗೌರಿ ಹಬ್ಬಕ್ಕೂ ನರಸಿಂಹ ಜೋಯಿಸರಿಗೂ ಗಂಟು. ನದಿಯಿಂದ ಗೌರಿ ದೇವಿಯನ್ನು ಸಾಕ್ಷಾತ್ತಾಗಿ . ಶಾಸ್ತ್ರೋಕ್ತವಾಗಿ ಆವಾಹನೆಮಾಡಿ ವಿಧಿವತ್ತಾಗಿ ಪೂಜೆ ನಡೆಸುತ್ತಿದ್ದವರು ಮಲ್ಲಿಗೆಹಳ್ಳಿಯಲ್ಲಿ ನರಸಿಂಹ ಜೋಯಿಸರು ಒಬ್ಬರೇ. ವಿನಾಯ್ಕನ ಪೂಜೆಯನ್ನೂ ಮಾಡುತ್ತಿದ್ದವರೂ ಅವರೊಬ್ಬರೇ. ಆದುದರಿಂದ ಹುಡುಗರಿಗೆ ಗೌರಿ ಗಣೇಶ ಅಂದರೆ ನರಸಿಂಹ ಜೋಯಿಸರು ಕಣ್ಣುಮುಂದೆ ನಿಲ್ಲುತ್ತಿದ್ದರು. ನರಸಿಂಹ ಜೋಯಿಸರಿಲ್ಲದಿದ್ದರೆ ಗಣೇಶ ಗೌರಿಗಳು ನಡೆಯಬಹುದೆಂಬುದು ಅವರ ಮನಸ್ಸಿನಲ್ಲಿ ಅಸಂಭವವಾಗಿತ್ತು.

ಮಲ್ಲಿಗೆಹಳ್ಳಿಯ ನರಸಿಂಹ ಜೋಯಿಸರು ಸುತ್ತಲ ಹನ್ನೆರಡು ಹಳ್ಳಿ ಗೌಡರಿಗೆ ಪುರೋಹಿತರೂ ಹೌದು. ಅವರ ಸ್ವಾಧೀನದಲ್ಲಿ ಎಲ್ಲಾ ದೇವತೆಗಳೂ ಇದ್ದಾರೆ. ಎಲ್ಲಾ ಕಟ್ಟೂ ಕವಣೆಗಳೂ ಇವೆ. ಅವರು ಬೇಕಾದವರ ಮೇಲೆ ಬೇಕಾದ ದೇವತೆಗಳನ್ನು ಬಿಡುತ್ತಾರೆ. ಬೇಕಾದವರ ಮನೆಯಿಂದ ಬೇಕಾದ ದೇವತೆಗಳನ್ನು ಕರೆದುಕೊಳ್ಳುತ್ತಾರೆ. ದೆಯ್ಯ ಹಿಡಿದಿರುವವರಿಗೆ ದೆಯ್ಯ ಬಿಡಿಸುತ್ತಾರೆ. ದೆಯ್ಯವಿಲ್ಲದವರಿಗೆ ದೆಯ್ಯವನ್ನು ಬರಿಸುತ್ತಾರೆ. ಮಲ್ಲಿಗೆಹಳ್ಳಿಯ ಸುತ್ತಲ ಜನರಿಗೆ ಧಾರೆ ಲಗ್ನಗಳನ್ನು ಕಟ್ಟಿಕೊಡುವವರೂ ಅವರೇ. ಅವರ ಶಿಷ್ಯರಾದ ರೈತರು, ಗೌರಿಹಬ್ಬಕ್ಕೆ ನಾಲ್ಕು ದಿನ ಮುಂಚೆ ಬಂದು ಗೌರಮ್ಮ ಮೆರವಣಿಗೆಯಲ್ಲಿ ನಿಲ್ಲುವ ಊರಿನ ನಾಲ್ಕು ಮೂಲೆಗಳಲ್ಲಿಯೂ ನಾಲ್ಕು ಚಪ್ಪರಗಳನ್ನು ಹಾಕಿದರು. ಜೋಯಿಸರ ಮನೆ ಮುಂದೆಯಂತೂ ನಂದನವನವೇ ಆಯಿತು. ಬಾಳೆಯ ಮರಗಳು, ಮಾವಿನ ಚಿಗುರುಗಳು; ತಾಳೆಹೂವು, ತಾವರೆ ಹೂವು ಜೋಯಿಸರ ಮನೆಯೆಲ್ಲ ಲತಾಗೃಹವೇ ಆಯಿತು.

ಗೌರಿಹಬ್ಬದ ಮುಂಜಾನೆ ಜೋಯಿಸರ ಮನೆ ಬಾಗಿಲಿನಲ್ಲಿ ತೆತ್ತ ಹನುಮನ ವಿಕಾರವಾದ ಓಲಗ ಮಲಗಿದ್ದವರನ್ನೆಲ್ಲಾ ಎಬ್ಬಿಸುತ್ತದೆ.

ಬೆಳಗಾದನಂತರ ಜೋಯಿಸರು ಪಲ್ಲಕ್ಕಿಯನ್ನು ತೆಗೆಸಿಕೊಂಡು ಗೌರಿಯನ್ನು ಆಹ್ವಾನಿಸಿಕೊಂಡು ಬರಲು ನದಿಗೆ ಹೋಗುತ್ತಾರೆ. ಅದೇ ಸಮಯದಲ್ಲಿ ನದಿಯಲ್ಲಿ ಸ್ತ್ರೀಯರೆಲ್ಲಾ ಸ್ನಾನಕ್ಕೆ ನೆರೆಯುತ್ತಾರೆ. ಅವರ ಅರಸಿನ ಕುಂಕುಮಗಳಿಂದ ಅರ್ಚನೆಗೊಂಡ ನದಿ ನೀರು ಬಣ್ಣಬಣ್ಣಗಳುಳ್ಳದಾಗುತ್ತದೆ. ಅವರು ನದಿಯನ್ನು ಪೂಜಿಸುವ ಹೂವುಗಳು ದೋಣಿಗಳಂತೆ ಕಣ್ಣಿಗೆ ಕಾಣುವಷ್ಟು ದೂರವೂ ತೇಲಿಕೊಂಡು ಹೋಗುತ್ತವೆ. ಅರಸಿನ ಕುಂಕುಮಗಳ ಕಾಂತಿಯಿಂದ ನದಿ ನೀರು ಕಾಮನ ಬಿಲ್ಲಿನಂತೆ ತೋರುತ್ತದೆ. ಬಿಸಿಲು ಸುಖೋಷ್ಣವಾಗಿ ಹಿತವಾಗಿರುತ್ತದೆ. ಲೋಕವು ಆ ಬಿಸಿಲನ್ನು ಹಳೆಯ ಮಿತ್ರನನ್ನು ಅಪ್ಪುವಂತೆ ಅಪ್ಪುತ್ತದೆ. ಪ್ರಕೃತಿಯು ಗೌರಿಯು ಬರುವನ್ನು ಇದಿರು ನೋಡುತ್ತಾ ಶಾಂತವಾಗಿರುತ್ತದೆ. ಪ್ರಾತಃಕಾಲದ ಸೂರ್ಯ ಜಗತ್ತಿಗೆ ಗೆಲುವನ್ನೂ ನಗೆಯನ್ನೂ ತರುತ್ತಾನೆ. ಎಲ್ಲೆಲ್ಲೂ ಆನಂದವನ್ನು ಹರಿಸುತ್ತಾನೆ. ಆ ಆನಂದದ ಎಳಬಿಸಿಲಿನಲ್ಲಿ ಜನ ಪವಿತ್ರವಾದ ಮನೋಭಾವದಿಂದ ಗೌರಿಯನ್ನು ಎದುರುಗೊಳ್ಳಲು ಸಿದ್ಧರಾಗುತ್ತಾರೆ.

ಜೋಯಿಸರು ಓಲಗ ಪಲ್ಲಕ್ಕಿಗಳೊಂದಿಗೆ ನದಿಗೆ ಹೋಗುತ್ತಾರೆ. ಮಹತ್ತಾದ ಭಕ್ತಿ ಇರುವ ಕಾಲದಲ್ಲಿ ಮಾತ್ರ ಸಾಧ್ಯವಾದ ಆ ವಾತಾವರಣ ಅವರಿಗೇನೂ ಹೊಸದಲ್ಲ. ಈ ವಾತಾವರಣ ಪ್ರತಿ ವರುಷವೂ ಈ ದಿವಸ ಮಾತ್ರ ಬರುವುದೆಂದು ಅವರಿಗೆ ಚೆನ್ನಾಗಿ ಗೊತ್ತು. ನದಿಯ ತೀರದಲ್ಲಿ ಭಕ್ತಿಯೇ ಮೂರ್ತಿವೆತ್ತಂತೆ ದೇವತೆಗಳಂತೆ ನಿಂತ ಆ ಜನ ಆವೇಶಪರರಾಗುತ್ತಾರೆ. ಹರಿಯುತ್ತಿರುವ ನದಿಯೇ ಭಗವಂತನಿಗೆ ಅಭಿಷೇಕೋದಕವಾಗುತ್ತದೆ. ಸೂರ್ಯನೇ ದೀಪವಾಗುತ್ತಾನೆ. ನದಿಯು ನೊರೆ ನೊರೆಯಾಗಿ ಘೋರ್ಗರೆಯುವುದೇ ವಾದ್ಯವಾಗುತ್ತದೆ. ಜೋಯಿಸರಿಗೂ ಆವೇಶ ಬರುತ್ತದೆ. "ಇವರೆಲ್ಲಾ ದೇವತೆಗಳು. ನಾನು ಇವರ ಬೃಹಸ್ಪತ್ಯಾಚಾರಿ" ಎಂದು ಅವರಿಗೆ ಅನುಭವವಾಗುತ್ತದೆ. "ಸೃಷ್ಟಿಯೆಲ್ಲಾ ಕನಸು. ಈ ಕನಸಿನಲ್ಲಿ ಈ ದಿನ ಮಾತ್ರ ನಿಶ್ಚಯ. ಗೌರಿದೇವಿಯು ಬರವಿನ ಈ ದಿನ ಒಂದೇ ಸತ್ಯ" ಎಂದು ಅವರಿಗೆ ಹೊಳೆಯುತ್ತದೆ. "ಇಲ್ಲಿಗೆ ಗೌರಿ ನಿಜವಾಗಿಯೂ ಬರುತ್ತಾಳೆ. ಇದು ಮಲ್ಲಿಗೆಹಳ್ಳಿಯ ಹೇಮಾವತಿಯ ದಡವಲ್ಲ. ಇದು ಕೈಲಾಸ" ಎಂಬ ಭಾವ

ದಿಂದ ಅವರು ಯಂತ್ರದಂತೆ ಕೆಲಸಮಾಡುತ್ತಾರೆ. ಜನ, ಇವರು ಗೌರಿಯ ಪೂಜಾರಿ ಎಂಬುದೊಂದನ್ನು ಹೊರತು ಉಳಿದುದನ್ನೆಲ್ಲಾ ಮರೆಯುತ್ತಾರೆ. ದೂರದಲ್ಲಿ ಕಾಣುವ ಶಿವದ ಬಾಗಿಲನ್ನು ತೆರೆಯುವ, ಶಿವದ ಇರುವಿಕೆಯನ್ನು ಸಾರುವ ಬೇಹುಗಾರನೇ ಈ ಜೋಯಿಸನೆಂದು ಜನ ನಂಬುತ್ತದೆ. ಜೋಯಿಸನ ಮುಖದಲ್ಲಿ ಆಗ "ಕೊಟ್ಟರೆ ವರ ಇಟ್ಟರೆ ಶಾಪ" ಎಂಬ ತೇಜಸ್ಸು ತಾಂಡವವಾಡುತ್ತದೆ.

ಜೋಯಿಸರು ಗೌರಿಯನ್ನು ಪಲ್ಲಕ್ಕಿಯಲ್ಲಿ ಆಹ್ವಾನಿಸುತ್ತಾರೆ. ಸ್ತ್ರೀಯರು ಒಬ್ಬರಿಗೊಬ್ಬರು ಎಲೆ ಅಡಿಕೆಗಳನ್ನೂ, ಹಣ್ಣುಕಾಯಿಗಳನ್ನೂ ಕೊಡುತ್ತಾರೆ. ಓಲಗದವರೂ, ತಮಟೆಯವರೂ ನದಿಯ ಹತ್ತಿರ ಬಂದಿರುತ್ತಾರೆ. ಗೌರಿಯ ಮೆರವಣಿಗೆ ನದಿಯಿಂದ ಊರಿನ ಕಡೆಗೆ ಹೊರಡುತ್ತದೆ. ಹುಡುಗರೆಲ್ಲಾ ಉತ್ಸಾಹದಿಂದ ಕೇಕೆ ಹಾಕುತ್ತಾ ಪೆಟ್ಲುಗಳನ್ನು ಹೊಡೆಯುತ್ತಾ ಪಲ್ಲಕ್ಕಿಯ ಸುತ್ತಾ ನೆಗೆದಾಡುತ್ತಾರೆ. ಹಿಂದೆ ಸುಮಂಗಲಿಯರು, ಮೊದಲು ಜೋಯಿಸರ ಹೆಂಡತಿ, ಅವರ ಹಿಂದೆ ಉಳಿದ ಸುಮಂಗಲಿಯರು, ಗೌಡಿತಿಯರು, ಒಕ್ಕಲಗಿತ್ತಿಯರು, ಗಾಣಿಗಿತ್ತಿಯರು ಎಲ್ಲರೂ ತಲೆಮೇಲೆ ಪೂರ್ಣ ಕುಂಭಗಳನ್ನು ಇಟ್ಟುಕೊಂಡು ಕೈಗಳಲ್ಲಿ ತಟ್ಟೆಗಳನ್ನು ಹಿಡಿದುಕೊಂಡು ಗೌರಿಗಳಂತೆ ಹೊರಡುತ್ತಾರೆ. ಊರ ಬಾಗಿಲಿನಲ್ಲಿರುವ ಮೊದಲನೆಯ ಮನೆ ಗಾಣಿಗಸೆಟ್ಟಿಯದು. ಅವನಿಗೆ ಗೌರಿಯಲ್ಲೆ ಪ್ರೀತಿ ಹೆಚ್ಚು. ಅವನಿಗೆ ಗಂಡು ಮಕ್ಕಳಿಲ್ಲ. ಇರುವವಳು ಒಬ್ಬಳು ಹುಡುಗಿ. ಅವಳೂ ಗೌರಿಗೆ ಹನ್ನೆರಡು ವರುಷ ಹರಕೆ ಮಾಡಿಕೊಂಡುದರಿಂದ ಜನಿಸಿದವಳು. ಅವಳಿಗೂ ಗೌರಿ ಎಂದೇ ಹೆಸರು. ಗೌರಿ ಹಬ್ಬದ ದಿವಸ ಗೌರಿಯೂ ಬಹು ಚೆನ್ನಾಗಿ ಅಲಂಕರಿಸಿಕೊಳ್ಳುತ್ತಾಳೆ. ಈವತ್ತು ಅವಳೂ ನದಿಗೆ ಸ್ನಾನಕ್ಕೆ ಹೋಗಿದ್ದಳು. ಗೌರಮ್ಮನ ಮೆರವಣಿಗೆ ಮನೆಬಾಗಿಲಿಗೆ ಬಂದಕೂಡಲೇ ಅವಳು ತಟ್ಟೆಯಲ್ಲಿ ಬೇಕಾದಂತೆ ಹಣ್ಣುಕಾಯಿ ಕುಂಕುಮ ತೆಗೆದುಕೊಂಡು ಪೂಜೆಗೆ ಬರುತ್ತಾಳೆ. ಈ ದಿವಸ ದೇವರ ಪೂಜೆ ಅವರವರೇ ಮಾಡಬಹುದು. ಅದಕ್ಕೆ ಜೋಯಿಸನದು ಅಡ್ಡಿ ಇಲ್ಲ. ಗೌರಿ ಬಂದು ಕುಂಕುಮ ಅರಿಸಿನ ಹೂವುಗಳಿಂದ ಗೌರಿಯನ್ನು ಪೂಜಿಸುತ್ತಾಳೆ. ಅವಳಪ್ಪ ಗಾಣಿಗ ಸೆಟ್ಟಿ-ಬಳ್ಳಿಯ

ಬಿಳಿಯ ಬಟ್ಟೆಯನ್ನುಟ್ಟುಕೊಂಡು—ತೆಂಗಿನ ಕಾಯಿಗಳನ್ನು ಒಡೆದು ಕೊಡುತ್ತಾನೆ. ಹುಡುಗರ ಪಟಾಲಂ ಗೌರಿಯನ್ನು ಪೆಟ್ಲಿನಲ್ಲಿ ಹೊಡೆಯುತ್ತಾರೆ. ಗೌರಿ ನಾಚಿಕೆಯಿಂದ ಮನೆಯೊಳಕ್ಕೆ ಓಡುತ್ತಾಳೆ. ಮೆರವಣಿಗೆ ಮುಂದೆ ಹೊರಡುತ್ತದೆ. ಸಾಬರುಗಳ ಮೂರು ಮನೆ ಸಿಕ್ಕುತ್ತದೆ. ಸಾಬರುಗಳಿಗೆ ಗೌರಿಯಲ್ಲಿ ನಂಬಿಕೆಯಿದೆಯೋ ಇಲ್ಲವೋ ಹೇಳಲಾರೆ. ಆದರೆ ಅವರೂ ಎರಡೆರಡು ತೆಂಗಿನಕಾಯಿಗಳನ್ನು ತರಿಸಿ ಗೌರಿಗೆ ಇಡಗಾಯಿ ಹಾಕಿಸುತ್ತಾರೆ. ಮುಂದೆ ಪ್ರತಿ ಮನೆಯಲ್ಲಿಯೂ ಸ್ತ್ರೀಯರು ಬಂದು ಪಲ್ಲಕ್ಕಿಯಲ್ಲಿರುವ ಗೌರಿಯನ್ನು ಪೂಜಿಸುತ್ತಾರೆ. ಹುಡುಗರು ಪೆಟ್ಲನ್ನು ಅವರಿಗೆ ಹೊಡೆದು ಹೋ ಎಂಬುದಾಗಿ ಕೂಗುತ್ತಾರೆ.

ಆ ಸಾಯಂಕಾಲ ಗೌರಿಹಬ್ಬದ ತೆಂಗಿನಕಾಯಿ ಜೂಜನ್ನು ನೋಡಲು ಊರಿಗೆ ಊರೇ ಸೇರುತ್ತದೆ. ಮಲ್ಲಿಗೆಹಳ್ಳಿ ಪೇಟೆಯಲ್ಲಿ ಊರ ಮಧ್ಯೆ ಸ್ಕೂಲು ಇದೆ. ಸ್ಕೂಲಿನ ಮುಂದೆ ನಾಲೆ ಹೋಗುತ್ತಿದೆ. ನಾಲೆಯ ಏರಿ ಕೆಳಗೆ ಎಡಗಡೆ ಕಣ್ಣಿಗೆ ಕಾಣುವಷ್ಟು ದೂರವೂ ಗದ್ದೆಗಳಿವೆ. ನಾಲೆಯ ಬಲಗಡೆ ಸ್ವಲ್ಪ ಎತ್ತರದಲ್ಲಿ ಹೊಲಗಳ ಸಾಲುಗಳಿವೆ. ಪ್ರತಿ ವರುಷವೂ ತೆಂಗಿನಕಾಯಿ ಜೂಜು ಪ್ರಾರಂಭವಾಗುವುದು ಈ ಸ್ಕೂಲಿನ ಬಾಗಿಲಿನಿಂದ. ಜೂಜು ಪ್ರಾರಂಭವಾಗುವುದಕ್ಕೆ ಒಂದುಗಂಟೆ ಮುಂಚಿನಿಂದಲೇ ಸುತ್ತಲ ಅನೇಕ ಹಳ್ಳಿಗಳ ಜನ ಮಲ್ಲಿಗೆಹಳ್ಳಿಯಲ್ಲಿ ಸೇರಿಬಿಡುತ್ತಾರೆ. ಮಲ್ಲಿಗೆಹಳ್ಳಿ ಸುತ್ತಲ ಹಳ್ಳಿಗಳಿಗೆ ಕಣ್ಣಾದುದರಿಂದ ಅಲ್ಲಿ ಯಾವ ಕೆಲಸದಲ್ಲಿಯೂ ವಿಜ್ರಂಭಣೆ ಹೆಚ್ಚು. ಜೂಜನ್ನು ನೋಡಲು ಕಾಲುವೆ ಏರಿಯ ಮೇಲೆ ಸ್ತ್ರೀಯರೂ ಮೇಲೆ ಹೊಲಗಳಲ್ಲಿ ಉದ್ದಕ್ಕೂ ಪುರುಷರೂ ನೆರೆಯುತ್ತಾರೆ. ನೀರು ತುಂಬಿದ ಕಾಲುವೆಯಲ್ಲಿ ಸ್ತ್ರೀಯರ ಬಗೆಬಗೆಯ ಬಣ್ಣದ ಉಡುಪುಗಳೂ ಮಕ್ಕಳ ಬಣ್ಣದ ಕುವಾಲಿಗಳೂ ಪ್ರತಿಬಿಂಬಿಸಿ ಶೋಭಾಯಮಾನವಾಗಿರುತ್ತದೆ. ಹತ್ತು ಹಳ್ಳಿಯ ಜನರು ತೆಂಗಿನಕಾಯಿ ಜೂಜಿನಲ್ಲಿ ಭಾಗವಹಿಸಲು ಪಂದ್ಯವನ್ನು ಕಟ್ಟುತ್ತಾರೆ. ಒಂದೊಂದು ಜೂಜಿನಲ್ಲಿ ೨೫-೩೦ ರೂಪಾಯಿಗಳ ಲಾಭ ನಷ್ಟಗಳಿವೆ. ಮಲ್ಲಿಗೆಹಳ್ಳಿ ಸ್ಕೂಲಿನಿಂದ ತೆಂಗಿನಕಾಯಿಯನ್ನು ೩ ಸಲ ಎಸೆಯುವುದರಲ್ಲಿ ಅಥವಾ ನಾಲ್ಕು ಸಲ ಎಸೆಯುವುದರಲ್ಲಿ ರಸ್ತೆಯನ್ನು ಮುಟ್ಟಬೇಕು. ಇದೇ ಜೂಜು. ಒಂದೊಂದು ಗುಂಪಿನಲ್ಲಿ ೪-೫-೬ ಜನ ಗುಂಪು ಕೂಡಿ

ಕೊಂಡು ತಮ್ಮ ವಸ್ತ್ರಾದಿಗಳೆನ್ನು ಗೊತ್ತುಮಾಡಿ "ಇವ ರಸ್ತೆಗೆ ೩ ಸಲ ಎಸೆಯುವುದರಲ್ಲಿ ಕಾಯಿ ತಲಪಿಸುತ್ತಾನೆ. ಎಸೆದ್ರೆ ನಮಗೆ ಏನು ಕೊಡ್ತೀರಿ. ಎಸೆಯದೆ ಇದ್ರೆ ನಿಮಗೆ ೩೦ ರೂಪಾಯಿ" ಎನ್ನುತ್ತಾರೆ. ಎದರಾಳಿಯ ಗುಂಪಿನವನು "ಪಂದ್ಯಕ್ಕೆ ಒಪ್ಪಿದೆ" ಎನ್ನುತ್ತಾನೆ. ಇಂತಹ ಗುಂಪುಗಳು ಪ್ರತಿವರುಷವೂ ಗೌರಿಹಬ್ಬದಲ್ಲಿ ೧೫-೨೦, ಇದ್ದಕ್ಕಿದ್ದಂತೆ ಸೃಷ್ಟಿಯಾಗಿ ನೂರಾರು ರೂಪಾಯಿಗಳ ವ್ಯವಹಾರ ನಡೆದು ಹೋಗುತ್ತದೆ. ವಸ್ತ್ರಾದಿ ಕಾಯಿ ಎಸೆಯುತ್ತಾ ಓಡುತ್ತಿರುವಾಗ ಆಚೆ ಈಚೆ ನೆರೆದವರೂ ಹುಡುಗರೂ ಅಸಾಧ್ಯವಾದ ಕೋಲಾಹಲವನ್ನುಂಟು ಮಾಡುತ್ತಾ ಅವರ ಜತೆಯಲ್ಲಿಯೂ ಹಿಂದೆಯೂ ಓಡುತ್ತಿರುತ್ತಾರೆ. ಅನೇಕರು ತಾವೂ ಕಾಯಿಗಳನ್ನು ತೆಗೆದುಕೊಂಡು ೩-೪ ಸಲ ಎಸೆಯುವುದರಲ್ಲಿ ರಸ್ತೆಗೆ ಮುಟ್ಟಿಸಲು ಪ್ರಯತ್ನಿಸುತ್ತಿರುತ್ತಾರೆ. ಅವರಿಗೆ ಪ್ರೋತ್ಸಾಹಕರ ಗುಂಪು ಬೇರೆ.

ಗೌರಿ ಹಬ್ಬದ ದಿವಸ ಗೌರಿಯ ಮೆರವಣಿಗೆಯಾದನಂತರ ಹುಡುಗರೆಲ್ಲಾ ಪೆಟ್ಲುಗಳನ್ನು ತೆಗೆದುಕೊಂಡು ಸ್ಕೂಲು ಬಾಗಿಲಿಗೆ ಹೋದರು. ಎರಡು ಮೂರು ದಿವಸ ಮುಂಚಿತವಾಗಿ, ಸುದರ್ಶನನು ಉಪಾಧ್ರ ಸಾದಿಲ್ವಾರು ಲೆಕ್ಕಗಳನ್ನು ಅಳಿಸಿದನಂತರ, ಉಪಾಧ್ರು ಅವನನ್ನು ಬೈದು, "ಇನಿಸ್ಪೆಕ್ಟರು ಬಂದಾಗ ದೇವರು ಬುದ್ಧಿಕೊಟ್ಟಂತೆ ಹೇಳೋಣ. ಇದು ಕುಂಬಾರನಿಗೆ ವರುಷ ದೊಣ್ಣೆಗೆ ನಿಮಿಷ" ಎಂಬಂತೆ ಆಯಿತು ಎಂದುಕೊಂಡು, ಉಳಿದ ಸುಣ್ಣವನ್ನೆಲ್ಲಾ ಗೋಡೆಗಳಿಗೆ ಚೆನ್ನಾಗಿ ಹತ್ತಿಸಿ ಇಂತಹ ಬಿಳಿ ಗೋಡೆ ನೋಡಿಯಾದರೂ ಇನಿಸ್ಪೆಕ್ಟರಿಗೆ ಸಾದಿಲ್ವಾರು ಹೆಚ್ಚಿಸುವ ಮನಸ್ಸು ಬರುವುದಿಲ್ಲವೇ ಎಂದುಕೊಂಡು ಸಂತೋಷದಿಂದಲೇ ಇದ್ದರು. ಸ್ಕೂಲು ಬಾಗಿಲನ್ನು ಸೇರಿದ ಕೂಡಲೇ ಹುಡುಗರು ಬಿಳಿಯ ಗೋಡೆಗೆ ಪೆಟ್ಲಿನಿಂದ ಹೊಡೆದು ಗೋಡೆಯ ಬಣ್ಣವನ್ನೆಲ್ಲಾ ಕೆಡಿಸಲು ಪ್ರಾರಂಭಿಸಿದರು. ಸ್ಕೂಲಿನ ಕಿಟಕಿ ಬಾಗಿಲು ತೆರೆದಿದ್ದಿತು. ಉಪಾಧ್ರು ಸಾಧಾರಣವಾಗಿ ತಮ್ಮ ರುಮಾಲನ್ನು ಮನೆಗೆ ತೆಗೆದುಕೊಂಡು ಹೋಗುತ್ತಿರಲಿಲ್ಲ. ಅವರಿಗೆ ರುಮಾಲು ಬೇಕಾಗಿದ್ದುದು ಸ್ಕೂಲಿನಲ್ಲಿ ಮಾತ್ರ. ಅದೂ ಬಹಳ ಅಪರೂಪವಾಗಿ. ಇನಿಸ್ಪೆಕ್ಟರಾಗಲಿ, ಅಧಿಕಾರಿಗಳಾಗಲಿ ಮಲ್ಲಿಗೆಹಳ್ಳಿಗೆ ಬಂದರೆ ರುಮಾಲು ತತ್‌ಕ್ಷಣ ಉಪಾಧ್ರ ತಲೆಗೆ ಹೋಗು

ತ್ತಿದ್ದಿತು. ಅದರ ಹೊರತು ಉಳಿದ ಕಾಲಗಳಲ್ಲಿ ಉಪಾಧ್ಯರು ರುಮಾಲು ಗೂಟವನ್ನು ಬಿಟ್ಟು ಕದಲುತ್ತಿರಲಿಲ್ಲ. ಇನಿಸ್ಪೆಕ್ಟರು ಬರುವ ಕಾಲವಾಗಿದ್ದುದರಿಂದ ಉಪಾಧ್ಯರು ರುಮಾಲನ್ನು ಚೆನ್ನಾಗಿ ಒಗೆದು ಅದರ ಗರಿ ಸ್ವಲ್ಪವೂ ಮಾಸದಂತೆ ಸುತ್ತಿ ಗೂಟಕ್ಕೆ ನೇತುಹಾಕಿದ್ದರು. ಸುದರ್ಶನನೂ ಅವನ ಗೆಳೆಯರೂ ಕಿಟಕಿಯಿಂದ ಸ್ಕೂಲಿನೊಳಕ್ಕೆ ನೋಡಿದಾಗ ಉಪಾಧ್ಯರ ಬಿಳಿಯ ರುಮಾಲು ಕಂಡಿತು. ಅದರ ಕೆಳಗೆ ಉಪಾಧ್ಯರ ತಲೆಯು ಕಾಣದುದರಿಂದ ಅವರಿಗೆ ಬಹಳ ಧೈರ್ಯವಾಯಿತು. ಅವರು ಒಬ್ಬರ ಮೇಲೊಬ್ಬರು ಹೊಡೆಯುತ್ತಿದ್ದ ಪೆಟ್ಲುಗಳಿಗೆ ಒಂದು ಗುರಿ ದೊರೆತಂತೆ ಆಯಿತು. ಹುಡುಗರೆಲ್ಲಾ ಆ ರುಮಾಲಿಗೆ ಗುರಿಯಿಟ್ಟು ಪೆಟ್ಲು ಹೊಡೆಯಲು ಪ್ರಾರಂಭಿಸಿದರು. ರುಮಾಲು ಎದುರು ಗೋಡೆಯಲ್ಲಿದ್ದುದರಿಂದ ಮೊದಲು ಮೊದಲು ಯಾರ ಪೆಟ್ಲೂ ಅದಕ್ಕೆ ತಗಲಿಲ್ಲ. ಆದರೆ ಬರ ಬರುತ್ತಾ ಹುಡುಗರ ಉತ್ಸಾಹ ಹೆಚ್ಚಾಯಿತು. ಅವರಿಗೆ ರುಮಾಲಿನ ಮೇಲೆ ಬಹಳ ಕೋಪ ಬಂದಿತು. ಅವರ ಹತ್ತಿರ ದೊಡ್ಡ ಹೊರೆ ಪೆಟ್ಲು ಕಾಯಿ ಇದ್ದಿತು. ಅವರು ಮತ್ತೆ ಮತ್ತೆ ಹೊಡೆಯಲು ಪ್ರಾರಂಭಿಸಿದರು. ಸ್ವಲ್ಪಹೊತ್ತಿನ ಒಳಗಾಗಿ ಸುದರ್ಶನನ ಪೆಟ್ಲೇ ರುಮಾಲಿಗೆ ತಗಲಿತು. ಆ ಬಿಳಿಯ ರುಮಾಲಿನ ನಡುವೆ ಒಂದು ಕಪ್ಪುಗೆರೆ ಕಂಡಿತು. ಉಳಿದ ಹುಡುಗರೂ ಜಯಶಾಲಿಗಳಾಗತೊಡಗಿದರು. ಉಪಾಧ್ಯರ ರುಮಾಲೆಲ್ಲಾ ಕಪ್ಪೇ ಆಗಿಹೋಯಿತು. ಇನಿಸ್ಪೆಕ್ಟರಿಗಾಗಿ ಮಾಡಿದ್ದ ಬಿಳಿಯ ಗೋಡೆಯೂ ಕಪ್ಪೇ ಆಯಿತು.

ಆ ವರುಷ ವಿನಾಯ್ಕನ ಹಬ್ಬ ಮಲ್ಲಿಗೆಹಳ್ಳಿಯಲ್ಲಿ ಉಳಿದ ವರುಷಗಳಿಗಿಂತ ಚೆನ್ನಾಗಿಯೇ ನಡೆಯಿತು. ಆದರೆ ಗಣಪತಿಯ ವಿಗ್ರಹದ ವಿಚಾರವೇ ಸ್ವಲ್ಪ ಐಬು ಆಗಿದ್ದಿತು. ಮಲ್ಲಿಗೆಹಳ್ಳಿಯಲ್ಲಿ ಹಿಂದೆ ಪೇಟೆ ಕಾಳಪ್ಪ ಗಣಪತಿಗಳನ್ನು ಮಾಡುತ್ತಿದ್ದರಂತೆ. ಆದರೆ ಈಚೆಗೆ ಅವರಿಗೆ ಏನೋ ದುಃಖ ಬಂದು ಗಣಪತಿ ಮಾಡುವುದನ್ನು ಹತ್ತು ವರುಷಕಾಲ ನಿಲ್ಲಿಸಿದ್ದರು. ಆದರೆ ನಾವು ಹೇಳುವ ವರುಷ ಕಾಳಪ್ಪ ಮತ್ತೆ ಗಣಪತಿ ಮಾಡಿದರು. ಹತ್ತು ವರುಷಗಳಿಂದ ಮಾಡದುದರಿಂದ ಅವರಿಗೆ ಗಣಪತಿಯನ್ನು ಮಾಡುವ ಅಭ್ಯಾಸ ತಪ್ಪಿತ್ತು. ವಯಸ್ಸಾಗಿದ್ದಿತು. ಕಣ್ಣು ಸ್ವಲ್ಪ ಮಂಜಾಗಿದ್ದಿತು. ಗಣಪತಿಯ ವಿಗ್ರಹ ಬಹಳ ಮಟ್ಟಿಗೆ ಹೆಚ್ಚು

ಕಡಿಮೆ ಆಯಿತು. ಎಲ್ಲಾದಕ್ಕಿಂತ ಹೆಚ್ಚಾಗಿ ಗಣಪತಿಯ ಕೈಗಳು ಅವನ ತಲೆಗಿಂತ ದಪ್ಪವಾಗಿದ್ದುವು. "ಯಾಕಯ್ಯ ಹೀಗಾಯಿತು" ಎಂದು ಮಣೆಗಾರರು ವಿಚಾರಿಸಿದರು. ಕಾಳಪ್ಪ ಕತ್ತನ್ನು ಕುಣಿಸುತ್ತಾ "ಸರಿಯಾದ ಮಣ್ಣು ಸಿಕ್ಕಲಿಲ್ಲ". ಎಂದರು.

ಜೋಯಿಸರು ಗಣಪತಿ ಪೂಜೆ ವಿನಿಯೋಗ ಇವುಗಳನ್ನೆಲ್ಲಾ ಸಂಭ್ರಮದಿಂದ ನಡೆಸಿದರು. ಆ ವೇಳೆಗೆ ವಿದ್ಯಾ ಇನಿಸ್ಪೆಕ್ಟರು ಊರಿಗೆ ಬಂದರೆಂಬುದು ಗೊತ್ತಾಯಿತು. ಆವತ್ತು ಬಹುಶಃ ಇನಿಸ್ಪೆಕ್ಟರು ಬರಬಹುದೆಂದು ಊರಿನಲ್ಲಿ ಗೊತ್ತಿತ್ತು. ಇನಿಸ್ಪೆಕ್ಟರು ಬಂದು ಟಿ. ಬಿ. ಯಲ್ಲಿ ಇಳಿದ ಸುದ್ದಿ ತಿಳಿದಕೂಡಲೇ ಉಪಾಧ್ರು ಹೋಗಿ ಅವರನ್ನು "ಸ್ವಾಮಿಗಳು ಮಂಗಳಾರತಿಗೆ ದಯಮಾಡಬೇಕೆಂದು" ಕರೆದುಕೊಂಡು ಬಂದರು. ಗ್ರಾಮಸ್ಥರು ಇನಿಸ್ಪೆಕ್ಟರನ್ನು ಕಂಡು "ನಮಸ್ಕಾರ ಮಹಾಸಾಮಿ" ಎಂದು ಸ್ವಾಗತಿಸಿದರು. ಅನಂತರ ಗಣಪತಿಯ ಮೆರವಣಿಗೆಯು ನದಿಯ ಕಡೆಗೆ ಪ್ರಾರಂಭವಾಯಿತು. ನದಿಯ ತೀರಕ್ಕೆ ಹೋದ ನಂತರ ಇನಿಸ್ಪೆಕ್ಟರು ತಾವು ಬಂದುದಕ್ಕೆ ಏನಾದರೂ ಹೊಸ ಪದ್ಧತಿ ಇರಲಿ ಎಂದುಕೊಂಡು "ಗಣಪತಿಯನ್ನು ಮೂಕರಾಗಿ ನದಿಗೆ ಬಿಡಬೇಡಿ. ಗ್ರಾಮಸ್ಥರೆಲ್ಲಾ ಸೇರಿದ್ದೀರಿ. ಒಕ್ಕಲಿಗರು ಸ್ತ್ರೀಯರು ಮಕ್ಕಳು ಎಲ್ಲ ನೆರೆದಿದ್ದಾರೆ. ಅವರಿಗೆಲ್ಲಾ ಬೋಧೆಯಾಗುವಂತೆ ಗಣಪತಿಯನ್ನು ಕುರಿತು ಹೇಳಿ" ಎಂದರು. ನೆರೆದಿದ್ದವರೆಲ್ಲಾ ಮೇಟ್ರು ಹೇಳ್ತಾರೆ ಮೇಷ್ಟ್ರು" ಎಂದರು. ಇನಿಸ್ಪೆಕ್ಟರು "ಸರಿ. ಮೇಷ್ಟ್ರೆ ಬನ್ನಿ ನಾಲ್ಕು ಉಪದೇಶದ ಮಾತುಗಳನ್ನಾಡಿ" ಎಂದರು.

ಮೇಷ್ಟರಿಗೆ ಪೀಕಲಾಟಕ್ಕೆ ಬಂದಿತು. ಉಪನ್ಯಾಸ ಮಾಡುವುದಕ್ಕೆ ಅವರಿಗೆ ಬರುತ್ತಿರಲಿಲ್ಲವೆಂದಲ್ಲ. ಅವರು ನಿತ್ಯಾ ಹಳ್ಳಿಯುವರಿಗೆ ಸಾವಿರಾರು ವಿಚಾರಗಳ ಮೇಲೆ ಸಾವಿರಾರು ಉಪನ್ಯಾಸಗಳನ್ನು ಮಾಡುತ್ತಿದ್ದರು. ಅಲ್ಲದೆ "ಇನಿಸ್ಪೆಕ್ಟರಿಗೆ ತಿಳಿದಿರುವುದಕ್ಕಿಂತ ತಮಗೆ ಹೆಚ್ಚಾಗಿ ಗೊತ್ತಿದೆ. ಈ ಇನಿಸ್ಪೆಕ್ಟರು ಕಂಡಿರುವುದು ಒಂದು ಇಂಗ್ಲಿಷ್ ಕೊಸ್ ಪಸ್. ಇವನ ಅಪ್ಪ ಇಂಗ್ಲಿಷ್ ಕಲಿಯಲಿಲ್ಲ. ಅಜ್ಜ ಇಂಗ್ಲಿಷ್ ಕಲಿಯಲಿಲ್ಲ, ಮಗನ ಕಾಲಕ್ಕೆ ಪೂರಾ ಮರೆಯುತ್ತೆ" ಎಂದು ಅವರಿಗೆ ಚೆನ್ನಾಗಿ ನಂಬಿಕೆ ಇದ್ದಿತು. ಆದರೆ ಮೇಲಧಿಕಾರಿಯ ಎದುರಿಗೆ ಹೇಗೆ

ಮಾತನಾಡಿದರೂ ಕಷ್ಟ. ಸ್ವಲ್ಪ ಚೆನ್ನಾಗಿ ಮಾತನಾಡಿದರೆ "ಎಲಾ ಇವನು ಪ್ರಚಂಡ ಇವನ ಬಾಲ ಕುಯ್ಯಬೇಕು" ಎನ್ನುತ್ತಾನೆ. ಸ್ವಲ್ಪ ಮಂಕಾಗಿ ಮಾತನಾಡಿದರೆ "ಇದಕ್ಕೆ ಏನೂ ತಿಳಿಯದು" ಎಂದು ಮೇಲೆ ಸವಾರಿ ಮಾಡುತ್ತಾನೆ. ಕೊನೆಯದಾಗಿ ಹೇಗೂ ಅಧಿಕಾರಿಗಳ ಎದುರಿಗೆ ಬರಬಾರದು. ಎಲೆಯ ಮರೆಯ ಕಾಯಿಯಂತೆ ಇರಬೇಕು. ಅಧಿಕಾರಿಗಳಿಗೆ ತಮ್ಮ ಮುಖದ ಪರಿಚಯ ಸಹ ಚೆನ್ನಾಗಿ ಇರಬಾರದು. ಅವರು ಸ್ಕೂಲಿನಲ್ಲಿ ಹೊರತು ಬೇರೆ ಕಡೆ ತಮ್ಮನ್ನು ನೋಡಿದರೂ ತಮ್ಮ ಗುರುತು ಅವರಿಗೆ ಹತ್ತಬಾರದು" ಎಂಬುದೇ ಉಪಾದ್ರ ಅಭಿಪ್ರಾಯವಾಗಿದ್ದಿತು. ಏನುಮಾಡಲಿ ಎಂದು ಅವರು ಯೋಚಿಸುತ್ತಿರುವಾಗ ಗಣಪತಿ ಕಾಳಪ್ಪನು "ಪುಟ್ಟರಾಮಪ್ಪನವರು ಮಾತನಾಡಲಿ, ಅವರು ಅನೇಕ ವಿಚಾರ ಸಾಸ್ತ್ರ ಓದಿ ಗಟ್ಟಿಮಾಡಿ ಗ್ನಾನಿಗಳಾಗಿದ್ದಾರೆ. ಅವರು ಹೇಳಿದ್ಮೇಲೆ ಮೇಟ್ರು ಹೇಳಲಿ" ಎಂದನು. ಪುಟ್ಟರಾಮಪ್ಪನವರು ಬೇಡ ಬೇಡ ಎಂದರು. ಕಾಳಪ್ಪನು "ಇಲ್ಲ ಸಾಮಿ. ಇನಿಸ್ಪೆಕ್ಟರಿಗೆ ನಿಮ್ಮ ವೇಗ್ಯತೆ ತಿಳೀಲಿ. ಇಲ್ದಿದ್ರೆ ಈ ಊರು ಐಗೊಳೆಲ್ಲಾ ಬರಿಪುಳ್ಳಾರು· ಹಳ್ಳಿ ಹಾರವ್ರು ಎಂದು ತಿಳ್ಕೊತಾರೆ" ಎಂದು ಒತ್ತಾಯಪಡಿಸಿದನು. ಪುಟ್ಟರಾಮಪ್ಪನವರು ವಿಧಿಯಿಲ್ಲದೆ ಒಪ್ಪಿದರು.

ಮೊದಲು ಪುಟ್ಟರಾಮಪ್ಪನವರು ಹೇಗಿದ್ದಾರೆ ಎಂಬುದು ನಿಮ್ಮ ಮನಸ್ಸಿಗೆ ಬರಬೇಕು. ಪುಟ್ಟರಾಮಪ್ಪನವರ ದೇಹ ಸ್ವಲ್ಪ ದಪ್ಪ ದೇಹವೇಯೆ. ತಲೆ ಮಾತ್ರ ಉಳಿದ ಅವಯವಗಳಿಗಿಂತ ಹೆಚ್ಚು ದಪ್ಪವಾಗಿ ಸೋರೆ ಬುರುಡೆಯಂತೆ ಕೊಬ್ಬಿದೆ. ಹಣೆ ವಿಶಾಲವಾಗಿದೆ. ತುಟಿ ದಪ್ಪವಾಗಿದೆ. ಕೈಕಾಲು ಮಾಂಸಖಂಡಗಳಿಂದ ಪುಷ್ಟವಾಗಿವೆ. ಎಷ್ಟು ತಿಂಡಿ ತಿಂದು ತಯಾರಿ ತೆಗೆದುಕೊಂಡರೂ ಯಾವ ಜಟ್ಟಿಯ ಕೈಕಾಲೂ ಪುಟ್ಟರಾಮಪ್ಪನವರ ಕೈಕಾಲುಗಳಂತೆ ರಸವತ್ತಾಗುವುದಿಲ್ಲ. ರಾಮಪ್ಪನವರು ಎಲ್ಲರಷ್ಟೇ ಎತ್ತರವಾಗಿದ್ದರೂ ಹೊಟ್ಟೆ ದಪ್ಪವಾಗಿರುವುದರಿಂದ ಸ್ವಲ್ಪ ಕುಳ್ಳಾಗಿ ತೋರುತ್ತಾರೆ. ಅವರು ಯಾವಾಗಲೂ ಹಳೆಯದಾಗಿ ಸ್ವಲ್ಪ ಹರಿದ ಜರಿ ಪಂಚೆಯೊಂದನ್ನೇ ಉಟ್ಟಿರುತ್ತಾರೆ. ಆ ಪಂಚೆಯನ್ನು ಅವರು ವಾರಕ್ಕೆ ಒಂದು ದಿನವಾದರೂ ಸರಿಯಾಗಿ ಒಗೆಯುತ್ತಾರೆಯೋ ಇಲ್ಲವೋ ಹೇಳಲಾರೆ. ಅದರಲ್ಲಿರುವ ಹರಕು ತೂತುಗಳನ್ನಂತೂ ಖಂಡಿತ

ಹೊಲಿಯುವುದೇ ಇಲ್ಲವೆಂದು ಅವರು ಪ್ರತಿಜ್ಞೆ ಮಾಡಿರುವಂತೆ ಕಾಣುತ್ತಿದೆ. ಅವರ ಎರಡನೆಯ ಉಡುಪು ಒಂದು ಬಿಳಿಯ ಜುಬ್ಬ. ಅದರಲ್ಲಿಯೂ ಕೊಳೆ ಕೊಳೆತು ಕಪ್ಪಾಗಿದೆ. ಅವರ ದೇಹದ ಗಾತ್ರದಿಂದ ಆ ಜುಬ್ಬ ಹೊಲೆದ ಬಟ್ಟೆಯಂತೆ ತೋರುವುದೇ ಇಲ್ಲ. ದೊಡ್ಡದಾದ ಒಂದು ಥಾನು ಬಟ್ಟೆಯನ್ನು ಹೆಗಲಿನ ಮೇಲೆ ಹಾಕಿಕೊಂಡಿರುವಂತೆ ಆಚೆ ಈಚೆ ಉದ್ದವಾಗಿ ನೇತುಬಿದ್ದಿರುತ್ತದೆ. ಅವರು ಉಡುವ ಜರಿ ಪಂಚೆಯೇನೋ ಒಳ್ಳೆಯ ಬೆಲೆಯಾದುದೇ. ಬೇರೆ ಪಂಚೆಯಿಲ್ಲದೆ ಅವರು ಆ ಪಂಚೆಯನ್ನು ಉಡುತ್ತಾರೋ ಅಥವ ಹರಿದರೆ ಹರಿಯಲೆಂದು ಉಡುತ್ತಾರೋ ತಿಳಿಯದು. ಅವರಷ್ಟು ಜವಾಬ್ದಾರಿಯಿಲ್ಲದ ಮನುಷ್ಯರನ್ನು ನಾನು ಎಲ್ಲೂ ನೋಡಿಲ್ಲ. ಪುಟ್ಟರಾಮಪ್ಪನವರು ವಾನಪ್ರಸ್ಥನಂತೆ ತೋರುತ್ತಾರೆ. ವಯಸ್ಸು ೫೦ಕ್ಕೆ ಮೀರಿದೆ. ಒಳ್ಳೆಯ ವಿದ್ಯಾವಂತರೆಂದೇ ಹೇಳಬೇಕು. ರಾಮಾಶ್ವಮೇಧ ಜಗನ್ನಾಥ ವಿಜಯ ಬಸವೇಶ್ವರನ ವಚನಗಳು ಮುಂತಾದ ಗ್ರಂಥಗಳನ್ನು " ನೋಡಿದ್ದಾರೆ" ಹೊಸ ಕನ್ನಡದಲ್ಲಿ ಬಿ. ವೆಂಕಟಾಚಾರ್ಯರ ಕಾದಂಬರಿಗಳನ್ನೆಲ್ಲಾ ಓದಿದ್ದಾರೆ. ಯಾವ ವಿಚಾರದ ಮೇಲೆ ಬೇಕಾದರೂ ಅರ್ಧಗಂಟೆ ಒಂದು ಗಂಟೆ ಸುಲಭವಾಗಿ ಮಾತನಾಡುತ್ತಾರೆ. ಪುಟ್ಟರಾಮಪ್ಪನವರು ಉರ್ದು ಭಾಷೆಯನ್ನು ಓದುವುದನ್ನೂ ಬರೆಯುವುದನ್ನೂ ಬಲ್ಲವರಾಗಿದ್ದರು. ಆ ಕಾಲದಲ್ಲಿ ಅದರಲ್ಲಿಯೂ ಪಟ್ಟಣಗಳ ಅನುಭವವೇ ಇಲ್ಲದ ಹಳ್ಳಿಯಲ್ಲಿ, ಮುಸಲ್ಮಾನರು ಕಡಿಮೆಯಾಗಿದ್ದ ಮಲ್ಲಿಗೆ ಹಳ್ಳಿಯಲ್ಲಿ ಹಿಂದುವಾದವನು ಉರ್ದುವನ್ನು ಬಲಗಡೆಯಿಂದ ಎಡಗಡೆಗೆ ಬರೆಯುವುದೂ ಅಲ್ಲಾ ಶಾಸ್ತ್ರವನ್ನೂ ಓದಿರುವುದೂ ಅಪರೂಪವಾಗಿದ್ದುದಲ್ಲದೆ ಪುಟ್ಟರಾಮಪ್ಪನವರ ಗೌರವವನ್ನೂ ಅದು ಹೆಚ್ಚಿಸಿತ್ತು. ಮಲ್ಲಿಗೆ ಹಳ್ಳಿಯ ಮುಸಲ್ಮಾನರ ಮದುವೆಗಳಲ್ಲಿ ಅಲ್ಲಿಗೆ ಬರುತ್ತಿದ್ದ ಖಾಜಿಗಳೂ, ರಂಜಾನ್, ಬಕ್ರೀದ್‌ಗಳಲ್ಲಿ ಬರುತ್ತಿದ್ದವರೂ, ಪುಟ್ಟರಾಮಪ್ಪನವರೊಂದಿಗೆ ಬಂದು, ಯಾವುದೋ ಒಂದು ಹಳೆಯ ಮೈತ್ರಿಯಿಂದಲೋ ಎಂಬಂತೆ ಮಾತನಾಡಿಕೊಂಡು ಹೋಗುತ್ತಿದ್ದರು. ಅನೇಕ ಹಿಂದುಗಳಿಗೆ ಕನ್ನಡ ಮಾತನಾಡುವುದಕ್ಕೆ ಬಂದರೂ ಬರೆಯುವುದಕ್ಕೆ ಹೇಗೆ ಬರುವುದಿಲ್ಲವೋ ಹಾಗೆಯೇ ಮಲ್ಲಿಗೆ ಹಳ್ಳಿಯ ಮುಸಲ್ಮಾನರಿಗೆ ಉರ್ದು ಮಾತನಾಡುವುದಕ್ಕೆ ಬಂದರೂ ಓದು

ವುದಕ್ಕೂ ಬರೆಯುವುದಕ್ಕೂ ಬರುವುದಿಲ್ಲ. ಅವರಿಗೆ ಉರ್ದು ಕಾಗದ ಬರುವುದೂ ಇಲ್ಲ. ಅವರಿಗೆ ಬರುವ ಕಾಗದಗಳು ಕನ್ನಡದಲ್ಲಿಯೇ ಬರೆದ ವಾಗಿರುತ್ತವೆ. ಅಕಸ್ಮಾತ್ತಾಗಿ ಏನಾದರೂ ಒಂದು ಉರ್ದು ಕಾಗದ ಮಲ್ಲಿಗೆ ಹಳ್ಳಿಯ ಮುಸಲ್ಮಾನರಿಗೆ ಬಂದರೆ ಅದನ್ನು ಅವರು ಪುಟ್ಟರಾಮ ಪ್ಪನವರಲ್ಲಿಗೆ ತಂದು ಓದಿಸಿಕೊಂಡು ಹೋಗುತ್ತಾರೆ. ಮಲ್ಲಿಗೆ ಹಳ್ಳಿಯ ಹಿಂದು ಮುಸಲ್ಮಾನರ ಮೈತ್ರಿಗೆ ಪುಟ್ಟರಾಮಪ್ಪನವರ ಈ ಸ್ವಭಾವವೂ ಕಾರಣವಾಗಿದೆ. ಬಹುಕಾಲದ ಗ್ರಾಮಜೀವನದ ಅನುಭವದ ಒಂದು ವಿಧವಾದ ನಿಸ್ವಾರ್ಥತೆಯೂ ಅವರ ಎಲ್ಲಾ ಮಾತು ಕೆಲಸಗಳಿಗೆ ಒಂದು ವಿಧವಾದ ಮಾರ್ದವವನ್ನು ಕೊಡುತ್ತಿದ್ದಿತು. ಇವರು ನಮ್ಮ ಮಿತ್ರರು ಎಂಬ ನಂಬಿಕೆ ಹಳ್ಳಿಯವರಿಗೆ ದೃಢವಾಗಿತ್ತು.

ಪುಟ್ಟರಾಮಪ್ಪನವರು ಪೂರ್ವಕಾಲದ ಮನುಷ್ಯರು. ಬಹಳ ಧೈರ್ಯ ಶಾಲಿಗಳೂ, ಸತ್ವಶಾಲಿಗಳೂ, ಸುಸಂಸ್ಕೃತರೂ ಆಗಿದ್ದರು. ಆ ಬಗೆಯ ಜನ ಈಗ ನಮ್ಮಲ್ಲಿ ಕಡಿಮೆಯಾಗುತ್ತಿದ್ದಾರೆ. ನಮ್ಮ ದೇವರು ನಮ್ಮ ಶಾಸ್ತ್ರ, ನಮ್ಮ ಸಂಸ್ಕೃತಿ ಇವುಗಳಲ್ಲಿ ನಂಬಿಕೆ ಕಡಿಮೆಯಾಗುತ್ತಿರುವುದರ ಜತೆಗೆ ನಮ್ಮ ಜನರ ಧೈರ್ಯವೂ ಕುಗ್ಗುತ್ತಿದೆ. ಜೀವನದೊಂದಿಗೆ ಕಾದಾ ಡುವ, ಬರುವ ಕಷ್ಟವನ್ನು ಎದುರುಗೊಳ್ಳುವ ಬಂದುದನ್ನು ಅನಿವಾರ್ಯ ವೆಂದು ಧೈರ್ಯದಿಂದ ಎದುರಿಸುವ ಸಾಮರ್ಥ್ಯ ಬರಬೇಕಾದರೆ ನಮಗೆ ಜೀವನದಲ್ಲಿ ಒಂದು ನಂಬಿಕೆ, ಒಂದು ಭಕ್ತಿ ಇರಬೇಕು. ಆ ಒಂದು ನಂಬಿಕೆ ಇಲ್ಲದಿದ್ದರೆ ನಮ್ಮ ಜೀವನಕ್ಕೆ ಅರ್ಥವಿಲ್ಲದುದಾಗುತ್ತದೆ. ನಮ್ಮ ಇಂದಿನವರ ಹೇಡಿತನವನ್ನೂ ಆಚರಣೆಗಳನ್ನೂ ನೋಡಿ ನಮ್ಮ ಪೂರ್ವಿ ಕರು ಎಂದಿಗೂ ಹೀಗೆ ಹೇಡಿಗಳಾಗಿರಲಿಲ್ಲವೆಂಬ ಭಾವ ನಮಗೆ ಬರುವುದಕ್ಕೆ ಇದೇ ಕಾರಣ. ಜೀವನಕ್ಕೆ ಅರ್ಥವನ್ನು ಕೊಡುವುವು ಕೆಲವು ಭಾವಗಳು, ಕೆಲವು ನಂಬಿಕೆಗಳು. ಆ ನಂಬಿಕೆಗಳಿಗೆ ಸರಿಯಾದ ಆಧಾರವಿದೆಯೇ ಇಲ್ಲವೇ ಎಂಬುದು ಬೇರೆ ಪ್ರಶ್ನೆ. ಆ ನಂಬಿಕೆಯನ್ನಿಟ್ಟು ಕೊಂಡಿದ್ದ ನಮ್ಮ ಹಿರಿಯರು ಆ ನಂಬಿಕೆಯೇ ಇಲ್ಲದಿರುವ ನಮಗಿಂತ ಹೆಚ್ಚು ಧೀರರೂ, ಶೂರರೂ ಆಗಿದ್ದರೆಂಬುದರಲ್ಲಿ ಸಂದೇಹವಿಲ್ಲ.

ಪುಟ್ಟರಾಮಪ್ಪನವರು ತಲೆಗೆ ಒಂದು ಕರವಸ್ತ್ರವನ್ನು ಸುತ್ತಿಕೊಂಡು ಗಣಪತಿಯ ಮೇಲೆ ಉಪನ್ಯಾಸಮಾಡಲು ಎದ್ದುನಿಂತರು. ಅನಂತರ

ಈ ರೀತಿ ಹೇಳಿದರು. "ಗಣಪತಿ ವಿಚಿತ್ರವಾದ ದೇವರು. ತಲೆ ನೋಡಿ ದರೆ ಆನೆ, ಸೊಂಟಕ್ಕೆ ಸುತ್ತಿರೋದು ಹಾವು. ಕೈನಲ್ಲಿರೋದು ಅಂಕುಶ. ಸವಾರಿ ಮಾಡೋದು ಇಲಿ. ಇದ್ಯಾಕೆ ಬಲ್ಲಿರಾ? ಗಣಪತಿಯ ತಲೆ ಆನೆಯ ಹಾಗಿರೋದು ಮನುಷ್ಯನ ತಲೆಯಲ್ಲಿರುವ ಅಹಂಭಾವವನ್ನೂ, ಮದವನ್ನೂ ತೋರಿಸುತ್ತದೆ. ಹೊಟ್ಟೆಗೆ ಹಾವನ್ನು ಸುತ್ತಿರೋದು ಮನು ಷ್ಯನ ಹೊಟ್ಟೆಯಲ್ಲಿರುವ ಕೋಪ, ಅಸೂಯೆ, ದ್ವೇಷ ಮುಂತಾದ ವಿಷ ವನ್ನು ಸೂಚಿಸುತ್ತದೆ. ಗಣಪತಿ ಕೈಯಲ್ಲಿ ಅಂಕುಶವನ್ನು ಹಿಡಿದು ಈ ಮದವನ್ನೂ ಈ ವಿಷವನ್ನೂ ಅಮುಕಿ ಹಿಡಿದಿದ್ದಾನೆ. ಅವನ ವಾಹನ ವಾದ ಇಲಿ...............".

ಪುಟ್ಟ ರಾಮಪ್ಪನವರು ಹೀಗೆ ಉಪನ್ಯಾಸ ಮಾಡುತ್ತಿರುವಾಗಲೇ ಮೂಗಿಗೆ ನಶ್ಯವನ್ನು ಏರಿಸುತ್ತಾ ಶಾಲುವನ್ನು ಸರಿಯಾಗಿ ಹೊದ್ದು ಕೊಂಡು ಪಂಡಿತರು ಮೇಲಕ್ಕೆ ಎದ್ದರು. ಪಂಡಿತರು ಎನ್ನುವ ಹೆಸರನ್ನು ಅವರಿಗೆ ಮಲ್ಲಿಗೆಹಳ್ಳಿಯಲ್ಲಿ ಯಾರೂ ಕೊಡದಿದ್ದರೂ ರಾಘವಾಚಾರ್ರು ತಾವೇ ಆ ಗೌರವವನ್ನು ತಮಗೆ ಕೊಟ್ಟುಕೊಂಡಿದ್ದರು. ಕಾಗದಗಳನ್ನು ಇತರರಿಗೆ ಬರೆಯುವಾಗ ಕೆಳಗೆ ಪಂಡಿತ ರಾಘವಾಚಾರ್ ಎಂದು ರುಜು ಹಾಕುತ್ತಿದ್ದರು. ಅವರು ತಮಗೆ ತಿಳಿಯದ ಶಾಸ್ತ್ರವೇ ಇಲ್ಲವೆಂದೂ ಸಾಹಿತ್ಯವೇ ಇಲ್ಲವೆಂದೂ ಅಂದುಕೊಂಡು ಯಾರು ಎಲ್ಲಿ ಮಾತನಾಡುತ್ತಿರಲಿ ತಾವು ಮಧ್ಯೆ ಬಾಯಿಹಾಕಿ ಯಾವು ದಾದರೂ ಒಂದು ಶ್ಲೋಕದಲ್ಲಿ ಅರ್ಥವನ್ನು ಹೇಳಿಬಿಡುತ್ತಿದ್ದರು. ಮುಂದಲ ಅರ್ಥ ಅವರ ಬಾಯಿಗೆ ಬರುತ್ತಿರಲಿಲ್ಲ. 'ಮುಂದಕ್ಕೆ ಏನೋ ಇದೆ ಏನೋ ಇದೆ' ಎಂದು ಅವರು ಯೋಚಿಸುತ್ತಿರುವಾಗ ಎದುರಿಗಿದ್ದ ವರು ಹೊರಟುಹೋಗುತ್ತಿದ್ದರು. ಬರ ಬರುತ್ತಾ ಪಂಡಿತರಿಗೆ ಯಾವ ಮಾತೂ, ಶ್ಲೋಕವಿಲ್ಲದೆ ಹೊರಡುತ್ತಲೇ ಇರಲಿಲ್ಲ. ಶ್ಲೋಕ ಬಾಯಿಗೆ ಬರುತ್ತಿರಲಿಲ್ಲವಾದುದರಿಂದ ಅವರು ಮಾತನಾಡಲು ಪ್ರಾರಂಭಿಸಿದಾಗ "ಆ ರಾಮಾಯಣದಲ್ಲಿ ಏನೋ ಹೇಳಿದೆಯೆಲ್ಲ. ಆ ಭಾರತದಲ್ಲಿ ಭಾಗವತದಲ್ಲಿ ಅದು ಮುಂಡೇದು ಜ್ಞಾಪಕ ಬರೋದಿಲ್ಲ" ಎಂಬುದಾಗಿ ಶ್ಲೋಕವನ್ನು ಜ್ಞಾಪಿಸಿಕೊಳ್ಳುತ್ತಾ ಹೇಳುವ ಮಾತನ್ನೇ ಮರೆತುಬಿಡುತ್ತಿದ್ದರು. ಹೀಗಾಗಿ ಅವರನ್ನು ಯಾವ ವಿಷಯದಲ್ಲಿಯೂ ಯಾರೂ ಏನನ್ನೂ ಕೇಳುತ್ತಲೇ ಇರ

ಲಿಲ್ಲ. ಯಾರಾದರೂ ಕೇಳಿದರೆ ಪಂಡಿತರು ತಮ್ಮ ಅಭಿಪ್ರಾಯವನ್ನು ಖಂಡಿತವಾಗಿ ಹೇಳುತ್ತಲೂ ಇರಲಿಲ್ಲ. ಜನ " ಅವರನ್ನು ಯಾಕೆ ಕೇಳುತ್ತೀರಿ. ಅವರು ಶ್ಲೋಕ ಪ್ರಾರಂಭಿಸಿಬಿಡುತ್ತಾರೆ. ಹತ್ತುವುದಿಲ್ಲ. ಹರಿಯುವುದಿಲ್ಲ." ಎನ್ನುತ್ತಿದ್ದರು. ಇಷ್ಟಾದರೂ ಪಂಡಿತರು ಶ್ಲೋಕಗಳನ್ನು ಮಾತ್ರ ಬಿಡುತ್ತಿರಲಿಲ್ಲ. ಪ್ರಾಣಹೋಗುತ್ತಿದ್ದರೂ ಅವರು ಶ್ಲೋಕಗಳಿಲ್ಲದೆ ಮಾತನಾಡಿದುದೇ ಇಲ್ಲ. ಅವರು ತಮಗೆ ಮಹಾರಾಜರಿಂದ ಬಂದಿದೆಯೆಂದು ಒಂದು ಶಾಲುವನ್ನು ಬೇರೆ ಹೊದ್ದುಕೊಳ್ಳುತ್ತಿದ್ದರು. ಅದರ ವಿಚಾರದಲ್ಲಿಯೂ ಜನರಿಗೆ ಸಂಶಯ ಇದ್ದೇ ಇದ್ದಿತು. ಪಂಡಿತರ ರೂಪ ಬಹಳ ಕುರೂಪವಾಗಿತ್ತು. ಅವರ ಬಟ್ಟೆಗಳು ಯಾವಾಗಲೂ ಕಪ್ಪಾಗಿಯೇ ಇರುತ್ತಿದ್ದುವು. ಅವರು ಸರಿಯಾಗಿ ಹಲ್ಲು ಉಜ್ಜುತ್ತಿದ್ದರೋ ಇಲ್ಲವೋ ಹೇಳುವುದು ಕಷ್ಟವಾಗುತ್ತಿದ್ದಿತು. ಪಂಡಿತರನ್ನು ನೋಡಿದರೆ ಕನಕದಾಸರ ಪದ್ಯ ಜ್ಞಾಪಕಕ್ಕೆ ಬರುತ್ತಿದ್ದಿತು.

> ಕುರುಳು ಜುಂಜುರು ತಲೆಯ ತಗ್ಗಿನ
> ಕೊರಳ ಕೆಂಗರಿಗಣ್ಣ ಮೋರೆಯ
> ಹರಕುಗಡ್ಡದ ಕೆಂಚು ಮೀಸೆಯ ಮಲಿನವಸನದಲಿ

ಪಂಡಿತರಿಗೆ ಇನಿಸ್ಪೆಕ್ಟರ ಎದುರಿಗೆ ಸ್ವಲ್ಪ ತಮ್ಮ ವಿದ್ಯೆಯನ್ನೂ ತೋರಿಸಬೇಕೆಂದು ಆಸೆ ಇದ್ದಿತು. ಅವರು ಪುಟ್ಟರಾಮಪ್ಪನವರ ಮಾತನ್ನು ಮುಂದೆ ಸಾಗಗೊಡದೆ " ಏನು ಸ್ವಾಮಿ ನೀವು ಹೇಳುವುದು ? ಗಣಪತಿಗೆ ತಲೆಯಲ್ಲಿ ಮದುವೆ ? ಹೊಟ್ಟೆಯಲ್ಲಿ ವಿಷವೇ ? ಇದನ್ನೆಲ್ಲಾ ಹೇಳಿದರೆ ಯಾರು ಒಪ್ಪುತ್ತಾರೆ. ಏನು ಇನಿಸ್ಪೆಕ್ಟರ್ ಪ್ರಭುಗಳೇ ' ನೀವಾದರೂ ತಿಳವಳಿಕೆ ಹೇಳಬಾರದೇ. ಇಂತಹ ಉಪನ್ಯಾಸಗಳಿಂದ ಏನು ಪ್ರಯೋಜನ ? ನೀಲಕಂಠ ದೀಕ್ಷಿತರು ಹೇಳಿರುವಂತೆ.... ಮುಂಡೇದು ಜ್ಞಾಪಕಕ್ಕೆ ಬರುವುದಿಲ್ಲ " ಎಂದು ಗರ್ಜಿಸಿದರು. ಅವಧಾನಿ ಇಂಗ್ಲಿಷಿನಲ್ಲಿ ಇನಿಸ್ಪೆಕ್ಟರಿಗೆ ಏನೇನೊ ಹೇಳಿದನು. " ಸರಿ ಇವನ ಇಂಗ್ಲಿಷು ಪ್ರಾರಂಭವಾಯಿತು. ಎಂದು ಜನ ಗುಜು ಗುಜು ಗುಟ್ಟತೊಡಗಿದರು. " ಕೊನೆಗೆ ಪುಟ್ಟರಾಮಪ್ಪನವರೇ ಪಂಡಿತರಿಗೆ ಸಮಾಧಾನಮಾಡಬೇಕಾಯಿತು. ಪುಟ್ಟರಾಮಪ್ಪನವರಿಗೆ ಪಂಡಿತರ ದೌರ್ಬಲ್ಯ ಗೊತ್ತು. ಅವರು " ಗಣಪತಿ ನಮ್ಮ ದೇಶದ ಮೊದಲ ದೇವರು. ಈ ಗಜಮುಖನನ್ನು,

ಮೆರೆವ ಏಕದಂತನನ್ನು, ನಿಜಗುಣಾನ್ವಿತ ಪರಶುಧಾರನನ್ನು, ವಿದ್ಯೆವಾರಿಧಿ ಯನ್ನು, ಅಜಹರಿ ರುದ್ರಾದಿಗಳು ನುತಿಪ ಈತನನ್ನು ಪರದೇಶದವರೆಲ್ಲಾ ಪೂಜಿಸುತ್ತಾರೆ. ಜಾವಾ ಸುಮಾತ್ರ ಜಪಾನ್ ಚೀಣಗಳಲ್ಲೆಲ್ಲಾ ಗಣಪ ನನ್ನು ಪೂಜಿಸುತ್ತಾರೆ" ಎಂದರು.

ಆ ರಾತ್ರಿ ಇನಿಸ್ಪೆಕ್ಟರನ್ನು ಟ್ರಾವಲರ್ಸ್ ಬಂಗಲೆಗೆ ದಾರಿ ಕಳುಹಿ ಸಲು ತಿಪ್ಪಯ್ಯ ಉಪಾದ್ರು ಹೋಗಿದ್ದಾಗ ಇನಿಸ್ಪೆಕ್ಟರು "ನಾಳೆ ಬೆಳಗ್ಗೆ ಏಳುವ ಹೊತ್ತಿಗೆ ಇಲ್ಲಿಗೆ ಬಂದು ಬಿಡಿ. ಇಲ್ಲಿಂದಲೇ ಸ್ಕೂಲಿಗೆ ಹೋಗೋಣ" ಎಂದರು. ಉಪಾದ್ರು ಅಪ್ಪಣೆ ಮಹಾಸ್ವಾಮಿ ಎಂಬು ದಾಗಿ ಹೇಳಿ ಮನೆಗೆ ಬಂದು ಮಲಗಿದರು. ಅವರಿಗೆ ಆ ರಾತ್ರಿಯೆಲ್ಲಾ ನಿದ್ರೆ ಹತ್ತಲಿಲ್ಲ. "ಹಾಳು ಸುದರ್ಶನ ಸಾದಿಲ್ವಾರು ಲೆಕ್ಕಾನೆಲ್ಲ ನುಂಗಿ ಬಿಟ್ಟ. ಸಾದಿಲ್ವಾರು ಕೇಳಿದರೆ ಏನುಮಾಡಲಿ. ಒಂದು ರೂಪಾಯಿ ಮಾಡಿಕೊಳ್ಳುವುದಕ್ಕೆ ದಾರಿಯಾವುದು" ಎಂದು ಅವರು ಯೋಚಿಸುತ್ತಿ ದ್ದರು; ಅದು ಹಿಂದಲಕಾಲ. ಈಗಿನ ಕಾಲವಾಗಿದ್ದರೆ ಉಪಾಧ್ಯಾಯರು ಆತ್ಮಹತ್ಯೆಮಾಡಿಕೊಳ್ಳಬೇಕಾಗಿದ್ದಿತ್ತು. ಈಗ ಇನಿಸ್ಪೆಕ್ಟರುಗಳು ಸಹ, ಐಜಿ ಸಾಹೇಬರು ಯಾವಾಗ ಒಂದು ಅಕಸ್ಮಾತ್ತಾಗಿ ಪರೀಕ್ಷಿಸುತ್ತಾರೋ ಎಂದು ತಮ್ಮ ಜೇಬಿನಲ್ಲಿ ತಮ್ಮ ಆಫೀಸು ಸಾದಿಲ್ವಾರುಗಳನ್ನು ಇಟ್ಟು ಕೊಂಡು ತಿರುಗುತ್ತಿರುವುದನ್ನು ನಾವು ನೋಡಿದ್ದೇವೆ. ಒಬ್ಬ ಮೇಷ್ಟ ರನ್ನು ಐಜಿ ಸಾಹೇಬರು ನಿನಗೆ ಸರ್ಕಾರದಿಂದ ತಿಂಗಳಿಗೆ ಬರುವ ಹಣ ಎಷ್ಟು ಕೇಳಿದಾಗ ಆ ಮೇಷ್ಟರು ಸಂಬಳ ೧೩ ರೂಪಾಯಿ. ಸಾದಿಲ್ವಾರು ಎಂಟಾಣೆ ಎರಡನ್ನೂ ಸೇರಿಸಿ ಒಟ್ಟಾಗಿ ಹದಿಮೂರುವರೆ ರೂಪಾಯಿ ಎಂದರು. ಐಜಿ ಸಾಹೇಬರು ಇವನು ಸಾದಿಲ್ವಾರನ್ನೂ ಸಂಬಳಕ್ಕೆ ಸೇರಿಸಿ ಹೇಳಬೇಕಾದರೆ ಅದನ್ನೂ ಇವನೇ ಸ್ವಂತಕ್ಕೆ ಉಪಯೋಗಿಸುತ್ತಿರ ಬೇಕು ಎಂದುಕೊಂಡು ಅವನ ಲೆಕ್ಕವನ್ನೂ ನೋಡದೆ ಅವನನು ಸಸ್ಪೆಂಡ್ ಮಾಡಿದರು. ಮೇಲಧಿಕಾರಿಗಳು ತಮ್ಮ ಕೈಕೆಳಗಿನವರನ್ನು ಈಗ ಹೀಗೆ ಬೇಟೆಯಾಡುತ್ತಾರೆ. ಆದರೆ ಉಪಾದ್ರಿಯ ಇನಿಸ್ಪೆಕ್ಟರು ಅಷ್ಟು ಕಠಿಣನಾಗಿರಲಿಲ್ಲ. ಅಂತೂ ಮೇಷ್ಟರು ರಾತ್ರಿಯೆಲ್ಲಾ ಹಾಸಿಗೆ ಮೇಲೆ ಹೊರಳಾಡುತ್ತಾ ಬಿದ್ದಿದ್ದು ಬೆಳಗಾಗುವ ವೇಳೆಗೆ ಸ್ನಾನಮಾಡಿ ಕೊಂಡು, ತೋಳಿನ ತುದಿ ಹರಿದು ನೂಲು ಹೊರಕ್ಕೆ ಬರುತ್ತಿದ್ದ ಅಂಗಿ ಯನ್ನು ಹಾಕಿಕೊಂಡು ಮನೆಯಿಂದ ಹೊರಕ್ಕೆ ಹೊರಟರು.

ಇನಿಸ್ಪೆಕ್ಟರನ್ನು ನೋಡುವುದಕ್ಕೆ ಮುಂಚೆ ಸ್ಕೂಲಿನ ದಾರಿಯಲ್ಲಿ ಸ್ಕೂಲಿಗೆ ಹೋಗಿ ರುಮಾಲನ್ನು ಹಾಕಿಕೊಂಡು ಹೋಗಬೇಕೆಂದು ಉಪಾದ್ರು ಯೋಚಿಸಿದರು. ಆದರೆ ಸ್ಕೂಲಿನ ಬಾಗಿಲಿಗೆ ಹೋದಕೂಡಲೆ, ದೂರದಲ್ಲಿ ಬಂಗಲೆ ಬಾಗಿಲಿನಲ್ಲಿ ಇನಿಸ್ಪೆಕ್ಟರು ಇವರನ್ನೇ ನಿರೀಕ್ಷಿಸುತ್ತಾ ನಿಂತಿರುವುದು ಉಪಾದ್ರಿಗೆ ಕಾಣಿಸಿತು. "ಓಹೋ ಆಗಲೆ ಹೊತ್ತಾಯಿತು. ಇನಿಸ್ಪೆಕ್ಟರು ಕಾಯುತ್ತಾ ನಿಂತಿದ್ದಾರೆ. ಅಲ್ಲದೆ ಸ್ಕೂಲಿಗೆ ಹೋಗುವುದಕ್ಕೆ ಮುಂಚೆ ಇಲ್ಲಿ ಬಾ" ಎಂದು ಅಪ್ಪಣೆಕೊಡಿಸಿದ್ದರು. ನಾನು ಇಲ್ಲೇ ಸ್ಕೂಲಿನ ಒಳಕ್ಕೆ ಹೋದರೆ ಏನಾದರೂ ತಿಳಿದುಕೊಂಡಾರು ? ಇಷ್ಟೊಂದು ಸಂಬಳ ಬರುತ್ತಿದ್ದರೂ ಎಷ್ಟು ಬೇಗ ಎದ್ದು ಸ್ನಾನಮಾಡಿ ನಿಂತಿದ್ದಾರೆ. ಅದಕ್ಕೇ ಇವರಿಗೆ ಲಕ್ಷ್ಮಿ ಒಲೆದಿರುವುದು" ಎಂದುಕೊಂಡು ಬೇಗ ಬೇಗ ಇನಿಸ್ಪೆಕ್ಟರು ಇಳಿದಿದ್ದ ಟ್ರಾವಲರ್ಸ್ ಬಂಗಲೆ ಕಡೆಗೆ ಹೊರಟರು.

ಇನಿಸ್ಪೆಕ್ಟರು ಉಪಾದ್ರು ಬರುವುದನ್ನೇ ನಿರೀಕ್ಷಿಸುತ್ತಿದ್ದರು. ಉಪಾದ್ರು ಹೋಗಿ ಕೈಮುಗಿದುಕೊಂಡು ನಿಂತುಕೊಂಡ ಕೂಡಲೇ "ಏನ್ರಿ ಇಷ್ಟುಹೊತ್ತು. ಎಲ್ಲಿ ನಿಮ್ಮ ರುಮಾಲು. ರುಮಾಲು ಹಾಕಿಕೊಳ್ಳದೆ ಸ್ಕೂಲಿಗೆ ಹೋಗಕೂಡದೆಂದು ನಿಮಗೆ ತಿಳಿಯದೊ ? ನಿಮ್ಮ ಹತ್ತಿರ ರುಮಾಲೆ ಇಲ್ಲವೊ ?" ಎಂಬುದಾಗಿ ಸ್ವಲ್ಪ ಕೋಪದಿಂದಲೇ ಕೇಳಿದರು : ಉಪಾದ್ರು "ಮಹಾ ಸ್ವಾಮಿಯವರು ಕೋಪ ಮಾಡಬಾರದು. ರುಮಾಲು ಸ್ಕೂಲಿನಲ್ಲಿಯೇ ಇದೆ. ಮನೆಯಲ್ಲಿಟ್ಟಿದ್ದರೆ ಕೊಳೆಯಾಗುವುದೆಂದು ಸ್ಕೂಲಿನಲ್ಲಿಯೇ ಇಟ್ಟಿದ್ದೇನೆ" ಎಂದರು. ಇನಿಸ್ಪೆಕ್ಟರು "ನೀವು ಹೀಗೆಲ್ಲಾ ಮಾಡಬಾರದು. ನೀವು ರುಮಾಲಿಲ್ಲದೆ ಸ್ಕೂಲಿಗೆ ಹೊರಟರೆ ಜನರಿಗೆ ನಿಮ್ಮಲ್ಲಿ ಗೌರವ ತಪ್ಪುತ್ತೆ. ಸರ್ಕಾರಿ ಅಧಿಕಾರಿಗಳು ತಮ್ಮ ವೇಷವನ್ನು ಸರಿಯಾಗಿ ಇಟ್ಟುಕೊಳ್ಳಬೇಕು" ಎಂದರು. ಉಪಾದ್ರು "ಅಪ್ಪಣೆ ಮಹಾಸ್ವಾಮಿ" ಎಂದರು. ಮೇಷ್ಟರ ಅದೃಷ್ಟಕ್ಕೆ ಸರಿಯಾಗಿ ಆ ದಿವಸ ಅವರು ಉಟ್ಟಿದ್ದ ಪಂಚೆ ಬಹಳ ಕೊಳಕಾಗಿತ್ತು. ಮೇಷ್ಟ್ರು ವಾರಕ್ಕೆ ಒಂದು ಸಲ ಪಂಚೆ ಒಗೆಯುತ್ತಿದ್ದರು. ಆ ಒಗೆದ ಪಂಚೆಯನ್ನು ಎಂಟು ಮಡಿಕೆ ಮಡಿಸಿ ಚೆನ್ನಾಗಿ ತಟ್ಟಿ ಹಾಗೆಯೇ ಎಂಟು ಮಡಿಕೆಯಲ್ಲಿಯೇ ಒಂದು ಮೊಳ ಅಗಲವಾಗಿ ಒಣಗಿಹಾಕುತ್ತಿ

ದ್ದರು. ಆ ಎಂಟು ಮಡಿಕೆ ಒಣಗಲು ಸರಿಯಾಗಿ ಎಂಟು ದಿನಗಳೇ ಬೇಕಾಗುತ್ತಿದ್ದುವು. ಮೇಷ್ಟ್ರು ತಮ್ಮ ಹತ್ತಿರ ಇದ್ದ ಉಳಿದ ಎರಡನೆಯ ದಾದ ಒಂದು ಪಂಚೆಯನ್ನು ಆ ಎಂಟು ದಿನಗಳೂ ಉಡುತ್ತಿದ್ದರು. ಆದರೂ ಅವರು ಉಡುತ್ತಿದ್ದ ಪಂಚೆ ಅಷ್ಟೇನೂ ಕೊಳೆಯಾಗುತ್ತಿರಲಿಲ್ಲ. ಇದಕ್ಕೆ ಮುಖ್ಯ ಕಾರಣ ಮೇಷ್ಟ್ರು ಸ್ಕೂಲಿಗೆ ಹೋಗುವಾಗ ಮಾತ್ರ ಪಂಚೆ ಯನ್ನು ಉಡುತ್ತಿದ್ದರು. ಉಳಿದ ಕಾಲದಲ್ಲೆಲ್ಲಾ ಅವರು ಮೂರುವರೆ ಮೊಳದ ಒಂದು ಚೌಕವನ್ನು ಸುತ್ತಿಕೊಂಡು ಅದರ ಮೇಲೆ ಒಂದು ಶಾಲನ್ನು ಹೊದೆದುಕೊಂಡು ಕಾಲ ಹಾಕುತ್ತಿದ್ದರು. ಇನಿಸ್ಪೆಕ್ಟರು ಬಂದ ದಿವಸವೂ ಮೇಷ್ಟರು ನಾಲ್ಕು ದಿನಗಳಿಂದಲೂ ಉಟ್ಟಿದ್ದ ಪಂಚೆ ಯನ್ನೇ ಉಟ್ಟಿದ್ದರು. ಅವರ ಮಡಿ ಪಂಚೆ ಒಣಗಿರಲಿಲ್ಲ. ಅದು ಒಣಗ ಬೇಕಾಗಿದ್ದರೆ ಅದಕ್ಕೆ ಇನ್ನೂ ೨ ಗಂಟೆಗಳಕಾಲ ಗಾಳಿ ತಗಲಬೇಕಾಗಿತ್ತು. ಇನಿಸ್ಪೆಕ್ಟರು ಮೇಷ್ಟರ ಪಂಚೆಯ ಕಡೆಯೇ ನೋಡುತ್ತಾ "ನೀವು ಉಟ್ಟಿ ರುವ ಪಂಚೆ ಇಷ್ಟು ಕೊಳಕಾಗಿದೆ. ಈ ಊರಲ್ಲೇನು ನೀರಿಲ್ವೇನ್ರಿ. ನದಿ ಗಂಗೆ ಹರಿದ ಹಾಗೆ ಹರೀತಾ ಇದೆಯೆಲ್ರಿ. ಬಟ್ಟೆ ಒಗೆದು ಯಾಕೆ ಬೆಳ್ಳಗೆ ಹಾಕಿಕೊಳ್ಳಬಾರದು" ಎಂದರು. ಮೇಷ್ಟರು "ಭಗವಂತನ ದಯ ದಿಂದ ನೀರಿಗೇನೂ ದರಿದ್ರವಿಲ್ಲ ಮಹಾಸ್ವಾಮಿ. ಪಂಚೆ ಒಣಗಿರಲಿಲ್ಲ" ಎಂದರು. ಇನಿಸ್ಪೆಕ್ಟರು "ಯಾಕೆ ಒಣಗಿರಲಿಲ್ಲ. ನೆನ್ನೆ ತಲೆ ಸಿಡಿಯೋ ಹಾಗೆ ಬಿಸಿಲು ಕಾಯ್ತಿಲ್ಲ" ಎಂದರು. ಅನಂತರ ಮೇಷ್ಟ್ರನ್ನು ಕುರಿತು "ಪಂಚೆ ಒಣಗದಿದ್ದರೆ ಬೇಡ. ಈ ಊರಿನಲ್ಲಿ ಹಜಾಮರಿಗೆ ಗತಿ ಇಲ್ಲವೆ? ನಿಮ್ಮ ಗಡ್ಡ ಯಾಕೆ ಬದುವಿನ ಹುಲ್ಲು ಬೆಳೆದ ಹಾಗೆ ಬೆಳೆದಿದೆ. ನಿಮಗೆ ಯಾವತ್ತು ತಿಳಿಯುತ್ತೊ ಕಾಣೆ?" ಎಂದು ಮುಖ ಗಂಟುಹಾಕಿಕೊಂಡ ರು. ವಾಸ್ತವವಾಗಿ ಮೇಷ್ಟರು ಕ್ಷೌರಮಾಡಿಸಿಕೊಳ್ಳಲು ಒಂದು ವಾರ ದಿಂದ ಸವರಿಸುತ್ತಿದ್ದರು. ಆದರೆ ಹಿಂದಲ ತಿಂಗಳು ಮಾಡಿದ ದುಡ್ಡನ್ನು ಹಜಾಮನಿಗೆ ಕೊಟ್ಟಿರಲಿಲ್ಲವಾಗಿ ಅವನು ಇವರಿಗೆ ಕ್ಷೌರಮಾಡಲು ಹಿಂದೆಗೆದಿದ್ದನು. ಹಜಾಮರ ಬೆಟ್ಟ ಸ್ವಲ್ಪ ಆಧುನಿಕ. ಅವನು-ನಾನು ನಿತ್ಯ ಕ್ಷೌರಮಾಡುತ್ತಲೇ ಇರುವುದು. ಸಂತೆ ದಿನ ಮಾತ್ರ ನನ್ನ ಕೈಲಿ ಮೂರು ಕಾಸೂ ಇಲ್ಲ. ಕ್ಷೌರಮಾಡಿಸಿಕೊಂಡ ದಿನ ಸಂತೆ ದಿನ ಕೊಡು ತ್ತೇನೆ ಎನ್ನುತ್ತಾರೆ. ಸಂತೇ ದಿನ ಒಬ್ಬರೂ ಕಣ್ಣಿಗೆ ಬೀಳುವುದಿಲ್ಲ.

ಇನ್ನು ಕೈಮೇಲೆ ದುಡ್ಡು ಬಿದ್ದ ಹೊರತು ನಾನು ಕ್ಷೌರಮಾಡುವುದಿಲ್ಲ"
ಎಂದಿದ್ದನು. ಮೇಷ್ಟರಿಗೆ ಹಿಂದಲ ತಿಂಗಳ ಸಂಬಳ ಮುಂದಲ ತಿಂಗಳು
೨೦ನೇ ತಾರೀಖು ಆದರೂ ಬರುತ್ತಿರಲಿಲ್ಲ. ಇನಿಸ್ಪೆಕ್ಟರು ತಾವು ಮೊದಲನೇ
ತಾರೀಖು ಸಂಧ್ಯಾಕಾಲ ಐದು ಗಂಟೆ ಒಳಗಾಗಿ ಸಂಬಳ ತರಿಸಿಕೊಳು
ತ್ತಿದ್ದರಾದರೂ, ಉಪಾಧ್ಯಾಯರ ಸಂಬಳದ ಯೋಚನೆ ಅವರಿಗೆ ೧೫ ನೇ
ತಾರೀಖಿನ ವರೆಗೆ ಬರುತ್ತಲೇ ಇರಲಿಲ್ಲ. ತಿಪ್ಪಯ್ಯ ಉಪಾದ್ರು ಬೆಟ್ಟನಿಗೆ
ಹಿಂದಲ ಕ್ಷೌರದ ದುಡ್ಡು ಕೊಟ್ಟಿರಲಿಲ್ಲ. ಅವನು ಮುಂದಲ ಕ್ಷೌರ
ಮಾಡಿರಲಿಲ್ಲ. ತಮ್ಮ ಗಡ್ಡ ಇನಿಸ್ಪೆಕ್ಟರ ಕಣ್ಣಿಗೆ ಬೀಳಬಹುದೆಂಬುದು ಉ
ಪಾಧ್ಯಾಯರಿಗೆ ಗೊತ್ತಿತ್ತು. ಅವರು ತಮ್ಮ ಸ್ವಭಾವದಂತೆ ಆ ವೇಳೆಗೆ
ದೇವರು ಕೊಟ್ಟಂತೆ ಹೇಳೋಣ ಎಂದು ಸುಮ್ಮನಾಗಿದ್ದರು. ಈಗ ಇನಿ
ಸ್ಪೆಕ್ಟರು ಕೇಳಿದುದಕ್ಕೆ ಅವರು ಹೆದರದೆ "ಸ್ವಲ್ಪ ಪ್ರಕೃತಿ ಸರಿಯಾಗಿರ
ಲಿಲ್ಲ. ಉಷ್ಣವಾಯು ಕೆರಳಿತ್ತು. ಅದರಿಂದ ಆಯುಷ್ಕರ್ಮ ಮಾಡಿಸ
ಲಿಲ್ಲ" ಎಂದರು. ಇನಿಸ್ಪೆಕ್ಟರು "ಉಷ್ಣವಾಯುವೋ ಶೀತವಾಯು
ವೋ ? ಅಂತೂ ನಿಮಗೆ ಬುದ್ಧಿ ಕೆರಳಿರುವುದು ನಿಶ್ಚಯ. ಪಿತ್ಥ ಕೆರಳಿದೆ.
ನಡೀರಿ ಸ್ಕೂಲಿಗೆ ಹೋಗೋಣ" ಎಂಬುದಾಗಿ ಅವರ ಜತೆಯಲ್ಲಿ ಹೊರ
ಟರು.

ದಾರಿಯಲ್ಲಿ ಇನಿಸ್ಪೆಕ್ಟರು ಮತ್ತೆ ರುಮಾಲಿನ ಅವಶ್ಯಕತೆಯನ್ನು
ಕುರಿತು ಉಪನ್ಯಾಸಮಾಡಿದರು. ಉಪಾದ್ರು ಜತೆಯಲ್ಲಿ ಇನಿಸ್ಪೆಕ್ಟರು
ಸ್ಕೂಲಿಗೆ ಹೋಗುತ್ತಿರುವಾಗ ಅವರ ಕಡೆ ಯಾರಾದರೂ ತಿರುಗಿ ನೋಡಿ
ದರೆ, ಇನಿಸ್ಪೆಕ್ಟರು, ಈ ಉಪಾಧ್ಯಾಯ ನನ್ನ ಜತೆಯಲ್ಲಿ ತಲೆಗೆ ಅರಿವೆ
ಇಲ್ಲದೆ ಹೋಗುತ್ತಿರುವುದನ್ನು ಕುರಿತು ಅವರು ಮಾತನಾಡಿಕೊಳ್ಳುತ್ತಿ
ದ್ದಾರೆ ಎಂದು ಯೋಚಿಸುತ್ತಿದ್ದರು. ಇದರಿಂದ ಉಪಾದ್ರು ಮೇಲೆ ಅವರ
ಕೋಪ ಮತ್ತಷ್ಟು ಹೆಚ್ಚಾಯಿತು. ಸ್ಕೂಲಿನ ಬಾಗಿಲಿಗೆ ಬಂದ ಕೂಡಲೆ
ಇನಿಸ್ಪೆಕ್ಟರು "ಬೇಗ ಒಳಕ್ಕೆ ಹೋಗಿ ರುಮಾಲು ಹಾಕಿಕೊಳ್ಳಿ" ಎಂದರು.
ಉಪಾದ್ರು ಅಪ್ಪಣೆ ಮಹಾಸ್ವಾಮಿ ಎಂಬುದಾಗಿ ಹೇಳಿ ಗಡಿಬಿಡಿಯಿಂದ
ಸ್ಕೂಲಿನ ಒಳಕ್ಕೆ ಹೋದರು.

ಗೌರಿ ಹಬ್ಬದ ಪ್ರಯುಕ್ತ ಸ್ಕೂಲಿಗೆ ಮೂರು ದಿನದಿಂದ ರಜಾ
ಇದ್ದಿತು. ಸ್ಕೂಲನ್ನು ಮೂರು ದಿನಗಳಿಂದ ಗುಡಿಸಿರಲಿಲ್ಲ. ಕಸ ಪೆಟ್ಲು

ಕಾಯಿ ಸ್ಕೂಲಿನಲ್ಲೆಲ್ಲಾ ಚೆಲ್ಲಾಡಿದ್ದಿತು. ಆದರೆ ಉಪಾದ್ರಿಗೆ ಅವುಗಳ ಕಡೆ ಲಕ್ಷ್ಯವಿರಲಿಲ್ಲ. ಅವರು ನೆಟ್ಟಗೆ ತಾವು ರುಮಾಲನ್ನು ತೂಗು ಹಾಕಿದ್ದ ಗೂಟದ ಹತ್ತಿರಕ್ಕೆ ಹೋದರು. ರುಮಾಲನ್ನು ನೋಡಿದ ಕೂಡಲೇ ಉಪಾದ್ರ ಎದೆ ಝುಗ್ಗೆಂದಿತು. ರುಮಾಲೆಲ್ಲಾ ಪೆಟ್ಲು ಕರೆ ಯಿಂದ ಪೂರ್ಣವಾಗಿ ಕಪ್ಪಾಗಿತ್ತು. ಗೂಟಕ್ಕೆ ತೂಗಹಾಕಿದ್ದ ರುಮಾಲು ಜೇನುಗೂಡಿನಂತೆ ನೇತಾಡುತ್ತಿದ್ದಿತು. ಗೂಟದ ಸುತ್ತ ಬೆಳ್ಳಗಿದ್ದ ಗೋಡೆಯ ಮೇಲೆ ಪೆಟ್ಲಿನ ಕರೆ ಚಿತ್ರಿತವಾಗಿತ್ತು. ಉಪಾದ್ರು ಗೂಟದ ಮುಂದೆ ಚಲಿಸದೆ ನಿಂತುಬಿಟ್ಟರು. ಅವರ ಮೈ ಝುಲ್ಲೆಂದು ಬೆವರಿತು. ಕಿಟಕಿ ಬಾಗಿಲುಗಳನ್ನೆಲ್ಲಾ ತೆರೆದ ನಂತರ ಶುದ್ಧವಾದ ಗಾಳಿ ಒಳಕ್ಕೆ ಹೋದ ಮೇಲೆ ಸ್ಕೂಲನ್ನು ಪ್ರವೇಶಿಸೋಣವೆಂದು ಬಾಗಿಲಿನಲ್ಲಿ ನಿಂತಿದ್ದ ಇನಿಸ್ಪೆಕ್ಟರಿಗೆ, ಒಳಗೆ ಗೂಟದ ಮುಂದೆ ಗೂಟದಂತೆ ನಿಂತಿದ್ದ ಉಪಾದ್ರು ಕಣ್ಣಿಗೆಬಿದ್ದರು. ಅವರ ಎದುರಿಗೆ ಗೋಡೆಗೆ ನೇತುಬಿದ್ದಿದ್ದ ರುಮಾಲು ಹಕ್ಕಿಯ ಗೂಡಿನಂತೆ ಜೇನುಗೂಡಿನಂತೆ ಅವರಿಗೆ ಕಂಡಿತು. ಸ್ಕೂಲಿನ ಒಳಗೆ ಸ್ವಲ್ಪ ಕತ್ತಲೆ ಇದ್ದುದರಿಂದ ಇನಿಸ್ಪೆಕ್ಟರು ಉಪಾದ್ರನ್ನು "ಅದೇನ್ರಿ ಗೋಡೆ ಮೇಲೆ ನೇತುಬಿದ್ದಿರುವುದು" ಎಂದು ಕೇಳಿದರು. ಉಪಾದ್ರು ಯಾವ ಉತ್ತರವನ್ನೂ ಕೊಡದೆ ಕೈ ಕೈ ಹಿಸಿಕಿಕೊಳ್ಳುತ್ತಾ ಸುಮ್ಮನೆ ನಿಂತರು.

ಇನಿಸ್ಪೆಕ್ಟರು ಗೂಟದ ಹತ್ತಿರಕ್ಕೆ ಬಂದು ತಮ್ಮ ಕಯ್ಯಲ್ಲಿದ್ದ ಚತ್ರಿಯ ತುದಿಯಿಂದ ರುಮಾಲನ್ನು ಉಪಾದ್ರ ಮುಖಕ್ಕೆಹಿಡಿದು "ಬಹಳ ಚೆನ್ನಾಗಿದೆ, ನಿಮ್ಮ ರುಮಾಲು. ಶುಭ್ರವಾದ ಬಟ್ಟೆಗಳನ್ನು ಹಾಕಿಕೊಳ್ಳು ವುದರಲ್ಲಿ ಹುಡುಗರಿಗೆ ಒಳ್ಳೆಯ ಮೇಲು ಪಂಕ್ತಿಯಾಗಿದ್ದೀರಿ. ಸ್ಕೂಲನ್ನು ಗುಡಿಸಿ ಎಷ್ಟು ವರುಷವಾಯಿತು. ಈ ಗೋಡೆಗಳಿಗೆ ಸುಣ್ಣ ನೀವು ಈ ಊರಿಗೆ ಮೊದಲು ಬಂದಾಗ ಹಾಕಿಸಿದ್ದೊ. ಈ ಊರಲ್ಲಿ ಸುಣ್ಣ ಸಿಕ್ಕೊ ದಿಲ್ವೊ" ಎಂದು ಒಂದೇ ಉಸಿರಿಗೆ ರೇಗಾಡಿದರು. ಉಪಾದ್ರಿಗೆ, ಕುರುವಿನ ಮೇಲೆ ಬೊಕ್ಕೆ ಎದ್ದಂತೆ, ಬೈಗಳ ಸುರಿಮಳೆ ಒಂದಾದ ಮೇಲೆ ಒಂದರಂತೆ ಒಂದೇ ಸಮನೆ ಪ್ರಾರಂಭವಾದುವು. ಇನಿಸ್ಪೆಕ್ಟರು ಹೇಳಿದ್ದು ದೆಲ್ಲಾ ನಿಶ್ಚಯವೇ ಆಗಿದ್ದಿತು. ಆದರೆ ತಪ್ಪು ನಿಜವಾಗಿ ಉಪಾಧ್ಯಾಯರ ದಾಗಿರಲಿಲ್ಲ, ಅವರು ಪ್ರತ್ಯುತ್ತರಕೊಡದೆ "ಇದು ನನಗೆ ಸ್ವಲ್ಪ ಗ್ರಹ

ಚಾರ ಕಾಲ " ಎಂದುಕೊಂಡು ಸುಮ್ಮನಾದರು. ಆ ವೇಳೆಗೆ ಹುಡುಗ ರೆಲ್ಲಾ ಸ್ಕೂಲಿಗೆ ಬಂದರು.

ಇನಿಸ್ಪೆಕ್ಟರು ಹಾಜರಿ ಗೈರು ಹಾಜರಿ ರಿಜಿಷ್ಟರನ್ನೂ ಇಂದಾ ಗೆಯನ್ನೂ ಪರಾಂಬರಿಸಿದ ನಂತರ " ಸಾದಿಲ್ವಾರು ರಿಜಸ್ಟರು ಎಲ್ಲಿ " ಎಂದರು. ಗೋಡೆಯ ಮೇಲೆ ಬರೆದಿದ್ದ ಸಾದಿಲ್ವಾರು ಲೆಕ್ಕವನ್ನು ಸುದ ರ್ಶನ ಅಳಿಸಿದ ಈಚೆಗೆ ಬೇರೆ ಸಾದಿಲ್ವಾರು ಬರೆಯಬೇಕು ಬರೆಯಬೇಕು ಎನ್ನುವುದರಲ್ಲಿಯೇ ಇನಿಸ್ಪೆಕ್ಟರು ಬಂದೇಬಿಟ್ಟರು. ಇನಿಸ್ಪೆಕ್ಟರು ಸಾದಿಲ್ವಾ ರು ಲೆಕ್ಕವನ್ನು ಅಕಸ್ಮಾತ್ತು ಮರೆತರೂ ಮರೆಯಬಹುದೆಂದು ಉಪಾದ್ರು ಆಶಿಸುತ್ತಿದ್ದರು. ಆದರೆ ಸಾಹೇಬರು ಮರೆಯುತ್ತಾರೆಯೆ? ಮರೆತರೆ ಅವರ ಮೇಲಿನ ಸಾಹೇಬರು ಸುಮ್ಮನೆ ಇರುತ್ತಾರೆಯೆ? ಉಪಾದ್ರಿಗೆ ಸಾದಿಲ್ವಾರು ಮಾತು ಕೇಳಿ ಗಾಬರಿಯಾಯಿತು. " ಹೇಳಿದರೆ ಸುದ ರ್ಶನನ ಮೇಲೂ ಹೇಳಬೇಕು. ಇನ್ನು ಹಳೆ ಪುರಾಣಗಳನ್ನೆಲ್ಲಾ ಹೇಳಬೇ ಕಾಗುತ್ತೆ. ಇದ್ಯಾವ ಹಿಂಸೆ. ಮೌನ ಎಲ್ಲಾದಕ್ಕೂ ಔಷಧಿ " ಎಂದು ಅವರು ಸುಮ್ಮನೆ " ಮಹಾಸ್ವಾಮಿ ಮಾಫಿಮಾಡಬೇಕು. ಸಾದಿಲ್ವಾರು ಬುಕ್ಕು ಕಳೆದುಹೋಗಿದೆ. ಬೇಕಾದ ಶಿಕ್ಷೆ ವಿಧಿಸಬಹುದು. ಅನುಭವಿ ಸಲು ಸಿದ್ಧನಾಗಿದ್ದೇನೆ " ಎಂದರು. ಇನಿಸ್ಪೆಕ್ಟರಿಗೆ ಕೋಪದಿಂದ ಮೈ ನಡುಗಿತು. ಮಾತು ಸ್ವಲ್ಪ ತೊಡಕಾಯಿತು. " ಈ ಉಪಾದ್ರಿಗೆ ನಿಶ್ಚ ಯವಾಗಿಯೂ ತಲೆ ಕೆಟ್ಟಿದೆ " ಎಂದು ಅವರು ತಿಳಿದುಕೊಂಡರು. " ಏನ್ರಿ ಇವತ್ತೆಲ್ಲಾ ನೀವು ನನ್ನ ಹತ್ತಿರ ಹುಡುಗಾಟ ಮಾಡ್ತ ಇದೀರಿ ಜೋಪಾನ. ಸಾದಿಲ್ವಾರು ಇಲ್ಲದಿದ್ದರೆ ಬರತರ್ಫು ಮಾಡಿಸುತ್ತೇನೆ " ಎಂದರು. ಆದರೆ ಉಪಾದ್ರು "ಸ್ವಾಮಿ ಚಿತ್ತ" ಎಂದುಕೊಂಡು ಸುಮ್ಮನೆ ನಿಂತಿದ್ದರು. ಇದ್ದಕ್ಕಿದ್ದಂತೆ ಸುದರ್ಶನನು ಎದ್ದು ನಿಂತುಕೊಂಡು " ಸಾದಿಲ್ವಾರು ಲೆಕ್ಕ ಅಳಿಸಿದವನು ನಾನು ಸಾರ್ " ಎಂದನು. ಇನಿ ಸ್ಪೆಕ್ಟರ ಕೋಪ ಸುದರ್ಶನನ ಈ ಅಸಂಬದ್ಧ ಪ್ರಲಾಪವನ್ನು ಕಂಡು ಮತ್ತಷ್ಟು ಹೆಚ್ಚಾಯಿತು. ಅವರು ತಮ್ಮ ಕೈಯ್ಯಲ್ಲಿದ್ದ ಬೆತ್ತದಿಂದ " ಏ ಕತ್ತೆ " ಎನ್ನುತ್ತಾ ಸುದರ್ಶನನಿಗೆ ಒಂದು ಬಿಟ್ಟರು. ಏಟು ಬಲ ವಾಗಿಯೇ ಬಿತ್ತು. ಸುದರ್ಶನ ಏಟಿನಿಂದ ಐದು ನಿಮಿಷ ತತ್ತರಿಸಿದನು. ಹುಡುಗರಿಗೆಲ್ಲಾ ಬಹಳ ಭಯವಾಯಿತು. ಉಪಾಧ್ಯಾಯರಿಗೂ ಕನಿಕರ

ವುಂಟಾಯಿತು. ಇನಿಸ್ಪೆಕ್ಟರು ಮತ್ತೊಂದು ಏಟನ್ನು ಬಾರಿಸುವುದಕ್ಕೆ ಮುಂಚೆ ಸುದರ್ಶನನು "ನಾನೇ ಸಾರ್ ಗೋಡೆ ಮೇಲೆ ಬರೆದಿದ್ದ ಸಾದಿಲ್ವಾರು ಅಳಿಸಿದವನು" ಎಂದನು. ಸಾಹೇಬರು ಎತ್ತಿದ ಬೆತ್ತವನ್ನು ಹಾಗೇ ಇಳಿಸಿದರು. ಅವರಿಗೆ ಕೋಪದ ಬದಲು ಆಶ್ಚರ್ಯವುಂಟಾಯಿತು. ಸಾದಿಲ್ವಾರು ಗೋಡೆಯ ಮೇಲೆ ಬರೆಯುವುದೆಂದರೇನು? ಅದನ್ನು ಇವನು ಅಳಿಸುವುದೆಂದರೇನು; ಇದೇನು ಇವನು ಹೇಳುತ್ತಿರುವುದು; ನನ್ನೊಂದಿಗೇ ಈ ಪೋರನಿಗೆ ವಿನೋದ ಎಂದುಕೊಂಡು ಉಪಾಧ್ರನ್ನು "ಹುಡುಕಿ ಸಾದಿಲ್ವಾರು ಬುಕ್ಕು ಎಲ್ಲಾದರೂ ಬಿದ್ದಿರಬಹುದು" ಎಂದರು. ಸುದರ್ಶನನು ಮತ್ತೆ "ಬುಕ್ಕಿಲ್ಲ ಸಾರ್. ಗೋಡೇ ಮೇಲೆ ಬರೆದಿದ್ರು. ನನ್ನನ್ನು ಊಟಕ್ಕೆ ಬಿಡದ ದಿವಸ ನಾನೇ ಅಳಿಸಿದೆ" ಎಂದನು. ಇನಿಸ್ಪೆಕ್ಟರು ಉಪಾಧ್ರನ್ನು "ಏನ್ರಿ ಇವ ಬಗಳೋದು, ಸಾದಿಲ್ವಾರು ಗೋಡೆ ಮೇಲೆ ಯಾಕ್ರಿ ಬರೆದಿರಿ" ಎಂದರು. ಉಪಾಧ್ರು "ಕಾಗದ ಇರಲಿಲ್ಲ. ಮಹಾಸ್ವಾಮಿ" ಎಂದರು. ಸಾಹೇಬರಿಗೆ ಬಹಳ ನಗು ಬಂದಿತು. ಅವರ ಸರ್ವಿಸಿನಲ್ಲಿ ಅವರು ಇಂತಹ ಉಪಾಧ್ರನ್ನೂ ಇಂತಹ ಸಾದಿಲ್ವಾರು ಲೆಕ್ಕವನ್ನೂ ಎಲ್ಲೂ ಕಂಡಿರಲಿಲ್ಲ.

ಅನಂತರ ಸಾಹೇಬರಿಗೆ ವಿಚಾರವೆಲ್ಲಾ ತಿಳಿಯಿತು. ಎಷ್ಟಾದರೂ ಹಳೆಯಕಾಲದವರು. ಉಪಾಧ್ರ ಕಷ್ಟ ಸುಖಗಳನ್ನೆಲ್ಲಾ ಕೇಳಿ ಅವರಿಗೆ ಸ್ವಲ್ಪ ಕನಿಕರವುಂಟಾಯಿತು. ಬಹಳ ವಿನೋದವುಂಟಾಯಿತು. ಅವರು ನಗುತ್ತಾ "ನಿಮಗೆ ಕೊಡುವ ಸಾದಿಲ್ವಾರು ನಿಲ್ಲಿಸಬಹುದು. ಗೋಡೆ ಮೇಲೆ ಲೆಕ್ಕ ಬರೆಯುವವರಿಗೆ ಕಾಗದ ಯಾಕೆ" ಎಂದರು. ಉಪಾಧ್ರು "ಎಲ್ಲಾ ಧಣಿಗಳ ಚಿತ್ತ" ಎಂದರು. ಅನಂತರ ವಿಚಾರವೆಲ್ಲಾ ತಿಳಿದ ಮೇಲೆ ಇನಿಸ್ಪೆಕ್ಟರು ಉಪಾಧ್ರ ಇಷ್ಟದಂತೆ ಎಂಟಾಣೆಯ ಸಾದಿಲ್ವಾರನ್ನು ಒಂದು ರೂಪಾಯಿಗೆ ಏರಿಸಿಯೇ ಬಿಟ್ಟರು. ಈ ಕಾಲದ ಐಜಿ ಸಾಹೇಬರು, ಹೀಗೆ ಮಾಡಿದುದಕ್ಕೆ ಆ ಇನಿಸ್ಪೆಕ್ಟರನ್ನೇ ಡಿಸ್‌ಮಿಸ್ ಮಾಡಿಸುತ್ತಿದ್ದರೋ ಏನೋ? ಆಗ ಏನೋ ಇನಿಸ್ಪೆಕ್ಟರ ಮಾತು ನಡೆದು ಹೋಯಿತು. ಸಾದಿಲ್ವಾರು ಗೋಡೆಯ ಮೇಲೆ ಇದ್ದಿದ್ದರೆ ಉಪಾಧ್ಯಾಯರ ಸಾದಿಲ್ವಾರು ಅಷ್ಟು ಬೇಗ ಒಂದು ರೂಪಾಯಿಗೆ ಏರುತ್ತಿತೊ ಇಲ್ಲವೋ ಅನುಮಾನವೇ ಆಗಿತ್ತು.

# ೧೨. ಬಸವನಲ್ಲಿ ಹಾಲು ಕರೆದುದು

ಇನಿಸ್ಪೆಕ್ಟರು ಹೊರಟುಹೋದ ಒಂದೆರಡು ತಿಂಗಳಿನವರೆಗೆ ಮಲ್ಲಿಗೆ ಹಳ್ಳಿಯಲ್ಲಿ ಸುದರ್ಶನನೇ ಪ್ರಸಿದ್ಧನಾಗಿದ್ದನು. ಎಲ್ಲಿ ನೋಡಿದರೂ ಅವನ ಮಾತೇ ಮಾತಾಗಿದ್ದಿತು. ಉಪಾಧ್ಯರು ಆ ಎರಡು ತಿಂಗಳು ಅವನನ್ನು ಕಿವಿ ಹಿಡಿಸಲಿಲ್ಲ. ಕೋದಂಡ ಹಾಕಲಿಲ್ಲ. ಬಡಿಯಲಿಲ್ಲ. ಅನಂತು ವಿಗೂ ಅವನ ಅಕ್ಕ ಸುಭದ್ರೆಗೂ ಸದ್ಯ ಮಗನ ಮೇಲೆ ಬರುತ್ತಿದ್ದ ದೂರು ತಪ್ಪಿದೆಯೆಲ್ಲಾ ಎಂಬುದೇ ಸಂತೋಷದ ಸಂಗತಿಯಾಗಿತ್ತು. ಆದರೆ ಇಂತಹ ಒಳ್ಳೆಯ ಹುಡುಗನಾಗಿ ಬಹುಕಾಲ ಇರುವುದು ಸುದರ್ಶನನ ಸ್ವಭಾವದಲ್ಲಿ ಇರಲಿಲ್ಲ. ಅವನ ಕೀರ್ತಿಗೆ ಬಹುಬೇಗ ಕಳಂಕವುಂಟಾ ಯಿತು. ಆ ಕಾಲದ ಹುಡುಗರಾದ ಕಳ್ಳರ ಪೈಕಿ ಸುದರ್ಶನ ದೊಡ್ಡ ಕನ್ನೋಜಿಯಾಗಿದ್ದನು. ಅವನ ಕಳ್ಳತನ ಮಲ್ಲಿಗೆ ಹಳ್ಳಿಯ ತೋಟಗಳ ಎಳನೀರುಗಳಿಗೆ ಮಾತ್ರ ಅನ್ವಯವಾಗಿತ್ತು. ಹದಿನಾಲ್ಕು ವಯಸ್ಸಿನ ವೇಳೆಗೆ, ಅಂದಿನ ಕನ್ನಡ ೩ನೇ ತರಗತಿಗೆ ಬರುವವೇಳೆಗೆ, ಸುದರ್ಶನ ಎಂತಹ ತೆಂಗಿನ ಮರಗಳನ್ನಾದರೂ ಹತ್ತುತ್ತಿದ್ದನು. ಸುದರ್ಶನನು ತೆಂಗಿನಮರವನ್ನು ಹತ್ತಿ ಗರಿಗಳನ್ನು ಹಿಡಿದುಕೊಂಡು ಮೇಲಕ್ಕೆ ಹೋಗಿ ಕುಳಿತುಕೊಂಡು ಎಳನೀರನ್ನು ಕುಯಿದುಕೊಂಡು, ಜೇಬಿನಲ್ಲಿದ್ದ ಮೊಳೆ ಯನ್ನು ಹೊರಕ್ಕೆ ತೆಗೆದು ಮೊಳೆಯಿಂದ ಎಳನೀರಿನ ಕಣ್ಣನ್ನು ಕುಕ್ಕಿ ನೀರನ್ನು ಕುಡಿದು ಆ ಬುರುಡೆಯನ್ನು ಅಲ್ಲೇ ಇಟ್ಟು ಕೆಳಕ್ಕೆ ಬರುತ್ತಿ ದ್ದನು. ತೋಟಗಾರರಿಗೆ ಎಳನೀರು ಹೋಗಿರುವುದು ಗೊತ್ತಾಗುತ್ತಿ ದ್ದಿತು. ಎಳನೀರನ್ನು ಕದಿಯುವವರು ಸಾಮಾನ್ಯವಾಗಿ ಅದನ್ನು ಅಲ್ಲೇ ಕೆತ್ತಿ ಕುಡಿದು ಸುತ್ತಮುತ್ತ ಎಸೆದು ಹೋಗುವುದು ಪದ್ಧತಿ. ಆದರೆ ಈಗ ಎಳನೀರು ಮೇಲೆ ಗೊನೆಯಲ್ಲಿ (ಗುದಿಯಲ್ಲಿ) ಇಲ್ಲದಿದ್ದರೂ ಆ ಚೂರುಗಳೂ ಬುರುಡೆಯೂ ಅಲ್ಲಿ ಇಲ್ಲದುದರಿಂದ ಅವರಿಗೆ ಆಶ್ಚರ್ಯವಾಗು ತ್ತಿದ್ದಿತು. ಎಳನೀರನ್ನು ಕಳ್ಳರು ಕದ್ದು ಬೇರೆ ಕಡೆಗೆ ತೆಗೆದುಕೊಂಡು ಹೋಗಿರಬೇಕೆಂದು ಊಹಿಸುವುದಕ್ಕೆ ಅವಕಾಶವಿರಲಿಲ್ಲ, ಯಾಕೆಂದರೆ ಹಾಗೆ ಕದಿಯುವವರು ೩೦-೪೦ ಎಳನೀರುಗಳಿಗೆ ಕಡಿಮೆ ಕದಿಯುತ್ತಿರ

ಲಿಲ್ಲ. ಆದರೆ ಸುದರ್ಶನ ಯಾವಾಗಲೂ ಎರಡು ಅಥವ ಮೂರು ಎಳ ನೀರಿಗಿಂತ ಹೆಚ್ಚಾಗಿ ಕದಿಯುತ್ತಿರಲಿಲ್ಲ.

ಈ ಕಳ್ಳತನದಲ್ಲಿಯೂ ಸುದರ್ಶನನಿಗೆ ಒಂದು ವಿಧವಾದ ಉತ್ಸಾಹವೇ ಇದ್ದಿತು. ಅವನು ಪ್ರತಿದಿನವೂ ಒಬ್ಬೊಬ್ಬರ ತೋಟದಲ್ಲಿ ಕದಿಯುತ್ತಿದ್ದನು. ತೋಟಗಾರರು ಒಬ್ಬರೊಂದಿಗೆ ಒಬ್ಬರು ಈ ಕಳವಿನ ವಿಷಯವನ್ನು ಮಾತನಾಡಿಕೊಳ್ಳುತ್ತಿರುವಾಗ ಸುದರ್ಶನನಿಗೆ ಕತೆಯಲ್ಲಿ ಅರವತ್ತುನಾಲ್ಕು ವಿದ್ಯೆಗಳನ್ನು ಕಲಿತ ರಾಜಕುಮಾರನ ಕತೆ ಜ್ಞಾಪಕಕ್ಕೆ ಬರುತ್ತಿದ್ದಿತು. ಸುದರ್ಶನ ಸಾಧಾರಣವಾಗಿ ಪ್ರತಿದಿನವೂ ಮಧ್ಯಾಹ್ನ ಹನ್ನೆರಡು ಗಂಟೆಗಳಿಂದ ಮೂರು ಗಂಟೆಗಳೊಳಗಾಗಿ ತನ್ನ ಕಳ್ಳತನವನ್ನು ನಡೆಸುತ್ತಿದ್ದನು. ಆದರೆ ತೋಟಗಾರರೆಲ್ಲಾ ಕಳ್ಳನಿಗಾಗಿ ರಾತ್ರಿಹೊತ್ತು ಕಾಯುತ್ತಿದ್ದುದರಿಂದ ಅವರಿಗೆ ಕಳ್ಳ ದೊರೆಯಲಿಲ್ಲ.

ಒಂದು ದಿವಸ ಮಧ್ಯಾಹ್ನ ಸುದರ್ಶನ ಶೃಂಗಾರ ತೋಟದ ತೆಂಗಿನ ಮರವನ್ನು ಹತ್ತಿದನು. ಅವನು ಶೃಂಗಾರ ತೋಟದ ಮರವನ್ನು ಹತ್ತಿದುದು ಅದೇ ಮೊದಲು. ಆ ಮರಕ್ಕೆ ಹತ್ತಲು ಅವನಿಗೆ ಒಂದು ವಿಧವಾದ ಉತ್ಸಾಹವಿದ್ದಿತು. ಯಾಕೆಂದರೆ ಆ ಮರಕ್ಕೆ ಹತ್ತಲು ಮಲ್ಲಿಗೆ ಹಳ್ಳಿಯಲ್ಲಿ ಎಲ್ಲರೂ ಹೆದರುತ್ತಿದ್ದರು. ಅದಕ್ಕೆ ಮುಖ್ಯ ಕಾರಣ ಅದು ಬಹು ಹಳೆಯ ಮರವಾಗಿದ್ದುದೇ. ಆ ಮರದ ಕೆಳಗೆ ಒಂದು ದೊಡ್ಡ ಕೊಳವಿದ್ದಿತು. ಆ ಕೊಳದಲ್ಲಿ ನೀರು ಕಡಿಮೆಯಾಗಿದ್ದರೂ ಅದರಲ್ಲಿ ಪಾಚಿಯೂ, ಕೆಸರೂ ತುಂಬಿದ್ದಿತು. ಆ ಕೊಳದ ಸುತ್ತ ಮರದ ಬೇರು ಪಸರಿಸಿದುದರಿಂದಲೂ ಮರವು ಬಹಳ ಹಳೆಯ ಮರವಾಗಿದ್ದುದರಿಂದಲೂ ಅದು ಯಾವಾಗಲಾದರೂ ಕೆಳಕ್ಕೆ ಉರುಳಿಕೊಳ್ಳುವ ಸಂಭವವಿದ್ದಿತು. ಅದರಿಂದ ತಾನಾಗಿ ಉದುರಿದ ಕಾಯಿಗಳು ಕೊಳದೊಳಕ್ಕೆ ಬಿದ್ದು ಕೆಸರಿನಲ್ಲಿ ಮುಳುಗುತ್ತಿದ್ದುವು. ಆ ಮರವನ್ನು ಹತ್ತುವುದು ದೊಡ್ಡ ಸಾಹಸದ ಮಾತೇ ಆಗಿದ್ದಿತು. ಆ ಮರವನ್ನು ನೋಡಿದಾಗಲೆಲ್ಲಾ ಸುದರ್ಶನನಿಗೆ ಭಯವುಂಟಾಗುತ್ತಿದ್ದಿತು. ಮತ್ತು ಆ ಅಪಾಯವೇ ಆ ಭಯವೇ ಅವನನ್ನು ಮಂತ್ರದಂತೆ ಆ ಸಾಹಸಕ್ಕೆ ಪ್ರೇರಿಸಿತು.

ಶೃಂಗಾರ ತೋಟದ ತೆಂಗಿನಮರ ಊರಿಗೆಲ್ಲಾ ಕಾಣುತ್ತದೆ. ಸುದರ್ಶನ ತೆಂಗಿನ ಮರವನ್ನು ಹತ್ತುತ್ತಿರುವುದು ಅನಂತುವಿನ ಬಾಗಿಲಿ

ನಲ್ಲಿ ಸಾಹುಕಾರರೊಂದಿಗೆ ಮಾತನಾಡುತ್ತಾ ಕುಳಿತಿದ್ದ ಉಪಾಧ್ರಿಗೆ ಕಂಡಿತು. ಅನಂತುವಿಗೂ ಉಪಾಧ್ರಿಗೂ ಮೊದಲು ಆಶ್ಚರ್ಯವೂ ಅನಂತರ ಭಯವೂ ಉಂಟಾಯಿತು. ಉಪಾಧ್ರೂ ಅನಂತುವೂ ಶೃಂಗಾರ ತೋಟ ದೊಳಕ್ಕೆ ಸರಸರನೆ ಬಂದರು. ಸುದರ್ಶನ ಮರದ ಮೇಲಕ್ಕೆ ತೆವಳುತ್ತಲೇ ಇದ್ದನು. ಉಪಾಧ್ರೂ ಅನಂತುವೂ ಗಾಬರಿಯಿಂದ ನೋಡುತ್ತಾ ಗಟ್ಟಿ ಯಾಗಿ ಮಾತನಾಡದೆ ಕೆಳಗೆ ನಿಂತರು. ಸುದರ್ಶನನಿಗೆ ಅಷ್ಟು ಎತ್ತರ ವಾದ ಮರವನ್ನು ಹತ್ತುವ ಸಾಹಸವೂ ಧೈರ್ಯವೂ ಇರುವುದೆಂದು ಅವರು ತಿಳಿದಿರಲಿಲ್ಲ. ಸುದರ್ಶನನಿಗೆ ತನ್ನನ್ನು ಅವರು ಕೆಳಗೆ ನೋಡುತ್ತಿರು ವುದು ತಿಳಿಯಲಿಲ್ಲ. ಅವನು ಮರದ ತುದಿಗೆ ಹೋಗಿ ಗರಿಯನ್ನು ಹಿಡಿದುಕೊಂಡು ಮೇಲಕ್ಕೆ ಏರಿ ಸುತ್ತಾ ನೋಡಿದನು. ಅವನು ಆ ಎತ್ತರದಲ್ಲಿ ನೋಡುತ್ತಿದ್ದುದರಿಂದ ಅವನ ದೃಷ್ಟಿಗಿಂತ ಕೆಳಗಡೆ ಇದ್ದ ವರು ಅವನ ಕಣ್ಣಿಗೆ ಕಾಣುತ್ತಿರಲಿಲ್ಲ. ಸುದರ್ಶನ ಮರದ ಮೇಲೆ ಸರಿ ಯಾಗಿ ಕುಳಿತುಕೊಂಡು ಜೇಬಿನಲ್ಲಿದ್ದ ಮೊಳೆಯನ್ನು ಮುಟ್ಟಿ ನೋಡಿ ಕೊಂಡು ಒಂದು ಎಳನೀರಿಗೆ ಕೈಹಾಕಿದನು. ಆ ತೆಂಗಿನ ಮಟ್ಟೆಗಳ ಮಧ್ಯದಲ್ಲಿ ಒಂದು ಹಾವು ಸೇರಿಕೊಂಡಿತ್ತು. ಸುದರ್ಶನನ ಅವಾಂತರ ವನ್ನು ನೋಡಿ ಅದು ಮೆಲ್ಲನೆ ಅವನ ಮುಂದೆ ಮೇಲಕ್ಕೆ ತಲೆಹಾಕಿತು.

ನೆಲದಿಂದ ನಲವತ್ತು ಅಡಿ ಮೇಲೆ ಎರಡು ಅಡಿಯ ಸುತ್ತಳತೆಯ ಮರದ ಮೇಲೆ ಕುಳಿತಿರುವಾಗ ಒಂದು ಹಾವು ನಿಮ್ಮ ಎದುರಿಗೆ ತಲೆ ಹಾಕಿದರೆ ನೀವು ಏನು ಮಾಡುವಿರಿ? ಸುದರ್ಶನನು ಹೋ ಎಂಬುದಾಗಿ ಕಿರಚಿಕೊಂಡು ಯಾವುದನ್ನೂ ಯೋಚಿಸದೆ ಕೆಳಕ್ಕೆ ಬಿದ್ದುಬಿಟ್ಟನು. ಹಾವನ್ನು ಕಂಡ ಗಾಬರಿಯಲ್ಲಿ ಅವನು ಮರದ ಮೇಲಿನಿಂದ ಒಂದೆರಡು ಅಡಿ ಮಗ್ಗುಲಿಗೆ ಹಾರಿ ಕೆಳಗೆ ಇದ್ದ ಕೊಳಕ್ಕೆ ಎರಡು ಕಾಲುಗಳನ್ನೂ ಇಳಿಬಿಟ್ಟುಕೊಂಡು, ನಿಂತಿದ್ದರೆ ಹೇಗೊ ಹಾಗೆ ಬಿದ್ದನು. ಕೊಳದಲ್ಲಿ ನೂರಾರು ವರುಷದ ಕೆಸರು ತುಂಬಿತ್ತು. ಸುದರ್ಶನನ ಮೈ ಕೆಸರಿನಲ್ಲಿ ಕತ್ತಿನವರೆಗೆ ಹೂಳಿಕೊಂಡಿತು. ಕೊಳಕ್ಕೆ ಬಿದ್ದ ಅರ್ಧ ಗಂಟೆಯವರಿಗೆ ಸುದರ್ಶನನಿಗೆ ತಾನು ಎಲ್ಲಿದ್ದೆನೆಂಬುದು ತಿಳಿಯಲಿಲ್ಲ. ಅನಂತುವಿಗೂ ಉಪಾಧ್ರಿಗೂ ಸುದರ್ಶನನು ಹೊ ಎಂದು ಕೂಗಿದುದು ಕೇಳಿಸಿತು. ಅವರಿಬ್ಬರೂ ಮೇಲೆ ನೋಡಿದರು. ಅವರಿಗೆ ಅಲ್ಲಿ ಹಾವು ಇದ್ದುದು

ಕಾಣಲಿಲ್ಲ. ಸುದರ್ಶನ ತಮ್ಮನ್ನು ನೋಡಿ ಭಯದಿಂದ ಬಿದ್ದನೇನೋ ಎಂದು ಅವರಿಗೆ ಗಾಬರಿಯಾಯಿತು. ಸ್ವಲ್ಪ ಹೊತ್ತಿನೊಳಗಾಗಿ ಊರಿನವರೆಲ್ಲಾ ಕೊಳದ ಬಳಿ ಸೇರಿದರು. ಗಳಿಗೆ ಗಳಿಗೆಗೂ ಕೆಸರಿನಲ್ಲಿ ಹೂಳಿಕೊಳ್ಳುತ್ತಿದ್ದ ಸುದರ್ಶನನನ್ನು ಕಷ್ಟಪಟ್ಟು ಮೇಲಕ್ಕೆ ಎಳೆದುದಾಯಿತು. ಅವನ ಮೈ ಕೆಸರಿನ ಶೀತದಿಂದ ಹಸಿರುಗಟ್ಟಿತ್ತು. ಅವನು ಮೊದಲಿನಂತೆ ಸ್ಕೂಲಿಗೆ ಬರಬೇಕಾದರೆ ೧೫ ದಿನಗಳು ಬೇಕಾದುವು. ಹಾವಿನ ಹಿಡಿತದಿಂದ ತಪ್ಪಿಸಿಕೊಂಡು ಬಂದನೆಂದು ಅವನ ಮಹಿಮೆ ಹುಡುಗರಲ್ಲಿ ಮತ್ತೆ ಮತ್ತೆ ಹೆಚ್ಚಾಯಿತು.

ಈ ವೇಳೆಗೆ ಮಲ್ಲಿಗೆ ಹಳ್ಳಿಯ ಸ್ಕೂಲಿನಿಂದ ತಿಪ್ಪಯ್ಯ, ಲೋವರ್ ಸೆಕಂಡರಿಗೆ ತನ್ನ ಸ್ವಂತ ಶಕ್ತಿಯ ಮೇಲೆ ಕಟ್ಟಿಸಿ ಪ್ಯಾಸುಮಾಡಿಸುತ್ತಿದ್ದ ಹುಡುಗರ ಸಂಖೆ ಹೆಚ್ಚುತ್ತಾ ಬಂದುದರಿಂದ ಸರ್ಕಾರದವರು ಮತ್ತೊಬ್ಬ ಉಪಾಧ್ಯಾಯರನ್ನು ಸ್ಕೂಲಿಗೆ ಕೊಟ್ಟರು. ಆ ಉಪಾಧ್ಯಾಯನಿಗೆ ಸ್ವಲ್ಪ ಸ್ವಲ್ಪ ಇಂಗ್ಲಿಷು ಬರುತ್ತಿತ್ತು. ಅದರ ಫಲವನ್ನು ಅವರು ಯಸ್, ನೊ, ಗುಡ್, ಆಲ್‌ರೈಟ್, ಮುಂತಾದ ಮಾತುಗಳಲ್ಲಿ ತೋರಿಸಲು ಪ್ರಾರಂಭಿಸಿದ್ದರು. ಆ ಉಪಾಧ್ಯಾಯರು ಮಲ್ಲಿಗೆ ಹಳ್ಳಿಗೆ ಸಂಸಾರವನ್ನು ಕರೆದುಕೊಂಡು ಬರದೇ ಒಬ್ಬರೇ ಬಂದಿದ್ದುದರಿಂದ, ಹುಡುಗರಿಗೆ ಮುಂದೆ ಅನುಕೂಲವಾಗುವುದೆಂದು ಹೇಳಿ ಇಂಗ್ಲಿಷ್ ಕಲಿಸಲು ಪ್ರಾರಂಭಿಸಿದರು. ಅವರ ಹತ್ತಿರ ಇಂಗ್ಲೀಷು ಕಲಿಯುತ್ತಿದ್ದ ಪ್ರತಿಯೊಬ್ಬ ಹುಡುಗನೂ ವಾರಕ್ಕೆ ಒಂದು ದಿನ ಅವರಿಗೆ ಮನೆಯಲ್ಲಿ ಊಟಹಾಕಬೇಕು. ತಿಂಗಳಿಗೆ ನಾಲ್ಕು ಆಣೆ ಫೀಜು ಕೊಡಬೇಕು ಎಂದು ಉಪಾಧ್ಯಾಯರು ಗೊತ್ತು ಮಾಡಿಕೊಂಡರು. ಇದರಿಂದ ಉಪಾಧ್ಯಾಯರ ಊಟ ಸುಖವಾಗಿ ಕಳೆದು ಹೋಗುತ್ತಿದ್ದಿತಲ್ಲದೆ ತಿಂಗಳಿಗೆ ಇಂಗ್ಲಿಷ್ ಪಾಠದಿಂದಲೂ ೨—೩ ರುಪಾಯಿ ಸಿಕ್ಕುತ್ತಿದ್ದಿತು. ಒಬ್ಬಿಬ್ಬರು "ಈ ಮೇಷ್ಟರು ಒಳ್ಳೆಯ ಇಂಗ್ಲಿಷ್ ವೇಷಹಾಕಿದರು. ಇದರಿಂದ ಇವರಿಗೆ ಅಡಿಗೆ ಮಾಡಿಕೊಳ್ಳದೆ ಹೊಟ್ಟೆ ತುಂಬುತ್ತದೆ. ಆಯಿತು, ಇಂಗ್ಲಿಷ್ ಕಲಿಯುವುದೂ ಹೊಟ್ಟೆ ಪಾಡಿಗಾಗಿಯೇ" ಎಂದುಕೊಂಡರು. ಸುದರ್ಶನನೂ ಹೊಸ ಉಪಾಧ್ಯಾಯರಲ್ಲಿ ಇಂಗ್ಲಿಷ್ ಕಲಿಯಲು ಪ್ರಾರಂಭಿಸಿದನು. ಇಂಗ್ಲಿಷ್ ಕಲಿತ ಉಪಾಧ್ಯಾಯರು ಬಂದ ನಾಲ್ಕು ದಿನಗಳಲ್ಲೇ ಊರಿನವರಿಗೆಲ್ಲಾ ಬಹಳ

ಬೇಕಾದವರಾದರು. ಅವರು ನಿತ್ಯಾ ಬೆಳಗಿನ ಜಾವ ಐದು ಗಂಟೆಗೆ ಎದ್ದು ಹುಡುಗರನ್ನು ಅವರವರ ಮನೆ ಬಾಗಿಲಿಗೆ ಬಂದು ಎಬ್ಬಿಸುತ್ತಿದ್ದರು. ಹೀಗೆ ಒಂದು ಕಡೆಯಿಂದ ಹುಡುಗರನ್ನೆಲ್ಲಾ ಎಬ್ಬಿಸಿ ಉಪಾಧ್ಯಾಯರು ಮುಖ ತೊಳೆದುಕೊಂಡು ಬರಲು ಹೊಳೆಗೆ ಹೋಗುತ್ತಿದ್ದರು. ಅಲ್ಲಿ ಅವರು ಹೊಳೆಗೆ ಹೋದಕೂಡಲೆ ಹುಡುಗರಲ್ಲಿ ಅನೇಕರು ಮತ್ತೆ ಒಳಗೆ ಹೋಗಿ ಮಲಗಿಬಿಡುತ್ತಿದ್ದರು. ಮತ್ತೆ ಕೆಲವರು ಬೀದಿ ಜಗಲಿಗಳ ಮೇಲೆ ಪುಸ್ತಕಗಳ ಮುಂದೆಯೇ ಮಲಗುತ್ತಿದ್ದರು. ಉಪಾಧ್ಯಾಯರು ಹೊಳೆಯಿಂದ ವಾಪಸು ಬಂದು ಮತ್ತೆ ಮಲಗಿದ್ದ ಹುಡುಗರನ್ನು ಎರಡನೆಯ ಸಲ ಹೆಚ್ಚುತ್ತಿದ್ದರು. ಅನೇಕ ದಿನ ಅವರು ಹುಡುಗರನ್ನು ಎರಡನೆಯ ಸಲ ಎಬ್ಬಿಸಿ, ಅವರು ಬಾಗಿಲು ತೆಗೆದುಕೊಂಡು ಹೊರಕ್ಕೆ ತಲೆಯಿಟ್ಟ ಕೂಡಲೆ ಫಳಾರನೆ ಕೆನ್ನೆಗೆ ಎರಡು ಬಿಡುತ್ತಿದ್ದರು. ಉಪಾಧ್ಯಾಯರು ಭಾನುವಾರ ಒಂದು ದಿವಸ ಮಾತ್ರ ಹುಡುಗರಿಗೆ ಕಿರುಕುಳ ಕೊಡುತ್ತಿರಲಿಲ್ಲ. ಉಳಿದ ಆರು ದಿನಗಳೂ ಹುಡುಗರು ಎದ್ದ ಕೂಡಲೇ ಅವರಿಗೆ ಕಪಾಳಕ್ಕೆ ಉಡುಗೊರೆ ದೊರೆಯುತ್ತಿದ್ದಿತು.

ಈ ವೇಳೆಗೆ ಸುದರ್ಶನ ಮೂರನೆಯ ತರಗತಿಗೆ ಬಂದನು. ಹೊಸದಾಗಿ ಬಂದ ಉಪಾಧ್ಯಾಯರ ಕಾಟ ಹುಡುಗರಿಗೂ ಪೋಷಕರಿಗೂ ಹೆಚ್ಚಾಯಿತು. ಅದು ಯಾವ ಹಾಳು ಮುಂಡೆ ಕರಿಕ್ಯುಲಮ್ಮೊ? ಹೊಸದಾಗಿ ಬಂದ ಉಪಾಧ್ಯಾಯ ಒಬ್ಬೊಬ್ಬ ವಿಧ್ಯಾರ್ಥಿಯೂ ೨೦—೩೦ ಬಿಳಿಯ ಕಾಗದದ ಪುಸ್ತಕಗಳು, ಎಕ್ಸ್‌ರ್‌ಸೈಜ್ ಪುಸ್ತಕಗಳು, ಹೊರಲಾರದಷ್ಟು ಸ್ಕೂಲು ಟೆಕ್ಸ್ಟ್ ಬುಕ್ಕುಗಳು ಇವುಗಳನ್ನು ತರಬೇಕೆಂದು ಪ್ರಾರಂಭಿಸಿದನು. ಆ ಉಪಾಧ್ಯಾಯ ಸ್ಕೂಲಿಗೆ ಬಂದ ಕೂಡಲೇ ಕರಿಕುಲಮ್‌ನಲ್ಲಿ ಇರುವ ಪುಸ್ತಕಗಳೆಲ್ಲಾ ಇವೆಯೋ ಎಂದು ಹುಡುಗರನ್ನು ಕೇಳುವುದು. ಪುಸ್ತಕಗಳು ಇಲ್ಲದವರನ್ನು ಪುಸ್ತಕ ತತ್ತಾ ಎಂದು ಮನೆಗೆ ಕಳುಹಿಸುವುದು. ಆ ಹುಡುಗರು ಮನೆಗೆ ಹೋಗಿ ತಂದೆ ತಾಯಿಗಳನ್ನು ಆಚೆ ಈಚೆ ಹೋಗಲು! ಬಿಡದೆ ಪುಸ್ತಕಗಳಿಗೆ ಮೊಂಡು ಹಿಡಿಯುವುದು; ಆ ತಂದೆ ಸಿಟ್ಟುಕೊಂಡು ಹುಡುಗನಿಗೆ ಎರಡು ಕೊಟ್ಟು ಕಳುಹಿಸಿದರೆ, ಮೇಷ್ಟರು ಸ್ಕೂಲಿನಲ್ಲಿ ಬಂದ ಕೂಡಲೆ ಹುಡುಗನನ್ನು ನಿಲ್ಲಿಸುವುದು; ನಿತ್ಯಾ ಈ ಗೋಳು ಊರಿನಲ್ಲಿ ಸಾಕಾಗಿ ಹೋಯಿತು. ಪುಸ್ತಕ ಹೊತ್ತು

ಹೊತ್ತು ಹುಡುಗರ ಹೆಗಲು ಬಿದ್ದುಹೋಯಿತು. ಅನೇಕ ಪುಸ್ತಕಗಳನ್ನು ಹುಡುಗರು ಬಿಚ್ಚಲೇ ಇಲ್ಲ. ಕೆಲವು ಹುಡುಗರು ತೆಗೆದುಕೊಂಡ ಪುಸ್ತಕ ಗಳಿಗೆ ಒಂದು ಬಡ ಎತ್ತು ಬರುತ್ತಿತ್ತು ಎಂದು ತೋಪ ಹೇಳಿದ. ಮೇಷ್ಟರ ಉತ್ಸಾಹವೆಲ್ಲಾ ಕರಿಕುಲಂಗೆ ಅನುಸಾರವಾದ ಪುಸ್ತಕಗಳನ್ನು ತರಿಸು ವುದರಲ್ಲಿ ಅಡಕವಾಯಿತೇ ಹೊರತು ಅನಂತರ ಆ ಪುಸ್ತಕ ಬಂತೇ ಇಲ್ಲವೇ ಎಂಬುದನ್ನು ಕೂಡ ಅವರು ವಿಚಾರಿಸಲಿಲ್ಲ. ಪ್ರತಿಯೊಬ್ಬ ಹುಡುಗನ ಪೆಟ್ಟಿಗೆಯಲ್ಲಿಯೂ ಜೇಬಿನಲ್ಲಿಯೂ ಸೀಸದ ಕಡ್ಡಿಗಳು ತುಂಬಿರುತ್ತಿದ್ದುವು. ಇಷ್ಟಾದರೂ ಉಪಾಧ್ಯಾಯರು ಹುಡುಗರ ಹತ್ತಿರ ನೋಟು ಬುಕ್ಕು ಇಲ್ಲ ಇಲ್ಲ ಎಂದು ಹೇಳುವುದನ್ನೂ ಹುಡುಗರನ್ನು ನಿಲ್ಲಿಸುವುದನ್ನೂ ಬಿಡಲಿಲ್ಲ.

ಆದರೆ ಆಗಲೂ ಹೆಡ್ಮಾಸ್ಟರೇ ಆಗಿದ್ದ ತಿಪ್ಪಯ್ಯ ಉಪಾದ್ರು ಇವುಗಳ ನ್ನೆಲ್ಲಾ ಒಪ್ಪಲಿಲ್ಲ. ಅವರು ಹೊಸದಾಗಿ ಬಂದ ಮೇಷ್ಟರಿಗೆ "ಇದು ಯಾವ ಕಾಲೇಜಯ್ಯ ಹುಡುಗರನ್ನು ಪುಸ್ತಕ ಪೆನ್ಸಿಲ್ ಅಂತ ಹೀಗೆ ಹಿಂಸಿಸುವುದಕ್ಕೆ ; ನಮ್ಮ ಕಾಲದಲ್ಲಿ ತಂದೆ ಓದಿದ ಪುಸ್ತಕವನ್ನು ಮಕ್ಕಳು ಓದುತ್ತಿದ್ದರು. ಈಗ ಮೇಷ್ಟರಿಗೂ ಕೆಲಸವಿಲ್ಲ. ಹುಡುಗರಿಗೂ ಕೆಲಸವಿಲ್ಲ. ಮೇಷ್ಟರಿಗೆ ಪುಸ್ತಕ ತರಿಸುವುದೇ ಕೆಲಸ; ಹುಡುಗರಿಗೆ ಆ ಪುಸ್ತಕಗಳನ್ನು ಸ್ಕೂಲಿಗೆ ಹೊರುವುದೇ ಕೆಲಸ ; ಒಂದು ಕ್ಲಾಸಿಗೆ ಒಂದು ಪುಸ್ತಕ ಇದ್ದರೆ ಸಾಕು" ಎನ್ನುತ್ತಿದ್ದರು. ಆದರೆ ಹೊಸ ಉಪಾಧ್ಯಾಯರು "ರೂಲ್ಸಿದೆ. ನಿತ್ಯಾ ಒಂದೊಂದು ಸರ್ಕ್ಯುಲರ್ ಬರು ತ್ತಿದೆ. ಹುಡುಗರ ನೋಟು ಬುಕ್ಕುಗಳನ್ನೂ ಒಂದು ವರುಷ ಇಡಬೇ ಕಂತೆ. ನೀವು ಹೀಗೆ ಮಾಡಿದರೆ ಕಷ್ಟಕ್ಕೆ ಸಿಕ್ಕಿಕೊಳ್ಳುತ್ತೀರಿ" ಎನ್ನು ತ್ತಿದ್ದರು.

ತಿಪ್ಪಯ್ಯ ಉಪಾದ್ರು ವಿಚಿತ್ರ ಸ್ವಭಾವದವರು. ಅವರ ದೃಷ್ಟಿ ಯಲ್ಲಿ ಒಂದೊಂದು ಸಲ ಹುಡುಗರು ಮಾಡುತ್ತಿದ್ದ ಯಾವ ಕೆಲಸವೂ ತಪ್ಪೇ ಆಗುತ್ತಿದ್ದಿತು. ಅವರು ಒಂದು ಸಲ ತರಗತಿಯ ಹುಡುಗರನ್ನೆಲ್ಲಾ ಕೂರಿಸಿಕೊಂಡು ಗಣಿತದ ಪಾಠ ಹೇಳುತ್ತಿರುವಾಗ ಹುರುಳಿ ಕಾಳಿಗೆ ಸಂಬಂಧಪಟ್ಟ ಒಂದು ಲೆಕ್ಕ ಬಂದಿತು. ಉಪಾಧ್ಯಾಯರು ರುಪಾಯಿಗೆ ಹದಿನಾರು ಸೇರು ಹುರುಳಿ ಆದರೆ ನಾಲ್ಕು ರುಪಾಯಿಗೆ ಎಷ್ಟು ಎಂದು ಕೇಳಿದರು. ಮೊದಲನೆಯ ಹುಡುಗನೇ ಸರಿಯಾಗಿ ೬೪ ಸೇರು ಎಂದನು.

ಉಪಾಧ್ಯಾಯರು ಕೈಯಲ್ಲಿದ್ದ ಸ್ಲೇಟಿನ ಕಟ್ಟಿನಿಂದ ಅವನಿಗೆ ಒಂದನ್ನು ಬಿಟ್ಟು ಮುಂದಲ ಹುಡುಗನನ್ನು ಕೇಳಿದರು. ಅವನೂ ಸರಿಯಾಗಿಯೇ ೬೪ ಸೇರು ಎಂದನು. ಅವನಿಗೂ ಒಂದು ಬಿದ್ದಿತು. ಹೀಗೆಯೇ ತರಗತಿಯಲ್ಲಿದ್ದ ಹದಿನಾಲ್ಕು ಹುಡುಗರನ್ನೂ ಉಪಾಧ್ಯಾಯರು ಕೇಳಿ ಎಲ್ಲರೂ ಅರವತ್ತುನಾಲ್ಕು ಸೇರು ಎಂದರೂ ಅವರಿಗೆಲ್ಲಾ ಒಂದೊಂದು ಕೊಟ್ಟು "ಮುಟ್ಠಾಳ, ಅರವತ್ತುನಾಲ್ಕು ಸೇರು ಎಲ್ಲಿ ಬಂತು. ಅರವತ್ತ ನಾಲ್ಕು ಸೇರು ಹುರುಳಿ ಎನ್ನುವುದಕ್ಕೆ ನಿನಗೇನು ಬಂದಿದೆ" ಎಂದು ಗದರಿಸಿದರು.

ಹೊಸದಾಗಿ ಮಲ್ಲಿಗೆ ಹಳ್ಳಿಗೆ ಬಂದ ಇಂಗ್ಲಿಷ್ ಉಪಾಧ್ಯಾಯರಲ್ಲಿ ಗ್ರಾಮಸ್ಥರಿಗೆ ಗೌರವವಿರಲಿಲ್ಲ. ಅವರ ಕರಿಕುಲಂ, ರಿಜಸ್ಟರ್ ರೂಲ್ಸು ಸ್ಟ್ರಿಕ್ಟ್ ಕಂಡು ಅವರಿಗೆ ಬೇಜಾರಾಗಿತ್ತು. ಹೆಡ್ಮಾಸ್ಟರಾದ ತಿಪ್ಪಯ್ಯ ಉಪಾದ್ರು, "ಹೊಸದಾಗಿ ಬಂದ ಉಪಾಧ್ಯಾಯರ ಮೇಲೆ ಯಾಕೆ ಜೋರು ಮಾಡಲಿ. ನಾನು ಹಳೆಕಾಲದವನು" ಎಂದುಕೊಂಡು ಸುಮ್ಮ ನಾದರು. ಆದರೆ ಪಾಠ ಹೇಳುವುದರಲ್ಲಿ ಅದರಲ್ಲಿಯೂ, ಭಾಷೆ (ಇದು ಆಗಿನ ಕನ್ನಡ ಟೆಕ್ಸ್ಟ್) ಗಣಿತ ಇವುಗಳನ್ನು ಹೇಳುವುದರಲ್ಲಿ ತಿಪ್ಪಯ್ಯ ಉಪಾದ್ರಿಗೆ ಸಮಾನರಾದ ಮೇಷ್ಟರು ಅಪರೂಪವಾಗಿದ್ದರು. ಅಂತಹ ಗಟ್ಟಿಗನಾದ ಮೇಷ್ಟರೇ ಹೀಗೆ ಸಾಮಾನ್ಯವಾಗಿ ಇರಬೇಕಾದರೆ ಈ ತಲೆಗೆ ಅರಿವೆ ಇಲ್ಲದ ವಾರದ ಊಟದ ಹೊಸ ಮೇಷ್ಟ್ರು ಮಾಡುತ್ತಿದ್ದ ಜೋರು ನೋಡಿ ಗ್ರಾಮಸ್ಥರಿಗೆ ಹೊಸ ಉಪಾಧ್ಯಾಯನಲ್ಲಿ ತಿರಸ್ಕಾರವುಂಟಾಗಿತ್ತು. ತಿಪ್ಪಯ್ಯ ಉಪಾದ್ರಿ ಸ್ಕೂಲಿನಲ್ಲಿರುವಾಗ ಗ್ರಾಮಸ್ಥರು ಯಾರು ಬೇಕಾದರೂ ಸ್ಕೂಲಿಗೆ ಸುಲಭವಾಗಿ ಬಂದು ಒಂದೆರಡು ಮಾತನಾಡಿಕೊಂಡು ಹೋಗಲು ಅವಕಾಶವಿದ್ದಿತು. ಆದರೆ ಈಚೆಗೆ ಹೊಸ ಉಪಾಧ್ಯಾಯು ಬಂದ ಮೇಲೆ ಒಂದು ದಿನ ಚಂದ್ರವಳ್ಳಿಯ ಚಾಮೇಗೌಡ ಮಲ್ಲಿಗೆ ಹಳ್ಳಿಗೆ ಅಂಗಡಿ ವ್ಯಾಪಾರಕ್ಕೆ ಬಂದಿದ್ದವನು ತನ್ನ ಮಗನನ್ನು ನೋಡಿಕೊಂಡು ಹೋಗೋಣ ಎಂದು ಸ್ಕೂಲಿಗೆ ಬಂದನು. ಹೆಡ್ಮಾಸ್ಟರಾದ ತಿಪ್ಪಯ್ಯ ಉಪಾದ್ರಿ ಒಳಗೆ ೪-೫ನೆ ತರಗತಿಗಳನ್ನು ನಡೆಸುತ್ತಿದ್ದರು. ತೊಟ್ಟಿಯಲ್ಲಿ ಹೊಸ ಉಪಾಧ್ಯಾಯರು ಕುಳಿತಿದ್ದರು. ಚಾಮೇಗೌಡ ನೆಟ್ಟಗೆ ಒಳಗೆ ಬಂದುದನ್ನು ನೋಡಿ ಹೊಸ ಉಪಾಧ್ಯಾಯರು ಅಲ್ಲೇ ನಿಲ್ಲಿ ಎಂದರು.

ಚಾಮೇಗೌಡ ಬೆಚ್ಚಿ ಬಾಗಿಲಿನಲ್ಲಿ ನಿಂತನು. ಹೊಸ ಉಪಾಧ್ಯಾಯರು ಅವನ ಹತ್ತಿರಕ್ಕೆ ಹೋಗಿ "ಅಲ್ಲಯ್ಯ ಇದು ಏನು ಸಂತೆ ಅಂತ ತಿಳ್ಕೊಂಡು ಬಿಟ್ಟೆಯೊ? ಸ್ಕೂಲಿನೊಳಕ್ಕೆ ಬರಬೇಕಾದರೆ ಕೋಟು ರುಮಾಲು ಹಾಕಿಕೊಂಡು ಬರಬೇಕು" ಎಂದು ಗದರಿಸಿದರು. ಚಾಮೇಗೌಡ ಯಾವಾಗಲೂ ಹಾಗೆ ಸ್ಕೂಲಿಗೆ ಬರುತ್ತಿದ್ದವನಿಗೆ ಉಪಾಧ್ಯಾಯರ ಮಾತನ್ನು ಕೇಳಿ ಸಿಟ್ಟುಬಂದಿತು. ಅವನು "ಹೋಗಯ್ಯ ನಿನ್ನ ಚಂಚ್ಕೃತ ಊದಬೇಡ. ಕಂಡಿವ್ನಿ" ಎಂದುಕೊಂಡು ತನ್ನ ಹುಡುಗನೊಂದಿಗೆ ಮಾತನಾಡಿಕೊಂಡು ಹೊರಟು ಹೋದನು. ಹೊಸ ಉಪಾಧ್ಯಾಯರ ಈ ಸ್ಟ್ರಿಕ್ಟ್ ನೋಡಿ ಹೆಡ್ಮಾಸ್ಟರಾದ ತಿಪ್ಪಯ್ಯನವರಿಗೂ ಬೇಜಾರಾಯಿತು. ಅವರು "ಸ್ಟ್ರಿಕ್ಟ್ ಅಂತೆ ಸ್ಟ್ರಿಕ್ಟ್. ನಿನ್ನ ತಲೆ. ಕೋಟು ರುಮಾಲು ಗೌಡಗಳು ಎಲ್ಲಿಂದ ತರ್ತಾರೆ. ನೀನೇ ಮೂರು ವರುಷಕ್ಕೆ ಒಂದು ಕೋಟು ಹೊಲಿಸುತೀಯ. ನಾನು ಹನ್ನೊಂದು ವರುಷದಿಂದ ಈ ಕೋಟಿನಲ್ಲಿ ಕಾಲ ಹಾಕತೇನೆ" ಎಂದು ಗದರಿಸಿದರು. ಹೊಸ ಮೇಷ್ಟರ ತರಗತಿಯಲ್ಲಿ ಹುಡುಗರಿಗೆ ಪಾಠವಿಲ್ಲ. ಆದರೆ ಪುಸ್ತಕ, ನೋಟು ಬುಕ್ಕು, ಪೆನ್ಸಿಲ್ಲು ಹೊರೆ ಹೊರೆ; ಐದು ನಿಮಿಷ ಸ್ಕೂಲಿಗೆ ಬರುವುದು ಸಾವಕಾಶವಾದರೂ ಗೈರು ಹಾಜರಿ; ತರಗತಿಯಲ್ಲಿ ಒಬ್ಬ ವಿದ್ಯಾರ್ಥಿಯೂ ಮುಂದಲ ತರಗತಿಗೆ ತೇರ್ಗಡೆಯಾಗುವಂತಿಲ್ಲ. ಬಡಪಾಯಿಗಳಾದ ಹುಡುಗರು ಪುಸ್ತಕಗಳನ್ನು ಹೊರುವುದನ್ನು ನೋಡಿ ಯಾರಿಗಾದರೂ ಕನಿಕರವಾಗುತ್ತಿದ್ದಿತು. ಪ್ರೈಮರಿ ಸ್ಕೂಲು ಹುಡುಗನಿಗೆ ಕಾನಡ ಅಮೆರಿಕದ ರೈಲ್ವೆ ಮಾರ್ಗ ಯಾಕೆ? ಪೋಷಕರು ಮನೆಯಲ್ಲಿ "ನಾವೆಲ್ಲಾ ಓದಿ ಮರೆತದ್ದಾಯಿತು. ಇನ್ನು ನೀವೂ ಓದಿ ಮರೆಯಬೇಕು" ಎನ್ನುತ್ತಿದ್ದರು.

ಮಲ್ಲಿಗೆ ಹಳ್ಳಿಯ ರೈತರೂ ಪೋಷಕರೂ ಶ್ಯಾನುಭೋಗರೂ ಈ ಹೊಸ ಉಪಾಧ್ಯಾಯನಿಗೆ ಏನು ಮಾಡೋಣ. ಸ್ಟ್ರಿಕ್ಟ್ ರೂಲ್ಸು ಅಂತ ಹೊಡ್ಕೊಂಡು ಸಾಯ್ತಾನಲ್ಲಾ ಎಂಬುದಾಗಿ ಯೋಚಿಸುತ್ತಾ ಪೋಸ್ಟಾಪೀಸಿನ ಜಗಲಿಯಮೇಲೆ ಮಾತನಾಡುತ್ತಾ ಕುಳಿತಿದ್ದರು. ಅಷ್ಟುಹೊತ್ತಿಗೆ ಸುಮಾರಾಗಿ ಸಾಯಂಕಾಲ ಮಬ್ಬು ಮಬ್ಬು ಆಯಿತು. ಪೋಸ್ಟಾಪೀಸಿನ ಎದುರು ಮನೆಯ ಬಾಗಿಲು ಜಗಲಿಮೇಲೆ ಇದ್ದ ಕೊಠಡಿಯಲ್ಲಿ ಹೊಸ ಉಪಾಧ್ಯಾಯರು ಇರುತ್ತಿದ್ದರು. ಪೋಸ್ಟಾಪೀಸಿನ ಬಾಗಿಲಿನಲ್ಲಿ ಕುಳಿ

ತಿದ್ದವರು ಮೇಷ್ಟರನ್ನು ಮಾತನಾಡಿಸಿಕೊಂಡು ಎದುರು ಮನೆ ಜಗಲಿ ಮೇಲೆ ಹೋಗಿ ಕುಳಿತರು. ಆಗ ಆ ಮನೆಯ ಬಾಗಿಲಿಗೆ ಊರಿನ ಬಸವ ನಿಧಾನವಾಗಿ ಕೋಡುಗಳನ್ನು ಅಲ್ಲಾಡಿಸಿಕೊಂಡು ಆನೆಯ ನಡಗೆಯಿಂದ ಬಂದಿತು. ಊರಿನ ಬಸವ ಊರಿನ ದೇವರು. ಅದನ್ನು ಯಾರೂ ಹೊಡೆಯುವುದಿಲ್ಲ. ಅದು ಯಾರ ಹೊಲ ಗದ್ದೆ ಹಿತ್ತಲು ಬೇಕಾದರೂ ನುಗಿ ಮೆಯ್ಯಬಹುದು. ಅದನ್ನು ದೊಡ್ಡಿಗೆ ಕೂಡುವುದಿಲ್ಲ. ಅದು ಮನೆ ಬಾಗಿಲಿಗೆ ಬಂದರೆ ಅದಕ್ಕೆ ಅಕ್ಕಿ ಭತ್ತ ಸೇರಿಸಿ ತಿನ್ನುವುದಕ್ಕೆ ಕೊಡುತ್ತಾರೆ. ಬಸವ ಇದರಿಂದ ಒಳ್ಳೆ ಚೆನ್ನಾಗಿ ತಿಂದು ಕೊಬ್ಬಿದೆ. ಅದರ ಬಿಳಿಯ ಮೈ ಯಾವಾಗಲೂ ಹೊಳೆಯುತ್ತಲೇ ಇರುತ್ತದೆ. ಚರ್ಮದ ಮೇಲೆ ಉಂಗುರ ಇಟ್ಟರೆ ಉಂಗುರ ಜಾರುವಷ್ಟು ಮೈ ಪುಷ್ಟವಾಗಿದೆ. ಬಸವನನ್ನು ನೋಡಿದರೇ ಜನಕ್ಕೆ ಸಂತೋಷವಾಗುತ್ತದೆ. ಬಸವ ೫-೬ ವರುಷಗಳಿಂದ ಹೀಗೆ ತಿಂದು ತಿಂದು ಜನಗಳೊಂದಿಗೆ ಹೊಂದಿಕೊಂಡು ಒಂದೊಂದು ವೇಳೆ ಜನ ಹೆದರಿಸುವುದಕ್ಕೆ ಬಂದರೂ ಹೆದರುವುದೇ ಇಲ್ಲ. ಹುಡುಗರು ಅದರ ಹೆಗಲ ಮೇಲೆ ಕುಳಿತು ಸವಾರಿ ಮಾಡುತ್ತಾರೆ. ಉತ್ಸವ ಕಾಲದಲ್ಲಿ ದೇವಸ್ಥಾನದ ತಮಟೆ ನಗಾರಿಯನ್ನು ಅದರ ಮೇಲೆ ಇಟ್ಟು ಹೊಡೆಯುತ್ತಾರೆ. ಬಸವ ಬೆಳಗಿನಿಂದ ರಾತ್ರಿವರೆಗೆ ಊರಿನಲ್ಲಿ ಠಳಾಯಿಸುತ್ತಿದ್ದು ಸಾಧಾರಣವಾಗಿ ರಾತ್ರಿ ತೇರಿನ ಸಮೀಪದ ಮಂಟಪದಲ್ಲಿ ಮಲಗಿದ್ದು ಬೆಳಗಿನ ಜಾವಕ್ಕೆ ಎದ್ದು ಮೇಯುವುದಕ್ಕೆ ಹೊರಡುತ್ತದೆ.

ಬಸವ ಮನೆಯ ಬಾಗಿಲಿಗೆ ಬಂದುದನ್ನು ನೋಡಿ ಹೊಸ ಉಪಾಧ್ಯಾಯರು "ಭೇಷ್ ಒಳ್ಳೆ ಭರ್ಜರಿ ಹಸು ಯಾರದೋ ಕಾಣೆ" ಎಂದರು. ಚಂದ್ರವಳ್ಳಿ ಶ್ಯಾನುಭೋಗರು "ಈ ಹಸು ಸಾಹುಕಾರ್‍ರದು. ಭರ್ಜರಿಯಲ್ಲವೆ? ಬೆಟ್ಟದ ಪುರದಿಂದ ೧೫೦ ರೂಪಾಯಿ ಕೊಟ್ಟು ತರಿಸಿದರು. ಹೊತ್ತಿಗೆ ಎರಡುವರೆ ಸೇರು ಹಾಲು ಕೊಡುತ್ತೆ" ಎಂದರು. ಗುಂಡಯ್ಯ "ಯಾರು ಕರೆದರೂ ಕೊಡುತ್ತೆ ಬಹು ಸಾಧು ಪ್ರಾಣಿ" ಎಂದ. ಬಸವ ಸುಮ್ಮನೆ ನಿಂತುಕೊಂಡು ಉದ್ದವಾದ ಬಾಲದಿಂದ ಬೆನ್ನಿನ ಮೇಲೆ ಕೂರುತ್ತಿದ್ದ ಸೊಳ್ಳೆಗಳನ್ನು ಹೊಡೆದುಕೊಳ್ಳುತ್ತಿತ್ತು. ಚಂದ್ರವಳ್ಳಿ ಶ್ಯಾನುಭೋಗರು "ಹಸು, ಮುಂಡೇದು ಕಾಮಧೇನು. ಇದರ ಹಾಲು ಕರೆದು ಪೂರೈಸೋದಕ್ಕೆ ಆಗುತ್ಯೆ. ಎಷ್ಟುಸಲ ಕರೆದರೂ ಕೊಡುತ್ಲೆ ಇರುತ್ತೆ"

ಎಂದರು. ಸಂಪತ್ತುವು "ಮೇಷ್ಟ್ರೆ ಎಲ್ಲಿ ಒಂದು ಪಾತ್ರೆ ತಂದು ಹಾಲು ಕರ್ಕೊಳ್ರಿ. ರಾತ್ರಿಗೆ ಹಾಲು ಬೆಳಿಗ್ಗೆ ಮೊಸರು ಬೆಳಿಗ್ಗೆ ಕಾಫಿಗೆ ಸುಖವಾಗಿ ಆಗುತ್ತೆ. ತನ್ರಿ ಪಾತ್ರೆ" ಎಂದರು. ಮೇಷ್ಟರು "ಹಸು ಒದೆಯುತ್ತದೆಯೋ ಏನೋ" ಎಂದರು. ಚಂದ್ರವಳ್ಳಿ ಶ್ಯಾನುಭೋಗ "ಪಾಪ ಪಾಪ ಸಾಧು ಪ್ರಾಣಿ. ಬಾಲಕ್ಕೆ ನೇತುಬಿದ್ದರೂ ಮಾತನಾಡುವುದಿಲ್ಲ" ಎಂದರು. ಹೊಸ ಉಪಾಧ್ಯಾಯರಿಗೆ ಆಸೆಯಾಯಿತು.

ಪಾಪ ಅವರು ೯ ಕಾಸು ಕೊಟ್ಟು ಒಂದು ಪಾವು ನೀರು ಹಾಲು ತೆಗೆದುಕೊಂಡು ಕಾಫಿ ನೀರು ಮಾಡಿಕೊಂಡು ಕುಡಿಯುತ್ತಿದ್ದರು. ಹಾಲು ಇನ್ನು ಸ್ವಲ್ಪ ಗಟ್ಟಿಯಾಗಿದ್ದಿದ್ದರೆ ಕಾಫಿ ಎಷ್ಟು ಚೆನ್ನಾಗಿರುತ್ತಿತ್ತು ಎಂದು ಅವರು ಆಶಿಸುತ್ತಿದ್ದರು. ಅವರು ಒಟ್ಟಿಗೆ ಎರಡುವರೆ ಸೇರು ಹಾಲನ್ನೇ ಯಾವಾಗಲೂ ಕಂಡಿರಲಿಲ್ಲ. ಹಾಲು ಎಂದರೆ ಯಾರಿಗೂ ಆಸೆ. ಉಪಾಧ್ಯಾಯರು ಒಳಗೆ ಹೋಗಿ ಒಂದು ಪಾತ್ರೆ ತಂದು ಪೋಸ್ಟಾಪೀಸಿನ ಮನೆಯಿಂದ, ಹಸುವಿನ ಮೊಲೆ ತೊಳೆಯುವುದಕ್ಕೆ ನೀರು ತರಿಸಿದರು. ನೀರು ತರುವುದಕ್ಕೆ ಹೋದ ಹುಡುಗ ಪೋಸ್ಟಾಪೀಸು ಮನೆಯವರ ಸ್ನಾನದ ಮನೆಯ ಹಂಡೆಯಲ್ಲಿದ್ದ ಸುಮಾರಾದ ಬಿಸಿನೀರನ್ನು ತಂದನು. ಮೇಷ್ಟರು ನೀರಿನ ಪಾತ್ರೆಯನ್ನು ಕೈಯಲ್ಲಿ ಹಿಡಿದು ಕೊಂಡು ಚಂದ್ರವಳ್ಳಿ ಶ್ಯಾನುಭೋಗರನ್ನು "ಹಾಲು ಕರೆಕೊಳ್ಳಲೆ, ಸಾಹುಕಾರರು ಏನಾದರೂ ಆಕ್ಷೇಪಿಸುತ್ತಾರೋ" ಎಂದರು. ಸಂಪತ್ತು "ಛೇ ಛೇ ಅವರ ಮನೆಯಲ್ಲಿ ನಿತ್ಯಾ ಎರಡು ಹಂಡೆ ಹಾಲು ವ್ಯರ್ಥವಾಗುತ್ತೆ" ಎಂದ. ಮೇಷ್ಟ್ರು ಹಸುವಿನ ಹತ್ತಿರಕ್ಕೆ ಬಂದರು. ಮೆಲ್ಲಗೆ ಅದರ ತಲೆಯನ್ನು ಮುಟ್ಟಿದರು. ಅದು ಕೆರಸಿಕೊಳ್ಳಲು ಮುಖವನ್ನು ಮುಂದಕ್ಕೆ ಚಾಚಿತು. ಅನಂತರ ಮೇಷ್ಟರು ಬಿಸಿನೀರನ್ನು ಅದರ ಮೊಲೆಗೆ ಎರಚಿದರು. ಹಿತವಾಗಿ ಬಿಸಿನೀರು ಬಿದ್ದುದರಿಂದ ಬಸವ ತನ್ನ ಹಿಂದಲ ಕಾಲುಗಳನ್ನು ಆಚೆ ಈಚೆ ಚಾಚಿಕೊಂಡು ಸುಖವಾಗಿ ನಿಂತಿತು. ಮೇಷ್ಟರು ಬಸವನ ಮೊಲೆಗೆ ನೀರು ಎರಚಿ ಕೈ ಹಾಕುವವೇಳೆಗೆ ಸಂಪತ್ತು ಚಂದ್ರವಳ್ಳಿ ಶ್ಯಾನುಭೋಗ ಸುಬ್ಬು ಪೋಸ್ಟುಮೇಷ್ಟರು ಹುಚ್ಚರಂತೆ ನಗುವುದಕ್ಕೆ ಪ್ರಾರಂಭಿಸಿದರು. ಅಂದಿನಿಂದ ಮೇಷ್ಟರಿಗೆ ಬಸವನ ಹಾಲು ಕರೆದ ಮೇಷ್ಟ್ರು ಎಂದೇ ಹೆಸರಾಯಿತು.

ಮೇಷ್ಟರು ಊರಲ್ಲಿ ಇರುವವರೆಗೆ ಯಾರು ಎಲ್ಲಿ ಬಸವನನ್ನು ಕಂಡರೂ "ಮೇಷ್ಟರ ಹಸು ಬಂತು. ತನ್ರೋ ಚೊಂಬು, ಹಾಲು ಕರೆಯೋಣ" ಎಂದು ಹಾಸ್ಯ ಮಾಡುತ್ತಿದ್ದರು. ಮರುದಿವಸ ಸ್ಕೂಲಿನ ಗೋಡೆಯ ಮೇಲೂ ಬೋರ್ಡಿನ ಮೇಲೂ ಹುಡುಗರು ಬಸವನಿಗೂ ಹಸುವಿಗೂ ಇರುವ ವ್ಯತ್ಯಾಸವೇನು ಎಂದು ಬರೆದು ಒಂದು ಕಡೆ ಬಸವನ ಚಿತ್ರವನ್ನೂ ಒಂದು ಕಡೆ ಹಸುವಿನ ಚಿತ್ರವನ್ನೂ ಬರೆದಿದ್ದರು. ಕೆಲವು ದಿನಗಳ ಮೇಲೆ ಉಪಾಧ್ಯಾಯರಿಗೆ ಈ ಹಾಸ್ಯ ತಡೆಯುವುದು ಬಹಳ ಕಷ್ಟವಾಯಿತು. ಅವರು ನಾದಿರ್‌ಷಾ, ಶ್ಯಾನುಭೋಗ, ಸಂಪತ್ತು, ಗುಂಡಯ್ಯ, ಉಗ್ರ, ಜರ್ಮನಿಗೌಡ (ಇವನು ೧೯೧೪ನೇ ಇಸವಿಯಲ್ಲಿ ಯುದ್ಧ ಪ್ರಾರಂಭವಾದಾಗ ಹುಟ್ಟಿದುದರಿಂದ ಇವನಿಗೆ ಜರ್ಮನಿಗೌಡ ಎಂದೇ ಹೆಸರು ಬಂದಿದೆ) ಇವರನ್ನು ಸೇರಿಸಿ "ನನಗೆ ಬಂದಿರುವ ಈ ಬಸವನ ಹಾಲು ಕರೆದ ಮೇಷ್ಟ್ರು" ಎಂಬ ಹೆಸರನ್ನು ತೆಗೆದು ಹಾಕಿಬಿಡಿ. ಸ್ಕೂಲಿನ ಹುಡುಗರು ಕೂಡ ಕೆಲವು ಬಸವಗಳು ಹಾಲು ಕೊಡುತ್ತವೆ ಎಂದು ಹಾಸ್ಯ ಮಾಡುತ್ತಾರೆ" ಎಂದರು. ಆಗ ಅವರೆಲ್ಲಾ ಯೋಚನೆಮಾಡಿ "ನೀವು ದೇವಸ್ಥಾನಕ್ಕೆ ೨ ರುಪಾಯಿ ಕೊಟ್ಟುಬಿಡಿ. ಮಂಗಳಾರತಿ ಮಾಡಿಸಿ ರಸಾಯನ ಮಾಡಿಸೋಣ. ಇನ್ನು ಈ ಹೆಸರು ನಿಮಗೆ ವಜಾಮಾಡಿದೆ" ಎಂದರು. ಮೇಷ್ಟರಿಗೆ ಎರಡು ರುಪಾಯಿ ಖರ್ಚಾಯಿತು. ಮರುದಿವಸದಿಂದ ಮೇಷ್ಟರಿಗೆ ಆ ಹೆಸರು ವಜಾ ಆಯಿತು. ಸ್ಕೂಲಿನಲ್ಲಿ ಸ್ವಲ್ಪ ಸ್ಟ್ರಿಕ್ಟ್ ಕಡಿಮೆ ಆಯಿತು.

ತಿಪ್ಪಯ್ಯ ಉಪಾದ್ರು ಮೈಸೂರಿನಲ್ಲಿ ಟ್ರೆನಿಂಗ್ ತೆಗೆದುಕೊಂಡುಬಂದ ನಂತರ ಸ್ಕೂಲಿನಲ್ಲಿ ಚರ್ಯಪತ್ರಿಕೆ ಎಂಬುದನ್ನು ಪ್ರಾರಂಭಿಸಿದರು. ಈ ಚರ್ಯಪತ್ರಿಕೆ ಎಂಬ ಪುಸ್ತಕದಲ್ಲಿ ತಿಂಗಳಿನ ಎಲ್ಲಾ ದಿನಗಳಿಗೂ ತಾರೀಖನ್ನು ಹಾಕಿ ರಾತ್ರಿ ಓದಿದುದಕ್ಕೆ ಪೋಷಕರಿಂದ ಮನೆಯಲ್ಲಿ ರುಜು ಹಾಕಿಸಿಕೊಂಡು ಸ್ಕೂಲಿಗೆ ಹೋಗಿ ತೋರಿಸಬೇಕಾಗಿದ್ದಿತು. ಪಾಠಶಾಲೆಯಲ್ಲಿ ಪಾಠವನ್ನು ಸರಿಯಾಗಿ ಒಪ್ಪಿಸಿದುದಕ್ಕೆ ಉಪಾಧ್ಯಾಯರಿಂದ ರುಜು ಹಾಕಿಸಿಕೊಂಡು ಹೋಗಿ ಮನೆಯಲ್ಲಿ ತೋರಿಸಬೇಕಾಗಿದ್ದಿತು. ಹೀಗೆ ಪೋಷಕರೂ, ಉಪಾಧ್ಯಾಯರೂ ಬಾಲಕರ ಮೇಲ್ವಿಚಾರಣೆ ಇಟ್ಟುಕೊಳ್ಳಲು ಇದರಿಂದ ಅನುಕೂಲವಾಗುವುದೆಂದು ಉಪಾಧ್ಯಾಯರು ಈ ಉಪಾಯವನ್ನು ಅನುಸರಿ

ಸುತ್ತಿದ್ದರು. ಹುಡುಗರು ಮನೆಯಲ್ಲಿ ಓದದೆ ಇದ್ದರೆ ಪೋಷಕರು ರುಜು ಹಾಕುತ್ತಿರಲಿಲ್ಲ. ಆ ರುಜು ಹಾಕದಿದ್ದರೆ ಉಪಾಧ್ಯಾಯರು ಹುಡುಗರನ್ನು ಸ್ಕೂಲಿನಲ್ಲಿ ಬಡಿಯುತ್ತಿದ್ದರು. ಸ್ಕೂಲಿನಲ್ಲಿ ಎಲ್ಲಾ ಪಾಠಗಳನ್ನು ಒಪ್ಪಿಸಿದರೆ ಉಪಾಧ್ಯಾಯರು ✓ ತಿಪ್ಪಯ್ಯ ಎಂದೂ, ಪಾಠಗಳನ್ನು ಒಪ್ಪಿಸದಿದ್ದರೆ × ತಿಪ್ಪಯ್ಯ ಎಂದೂ ಬರೆಯುತ್ತಿದ್ದರು. ಹುಡುಗರು ಇವತ್ತು ನನಗೆ "ಸರಿ ತಿಪ್ಪಯ್ಯ." "ಇವತ್ತು ತಪ್ಪು ತಿಪ್ಪಯ್ಯ" ಎಂದು ತಮ್ಮ ತಮ್ಮ ಚರ್ಯ ಪತ್ರಿಕೆಗಳನ್ನು ನೋಡಿಕೊಂಡು ಹೇಳುತ್ತಿದ್ದರು. ತಪ್ಪು ತಿಪ್ಪಯ್ಯ ಎಂದು ಬಿದ್ದ ದಿವಸ ಹುಡುಗರಿಗೆ ಮನೆಯಲ್ಲಿ ಪೋಷಕರು ರುಜು ಹಾಕಿಕೊಡುತ್ತಿರಲಿಲ್ಲ. ಸ್ಕೂಲಿನಲ್ಲಿ ಏಟೂ ಬೀಳುತ್ತಿದ್ದವು. ಇದರಲ್ಲಿ ಉಪಾಧ್ಯಾಯರು ಇನ್ನೊಂದು ಉಪಾಯ ಮಾಡಿದ್ದರು. ಗಣಿತ, ಭೂಗೋಳ, ಚರಿತ್ರೆ ಭಾಷೆಗಳಲ್ಲಿ ಸರಿಯಾದ ನಂಬರುಗಳು ಬಂದಿದ್ದರೂ ಹುಡುಗರು ಮಾಡಿದ ಒಂದೊಂದು ತಪ್ಪಿಗೂ ಒಂದೊಂದು ನಂಬರುಗಳನ್ನು ಕಳೆಯುತ್ತಿದ್ದರು. ಅದರಲ್ಲಿ ಮುಖ್ಯವಾಗಿ ಸುದರ್ಶನನ ನಂಬರುಗಳು ಅವನ ಚೇಷ್ಟೆಯಿಂದ ಪ್ರತಿದಿನವೂ ಕಡಿಮೆಯಾಗುತ್ತಿದ್ದುವು. ಆದರೂ ತರಗತಿಯಲ್ಲಿ ಸುದರ್ಶನ ಬಹು ಜಾಣನಾಗಿದ್ದನು. ಅವನಿಗೆ ಬಂದಿದ್ದ ನಂಬರುಗಳಿಗಿಂತಲೂ ಅವನ ಚಾಷ್ಟೆಗಳಿಂದ ಅವನಿಗೆ ಕಡಿಮೆಯಾಗುತ್ತಿದ್ದ ನಂಬರುಗಳೇ ಹೆಚ್ಚಾಗುತ್ತಿದ್ದುವು. ಕೆಲವು ದಿನವಂತೂ ತಿಪ್ಪಯ್ಯ ಉಪಾದ್ರು "ನಿನಗೆ ಇವತ್ತು ೧೦ ನಂಬರ್ರು ಚೇಷ್ಟೆಗೆ ವಜಾಮಾಡಿದೆ. ಇವತ್ತು ನಿನಗೆ ಬಂದಿರೋದು ಅರವತ್ತೆಂಟು ನಂಬರು. ಹಿಂದೆ ನಿನಗೆ ನೂರಾರು ನಂಬರು 'ಮೈನಸ್' ಆಗಿದೆ ಎನ್ನುತ್ತಿದ್ದರು. ಸುದರ್ಶನ ತನ್ನ ಚರ್ಯ ಪತ್ರಿಕೆಯಲ್ಲಿ ಒಂದೇ ಸಮನಾಗಿ ಏಳು ಎಂಟು ದಿನಗಳು × ತಿಪ್ಪಯ್ಯ ಎಂದು ಬೀಳುವುದರೊಳಗಾಗಿ ಒಂದು ಉಪಾಯವನ್ನು ಕಂಡುಹಿಡಿದನು. ಉಪಾಧ್ಯಾಯರು × (ತಪ್ಪು) ಎಂದು ಗುರುತುಮಾಡಿದುದನ್ನು ಮನೆಗೆ ಹೋದನಂತರ ತಿದ್ದಿ ✓ (ಸರಿ) ಎಂದು ಮಾಡಿಬಿಡುತ್ತಿದ್ದನು. ಹೀಗೆ ಮಾಡುವುದಕ್ಕೆ ಅವನಿಗೆ ಹೆಚ್ಚು ಕಷ್ಟವಾಗುತ್ತಿರಲಿಲ್ಲ. ಒಂದು ಗೆರೆ ಸ್ವಲ್ಪ ತಿದ್ದಿದ್ದರೆ × ಎಂಬುದು ✓ ಎಂದಾಗುತ್ತಿದ್ದಿತು.

ಸ್ವಲ್ಪ ದಿನಗಳೊಳಗಾಗಿ ತಿಪ್ಪಯ್ಯ ಉಪಾದ್ರಿಗೆ ಸುದರ್ಶನ ಮಾಡು

ತ್ತಿದ್ದ ಮೋಸ ಗೊತ್ತಾಯಿತು. ಅವರು ಅವನಿಗೆ ನಾಲ್ಕು ಮಡಗಿ ∠ ಮತ್ತು × ಎಂಬ ಗುರುತುಗಳಿಗೆ ಬದಲಾಗಿ "ಒಪ್ಪಿಸಿದನು ತಿಪ್ಪಯ್ಯ," "ಒಪ್ಪಿಸಲಿಲ್ಲ ತಿಪ್ಪಯ್ಯ" ಎಂದು ಬರೆಯಲು ಪ್ರಾರಂಭಿಸಿದರು. ಯಾರದು ಹೆಚ್ಚು ದಿನ ಒಪ್ಪಿಸಿದನು ಎಂಬುದಾಗಿ ಬರುತ್ತದೆಯೋ ಅವನಿಗೆ ಒಂದು ಇನಾಮನ್ನೂ ಸಹ ಕೊಡುವುದಾಗಿ ಪ್ರಕಟಿಸಿದರು. ಒಪ್ಪಿಸಿದನು ಒಪ್ಪಿಸ ಲಿಲ್ಲ ಎಂಬುದನ್ನು ✓ × ಎಂಬಷ್ಟು ಸುಲಭವಾಗಿ ತಿದ್ದಲು ಸಾಧ್ಯವಾಗು ತ್ತಿರಲಿಲ್ಲ. ಮನೆಯಲ್ಲಿ ಸುದರ್ಶನನ ಚರ್ಯ ಪತ್ರಿಕೆಗೆ ಅವನ ತಾಯಿ ಸುಭದ್ರೆ ಅಥವ ಅನಂತು ರುಜು ಹಾಕುತ್ತಿದ್ದರು. ಸುದರ್ಶನನ ಬುಕ್ಕಿ ನಲ್ಲಿ ಪ್ರತಿದಿನವೂ ಒಪ್ಪಿಸಲಿಲ್ಲ ಎಂದೇ ಬರುತ್ತಿದ್ದುದರಿಂದ ಸುಭದ್ರೆ ಒಂದೊಂದು ಬೆಳಿಗ್ಗೆ ರುಜು ಹಾಕಲು ಒಪ್ಪದೆ ಸುದರ್ಶನನನ್ನು ಚೆನ್ನಾಗಿ ಬೈದುಬಿಡುತ್ತಿದ್ದಳು. ಕೊನೆಗೆ ಸುದರ್ಶನ ತಾಯಿಯ ರುಜುವನ್ನೇ ಫೋರ್ಜರಿಮಾಡಲು ಪ್ರಾರಂಭಿಸಿದನು.

ಒಂದುದಿನ ತಿಪ್ಪಯ್ಯ ಉಪಾದ್ರು ತಮ್ಮ ಕರುವನ್ನು ಹುಡುಕುತ್ತಾ ಅನಂತನ ಮನೆಯ ಮುಂದೆ ಹೋಗುತ್ತಿದ್ದರು. ಸುದರ್ಶನನಿಗೆ ಪುಸ್ತಕ ಸ್ಲೇಟು ತೆಗೆದುಕೊಟ್ಟು ಸುಸ್ತುಹೊಂದಿದ್ದ ಸಾಹುಕಾರ್ ಅನಂತು "ಸುದರ್ಶನ ಚೆನ್ನಾಗಿ ಓದ್ಕೋತಾನೋ" ಎಂದನು. ಉಪಾದ್ರು ಔದಾಸೀನ್ಯದಿಂದ "ಏನು ಓದ್ತಾನೋ. ಬುದ್ಧಿ ಏನೋ ಇದೆ. ಬರೋ ನಂಬರೆಲ್ಲಾ ಚಾಪ್ಟೇಗೆ ಹೋಗುತ್ತೆ. ಅವನ ತಾಯಿ ನಿತ್ಯಾ ರುಜುಹಾಕಿ ಕಳಿಸ್ತಾಳಲ್ಲ" ಎಂದರು. ಸಾಹುಕಾರ ಅನಂತುವಿಗೆ ಚರ್ಯ ಪತ್ರಿಕೆ ವಿಚಾರ ಸ್ಪಷ್ಟವಾಗಿ ತಿಳಿದಿರಲಿಲ್ಲ. ಅವನು ಒಳಗೆ ಹೋಗಿ ಸುದರ್ಶನನ ತಾಯಿ ಸುಭದ್ರೆಯನ್ನು ನೀನು ನಿತ್ಯಾ ಯಾವುದಕ್ಕೆ ರುಜು ಹಾಕುತ್ತಿರು ವುದು ಎಂದು ಕೇಳಿದನು. ಸುಭದ್ರೆ "ನಾನು ಅವನ ಬುಕ್ಕಿಗೆ ರುಜುಹಾಕಿ ಈಗ ಎರಡು ತಿಂಗಳಾಯಿತು" ಎಂದಳು. ಹೆಡ್ಮಾಸ್ಟರಿಗೆ ಈ ವಿಚಾರ ತಿಳಿದ ಮೇಲೆ ಆವತ್ತು ಸುದರ್ಶನನಿಗೆ ಮತ್ತೆ ಚೆನ್ನಾಗಿ "ಶುಂದಧ್ವ" ಬಿದ್ದಿತು.

ಉಪಾಧ್ಯಾಯರ ಮಗ ಸುಬ್ಬು ತರಗತಿಯವರಲ್ಲೆಲ್ಲಾ ಮೊದಲನೆಯ ವನಾಗಿ ಬಹಳ ಬುದ್ಧಿವಂತನಾಗಿದ್ದ. ಅವನ ಚರ್ಯ ಪತ್ರಿಕೆಯಲ್ಲಿ ಯಾವಾ ಗಲೂ ಒಪ್ಪಿಸಿದನು ಎಂಬುದೇ ಹೆಚ್ಚಾಗಿರುತ್ತಿದ್ದಿತು. ಒಂದು ಸಲ ಇನಿ

ಸ್ಪೆಕ್ಟರು ಮಲ್ಲಿಗೆ ಹಳ್ಳಿಗೆ ಬರುವುದಕ್ಕೆ ಐದು-ಆರು ದಿನಗಳ ಮುಂಚೆ ಉಪಾಧ್ಯಾಯರು "ಈ ಸಲ ಯಾರು ಹೆಚ್ಚು ದಿವಸ ಒಪ್ಪಿಸುತ್ತಾರೆಯೋ ಅವರಿಗೆ ಇನಿಸ್ಪೆಕ್ಟರ ಕೈಯಿಂದ ಬಹುಮಾನ ಕೊಡಿಸುತ್ತೇನೆ" ಎಂದರು. ಇದರಿಂದ ಸುಬ್ಬುವಿನ ಹೊರತು ಉಳಿದವರು ಯಾರಿಗೂ ಸಂತೋಷವಾಗಲಿಲ್ಲ. ತಾನು ಬಹು ಜಾಣನೆಂದು ಮೊದಲೇ ತಲೆ ತಿರುಗಿದ್ದ ಸುಬ್ಬುವಿಗೆ ಉಪಾಧ್ಯಾಯರ ಮಾತನ್ನು ಕೇಳಿ ಮತ್ತಷ್ಟು ಹೆಮ್ಮೆಯುಂಟಾಯಿತು.

ಅದು ಸುಮಾರು ಇಪ್ಪತ್ತನೆಯ ತಾರೀಖು ಆಗಿತ್ತು. ಉಪಾಧ್ಯಾಯರು ಚರ್‍ಯ ಪತ್ರಿಕೆಯಲ್ಲಿ ಒಪ್ಪಿಸಿದನು ಇಲ್ಲ ಎಂಬುದನ್ನು ಪೆರುಮಾಳಚೆಟ್ಟಿ ಸೀಸದ ಕಡ್ಡಿಯಲ್ಲಿ ಊರಿ ಬರೆಯುತ್ತಿದ್ದರು. ಒಂದು ದಿನ ಹೊರತು ಉಳಿದ ಎಲ್ಲಾ ದಿನಗಳೂ ಸುಬ್ಬುವೇ 'ಒಪ್ಪಿಸಿದ್ದನು' ಸುಬ್ಬುವಿಗೆ ಇನಿಸ್ಪೆಕ್ಟರ ಕೈಯಿಂದ ಬಹುಮಾನ ಬರುವುದರಲ್ಲಿ ಸುಬ್ಬುವಿಗಾಗಲಿ ಉಪಾಧ್ಯಾಯರಿಗಾಗಲಿ ಸಂಶಯವಿರಲಿಲ್ಲ. ಇನಿಸ್ಪೆಕ್ಟರು ಬರುವುದಕ್ಕೆ ೩ ದಿನ ಮುಂಚೆ, ಸುದರ್ಶನ ಉಪಾಧ್ಯಾಯರ ಮೇಜಿನ ಮೇಲೆ ಇದ್ದ ಒಂದು ಅಂಗುಲದ ಪೆರುಮಾಳಚೆಟ್ಟಿಯ ಸೀಸದ ಕಡ್ಡಿಯನ್ನು ಜೇಬಿಗೆ ಹಾಕಿಕೊಂಡನು. ಆ ಕಾಲದಲ್ಲಿ ಒಂದು ಪೆರುಮಾಳಚೆಟ್ಟಿ ಜಾಮಳಿ ಸೀಸದ ಕಡ್ಡಿಗೆ ಮೂರು ಆಣೆ ಬೆಲೆ ಇತ್ತು. ಹಳ್ಳಿಯಲ್ಲಿ ಸುದರ್ಶನನಿಗೆ ಸಿಕ್ಕುತ್ತಲೂ ಇರಲಿಲ್ಲ. ಉಪಾಧ್ಯಾಯರೂ ಕೂಡ ಮೂರು ಆಣೆ ಕೊಟ್ಟು ಆ ಸೀಸದ ಕಡ್ಡಿಯನ್ನು ಕೊಳ್ಳುತ್ತಿರಲಿಲ್ಲ. ಹಾಸನಕ್ಕೆ ಹೋದಾಗ ಇನಿಸ್ಪೆಕ್ಟರ ಆಫೀಸಿನಿಂದ ಗುಮಾಸ್ತೆಯನ್ನು ಕೇಳಿ ಒಂದುವರೆ ಅಂಗುಲ ಉದ್ದದ ಪೆರುಮಾಳಚೆಟ್ಟಿ ಸೀಸದ ಕಡ್ಡಿಯ ಚೂರುಗಳನ್ನು ತಂದು ಇಟ್ಟುಕೊಳ್ಳುತ್ತಿದ್ದರು. ಯಾವುದಾದರೂ ಮುಖ್ಯ ವಿಷಯಗಳನ್ನು ಬರೆಯಬೇಕೆಂದು ತೋರಿದಾಗ ಪೆರುಮಾಳಚೆಟ್ಟಿ ಸೀಸದ ಕಡ್ಡಿಯಲ್ಲಿ ಬರೆದು ಒಂದು ಒದ್ದೆ ಬಟ್ಟೆಯನ್ನು ಅದರ ಮೇಲೆ ಒತ್ತುತ್ತಿದ್ದರು. ಅದು ಕೂಡಲೇ ಫಳ ಫಳ ಎಂದು ರಂಗಳಿಸಿ ಹೊಳೆಯಲು ಪ್ರಾರಂಭಿಸುತ್ತಿದ್ದಿತು. ಪ್ರಿಂಟು ಮಾಡಿದುದಕ್ಕಿಂತ ಹೆಚ್ಚಾದ ಹೆಮ್ಮೆಯಿಂದ ಉಪಾಧ್ಯಾಯರು ಆ ಬರಹಗಳನ್ನು ನೋಡುತ್ತಿದ್ದರು. ಪೆರುಮಾಳಚೆಟ್ಟಿ ಸೀಸದ ಕಡ್ಡಿಯ ವಿಚಾರದಲ್ಲಿ ಉಪಾಧ್ಯಾಯರು ಬಹಳ ಎಚ್ಚರಿಕೆಯಿಂದ ಇರುತ್ತಿ

ದ್ದುದರಿಂದ ಸುದರ್ಶನ ಸೀಸದ ಕಡ್ಡಿಯನ್ನು ಜೇಬಿಗೆ ಇಳಿಬಿಟ್ಟ ದಿನ ಅವರು ಅದಕ್ಕಾಗಿ ಸ್ಕೂಲಿನಲ್ಲೆಲ್ಲಾ ಬಹಳ ಗುಡುಗಾಡಿದರು. ನಿಷ್ಕಾರಣ ವಾಗಿ ಹುಡುಗರ ಮೇಲೆ ರೇಗಾಡಿದರು. ಉಪಾಧ್ಯಾಯರು ನೂರಾರು ರುಪಾಯಿ ಸಾಮಾನು ಕಳೆದುಕೊಂಡವರಂತೆ "ತೆಂಗಿನಕಾಯಿ ಮುಟ್ಟಿ ಸುತ್ತೇನೆ. ಹೊಟ್ಟೆ ಊದುತ್ತೆ ಒಳ್ಳೆ ಮಾತಿನಲ್ಲಿ ಕೊಟ್ಟುಬಿಡಿ" ಎಂದು ಗದ್ದರಿಸಿದರು. ಸುದರ್ಶನ ಬಂದದ್ದೆಲ್ಲಾ ಬರಲಿ ಎಂದುಕೊಂಡು ಗಡ್ಡ ಕಿತ್ತರೂ ಬಾಯಿಬಿಡದೆ ಸುಮ್ಮನಿದ್ದನು.

ಮನೆಗೆ ಬಂದ ಮೇಲೆ ಸುದರ್ಶನ ಚರ್ಯ ಪತ್ರಿಕೆಯ ಹೊಲಿಗೆಯನ್ನು ಮಧ್ಯಕ್ಕೆ ಬಿಚ್ಚಿ, ಆ ತಿಂಗಳ ಹಾಳೆಯನ್ನು ಜೋಪಾನವಾಗಿ ತೆಗೆದಿಟ್ಟು ಮುಂದಲ ಹಾಳೆಗೆ ರೂಲು ಹಾಕಿದನು. ಸೀಸೆಯಲ್ಲಿದ್ದ ಸೀಮೆಎಣ್ಣೆಯನ್ನು ತಾಯಿಗೆ ಕಾಣದಂತೆ ಕದ್ದು ಒಂದು ಕಾಗದದ ಮೇಲೆ ಹಾಕಿದನು. ಆ ಕಾಗದವನ್ನು, ಉಪಾಧ್ಯಾಯರು ಒಂದು ದಿವಸ ಮಾತ್ರ ಒಪ್ಪಿಸಿದನು ಎಂದು ಬರೆದಿದ್ದುದರ ಮೇಲೆ ಇಟ್ಟು ಎಣ್ಣೆಯಿಂದ ತೆಳ್ಳಗಾದ ಕಾಗದದ ಮೇಲೆ ತಿದ್ದಿದನು. ಅನಂತರ ಆ ಕಾಗದವನ್ನು ತನ್ನ ಚರ್ಯ ಪತ್ರಿಕೆಯಲ್ಲಿ ಪ್ರತಿಯೊಂದು ತಾರೀಖಿನ ಎದುರಿಗೂ ರೂಲಿನ ಮೇಲೆ ಇಟ್ಟು ಅದರ ಮೇಲೆ ಸೀಸದ ಕಡ್ಡಿಯಲ್ಲಿ ಊರಿ ತಿದ್ದಿ ಬರೆದನು. ಕಾಗದದ ಕೆಳಗೆ, ಚರ್ಯ ಪತ್ರಿಕೆಯಲ್ಲಿ ಉಪಾಧ್ಯಾಯರ ಅಕ್ಷರದಲ್ಲಿ ಒಪ್ಪಿಸಿದನು ಎಂಬ ಗುರುತಾಯಿತು. ಅನಂತರ ಸೀಸದ ಕಡ್ಡಿಯಲ್ಲಿ ಆ ಗುರುತುಗಳ ಮೇಲೆ ನಿಧಾನವಾಗಿ ತಿದ್ದಿದನು. ಆಮೇಲೆ ಶಾಯಿಯನ್ನು ತೆಗೆದುಕೊಂಡು ತನ್ನ ತಾಯಿಯ ರುಜುವನ್ನು ಅದರ ಜಾಗದಲ್ಲಿ ಹಾಕಿದನು. ಮಧ್ಯೆ ಬಂದ ಎರಡು ಭಾನುವಾರವೂ ಸುದರ್ಶನನು ರಜಾ ಎಂದು ಬರೆಯುವುದನ್ನು ಮರೆತು ಒಪ್ಪಿಸಿದನು ಎಂದೇ ಬರೆದುಬಿಟ್ಟನು. ಕೊನೆಯಲ್ಲಿ ಹಾಗೆ ಬರೆದುದು ತಪ್ಪು ಎಂಬುದು ಅವನಿಗೆ ಗೊತ್ತಾಯಿತು. ಬರೆದುದನ್ನು ಅಳಿಸಲು ರಬ್ಬರ್ ಎಂಬ ಪದಾರ್ಥವಿರುವುದೆಂಬುದು ಅವನಿಗೆ ಗೊತ್ತಿರಲಿಲ್ಲ. ಬರೆದುದರ ಮೇಲೆ ಎಂಜಲನ್ನು ಹಾಕಿ ಅವನು ಅಳಿಸುತ್ತಿದ್ದನು. ಆದರೆ ಪೆರುಮಾಳಚೆಟ್ಟಿ ಸೀಸದಕಡ್ಡಿ ಬರಹದ ಮೇಲೆ ಎಂಜಲು ಹಾಕಿದರೆ ಅದು ಜಾಂಬಳಿ ಬಣ್ಣಕ್ಕೆ ತಿರುಗುವುದೆಂಬುದು ಸುದರ್ಶನನಿಗೆ ಗೊತ್ತಾಗಿದ್ದಿತು. ಅವನು ಭಾನುವಾರಗಳಿಗೂ ಬರೆದಿದ್ದ ಒಪ್ಪಿಸಿದನು ಎಂಬುದನ್ನು ಅಳಿಸ

ಲಾರದೆ "ಆದರೆ ಆಯಿತು. ಮೊದಲು ಸುಬ್ಬುವಿಗಿಂತ ನನ್ನದು ಒಂದು ದಿನ ಒಪ್ಪಿಸಿದನು ಹೆಚ್ಚಾಗಿತ್ತು. ಈಗ ಮೂರು ದಿನ ಹೆಚ್ಚಾಯಿತು" ಎಂದುಕೊಂಡು ಸುಮ್ಮನಾದನು.

ಇನಿಸ್ಪೆಕ್ಟರು ಬರುವ ದಿವಸ ಸಾಯಂಕಾಲ ಚರ್ಯ ಪತ್ರಿಕೆಯಲ್ಲಿ ಒಪ್ಪಿಸಿದನು ಇಲ್ಲ, ಬರೆಯಲು ಉಪಾಧ್ಯಾಯರಿಗೆ ಪುರುಸತ್ತು ಇರುವುದಿಲ್ಲವೆಂದು, ಮೊದಲೇ ಸುದರ್ಶನ ಊಹಿಸಿದ್ದನು. ಹಾಗೇನಾದರೂ ಚರ್ಯ ಪತ್ರಿಕೆಗಳನ್ನು ಉಪಾಧ್ಯಾಯರು ಕೇಳಿದ್ದರೆ ಸುದರ್ಶನನ ಗುಟ್ಟು ರಟ್ಟಾಗುತ್ತಿದ್ದಿತು. ಆಗ ಸುದರ್ಶನ ಪುಸ್ತಕ ಮನೆಯಲ್ಲಿ ಮರೆತೆ ಎಂದು ಹೇಳಿ ತಪ್ಪಿಸಿಕೊಂಡು ಮನೆಗೆಹೋಗಿ ಚರ್ಯಪತ್ರಿಕೆಯಿಂದ ಫೋರ್ಜರಿಯ ಹಳೆಯನ್ನು ಹರಿದುಹಾಕಿ ಅದರ ಜಾಗದಲ್ಲಿ ಹಿಂದಲ ಹಳೆಯನ್ನು ಇಟ್ಟು ಕೊಂಡು ಬರಬೇಕೆಂದು ಮಾಡಿದ್ದನು. ಉಪಾದ್ರು, ಆ ಸಾಯಂಕಾಲ ಇನಿಸ್ಪೆಕ್ಟರು ಒರುತ್ತಾರೆಂದೂ ಊರಿನವರೆಲ್ಲಾ ಬಂದು ಇನಿಸ್ಪೆಕ್ಟರು ಕೊಡುವ ಬಹುಮಾನವನ್ನು ನೋಡಿ, ಹೇಳುವ ಬುದ್ಧಿವಾದವನ್ನು ಕೇಳಬೇಕೆಂದೂ ಪೋಷಕರಿಗೆಲ್ಲಾ ಹೇಳಿ ಕಳುಹಿಸಿದ್ದರು. ಇನಿಸ್ಪೆಕ್ಟರು ಬಂದರು. ಉಪಾಧ್ಯಾಯರ ಕುರ್ಚಿಯ ಮೇಲೆ ಇನಿಸ್ಪೆಕ್ಟರು ಕುಳಿತುದರಿಂದಲೂ ಪೋಷಕರು ಬರುವ ಗಡಿಬಿಡಿಯಿದ್ದುದರಿಂದಲೂ ಉಪಾಧ್ಯಾಯರು ಆ ದಿನ ಚರ್ಯಪತ್ರಿಕೆಗಳಲ್ಲಿ ಒಪ್ಪಿಸಿದನು—ಇಲ್ಲ ಬರೆಯಲಿಲ್ಲ. ಆನತ್ತು ಮಾಮೂಲಿಗೆ ವಿರೋಧವಾಗಿ ಎರಡನೆಯ ಸಲ ಶಾಲೆಯನ್ನು ಗುಡಿಸಿ ಸಿದ್ಧಪಡಿಸಿದ ಮೇಲೆ ಉಪಾಧ್ಯಾಯರು ಮೇಜಿನ ಮುಂದೆ ಕುಳಿತಿದ್ದ ಇನಿಸ್ಪೆಕ್ಟರ ಅವಗಾಹನೆಗೆಂದು ಎಲ್ಲಾ ಚರ್ಯಪತ್ರಿಕೆಗಳನ್ನೂ ಹುಡುಗರಿಂದ ತೆಗೆದುಕೊಂಡು ಮೇಜಿನ ಮೇಲೆ ಇಟ್ಟರು. ಆ ದಿವಸ ತನ್ನ ಚರ್ಯಪತ್ರಿಕೆಯನ್ನು ಇತರರಾರೂ ನೋಡಲು ಸುದರ್ಶನ ಅವಕಾಶಕೊಟ್ಟಿರಲಿಲ್ಲ. ಈಗ ಅದು ನೆಟ್ಟಗೆ ಇನಿಸ್ಪೆಕ್ಟರ ಮೇಜಿನ ಮೇಲಕ್ಕೆ ಹೋಗುವುದನ್ನು ತಿಳಿದೇ ಅವನು ಕೊಟ್ಟನು. ಎಲ್ಲಾ ಪತ್ರಿಕೆಗಳನ್ನೂ ಮೇಜಿನ ಮೇಲೆ ಇಟ್ಟು ಉಪಾಧ್ಯಾಯರು ಹೆಮ್ಮೆಯಿಂದ "ಇದರಲ್ಲಿ ಯಾರು ಹೆಚ್ಚು ದಿನ ಪಾಠಗಳನ್ನು ಒಪ್ಪಿಸಿದ್ದಾರೆಯೋ ಅವರಿಗೆ ಬಹುಮಾನ ಅರ್ಪಣೆಯಾಗಬೇಕು; ತಮ್ಮ ಇಷ್ಟಬಂದವರಿಗೆ ತಮ್ಮ ವರದ ಹಸ್ತದಿಂದ ಅರ್ಪಣೆಯಾಗಬೇಕು" ಎಂದು ಕೇಳಿಕೊಂಡರು. ಎಲ್ಲಿಂದಲೋ ತರಿಸಿ

ಇಟ್ಟಿದ್ದ ಸಂಕ್ಷೇಪ ವಚನ ಭಾರತವೆಂಬ ಇನಾಮಿನ ಪುಸ್ತಕವನ್ನು ಮೇಜಿನ ಮೇಲೆ ಇಟ್ಟರು. ಸುಬ್ಬುವು ಇನಿಸ್ಪೆಕ್ಟರು ತನ್ನ ಹೆಸರನ್ನು ಕೂಗುವುದನ್ನೇ ಉತ್ಸಾಹದಿಂದ ನಿರೀಕ್ಷಿಸುತ್ತಿದ್ದನು. ಹುಡುಗರು ಇನಿಸ್ಪೆಕ್ಟರನ್ನು ಅಷ್ಟು ಹೊತ್ತು ಅಷ್ಟು ಹತ್ತಿರದಲ್ಲಿ ಯಾವಾಗಲೂ ನೋಡಿರಲಿಲ್ಲ. ಅವರಿಗೆಲ್ಲಾ ಒಂದು ವಿಧವಾದ ಉತ್ಸಾಹವೂ ಭಯವೂ ಉಂಟಾಗಿತ್ತು. ಇಂತವರ ಮುಂದೆ ನಿಂತು ಅವರ ಕೈಯಿಂದ ಬಹುಮಾನ ಪಡೆವ ಸುಬ್ಬುವೇ ಧನ್ಯನೆಂದು ಅವರಿಗೆ ಚೆನ್ನಾಗಿ ನಂಬಿಕೆಯಾಗಿತ್ತು. ಇನಿಸ್ಪೆಕ್ಟರು ಎಲ್ಲಾ ಚರ್ಯಪತ್ರಿಕೆಗಳನ್ನೂ ತಿರುವಿ ಲೆಕ್ಕ ಹಾಕಿ ಒಂದನ್ನು ಬೇರೆ ಇಟ್ಟುಕೊಂಡು ಎದ್ದು ನಿಂತು ಮುಂದಲಂತೆ ಹೇಳಿದರು.

"ಪಾಠ ತಪ್ಪದೆ ಒಪ್ಪಿಸಿದವರಿಗೆ ಈ ಬಹುಮಾನ ಕೊಡಬೇಕೆಂದು ನಿಮ್ಮ ಉಪಾಧ್ಯಾಯರು ಏರ್ಪಡಿಸಿದ್ದಾರೆ. ಈ ಸಮಾರಂಭಕ್ಕೆ ಪೋಷಕರಾದ ನೀವೆಲ್ಲಾ ಬಂದುದು ಸಂತೋಷ. ನಿಮ್ಮ ನಿಮ್ಮ ಹುಡುಗರ ಬುದ್ಧಿಶಕ್ತಿಯ ಬೆಳವಣಿಗೆಯನ್ನು ನೀವು ಅತ್ಯಂತ ಕುತೂಹಲದಿಂದಲೂ ಎಚ್ಚರಿಕೆಯಿಂದಲೂ ನೋಡಿಕೊಳ್ಳಬೇಕು. ನಿಮ್ಮ ಹುಡುಗರು ಸರಿಯಾಗಿ ಸ್ಕೂಲಿಗೆ ಬರದೇ ಹೋದರೆ ಮುಂದಲ ತರಗತಿಗಳಿಗೆ ತೇರ್ಗಡೆಯಾಗುವುದಿಲ್ಲ. ಪೋಕರಿಗಳಾಗಿ ಸ್ಕೂಲು ಬಿಡುತ್ತಾರೆ. ಸ್ಕೂಲು ಬಿಟ್ಟನಂತರ ಜವಾಬ್ದಾರಿಯಿಲ್ಲದವರಾಗಿ ಕಳ್ಳರಾಗುತ್ತಾರೆ. ಜವಾಬ್ದಾರಿಯಿಲ್ಲದ ಮೇಲೆ ಅವರಿಗೆ ಜೈಲೇ ಗತಿ. ಜೈಲಿಗೆ ಹೋಗಿ ಬಂದವನು ಖೂನಿಮಾಡುವುದಕ್ಕೂ ಹಿಂದೆಗೆಯುವುದಿಲ್ಲ. ಖೂನಿಮಾಡಿದವನಿಗೆ ಆಗುವ ಶಿಕ್ಷೆ ನಿಮಗೆ ಗೊತ್ತೇ ಇದೆ. ಆದುದರಿಂದ ನಿಮ್ಮ ಹುಡುಗರನ್ನು ಸ್ಕೂಲಿಗೆ ಸಕಾಲದಲ್ಲಿ ಕಳುಹಿಸುವುದಕ್ಕೆ ಹಿಂದೆಗೆಯಬೇಡಿ" ಎಂದರು. ಪೋಷಕರ ಪೈಕಿ ಅನೇಕರಿಗೆ ತಾವು ಅದೇ ಸ್ಕೂಲಿನಲ್ಲಿ ಹಿಂದೆ ವಿದ್ಯಾರ್ಥಿಗಳಾಗಿದ್ದಾಗ, ಆಗ ಬರುತ್ತಿದ್ದ ಇನಿಸ್ಪೆಕ್ಟರುಗಳು ಅದೇ ರೀತಿ ಮಾತನಾಡುತ್ತಿದ್ದುದು ಜ್ಞಾಪಕ ಬಂತು. ಇನಿಸ್ಪೆಕ್ಟರು ಮುಂದುವರಿಸಿದರು "ಈ ಬಾಲಕರ ಪೈಕಿ ಎಷ್ಟು ಜನ ದಾಧಾಭಾಯಿ ನವರೋಜಿ 'ಟಿಳಕ್' ನಮ್ಮ ದೇಶದ ಮುಂದಲ ನೆಹ್ರು ಗಾಂಧಿ ಇದ್ದಾರೋ ಯಾರು ಬಲ್ಲರು ? ಇಂತಹ ಇನಾಮುಗಳು ಯಾವಾಗಲೂ ಬರುವುದು ಒಬ್ಬ ಬಾಲಕನಿಗೇಯೆ. ಆದರೆ ಇನಾಮು ಬರದವರು ಪಶ್ಚಾತ್ತಾಪ ಪಡಬೇಕಾಗಿಲ್ಲ. ಮುಂದಲ ಸಲ ಅವರಿಗೂ, ಚೆನ್ನಾಗಿ

ವ್ಯಾಸಂಗಮಾಡಿದರೆ ಖಂಡಿತ ಬರುತ್ತೆ. ಈಗ ಬಹುಮಾನ ತೆಗೆದುಕೊಳ್ಳುವ ಹುಡುಗನ ತಂದೆ ತಾಯಿಗಳಿಗೆ ಇದಕ್ಕಿಂತ ಹೆಚ್ಚಾದ ಆನಂದ ಮತ್ತಾವುದೂ ಇಲ್ಲ. ತಮ್ಮ ಶ್ರಮ ಇಷ್ಟು ಸಾರ್ಥಕವಾದುದನ್ನು ನೋಡಿ ನಿಮ್ಮ ಉಪಾಧ್ಯಾಯರಿಗೂ ಬಹಳ ಸಂತೋಷವಾಗಿದೆ.

"ನಿಮ್ಮ ಊರಿನ ಒಬ್ಬ ವಿದ್ಯಾರ್ಥಿ ಸ್ಕೂಲು ನಡೆದ ೨೨ ದಿವಸಗಳೂ, ಒಂದು ದಿನವೂ ತಪ್ಪದೆ ಪಾಠಗಳನ್ನು ಒಪ್ಪಿಸಿ ಈ ಬಹುಮಾನವನ್ನು ಪಡೆದಿದ್ದಾನೆ. ಅವನು ಯಾರೆಂಬುದು ನಿಮಗೆಲ್ಲಾ ಗೊತ್ತೇ ಇದೆ. ಅವನ ಉತ್ತರೋತ್ತರ ಅಭಿವೃದ್ಧಿಯನ್ನು ಬಯಸಿ ಅವನನ್ನು ಇತರ ಬಾಲಕರು ಅನುಸರಿಸಿ ತಾವೂ ಅವನಂತೆ ಆಗಲೆಂದು ಹಾರೈಸಿ ಈ ಬಹುಮಾನವನ್ನು ನಾನು ಕೊಡುತ್ತೇನೆ."

ಇನಿಸ್ಪೆಕ್ಟರು ಮುಖಭಾವವನ್ನು ಗಂಭೀರವಾಗಿ ಮಾಡಿಕೊಂಡು "ಸುದರ್ಶನ" ಎಂದು ಉಚ್ಚರಿಸಿದರು. ಅದನ್ನು ಕೇಳಿ, ಅರ್ಧ ಎದ್ದಿದ್ದ ಸುಬ್ಬುವು, ಭಾವಿಯಿಂದ ಅರ್ಧ ಭಾಗ ಮೇಲಕ್ಕೆ ಬಂದಿದ್ದ ಕೊಡವು ಹಗ್ಗ ಹರಿದು ಹಾಗೇ ಕೆಳಕ್ಕೆ ಬೀಳುವಂತೆ. ಹಿಂದಕ್ಕೆ ಕುಸಿದುಬಿಟ್ಟನು. ಉಪಾಧ್ಯಾಯರು ಹಾಸನದಲ್ಲಿ ಮಲಗಿದ್ದವರು ಕಣ್ಣು ಬಿಟ್ಟಾಗ ಬೆಂಗಳೂರಲ್ಲಿ ಎಚ್ಚೆತ್ತವರಂತೆ ಬೆಪ್ಪಾಗಿ ಸುತ್ತಾ ನೋಡುತ್ತಿದ್ದರು. ಉಪಾಧ್ಯಾಯರಿಗೆ ಲೋಕವು ತಲೆ ಕೆಳಕಾಗುವಂತೆ ತೋರಿತು. ಹುಡುಗರಲ್ಲಿ ಗುಸು ಗುಸು ಪ್ರಾರಂಭವಾಯಿತು. ಅವರ ಮಧ್ಯೆ ಸಿಡಿಲು ಬಿದ್ದಿದ್ದರೂ ಅವರು ಅಷ್ಟು ಬೆಚ್ಚುತ್ತಿರಲಿಲ್ಲ. ಸ್ಕೂಲಿನಲ್ಲಿ ಬುದ್ಧಿವಂತನಾರು ದಡ್ಡನಾರು ಎಂಬುದನ್ನು ಅರಿಯದಿದ್ದ ಪೋಷಕರೂ ಕೂಡ ಇದನ್ನು ಸ್ವಾಭಾವಿಕವಾಗಿ ನಂಬುವುದು ಕಷ್ಟವೆಂದು ಸುದರ್ಶನನ ಕಡೆ ನೋಡುತ್ತಿದ್ದರು. ಉಪಾಧ್ಯಾಯರಿಗೆ ಸ್ಕೂಲು ೧೯ ದಿನ ಮಾತ್ರ ನಡೆದಿರುವಾಗ ಸುದರ್ಶನ ಇಪ್ಪತ್ತೆರಡು ದಿವಸ ಪಾಠವನ್ನು ಹೇಗೆ ಒಪ್ಪಿಸಿದನೆಂಬುದು ಸಮಸ್ಯೆಯಾಗಿಯೇ ಉಳಿಯಿತು. ಸುದರ್ಶನ ಮಾತ್ರ ಸ್ವಲ್ಪವೂ ಗಾಬರಿಹೊಂದದೆ ಕುಳಿತ ಸ್ಥಳದಿಂದ ನಿಧಾನವಾಗಿ ಹೋಗಿ ಇನಿಸ್ಪೆಕ್ಟರ ಮುಂದೆ ನಿಂತನು. ಇನಿಸ್ಪೆಕ್ಟರು ಸುದರ್ಶನನ ಚರ್ಯಪತ್ರಿಕೆಯನ್ನೂ, ಬಹುಮಾನದ ಪುಸ್ತಕವಾದ ಭಾರತ ಕಥಾಸಂಗ್ರಹವನ್ನೂ ಅವನ ಕೈಗೆ ಕೊಟ್ಟು "ಮುಂದೆ ಇನ್ನೂ ಚೆನ್ನಾಗಿ ಓದಬೇಕು. ನಾನು ಇನ್ನೊಂದು ಸಲ ಬರುವ ವೇಳೆಗೆ

ಈ ಭಾರತದಲ್ಲಿರುವುದನ್ನೆಲ್ಲಾ ಗಟ್ಟಿಮಾಡಿ ನನಗೆ ಒಪ್ಪಿಸಬೇಕು. ಭಾರತ ಬಹಳ ಒಳ್ಳೆಯ ಪುಸ್ತಕ. ಇದು ಯಾರು ಬರೆದದ್ದು ಗೊತ್ತೆ" ಎಂದು ಹೇಳಿ ಮಾತನ್ನು ನಿಲ್ಲಿಸಿದರು. ಇದನ್ನು ಯಾರು ಬರೆದುದು ಎಂಬು ದಾಗಿ ಸುದರ್ಶನನಿಗೆ ಪ್ರಶ್ನೆಹಾಕಬೇಕೆಂದು ಅವರ ಮನಸ್ಸಿನಲ್ಲಿ ಇರಲಿಲ್ಲ. ಒಂದೇ ಸಮನೆ ಮಾತನಾಡಿದ್ದುದರಿಂದ ಸ್ವಲ್ಪ ಉಸಿರು ಹುಯಿದುಕೊಳ್ಳ ಬೇಕೆಂದು ಮಾತನ್ನು ನಿಲ್ಲಿಸಿದರು. ಸುದರ್ಶನ ದಪ್ಪ ಧ್ವನಿಯಲ್ಲಿ ಸ್ಕೂಲೆಲ್ಲಾ ಪ್ರತಿಧ್ವನಿಯಾಗುವಂತೆ ಭಾರತವನ್ನು ಬರೆದವನು ಭರತ ಎಂದನು. ಇನಿ ಸ್ಪೆಕ್ಟರ ಕಿವಿ ನೆಟ್ಟಗಾಯಿತು. ಅವರು ಈ ಭಾರತದಲ್ಲಿ ಹೇಳಿರುವುದೇನು ಎಂದು ಮುಂದಲ ಪ್ರಶ್ನೆ ಹಾಕಿದರು. ಸುದರ್ಶನನು ಅದಕ್ಕೂ ಸಂಕೋಚ ವಿಲ್ಲದೆ ಭರತನ ಕಥೆ ಎಂದು ಉತ್ತರಕೊಟ್ಟನು. ಬುದ್ಧಿವಂತನೆನ್ನಿಸಿಕೊ ಳ್ಳುವವನ ವಿಚಾರವೇ ಹೀಗಾದ ಮೇಲೆ ಉಳಿದವರ ಪಾಡೇನು ಎನ್ನು ವಂತೆ ಇನಿಸ್ಪೆಕ್ಟರು ಉಪಾಧ್ಯಾಯರ ಕಡೆ ನೋಡಿದರು. ಇನಿಸ್ಪೆಕ್ಟರಿಗೆ ಇನಾಮನ್ನು ಹೊಂದಿದ ಬಾಲಕನನ್ನು ಇನ್ನೂ ಸ್ವಲ್ಪ ಚೆನ್ನಾಗಿ ಪರೀಕ್ಷಿಸ ಬೇಕೆಂದು ಮನಸ್ಸಾಯಿತು. ಲೆಕ್ಕದಲ್ಲಿ ಸ್ವಲ್ಪ ಪರೀಕ್ಷಿಸೋಣವೆಂದು ಕೊಂಡು " ನೂರು ಬಾಳೆ ಹಣ್ಣುಗಳನ್ನು ಎಂಟಾಣೆಗೆ ತೆಗೆದುಕೊಂಡು ಆಣೆಗೆ ಹದಿನಾರರಂತೆ ಮಾರಿದರೆ ವ್ಯಾಪಾರಿಗೆ ಎರಡು ಆಣೆ ನಷ್ಟವಾಗುತ್ತೆ. ಹಾಗಾದರೆ ವ್ಯಾಪಾರಿಯು ಏನು ಮಾಡಬೇಕು" ಎಂದು ಕೇಳಿದರು. ಸಭಿಕರೆಲ್ಲಾ ಹೇಗೆ ಮಾರಿದರೆ ಲಾಭ ಬಂದೀತೆಂದು ಲೆಕ್ಕ ಹಾಕುತ್ತಿರುವಾಗ ಸುದರ್ಶನನು "ಆ ವ್ಯಾಪಾರವನ್ನೇ ಬಿಡ ಬೇಕು" ಎಂದನು. ಇನಿಸ್ಪೆಕ್ಟರಿಗೆ ಈ ಸಲ ನಿಜವಾಗಿಯೂ ಸಿಟ್ಟು ಹತ್ತಿತು. ಬಹುಮಾನ ಪಡೆದ ಹುಡುಗನೆಂದು ಅವನ ಮೇಲೆ ಅವರಿಗೆ ಹುಟ್ಟಿದ್ದ ವಿಶ್ವಾಸ ಒಂದೇ ಏಟಿಗೆ ಹಾರಿಹೋಯಿತು. ಅವರು "ನಿನ್ನ ತಲೆ, ನಿನಗೆ ಭೂಮಿ ಆಕಾಶ ಎಲ್ಲಾ ಒಂದೇ" ಎಂದವರು ತತ್ ಕ್ಷಣ "ಹೋಗಲಿ ಆಕಾಶ ಯಾತರ ಮೇಲೆ ನಿಂತಿದೆ" ಎಂದು ಕೇಳಿದರು. ಸುದರ್ಶನ "ಕಂಬಗಳ ಮೇಲೆ" ಎಂದನು. ಇನಿಸ್ಪೆಕ್ಟರು ಕೋಪದಿಂದ "ಎಷ್ಟು ಕಂಬಗಳ ಮೇಲೆ" ಎಂದರು. ಸುದರ್ಶನ ನಿಸ್ಸಂಕೋಚ ದಿಂದ "ನಾಲ್ಕು ಕಂಬಗಳ ಮೇಲೆ" ಎಂದನು. ಇನಿಸ್ಪೆಕ್ಟರು ಮತ್ತಷ್ಟು ಕೋಪದಿಂದ "ಕಂಬಗಳು ಯಾಕೆ ನಮಗೆ ಕಾಣುವುದಿಲ್ಲ"

ಎಂದರು. ಸುದರ್ಶನನು "ಅವು ಮೇಲಕ್ಕೆ ಇವೆ. ನಮಗೆ ಕಾಣು ವುದು ಆಕಾಶದ ತಳ ಮಾತ್ರ. ಕಾಲುಮಣೆಯ ಕಾಲುಗಳನ್ನು ಮೇಲಕ್ಕೆ ಮಾಡಿ ತೂಗ ಹಾಕಿದರೆ ಅದರ ತಳ ಮಾತ್ರ ನಮಗೆ ಕಾಣುವಂತೆ ಆಕಾ ಶದ ತಳಭಾಗ ಮಾತ್ರ ನಮಗೆ ಕಾಣುತ್ತದೆ" ಎಂದನು.

## ೧೩. ಪ್ರಶ್ನೆ ಪತ್ರಿಕೆಯ ಕಳವು

ಇನಿಸ್ಪೆಕ್ಟರು ಮರಿಯನನ್ನು ಇನ್ನು ಹೆಚ್ಚಾಗಿ ಪ್ರಶ್ನೆಮಾಡಲಿಲ್ಲ. ಅವರು ಅದೇ ರಾತ್ರಿ ಹಾಸನಕ್ಕೆ ಹೊರಟರು. ಹೊರಡುವುದಕ್ಕೆ ಮುಂಚೆ ಉಪಾಧ್ಯಾಯರು ಬಹುಮಾನದ ವಿಷಯದಲ್ಲಿ ಉಂಟಾಗಿದ್ದ ತಪ್ಪನ್ನು ತಿದ್ದ ಬಯಸಿದರು. ಇನಿಸ್ಪೆಕ್ಟರು ಅವರನ್ನು ಮಾತನಾಡಗೊಡದೆ "ಸುದ ರ್ಶನ ದಡ್ಡನಲ್ಲ, ಪಾದರಸದಂತೆ ಚುರುಕು, ಇನ್ಯಾಕೆ; ಅದರ ಪ್ರಸ್ತಾಪ ಬಿಡಿ" ಎಂದರು. ಸುದರ್ಶನನು ಮನೆಗೆ ಬಂದ ಕೂಡಲೇ ಚರ್ಯಪತ್ರಿಕೆಯ ಹೊಲಿಗೆಯನ್ನು ಬಿಚ್ಚಿ ಇಪ್ಪತ್ತೆರಡು ಒಪ್ಪಿಸಿದನು ಇದ್ದ ಹಳೆಯನ್ನು ತೆಗೆದು ಹಾಕಿ ಮೊದಲನೆಯ ಕಾಗದವನ್ನು ಮತ್ತೆ ಸೇರಿಸಿ ಹೊಲಿದಿಟ್ಟನು. ಭಾರತ ಕಥಾ ಸಂಗ್ರಹವನ್ನು ಸುಬ್ಬುವಿಗೆ ಕೊಟ್ಟು ಅವನ ಹತ್ತಿರವಿದ್ದ ದೊಡ್ಡದಾದ ರೇಶಿಮೆ ಬಾಲಂಗಚ್ಚಿಯ ಪಟವನ್ನೂ ದಾರದ ಉಂಡೆ ಯನ್ನೂ ತೆಗೆದುಕೊಂಡು ಊರಮುಂದಲ ತುರುಮಂದೆಯ ಬೈಲಿನಲ್ಲಿ ಹು ಡುಗರನ್ನೆಲ್ಲಾ ಸೇರಿಸಿಕೊಂಡು ಪಟವಾಡಿಸತೊಡಗಿದನು. ಸುಬ್ಬುವು ಬಹು ದಿನಗಳಿಂದ ತಾನು ಆಶೆಪಟ್ಟುಕೊಂಡಿದ್ದ "ಸುಬ್ಬರಾಯನ ಪುಸ್ತಕ ಯಾರೂ ಮುಟ್ಟಕೂಡದು" ಎಂದು ಭಾರತ ಕಥಾಸಂಗ್ರಹದಲ್ಲಿ ಬರೆದುಕೊಂಡು ತನಗೇ ಇನಾಮು ಬಂದಿದ್ದರೆ ಎಷ್ಟು ಸಂತೋಷಪಡುತ್ತಿದ್ದನೋ ಅಷ್ಟೇ ಸಂತೋಷದಿಂದ ಎಲ್ಲರಿಗೂ ಪುಸ್ತಕವನ್ನು ತೋರಿಸಿದನು. ಮರು ದಿವಸ ಬೆಳಿಗ್ಗೆ ಸ್ಕೂಲಿಗೆ ಬಂದ ಕ್ಷಣ ಉಪಾಧ್ಯಾಯರು ಸುದರ್ಶನನ ಚರ್ಯಪತ್ರಿಕೆ ಯನ್ನು ತೆಗೆದುನೋಡಿದರು. "ಈ ಇನಿಸ್ಪೆಕ್ಟರಿಗೆ ಹುಚ್ಚುಹಿಡಿದಿರಬೇಕು. ಇಲ್ಲದಿದ್ದರೆ ನನಗೇ ಹುಚ್ಚು ಹಿಡಿಯುತ್ತಿದೆಯೆನೋ" ಎಂದುಕೊಂಡು ಸುಮ್ಮನಾದರು.

ಸುದರ್ಶನ ಕನ್ನಡ ಐದನೆಯ ತರಗತಿಗೆ ಬಂದನು. ಅದಕ್ಕೆ ಆಗ ಕನ್ನಡ ಲೋವರ್ ಸೆಕಂಡರಿ ತರಗತಿ ಎಂದೇ ಹೆಸರಿದ್ದಿತು. ಸುದರ್ಶನ ತಿಪ್ಪಯ್ಯ ಉಪಾದ್ರು ಮನೆಯಲ್ಲಿ ಲೋವರ್ ಸೆಕಂಡರಿ ಪರೀಕ್ಷೆಗೆ ತಯಾರಿ ತೆಗೆದುಕೊಳ್ಳಲು, ಅನಂತು ಏರ್ಪಾಡುಮಾಡಿದನು. ಉಪಾಧ್ಯಾಯರ ಮಗ ಸುಬ್ಬುವೂ ಆ ವರುಷ ಲೋವರ್ ಸೆಕಂಡರಿ ಪರೀಕ್ಷೆಗೆ ಕಟ್ಟಬೇಕಾಗಿದ್ದುದರಿಂದ ಮೇಷ್ಟರು ಮನೆಯಲ್ಲಿಯೂ ಪಾಠ ಹೇಳುತ್ತಿದ್ದರು. ಸುದರ್ಶನ ಸಾಯಂಕಾಲ ಏಳು ಗಂಟೆಗೆ ಉಪಾಧ್ಯಾಯರ ಮನೆಗೆ ಹೋಗಿ ಎಂಟು ಎಂಟುವರೆ ವರೆಗೆ ಓದುತ್ತಿದ್ದು ಅನಂತರ ಮನೆಗೆ ಬಂದು ಊಟ ಮಾಡಿ ಮತ್ತೆ ಉಪಾಧ್ಯಾಯರ ಮನೆಗೆ ಹೋಗಿ ರಾತ್ರಿ ೧೦-೧೧ ಗಂಟೆ ವರೆಗೆ ಓದಿ ಮತ್ತೆ ಮುಂಜಾನೆಯೂ ಹೊತ್ತಿಗೆ ಮುಂಚೆ ಏಳುತ್ತಿದ್ದನು. ಒಂದು ದಿವಸ ಸಾಯಂಕಾಲ ಸುದರ್ಶನ ಸ್ಕೂಲಿನಿಂದ ಬಂದ ಮೇಲೆ ಅವನ ತಾಯಿ ಮಧ್ಯಾಹ್ನದ ಅನ್ನವನ್ನೇ ಅವನಿಗೆ ಬಡಿಸಿ "ಇವತ್ತು ರಾತ್ರಿ ಊಟಕ್ಕೆ ಬರಬೇಡ; ಏಕಾದಶಿ, ಎಮ್ಮೆ ಬೇರೆ ಕರುಹಾಕುವಂತೆ ಇದೆ. ರಾತ್ರಿಗೆ ಅಡಿಗೆ ಮಾಡುವುದಿಲ್ಲ, ಉಪಾದ್ರು ಮನೆಯಲ್ಲಿಯೇ ಇದನ್ನೂ ತಿನ್ನು" ಎಂಬುದಾಗಿ ಹೇಳಿ ಗರಿ ಗರಿಯಾಗಿದ್ದ ಎರಡು ಬೊಗಸೆ ಚಕ್ಕಲಿ ಪುಡಿಯನ್ನು ಸುದರ್ಶನನ ಜೇಬಿಗೆ ತುಂಬಿದಳು. ಸುದರ್ಶನ ಭರ್ತಿಯಾಗಿದ್ದ ಜೇಬನ್ನು ಮುಟ್ಟಿ ನೋಡಿಕೊಳ್ಳುತ್ತಾ ಉಪಾದ್ರು ಮನೆಗೆ ಹೋದನು. ರಾತ್ರಿ ಎಂಟುವರೆ ಒಂಭತ್ತು ಗಂಟೆಗೆ ಸುಬ್ಬುವೂ ಉಪಾದ್ರೂ ಒಳಕ್ಕೆ ಊಟಕ್ಕೆ ಹೋದರು. ಸುದರ್ಶನ "ನಾನು ಊಟಕ್ಕೆ ಹೋಗೊಲ್ಲ" ಎಂದನು. ಉಪಾಧ್ಯಾಯರು ಯಾಕೆ ಎಂದರು. ಸುದರ್ಶನ ಊಟವಾಗಿದೆ ಎಂದಿದ್ದರೆ ಉಪಾಧ್ಯಾಯರು ಸುಮ್ಮನಿರುತ್ತಿದ್ದರು. ಅವನು ಹಾಗೆ ಹೇಳದೆ "ನನಗೆ ಹಸಿವಿಲ್ಲ" ಎಂದನು. ಉಪಾಧ್ಯಾಯರು "ಹಸಿವಿಲ್ಲದೆ ಏನು ? ನಿನ್ನ ವಯಸ್ಸಿನಲ್ಲಿ ರಾತ್ರಿ ಊಟಮಾಡದಿದ್ದರೆ ನಿದ್ರೆ ಬರುವುದಿಲ್ಲ. ಹೋಗು. ಸೇರಿದಷ್ಟು ಒಂದು ತುತ್ತು ಊಟಮಾಡಿಕೊಂಡು ಬಾ" ಎಂದು ಹೇಳಿ ಹೊರಗೆ ಅಟ್ಟಿ ಬಾಗಿಲು ಹಾಕಿಕೊಂಡು ತಾವು ಊಟಕ್ಕೆ ಹೋದರು.

ಸುದರ್ಶನನಿಗೆ ಮತ್ತೆ ಮನೆಗೆ ಹೋಗಲು ಇಷ್ಟವಿರಲಿಲ್ಲ. ಹೊದರೆ ಅನಂತು ಬಯ್ಯುವನೆಂಬುದು ಅವನಿಗೆ ಗೊತ್ತಿದ್ದಿತು. ಹೋಗದೆ ಮೇಷ್ಟರ

ಜಗಲಿ ಮೇಲೆ ಕುಳಿತಿರುವುದಕ್ಕೂ ಅವನಿಗೆ ಇಷ್ಟವಿರಲಿಲ್ಲ. ಕೂತಿದ್ದರೆ ಮೇಷ್ಟರು ಬಯ್ಯುತ್ತಿದ್ದರು. ಅಲ್ಲದೆ ಜೇಬಿನಲ್ಲಿ ತಿನ್ನಬೇಕಾಗಿದ್ದ ಚಕ್ಕಲಿ ಬೇರೆ ಇದ್ದಿತು. ಅವನು ನಿಧಾನವಾಗಿ ಯೋಚಿಸುತ್ತಾ ತನ್ನ ಮನೆ ಬಾಗಿಲಿಗೆ ಬಂದನು. ಬಾಗಿಲು ಮುಚ್ಚಿತ್ತು. ಸುದರ್ಶನನಿಗೆ ಬಾಗಿಲು ತಟ್ಟಿ ಕರೆಯಲು ಭಯವಾಯಿತು. ಅವನು ಜಗಲಿ ಮೇಲೆ ಕುಳಿತುಕೊಂಡು ಚಕ್ಕಲಿಯನ್ನು ನಿಧಾನವಾಗಿ ತಿನ್ನಲು ಪ್ರಾರಂಭಿಸಿದನು. ಅದು ಬಹಳ ಗರಿಯಾಗಿದ್ದುದರಿಂದ ಗರಂ ಗರಂ ಎಂದು ಸದ್ದಾಗುತ್ತಿದ್ದಿತು. ಅನಂತವೂ ಅವನ ಹೆಂಡತಿಯೂ ಎಮ್ಮೆ ಕರುಹಾಕುವುದನ್ನೇ ಕಾಯುತ್ತಾ ಕುಳಿತಿದ್ದರು. ಅನಂತು ಬಾಗಿಲಿನ ಹತ್ತಿರದ ಗೋಡೆಗೆ ಆತುಕೊಂಡು ಬಿದ್ದಿದ್ದನು. ಇದ್ದಕ್ಕಿದ್ದಂತೆ ಅವನಿಗೆ ಹೊರಗಡೆ ಹಸುವು ಜೋಳದ ಕಡ್ಡಿಯನ್ನೋ ಕಬ್ಬಿನ ಸಿಪ್ಪೆಯನ್ನೋ ಅಗಿದು ತಿನ್ನುವ ಸದ್ದು ಕೇಳಿಸಿತು. ಸ್ವಲ್ಪ ಹೊತ್ತು ಸದ್ದನ್ನು ಕೇಳಿ ಅನಂತು ಬಾಗಿಲನ್ನು ಅರಗುಮಾಡಿ ಹೊರಕ್ಕೆ ಬಂದನು. ಬಾಗಿಲು ತೆಗೆಯುವ ಸದ್ದು ಕೇಳಿಸಿದ ಕೂಡಲೆ ಓಡಿಬಿಡಬೇಕೆಂದು ಸುದರ್ಶನ ಜಗಲಿ ತುದಿಗೆ ಹೆಜ್ಜೆ ಇಟ್ಟನು. ಅನಂತು ಕತ್ತಲೆಯಲ್ಲಿ ಚಲಿಸುತ್ತಿದ್ದ ಸುದರ್ಶನನನ್ನು ನೋಡಿ "ಯಾರು ಯಾರು" ಎಂದನು. ಸುದರ್ಶನನ ಬಾಯಿಯಲ್ಲಿ ಚಕ್ಕಲಿ ಇತ್ತು. ಅವನು ಜವಾಬು ಕೊಡುವುದು ಸಾವಕಾಶವಾಯಿತು. ಅನಂತು ಹೆಂಡತಿಗೆ ದೀಪ ತಾ ಎಂದನು. ಜಗಲಿಯ ತುದಿಯಲ್ಲಿ ನಿಂತಿದ್ದ ಸುದರ್ಶನ ದೀಪದ ಮಬ್ಬಾದ ಪ್ರಕಾಶದಲ್ಲಿ ಅವರ ಕಣ್ಣಿಗೆ ಬಿದ್ದನು. ಸುದರ್ಶನ ಜಗಲಿಯಿಂದ ದುಮುಕುವುದಕ್ಕೆ ಮುಂಚೆ ಅನಂತು ಅವನ ಬೆನ್ನಿಗೆ ಒಂದು ಬಿಟ್ಟನು. ತಂಗಿಯಾದ ಸುಭದ್ರೆಗೆ " ಇಲ್ಲಿ ನೋಡು ಬಾ. ನಿನ್ನ ಮಗನ ವಿದ್ಯಾಭ್ಯಾಸ. ಮೇಷ್ಟ್ರ ಮನೆಗೆ ಕಳುಹಿಸಿದರೆ ಇಲ್ಲಿ ಬಂದು ಕದ್ದು ಕೂತಿದ್ದಾನೆ " ಎಂದು ಕೂಗಿದನು. ಸುದರ್ಶನನ ತಂಗಿ ವೈದೇಹಿ, ಅನಂತುವಿನ ಮಗಳು ಮಂಗಳೆ ಎಲ್ಲರೂ ಬಂದು ಸುದರ್ಶನನನ್ನು ನೋಡಿ ಚೆನ್ನಾಗಿ ಬಯ್ದರು; ನಕ್ಕರು. ಸುದರ್ಶನ ಚೆನ್ನಾಗಿ ಬೈಯಿಸಿಕೊಂಡು ಏನೂ ತಿಳಿಯದವನಂತೆ ಮತ್ತೆ ಮೇಷ್ಟರ ಮನೆಗೆ ಬಂದು ಓದಲು ಪ್ರಾರಂಭಿಸಿದನು. ಹುಡುಗರಿಗೆಲ್ಲಾ ನಿದ್ರೆ ಬಂದ ಮೇಲೆ ಮೇಷ್ಟರು " ಪಾಪ ಒಂದು ತುತ್ತು ಅನ್ನ ಹೊಟ್ಟೆಗೆ ಬೀಳೊ ಹೊತ್ತಿಗೆ ಸುಖವಾಗಿ ನಿದ್ರೆಮಾಡ್ತಾನೆ ಈ ವಯಸ್ಸಿನಲ್ಲಿ ರಾತ್ರಿ ಊಟ ಮಾಡದಿದ್ದರೆ ಕರುಳು ಚುರುಕುತ್ತೆ " ಎಂದರು.

ಸುದರ್ಶನ ತನ್ನ ಕಾಲವನ್ನೆಲ್ಲಾ ತೆಂಗಿನಮರ ಹತ್ತುವುದರಲ್ಲಿಯೂ ಈಜುವುದರಲ್ಲಿಯೂ ಕಳೆಯುತ್ತಿದ್ದನು. ಇಂಗ್ಲಿಷ್ ಹೇಳಿಕೊಡುತ್ತಿದ್ದ ಸಹಾಯೋಪಾಧ್ಯಾಯರ ಸ್ಥಾನಕ್ಕೆ ಬಂದ ಹೊಸ ಮೇಷ್ಟರಿಗೂ ಹೆಡ್ಮಾಸ್ಟರಿಗೂ ಸ್ಕೂಲಿನಲ್ಲಿ ಹುಡುಗರ ಎದುರಿಗೇ ವ್ಯಾಜ್ಯ ಹತ್ತಿ ಒಬ್ಬರು ಕುರ್ಚಿಯನ್ನೂ ಒಬ್ಬರು ಬೋರ್ಡನ್ನೂ ಹಿಡಿದುಕೊಂಡು ಹೊಡೆದಾಡಲು ಪ್ರಾರಂಭಿಸಿದುದರಿಂದ ಲೋವರ್ ಸೆಕಂಡರಿ ಪರೀಕ್ಷೆಗೆ ನಿಯಮಿತವಾಗಿದ್ದ ಪಾಠಭಾಗ ಪೂರ್ತಿ ಮುಗಿಯಲಿಲ್ಲ. ಉಪಾಧ್ಯಾಯರು ಹೀಗೆ ಸ್ಕೂಲಿನಲ್ಲಿ ಒಬ್ಬರ ಮೇಲೆ ಒಬ್ಬರು ಕುಸ್ತಿಮಾಡಿದುದಲ್ಲದೆ, ಪಾಠ ಹೇಳುವ ಕಾಲದಲ್ಲಿಯೂ ಪಾಠವನ್ನು ಮರೆತು ಹುಡುಗರೊಂದಿಗೆ ತಮ್ಮ ತಮ್ಮ ವ್ಯಾಜ್ಯದ ವಿಷಯವನ್ನೇ ಕುರಿತು ಮಾತನಾಡುತ್ತಿದ್ದರು. ಸಹಾಯೋಪಾಧ್ಯಾಯರು ಯಾವಾಗಲೂ ಹುಡುಗರನ್ನು ಎಲೆ ಅಡಿಕೆ ಸುಣ್ಣ ಇವುಗಳನ್ನು ತೆಗೆದುಕೊಂಡು ಬರಲು ಮನೆಗೆ ಅಟ್ಟುತ್ತಿದ್ದರು. ಮನೆಯವರು ಕೊಡುತ್ತಿರಲಿಲ್ಲ. ಮೇಷ್ಟರಿಗೆ ಆದರೆ ತಾನೆ ಏನು. ಪ್ರತಿದಿನವೂ ಯಾರು ಎಲೆ ಅಡಿಕೆ ಕೊಡುತ್ತಾರೆ? ಮೇಷ್ಟರು ಎಲೆ ಅಡಿಕೆ ಅಗಿಯುತ್ತಾ ಕೈಯಲ್ಲಿ ಒಂದು ಕತೆ ಪುಸ್ತಕ ಹಿಡಿದುಕೊಂಡು ಹೊಗೆಸೊಪ್ಪಿನ ರಸವನ್ನು ಉಗಳಲು ಪದೆ ಪದೆ ಹೊರಕ್ಕೆ ಹೋಗುತ್ತಿದ್ದರು. ಅನೇಕ ವೇಳೆ ಕತೆಯಲ್ಲಿ ನೆಟ್ಟ ಮನಸ್ಸುಳ್ಳವರಾಗಿ ಎದ್ದುಹೋಗಲು ಸಹ ಇಷ್ಟವಿಲ್ಲದೆ ಒಂದು ಕಾಗದದ ಚೂರನ್ನು ಹರಿದು ಅದನ್ನು ದುಂಡಗೆ ಪೊಟ್ಟಣದಂತೆ ಮಾಡಿ ಅದಕ್ಕೆ ಎಲೆಅಡಿಕೆ ಉಗಿದು ಹೊರಗೆ ಹಾಕುವಂತೆ ಹುಡುಗರ ಕೈಯಲ್ಲಿ ಕೊಡುತ್ತಿದ್ದರು. ಸಹಾಯೋಪಾಧ್ಯಾಯರು ಹುಡುಗರಲ್ಲಿ ಕೆಲವರನ್ನು ತಮ್ಮ ಕಡೆಗೆ ಮಾಡಿಕೊಂಡು ತಿಪ್ಪಯ್ಯ ಹೆಡ್ಮಾಸ್ಟರ ಮೇಲೆಯೆ ಕೈ ಬಲ ಮಾಡಿದರು.

ಮೈಸೂರಿನಿಂದ ಟ್ರೈನಿಂಗ್ ತೆಗೆದುಕೊಂಡು ಬಂದನಂತರ ತಿಪ್ಪಯ್ಯ ಹೆಡ್ಮಾಸ್ಟರು ಕೆಲವು ಹೊಸ ಕ್ರಮಗಳನ್ನು ಪ್ರಾರಂಭಿಸಿದರು. ಇದರ ಪೈಕಿ ಸುತ್ತಮುತ್ತಲ ಹಳ್ಳಿಯ ಉಪಾಧ್ಯಾಯರುಗಳಿಂದ, ಮಲ್ಲಿಗೆ ಹಳ್ಳಿಯ ತರಗತಿಗಳಿಗೆ ಪ್ರಶ್ನ ಪತ್ರಿಕೆಗಳನ್ನು ಬರೆಯಿಸಿ ತರಿಸುತ್ತಿದ್ದುದೂ ಒಂದಾಗಿದ್ದಿತು. ಅನೇಕ ಮೇಷ್ಟರುಗಳಿಗೆ ಪ್ರಶ್ನೆಪತ್ರಿಕೆ ಬರೆಯುವುದೇ ಬರುತ್ತಿರಲಿಲ್ಲ. ಅವರಿಗೆ ಸಂಬಳ ತೆಗೆದುಕೊಳ್ಳುವುದರ ಹೊರತು

ಮತ್ತೇನೂ ಬರುತ್ತಿರಲಿಲ್ಲವೆಂದೇ ಹೇಳಬೇಕು. ಆದರೂ ಅವರು ತಿಪ್ಪಯ್ಯ ಉಪಾಧ್ಯ ಕಾಟಕ್ಕೆ ಒಳಗಾಗಿ ಒಂದೊಂದು ಪ್ರಶ್ನೆ ಪತ್ರಿಕೆಯನ್ನು ಬರೆಯುತ್ತಿದ್ದರು. ಹೊಳೆ ಆಚೆಯ ಹೊಸಕೋಟೆಯ ಉಪಾಧ್ಯಾಯರು,—ಅವರಿಗೆ ಭೀಮಯ್ಯನೆಂಬ ಅಡ್ಡ ಹೆಸರೇ ಖಾಯಂ ಆಗಿದ್ದಿತು. ಅವರ ನಿಜವಾದ ಹೆಸರು ಸರ್ಕಾರಕ್ಕೆ ಮಾತ್ರ ಗೊತ್ತಿದ್ದಿತೆಂದು ಕಾಣುತ್ತದೆ—ಈ ಪ್ರಶ್ನೆಪತ್ರಿಕೆ ಬರೆಯುವುದನ್ನೇ ಒಂದು ಮಹತ್ತರವಾದ ಯಜ್ಞವಾಗಿ ಭಾವಿಸಿಕೊಂಡಿದ್ದರು. ಅವರನ್ನು ನೋಡಿದರೆ, ಅವರು ಉಪಾಧ್ಯಾಯರಾಗಿರುವುದಕ್ಕಿಂತ ಹೆಚ್ಚಾಗಿ ಕುಸ್ತಿಯ ಜಟ್ಟಿಯಾಗಿರುವುದು ಅವರಿಗೆ ಚೆನ್ನಾಗಿ ಒಪ್ಪುವುದೆಂದು ಗೊತ್ತಾಗುತ್ತಿದ್ದಿತು. ಅವರು ಪ್ರಶ್ನೆಪತ್ರಿಕೆ ಬರೆಯುವುದಕ್ಕೆ ಒಂದು ತಿಂಗಳು ಮುಂಚಿನಿಂದಲೂ ಅದರ ಮೇಲೆ ಗರಡಿ ಸಾಧನೆ ಪ್ರಾರಂಭಿಸುತ್ತಿದ್ದರು. ಅಷ್ಟಾದರೂ ಅವರು ಬರೆದ ಪ್ರಶ್ನೆ ಪತ್ರಿಕೆಯಲ್ಲಿ ಅನೇಕ ಉಕ್ತಲೇಖನದ ತಪ್ಪುಗಳು ವಿದ್ಯಾರ್ಥಿಗಳಿಗೇ ತೋರುತ್ತಿದ್ದುವು. ಈ ಭೀಮಯ್ಯ ಬರೆಯುತ್ತಿದ್ದ ಪ್ರಶ್ನೆಪತ್ರಿಕೆ ಕಂಡರೆ ಹುಡುಗರಿಗೆ ಸೇರುತ್ತಿರಲಿಲ್ಲ. ಅದಕ್ಕೆ ಮುಖ್ಯ ಕಾರಣ, ಭೀಮಯ್ಯ ಕೊಡುತ್ತಿದ್ದ ಚರಿತ್ರೆಯ ಪ್ರಶ್ನೆಗಳು ಕಷ್ಟವಾಗಿರುತ್ತಿದ್ದುವೆಂಬುದಲ್ಲ. ಭೀಮಯ್ಯನಿಗೆ ಚರಿತ್ರೆಯನ್ನು ಓದಿ ಪ್ರಶ್ನೆಕೊಡುವಷ್ಟು ಶಕ್ತಿಯಿರಲಿಲ್ಲವೆಂಬುದೂ ಅಲ್ಲ. ಹುಡುಗರಿಗೆ ಭೀಮಯ್ಯನ ಮೇಲೆ ದ್ವೇಷವುಂಟಾಗಲು ಕಾರಣ ಭೀಮಯ್ಯನ ಇಪ್ಪತ್ತು ವರುಷದ ಕೊಣಪನಾದ ಶುದ್ಧ ಶುಂಠ ಕಾಯಿ ಮಗ, ಹನುಮಯ್ಯ ವಿದ್ಯಾರ್ಥಿಗಳ ಉತ್ತರಗಳನ್ನು ಪರೀಕ್ಷಿಸಿ ನಂಬರುಗಳನ್ನು ಹಾಕುತ್ತಿದ್ದುದು. ಈ ಭೀಮಯ್ಯನ ಮಗ ಮಲ್ಲಿಗೆ ಹಳ್ಳಿಯ ಸ್ಕೂಲಿನಲ್ಲಿ ಒಂದೊಂದು ತರಗತಿಯಲ್ಲಿ ಮೂರು ಮೂರು ವರುಷ ಇದ್ದು ಅನಂತರ ಲೋವರ್ ಸೆಕಂಡರಿ ಪರೀಕ್ಷೆಗೆ ಕಟ್ಟಿ ಕೊನೆಗೂ ತೇರ್ಗಡೆಯಾಗದೆ ಮನೆಯಲ್ಲಿಯೇ ಕುಳಿತಿದ್ದನು. ಅವನು ಚರಿತ್ರೆಯಲ್ಲಿ ಓದಿದ್ದುದನ್ನು ಜ್ಞಾಪಿಸಿಕೊಂಡು ಚರಿತ್ರೆಯ ಪ್ರಶ್ನೆ ಪತ್ರಿಕೆಗಳನ್ನು ಬರೆಯುತ್ತಿದ್ದನು. ವಿದ್ಯಾರ್ಥಿಗಳೊಂದಿಗೆ "ಉತ್ತರ ಪತ್ರಿಕೆಗಳನ್ನು ಪರೀಕ್ಷಿಸುತ್ತಿದ್ದೇನೆ. ಅವನಿಗೆ ಇಷ್ಟು ನಂಬರು ಇವನಿಗೆ ಇಷ್ಟು ನಂಬರು ಎಂದು ಹೇಳಿಕೊಳ್ಳುತ್ತಿದ್ದನು. ಅದನ್ನು ಕೇಳಿ ಲೋವರ್ ಸೆಕಂಡರಿಯ ಕೆಲವು ವಿದ್ಯಾರ್ಥಿಗಳಿಗಂತೂ "ಈ ಫೇಲಾದವನೇ ನಮ್ಮ ಉತ್ತರಗಳನ್ನು ಪರೀಕ್ಷಿ

ಸುವವನು ? ಎಂದು ಬಹಳ ಬೇಜಾರಾಗುತ್ತಿತ್ತು. ಸುದರ್ಶನ ನಾಲ್ಕನೆಯ ತರಗತಿಯಲ್ಲಿದ್ದಾಗ ಉತ್ತರ ಪತ್ರಿಕೆಯಲ್ಲಿ ಮೇಲುಗಡೆ "ಎಲೋ ಹನುಮಯ್ಯ ನೀನು ಚರಿತ್ರೆಯಲ್ಲಿ ಫೇಲು ಆದವನು. ಒಂದೊಂದು ತರಗತಿಯಲ್ಲಿ ಮೂರು ವರುಷ ಇದ್ದೆಯಂತೆ. ನಾನೇ ನಿನಗಿಂತ ಚೆನ್ನಾಗಿ ಪ್ರಶ್ನೆ ಪತ್ರಿಕೆಗಳನ್ನು ಬರೆಯಬಲ್ಲೆ. ಆದರೆ ಹೆಡ್ಮಾಸ್ಟರು ನನಗೆ ಅವಕಾಶ ಕೊಡುತ್ತಿಲ್ಲ. ನಾನು ಉತ್ತರಗಳನ್ನೆಲ್ಲಾ ಸರಿಯಾಗಿಯೇ ಬರೆದಿದ್ದೇನೆ. ಇಸವಿಗಳು, ನೀನು ಪುಸ್ತಕ ಓದುತ್ತಿದ್ದಾಗ ಇದ್ದುವುಗಳಿಗಿಂತ ಈಗ ಬದಲಾಯಿಸಿವೆ. ಈಚೆಗೆ ಹೊಸ ಪುಸ್ತಕವೂ ಬಂದಿದೆ. ಆ ಪುಸ್ತಕ ನಿನ್ನ ಹತ್ತಿರ ಎಲ್ಲಿದೆ ? ಈ ಹೊಸ ಪುಸ್ತಕದಲ್ಲಿ ಅನೇಕ ಹೊಸ ಸಂಗತಿಗಳನ್ನು ಹೇಳಿದ್ದಾರೆ. ಅದನ್ನು ಚೆನ್ನಾಗಿ ಉರುಹಾಕಿದ್ದೇನೆ. ಮೊದಲಿನಿಂದ ಕೊನೆಯವರೆಗೆ ಬೇಕಾದರೂ ಗಡಗಡನೆ ನೀರು ಕುಡಿದಂತೆ ಹೇಳುತ್ತೇನೆ. ಇಲ್ಲಿ ಬರೆದಿರುವುದೂ ಅದೆಯೆ. ಮೇಷ್ಟರು ಚರಿತ್ರೆಯಲ್ಲಿ ಪ್ರಶ್ನೆ ಕೇಳಿದಾಗ ನಾನು ಒಂದನ್ನೂ ತಪ್ಪುವುದೇ ಇಲ್ಲ" ಇಷ್ಟನ್ನು ಮೇಲೆ ಬರೆದು ಅನಂತರ ಸುದರ್ಶನ ಉತ್ತರಗಳನ್ನು ಪ್ರಾರಂಭಿಸಿದ್ದನು. ಹನುಮಯ್ಯ ಅದನ್ನು ಉತ್ತರದಲ್ಲಿ ಮೊದಲು ನೋಡಿ "ಈ ಪಿಶಾಚಿಯ ಕಾಟ ನನಗೆ ಎಲ್ಲಿ ಬಂತೊ. ಇದನ್ನು ನಮ್ಮಪ್ಪ ಭೀಮಣ್ಣನಿಗೆ ತೋರಿಸಿದರೆ ಅವರು ತೆಗೆದುಕೊಂಡು ಹೋಗಿ ತಿಪ್ಪಯ್ಯ ಉಪಾದ್ರಿಗೆ ತೋರಿಸುತ್ತಾರೆ. ಆಗ ತಿಪ್ಪಯ್ಯ ಉಪಾದ್ರು ಹನುಮಯ್ಯನ ಕೈಲಿ ಯಾಕೆ ಪ್ರಶ್ನೆ ಪತ್ರಿಕೆ ಬರೆಸಿ ಉತ್ತರಗಳನ್ನು ಪರೀಕ್ಷೆ ಮಾಡಿಸುತ್ತೀರಿ. ನಿಮಗೆ ಬುದ್ಧಿಯಿಲ್ಲ" ಎನ್ನುತ್ತಾರೆ. ಈ ಹಾಳು ಮುಂಡೆ ಗಂಡನಿಗೆ ನಾನು ಒಂದೊಂದು ತರಗತಿಯಲ್ಲಿ ಮೂರು ಮೂರು ವರುಷ ಫೇಲ್ ಆದದ್ದು ಹೇಗೆ ಗೊತ್ತಾಯಿತೊ ? ಈ ಸಲಕ್ಕೆ ಅವನಿಗೆ ನಂಬರು ಪೂರಾ ಕೊಟ್ಟುಬಿಡೋಣ" ಎಂದುಕೊಂಡು ಐವತ್ತು ಮ್ಯಾಗ್ಜಿಮಮ್‌ಗೆ ೪೮ ನಂಬರು ಕೊಟ್ಟುಬಿಟ್ಟನು. ಉತ್ತರ ಪತ್ರಿಕೆಗಳೂ ನಂಬರುಗಳ ಚೀಟಿಯೂ ಒಟ್ಟಿಗೆ ಬಂದಾಗ ತಿಪ್ಪಯ್ಯ ಉಪಾದ್ರು ಆ ಚೀಟಿ ನೋಡಿ ಸುದರ್ಶನನಿಗೆ ಎಲ್ಲರಿಗಿಂತ ಹೆಚ್ಚಾಗಿ ನಂಬರು ಬಂದಿದ್ದುದನ್ನು ಕಂಡು ಆಶ್ಚರ್ಯ ಸಂತೋಷಗಳಿಂದ ತರಗತಿಯಲ್ಲಿ ಇಂಥಿಂಥಾವರಿಗೆ ಇಷ್ಟಿಷ್ಟು ನಂಬರು ಬಂದಿದೆ. ಸುದರ್ಶನನಿಗೆ ಎಲ್ಲರಿಗಿಂತ ಜಾಸ್ತಿ. ವಿದ್ಯಾರ್ಥಿಗಳು ಅಂದರೆ ಹೀಗಿರಬೇಕು. ಓದುವಾಗ

ಓದಬೇಕು. ಆಡುವಾಗ ಆಡಬೇಕು ಎಂದು ಹೇಳಿ "ಎಲೊ ಸುದರ್ಶನ ನಿನ್ನ ಉತ್ತರ ಪತ್ರಿಕೆ ಓದು, ಎಲ್ಲರಿಗೂ ಉತ್ತರಗಳನ್ನು ಬರೆಯುವ ಕ್ರಮ ತಿಳಿಯಲಿ" ಎಂದರು. ಸುದರ್ಶನ ತನ್ನ ಉತ್ತರ ಪತ್ರಿಕೆಯನ್ನು ತೆಗೆದು ಕೊಂಡು ಸುದರ್ಶನ ನಾಲ್ಕನೆಯ ತರಗತಿ. ಚರಿತ್ರೆ. ಮಲ್ಲಿಗೆಹಳ್ಳಿಯ ಬಾಯ್ಸ್ ಸ್ಕೂಲು ಎಂದು ಓದಿ ಅನಂತರ ಎಲೊ ಹನುಮಯ್ಯ .. ಎಂದು ಪ್ರಾರಂಭಿಸಿ ಕೊನೆಯವರೆಗೆ ದಡದಡನೆ ಓದಿದನು. ಹನುಮಯ್ಯನಿಗೆ ಸುದರ್ಶನ ಕೊಟ್ಟಿದ್ದ ಉಪನ್ಯಾಸ ಮುಗಿದ ಕೂಡಲೆ ಅವನು ಉತ್ತರಗ ಳನ್ನು ಓದುವುದಕ್ಕೆ ಮುಂಚೆ ಉಪಾಧ್ಯಾಯರು "ಸಾಕು. ನಿಲ್ಲಿಸು ನಿನ್ನ ಪುರಾಣ" ಎಂದು ಗದರಿಸಿದರು.

ಹೀಗೆ ಪ್ರಶ್ನೆ ಪತ್ರಿಕೆ ಕೊಡುತ್ತಿದ್ದವರಲ್ಲಿ ಮತ್ತೊಬ್ಬ ದಿಗ್ದಂತಿ ಉಪಾಧ್ಯಾಯ ಅಳಸಿಂಗ್ರಯ್ಯ. ಈ ಅಳಸಿಂಗ್ರಯ್ಯನಿಗೆ ರುಜು ಹಾಕಲು ಸಹ ಸರಿಯಾಗಿ ಬರುತ್ತಿರಲಿಲ್ಲ. ಆದರೆ ಸುದರ್ಶನ ಮಲ್ಲಿಗೆಹಳ್ಳಿಯ ಸ್ಕೂಲಿಗೆ ಸೇರುವ ವೇಳೆಗೆ ಆಗಲೇ ಅಳಸಿಂಗ್ರಯ್ಯನಿಗೆ ಇಪ್ಪತ್ತು ವರುಷ ಸರ್ವಿಸ್ ಆಗಿದ್ದಿತು. ಅಳಸಿಂಗ್ರಯ್ಯ ಕನ್ನಡ ಮೂರನೆಯ ತರಗತಿಯಿಂದ ಮೇಲಕ್ಕೆ ಹೋಗಿರಲಿಲ್ಲ ಅವನ ನಿಜವಾದ ಹೆಸರು ಆಗ ಶ್ರೀನಿವಾಸ. ಅವನ ಅಣ್ಣನ ಹೆಸರು ಅಳಸಿಂಗ್ರಯ್ಯ. ಅಣ್ಣ ಅಳಸಿಂಗ್ರಯ್ಯನಿಗೆ ಲೋವರ್ ಸೆಕಂಡರಿಯಲ್ಲಿ ತೇರ್ಗಡೆಯಾಗಿದ್ದಿತು. ಮೇಷ್ಟ್ರು ಕೆಲಸಕ್ಕೆ ಹುಕುಮೂ ಬಂದಿತ್ತು. ಆದರೆ ಅಳಸಿಂಗ್ರಯ್ಯ ಮೇಷ್ಟ್ರು ಕೆಲಸಕ್ಕೆ ಹೋಗಲಿಲ್ಲ. ಅವನ ತಮ್ಮ ಶ್ರೀನಿವಾಸನೇ ಹಳ್ಳಿಗೆ ಹೋಗಿ ಮೇಷ್ಟರಾದನು. ಅಲ್ಲಿಂದ ಮುಂದೆ ಶ್ರೀನಿವಾಸನು ತಾನೇ ಅಳಸಿಂಗಯ್ಯ ಎಂದುಕೊಂಡು ಅಳ ಸಿಂಗ್ರಯ್ಯ ಎಂದೇ ಹೆಸರನ್ನು ಬದಲಾಯಿಸಿಕೊಂಡನು. ಯಾರಾದರೂ ಗುರುತಿದ್ದವರು ನಿನ್ನ ಹೆಸರು ಶ್ರೀನಿವಾಸಯ್ಯನಲ್ಲವೇನಯ್ಯ ಎಂದು ಕೇಳಿ ದರೆ ಅದು ಊರುಪು ಎನ್ನುತ್ತಿದ್ದನು. ಇನಿಸ್ಪೆಕ್ಟರು ವರುಷಕ್ಕೆ ಒಂದು ಸಲವೂ ಹಳ್ಳಿಗೆ ಬರುತ್ತಿರಲಿಲ್ಲ. ಶ್ರೀನಿವಾಸನು ಅಳಸಿಂಗ್ರಯ್ಯನಾಗಿಯೇ ನಿವೃತ್ತವೇತನವನ್ನೂ ಸಹ ತೆಗೆದುಕೊಂಡನು.

ಸುದರ್ಶನನು ಲೋವರ್ ಸೆಕಂಡರಿಗೆ ಬಂದಾಗ ತಿಪ್ಪಯ್ಯ ಉಪಾ ಧ್ಯಾ ತರಗತಿಯಲ್ಲಿ ಇದ್ದಕ್ಕಿದ್ದಂತೆ ಒಂದು ಹೊಸ ಸುಧಾರಣೆ ಸೂಚಿಸಿ ದರು. ಆಗ ಲೋವರ್ ಸೆಕಂಡರಿ ಪರೀಕ್ಷೆಗೆ ಹುಡುಗರನ್ನು ಕಟ್ಟಿಸುವು

ದಕ್ಕೆ ಮುಂಚೆ ಅವರು ಆ ಯೋಗ್ಯತೆಗೆ ಅರ್ಹರಾಗಿದ್ದಾರೆಯೇ ಎಂಬು
ದನ್ನು ಪರೀಕ್ಷಿಸಲು ಒಂದು ಸೆಲೆಕ್ಷನ್ ಪರೀಕ್ಷೆ ಎಂಬುದಾಗಿ ಪ್ರತಿ ಸ್ಕೂಲಿ
ನಲ್ಲಿಯೂ ನಡೆಸುತ್ತಿದ್ದರು. ಅದರಲ್ಲಿ ಪ್ಯಾಸ್ ಆದ ವಿದ್ಯಾರ್ಥಿಗಳನ್ನು
ಮಾತ್ರ ಪರೀಕ್ಷೆಗೆ ಕಟ್ಟಿಸುತ್ತೇವೆಂದು ಮೊದಲು ಹೇಳಿ ಅನಂತರ ೨-೩
ದಿನ ಬಿಟ್ಟು, ಪೋಷಕರನ್ನೂ ವಿದ್ಯಾರ್ಥಿಗಳನ್ನೂ ತಮ್ಮ ಮನೆಗೆ ತಿರುಗಿಸಿ
ಕೊಂಡು ಸ್ವಲ್ಪ ನರಳಿಸಿ ಕೊರಗಿಸಿ ಆಮೇಲೆ ಎಲ್ಲಾ ವಿದ್ಯಾರ್ಥಿಗಳನ್ನೂ
ಕಟ್ಟಿಸುವುದು ಆಗಿನ ಪದ್ಧತಿಯಾಗಿದ್ದಿತು. ತಿಪ್ಪಯ್ಯ ಉಪಾದ್ರು, ಪ್ರತಿ
ವರುಷವೂ ಸೆಲೆಕ್ಷನ್ ಪ್ರಶ್ನೆಗಳನ್ನು ಹುಡುಗರಿಗೆ ಓದಿ ಹೇಳಿ ಬರೆಯಿಸಿ
ಅನಂತರ ಅವರು ಉತ್ತರ ತಮ್ಮ ಕಾಗದಗಳಲ್ಲಿ ಬರೆಯಲು ಅವಕಾಶ
ಕೊಡುತ್ತಿದ್ದರು. ಸುದರ್ಶನ ಪರೀಕ್ಷೆಗೆ ಕಟ್ಟುವ ವರುಷ ಅವರು ಸೆಲೆಕ್ಷನ್
ಪ್ರಶ್ನೆ ಪತ್ರಿಕೆಗಳನ್ನು ಈ ಒಂದು ಸಲವಾದರೂ ಹಾಸನದಲ್ಲಿ ಅಚ್ಚುಮಾಡಿ
ಸೋಣ ಎಂದು ಸಹಾಯೋಪಾಧ್ಯಾಯರೊಡನೆ ಚರ್ಚಿಸಿ ತೀರ್ಮಾನಿಸಿ
ದರು. ಇದಕ್ಕೆ ತಗಲುವ ಖರ್ಚನ್ನು ಸೆಲೆಕ್ಷನ್ ಪರೀಕ್ಷೆಗೆ ಕೂರುವ ಪ್ರತಿ
ಯೊಬ್ಬ ವಿದ್ಯಾರ್ಥಿಯಿಂದಲೂ ನಾಲ್ಕು ಆಣೆಯಂತೆಯೂ ಇನ್ನೂ
ಸಾಲದೆ ಬಂದರೆ ಕೆಲವರು ಪೋಷಕರಿಂದಲೂ ವಸೂಲ್ಮಾಡಿಕೊಳ್ಳ
ಬೇಕೆಂದು ತೀರ್ಮಾನಿಸಿದರು. ಈ ಸಮಾಚಾರ ಊರಿನಲ್ಲಿ ತಿಳಿದಕೂಡಲೆ
ವಿದ್ಯಾರ್ಥಿಗಳ ಉತ್ಸಾಹಕ್ಕೆ ಮೇರೆಯೇ ಇಲ್ಲವಾಯಿತು. ಮಲ್ಲಿಗೆಹಳ್ಳಿಯ
ವಿದ್ಯಾರ್ಥಿಗಳು, ಅಚ್ಚು ಹಾಕಿದ ಪ್ರಶ್ನೆ ಪತ್ರಿಕೆ ಎಂದರೆ ಏನೆಂಬುದನ್ನೇ
ತಿಳಿದಿರಲಿಲ್ಲ. ಆ ವೈಭವ ಕೇವಲ ನಾಲ್ಕು ರೂಪಾಯಿನ ಪರೀಕ್ಷಯಲ್ಲಿ
(ಲೋವರ್ ಸೆಕಂಡರಿಯಲ್ಲಿ) ಮಾತ್ರ ಅವರು ಎದುರು ನೋಡುತ್ತಿದ್ದರು.
ಊರಿನಲ್ಲಿ ಎಲ್ಲಿ ನೋಡಿದರೂ ಅಚ್ಚಾದ ಪ್ರಶ್ನೆ ಪತ್ರಿಕೆಯ ಮಾತೇ ಮಾತಾ
ಯಿತು. ಹುಡುಗರಿಗಿಂತ ಹೆಚ್ಚಾಗಿ ಪೋಷಕರು ಗೆಲವುಗೊಂಡರು.
ವಿದ್ಯಾರ್ಥಿಗಳು ಹುಚ್ಚೆದ್ದು ಕುಣಿಯಲು ಆರಂಭಿಸಿದ್ದರು.

ಪರೀಕ್ಷೆಗೆ ಎರಡು ದಿನ ಮುಂಚೆ ಶನಿವಾರ ಹೆಡ್ಮಾಸ್ಟರು, ಸಹಾ
ಯೋಪಾಧ್ಯಾಯರ ಕೈಯಲ್ಲಿ ಪ್ರಶ್ನೆ ಪತ್ರಿಕೆಗಳನ್ನೂ ಅಚ್ಚಿನ ವೆಚ್ಚವನ್ನೂ
ಕೊಟ್ಟು ಅವರನ್ನು ಮಲ್ಲಿಗೆಹಳ್ಳಿಯಿಂದ ಹದಿನೈದು ಮೈಲಿ ಇರುವ ಹಾಸ
ನಕ್ಕೆ ಕಳುಹಿಸಿದರು. ಆಗ ಹಾಸನದಲ್ಲಿ ಇದ್ದುದು ಒಂದೇ ಮುದ್ರಣ
ಶಾಲೆ. ಆ ಮುದ್ರಣ ಶಾಲೆಯ ಯಜಮಾನ, ಮುದ್ರಣ ಶಾಲೆಯಲ್ಲಿ

ಕೆಲಸಮಾಡುವವನು ಮೊಳೆ ಜೋಡಿಸುವವನು ಮಿಶಿನ್‌ಮನ್ ಎಲ್ಲಾ ಒಬ್ಬನೇ ಆಗಿದ್ದನು. ಅವನು ಮಲ್ಲಿಗೆಹಳ್ಳಿಯ ಉಪಾಧ್ಯಾಯರಿಂದಲೂ ಮುದ್ರಣಶಾಲೆಯಲ್ಲಿ ಪೂರ್ಣವಾಗಿ ಕೆಲಸಮಾಡಿಸಿಕೊಂಡು, ಅಂತೂ ರಾತ್ರಿ ೧೦ ಗಂಟೆ ವೇಳೆಗೆ ಪ್ರಶ್ನೆ ಪತ್ರಿಕೆಗಳನ್ನೆಲ್ಲಾ ಅಚ್ಚುಮಾಡಿ ಕೊಟ್ಟನು. ಉಪಾಧ್ಯಾಯರು ಅವುಗಳನ್ನು ತೆಗೆದುಕೊಂಡು, ರಾತ್ರಿ ದೇವಿ ಗೆರೆಯ ಮಗ್ಗುಲ ಮಂಟಪದಲ್ಲಿ ಮಲಗಿದ್ದು ಬೆಳಗಿನ ಝಾವ ಎದ್ದು ನಡೆದುಕೊಂಡೇ ಮಲ್ಲಿಗೆಹಳ್ಳಿಗೆ ಸುಮಾರು ೧೦ ಗಂಟೆ ವೇಳೆಗೆ ಬಂದರು.

ಸುದರ್ಶನನಿಗೆ ಪ್ರಶ್ನೆಪತ್ರಿಕೆ ಅಚ್ಚಾಗುತ್ತೆ ಎಂದು ತಿಳಿದಂದಿನಿಂದ ಮನಸ್ಸು ಹೇಗೆ ಹೇಗೋ ಆಗುತ್ತಿದ್ದಿತು. ಇದರಲ್ಲಿ ಎಲ್ಲೋ ಒಂದು ಟೊಳ್ಳು ಇದೆ ಎಂಬುದು ಅವನ ಮನಸ್ಸಿಗೆ ಸ್ವಾಭಾವಿಕವಾಗ ಗೊತ್ತಾಗಿ ದ್ದಿತು. ಆದರೆ ಟೊಳ್ಳು ಎಲ್ಲಿ ಎಂಬುದು ಹೊಳೆಯುವುದು ಕಷ್ಟವಾಗಿ ದ್ದಿತು. ಮೇಷ್ಟರು ಪ್ರಶ್ನೆ ಪತ್ರಿಕೆ ಅಚ್ಚುಹಾಕಿಸಿಕೊಂಡು ತಂದನಂತರ ಅದನ್ನು ಕದ್ದುಬಿಡಬೇಕೆಂದು ಅವನು ಯೋಚಿಸಿದನು. ಆದರೆ ಹಳ್ಳಿಯ ಮೇಷ್ಟರು ತಮ್ಮ ಶೀಮೆಸುಣ್ಣ ಬಳಪ ಸಿತ್ಯಾ ಇದ್ದ ಕಡೆಯಿಂದಲೇ ಮಾಯವಾಗುತ್ತಿರುವಾಗ ಅಷ್ಟು ಅಲಕ್ಷ್ಯದಿಂದ ಇರುತ್ತಾರೆಯೇ. ಸಹಾ ಯೋಪಾಧ್ಯಾಯರು ಹಾಸನದಿಂದ ಬಂದ ಕೂಡಲೇ “ ಪ್ರಶ್ನೆ ಪತ್ರಿಕೆಗ ಳನ್ನು ಹಡ್ಮಾಸ್ಟರಿಗೆ ಕೊಡುತ್ತಾರೆ. ಅವರು ಅದನ್ನು ಚಿನ್ನಕ್ಕಿಂತ ಹೆಚ್ಚಾಗಿ, ಟ್ರೇನಿಂಗ್ ಸ್ಕೂಲಿನಲ್ಲಿ ತಮಗೆ ಹೇಳಿಕೊಟ್ಟಿದ್ದಂತೆ ಚನ್ನಾಗಿ ಕಟ್ಟಿ ಅದರ ಮೇಲೆ ಸ್ಕೂಲು ಎದುರಿನ ಬಟ್ಟಿ ಅಂಗಡಿಯವನಿಂದ ಅರಗು ತಂದು ಸುರಿದು ಬೀಗದ ಕೈ ಒತ್ತಿ ಪೆಟ್ಟಿಗೆಯಲ್ಲಿ ಇಟ್ಟುಬಿಡುತ್ತಾರೆ. ಸೋಮವಾರ ಪರೀಕ್ಷೆಯ ದಿನ ತರಗತಿಯಲ್ಲಿ ಹುಡುಗರೆಲ್ಲರ ಎದುರಿಗೆ, ಹಾವಾಡಿಗ ಬುಟ್ಟಿಯಿಂದ ಹಾವನ್ನು ಹೊರಕ್ಕೆ ಬಿಡುವಂತೆ, ಅರಗನ್ನು ಒಡೆದು ಹುಡುಗರಿಗೆ ಕೊಡುತ್ತಾರೆ ” ಎಂಬ ವಿಷಯದಲ್ಲಿ ಸುದರ್ಶನನಿಗೆ ಸಂದೇಹವಿರಲಿಲ್ಲ. ಪ್ರಶ್ನೆ ಪತ್ರಿಕೆಗಳನ್ನು ಹೀಗೆಯೇ ಮಾಡಬೇಕೆಂದು ಉಪಾಧ್ಯಾಯರು ಸಾವಿರಾರು ಸಲ ಹೇಳಿದ್ದರು. ಈ ಹಳ್ಳಿಯ ಸ್ಕೂಲಿ ನಲ್ಲಿ ಈ ರೀತಿಮಾಡುವ ಶುಭ ದಿನ ಬರುವುದೇ ಎಂದು ಅವರು ಅಷ್ಟು ದಿವಸಗಳಿಂದಲೂ ಬಯಸಿದ್ದರು. ಈಗ ಅಂತಹ ಕಾಲ ಬಂದಾಗ ಅವರು ಸುಮ್ಮನೆ ಇರುವರೆ? ಪ್ರಶ್ನೆ ಪತ್ರಿಕೆ ಹೊಡೆಯಬೇಕಾದರೆ ಇಲ್ಲಿ ಸಾಧ್ಯ

ವಿಲ್ಲ. ಇದಕ್ಕೆ ಹಾಸನಕ್ಕೇ ಹೋಗಬೇಕು ಎಂದು ಸುದರ್ಶನನಿಗೆ ಒಂದು ಸ್ಫೂರ್ತಿಯಂತೆ ಹೊಳೆಯಿತು.

ಸುದರ್ಶನ ಭಾನುವಾರ ಬೆಳಗಿನಝಾವ ಎದ್ದನು. ಭಾನುವಾರದ ದಿನ ಸ್ಕೂಲಿಗೆ ಬಿಡುವಾದುದರಿಂದ ಶನಿವಾರ ರಾತ್ರಿ ಅವನು ಹೆಡ್ಮಾಸ್ಟರ ಮನೆಯಲ್ಲಿ ಮಲಗುತ್ತಿರಲಿಲ್ಲ. ಬೆಳಗಿನಜಾವ ಎದ್ದವನೇ ಸುದರ್ಶನ ನೆಟ್ಟಗೆ ಹಾಸನದ ಕಡೆಗೆ ಹೊರಟನು. ಅವನಿಗೆ ಉದ್ದಕ್ಕೂ, ಎದುರಿಗೆ ಪ್ರಶ್ನೆಪತ್ರಿಕೆ ತೆಗೆದುಕೊಂಡು ಬರುತ್ತಿರುವ ಉಪಾಧ್ಯಾಯರು ಎಲ್ಲಿ ಎದುರಿಗೆ ಕಣ್ಣಿಗೆ ಬೀಳುತ್ತಾರೋ ಎಂದು ಗಾಬರಿಯಾಗಿದ್ದಿತು. ಸುಮಾರು ಎಂಟು ಮೈಲಿ ಹೋಗುವ ಹೊತ್ತಿಗೆ ಸೂರ್ಯೋದಯವಾಗಿ ಎಳ ಬಿಸಿಲು ಪ್ರಾರಂಭವಾಯಿತು. ಸುದರ್ಶನ ದೂರದಿಂದ ನೋಡುತ್ತಿರುವಾಗಲೇ ಅವನಿಗೆ ಉಪಾಧ್ಯಾಯರು ತಲೆಯ ಮೇಲೆ ಗಂಟನ್ನಿಟ್ಟುಕೊಂಡು ಹಾಸನದಿಂದ ಮಲ್ಲಿಗೆಹಳ್ಳಿಯ ಕಡೆಗೆ ಬರುತ್ತಿರುವುದು ಕಂಡಿತು. ಸುದರ್ಶನ ಆ ತಲೆಯ ಮೇಲಿನ ಗಂಟು ನನಗೆ ಸಿಕ್ಕಿದರೆ ! ಎಂದುಕೊಂಡನು. ಆದರೆ ಜಟ್ಟಿಯಹಾಗಿದ್ದ ಉಪಾಧ್ಯಾಯರ ಕೈಯಿಂದ ಗಂಟನ್ನು ಕಿತ್ತುಕೊಳ್ಳುವುದು ಅಷ್ಟು ಸುಲಭವಲ್ಲವೆಂಬುದು ಅವನಿಗೆ ಗೊತ್ತಿದ್ದಿತು. ಉಪಾಧ್ಯಾಯರನ್ನು ದೂರದಲ್ಲಿ ಕಂಡ ಸುದರ್ಶನ ರಸ್ತೆಯನ್ನು ಬಿಟ್ಟು ಅಡ್ಡದಾರಿ ಹಿಡಿದು ಬಯಲಿನ ಕಡೆಗೆ ನುಗ್ಗಿದನು. ಉಪಾಧ್ಯಾಯರು ಆಚೆ ಈಚೆ ಗಮನಿಸದೆ ನೆಟ್ಟಗೆ ರಸ್ತೆಯಲ್ಲಿಯೇ ಹೋಗುತ್ತಿದ್ದರು. ಸುದರ್ಶನನು ಸುಮಾರು ಹನ್ನೊಂದು ಗಂಟೆಗೆ ಹಾಸನದ ಆಂಜನೇಯ ವಿಲಾಸದ ಮುದ್ರಣಾಲಯದ ಎದುರಿಗೆ ನಿಂತನು.

ಮುದ್ರಣಾಲಯದ ಯಜಮಾನ ಹನುಮಂತಯ್ಯ ಮುದ್ರಣಾಲಯದ ಬಾಗಿಲನ್ನು ಅರ್ಧ ತೆರೆದು ಬಾಗಿಲಿನಲ್ಲಿ ನಿಂತುಕೊಂಡು ಬೀದಿ ನೋಡುತ್ತಿದ್ದನು. ಸುದರ್ಶನ ನೆಟ್ಟಗೆ ಬಂದು ತನ್ನ ಬಾಗಿಲಿನ ಮುಂದೆ ನಿಂತುದನ್ನು ಕಂಡು ಹನುಮಂತಯ್ಯನು "ಏನು" ಎಂದನು. ಸುದರ್ಶನ "ನಮ್ಮೂರ ಮೇಷ್ಟರು ಇಲ್ಲಿ ಇರತೀನಿ ಎಂದು ಹೇಳಿದ್ದರು. ನೋಡಿದೆ" ಎಂದನು. ಹನುಮಂತಯ್ಯನು " ಮಲ್ಲಿಗೆಹಳ್ಳಿ ಮೇಷ್ಟರು ತಾನೆ. ಛತ್ರದಲ್ಲಿ ಮಲಗಿರಬೇಕು. ಅಥವಾ ಊರಿಗೆ ಹೊರಟುಹೋಗಿದ್ದರೂ ಇರಬಹುದು. ನಾನೇನೋ ನನ್ನ ಕೆಲಸ ನೆನ್ನೆ ರಾತ್ರಿ ೧೦ ಗಂಟೆಗೆ ಮಾಡಿ

ಕೊಟ್ಟು ಬಿಟ್ಟೆ" ಎಂದನು. ಸುದರ್ಶನ ಅತ್ಯಂತ ಆಶ್ಚರ್ಯಪಟ್ಟವನಂತೆ ನಟಿಸುತ್ತಾ "ಹತ್ತು ಗಂಟೆಗೇ ಆಗಿ ಹೋಯಿತೇ ನಮ್ಮ ಹೆಡ್ಮಾಸ್ಟರು ಎರಡು ದಿವಸ ಬೇಕಾಗುತ್ತೆ ಅಂತ ಹೇಳಿದರೆಲ್ಲ" ಎಂದನು. ಹನು ಮಂತಯ್ಯ ಸ್ವಲ್ಪ ಹೆಮ್ಮೆಯಿಂದ "ಎರಡೂ ಬೇಕಾಗುತ್ತೆ, ನಾಲ್ಕೂ ಬೇಕಾಗುತ್ತೆ. ಮೊಳೆ ಜೋಡಿಸುವುದಕ್ಕೆ ಬರದಿದ್ದರೆ ಎರಡು ತಿಂಗಳು ಬೇಕಾಗುತ್ತೆ. ನಾನೂ ಅವರಿವರನ್ನು ಕೆಲಸಕ್ಕೆ ಸೇರಿಸಿಕೊಂಡಿದ್ದರೆ ಹಾಗೇ ಆಗುತ್ತಿತ್ತು. ನನ್ನ ಕೆಲಸ ನಾನು ಮಾಡುತ್ತೇನೆ. ಮೊಳೇನೂ ನಾನೇ ಜೋಡಿಸುತ್ತೇನೆ; ಅಚ್ಚಿನ ಪ್ರೂಫನ್ನೂ ನಾನೇ ತಿದ್ದುತ್ತೇನೆ. ಪ್ರೆಸ್ ನಲ್ಲಿ ಅಚ್ಚುಮಾಡುವವನೂ ನಾನೇ. ಯಾವುದರಲ್ಲೂ ತಪ್ಪಾಗುವುದಿಲ್ಲ. ಸರ ಸರ ಸರನೆ ಕೆಲಸ ಆಗಿಹೋಗುತ್ತೆ. ಬೇರೆ ಕೆಲಸಗಾರರನ್ನ ಸೇರಿಸಿ ಕೊಂಡರೆ ಎಲ್ಲಾ ಅಧ್ವಾನಮಾಡಿಬಿಡುತ್ತಾರೆ" ಎಂದನು. ಒಂದು ಗಳಿ ಗೆಯ ನಂತರ "ನೀನು ಯಾರು" ಎಂದನು. ಸುದರ್ಶನನು "ನಾನೂ ಮಲ್ಲಿಗೆಹಳ್ಳಿಯವನೇ, ಸಾಮಾನು ಗಂಟನ್ನು ತೆಗೆದುಕೊಂಡು ಹೋಗಲು ಮೇಷ್ಟರು ಇಲ್ಲಿಗೆ ಬರಹೇಳಿದ್ದರು. ಈಗ ತಾನೇ ಊರಿನಿಂದ ನಡೆದು ಕೊಂಡು ಬಂದೆ. ಹೋಗಿ ಛತ್ರದಲ್ಲಿ ನೋಡುತ್ತೇನೆ. ಪ್ರಶ್ನೆಪತ್ರಿಕೆ ಮೇಷ್ಟರು ತೆಗೆದುಕೊಂಡು ಹೋದರೆ?" ಎಂದನು. ಹನುಮಂತ ಯ್ಯನು "ಹೂ ನೆನ್ನೆ ರಾತ್ರಿಯೇ ಕೊಟ್ಟುಬಿಟ್ಟೆ" ಎಂದನು. ಅಷ್ಟು ಹೊತ್ತಿಗೆ ಹನುಮಂತಯ್ಯನ ಹೆಂಡತಿ ಒಳಗಿನಿಂದ ಬಾಗಿಲಿಗೆ ಬಂದು ಹನುಮಂತಯ್ಯನನ್ನು ಊಟಕ್ಕೆ ಕರೆದಳು. ಹನುಮಂತಯ್ಯ ಸುದರ್ಶನ ನನ್ನು ಮೇಲಿನಿಂದ ಕೆಳಗಿನ ವರೆಗೆ ನೋಡಿದನು. ಸುದರ್ಶನನು ನಡೆದು ಸುಸ್ತಾಗಿ ಸಾಯುವಂತಿದ್ದನು. ಮಂಡಿವರೆಗೆ ಧೂಳು ಮುಚ್ಚಿತ್ತು. ಆದರೆ ಆಳು ಬಲಿಷ್ಟನಾಗಿದ್ದುದರಿಂದ, ಕಾಲು ನೋಯುತ್ತಿದ್ದರೂ ಸುದರ್ಶನ ಮಾತನಾಡುತ್ತಲೇ ನಿಂತಿದ್ದನು. ಹನುಮಂತಯ್ಯನಿಗೆ ಕನಿಕರವುಂಟಾ ಯಿತು. ಅವನು ಸುದರ್ಶನನನ್ನು "ಒಂದು ತುತ್ತು ಊಟಮಾಡ್ತೀಯ" ಎಂದನು. ಸುದರ್ಶನನು ಸುಮ್ಮನಿದ್ದುದನ್ನು ಕಂಡು ಹನುಮಂತಯ್ಯನು ಅವನನ್ನು ಒಳಕ್ಕೆ ಕರೆದುಕೊಂಡು ಹೋದನು. ಕೈಕಾಲು ತೊಳೆದ್ಕು ಕೊಂಡು ಇಬ್ಬರೂ ಊಟಮಾಡಿದರು.

ಊಟಮಾಡುತ್ತಿರುವಾಗಲೇ ಸುದರ್ಶನನಿಗೆ ಬಳಲಿಕೆಯಿಂದ ತೂಕ

ಡಿಕೆ ಬರುತ್ತಿತ್ತು, ಊಟವಾದ ಕೂಡಲೇ ಹನುಮಂತಯ್ಯನು ಅವನೊಂದಿಗೆ ಪ್ರೆಸ್ಸಿಗೆ ಬಂದನು. ನೆಲದ ಮೇಲೆ ಬಿದ್ದಿದ್ದ ಒಂದು ಗೋಣಿ ಚೀಲವನ್ನು ಎಳೆದುಕೊಂಡು "ಇವತ್ತು ಆದಿತ್ಯವಾರ. ಕೆಲಸವಿಲ್ಲ. ಕೆಲಸ ಇದ್ದಿದ್ರೆ ಮಾಡ್ತ ಇದ್ದೆ. ನೆನ್ನೆ ರಾತ್ರಿಯ ವರೆಗೆ ಮಾಡಿದ ಕೆಲಸದಿಂದ ಬೆನ್ನೆಲ್ಲಾ ನೋಯುತ್ತೆ. ಒಂದು ಗಳಿಗೆ ಮಲಗಿಕೊಳ್ಳುತ್ತೇನೆ. ನೀನೂ ಆ ಚೀಲ ಎಳೆದುಕೊಂಡು ಬಿದ್ದುಕೊ" ಎಂದನು. ಸುದರ್ಶನನಿಗೆ ಪ್ರೆಸ್ಸಿನೊಳಕ್ಕೆ ಬಂದ ಕೂಡಲೇ ದೇವರ ಮುಂದೆ ನಿಂತ ಪೂಜಾರಿಯ ಮನೋಭಾವ ಬಂದಿತು. ಆದರೆ ಅವನ ಬಳಲಿಕೆ ಹೆಚ್ಚಾಗಿತ್ತು. ಹನುಮಂತಯ್ಯನಿಗೆ ನಿದ್ರೆ ಬರುವವರೆಗೆ ತಾನು ಎಚ್ಚರವಾಗಿರಬೇಕು. ಅನಂತರ ಪ್ರೆಸ್ಸನ್ನು ಪ್ರಶ್ನೆ ಪತ್ರಿಕೆಗಳಿಗಾಗಿ ಹುಡುಕಬೇಕು ಎಂದು ಅವನು ಎಷ್ಟು ಸಾಹಸ ಮಾಡಿ ಮನಸ್ಸನ್ನು ದೃಢವಾಗಿಟ್ಟುಕೊಳ್ಳಲು ಪ್ರಯತ್ನಿಸಿದರೂ ಅವನ ಯತ್ನ ಮೀರಿ ಅವನಿಗೆ ನಿದ್ರೆ ಬಂದುಬಿಟ್ಟಿತು. ಸುದರ್ಶನ ಪೂರ್ಣವಾಗಿ ನಿದ್ರೆಗೆ ಅಧೀನನಾಗಿ ನೆಲದ ಮೇಲೆ ಬಿದ್ದುಕೊಂಡನು. ಹೀಗೆ ಸುದರ್ಶನ ಎಷ್ಟು ಹೊತ್ತು ಮಲಗಿದ್ದನೋ ಅವನಿಗೇನು ಗೊತ್ತು. ಅವನಿಗೆ ಎಚ್ಚರವಾದಾಗ ಸುಮಾರು ೩ ಗಂಟೆಯಾಗಿದ್ದಿತು. ಸುದರ್ಶನ ಎದ್ದು ಕುಳಿತುಕೊಂಡು ಕಣ್ಣುಬಿಟ್ಟನು. ಮಗ್ಗುಲಲ್ಲಿ ಮಲಗಿದ್ದ ಹನುಮಂತಯ್ಯ ಇರಲಿಲ್ಲ. ಪ್ರೆಸ್‌ನಲ್ಲಿ ಅವನೊಬ್ಬನೇ ಇದ್ದನು.

ಸುದರ್ಶನನು ಎದ್ದು ನಿಂತು ಸುತ್ತಾ ನೋಡಿದನು. ತಾನು ಎಲ್ಲಿದ್ದೆ ಏನು ಎಂಬುದು ಅವನಿಗೆ ಕೂಡಲೇ ಚೆನ್ನಾಗಿ ಮಂದಟ್ಟಾಯಿತು. ತಾನು ಅಷ್ಟು ಹೊತ್ತು ಮಲಗಿದ್ದುದಕ್ಕೆ ತನ್ನನ್ನೇ ಬೈದುಕೊಂಡು ಪ್ರಶ್ನೆ ಪತ್ರಿಕೆ ಇಲ್ಲಿ ಎಲ್ಲಿರಬಹುದು ಎಂದುಕೊಂಡು ಪ್ರೆಸ್‌ನ ಯಂತ್ರದ ಹತ್ತಿರ ಹೋಗಿ ನಿಂತುಕೊಂಡು ನೋಡಿದನು. ಅದುವರೆಗೆ ಸುದರ್ಶನನು ಪ್ರೆಸ್ಸನ್ನು ನೋಡಿರಲಿಲ್ಲ. ಆದರೆ ಊರಿನಲ್ಲಿ ಪ್ರಶ್ನೆಪತ್ರಿಕೆ ಪ್ರೆಸ್‌ನಲ್ಲಿ ಅಚ್ಚಾಗುತ್ತೆ ಅಂತ ಮಾತು ಹೊರಟ ಕೂಡಲೇ ಎಲ್ಲರೂ ಅದನ್ನೇ ಕುರಿತು ಚರ್ಚಿಸುತ್ತಿದ್ದುದರಿಂದಲೂ ತಿಪ್ಪಯ್ಯ ಹೆಡ್ಮಾಸ್ಟರು ಅಚ್ಚುಕೂಟವನ್ನು ಕುರಿತೇ ಒಂದು ದಿನ ಪಾಠಮಾಡಿದ್ದುದರಿಂದಲೂ ಸುದರ್ಶನನಿಗೆ ಪ್ರೆಸ್ಸನ್ನು ನೋಡಿದ ಕೂಡಲೇ ಪ್ರಶ್ನೆಪತ್ರಿಕೆ ಇದರಲ್ಲಿಯೇ ಅಚ್ಚಾಗಿರುವುದೆಂದು ತಿಳಿಯಿತು. ಪ್ರಶ್ನೆಪತ್ರಿಕೆಯ ಗುಟ್ಟನ್ನು ತನ್ನಲ್ಲಿ ಅಡಗಿಸಿಕೊಂಡಿದ್ದ

ಪ್ರೆಸ್ಸಿಗೆ ಸುದರ್ಶನನು ಮನಸ್ಸಿನಲ್ಲಿಯೇ ನಮಸ್ಕರಿಸಿದನು. ಆದರೆ ಅದರ ಮೇಲೆ ಎಲ್ಲಿ ನೋಡಿದರೂ ಅವನಿಗೆ ಪ್ರಶ್ನೆ ಪತ್ರಿಕೆಯ ಗುರುತು ಹತ್ತಲಿಲ್ಲ. ಪ್ರೆಸ್ ಕೊಠಡಿಯಲ್ಲಿ ಎಲ್ಲಿ ನೋಡಿದರೂ ಪ್ರಶ್ನೆಪತ್ರಿಕೆ ಕಾಣಲಿಲ್ಲ. ಸುದರ್ಶನನಿಗೆ ಅಳು ಬರುವಂತೆ ಆಯಿತು. ಅವನು ಬಾಲ್ಯ ಸಹಜವಾದ ಸರಳತೆಯಿಂದ ಅಪ್ಪಾ ದೇವರೆ ಪಶ್ನೆ ಪತ್ರಿಕೆ ದಯಪಾಲಿಸೋ: ಊರ ಮುಂದಲ ಆಂಜನೇಯ. ನಿನಗೆ ಒಂದು ಕಾಯಿ ಕರ್ಪೂರ ಕಾಣಿಕೆ ಕೊಡುತ್ತೇನೆ ಎಂದು ಹೇಳಿ ಉದ್ದಕ್ಕೂ ನಮಸ್ಕಾರ ಮಾಡಿದ. ಮಲ್ಲಿಗೆಹಳ್ಳಿಯ ದೇವಸ್ಥಾನದ ಆಂಜನೇಯ ಇದ್ದಕ್ಕಿದ್ದಂತೆ ಹಾಸನಕ್ಕೆ ಬರುವುದು ಹೇಗೆ? ಸುದರ್ಶನ ಕೊಠಡಿಯ ಮೂಲೆ ಮೂಲೆಯನ್ನೂ ಕುರಿತು ನೋಡುತ್ತಿರುವಾಗ ಒಂದು ಕಡೆ ಕಾಗದ ಮುದುರಿ ಎಸೆದಿದ್ದುದು ಕಾಣಿಸಿತು. ಆ ವೇಳೆಗೆ ಸುದರ್ಶನ ಅಂತಹ ಹತ್ತಾರು ಕಾಗದಗಳನ್ನು ನೋಡಿ ನೋಡಿ ಎಸೆದಿದ್ದ ಅವನು ನಿರುತ್ಸಾಹದಿಂದ ಬಿದ್ದಿದ್ದ ಕಾಗದವನ್ನು ಬಿಚ್ಚಿ ಓದಲು ಪ್ರಾರಂಭಿಸಿದ. ಮೊದಲನೆಯ ದಪ್ಪ ಅಕ್ಷರ ಮಲ್ಲಿಗೆಹಳ್ಳಿ ಬಾಯ್ಸ್ ಸ್ಕೂಲು ಸೆಲೆಕ್ಷನ್ ಪ್ರಶ್ನೆಪತ್ರಿಕೆ ಎಂದು ಓದಿದ ಕೂಡಲೆ ಸುದರ್ಶನನ ಆನಂದಕ್ಕೆ ಪಾರವಿಲ್ಲದುದಾಯಿತು. ಅದೇ ಕಾಗದದಲ್ಲಿ ಕೆಳಗಡೆ ಚರಿತ್ರೆ ಭೂಗೋಳ, ಆರೋಗ್ಯ ಗಣಿತ ಪ್ರಶ್ನೆಗಳು ಇದ್ದವು. ಒಂದೇ ಕಾಗದದಲ್ಲಿ ಮೂರು ನಾಲ್ಕು ಪ್ರಶ್ನೆ ಪತ್ರಿಕೆಗಳು ಇರುವುದರ ಅರ್ಥ ಅವನಿಗೆ ತಿಳಿಯಲಿಲ್ಲ. ಪ್ರೆಸ್‌ನಲ್ಲಿ ೨-೩ ವಿಷಯಗಳ ಪ್ರಶ್ನೆ ಪತ್ರಿಕೆಗಳನ್ನು ಒಟ್ಟಾಗಿ ಅಚ್ಚುಹಾಕಿ ಅನಂತರ ಅವುಗಳನ್ನು ಕತ್ತರಿಸಿಕೊಡುತ್ತಾರೆಂಬುದು ಅವನಿಗೆ ತಿಳಿಯಲಿಲ್ಲ. ಆ ಎಸೆದಿದ್ದ ಕಾಗದ, ಪ್ರೆಸ್ಸಿನಲ್ಲಿ ಮೊದಲು ಸರಿಯಾಗಿ ಅಚ್ಚುಬೀಳುವುದೋ ಇಲ್ಲವೋ ಎಂಬುದನ್ನು ತಿಳಿಯಲು ಅಚ್ಚುಹಾಕಿ, ಆಚೆಗೆ ಮುದುರಿ ಎಸೆದಿದ್ದುದು. ಅದರ ಮೇಲೆ ಅಲ್ಲಿ ಇಲ್ಲಿ ಶಾಯಿ ಬಿದ್ದಿತ್ತು. ಸುದರ್ಶನ ಆ ಎರಡು ಅರ್ಧ ಗಜ ಕಾಗದಗಳನ್ನೂ ಜೇಬಿನಲ್ಲಿ ಜೋಪಾನವಾಗಿ ಮಡಿಸಿಟ್ಟುಕೊಂಡನು. ಸುಮಾರು ಕಾಲು ಗಂಟೆ ಒಳಗಾಗಿ ಹನುಮಂತಯ್ಯ ಅಂಗಡಿಗೆ ಹೋಗಿದ್ದವನು ಬಂದನು. ಸುದರ್ಶನನು ಹೋಗಿಬರುತ್ತೇನೆಂದು ಹೇಳಿ ಸರ್‍ರನೆ ಊರಿನ ಕಡೆ ಹೊರಟನು. ಪ್ರಶ್ನೆ ಪತ್ರಿಕೆ ಸಿಕ್ಕಿದ್ದ ಉತ್ಸಾಹದಲ್ಲಿ ಅವನಿಗೆ ಆಯಾಸ ಕಾಣಲೇ ಇಲ್ಲ. ಮಲ್ಲಿಗೆಹಳ್ಳಿ ಹತ್ತಿರಕ್ಕೆ ಬರುವ ವೇಳೆಗೆ ಸುಮಾರು

ಕತ್ತಲೆ ಪ್ರಾರಂಭವಾಯಿತು. ಮನೆಗೆ ಬಂದ ಕೂಡಲೇ ಅನಂತು ಬೆಳಗಿನಿಂದ ಎಲ್ಲಿಗೆ ಹೋಗಿದ್ದೆ ಎಂದು ಸುದರ್ಶನನಿಗೆ ಎರಡು ಬಿಟ್ಟನು. ಸುದರ್ಶನನಿಗೆ ಜೇಬಿನಲ್ಲಿದ್ದ ಪ್ರಶ್ನೆ ಪತ್ರಿಕೆಯ ಉತ್ಸಾಹದಲ್ಲಿ ಆ ಏಟು ಚುರುಕಾಗಿ ಕಾಣಲೇ ಇಲ್ಲ. ಮರು ದಿವಸದ ಪರೀಕ್ಷೆ ಭಾಷೆ. ಸುದರ್ಶನನು ಅದರ ಪ್ರಶ್ನೆಗಳನ್ನು ಉರುಹಾಕಿಕೊಂಡು ಆ ರಾತ್ರಿ ಹೆಡ್ಮಾಸ್ಟರ ಮನೆಗೆ ಹೋದನು. ಬೆಳಗಿನಿಂದ ನಡೆದಿದ್ದುದರಿಂದ, ದೀಪದ ಮುಂದೆ ಓದುವುದಕ್ಕೆ ಪುಸ್ತಕ ಹಿಡಿದುಕೊಂಡ ಕೂಡಲೇ ಅವನಿಗೆ ನಿದ್ರೆ ಪ್ರಾರಂಭವಾಯಿತು. ಮೇಷ್ಟರು ಎರಡು ಮೂರು ಸಲ ಎಚ್ಚರಿಸಿದರು. ಆಮೇಲೆ ಒಂದು ಕೊಟ್ಟರು. ಕೊನೆಗೆ ಕೋಪದಿಂದ "ನಿನಗಂತೂ ಪ್ಯಾಸು ಆಗುವುದಿಲ್ಲ. ಯಾಕೆ ಹಿಂಸಿಸಲಿ ಮಲಗಿಕೊ" ಎಂದು ಬಿಟ್ಟರು. ಸುದರ್ಶನ ಪ್ರಶ್ನೆಗಳಿಗೆ ಉತ್ತರಗಳನ್ನು ಚೆನ್ನಾಗಿಯೇ ನೋಡಿಕೊಂಡಿದ್ದನು. ಅವನು ತತ್‌ಕ್ಷಣವೇ ಮಲಗಿ ಗೊರಕೆ ಹೊಡೆಯಲು ಪ್ರಾರಂಭಿಸಿದನು. ಮೇಷ್ಟರ ಮಗ ಸುಬ್ಬು ರಾತ್ರಿ ಹನ್ನೆರಡು ಗಂಟೆವರೆಗೆ ಪಾಠ ಗಟ್ಟಿಮಾಡಿ ಮಲಗಿದನು.

ಮರು ದಿವಸ ತರಗತಿಯಲ್ಲಿ ಪ್ರಶ್ನೆ ಪತ್ರಿಕೆ ಕೈಗೆ ಬಂದಿತು. ಅದಕ್ಕಾಗಿ ಕೊಟ್ಟಿದ್ದ ಕಾಲದ ಕಾಲು ಭಾಗ ಕಾಲದಲ್ಲಿ ಅದಕ್ಕೆ ಉತ್ತರವನ್ನು ಬರೆದುಕೊಡಲು ಸುದರ್ಶನನಿಗೆ ಸಾಧ್ಯವಾಗಿತ್ತು. ಅವನು ಹಾಗೆ ಮಾಡಿದರೆ ಎಲ್ಲಿ ಉಪಾಧ್ಯಾಯರಿಗೆ ತನ್ನಲ್ಲಿ ಅನುಮಾನಬರುವುದೋ ಎಂದುಕೊಂಡು, ಉತ್ತರಗಳನ್ನು ನಿಧಾನವಾಗಿ ಬರೆದು ಎಲ್ಲರೂ ಉತ್ತರಪತ್ರಿಕೆಗಳನ್ನು ಕೊಟ್ಟನಂತರ ತಾನೂ ಕೊಟ್ಟನು. ಭಾಷೆಯ ಪ್ರಶ್ನೆಪತ್ರಿಕೆಯನ್ನು ತಿಪ್ಪಯ್ಯ ಮೇಷ್ಟರೇ ಸಾಧಾರಣವಾಗಿ ಕೊಡುತ್ತಿದ್ದರು. ಆ ವರುಷ ಕೊಟ್ಟಿದ್ದವರೂ ಅವರೇ. ಅವರು ಆ ಸಾಯಂಕಾಲವೇ ಉತ್ತರ ಪತ್ರಿಕೆಗಳನ್ನು ಪರೀಕ್ಷಿಸಲು ಮೊದಲು ಮಾಡಿದರು. ಸುಬ್ಬು, ಎಲ್ಲರಿಗಿಂತ ಫಸ್ಟ್ ಬರುತ್ತಾನೆ. ಸಾಹುಕಾರರ ಮಗ ಅವರ ತಂದೆ ಸಾಹುಕಾರರಾದುದರಿಂದ ಎರಡನೆಯವನಾಗುತ್ತಾನೆ. ಇನ್ನು ಕೊನೆಯಾಗುವವರೂ ಗೊತ್ತೇ ಇದೆ ಎಂದು ಹುಡುಗರೂ ಮೇಷ್ಟರೂ ಮಾತನಾಡುತ್ತಿದ್ದರು. ತಿಪ್ಪಯ್ಯ ಉಪಾದ್ರು, ಸ್ವಾಭಾವಿಕವಾಗಿ ಒಳ್ಳೆಯ ಬುದ್ಧಿವಂತನಾದ ಹುಡುಗನ ಉತ್ತರ ಪತ್ರಿಕೆಯನ್ನು ಮೊದಲು ನೋಡಬೇಕೆಂಬ ಆಸೆಯಿಂದ

ತಮ್ಮ ಮಗ ಸುಬ್ಬುವಿನ ಪತ್ರಿಕೆಯನ್ನೇ ಮೊದಲು ನೋಡಿದರು. ಅವರು ನಿರೀಕ್ಷಿಸಿದ್ದಂತೆ ಸುಬ್ಬು ಎಲ್ಲಾ ಪ್ರಶ್ನೆಗಳಿಗೂ ಉತ್ತರ ಚೆನ್ನಾಗಿ ಬರೆದಿದ್ದನು. ಉಪಾದ್ರು "ಎಲ್ಲಾ ಹುಡುಗರೂ ಇಷ್ಟು ಕಷ್ಟಪಟ್ಟು ಓದಿದರೆ ನಮ್ಮ ಸ್ಕೂಲು, ಪಬ್ಲಿಕ್ ಎಗ್ಸಾಮಿನೇಷನ್‌ನಲ್ಲಿ ದೇಶಕ್ಕೇ ಮೊದಲನೆಯದಾಗುತ್ತೆ. ಆದರೆ ಹುಡುಗರು ಓದುವುದಿಲ್ಲ. ದೇವರು ಕೊಟ್ಟ ಬುದ್ಧಿ ಉಪಯೋಗಿಸುವುದಿಲ್ಲ" ಎಂದು ಗೊಣಗುಟ್ಟಿಕೊಂಡರು. ಸುಬ್ಬುವಿಗೆ ನೂರಕ್ಕೆ ಭಾಷೆಯಲ್ಲಿ ಎಂಭತ್ತು ನಂಬರು ಬಂತು. ತನ್ನ ಉತ್ತರ ಪತ್ರಿಕೆ ಉಪಾದ್ರು ನೋಡಿ ಆಗುವವರೆಗೆ ಸುಬ್ಬು ಅಲ್ಲೇ ಕುಳಿತಿದ್ದನು. ಅವನು "ನಾನೇ ಫಸ್ಟು, ಎಂಭತ್ತಕ್ಕಿಂತ ಹೆಚ್ಚಾಗಿ ಯಾರಿಗೆ ಬರುತ್ತೆ" ಎಂದುಕೊಂಡು ಆಟದ ಬಯಲಿನಲ್ಲಿ ಸ್ನೇಹಿತರಿಗೆಲ್ಲಾ ಹೇಳಿದನು. ಸುದರ್ಶನ ಒಬ್ಬ ಮಾತ್ರ "ಎಲಾ ಜಂಭದ ಕೋಳಿ ಸ್ವಲ್ಪ ತಡಿ. ನೀನು ಫಸ್ಟ್ ಆಗದೆ ಹೋದರೆ ಏನು ಕೊಡುತ್ತಿ" ಎಂದನು. ಸುಬ್ಬು ಕೋಪದಿಂದ "ಆದರೆ ನೀನು ಏನು ಕೊಡುತ್ತಿ" ಎಂದನು. ಹುಡುಗರು ಎರಡು ಕಡೆಯೂ ಜಮಾಯಿಸಿದರು. ಅವರು ಇಬ್ಬರನ್ನೂ ಹೂ ಏನು ಕೊಡುತ್ತಿ ಏನು ಕೊಡುತ್ತಿ ಎಂದು ಪುಸಲಾಯಿಸತೊಡಗಿದರು. ಸುದರ್ಶನನು ನೀನು ಫಸ್ಟ್ ಬಂದರೆ ನಿನಗೆ ೬ ಸೀಸಕಡ್ಡಿ ಕೊಡುತ್ತೇನೆ ಎಂದನು. ಸುಬ್ಬುವಿಗೆ ಪೀಕಲಾಟಕ್ಕೆ ಬಂತು. ಅವನ ಹತ್ತಿರ ಒಂದು ಸಣ್ಣ ಚಾಕುವಿನ ಹೊರತು ಮತ್ತೇನೂ ಇರಲಿಲ್ಲ. ಆ ಚಾಕುವಿನ ಹೆಮ್ಮೆ ಅವನಿಗೆ ವಿಶೇಷವಾಗಿತ್ತು. ಹುಡುಗರೆಲ್ಲರಿಗೂ ಆ ಚಾಕುವಿನ ಮೇಲೆ ಆಸೆ, ಕಣ್ಣು ಇತ್ತು. ಇದು ಸುಬ್ಬುವಿಗೂ ಗೊತ್ತಿತ್ತು. ಈ ಪಂದ್ಯದಲ್ಲಿ ಎಲ್ಲಿ ಚಾಕು ಇಡಬೇಕಾಗಿ ಬರುತ್ತೋ ಎಂದು ಅವನು ಹೆದರಿದ್ದನು. ನನ್ನ ಹತ್ತಿರ ಏನೂ ಇಲ್ಲ ಎಂದು ಅವನು ತಪ್ಪಿಸಿಕೊಳ್ಳಲು ಪ್ರಯತ್ನಿಸಿದನು. ಆದರೆ ಸುದರ್ಶನನು ನೀನು ಫಸ್ಟ್ ಬರದಿದ್ದರೆ ನಿನ್ನ ಚಾಕು ಕೊಡುತ್ತೀಯೋ ಎಂದನು. ಸುಬ್ಬುವಿಗೆ ರಾತ್ರಿ ಕಂಡ ಭಾವಿಗೆ ಹಗಲು ಬಿದ್ದಂತೆ ಆಯಿತು. ಅವನು ಇದ್ದದ್ದರಲ್ಲೇ ಒಂದು ಕುಯುಕ್ತಿಯಿಂದ ನೀನು ಫಸ್ಟು ಬಂದರೆ ನಿನಗೆ ಚಾಕು ಕೊಡುತ್ತೇನೆ ಎಂದನು. ಹುಡುಗರು ಪಂದ್ಯವನ್ನು ಒಪ್ಪಿದರು. ಸುದರ್ಶನ ಸುಬ್ಬುವಿನ ಚಾಕುವನ್ನೂ ತನ್ನ ಸೀಸದ ಕಡ್ಡಿಗಳನ್ನೂ, ಸಾಹುಕಾರರ ಮಗ ಸೀತಾರಾಮನ ಕೈಯ್ಯಲ್ಲಿ ಮಧ್ಯಸ್ಥಿಕೆಗಾಗಿ ಕೊಟ್ಟನು.

ಅವರು ಮನೆಗೆ ಹೋಗುವ ವೇಳೆಗೆ ಕತ್ತಲೆಯಾಯಿತು. ಪ್ರತಿ ಮನೆಗಳಲ್ಲಿಯೂ ದೀಪಗಳು ಮಿನುಗುತ್ತಿದ್ದುವು. ಜಗಲಿಗಳ ಮೇಲೆ ಮಹಿಳೆಯರು ಕುಳಿತುಕೊಂಡು ಚರ್ಚಿಸುತ್ತಿದ್ದರು. ಉಪಾಧ್ಯಾಯರು ತಿರುಗಾಡಲು ಹೋಗಿದ್ದವರು ಬಂದುದನ್ನು ಕಂಡು, ಚಿಕ್ಕವಯಸ್ಸಿನ ಮಹಿಳೆಯರು ಎದ್ದು ನಿಂತರು; ಸ್ವಲ್ಪ ವಯಸ್ಸಾಗಿದ್ದವರು ನೀಡಿದ್ದ ಕಾಲುಗಳನ್ನು ಮುದುರಿಕೊಂಡರು. ಆದರೆ ಅವೊಂದೂ ಉಪಾಧ್ಯಾಯರಿಗೆ ಕತ್ತಲೆಯಲ್ಲಿ ಕಾಣಲಿಲ್ಲ ಅವರು ಕಾಣುತ್ತಾರೆಂದುಕೊಂಡೂ ಸ್ತ್ರೀಯರು ಹಾಗೆ ಮಾಡಲ್ಲಿಲ್ಲ. ಪುರುಷರು ಬೀದಿಯಲ್ಲಿ ಹೋಗುತ್ತಿದ್ದರೆ ಅವರು ಹೀಗೆ ನಡೆದುಕೊಳ್ಳುವುದು ಅವರ ಸ್ವಭಾವವಾಗಿತ್ತು. ಉಪಾಧ್ಯಾಯರಿಗೆ ಸೆರಗುಗಳ ಸರಸರ ಶಬ್ದವೂ ಬಳೆಗಳ ಇನಿದನಿಯೂ ಕೆಲವು ಸಂಪಿಗೆ ಮಲ್ಲಿಗೆಗಳ ಸುಗಂಧವೂ ತಮ್ಮ ಸುತ್ತಿನಲ್ಲಿ ಬೆಳೆದುಕೊಂಡುದು ಕಾಣದೆ ಹೋಗಲಿಲ್ಲ. ಆದರೆ ಅವರ ದೃಷ್ಟಿ ಕಿಟಕಿಗಳ ಮೂಲಕವೂ ಬಾಗಿಲುಗಳ ಸಂದುಗಳಲ್ಲಿಯೂ ಮಿನುಗುತ್ತಿದ್ದ ದೀಪಗಳ ಕಡೆ ಇದ್ದಿತು. ಅವು ಚಿರಪರಿಚಿತರಾದ ಹಳೆಯ ಸ್ನೇಹಿತರಂತೆ ಅವರ ಸುಸ್ವಾಗತವನ್ನು ಬಯಸುತ್ತಿದ್ದವು. ಉಪಾಧ್ಯಾಯರು ತಮ್ಮ ಬಾಲ್ಯದಲ್ಲಿ ಪುರಾಣ ಪುಣ್ಯ ಕತೆಗಳಲ್ಲಿ, ಕುಮಾರವ್ಯಾಸ ಭಾರತದಲ್ಲಿ ಕೇಳಿದ್ದ ರಾಜಬೀದಿಯೊಂದರಲ್ಲಿ ತಾವು ಹೋಗುತ್ತಿರುವಂತೆ ಭಾವಿಸಿಕೊಂಡರು. ಸಂಧ್ಯಾ ಆ ರೀತಿಯಾಗಿ ಅವರ ಮನಸ್ಸಿನ ಮೇಲೆ ಮಾಟವಾಡುತ್ತಿದ್ದಿತೆಂಬುದು ಅವರಿಗೇ ಒಂದು ಗಳಿಗೆ ತಿಳಿಯಲಿಲ್ಲ.

ಉಪಾಧ್ಯಾಯರು ಮನೆಗೆ ಹೋಗುವ ವೇಳೆಗೆ ಸುಬ್ಬುವೂ ಸುದರ್ಶನನೂ ದೀಪದ ಮುಂದೆ ಕುಳಿತು ಮರುದಿವಸದ ಪರೀಕ್ಷಾ ವ್ಯಾಯಾಮಕ್ಕೆ ಸಿದ್ಧರಾಗುತ್ತಿದ್ದರು. ಸುಬ್ಬುವು ಚರಿತ್ರೆಯನ್ನು ಮೊದಲಿಸಿಂದ ಕೊನೆಯವರೆಗೆ ಸರಸರನೆ ಓದುತ್ತಿದ್ದನು. ಆ ರಾತ್ರಿ ಚರಿತ್ರೆಯನ್ನು ಎರಡು ಸಲವಾದರೂ ಓದಿ ಪೂರೈಸಬೇಕೆಂಬುದು ಅವನ ಬಯಕೆಯಾಗಿತ್ತು. ಆದರೆ ಸುದರ್ಶನ ಮಾತ್ರ ಮಧ್ಯೆ ಮಧ್ಯೆ ಯಾವು ಯಾವುದೋ ಭಾಗಗಳನ್ನು ಓದಿಕೊಂಡು ತಿರವಿ ತಿರವಿ ಹಾಕುತ್ತಿದ್ದನು. ಉಪಾಧ್ಯಾಯರು ಮನೆಗೆ ಬಂದು ಸಂಧ್ಯಾವನೆ ಮಾಡಿ, ಉಳಿದಿದ್ದ 4-5 ಭಾಷೆಯ ಉತ್ತರ ಪತ್ರಿಕೆಗಳನ್ನು ಪರೀಕ್ಷಿಸಲು, ದೀಪದ ಮುಂದೆ

ಕೈಯಲ್ಲಿ ಸೀಸದ ಕಡ್ಡಿಯ ಚೂರನ್ನು ಹಿಡಿದುಕೊಂಡು ಕುಳಿತರು. ದೀಪದ ಮುಂದಲ ಜಾಗವನ್ನೆಲ್ಲ ಅವರೇ ಆಕ್ರಮಿಸಿದುದರಿಂದ ಹುಡುಗರು ಹಿಂದಕ್ಕೆ ಸರಿದು ಕೂತರು. ಸುದರ್ಶನನಿಗೆ ಹೇಗೂ ಕಡಿಮೆ ನಂಬರು ಬರುತ್ತೆ. ಅವನು ಕೊನೆಯಾಗುತ್ತಾನೆ ಎಂದು ಉಪಾಧ್ಯಾಯರಿಗೆ ಚೆನ್ನಾಗಿ ತಿಳಿದಿದ್ದುದರಿಂದ ಅವರು ಅವನ ಉತ್ತರ ಪತ್ರಿಕೆಯನ್ನು ಕಡೆಯಲ್ಲಿ ಪರೀಕ್ಷಿಸೋಣವೆಂದು ತಳಕ್ಕೆ ಹಾಕಿದರು. ಸುದರ್ಶನನ ಪತ್ರಿಕೆ ಹೊರತು ಉಳಿದುವೆಲ್ಲಾ ಮುಗಿದುವು. ಅಲ್ಲಿಯವರೆಗೆ ಸುಬ್ಬು, ಉಪಾಧ್ಯಾಯರು ಒಂದೊಂದು ಉತ್ತರ ಪತ್ರಿಕೆಯನ್ನೂ ನಂಬರು ಹಾಕಿ ಕೆಳಗೆ ಇಡುವುದನ್ನು ನೋಡುತ್ತಿದ್ದನು. ಅವನಿಗೆ ಬಂದಿದ್ದುದಕ್ಕಿಂತ ಹೆಚ್ಚು ನಂಬರು ಯಾರಿಗೂ ಬಂದಿರಲಿಲ್ಲ. ಮೇಷ್ಟರು ಸುದರ್ಶನನ ಪತ್ರಿಕೆಯನ್ನು ಹಾಗೆಯೇ ಇಟ್ಟು ಊಟಕ್ಕೆ ಎದ್ದರು. ಊಟದ ಮನೆಯಲ್ಲಿ ಮಣೆಯ ಮೇಲೆ ಕುಳಿತು, ತೊಲೆಯ ಮೇಲಿದ್ದ ಬಾಳೆ ಎಲೆ ಗಂಟನ್ನು ಕೆಳಗೆ ತೆಗೆದು ಇಟ್ಟುಕೊಂಡು, ಅದರಿಂದ ಎರಡು ಮೂರು ಎಲೆಗಳನ್ನು ಈಚೆಗೆ ತೆಗೆದು 'ಸುಬ್ಬು ಚಾಕು ತತ್ತಾ' ಎಂದರು ಸುಬ್ಬುವಿಗೆ ಚಾಕುವಿನ ಹೆಸರನ್ನು ಕೇಳಿ ಗಾಬರಿಯಾಯಿತು. ಅವನು ತಂದೆಯವರು 2-3 ಸಲ ಕೂಗಿದರೂ ಕೇಳಿಸದವನಂತೆ ಸುಮ್ಮನೆ ಇದ್ದನು ಇವನು ಸುಮ್ಮನೆ ಇದ್ದರೆ ಉಪಾದ್ರು ಬಿಡುತ್ತಾರೆಯೇ? ಅವರು ಕೋಪದಿಂದ "ಬಾಳೆ ಎಲೆ ತುಂಡು ಹಾಕಬೇಕು. ಎಲ್ಲಿ ಚಾಕು. ತತ್ತಾ" ಎಂದರು. ಸುಬ್ಬುವು ಚಾಕು ಸೀತಾರಾಮುವಿನ ಹತ್ತಿರವಿದೆ ಎಂದನು. ಸುಬ್ಬುವನ್ನು ಚೆನ್ನಾಗಿ ಬೈಯಬೇಕೆಂದು ಹೊರಟಿದ್ದ ಉಪಾಧ್ಯಾಯರು, ಸೀತಾರಾಮು ಸಾಹುಕಾರರ ಮಗನಾದುದರಿಂದ ತಮಗೆ ಸಾಹುಕಾರರಲ್ಲಿದ್ದ ಸ್ವಾಭಾವಿಕವಾದ ಭಯದಿಂದ ಸುಮ್ಮನಾದರು. ಅರ್ಧ ಊಟ ಮಾಡುತ್ತಿರುವಾಗ ಅವರು ಮತ್ತೆ ಚಾಕುವಿನ ಸಮಾಚಾರ ಎತ್ತಿ ಪಂದ್ಯದ ವಿಷಯವನ್ನು ತಿಳಿದುಕೊಂಡರು. ಅವರಿಗೂ ಸುದರ್ಶನನ ಕೆಚ್ಚನ್ನು ಕಂಡು ಆಶ್ಚರ್ಯವಾಯಿತು. ಅವರು "ಸುದರ್ಶನನ ಸೀಸದ ಕಡ್ಡಿ ನಿನಗೆ ದಕ್ಕಿತು. ಏನು ಭಯವಿಲ್ಲ. ಅವನಿಗೆ ಪ್ಯಾಸು ಆಗುವ ನಂಬರು ಸಹ ಬರುವುದಿಲ್ಲ" ಎಂದರು. ಊಟ ಮುಗಿಸಿಕೊಂಡು ಉಪಾಧ್ಯಾಯರು "ಇದೊಂದು ಪೇಪರು ಯಾಕೆ ಬಿಟ್ಟಿರಲಿ. ಸುದರ್ಶನ ಬರೆದಿರುವ ಉತ್ತರ

ಅಷ್ಟರಲ್ಲಿಯೇ ಇದೆ. ಒಂದು ಎರಡು ನಿಮಿಷದಲ್ಲಿ ಮುಗಿಸಿಬಿಡೋಣ ಎಂದು ಕೊಂಡು ಸುದರ್ಶನನ ಉತ್ತರ ಪತ್ರಿಕೆ ಬಿಚ್ಚಿದರು. ಸುದರ್ಶನ ಬಗ್ಗಿಕೊಂಡು ಪುಸ್ತಕ ಓದುತ್ತಿದ್ದರೂ ಅವನು ಮಧ್ಯೆ ಮಧ್ಯೆ ತಲೆಯೆತ್ತಿ ಉಪಾಧ್ಯಾಯರ ಕೈಯಲ್ಲಿದ್ದ ಉತ್ತರ ಪತ್ರಿಕೆಯನ್ನೂ ಅವರ ಮುಖವನ್ನೂ ನೋಡುತ್ತಿದ್ದನು. ಉಪಾದ್ರು ಮೊದಲನೆಯ ಉತ್ತರವನ್ನು ನೋಡಿ "ಎಲ ಎಲ" ಎಂದರು. ಸುದರ್ಶನ ಇಷ್ಟು ಚೆನ್ನಾಗಿ ಉತ್ತರ ಬರೆದಿದ್ದುದನ್ನು ನೋಡಿ ಅವರಿಗೆ ಅವನಲ್ಲಿ, ಶಿಷ್ಯನಾದವನಲ್ಲಿ ಬರಬೇಕಾದ ಸ್ವಾಭಾವಿಕವಾದ ಮೆಚ್ಚಿಕೆ ಬಂದಿತು. ಅವರು ಭಲೆ ಭಲೆ, ಎಂದು ಸುದರ್ಶನನ ಕಡೆ ನೋಡಿದರು. ಸುದರ್ಶನ ಏನೂ ತಿಳಿಯದವನಂತೆ ಚರಿತ್ರೆಯ ಕಡೆ ನೋಡುತ್ತಿದ್ದನು. ಸುಬ್ಬುಪಿನ ಮನಸ್ಸಿನಲ್ಲಿ ಹುಳಿ ಕಿವುಚಿದಂತೆ ಆಯಿತು. ಅವನು "ಏನಪ್ಪಾ" ಎಂದನು. ಉಪಾಧ್ಯಾಯರು ಸಂತೋಷದ ಭರದಲ್ಲಿ ನಗುತ್ತಾ "ನಿನ್ನ ಚಾಕು ಕೃಷ್ಣಾರ್ಪಣ" ಎಂದರು. ಸುಬ್ಬು ಎದ್ದು ಸುದರ್ಶನನ ಉತ್ತರ ಪತ್ರಿಕೆ ನೋಡಿದನು. ನಂಬರು ಎಂಭತ್ತೊಂಭತ್ತು ಬಂದಿತ್ತು ಸುಬ್ಬು ಮಂಕಾದನು. ಎರಡು ಮೂರು ದಿನಗಳ ನಂತರ ಸುದರ್ಶನನು ಎಲ್ಲಾ ಪತ್ರಿಕೆಗಳಲ್ಲಿಯೂ ಮೊದಲನೆಯವನಾಗಿರುವನೆಂಬುದು ತಿಳಿದು ಉಪಾಧ್ಯಾಯರಿಗೆ ಆಶ್ಚರ್ಯವಾಯಿತು. ಅವರು ಇದೊಂದು ಬಗೆ ಹರಿಯದ ಒಗಟಿ ಎಂಬಂತೆ ಸುದರ್ಶನನ ಕಡೆ ಒಂದೊಂದು ಸಲ ಮಂಕಾಗಿ ನೋಡುತ್ತಿದ್ದರು.

ಈ ಸಂದರ್ಭದಲ್ಲಿ ನಡೆದ ಮತ್ತೊಂದು ವಿಚಾರವನ್ನು ಸೂಚಿಸುವುದು ಅರ್ಹವಾಗಿದೆ. ಹೊಸದಾಗಿ ಟ್ರೈಯಿನಿಂಗ್ ತೆಗೆದುಕೊಂಡಿದ್ದ ತಿಪ್ಪಯ್ಯ ಉಪಾದ್ರು ಮಲ್ಲಿಗೆಹಳ್ಳಿಯಲ್ಲಿ ಫುಟ್‌ಬಾಲ್ ಆಟವನ್ನು ಸ್ಥಾಪಿಸಬೇಕೆಂದು ನಿಶ್ಚಯಿಸಿದರು. ಹಳೆಯ ಕಾಲದವರಾದ ಅವರಿಗೆ ಈ ಆಟದಲ್ಲಿ ಒಂದು ಬಗೆಯಾದ ನವೀನತೆ ತೋರಿತ್ತು. ನವೀನತೆ ತೋರುವುದಿರಲಿ. ನವೀನವಾಗಿರುವುದರಲ್ಲಿ ಅವರಿಗೇ ಒಂದು ಉತ್ಸಾಹವಿತ್ತು. ಆದರೆ ಹಳ್ಳಿಯ ಸ್ಕೂಲುಗಳಲ್ಲಿ ಈಗಿನ ಮಿಡಲ್ ಸ್ಕೂಲುಗಳಲ್ಲಿರುವಂತೆ ಆಟದ ಫಂಡು ಪುಸ್ತಕದ ಫಂಡು ಎಲ್ಲಿ ಇರುತ್ತೆ. ಈಗ ಕೆಲವು ಮಿಡಲ್ ಸ್ಕೂಲಿನವರಂತೂ ಈ ದುಡ್ಡು ಶೇಖರಿಸುವುದನ್ನೇ ಒಂದು ಕಸುಬಾಗಿ ಮಾಡಿಕೊಂಡಿದ್ದಾರೆ. "ಸ್ಪೋರ್ಟ್ಸ್ ಫಂಡಿನಲ್ಲಿ ನಾಲ್ಕು ವರೆ ಸಾವಿರ

ರೂಪಾಯಿ ಇದೆ. ಲೈಬ್ರರಿ ಫಂಡಿನಲ್ಲಿ ಮೂರು ಸಾವಿರ ರೂಪಾಯಿದೆ. ಖರ್ಚುಮಾಡುವುದಕ್ಕೆ ಸರ್ಕಾರದವರು ಅವಕಾಶ ಕೊಡುವುದಿಲ್ಲ. ಒಂದು ನಾಲ್ಕು ವರುಷ ಫೀ ವಸೂಲ್ಮಾಡೋದನ ಬಿಡೋಣ. ಈ ಫೀ ಮೇಲೆ ಹಾಕುವ ಜುಲ್ಮಾನೆನಾದರೂ ಕೆಲವು ವರುಷ ವಸೂಲುಮಾಡೋದು ಬೇಡ" ಎಂದರೂ ಕೇಳುವುದಿಲ್ಲ. ನಮಗೆ ತಿಳಿದಿರುವ ಮಿಡಲ್‌ಸ್ಕೂಲು ಉಪಾಧ್ಯಾಯರುಗಳು, ಈ ಆಟ ಮತ್ತು ಲೈಬ್ರೇರಿ ಫೀಜು ಅರ್ಧಗಂಟೆ ಸಾವಕಾಶವಾಗಿ ತಂದುದಕ್ಕೆ ಜುಲ್ಮಾನೆ ಹಾಕಿದುದೂ ಜುಲ್ಮಾನೆ ಯಾಕೆ ಹಾಕಿದಿರಿ, ಅರ್ಧಗಂಟೆಗೆ ಎಂದು ಪೋಷಕರು ಕೇಳಿದುದಕ್ಕೆ ಆ ನೆಪದ ಮೇಲೆ ವಿದ್ಯಾರ್ಥಿಯನ್ನು ಮನೆಗೆ ಮಧ್ಯಾಹ್ನ ಊಟಕ್ಕೆ ಕಳುಹಿಸದೆ, ಸ್ಕೂಲಿನಲ್ಲಿ ಕೂಡಿ, ತಾವು ಮನೆಗೆ ಹೋಗಿ ಊಟಮಾಡಿಕೊಂಡು ಬಂದು ಅನಂತರ ವಿದ್ಯಾರ್ಥಿಗೆ ನಾಲ್ಕು ಏಟು ಬೆತ್ತದಲ್ಲಿ ಕೊಟ್ಟುದೂ ಉಂಟು. ಈ ವಿಷಯ ಮೇಲಧಿಕಾರಿಗಳಿಗೆ ತಿಳಿಸಿದಾಗ ಅವರೊಂದಿಗೆ, ವಿದ್ಯಾರ್ಥಿಗಳ ಎದುರಿಗೇ ಉಪಾಧ್ಯಾಯರು ಸುಳ್ಳು ಹೇಳಿ ತಮ್ಮ ಮೇಲಿನ ಅಪವಾದವನ್ನು ತಪ್ಪಿಸಿಕೊಂಡುದೂ ಉಪಾಧ್ಯಾಯರು ಹೇಳಿದ ಸುಳ್ಳನ್ನು ಕೇಳಿ ವಿದ್ಯಾರ್ಥಿಗಳು ನಕ್ಕುದೂ ನಮ್ಮ ಕಣ್ಣೆದುರಿಗೆ ನಡೆದ ಸಂಗತಿ. ಇಂತಹ ಉಪಾಧ್ಯಾಯರುಗಳನ್ನು, ಸರ್ಕಾರದವರು, ಜೈಲುಗಳಲ್ಲಿ ಛಡಿ ಏಟು ಕೊಡುವ ವಾರ್ಡರ್‌ಗಳಾಗಿ ನಿಯಮಿಸಿದರೆ ತಮ್ಮ ಕೆಲಸವನ್ನು ಅವರು ಒಳ್ಳೆಯ ಉತ್ಸಾಹದಿಂದ ಮಾಡುವರು. ದೇಶಾಭ್ಯುದಯಕ್ಕಾಗಿ ಪ್ರಾಣವನ್ನು ಕೊಡಲು ಸಿದ್ಧರಾಗಿರುವ ನಿಜವಾದ ಉಪಾಧ್ಯಾಯರಿಗೂ ಗುರುಗಳಿಗೂ, ಈ ದೊಣ್ಣೆವರಸೆ ಜಟ್ಟಿಗಳಿಂದ ಉಂಟಾಗುವ ಕಳಂಕವೂ ತಪ್ಪುವುದು. ಕೆಲವು ಸ್ಕೂಲುಗಳಲ್ಲಿಯಂತೂ ಈ ಫೀಜಿನ ಅವಾಂತರ ಸ್ಥಾಯಿ ಮಾರ್ಶಲ್ ಲಾ ಆಗಿದೆ. "ಇಷ್ಟು ಹೊತ್ತಿಗೆ ತಂದುಕೊಡಬೇಕು. ಇಲ್ಲದಿದ್ದರೆ ತೆಗೆದುಕೊಳ್ಳುವುದಿಲ್ಲ. ಅರ್ಧ ನಿಮಿಷ ಸಾವಕಾಶವಾದರೂ ಜುಲ್ಮಾನೆ." ಅನೇಕ ಹೆಡ್ಮಾಸ್ಟರುಗಳು ತಮ್ಮ ಎಲ್ಲಾ ಸರ್ವಾಧಿಕಾರಗಳನ್ನೂ, ಇನಿಸ್ಪೆಕ್ಟರುಗಳ ಮೇಲೆ ಇರುವ ಕೋಪವನ್ನೂ ಮನೆಯಲ್ಲಿ ಹೆಂಡತಿಯ ಮೇಲೆ ಇರುವ ಬೇಜಾರನ್ನೂ ಈ ಫೀಸು ವಸೂಲ್ಮಾಡುವ ನೆಪದಲ್ಲಿ ಹುಡುಗರ ಮೇಲೆ ಪ್ರಯೋಗಿಸುತ್ತಾರೆ.

ಸ್ಕೂಲಿನಲ್ಲಿ ಯಾವ ವಿಧವಾದ ಆಟದ ಫಂಡೂ ಇಲ್ಲದುದರಿಂದ

ತಿಪ್ಪಯ್ಯ ಉಪಾಧ್ಯರು ಫುಟ್‌ಬಾಲಿಗಾಗಿ ಪ್ರತಿಯೊಬ್ಬ ವಿದ್ಯಾರ್ಥಿಯೂ ಎರಡು ಆಣೆಯಂತೆ ಚಂದಾಕೊಡಬೇಕೆಂದು ಗೊತ್ತುಮಾಡಿದರು. ಹೀಗೆ ಸೇರಿದ ದುಡ್ಡಿಗೆ ಉಪಾಧ್ಯರು ಒಂದು ಫುಟ್‌ಬಾಲನ್ನು ಬೆಂಗಳೂರಿನಿಂದ ತರಿಸಿ ಆಟಕ್ಕೆ ಪ್ರಾರಂಭಿಸಿದರು. ಆ ಆಟದ ನಿಯಮಗಳು ಅವರಿಗೆ ಗೊತ್ತಿರಲಿಲ್ಲ. ಆದುದರಿಂದ ಅವರು ಒಂದೊಂದು ದಿನ ಒಂದೊಂದು ನಿಯಮವನ್ನು ಹೊಸದಾಗಿ ಮಾಡಿ ಮರು ದಿವಸವೇ ಅವನ್ನು ಬದಲಾಯಿಸುತ್ತಿದ್ದರು. ಎಲ್ಲವುಗಳಿಗಿಂತ ಹೆಚ್ಚಾಗಿ ಅವರಿಗೆ ಫುಟ್‌ಬಾಲಿನ ಆಟಗಾರರ ಫುಲ್‌ಬ್ಯಾಕ್ ಹಾಫ್‌ಬ್ಯಾಕ್ ಲೆಫ್ಟ್ ರೈಟು ಮುಂತಾದ ಹೆಸರುಗಳೂ ಆ ಆಟಗಾರರು ನಿಲ್ಲಬೇಕಾದ ಸ್ಥಳಗಳೂ ಅವರು ಮಾಡಬೇಕಾದ ಕೆಲಸಗಳೂ ಗೊತ್ತಿರಲಿಲ್ಲ. ಆದರೆ ಚೆಂಡನ್ನು ಒದೆಯುವುದರಲ್ಲಿ ಅವರಿಗೆ ಸಮಾನರಾದವರು ಹುಡುಗರ ಪೈಕಿ ಯಾರೂ ಇರಲಿಲ್ಲ. ಅವರು ಎತ್ತಿ ಒಂದು ಸಲ ಒದ್ದರೆ ಚೆಂಡು ಎದುರು ಕಡೆಯ ಗೋಲ್‌ಗೆ ಹೋಗಿಬಿಡುತ್ತಿತ್ತು. ಅವರಿಗೆ ಸಮಾನವಾಗಿ ಚೆಂಡನ್ನು ಸುದರ್ಶನ ಒಬ್ಬ ಮಾತ್ರ ಒದೆಯುತ್ತಿದ್ದ. ಸುದರ್ಶನನ ಕಾಲಿಗೆ ಚೆಂಡು ಸಿಕ್ಕಿದರೆ ಸಾಕು. ಅವನು ತನ್ನ ಕಡೆ ಎದುರು ಕಡೆ ಎಂಬುದನ್ನು ನೋಡದೆ ಭರ್ ಎಂದು ಅದನ್ನು ಬಾರಿಸಿ ಬಿಡುತ್ತಿದ್ದ. ಹೀಗಾಗಿ ಫುಟ್‌ಬಾಲ್ ಆಟ ಒಂದು ಕಡೆಯಿಂದ ಉಪಾಧ್ಯಾಯರು ಒದೆಯುವುದು, ಮತ್ತೊಂದು ಕಡೆಯಿಂದ ಸುದರ್ಶನ ಒದೆಯುವುದು, ಹೀಗೆ ಅವರಿಬ್ಬರ ಆಟವೇ ಆಗಿಹೋಯಿತು. ಯಾವಾಗ ಉಪಾಧ್ಯಾಯರಿಗೆ ಆಟದ ನಿಯಮಗಳು ಗೊತ್ತಿಲ್ಲ ಎಂಬುದು ಸ್ಪಷ್ಟವಾಯಿತೋ ಆಗ ಸುದರ್ಶನ ಅವರು ಯಾವುದಾದರೂ ಒಂದು ನಿಯಮವನ್ನು ಹೇಳಿದರೆ " ಹಾಸನದಲ್ಲಿ ಹೀಗಿದೆ, ನರಸೀಪುರದಲ್ಲಿ ಹೀಗಿದೆ ಎಂದು ತನ್ನ ಆಟದ ಕ್ರಮಕ್ಕೋ, ತನ್ನ ದುಂಡಾವೃತ್ತಿಗೋ ಪುಷ್ಟಿಕರವಾದ ನಿಯಮವನ್ನು ಹೇಳುತ್ತಿದ್ದನು. ಇದರಿಂದ ಉಪಾಧ್ಯಾಯರಿಗೆ ಅವನ ಮೇಲೆ ಬರಬರುತ್ತಾ ಸಿಟ್ಟು ಅಧಿಕವಾಗತೊಡಗಿತು. ಅವರು ಒಂದು ದಿನ " ನೀನು ಎಲ್ಲಾ ನಿಯಮಗಳನ್ನೂ ತಲೆಕೆಳಕುಮಾಡುತ್ತಿದ್ದೀಯೆ ಆದುದರಿಂದ ನಿನ್ನನ್ನು ಇನ್ನು ಆಟಕ್ಕೆ ಸೇರಿಸುವುದಿಲ್ಲ " ಎಂದರು. ಸುದರ್ಶನನನ್ನು ಆಟದಿಂದ ಹೊರಕ್ಕೆ ಹಾಕಿ ಉಪಾಧ್ಯಾಯರೂ ಉಳಿದ ಹುಡುಗರೂ ಆಡತೊಡಗಿದರು. ಸುದರ್ಶನನಿಲ್ಲದುದರಿಂದ ಆ ದಿವಸ ಉಳಿದ ಹುಡುಗರಿಗೆ ಚೆಂಡು

ಹೇಗಿದೆ ಎಂದು ಮುಟ್ಟುವುದಕ್ಕೂ ನೋಡುವುದಕ್ಕೂ ಅವಕಾಶವಾಯಿತು. ಆದರೆ ಪ್ರತಿಯೊಬ್ಬ ಹುಡುಗನೂ ಚೆಂಡನ್ನು ದಿಕ್ಕಾಪಾಲಾಗಿ ಒದೆಯುವಾಗ, ಚೆಂಡು ಹುಡುಗರ ಕಾಲಿನಿಂದ ತಪ್ಪಿಸಿಕೊಂಡು ತನ್ನ ಕಡೆ ಬಂದಾಗ ಸುದರ್ಶನನಿಗೆ ಕೈಯ್ಯಲಿದ್ದ ಕಲ್ಲಂಗಡಿ ಹಣ್ಣಿನ ಚೂರು ಕೆಳಗೆ ಮಣ್ಣಿನಲ್ಲಿ ಬಿದ್ದಂತೆ ಆಗುತ್ತಿತ್ತು. ಅವನ ಕಾಲು ಕಡಿಯುತ್ತಿತ್ತು. ಅವನು ಉಪಾಧ್ಯಾಯರನ್ನು “ ನನ್ನನ್ನು ಆಟಕ್ಕೆ ಸೇರಿಸಿಕೊಳ್ಳಿ ” ಎಂದನು. ಉಪಾಧ್ಯಾಯರು “ ಎರಡು ದಿವಸ ಹೋಗಲಿ ” ಎಂದರು. ಉಳಿದ ಹುಡುಗರು ಗರ್ವದಿಂದ ಸುದರ್ಶನನ ಕಡೆ ನೋಡಿದರು. ಸುದರ್ಶನನಿಗೆ ಇನ್ನು ಸಹಿಸುವುದು ಆಗಲಿಲ್ಲ. ಅವನು ಆಟದ ಬಯಲಿನೊಳಕ್ಕೆ ನುಗ್ಗಿ ಫುಟ್‌ಬಾಲನ್ನು ತೆಗೆದುಕೊಂಡು ಸೊಂಟದಲ್ಲಿ ಇಟ್ಟುಕೊಂಡನು. ಹುಡುಗರು ಹೋ ಎಂದು ಕೂಗಿದರು. ಉಪಾಧ್ಯಾಯರು ಏ ಸುದರ್ಶನ ಚೆಂಡು ಕೆಳಕ್ಕೆ ಹಾಕು ” ಎಂದು ಗದರಿಸಿದರು. ಸುದರ್ಶನನು ಚೆಂಡನ್ನು ಕಂಕುಳಲ್ಲಿ ಇಟ್ಟುಕೊಂಡು ನಿಧಾನವಾಗಿ ಮನೆಯ ಕಡೆ ಹೊರಟನು. ಉಪಾಧ್ಯಾಯರಿಗಾಗಲಿ ಹುಡುಗರಿಗಾಗಲಿ ಏನುಮಾಡಬೇಕೆಂಬುದು ಗೊತ್ತಾಗಲಿಲ್ಲ. ಉಪಾಧ್ಯಾಯರಿಗೆ ಸುದರ್ಶನನನ್ನು ಹೊಡೆಯಲು ಇಷ್ಟವಿರಲಿಲ್ಲ. ಅಥವ ಹೊಡೆದರೂ ಚೆಂಡು ಕೈಗೆ ಬಂದಂತಾಯಿತೆ ? ಸುದರ್ಶನನು ಚೆಂಡನ್ನು ಕಂಕುಳಲ್ಲಿ ಇರುಕಿಕೊಂಡು ಮುಂದೆ ಮುಂದೆ ಹೊರಟನು. ಉಪಾಧ್ಯಾಯರೂ ಹುಡುಗರೂ ಹಿಂದೆ ಹೊರಟರು. ಹುಡುಗರಿಗೆ ಸುದರ್ಶನನ ಎದೆಗಾರಿಕೆ ನೋಡಿ ಭಯವೂ ಆಶ್ಚರ್ಯವೂ ಉಂಟಾಗಿತ್ತು. ಸೀತೆಯನ್ನು ಎತ್ತಿಕೊಂಡ ರಾವಣನಂತೆ ಕಂಡ ಸುದರ್ಶನ. ಅವರು ಗಾಬರಿಯಿಂದ ಮಾತನಾಡದೆ ಹಿಂದೆ ಹೋಗುತ್ತಿದ್ದರು. ಅದು ಶವದ ಹಿಂದೆ ಹೋಗುತ್ತಿರುವ ನಿಶ್ಶಬ್ದವಾದ ಮೆರವಣಿಗೆಯಂತೆ ತೋರಿತು. ಸುದರ್ಶನನು ಫುಟ್‌ಬಾಲ್ ಆಟದ ಬೈಲಿನಿಂದ ಹೊರಟು ಊರಿನ ಬೀದಿಗಳಲ್ಲಿ ಬಂದನು. ಜನ ಇದು ಏನು ಇರಬಹುದು ಎಂದುಕೊಂಡು ಕುತೂಹಲದಿಂದ ನೋಡುತ್ತಿದ್ದರು. ಸುದರ್ಶನನು ನಾಲ್ಕು ಬೀದಿಗಳಲ್ಲಿಯೂ ಈ ರೀತಿ ಮೇಷ್ಟರನ್ನೂ ಹುಡುಗರನ್ನೂ ತನ್ನ ಹಿಂದೆ ತಿರುಗಿಸಿ ಮೇಷ್ಟರ ಮನೆಯೊಳಕ್ಕೆ ಚೆಂಡನ್ನು ಎಸೆದು ಮನೆಗೆ ಹೋದನು. ಅಲ್ಲಿಂದ ಮುಂದೆ ಉಪಾಧ್ಯಾಯರು ಅವನನ್ನು ಆಟಕ್ಕೆ ಬರಬೇಡ ಎಂದು ಹೇಳಲಿಲ್ಲ

" ಮುಖ್ಯ ಈ ಹೊಸ ಆಟದ ನಿಯಮಗಳು ತರ ತರವಾಗಿವೆ " ಎನ್ನು ತ್ತಿದ್ದರು. ಪಟೇಲರು " ಸ್ಕೂಲಿನಿಂದ ಅವನನ್ನು ವಜಾಮಾಡಿ " ಎಂದು ಹೇಳಿದಾಗ ಉಪಾಧ್ಯಾಯರು "ಅದರಿಂದ ಏನು ಪ್ರಯೋಜನ ? ಸ್ಕೂಲಿಗೆ ಸುಮ್ಮನೆ ಒಬ್ಬ ಚುರುಕಾದ ಹುಡುಗ ಕಡಿಮೆಯಾಗುತ್ತೆ ಅಷ್ಟೆ " ಎಂದರು.

## ೧೪. ವಿದ್ಯಾರ್ಥಿನಿಲಯದಲ್ಲಿ

ಆ ವರುಷ ಲೋವರ್ ಸೆಕಂಡರಿ ಪರೀಕ್ಷೆಯಲ್ಲಿ ಪಾಠಗಳು ಸರಿಯಾಗಿ ನಡೆಯಲಿಲ್ಲ. ಸಹಾಯೋಪಾಧ್ಯಯರಿಗೂ ತಿಪ್ಪಯ್ಯ ಉಪಾದ್ರಿಗೂ ಶಿಸ್ತಿನ ಮೇಲೆ ನಿತ್ಯಾ ಚರ್ಚೆ ನಡೆಯುತ್ತಿದ್ದುದರಿಂದ ಅವರು ಹುಡುಗರಿಗೆ ಮಾಡಬೇಕಾದ ಪಾಠ ಭಾಗಗಳನ್ನು ಮಾಡಲು ಸಾಧ್ಯವಾಗಲಿಲ್ಲ. ಸುಬ್ಬುವಿಗೆ ತೇರ್ಗಡೆಯಾಯಿತು. ಸುದರ್ಶನನಿಗೂ ತೇರ್ಗಡೆಯಾಯಿತು. ಪರೀಕ್ಷೆಗೆ ಕಟ್ಟಿದ್ದ ಉಳಿದ ಆರು ಹುಡುಗರಿಗೆ ತೇರ್ಗಡೆಯಾಗಲಿಲ್ಲ. ಆ ವರುಷ ಇನಿಸ್ಪೆಕ್ಟರು ಮಲ್ಲಿಗೆಹಳ್ಳಿಗೆ ಇನಿಸ್ಪೆಕ್ಷನ್‌ಗೆ ಬಂದಾಗ ಸುಬ್ಬುವಿಗೆ ಫಸ್ಟ್ ಕ್ಲಾಸಿನಲ್ಲಿ ತೇರ್ಗಡೆಯಾಗಿ ಉಳಿದವರಿಗೆಲ್ಲಾ ಫೇಲ್ ಆದುದನ್ನು ನೋಡಿ ಉಪಾಧ್ಯಾಯರೊಂದಿಗೆ " ಇದರಲ್ಲಿ ನಿಮ್ಮ ಶಕ್ತಿ ಏನೂ ಇಲ್ಲ. ಹುಡುಗ ಬಹಳ ಜಾಣನಾದುದರಿಂದ ನೀವು ಪಾಠ ಹೇಳಿಕೊಡದಿದ್ದರೂ ತಾನೇ ಓದಿಕೊಂಡಿದ್ದ. ಇದರ ನಿಮ್ಮ ಶಕ್ತಿ, ಉಳಿದವರಿಗೆ ಫೇಲ್ ಆದುದರಲ್ಲಿಯೇ ಗೊತ್ತಾಗುತ್ತೆ. ಇಬ್ಬರೂ ಸೇರಿ ಹೀಗೆ ಪಾಠ ಮಾಡದೆ ಸ್ಕೂಲಿಗೆ ಕೆಟ್ಟ ಹೆಸರು ತಂದಿರೆಲ್ಲಾ, ನಿಮಗೇನು ಬಂದಿತ್ತು ಎಂದರು. ಸಹಾಯೋಪಾಧ್ಯಾಯರು ಏನೋ ಕರಿಕುಲಮ್, ಶಿಸ್ತು, ಅದು ಇದು ಎಂದು ಮಾತುಗಳನ್ನು ಅಗಿಯುತ್ತಾ ಗೊಣಗುಟ್ಟಿದರು. ಇನಿಸ್ಪೆಕ್ಟರು " ನಿನ್ನ ಶಿಸ್ತಿಗೆ ಬೆಂಕಿ ಬಿತ್ತು. ಕೊನೆಯ ಫಲವನ್ನು ನೋಡಿಕೊ. ತಿಪ್ಪಯ್ಯ ಉಪಾದ್ರು ಯಾವ ಶಿಸ್ತೂ ಇಲ್ಲದೆ ಪ್ರತಿ ವರುಷವೂ ಪರೀಕ್ಷೆಗೆ ಕಟ್ಟಿದವರಿಗೆಲ್ಲಾ ಪ್ಯಾಸು ಮಾಡಿಸುತ್ತಿದ್ದರು. ನೀನು ಶಿಸ್ತು ಶಿಸ್ತೂ ಅಂತ ಹೊಡ್ಕೊಂಡು ಎಲ್ಲರಿಗೂ ಫೇಲ್ ಮಾಡಿಸಿದೆ, ಅಂತಹ ಶಿಸ್ತಿಗೆ ಇದೇನು ಸ್ಥೈನ್ಯವೇ " ಎಂದು ಗದರಿಸಿದರು.

ಸುದರ್ಶನ ಹಾಸನದ ಹೈಸ್ಕೂಲಿನಲ್ಲಿ ನಾಲ್ಕನೇ ಫಾರಂಗೆ ಸೇರಿದ. ಜತೆಯಲ್ಲಿ ರಂಗಪ್ಪ ಸುಬ್ಬು ಎಲ್ಲರೂ ಸೇರಿದರು. ಹೈಸ್ಕೂಲಿಗೆ ಸೇರಿದ ಹಾಗೆ ಆಗ ಹಾಸನದಲ್ಲಿ ಒಂದು ಹಾಸ್ಟೆಲ್ ಇದ್ದಿತು. ಎಲ್ಲಾ ಜಾತಿಯುವರೂ ಆ ಹಾಸ್ಟೆಲ್‌ನಲ್ಲಿ ಇರುತ್ತಿದ್ದರು. ಖರ್ಚುಗಳನ್ನೆಲ್ಲಾ ಎಲ್ಲಾ ವಿದ್ಯಾರ್ಥಿಗಳಿಗೂ ಸಮನಾಗಿ ಹಂಚಿಜಡುತ್ತಿದ್ದರು. ಹಾಸ್ಟೆಲ್ ಮ್ಯಾನೇಜರು ವಿದ್ಯಾರ್ಥಿಗಳಿಗೆ ನಿಮಗೆ ಇಷ್ಟು ಛಾರ್ಜು ಬಿದ್ದಿದೆ ಎಂದು ಹೇಳುವಾಗ ಜಡ್ಜಿ ತೀರ್ಮಾನವನ್ನು ಹೇಳುವಾಗ ಅನುಸರಿಸುವ ಗಂಭೀರ ಧ್ವನಿಯಲ್ಲಿ ಡಿವೈಡೆಡ್ ಬೈ ಎಂದು ಹೇಳುತ್ತಿದ್ದರು. ಹುಡುಗರು ಅವರಿಗೆ ಡಿವೈಡೆಡ್‌ಬೈ ಎಂದೇ ಹೆಸರಿಟ್ಟರು. ಈಚೆಗೆ ಒಕ್ಕಲಿಗರಿಗೆ ಬೇರೆ ಹಾಸ್ಟೆಲ್ ಮಾಡಿದ್ದಾರೆ. ಲಿಂಗಾಯಿತರಿಗೆ ಬೇರೆ ಮಾಡಿದ್ದಾರೆ. ಹಿಂದಲ ಹಾಸ್ಟೆಲ್ ಹರಿಜನ ಹಾಸ್ಟೆಲ್ ಆಗಿದೆ. ಆಗ ಇದ್ದ ಹೈಸ್ಕೂಲು ಹುಡುಗರ ಹಾಸ್ಟೆಲ್ ಎಂಬುದು ಹೋಗಿ ಈಗ ಒಕ್ಕಲಿಗರ ಹಾಸ್ಟೆಲ್, ಬ್ರಾಹ್ಮಣ ಹಾಸ್ಟೆಲ್ ವಗ್ಗೆರೆ ಆಗುತ್ತಿದೆ. ಆದರೂ ನಾವು ಅಂದಿಗಿಂತ ಇಂದು ಹೆಚ್ಚಾಗಿ ಮುಂದುವರಿದಿದ್ದೇವೆ!

ಮಲ್ಲಿಗೆಹಳ್ಳಿಯ ಹಯಾತ್ ಸಾಬಿಯ ಮಗ ಅಜೀಜ್ ಸಾಬಿಯೂ ನಾಲ್ಕನೆ ಫಾರಂನಲ್ಲಿ ಓದುತ್ತಿದ್ದನು. ಅಜೀಜ್ ಸಾಬಿಗೆ ಕನ್ನಡ ಬರುತ್ತಿರಲಿಲ್ಲ. ಮಲ್ಲಿಗೆಹಳ್ಳಿಯ ಪ್ರೈಮರಿ ಸ್ಕೂಲಿನಲ್ಲಿ ೮೦ ಹುಡುಗರಿಗೆ ಇಬ್ಬರು ಉಪಾಧ್ಯಾಯರನ್ನು ಕೊಟ್ಟಿದ್ದರು. ಅಷ್ಟು ಜನ ಹುಡುಗರಿಗೂ ಪಾಠ ಹೇಳುವುದಕ್ಕೂ ಗದ್ದಲ ಮಾಡದಂತೆ ಅವರನ್ನು ತಡೆದು ಸ್ಕೂಲನ್ನು ಶಾಂತವಾಗಿ ಇಡುವುದಕ್ಕೂ ಆ ಇಬ್ಬರು ಮೇಷ್ಟರಿಗೆ ಸಾಧ್ಯವಾಗುತ್ತಿರಲಿಲ್ಲ. ಇನ್ನೊಬ್ಬ ಉಪಾಧ್ಯಾಯರು ಬೇಕೆಂದು ಸರ್ಕಾರವನ್ನು ಪ್ರಾರ್ಥಿಸಿ ಪ್ರಾರ್ಥಿಸಿ ಗ್ರಾಮಸ್ಥರು ಸುಸ್ತಾಗಿದ್ದರು. ಉಪಾಧ್ಯಾಯರನ್ನು ಕೊಡದಿರಲು ಸರ್ಕಾರದವರು ಆಗ ಕೊಟ್ಟಿದ್ದ ಕಾರಣಗಳೂ ವಿಚಿತ್ರವಾಗಿದ್ದುವು. ಸರ್ಕಾರದವರು, ರಿಜಿಸ್ಟರಿನಲ್ಲಿ ಹತ್ತು ಮಂದಿಯೂ ಸ್ಕೂಲಿಗೆ ಬರುತ್ತಿರುವವರ ಸಂಖೆ ಐದು ಮಾತ್ರವೂ ಆಗಿದ್ದ ಉರ್ದು ಪ್ರೈಮರಿ ಸ್ಕೂಲನ್ನು ಮಸೀದಿಯಲ್ಲಿ ನಡೆಸುತ್ತಿದ್ದರು. ಅವರು ಹೀಗೆ ಕನ್ನಡ ಸ್ಕೂಲಿನಲ್ಲಿ "ತೊಂಬತ್ತು ಹುಡುಗರಿಗೆ ಮೂರು ಉಪಾಧ್ಯಾಯರು ಒಬ್ಬೊಬ್ಬ ಉಪಾಧ್ಯಾಯನಿಗೆ ಮುವ್ವತ್ತು ಜನ ಬಿದ್ದಂತೆ ಆಯಿತು. ಇದೇನೂ

ಹೆಚ್ಚಿಲ್ಲ" ಎಂದು ಹೇಳತೊಡಗಿದ್ದರು. ಗ್ರಾಮಸ್ಥರು ಏನೂ ತಿಳಿಯದವರಾಗಿ "ಹಾಗಾದರೆ ಆ ಹತ್ತು ಜನರನ್ನು ಈ ಸ್ಕೂಲಿಗೇ ಹಾಕಿ" ಎಂದರು. ಇನಿಸ್ಪೆಕ್ಟರು "ಪಾಪ ಸಾಧು ಪ್ರಾಣಿಗಳು. ಇವಕ್ಕೆ ಏನು ತಿಳಿಯುತ್ತದೆ" ಎಂಬಂತೆ ಅವರ ಕಡೆ ನೋಡಿದರು. ಅನಂತುವು "ಸ್ವಾಮಿ ಈಗ ಸಂಸ್ಕೃತ ಕಲಿಯುವ ಹತ್ತು ಹುಡುಗರಿಗೆ ಸಂಸ್ಕೃತ ಕಲಿಸಲು ಒಬ್ಬ ಈ ಊರಿನ ಪಂಡಿತರನ್ನೇ ನಿತ್ಯಾ ಸ್ವಲ್ಪಕಾಲ ಬಂದು ಹೇಳುವಂತೆ ಗೊತ್ತುಮಾಡಿಲ್ಲವೆ? ಹಾಗೆಯೇ ಈ ಉರ್ದು ಹುಡುಗರನ್ನು ಸ್ಕೂಲಿಗೆ ಹಾಕಿ ಉರ್ದು ಪಂಡಿತರನ್ನು ಅವರಿಗೆ ನಿಯಮಿಸಿ ಎಂದರು ಇನಿಸ್ಪೆಕ್ಟರು "ಅಲ್ಲೇ ನೋಡಿ. ನಿಮಗೆ ಗೊತ್ತಿಲ್ಲದೇ ಇರುವುದು. ಆ ಉರ್ದುವಿನ ಹುಡುಗರಿಗೆ ಕನ್ನಡ ಬರುವುದಿಲ್ಲ" ಎಂದರು. ಹೀಗಾಗಿ ಆ ಐದು ಜನಕ್ಕೆ ಒಬ್ಬ ಮೇಷ್ಟರೂ, ಈ ಒಬ್ಬ ಮೇಷ್ಟರಿಗೆ ನಲವತ್ತು ಹುಡುಗರೂ ಖಾಯಂ ಆದರು. ಅನಂತುವು "ಸ್ವಾಮಿ ಹಾಗಾದರೆ ನಮ್ಮ ಹುಡುಗರನ್ನೂ ಹೈದರಾಬಾದಿಗೆ ಕಳುಹಿಸುವುದು ಮೇಲು. ಯಾಕೆ ಅಂದರೆ ಇವರು ಅಲ್ಲಿ ಉರ್ದು ಕಲಿಯಬೇಕಾದುದಿಲ್ಲ. ಕನ್ನಡಕ್ಕೆ ಅವಕಾಶವಿಲ್ಲ. ಒಂದೆರಡು ಇಂಗ್ಲಿಷ್ ಕೊಸ್‌ಪಸ್ ಕಲಿತುಕೊಂಡು ಕೆಲಸಕ್ಕೆ ಸೇರಿಬಿಡಬಹುದು, ಎಂದರು. ಇನಿಸ್ಪೆಕ್ಟರು ನಗುತ್ತಾ "ಹೈದರಾಬಾದಿನಲ್ಲಿ ಉರ್ದು ಕಲಿಯದ ಹುಡುಗರನ್ನು ಪಾಠಶಾಲೆಗಳಿಗೇ ಸೇರಿಸುವುದಿಲ್ಲ. ನನ್ನ ಭಾವಮೈದ ಹೈದರಾಬಾದಿನಲ್ಲಿ ಕೆಲಸಕ್ಕೆ ಸೇರಿದ್ದಾನೆ. ಅವನ ಹೆಣ್ಣು ಮಕ್ಕಳೂ ಸಹ ಅಲ್ಲಿ ಉರ್ದುವನ್ನೇ ಕಲಿಯುತ್ತಿದ್ದಾರೆ. ಉರ್ದು ಬರದವರಿಗೆ ಅಲ್ಲಿ ಸರ್ಕಾರಿ ಕೆಲಸವೂ ದೊರೆಯುವುದಿಲ್ಲ" ಎಂದರು. ಹಾಗಾದರೆ ಇಲ್ಲಿಯೂ ಎಲ್ಲರೂ ಕನ್ನಡ ಕಲಿಯಬೇಕೆಂದು ಯಾಕೆ ಬಲಾತ್ಕರಿಸುವುದಿಲ್ಲ" ಎಂದರು. ಇನಿಸ್ಪೆಕ್ಟರಿಗೆ ಸಿಟ್ಟು ಹತ್ತಿತು. ಅವರು "ಅದನ್ನ ನನ್ನ ಯಾಕೆ ಕೇಳ್ತೀರ್ರೀ. ನಿಮ್ಮ ಸರ್ಕಾರ ಕೇಳ. ನಿಮ್ಮ ವಿದ್ಯಾಮಂತ್ರಿಗಳನ್ನ ಕೇಳಿ" ಎಂದುಬಿಟ್ಟರು. ಮುಂದೆ ಮಲ್ಲಿಗೆಹಳ್ಳಿಯ ಇನ್‌ಕಂಪ್ಲೀಟ್ ಮಿಡಲ್ ಸ್ಕೂಲು ಮಿಡಲ್ ಸ್ಕೂಲು ಆಗುವಾಗಲೂ ಇದೇ ರಗಳೆ ಬಂದಿತು. ಎರಡು ಮಿಡಲ್ ಸ್ಕೂಲುಗಳಿಗೆ (ಒಂದು ಉರ್ದು ಒಂದು ಕನ್ನಡ) ಸಾಕಾಗುವಷ್ಟು ಹುಡುಗರು ಇಲ್ಲ. ಆದರೆ ಉರ್ದು ವಿದ್ಯಾರ್ಥಿಗಳು ಪ್ರೈಮರಿ ಸ್ಕೂಲಿನಲ್ಲಿ ಕನ್ನಡ ಕಲಿಯುವುದಿಲ್ಲ.

ಆದುದರಿಂದ ಮಿಡಲ್ ಸ್ಕೂಲಿನಲ್ಲಿಯೂ ಅವರಿಗೆ ಕನ್ನಡ ಬರುವುದಿಲ್ಲ. ಅವರಿಗೆ ಕನ್ನಡ ಬಹಿಷ್ಕರಿಸುವ ಮಿಡಲ್ ಸ್ಕೂಲು ಬೇಕು. ಹೀಗಾಗಿ ಇದಕ್ಕಿದ್ದಂತೆ ಮಲ್ಲಿಗೆಹಳ್ಳಿಯಂತಹ ಸಣ್ಣ ಹಳ್ಳಿಗೆ ಎರಡು ಮಿಡಲ್ ಸ್ಕೂಲು ಬಂದುಬಿಟ್ಟಿತು. ಒಂದು ಸ್ಕೂಲಿನಲ್ಲಿ ಸ್ವಲ್ಪ ಹೆಚ್ಚು ಕಡಮೆ ಒಬ್ಬ ಮೇಷ್ಟರಿಗೆ ನಾಲ್ಕು ಹುಡುಗರು ಇರುತ್ತಿದ್ದರು. ಮತ್ತೊಂದು ಸ್ಕೂಲಿನಲ್ಲಿ ಒಬ್ಬ ಮೇಷ್ಟರಿಗೆ ೫೦ ಹುಡುಗರು. ಕೊನೆಗೆ ಒಂದು ಸ್ಕೂಲನ್ನು ತೆಗೆದುಹಾಕುತ್ತೇವೆಂದು ಸರ್ಕಾರದವರು ಗರ್ಜಿಸಿದರು. ಆದರೆ ತೆಗೆದುಹಾಕುವುದು ಯಾವ ಸ್ಕೂಲನ್ನು? ಉರ್ದು ಸ್ಕೂಲಿನ ವಿದ್ಯಾರ್ಥಿಗಳು ಪ್ರತಿ ವರುಷವೂ ತಪ್ಪದೆ ತೇರ್ಗಡೆಯಾಗುತ್ತಿದ್ದರು. ಅಂತೂ ಎರಡು ಸ್ಕೂಲೂ ಉಳಿದುವು.

ಮೇಷ್ಟರ ಮಗ ಸುಬ್ಬ ರಂಗಪ್ಪ, ಸುದರ್ಶನ, ಅಜೀಜ್ ಸಾಬ್ ನಾಲ್ಕು ಜನರೂ ಹಾಸ್ಟಲಿನಲ್ಲಿಯೇ ಉಳಿದುಕೊಂಡು ಹೈಸ್ಕೂಲಿಗೆ ಹೋಗ ತೊಡಗಿದರು. ಹಾಸನದ ಹೈಸ್ಕೂಲು ಹೆಡ್ಮಾಸ್ಟರನ್ನು ಕಂಡರೆ ಹುಡುಗ ರಿಗೆ ಮಾತ್ರ ಭಯವಾಗುವುದಿರಲಿ; ಮೇಷ್ಟರುಗಳೂ ಗಡಗಡನೆ ನಡುಗು ತ್ತಿದ್ದರು. ಮೊದಲು ಹೆಡ್ಮಾಸ್ಟರ ಆಕಾರವೇ ಭಯಂಕರವಾಗಿದ್ದಿತು. ಆರು ಅಡಿಯ ಕಪ್ಪು ಬಣ್ಣದ ಆಜಾನುಬಾಹುವಾದ ಆಳು: ಗುಡುಗಿ ನಂತಹ ಧ್ವನಿ. ಇವರು ಸಾಮಾನ್ಯವಾಗಿ ಆ ಕಾಲದಲ್ಲಿ ವಾಲ್ಟನ್ ಸಿಂತಿಸಿಸ್ ಎಂಬ ಪಾಠವನ್ನು ತೆಗೆದುಕೊಳ್ಳುತ್ತಿದ್ದರು. ಅವರ ದೃಷ್ಟಿ ಯಲ್ಲಿ ಅದೇ ವೇದದಂತೆ. " ಈ ಸಿಂತಿಸಿಸ್ ಒಂದು ನೀವು ಚೆನ್ನಾಗಿ ಅಭ್ಯಾಸ ಮಾಡಬಿಟ್ಟರೆ ಅನಂತರ ನಿಮಗೆ ಏನೂ ಬೇಕಿಲ್ಲ" ಎಂದು ಅವರು ಪದೇ ಪದೇ ಹೇಳುತ್ತಿದ್ದರು ಹೆಡ್ಮಾಸ್ಟರನ್ನು ಬಿಟ್ಟರೆ ಆಗಿನ ಎರಡನೆಯ ಉಪಾಧ್ಯಾಯರು ವ್ಯಾಸರಾಯರು. ಇವರ ಬುದ್ಧಿ ಬಹು ತೀಕ್ಷ್ಣ ಇವರು ನೋಡುವುದಕ್ಕೆ ತೆಳ್ಳಗೆ ಎತ್ತರವಾಗಿ ಕಾಣುತ್ತಿದ್ದರು. ಅವರು ಹುಡುಗರಿಗೆ ಇಂಗ್ಲಿಷ್ ಪಾಠಗಳು ಮತ್ತು ವಿಜ್ಞಾನ ಇವುಗಳನ್ನು ಹೇಳು ತ್ತಿದ್ದರು. ಇವರು ಸ್ಕೂಲಿನಿಂದ ಮನೆಗೆ ಬರುವಾಗ ಒಬ್ಬರೇ ಬರು ತ್ತಿದ್ದರೂ ಕೂಡ ಯಾರೊಂದಿಗೋ ಮಾತನಾಡುತ್ತಿರುವಂತೆ ತಮ್ಮ ಪಾಡಿಗೆ ತಾವೇ ಕೈ ಆಡಿಸುತ್ತಾ ಮಾತನಾಡಿಕೊಳ್ಳುತ್ತಾ ಹೋಗುತ್ತಿ ದ್ದರು. ಇವರಿಗೆ ಸೈನ್ಸ್ ಹುಚ್ಚು ಎಂದು ವಿದ್ಯಾರ್ಥಿಗಳು ಕರೆಯುತ್ತ

-ದ್ದರು. " ವಿಜ್ಞಾನದ ಮುಂದೆ ಜಗತ್ತಿನಲ್ಲಿ ನಿಲ್ಲುವುದು ಯಾವುದೂ ಇಲ್ಲ. ವಿಜ್ಞಾನವೇ ಪರಮಾತ್ಮ, ವಿಜ್ಞಾನವೇ ಪರಬ್ರಹ್ಮ, ಇದೊಂದೇ ಸ್ಪರ್ಶಶಿಲೆ. ಈ ಸ್ಪರ್ಶಶಿಲೆ ಸ್ವಾಧೀನಕ್ಕೆ ಬಂದುಬಿಟ್ಟರೆ ಇನ್ನು ಉಳಿದ ವಿದ್ಯೆಗಳೆಲ್ಲಾ ಯಾಕೆ ಎನ್ನುತ್ತಿದ್ದರು " ಇವರು. ಇವರು ತರಗತಿಯಲ್ಲಿ ವಿಜ್ಞಾನದ ಪಾಠ ಪ್ರಾರಂಭವಾಗುವುದಕ್ಕೆ ಮುಂಚೆ ಪ್ರತಿದಿನವೂ ವಿಜ್ಞಾನ ಮಹಿಮೆಯನ್ನು ಕುರಿತು ಅರ್ಧ ಗಂಟೆ ಪ್ರವಚನ ಮಾಡುತ್ತಿದ್ದರು. ವ್ಯಾಸರಾಯರ ಪಾಠ ಪ್ರಾರಂಭವಾಗುವಾಗ ಹುಡುಗರು "ಅಥ ವಿಜ್ಞಾನ ಮಾಹಾತ್ಮ್ಯ ಪ್ರಾರಂಭಃ" ಎಂದು ನೋಟು ಬುಕ್ಕಿನಲ್ಲಿ ಬರೆದುಕೊಳ್ಳುತ್ತಿದ್ದರು. ಕೊನೆಗೆ ವಿಜ್ಞಾನದ ನಿಜವಾದ ಹುಚ್ಚೇ ಅವರಿಗೆ ಹಿಡಿಯಿತು. ಇಂಗ್ಲಿಷ್ ಪಾಠದ ಕಾಲದಲ್ಲಿಯೂ ಅವರು ವಿಜ್ಞಾನವನ್ನು ಕುರಿತೇ ಹೇಳತೊಡಗಿದರು ಒಂದು ಸಲ ಸರ್ಕಾರದವರು ಅವರಿಗೆ ಮೂರು ತಿಂಗಳು ರಜಾ ಕೊಟ್ಟು ಅವರಿಗೆ ವೈದ್ಯಶಾಲೆಯಲ್ಲಿ ವಿಶ್ರಾಂತಿಯನ್ನು ಕೊಡಿಸಿದರು. ಅನಂತರ ಎಲ್ಲಾ ಸರಿಹೋಯಿತು.

ವಿದ್ಯಾರ್ಥಿಗಳಿಗೆ ಈ ವಿಜ್ಞಾನದ ಹುಚ್ಚನಿಗಿಂತಲೂ ಭೂಗೋಳದ ಹುಚ್ಚನ ಕಾಟ ಹೆಚ್ಚಾಯಿತು. ವಿಜ್ಞಾನದ ಹುಚ್ಚನಿಂದ ವಿಜ್ಞಾನಕ್ಕೆ ತೊಂದರೆಯಿರಲಿಲ್ಲ. ವಿದ್ಯಾರ್ಥಿಗಳಿಗೆ ಅಪಾಯವಿರಲಿಲ್ಲ. ಭೂಗೋಳದ ಹುಚ್ಚನಿಂದ ವಿದ್ಯಾರ್ಥಿಗಳ ಪ್ರಾಣವೇ ಹೋಗುತ್ತಿದ್ದಿತು. ಭೂಗೋಳದ ಪಾಠಕ್ಕಾಗಿ ವಿದ್ಯಾರ್ಥಿಗಳು ಉಳಿದ ಪಾಠಗಳನ್ನೆಲ್ಲಾ ಉದಾಸೀನ ಮಾಡುತ್ತಿದ್ದರು. ಆ ಪಾಠದ ಭಯ ಅವರಿಗೆ ಹಾಗೆ ಇರುತ್ತಿದ್ದಿತು. ಆ ಕಾಲದಲ್ಲಿ ಭೂಗೋಳ ನಾಲ್ಕನೆಯ ಮತ್ತು ಐದನೆಯ ಫಾರಂಗಳಲ್ಲಿ, ತರಗತಿಯಲ್ಲಿ ನಡೆಸುವ ಪಾಠವಾಗಿದ್ದಿತೇ ಹೊರತು ಪಬ್ಲಿಕ್ ಪರೀಕ್ಷೆಗೆ ಒಂದು ವಿಷಯವಾಗಿರಲಿಲ್ಲ. ವಿದ್ಯಾರ್ಥಿಗಳಿಗೆ ಲೋಕ ಜ್ಞಾನ ತಿಳಿಯಲಿ ಎಂಬ ಭಾವನೆಯಿಂದ ಭೂಗೋಳ ಪಾಠವನ್ನು ತರಗತಿಯಲ್ಲಿ ಹೇಳಿಕೊಡುತ್ತಿದ್ದರು. ಆದರೆ ಈ ಭೂಗೋಳದ ಉಪಾಧ್ಯಾಯರಿಗೆ ಲೋಕದಲ್ಲಿರುವ ಎಲ್ಲಾ ಪಾಠಗಳಿಗಿಂತಲೂ ಭೂಗೋಳವೇ ಹೆಚ್ಚಾಗಿ ತೋರುತ್ತಿದ್ದಿತು. ಇದು ಪರೀಕ್ಷೆಯ ವಿಷಯವಾಗಿಲ್ಲದುದರಿಂದ ಉಪಾಧ್ಯಾಯರು ಮನಸ್ಸಿಗೆ ಬಂದಂತೆ ಪಾಠ ಹೇಳುತ್ತಿದ್ದರು. ಅವರಿಗೆ ಮುಖ್ಯವಾಗಿ ರೈಲ್ವೆಗಳ ಮೇಲೆ ಬಹಳ ಆಸೆ. ಬಿ. ಬಿ. ಅಂಡ್ ಸಿ. ಐ. ಎಂಬ

ರೈಲ್ವೆಯ ಉದ್ದ ಎಷ್ಟು; ಅದರಲ್ಲಿರುವ ಮುಖ್ಯ ಸ್ಟೇಶನ್ನುಗಳು ಯಾವುವು. ಅಲ್ಲಿಯ ಮುಖ್ಯ ವ್ಯಾಪಾರವೇನು? ಅದು ಪ್ರಾರಂಭವಾದದ್ದು ಯಾವ ವರುಷ. ಅದು ಯಾವ ಯಾವ ಪ್ರಾಂತಗಳ ಮೂಲಕ ಹೋಗುತ್ತದೆ'' ಹೀಗೆ ಅವರು ಭಾರತದ ಎಲ್ಲಾ ರೈಲ್ವೆಗಳ ಮೇಲೆಯೂ ಪ್ರಶ್ನೆ ಹಾಕುತ್ತಿದ್ದರು. ಸಾಸಿವೆ ಸಿಡಿದಂತೆ ಪಟಪಟನೆ ಜವಾಬು ತಾವೇ ಕೊಟ್ಟುಕೊಂಡು ಪಾಠ ಮಾಡುತ್ತಿದ್ದರು. ಅವರು ಬೊಂಬಾಯಿನಲ್ಲಿ ಕೆಲವು ಕಾಲ ವ್ಯಾಸಂಗ ಮಾಡಿಕೊಂಡು ಇದ್ದುದರಿಂದ ಮಾತನಾಡುವಾಗಲೆಲ್ಲಾ ನಾನು ಬೊಂಬಾಯಿನಲ್ಲಿದ್ದಾಗ ಎಂದು ಹೇಳುವುದೇ ಅವರ ರೂಢಿಯಾಗಿದ್ದಿತು. ಪಾಠ ಪ್ರಾರಂಭವಾಗಿ ಮುಗಿಯುವುದರೊಳಗಾಗಿ ಸುಮಾರು 45 ನಿಮಿಷಗಳಲ್ಲಿ ನಲವತ್ತು ಐವತ್ತುಸಲ ನಾನು ಬೊಂಬಾಯಿನಲ್ಲಿದ್ದಾಗ ಎನ್ನುತ್ತಿದ್ದರು. ಅವರ ಧ್ವನಿ ಬಹಳ ದಪ್ಪವಾಗಿದ್ದಿತು. ಅವರು ಮಾತನಾಡುತ್ತಿರುವಾಗ ವಾಕ್ಯಗಳು ಮೊದಲಿನಿಂದ ಕಡೆಯವರೆಗೆ ಒಂದೇ ಸಮನೆ, ಅರ್ಧವಿರಾಮ ವಿರಾಮವಿಲ್ಲದೆ ಹೊರಗೆ ಬರುತ್ತಿದ್ದವು. ಅವರು ಒಂದು ತರಗತಿಯಲ್ಲಿ ಇನ್ನೂ ಕುಳಿತುಕೊಳ್ಳುವುದಕ್ಕೇ ಇಲ್ಲ. ಹುಡುಗರು ನೋಟು ಬುಕ್ಕುಗಳನ್ನೂ ಸೀಸದ ಕಡ್ಡಿಗಳನ್ನೂ ಸವರಿಸುವುದಕ್ಕೆ ಮುಂಚೆಯೇ '' ಗ್ರೇಟ್ ಇಂಡಿಯನ್ ಪೆನಿನ್ಸುಲಾರ್ ರೈಲ್ವೆಯಲ್ಲಿ ಸೆಣಬಿನ ವ್ಯಾಪಾರ ಸ್ಥಳವಾವುದು '' ಎಂಬುದಾಗಿ ಗುಂಡು ಹಾರಿಸಿದಂತೆ ಕೇಳುತ್ತಿದ್ದರು. ಹುಡುಗರು ಎಷ್ಟು ಓದಿದರೂ ಅವರಿಗೆ ಇಂತಹ ಪ್ರಶ್ನೆಗಳಿಗೆ ಉತ್ತರ ತಿಳಿಯುತ್ತಿರಲಿಲ್ಲ. ಆಗತಾನೆ ನಾಲ್ಕನೆ ಫಾರಮ್ಮಿಗೆ ಬಂದಿರುವ ವಿದ್ಯಾರ್ಥಿಗಳಿಗೆ ಪಾಪ ಭಾರತದಲ್ಲಿರುವ ರೈಲ್ವೆಗಳ ಸಂಗತಿಗಳೆಲ್ಲಾ ಹೇಗೆ ತಿಳಿಯಬೇಕು. ವಿದ್ಯಾರ್ಥಿಗಳು ತಬ್ಬಿಬ್ಬಾದಾಗ ಉಪಾಧ್ಯಾಯರು '' ನನಗೆ ಗೊತ್ತು. ನೀವು ಯಾಕೆ ಓದುತ್ತೀರಿ? ಇದು ಪರೀಕ್ಷೆಗೆ ಬಲಾತ್ಕಾರದ ವಿಷಯವಲ್ಲ. ಓದಿದರೆ ಓದಬಹುದು. ಬಿಟ್ಟರೆ ಬಿಡಬಹುದು. ಇರಲಿ. ನನ್ನ ಕಾಲ ಮುಗಿಯುವುದರೊಳಗೆ ಭೂಗೋಳವನ್ನು ಬಲಾತ್ಕಾರ ಮಾಡಿಸುತ್ತೇನೆ. ಭೂಗೋಳ ಕಲಿಯದ ವಿದ್ಯಾರ್ಥಿ ವಿದ್ಯಾರ್ಥಿಯೇ ಅಲ್ಲ'' ಎನ್ನುತ್ತಿದ್ದರು. ಹುಡುಗರು '' ಭಗವಂತಾ ಭೂಗೋಳವೂ ಬಲಾತ್ಕಾರವಾಗಿ ಇಂತಹ ಉಪಾಧ್ಯಾಯರೂ ಅದಕ್ಕೆ ದೊರಕಿಬಿಟ್ಟರೆ ನಮ್ಮ ಅವಸ್ಥೆ ಸಾಕು. ಅದು ಬಲಾತ್ಕಾರವಾಗು

ವುದರೊಳಗಾಗಿ ಹೇಗಾದರೂ ಮಾಡಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಹೋಗಿಬಿಡೋಣ" ಎಂದು ಆಶಿಸುತ್ತಿದ್ದರು. ಕೊನೆಗೆ ಭೂಗೋಳದ ಉಪಾಧ್ಯಾಯರ ಆಸೆಯೇ ನೆರವೇರಿತು. ಉಪಾಧ್ಯಾಯರು ಭಾರತದ ರೈಲ್ವೆಗಳ ವಿಚಾರದಲ್ಲಿ ಪೂರ್ಣಪರಿಶ್ರಮ ಹೊಂದಲು ಅಮೆರಿಕಾಕ್ಕೆ ಹೋಗಿ ಅಲ್ಲಿಯ ವಿದ್ಯಾಲಯದಲ್ಲಿ ವ್ಯಾಸಂಗ ಮಾಡಿ ಭಾರತಕ್ಕೆ ಹಿಂದಿರುಗಿದರು. ಅಷ್ಟರವೇಳೆಗೆ ಭೂಗೋಳವೇನೋ ಬಲಾತ್ಕಾರದ ವಿಚಾರವೇ ಆಗಿದ್ದಿತು ಆದರೆ ಭೂಗೋಳದ ಪಾಠ ಹೇಳುವುದರಲ್ಲಿ ಉಪಾಧ್ಯಾಯರಿಗೆ ಆಸೆ ಕಡಿಮೆಯಾಗಿದ್ದಿತು. ಅವರ ದೃಷ್ಟಿಯೆಲ್ಲಾ ಮೇಲಿನ ಹುದ್ದೆಗಳ ಕಡೆಗೇ ಇದ್ದಿತು. ಅವರು ಭೂಗೋಳದ ಪಾಠವನ್ನು ಬಿಟ್ಟು ಇನಿಸ್ಪೆಕ್ಟರ್ ಹುದ್ದೆಗೆ ಸೇರಿದರು. ಆದರೂ ಅದರ ವಾಸನೆ ಹೋಗಲಿಲ್ಲ. ಮಿಡಲ್ ಸ್ಕೂಲಿನ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಪ್ರಪಂಚವನ್ನು ಕುರಿತು ಒಂದು ಭೂಗೋಳವನ್ನು ಬರೆದು ಅ ೭-೮ ವಯಸ್ಸಿನ ಕಂದಮ್ಮಗಳಿಗೆ ಯಮಸ್ವರೂಪರಾಗಿ ಕಾಡತೊಡಗಿದರು. ಪಾಪ ಕೆಲವು ಮಿಡಲ್ ಸ್ಕೂಲು ಉಪಾಧ್ಯಾಯರಿಗೇ ಮೈಸೂರು ದೇಶದಲ್ಲಿ ಈಚೆಗೆ ಒಂಭತ್ತು ಜಿಲ್ಲೆಗಳಿವೆ ಎಂಬುದು ಇನ್ನೂ ಬೇಗ ಜ್ಞಾಪಕಕ್ಕೆ ಬರುವುದಿಲ್ಲ; ಮಂದಟ್ಟಾಗಿಲ್ಲ. ಹೈಸ್ಕೂಲನ್ನು ಬಿಟ್ಟ ವಿದ್ಯಾರ್ಥಿಗಳು ಈಗ ಮನೆಯಲ್ಲಿ ತಮ್ಮಂದಿರು ಪ್ರಪಂಚದ ವಿಚಾರಗಳನ್ನೆಲ್ಲಾ ತೊದಲು ಬಾಯಿನಲ್ಲಿ ಉರು ಹಾಕುತ್ತಿರುವುದನ್ನು ಕೇಳಿ ಈ ದುರ್ಗಂಧ ಇನ್ನೂ ಬಿಡಲಿಲ್ಲವಲ್ಲ ಎಂದು ಕೊರಗುತ್ತಾರೆ ಹೆಡ್ಮಾಸ್ಟರಿಗೂ ಈ ಭೂಗೋಳದ ಮಾಸ್ಟರಿಗೂ ಯಾವುದಾದರೂ ಚರ್ಚೆ ವಾಗ್ವಾದಗಳು ಪ್ರಾರಂಭವಾದರೆ ಒಬ್ಬರಿಗೆ ಒಬ್ಬರು ಸೋಲದೆ ಮೂರು ದಿನಗಳಾದರೂ ವಾದ ಮಾಡುತ್ತಲೇ ಇರುತ್ತಿದ್ದರು.

ಸುಬ್ಬು, ರಂಗಪ್ಪ, ಇವರಾರಿಗೂ ಹೈಸ್ಕೂಲಿನಲ್ಲಿ ಅರ್ಧ ಫೀಜು ಮಾಫಿ ಮುಂತಾದುವೊಂದೂ ದೊರೆಯಲೇ ಇಲ್ಲ. ಮಲ್ಲಿಗೆಹಳ್ಳಿ ಹಯಾತ್ ಸಾಹೇಬು 15–20 ಸಾವಿರ ರುಪಾಯಿ ಲೇವಾದೇವಿ ಮಾಡುತ್ತಾನೆ. ಅವನ ಮಗ ಅಜೀಜ್ ಸಾಬಿ ತರಗತಿಯಲ್ಲಿಯೂ ಸುದರ್ಶನ ರಂಗಪ್ಪನಷ್ಟು ಬುದ್ಧಿವಂತನಾಗಿರಲಿಲ್ಲ. ಆದರೂ ಅವನಿಗೆ ಸ್ವಾಭಾವಿಕವಾಗಿ ಸ್ಕೂಲಿಗೆ ಸೇರಿದ ಕ್ಷಣವೇ ಅರ್ಧಫೀಜು ಮಾಫಿಯಾಯಿತು. ರಂಗಪ್ಪ ಹೈಸ್ಕೂಲು

ಗುಮಾಸ್ತರ ಹತ್ತಿರ ಇದು ಏನು ಸಾರ್ ನಮಗಿಂತ ಅವರು ತುಂಬ ಅನುಕೂಲವಾಗಿದ್ದಾರೆ. ಅವರಿಗೆ ಮಾತ್ರ ಫೀಜು ಅರ್ಧ ಮಾಫಿ ಮಾಡಿದ್ದೀರಿ. ನಮಗೆ ಇಲ್ಲವಲ್ಲ" ಎಂದ. ಗುಮಾಸ್ತನು "ಅವರು ಮುಸಲ್ಮಾನರಯ್ಯ. ಅವರಿಗೆ ಯಾವಾಗಲೂ ಅರ್ಧ ಫೀ" ಎಂದ. ರಂಗಪ್ಪನಿಗೆ ಇದು ಅರ್ಥವಾಗಲಿಲ್ಲ. ಅವನು "ಹಾಗಾದರೆ ನಮಗೆ ಎಲ್ಲೂ ಅರ್ಧ ಫೀ ಇಲ್ಲವೇ ಸ್ವಾಮಿ ? ಭೂಗೋಳದಲ್ಲಿ ಹೇಳಿದೆಯಲ್ಲ ಸ್ವಾಮಿ ಹೈದರಾಬಾದು ಮುಸಲ್ಮಾನರ ರಾಜ್ಯ ಎಂದು. ಅಲ್ಲಿ ಹಿಂದುಗಳಿಗೆ ಅರ್ಧ ಫೀಜು ಇರಬಹುದು" ಎಂದ. ಗುಮಾಸ್ತ ಪಾಪ ಈ ಹುಡುಗರಿಗೆ ಏನು ಗೊತ್ತು ಎನ್ನುವಂತೆ ನಕ್ಕುಬಿಟ್ಟ.

ಸುದರ್ಶನ ರಂಗಪ್ಪ ಸುಬ್ಬು ಅಜೀಜ್ ಸಾಬ್ ನಾಲ್ವರೂ ಹೈಸ್ಕೂಲ್ ಹಾಸ್ಟೆಲಿನಲ್ಲಿ ಉಳಿದರು. ಆ ಹಾಸ್ಟೆಲಿನಲ್ಲಿ ಪ್ರತಿ ಭಾನುವಾರವೂ ಹುಡುಗರಿಗೆ ಎಣ್ಣೆ ನೀರು ಹಾಕಿಕೊಳ್ಳಲು ಏರ್ಪಾಡು ಮಾಡಿದ್ದರು. ಹಾಸ್ಟೆಲ್ಲಿನ ಅಧಿಕಾರಿಗಳು ಆ ದಿನಕ್ಕೆ ಆವಶ್ಯಕವಾಗಷ್ಟು ಎಣ್ಣೆ ಸೌದೆ ಸೀಗೆಕಾಯಿ ಒದಗಿಸುತ್ತಿದ್ದರು. ಆದರೆ ಭಾವಿಯಿಂದ ನೀರನ್ನು ಸೇದಿ ಅದನ್ನು ಹಂಡೆಗೆ ತುಂಬಿಕೊಳ್ಳುವುದು ಹುಡುಗರ ಪಾಲಿಗೆ ಬಿದ್ದಿತ್ತು. ಆದರೆ ಯಾರು ತಾವೇ ಭಾವಿಯಿಂದ ನೀರು ಎತ್ತುತ್ತಿರಲಿಲ್ಲವೋ ಅವರು ಹಾಸ್ಟೆಲ್ಲಿನ ಆಳು ಕರಿಯನಿಗೆ ಎರಡಾಣೆ ಕೊಟ್ಟು ನೀರು ಸೇದಿಸಿ ಹಾಕಿಕೊಳ್ಳುತ್ತಿದ್ದರು. ಸಾಧಾರಣವಾಗಿ ಹಾಸ್ಟೆಲ್ಲಿನ ಹುಡುಗರೆಲ್ಲಾ ವಾರಕ್ಕೆ ಎರಡಾಣೆ ಇದಕ್ಕೆ ಖರ್ಚು ಮಾಡುತ್ತಿದ್ದರೆಂದು ಹೇಳಬಹುದು. ಆದರೆ ಸುದರ್ಶನ ಮಾತ್ರ ಪ್ರತಿ ವಾರವೂ ನೀರನ್ನು ತಾನೇ ಎತ್ತಿಕೊಂಡು ಅಭ್ಯಂಜನ ಮಾಡಿಕೊಳ್ಳುತ್ತಿದ್ದ. ಅದರಲ್ಲಿ ಅವನ ಶಿಸ್ತನ್ನು ಕಂಡು ಹಾಸ್ಟಲ್ ಹುಡುಗರು ಅವನನ್ನು ಹಾಸ್ಯ ಮಾಡುತ್ತಿದ್ದರು. ಪ್ರತಿ ಭಾನುವಾರವೂ ಸುದರ್ಶನನ ಎಣ್ಣೆ ನೀರೇ ಕೊನೆಯದಾಗಿರುತ್ತಿದ್ದಿತು. ಉಳಿದವರದೆಲ್ಲಾ ಆದ ಮೇಲೆ ಅವನು ನಿಧಾನವಾಗಿ ಹಂಡೆಗೆ ನೀರು ತುಂಬಿ ಕಾಯಿಸಿ ಸುಮಾರು ಎರಡು ಗಂಟೆಗಳ ಕಾಲ ಅಭ್ಯಂತನ ಮಾಡಿಕೊಳ್ಳುತ್ತಿದ್ದ. ಸುದರ್ಶನ ಪ್ರಾಣ ಹೋದರೂ ನೀರಿಗೆ ಎರಡಾಣೆ ಕೊಡಲು ಸಿದ್ಧನಾಗಿರಲಿಲ್ಲ. ಆ ಭಾನುವಾರ ಮಧ್ಯಾಹ್ನ ಸುದರ್ಶನ ಹಂಡೆಗೆ ನೀರು ತುಂಬಿ ಅದು ಕಾದು ಹದವಾದ ಮೇಲೆ ಉರಿಯನ್ನು

ಕಡಿಮೆ ಮಾಡಿ ಸ್ನಾನದ ಮನೆಯ ಒಳಗಡೆ ಇದ್ದ ಮತ್ತೊಂದು ಒಳ ಕೊಠಡಿಯಲ್ಲಿ ಮೈಗೆ ಎಣ್ಣೆ ಬಳಿದು ಕೊಳ್ಳುತ್ತಿದ್ದ. ಆ ವೇಳೆಗೆ ರಂಗಪ್ಪನೂ ಅವನ ಜತೆಗಾರರೂ ಹಾಸ್ಟಲಿನಲ್ಲಿಯೇ ಇದ್ದ ಸುಬ್ಬುವೂ ಸ್ನಾನದ ಮನೆಗೆ ಬಂದರು. ಬಂದವರೇ ಸುದರ್ಶನನು ಯಾಕೆ ಏನು ಎಂದು ಕೇಳುವುದಕ್ಕೆ ಮುಂಚೆಯೇ ಅವನಿದ್ದ ಕೊಠಡಿಯ ಬಾಗಿಲು ಎಳೆದು ಚಿಲಕ ಹಾಕಿ ಅದಕ್ಕೆ ಈಚೆ ಕಡೆ ಒಂದು ಚಕ್ಕೆಯನ್ನು ಸಿಕ್ಕಿಸಿ ದರು. ಅನಂತರ ಇವರು ಮಾಡುತ್ತಿರುವುದು ಏನು ಎಂಬುದು ಸುದರ್ಶನನಿಗೆ ತಿಳಿಯುವುದಕ್ಕೆ ಮುಂಚೆಯೇ ಇಬ್ಬರೂ ಹಂಡೆಯಲ್ಲಿದ್ದ ನೀರನ್ನೆಲ್ಲಾ ಧಡಧಡನೆ ಮೈ ಮೇಲೆ ಹುಯ್ದುಕೊಂಡು ಅದರಲ್ಲಿ ಒಂದು ತೊಟ್ಟನ್ನು ನಿಲ್ಲಿಸದೆ ನಗುತ್ತಾ ಹೊರಟು ಹೋದರು.

ಸುದರ್ಶನನು ಕೊಠಡಿಯಲ್ಲಿ ಮಂತ್ರದಿಂದ ಕಟ್ಟಲ್ಪಟ್ಟ ಹಾವಿನಂತೆ ಮುಲಕಾಡುತ್ತಾ ಇದ್ದನು. ರಂಗಪ್ಪ ಸುಬ್ಬು ಬಾಗಿಲಿನ ಚಿಲಕಕ್ಕೆ ಚಕ್ಕೆ ಸಿಕ್ಕಿಸಿದಾಗಲೇ ಅವರು ಏನು ಮಾಡುವರೆಂಬುದು ಅವನಿಗೆ ಗೊತ್ತಾ ಯಿತು; ಸರಿ ಎರಡಾಣೆ ಕ್ಷೌರಕ್ಕೆ ಬಂತು ಎಂದುಕೊಂಡ. ಇದಕ್ಕೆ ಯಾವ ರೀತಿ ಪ್ರತೀಕಾರ ಮಾಡಲಿ ಎಂಬುದೂ ಸುದರ್ಶನನ ಯೋಚನೆ ಯಾಯಿತು. ಆ ವೇಳೆಗೆ ಅಲ್ಲಿಗೆ ಬಂದ ಆಳು ಕರಿಯನಿಂದ ಸುದರ್ಶನನು ಬಾಗಿಲನ್ನು ತೆಗೆಸಿಕೊಂಡು ಈಚೆಗೆ ಬಂದು ಅವನಿಂದ ಹಂಡೆಗೆ ನೀರು ಭರ್ತಿ ಮಾಡಿಸಿದನು. ಹಾಸ್ಟೆಲ್ಲಿನ ವ್ಯವಸ್ಥಾಪಕರು ಕೊಡಬೇಕಾಗಿದ್ದಷ್ಟು ಸೌದೆಯನ್ನು ಕೊಟ್ಟುಬಿಟ್ಟಿದ್ದರು. ಮತ್ತೆ ಸೌದೆ ಬೇಕಾದರೆ ಅವರಿಗೆ ಎರಡು ಆಣೆ ಕೊಡಬೇಕಾಗಿದ್ದಿತು. ಸುದರ್ಶನನು ಅಡಿಗೆ ಮನೆಯಿಂದ ಒಂದು ತುಂಡು ಸೌದೆಯನ್ನು ಕರಿಯನ ಮೂಲಕ ಕದಿಸಿ ಹೇಗೋ ನೀರು ಸ್ವಲ್ಪ ಬೆಚ್ಚಗೆ ಮಾಡಿ ಹುಯ್ದುಕೊಂಡನು. ಅದರಿಂದ ಎಣ್ಣೆ ಸರಿಯಾಗಿ ಹೋಗಲಿಲ್ಲ. ಸುಖವೂ ಆಗಲಿಲ್ಲ. ಎಣ್ಣೆಯ ಜಿಡ್ಡು ಮೈಯಲ್ಲಿಯೇ ಉಳಿಯಿತು. ಆ ರಾತ್ರಿ ಹಾಸ್ಟಲ್ಲಿನಲ್ಲಿ ಊಟ ಮಾಡುವಾಗ ರಂಗಪ್ಪ, ಸುಬ್ಬು ಇವರ ಪ್ರತಿಷ್ಠೆಯೇ ಪ್ರತಿಷ್ಠೆಯಾಗಿದ್ದಿತು. "ಯಾರನ್ನೋ ಕೊಟ್ಟಿಗೆಯಲ್ಲಿ ಕೂಡಿದ್ದರಂತೆ", "ತಣ್ಣೀರಿನಲ್ಲಿ ಅಭ್ಯಂಜನ ಮಾಡಿದ ರೆಯೇ ಹಿತವೆಂದು ಒಬ್ಬರು ಕಂಡುಹಿಡಿದಿದ್ದಾರೆ. ಮುಂದೆ ಅವರು ಹೀಗೆಯೇ ಮಾಡುತ್ತಾರಂತೆ." "ಇವತ್ತು ಕರಿಯನ ಅದೃಷ್ಟವೇ

ಅದೃಷ್ಟ. ಇವತ್ತು ಅವನಿಗೆ ಎರಡಾಣೆ ಫಾಯಿದೆ ಆಯಿತು'' ಎಂದೂ ಮುಂತಾಗಿ ಸುದರ್ಶನನನ್ನು ಹುಡುಗರು ಹಾಸ್ಯ ಮಾಡಿದರು. ಸುದರ್ಶನನು ಯಾವುದಕ್ಕೂ ಪ್ರತ್ಯುತ್ತರ ಕೊಡಲಿಲ್ಲ.

ಮುಂದಲ ಶನಿವಾರದ ವೇಳೆಗೆ ಹಾಸ್ಟಲ್ ಹುಡುಗರ ಸಂಖೆ ನಲವತ್ತಕ್ಕೆ ಏರಿತು. ಅದಕ್ಕಿಂತ ಹೆಚ್ಚಾಗಿ ಅಲ್ಲಿ ಹುಡುಗರನ್ನು ಸೇರಿಸುತ್ತಿರಲಿಲ್ಲ. ನಲವತ್ತು ಹುಡುಗರೂ ಒಂದೇ ದಿನ ಎಣ್ಣೆ ನೀರು ಹಾಕಿಕೊಂಡರೆ ಮಧ್ಯಾನ್ಹದ ಊಟ ನಾಲ್ಕು ಗಂಟೆಯಾಗುತ್ತಿದ್ದಿತಾದುದರಿಂದ ಅರ್ಧ ಜನರು ಶನಿವಾರ ರಾತ್ರಿಯೂ ಉಳಿದ ಅರ್ಧ ಜನರು ಭಾನುವಾರ ಬೆಳಿಗ್ಗೆಯೂ ಎಣ್ಣೆ ನೀರು ಹಾಕಿಕೊಳ್ಳುತ್ತಿದ್ದರು. ಆದರೂ ಭಾನುವಾರ ಊಟವಾಗುವುದು ಎರಡು ಗಂಟೆಯಾಗುತ್ತಿದ್ದಿತು.

ಸುಬ್ಬು ಯಾವಾಗಲೂ ಶನಿವಾರ ರಾತ್ರಿ ನೀರು ಹಾಕಿಕೊಳ್ಳುತ್ತಿದ್ದನು. ಅವನಿಗೆ ದೇಹದಲ್ಲಿ ತ್ರಾಣ ಕಡಿಮೆಯಾಗಿದ್ದುದರಿಂದಲೋ ಏನೋ ಅವನಿಗೆ ಬಿಸಿನೀರನ್ನು ಕಂಡರೆ ಆಸೆ ಹೆಚ್ಚಾಗಿದ್ದಿತು. ದೇಹಕ್ಕೆ ಚೆನ್ನಾಗಿ ಎಣ್ಣೆ ಕುಡಿಸಿ ಬಿಸಿ ಬಿಸಿಯಾದ ನೀರನ್ನು ಹುಯ್ದುಕೊಂಡು ನಡೆಯುವುದಕ್ಕಾಗದಂತೆ ತೂಗಾಡುತ್ತಾ ಬಂದು ಮಲಗಿಬಿಟ್ಟರೆ ಬೆಳಗಿನವರೆಗೆ ಭರ್ಜರಿ ನಿದ್ರೆಬರುತ್ತಿದ್ದಿತು. ಈ ಅಭ್ಯಂಜನವೇ ಒಂದು ಟಾನಿಕ್ ಎಂಬುದಾಗಿ ಸುಬ್ಬು ಆಗಾಗ್ಗೆ ಹೇಳುತ್ತಿದ್ದನು. ಈ ತನ್ನ ತತ್ವಕ್ಕೆ ಅನುಸರಿಸಿ ಅವನು ಪ್ರತಿ ಶನಿವಾರವೂ ರಾತ್ರಿ ಅರ್ಧ ಜನರು ನೀರು ಹಾಕಿಕೊಂಡ ಮೇಲೆ ತಾನೇ ಕೊನೆಯವನಾಗಿ ೧೧-೩೦, ೧೨ ಗಂಟೆಗೆ ಫಟಫಟನೆ ಬಿಸಿನೀರನ್ನು ಹಾಕಿಸಿಕೊಂಡು ಹಾಸಿಗೆಯಲ್ಲಿ ಬಂದು ಮಲಗಿಕೊಳ್ಳುತ್ತಿದ್ದನು. ಹಾಸ್ಟೆಲ್ ಆಳು ಕರಿಯನಿಗೆ ಚೆನ್ನಾಗಿ ಹೆಂಡಕುಡಿಯುವ ಅಭ್ಯಾಸವಿದ್ದುದರಿಂದ, ಅವನು ಆ ರಾತ್ರಿ ಸುಬ್ಬುವಿಗಾಗಿ ನೀರನ್ನು ಹಂಡೆಗೆ ಭರ್ತಿಮಾಡಿ ತನ್ನ ಕೆಲಸಕ್ಕೆ ತಾನು ಹೊರಟುಹೋದನು. ಸುಬ್ಬು ಮೈಗೆ ಎಣ್ಣೆ ಬಳಿದುಕೊಂಡು, ಕಿವಿ ಮೂಗುಗಳಿಗೆಲ್ಲಾ ಬೆರಳಿನಲ್ಲಿ ತೊಟ್ಟು ತೊಟ್ಟು ಎಣ್ಣೆ ಕುಡಿಸುತ್ತಾ ಒಲೆಯ ಮುಂದೆ ಕುಳಿತು ಹೊರೆ ಹೊರೆ ಸೌದೆಯನ್ನು ಒಲೆಗೆ ಹಾಕಿ ನೀರನ್ನು ಕೊತಕೊತನೆ ಕುದಿಸಿದನು. ಆ ನೀರನ್ನು ಹದಮಾಡಿ ತನಗೆ ಹಾಕುವಂತೆ ಅವನು ರಂಗಪ್ಪನನ್ನು ಕೇಳಿಕೊಂಡಿದ್ದನು. ಸುಬ್ಬುವಿನಿಂದ ಒಂದು ಸ್ಟೂಡೆಂಟ್ಸ್ ನೋಟ್ ಬುಕ್

ಹೊಡೆಯುವ ಆಸೆಯಿಂದ ರಂಗಪ್ಪ ಸುಬ್ಬುವಿಗೆ ಈ ಸೇವೆ ಸಲ್ಲಿಸಲು ಒಪ್ಪಿಕೊಂಡಿದ್ದನು.

ಆಗ ರಾತ್ರಿ ಹನ್ನೊಂದೂವರೆ ಗಂಟೆಯಾಗಿದ್ದಿತು. ಹುಡುಗರೆಲ್ಲಾ ತಮ್ಮ ತಮ್ಮ ಕೊಠಡಿಗಳಲ್ಲಿ ಮಲಗಿದ್ದರು. ಹಾಸ್ಟಲ್ ಪರಿಚಾರಕ ಶಾಮಣ್ಣ ಅಡಿಗೆಮನೆಗೆ ಬೀಗಹಾಕಿಕೊಂಡು ಮನೆಗೆ ಹೋಗಿದ್ದ. ಹಂಡೆಯ ನೀರು ಕಾದು, ಒಂದು ಹಂಡೆಗೆ ಎರಡು ಹಂಡೆ ತಣ್ಣೀರು ಹಿಡಿಯುವಂತೆ ಇದ್ದಿತು. ರಂಗಪ್ಪ ಪಂಚೆಯನ್ನು ಮೇಲಕ್ಕೆ ಕಟ್ಟಿಕೊಂಡು ತಣ್ಣೀರನ್ನು ಸೇದಲು ಭಾವಿಯ ಕಟ್ಟೆಯ ಮೇಲೆ ಎರಡು ಬಿಂದಿಗೆಗಳನ್ನು ತಂದು ಇಟ್ಟನು. ಅಷ್ಟರಲ್ಲಿಯೇ ಸುಬ್ಬುವು ಏ ರಂಗಪ್ಪ ಹೋಗಿ ಟವಲನ್ನೂ ಸಾಬೂನನ್ನೂ ತೆಗೆದುಕೊಂಡು ಬಾ. ಆಮೇಲೆಲ್ಲಿ ಮಧ್ಯೆ ಹೋಗುವುದು '' ಎಂದನು. ರಂಗಪ್ಪ ಟವಲನ್ನೂ ಸಾಬೂನನ್ನೂ ತರಲು ಕೊಠಡಿಗೆ ಹೋದನು.

ಆಗ ಸುದರ್ಶನ ಭಾವಿಯ ಬಳಿಗೆ ಬಂದನು. ಹಗ್ಗದ ಕುಣಿಕೆಗೆ ಒಂದು ಬಿಂದಿಗೆಯನ್ನು ಸ್ವಲ್ಪ ಸಡಿಲವಾಗಿ ಕಟ್ಟಿ ಭಾವಿಗೆ ಬಿಟ್ಟನು. ಬಿಂದಿಗೆಯನ್ನು ನೀರಿನಲ್ಲಿ ಮುಳುಗಿಸಿ ಸ್ವಲ್ಪ ಮೇಲಕ್ಕೆ ಎಳೆದ ಕೂಡಲೇ ನೀರಿನ ಭಾರಕ್ಕೆ ಕುಣಿಕೆಯು ಕಳಚಿ ಬಿಂದಿಗೆಯು ಭಾವಿಯ ತಳದಲ್ಲಿ ಗುಡುಮ್ಮನೆ ಕುಳಿತುಕೊಂಡಿತು. ಸುದರ್ಶನ ಸರಸರನೆ ಖಾಲಿಯಾದ ಹಗ್ಗವನ್ನು ಮೇಲಕ್ಕೆ ಎಳೆದು ಎರಡನೆಯ ಬಿಂದಿಗೆಯನ್ನು ಕಟ್ಟಿ ನೀರಿನಲ್ಲಿ ಮುಳುಗಿಸಿ ಹಗ್ಗದೊಂದಿಗೆ ಭಾವಿಗೆ ಬಿಟ್ಟುಬಿಟ್ಟನು. ಅನಂತರ ಏನೂ ತಿಳಿಯದವನಂತೆ ಹೋಗಿ ತನ್ನ ಕೊಠಡಿಯಲ್ಲಿ ಮಲಗಿಕೊಂಡನು.

ರಂಗಪ್ಪ, ಟವಲನ್ನೂ ಸಾಬೂನನ್ನೂ ರೂಮಿನಿಂದ ತೆಗೆದುಕೊಂಡು ಬಂದು ಸ್ನಾನದ ಮನೆಯಲ್ಲಿ ಇಟ್ಟು ತಣ್ಣೀರನ್ನು ತರಲು ಭಾವಿಯ ಬಳಿಗೆ ಹೋದನು. ಅಲ್ಲಿ ಬಿಂದಿಗೆಯೂ ಇರಲಿಲ್ಲ. ಹಗ್ಗವೂ ಇರಲಿಲ್ಲ. ತಾನು ಕೊಠಡಿಯೊಳಕ್ಕೆ ಹೋದಾಗ ಯಾರೋ ಕಳ್ಳರು ಬಂದು ಬಿಂದಿಗೆಯನ್ನೂ ಹಗ್ಗವನ್ನೂ ಎತ್ತಿಕೊಂಡು ಹೋಗಿರಬೇಕೆಂದು ಅವನು ಮೊದಲು ಯೋಚಿಸಿದನು. ಹಂಡೆಯಲ್ಲಿ ನೀರು ಕೊತಕೊತನೆ ಕುದಿಯುತ್ತಿದ್ದಿತು ಅಡಿಗೆಮನೆಯಲ್ಲಿ ಒಂದು ಬಿಂದಿಗೆಯಿದ್ದಿತು. ಆದರೆ ಹಗ್ಗವಿರಲಿಲ್ಲ. ಅಡಿಗೆಯ ಮನೆಯ ಬೀಗದ ಕೈಯೂ ಇರಲಿಲ್ಲ. ಎಲ್ಲೂ ಒಂದು ತೊಟ್ಟೂ

ತಣ್ಣೀರಿರಲಿಲ್ಲ. ಉಳಿದ ಹುಡುಗರೆಲ್ಲಾ ಕೊಠಡಿಗಳಲ್ಲಿ ಮಲಗಿಬಿಟ್ಟಿದ್ದರು. ಸುಬ್ಬುವು ಒಲೆಯ ಉರಿಯನ್ನು ತೆಗೆದು ತಣ್ಣಗೆಮಾಡಿ ಎರಡು ಗಂಟೆಯ ವರೆಗೆ ತೂಗಡಿಸುತ್ತಾ ಕುಳಿತಿದ್ದನು. ಎಣ್ಣೆ ಕಣ್ಣಿಗೆ ಹರಿದು ಕಣ್ಣು ಉರಿಯತೊಡಗಿತ್ತು. ಕೂತು ಕೂತು ಬೆನ್ನು ಕೈಕಾಲುಗಳೆಲ್ಲಾ ನೋವಾಗಿದ್ದುವು. ಸುಮಾರು ರಾತ್ರಿ ಎರಡು ಗಂಟೆಯ ಹೊತ್ತಿಗೆ ಹಂಡೆಯ ನೀರು ಸ್ವಲ್ಪ ತಣ್ಣಗಾಯಿತು. ಆದರೂ ಎಷ್ಟು ಹಿತವೋ ಅಷ್ಟು ತಣ್ಣಗಾಗಲಿಲ್ಲ. ಸುಬ್ಬು ಬಹಳ ಕಷ್ಟದಿಂದ ಆ ನೀರನ್ನು ಒಂದು ಕೊಳದಪ್ಪಲೆಯಲ್ಲಿ ಮೇಲಕ್ಕೂ ಕೆಳಕ್ಕೂ ಆರಿಸಿ ಎಣ್ಣೆ ಹೋಗುವುದಕ್ಕೆ ಎಷ್ಟುಬೇಕೋ ಅಷ್ಟನ್ನು ಮಾತ್ರ ಮೈಗೆ ಹುಯಿದುಕೊಂಡು ತನ್ನ ಕೊಠಡಿಗೆ ಬಂದನು. ಆ ಶ್ರಮದಿಂದ ಅವನಿಗೆ ಸರಿಯಾಗಿ ನಿದ್ರೆ ಬರಲಿಲ್ಲ.

ಬೆಳಗಾದ ಕೂಡಲೆ ಬಿಂದಿಗೆ ಹಗ್ಗಗಳು ರಾತ್ರಿ ಕಳವಾಗಿವೆ ಎಂದು ಹಾಸ್ಟಲಿನಲ್ಲೆಲ್ಲಾ ಗದ್ದಲವಾಯಿತು. ಹೈಸ್ಕೂಲು ಹೆಡ್ಮಾಸ್ಟರಿಗೂ ಪೋಲೀಸರಿಗೂ ವಿಚಾರವನ್ನು ತಿಳಿಸಬೇಕೆಂದು ಪರಿಚಾರಕ ಹೊರಡುವುದರಲ್ಲಿದ್ದನು. ಅಷ್ಟರಲ್ಲಿಯೇ ಸುದರ್ಶನನೂ ಎದ್ದುಬಂದನು. ಹಾಸ್ಟೆಲಿನ ವಿದ್ಯಾರ್ಥಿಗಳೆಲ್ಲಾ ರಾತ್ರಿಯ ಕಳ್ಳತನದ ಮಾತುಗಳನ್ನಾಡುತ್ತಾ ನಿಂತಿದ್ದರು. ಸುಬ್ಬುವಿನ ಅವಸ್ಥೆ ಕೇಳಿ ಅವರಿಗೆಲ್ಲಾ ಬಹು ನಗು ಬಂತು. ಸುದರ್ಶನ ಏನೂ ತಿಳಿಯದವನಂತೆ ವಿಚಾರಗಳನ್ನೆಲ್ಲಾ ಕೇಳಿ ತಿಳಿದುಕೊಂಡನು. ಅನಂತರ “ ನಾವು ದುಡುಕಿ ಪೋಲೀಸಿಗೆ ದೂರು ಹೇಳುವುದರಿಂದ ಪ್ರಯೋಜನವಿಲ್ಲ. ಭಾವಿಯಲ್ಲಿ ಏನಾದರೂ ಬಿದ್ದಿದೆಯೋ ನೋಡಿದಿರಾ ” ಎಂದನು. ನೆರೆದಿದ್ದವರ್ಯಾರಿಗೂ ಭಾವಿಯಲ್ಲಿ ಇಳಿಯುವ ಧೈರ್ಯವಾಗಲಿ ಅಭ್ಯಾಸವಾಗಲಿ ಇರಲಿಲ್ಲ. “ ತಾಳಿ ನಾನೇ ನೋಡುತ್ತೇನೆ ” ಎಂಬುದಾಗಿ ಸುದರ್ಶನ ಹುಡುಗರು ಬೇಡ ಬೇಡವೆಂದರೂ ಕೇಳದೆ ಇಳಿಯತೊಡಗಿದನು. ಭಾವಿಯ ಕಟ್ಟೆಯ ಮೇಲೆ ಸುತ್ತಲೂ ಹುಡುಗರು ಬಗ್ಗಿನೋಡುತ್ತಿದ್ದರು. ಸುಬ್ಬುವೂ ನೋಡುತ್ತಿದ್ದನು. ಸುದರ್ಶನ ಭಾವಿ ಇಳಿದು ನೀರಿನಲ್ಲಿ ಮುಳುಗಿ ಒಂದೇ ಏಟಿಗೆ ಹಗ್ಗವನ್ನು ಹಿಡಿದುಕೊಂಡು ಮೇಲಕ್ಕೆ ಬಂದನು. ಅದರ ತುದಿಯಲ್ಲಿ ಒಂದು ಬಿಂದಿಗೆ ಕಟ್ಟಿತ್ತು. ಮತ್ತೆ ಮುಳುಗಿ ಎರಡನೆಯ ಕೊಡವನ್ನೂ ಮೇಲಕ್ಕೆ ತಂದನು. ಸುದರ್ಶನ ಮೇಲಕ್ಕೆ ಹತ್ತುತ್ತಿರುವಾಗ ಹುಡುಗರು “ ಹಗ್ಗ

ದೊಂದಿಗೆ ಕೊಡ ಬೀಳಲು ಕಾರಣವೇನು? ಯಾರೋ ಕೈತಪ್ಪಿ ಬಿಟ್ಟಿದ್ದಾರೆ. ಆದರೆ ಇನ್ನೊಂದು ಕೊಡವೂ ಬಿದ್ದಿತ್ತಲ್ಲ. ಎರಡನ್ನೂ ಯಾರೋ ಬೇಕು ಅಂತಲೇ ಹಾಕಿರಬೇಕು. ಸುದರ್ಶನನಿಗೆ ಈ ವಿಷಯ ಹೇಗೆ ತಿಳಿಯಿತು. ಅವನೇ ಹಾಕಿರಬೇಕು. ಅವನೇ ಹಾಕಿದ್ದರೆ ಅವನೇ ಯಾಕೆ ತೆಗೆದುಕೊಟ್ಟ. ಅವನು ತೆಗೆದುಕೊಡದೆ ಇದ್ದಿದ್ದರೆ ಅವನೇ ಹಾಕಿದ್ದ ಎಂಬುದೂ ಗೊತ್ತಾಗುತ್ತಿರಲಿಲ್ಲ.'' ಎಂದೂ ಮುಂತಾಗಿ ಮಾತನಾಡಿಕೊಳ್ಳುತ್ತಿದ್ದರು. ವಿದ್ಯಾರ್ಥಿಗಳು ಕೊಠಡಿಗಳಿಗೆ ತಮ್ಮ ತಮ್ಮ ಕೆಲಸಗಳಿಗೆ ಹೊರಟುಹೋದರು. ಸುದರ್ಶನ ಭಾವಿಯನ್ನು ನೀರು ಕುಡಿದಷ್ಟು ಸರಾಗವಾಗಿ ಇಳಿದುದರಿಂದ ಹುಡುಗರಿಗೆಲ್ಲಾ ಅವನ ಸಾಹಸವನ್ನು ಕಂಡು ಸಂತೋಷವೇ ಉಂಟಾಗಿದ್ದಿತು. ಮಲ್ಲಿಗೆಹಳ್ಳಿಯಲ್ಲಿ ನಿತ್ಯಾ ವಿನೋದಕ್ಕಾಗಿಯೇ ಭಾವಿ ಇಳಿಯುತ್ತಿದ್ದ ಸುದರ್ಶನನಿಗೆ ಅದೇನೂ ದೊಡ್ಡ ವಿಚಾರವಾಗಿ ಕಾಣಲೇ ಇಲ್ಲ.

ಏಟು ತಿಂದವನಿಗೆ ಆ ಏಟು ಎಲ್ಲಿಂದ ಬಂದಿದೆ ಎಂಬುದು—ಇತರರಿಗೆ ಗೊತ್ತಾಗದಿದ್ದರೂ—ಗೊತ್ತಾಗುತ್ತದೆ. ಸುಬ್ಬುವಿಗೆ ತಾನು ರಾತ್ರಿ ಪಟ್ಟ ಕಷ್ಟವೆಲ್ಲಾ ಮತ್ತೆ ಅನುಭವವಾಗಿ ಸುದರ್ಶನ ಬೇಕು ಎಂತಲೇ ತನ್ನನ್ನು ಹಿಂಸಿಸಲು ಈ ರೀತಿ ಮಾಡಿರುವನೆಂದು ಮೊದಲೇ ಇದ್ದ ಅನುಮಾನ ಇನ್ನೂ ದೃಢವಾಯಿತು. ಅವನಿಗೆ ಬಹಳ ಕೋಪವುಂಟಾಯಿತು. ಅದುವರೆಗೆ ಯಾವ ವಿಚಾರದಲ್ಲೂ ದೂರು ಹೇಳದಿದ್ದ ಅವನು ಹೆಡ್ಮಾಸ್ಟರಲ್ಲಿ ಹೋಗಿ ಚಾಡಿ ಹೇಳಿದನು. ಅವರು ಆ ಸಾಯಂಕಾಲ ಹಾಸ್ಟಲ್‌ಗೆ ಬಂದು ವಿಚಾರಿಸುವುದಾಗಿ ಧೈರ್ಯ ಹೇಳಿದರು. ಹತ್ತಿ ಉರಿಯುತ್ತಿದ್ದ ಸುಬ್ಬುವಿನ ಕೋಪ ಸ್ವಲ್ಪ ಶಾಂತವಾಯಿತು.

ಈ ಮಧ್ಯೆ ಅದೇ ಬೆಳಿಗ್ಗೆ ಮತ್ತೊಂದು ಸಮಾಚಾರ ನಡೆಯಿತು. ಹಾಸ್ಟೆಲಿನಲ್ಲಿ ಪ್ರತಿ ದಿನವೂ ಎರಡು ಊಟದ ಹೊರತು ಮತ್ತಾವ ತಿಂಡಿಯ ಏರ್ಪಾಡನ್ನೂ ಇಟ್ಟಿರಲಿಲ್ಲ. ಆದರೆ ಭಾನುವಾರ ಮಾತ್ರ ಮಧ್ಯಾಹ್ನದ ಊಟ ಎರಡು ಮೂರು ಗಂಟೆಗಳಾಗುತ್ತಿದ್ದುದರಿಂದ ಬೆಳಿಗ್ಗೆ ಸಾಧಾರಣವಾಗಿ ಉಪ್ಪಿಟ್ಟನ್ನು ಕೊಡುತ್ತಿದ್ದರು. ಹಾಸ್ಟಲ್ ಅಧಿಕಾರಿಗಳು ಬರಿಯ ಉಪ್ಪಿಟ್ಟನ್ನು ಕೊಡುತ್ತಿದ್ದರೇ ಹೊರತು ಅದರ ಜತೆಯಲ್ಲಿ ಕಾಫಿಯನ್ನು ಕೊಡುತ್ತಿರಲಿಲ್ಲ. ಆದರೆ ಆ ಪರಿಚಾರಕ ತನ್ನ ಸ್ವಂತ

ಖರ್ಚಿನಿಂದ ಕಾಫಿಯನ್ನು ತಯಾರಿಸಿ ಲೋಟಕ್ಕೆ ಆರುಕಾಸಿನಂತೆ ಮಾರು ತ್ತಿದ್ದನು. ಆ ಭಾನುವಾರಗಳಲ್ಲಿ ಉಪ್ಪಿಟ್ಟು ಸಿದ್ಧವಾಗುವುದಕ್ಕೆ ಹತ್ತು ಹನ್ನೊಂದು ಗಂಟೆ ಆಗುತ್ತಿದ್ದಿತು. ಅದು ಅಷ್ಟು ಸಾವಕಾಶವಾಗಿ ತಯಾ ರಾಗುವುದಕ್ಕೆ ಕಾರಣ ಪರಿಚಾರಕನ ನಿಶ್ಯಕ್ತಿಯಾಗಿರಲಿಲ್ಲ. ಆಗಿನ ಹಾಸ್ಟೆ ಲ್‌ಗೆ ಸ್ಕೂಲಿನ ಗುಮಾಸ್ತರೊಬ್ಬರನ್ನು ಮ್ಯಾನೇಜರ್‌ಆಗಿ ನಿಯಮಿಸಿ ದ್ದರು. ಅವರಿಗೆ ಹೈಸ್ಕೂಲಿನಲ್ಲಿ ಇಪ್ಪತ್ತು ರೂಪಾಯಿ ಸಂಬಳ ಬರುತ್ತಿ ದ್ದಿತು. ಅವರು ನೋಡುವುದಕ್ಕೆ ತೆಳ್ಳಗೆ ಕುಳ್ಳಗೆ ವಿಕಾರವಾಗಿ ಕಪ್ಪಾ ಗಿದ್ದರು. ಅವರ ಮನೆ ತುಂಬ ಮಕ್ಕಳು. ಸಾಲದುದಕ್ಕೆ ಮೊದಲನೆಯ ಹೆಂಡತಿಗೆ ಸ್ವಲ್ಪ ಬುದ್ಧಿ ಕೆಟ್ಟಿದೆಯೆಂದು ಎರಡನೆಯ ಹೆಂಡತಿಯನ್ನು ಮದುವೆಯಾಗಿದ್ದರು. ಇಬ್ಬರಿಗೂ ಮಕ್ಕಳುಗಳು ಆಗುತ್ತಿದ್ದುವು. ಆ ಹೆಂಡತಿ, ಮಕ್ಕಳು, ಪಾಪ ಆ ಪ್ರಾಣಿಯನ್ನು ಎಳೆದು ಕಿತ್ತು ತಿನ್ನು ತ್ತಿದ್ದರು. ಅವರಿಗೆ ಹಾಸ್ಟೆಲ್ ಮ್ಯಾನೇಜರ್ ನೆಪದಿಂದ ಏಳು ರುಪಾಯಿ ಸಂಬಳ ಬರುತ್ತಿದ್ದಿತು. ಭಾನುವಾರದ ದಿನ ಉಪ್ಪಿಟ್ಟು ಆಗುವುದಕ್ಕೆ ಹನ್ನೊಂದು ಗಂಟೆ ಆಗುತ್ತಿದ್ದುದು ಅವರಿಂದಲೇ. ಹಾಸ್ಟೆಲ್ಲಿನಲ್ಲಿ ಅಡಿಗೆಯ ಸಾಮಾನುಗಳೆಲ್ಲಾ ಮ್ಯಾನೇಜರ ವಶದಲ್ಲಿ ಉಗ್ರಾಣದ ಕೊಠಡಿಯಲ್ಲಿ ಇರುತ್ತಿದ್ದುವು. ಮ್ಯಾನೇಜರು ಮೊದಲ ರಾತ್ರಿಯೇ ಅಡಿಗೆ ಸಾಮಾನು ಗಳನ್ನು ಪರಿಚಾರಕನ ವಶಕ್ಕೆ ಕೊಡುತ್ತಿದ್ದರು. ಉಪ್ಪಿಟ್ಟಿನ ಸಾಮಾನು ಗಳನ್ನು ಶನಿವಾರ ರಾತ್ರಿಯೇ ಕೊಟ್ಟು ಹೋಗುತ್ತಿದ್ದರು. ಆದರೆ ಉಪ್ಪಿಟ್ಟಿನ ತುಪ್ಪವನ್ನುಮಾತ್ರ ಕೊಡುತ್ತಿರಲಿಲ್ಲ. ತುಪ್ಪಕ್ಕಾಗಿ ಭಾನುವಾರ ಬೆಳಗ್ಗೆ ಅವರು ಬರುವವರೆಗೆ ಹುಡುಗರೆಲ್ಲಾ ಕಾಯ್ದುಕೊಂಡಿರಬೇಕಾ ಗಿದ್ದಿತು. ಮ್ಯಾನೇಜರಿಗೂ ಭಾನುವಾರ ಹಾಸ್ಟೆಲ್‌ನಲ್ಲಿ ಉಪ್ಪಿಟ್ಟು ಬೇಕಾ ಗಿದ್ದಿತು. ಆದರೆ ಅವರು ಎದುರಿಗೆ ಇಲ್ಲದೇ ಇದ್ದರೆ ಆ ಉಪ್ಪಿಟ್ಟು, ಹುಡುಗರ ಅವಾಂತರದಲ್ಲಿ ಅವರಿಗೆ ಸಿಕ್ಕುವ ಸಂಭವವೇ ಇರಲಿಲ್ಲ. ಪರಿಚಾರಕ ಅವರಿಗೂ ಸ್ವಲ್ಪ ಉಪ್ಪಿಟ್ಟು ಇಡಬೇಕೆಂದು ಎಷ್ಟೇ ಪ್ರಯತ್ನ ಪಟ್ಟರೂ ಹುಡುಗರು ಪಾತ್ರೆಯ ಸುತ್ತ ಕುಳಿತು ಎಲ್ಲವನ್ನೂ ವಿಭಾಗಮಾಡಿ ಕೊಂಡು ತಿಂದು ಹಾಕುತ್ತಿದ್ದರು. ಪರಿಚಾರಕನಿಗೇ ಉಳಿಯುವುದು ಕಷ್ಟವಾಗುತ್ತಿದ್ದಿತು. ಮ್ಯಾನೇಜರಿಗೂ ಹಾಸ್ಟೆಲ್‌ನಲ್ಲಿ ಉಪ್ಪಿಟ್ಟು ಹೊಡೆಯಬೇಕೆಂದು ಆಸೆ. ಆದುದರಿಂದಲೇ ಅವರು ಶನಿವಾರ ರಾತ್ರಿ

ರವೆ ಕೊಟ್ಟುಹೋದರೂ, ತುಪ್ಪವನ್ನು ಭಾನುವಾರ ಬೆಳಗಿನವರೆಗೆ ಕೊಡು ತ್ತಿರಲಿಲ್ಲ. ಭಾನುವಾರ ಬೆಳಿಗ್ಗೆ ಉಪ್ಪಿಟ್ಟುಮಾಡಿ ಪರಿಚಾರಕನೂ, ಅದು ಅನ್ಯಾಯವಾಗಿ ಆರಿಹೋಗುತ್ತದೆಲ್ಲಾ ಎಂದು ಹುಡುಗರೂ ಮಿಟಮಿಟನೆ ಕಾಯುತ್ತ ಕುಳಿತಿರುವ ಹೊತ್ತಿಗೆ ಮ್ಯಾನೇಜರು ಬಂದು ತುಪ್ಪವನ್ನು ಕೊಟ್ಟು ತಮ್ಮ ಪಾಲಿನ ಉಪ್ಪಿಟ್ಟನ್ನು ತಾವು ಸ್ವೀಕರಿಸುತ್ತಿದ್ದರು.

ಸುದರ್ಶನ ಭಾವಿ ಮುಳುಗಿದ ಭಾನುವಾರ ಯಾವ ಕಾರಣ ದಿಂದಲೋ ಮ್ಯಾನೇಜರ್ ಸಾಹೇಬರು ೧೧ ಗಂಟೆಯಾದರೂ ಹಾಸ್ಟೆಲ್ಲಿಗೆ ಬರಲೇ ಇಲ್ಲ. ಆವತ್ತು ಮೋಡ ಕವಿದುಕೊಂಡು ಹವ ಸ್ವಲ್ಪ ತಣ್ಣ ಗಾಗಿತ್ತು. ಹೇಗಾದರೂ ಜಾಗ್ರತೆ ಉಪ್ಪಿಟ್ಟು ಕಾಫಿ ಹೊಡೆದುಬಿಟ್ಟರೆ ಮೈಕೈ ಬೆಚ್ಚಗಾಗುವುದೆಂದು ಹುಡುಗರ ಉತ್ಸಾಹ. ಆದರೆ ಉಪ್ಪಿಟ್ಟಿಗೆ ತುಪ್ಪವಿರಲಿಲ್ಲ. ಉಪ್ಪಿಟ್ಟು ನಿಧಾನವಾಗಿ ತಣ್ಣಗಾಗಲು ಪ್ರಾರಂಭವಾಗು ತ್ತಿದ್ದಿತು. ಹುಡುಗರಿಗೆ ಉಪ್ಪಿಟ್ಟಿಲ್ಲದೆ ಬರಿ ಕಾಫಿ ಕುಡಿಯಲು ಇಷ್ಟವಿಲ್ಲ ದುದರಿಂದ ಅದೂ ನಿಧಾನವಾಗಿ ತಣ್ಣಗಾಗ ತೊಡಗಿದ್ದಿತು. ವಿದ್ಯಾರ್ಥಿ ಗಳಿಗೆಲ್ಲಾ ಮ್ಯಾನೇಜರ ಮೇಲೆ ತುಂಬ ಸಿಟ್ಟು ಬಂದಿತು. ಹಾಸ್ಟೆಲ್ಲಿನ ಎಲ್ಲಾ ಕೊಠಡಿಗಳಿಗೂ ಒಂದೇ ವಿಧವಾದ ಬೀಗಗಳನ್ನು ಅಧಿಕಾರಿಗಳು ಕೊಟ್ಟಿದ್ದರು. ಅಂತಹ ಒಂದು ಬೀಗವನ್ನು ಸೌದೆ ಇಡುವ ಮನೆಗೆ ಹಾಕಿದ್ದರು. ಸೌದೆ ಮನೆಗೂ ಉಗ್ರಾಣಕ್ಕೂ ಮಧ್ಯೆ ಒಂದು ಗೋಡೆ ಇತ್ತು. ಅದು ಸುಮಾರಾಗಿ ಎತ್ತರವಾದ ಗೋಡೆಯೇ ಆಗಿದ್ದರೂ ಸೂರಿನವರೆಗೆ ಹೋಗಿರಲಿಲ್ಲ. ಸೌದೆ ಮನೆಯಿಂದ ಕಷ್ಟಪಟ್ಟು ಆ ಗೋಡೆ ಯನ್ನು ಹಾರಿ ಉಗ್ರಾಣಕ್ಕೆ ಹೋಗಬಹುದಾಗಿದ್ದಿತು. ಮೊದಲ ದಿನದ ರಾತ್ರಿ ತಣ್ಣೀರು ಹುಯ್ದುಕೊಂಡು ನಿದ್ರೆಕೆಟ್ಟು ಸುಬ್ಬುವಿಗೂ ರಂಗಪ್ಪ ನಿಗೂ ಮೈಕೈಯೆಲ್ಲಾ ನೋಯುತ್ತಿದ್ದಿತು. ಎಷ್ಟು ಹೊತ್ತಾದರೂ ಮ್ಯಾನೇಜರು ಬಾರದುದರಿಂದ ರಂಗಪ್ಪ ಹುಡುಗರೊಂದಿಗೆ "ನಾವೇ ಯಾಕೆ ಎಷ್ಟುಬೇಕೋ ಅಷ್ಟು ತುಪ್ಪ ತೆಗೆದುಕೊಳ್ಳಬಾರದು. ಹೇಗಿದ್ದರೂ ಡಿವೈಡಿಂಗ್ ಸಿಸ್ಟಮ್ (ಖರ್ಚು ಎಲ್ಲರಿಗೂ ಸಮವಾಗಿ ಹಂಚಿಕೆ) ನಮ್ಮ ಸಾಮಾನನ್ನು ನಾವು ತೆಗೆದುಕೊಳ್ಳುವುದರಲ್ಲಿ ತಪ್ಪೇನು? ಎಂದು ರಂಗಪ್ಪ ಸೌದೆ ಕೊಠಡಿಯ ಬಾಗಿಲು ತೆರೆದು ಸುಬ್ಬು ಉಗ್ರಾಣದೊಳಕ್ಕೆ ಹಾರಿದ. ತುಪ್ಪದ ಪಾತ್ರೆ ಹೊರಕ್ಕೆ ಬಂತು. ಹುಡುಗರೆಲ್ಲಾ ಉಪ್ಪಿಟ್ಟು ಪೂರೈಸಿ ದರು. ಮ್ಯಾನೇಜರಿಗೆ ಸ್ವಲ್ಪವೂ ಉಳಿಯಲಿಲ್ಲ.

ಮ್ಯಾನೇಜರು ಸುಮಾರು ಹನ್ನೊಂದು ಗಂಟೆಗೆ ಹಾಸ್ಟೆಲ್ಲಿಗೆ ಬಂದರು. ಪಾಪ ಮನೆಯಲ್ಲಿ ಹೆಂಡತಿಯರಿಗೆ ವ್ಯಾಜ್ಯ ಪ್ರಾರಂಭವಾಗಿ ಅದು ತೀರ್ಮಾನವಾಗದಿದ್ದರೂ ಅಷ್ಟು ಹೊತ್ತಾಗಿ ಹೋಯಿತು. ಆ ಅವಾಂತರ ದಲ್ಲಿ ಅವರಿಗೆ ಮನೆಯಲ್ಲಿ ಕಾಫಿ ತಿಂಡಿ ಮಾಡಿಕೊಡುವವರು ಯಾರು? ಹಾಸ್ಟೆಲ್ಲಿನ ಉಪ್ಪಿಟ್ಟನ್ನು ನೆನೆಸಿಕೊಂಡು ಅವರು ಬಾಯಿನೀರು ಕರೆಯುತ್ತಾ ಓಡಿ, ಓಡಿ ಬಂದರು. ತಾವು ಬರುವುದರೊಳಗೆ ಅಲ್ಲಿ ನಡೆದ ಸಮಾಚಾರ ಕೇಳಿ ಮೊದಲು ಅವರಿಗೆ ಆಶ್ಚರ್ಯವಾಯಿತು. ಅನಂತರ ತುಂಬ ಕೋಪ ಬಂತು. ತಮಗೆ ಹುಡುಗರು ಉಪ್ಪಿಟ್ಟು ಇಡದೆ ಇದ್ದುದು ಒಹು ಮಟ್ಟಿಗೆ ಅವರ ಕೋಪಕ್ಕೆ ಕಾರಣವಾಗಿದ್ದಿತು. ಅವರು ಬೀಳುವುದನ್ನೂ ಕಾಣದೆ ಓಡಿಹೋಗಿ ಹೆಡ್ಮಾಸ್ಟರೊಂದಿಗೆ "ಸ್ವಾಮಿ ಹಾಸ್ಟೆಲ್ಲಿನಲ್ಲಿ ದೊಡ್ಡ ಕಳ್ಳರ ಗುಂಪು ಒಂದು ಸೇರಿಕೊಂಡಿದೆ. ಅವರು ಬೀಗ ಒಡೆದು ಇದ್ದ ಬದ್ದ ಸಾಮಾನುಗಳನ್ನೆಲ್ಲಾ ಕದ್ದಿದ್ದಾರೆ. ಉಗ್ರಾಣದ ಸಾಮಾನುಗಳಲ್ಲಿ ಯಾವುದು ಹೆಚ್ಚು ಕಡಿಮೆ ಆದರೂ ನಾನು ಜವಾಬ್ದಾರನಲ್ಲ" ಎಂಬುದಾಗಿ ಹೇಳಿದರು. ಆ ಮಾತನ್ನು ಕೇಳಿ ಹೆಡ್ಮಾಸ್ಟರಿಗೂ ಆಶ್ಚರ್ಯವಾಯಿತು. ನಮ್ಮ ಹಾಸ್ಟೆಲ್ಲಿನಲ್ಲಿ ಅಂತಹ ಕಳ್ಳರಿದ್ದಾರೆಯೇ ಎಂದುಕೊಂಡು ಅವರು ಫಿರ್ಯಾದನ್ನು ವಿಚಾರಿಸಲು ಹಾಸ್ಟಲ್ಲಿಗೆ ಬಂದರು.

ಹೆಡ್ಮಾಸ್ಟರನ್ನು ಕಂಡರೆ ಹುಡುಗರು ಹೆದರುತ್ತಿದ್ದರೆಂದು ಹೇಳಿ ದ್ದೇವೆ. ಆಗತಾನೆ ಹಳ್ಳಿಗಳಿಂದ ಬಂದು ಸ್ಕೂಲಿಗೆ ಸೇರಿದ್ದ ಅನೇಕ ಹುಡುಗರಿಗೆ ಅವರ ಧ್ವನಿಯನ್ನು ಕೇಳಿದರೇ ನಡುಕ ಬರುತ್ತಿದ್ದಿತು. ಹೆಡ್ಮಾಸ್ಟರಿಗೆ ಶಿಸ್ತಿನಲ್ಲಿ ಬಹಳ ವಿಶ್ವಾಸ, ಇದು ಅವರ ಎಲ್ಲಾ ಕೆಲಸ ಗಳಲ್ಲಿಯೂ ಕಾಣುತ್ತಿದ್ದಿತು. ಹೆಡ್ಮಾಸ್ಟರು ಸ್ಕೂಲು ಪ್ರಾರಂಭವಾಗುವಾಗ ಎರಡು ಗಂಟೆಯನ್ನು ಹೊಡೆಸುತ್ತಿದ್ದರು. ಮೊದಲ ಗಂಟೆ ಹನ್ನೊಂದಕ್ಕೆ ಹದಿನೈದು ನಿಮಿಷ ಇರುವಾಗ ಸೇವಕ ಹೊಡೆಯುತ್ತಿದ್ದ. ಆ ಗಂಟೆ, ಚರ್ಚಿನ ಗಂಟೆಯಂತೆ ಐದು ನಿಮಿಷಕಾಲ ಒಂದೇ ಸಮನೆ ಹೊಡೆಯು ತ್ತಿದ್ದಿತು. ಎರಡನೆಯ ಗಂಟೆಯನ್ನು ಹನ್ನೊಂದಕ್ಕೆ ಸರಿಯಾಗಿ ಹೊಡೆಸು ತ್ತಿದ್ದರು. ಹನ್ನೊಂದು ಗಂಟೆಯಾದ ನಂತರ ವಿದ್ಯಾರ್ಥಿಗಳಿಗೆ ಸ್ಕೂಲಿ ನೊಳಕ್ಕೆ ಹೋಗಲು ಅವಕಾಶವಿರುತ್ತಿರಲಿಲ್ಲ. ಆದರೂ ಕೆಲವು ವಿದ್ಯಾರ್ಥಿ ಗಳು ಹೊತ್ತಾಗಿ ಬಂದರೂ ಮೆಲ್ಲಗೆ ಹಿಂದುಗಡೆಯಿಂದ ನುಗ್ಗಿ ತರಗತಿ

ಯಲ್ಲಿ ಕುಳಿತುಬಿಡುತ್ತಿದ್ದರು. ಇದು ಎಲ್ಲಾ ಸ್ಕೂಲಿನಲ್ಲಿಯೂ ಇರುವ ಮಾಮೂಲು. ಇದನ್ನು ನೋಡಿ ಹೆಡ್ಮಾಸ್ಟರು ಕಾಂಪೌಂಡಿಗೆ ಬೀಗಹಾಕಿ ಸಲು ಪ್ರಾರಂಭಿಸಿದರು. ಹಾಸನದ ಹೈಸ್ಕೂಲಿನಲ್ಲಿ ಕಾಂಪೌಂಡಿಗೆ ಬೀಗ ಪ್ರಾರಂಭವಾದುದು ಆಗಲೇ. ಅದುವರೆಗೆ ಆ ಸ್ಕೂಲು ಮುಂದಲದಾರಿ ಒಂದು ಸಾರ್ವಜನಿಕ ರಸ್ತೆಯೇ ಆಗಿದ್ದಿತು. ಆದರೆ ಸ್ಕೂಲಿಗೆ ಆಗ ಸುತ್ತ ಕಾಂಪೌಂಡು ಇರಲಿಲ್ಲ. ಮುಂದುಗಡೆ ಮಾತ್ರ ಕಾಂಪೌಂಡು ಇತ್ತು. ಸಾಧಾರಣವಾಗಿ ಹೆಡ್ಮಾಸ್ಟರು ಮೊದಲು ಸ್ಕೂಲಿಗೆ ಹನ್ನೆರಡು ಗಂಟೆಗೆ ಬರುತ್ತಿದ್ದರು. ಆದರೆ ಕಾಂಪೌಂಡಿಗೆ ಬೀಗಹಾಕಿಸಿದ ಮೇಲೆ ಕಾಂಪೌಂಡ್ ಗೋಡೆಯನ್ನು ಹಾರಿ ಬರುವ ಹುಡುಗರ ಸಂಖೆಯೂ, ಕಾಂಪೌಂಡ್ ಇಲ್ಲದ ಕಡೆ ಬಳಸಿಕೊಂಡು ಒಳಕ್ಕೆ ಬರುವ ಹುಡುಗರ ಸಂಖೆಯೂ ಹೆಚ್ಚಾಯಿತು. ಇದಕ್ಕಾಗಿ ಹೆಡ್ಮಾಸ್ಟರು ಮೊದಲನೆಯ ಪೀರಿಯಡ್ ಪಾಠ ಅರ್ಧ ಪ್ರಾರಂಭವಾಗುವವರೆಗೂ ಸ್ಕೂಲಿನ ಸುತ್ತಾ ಕಾಂಪೌಂಡಿನಲ್ಲಿ ಗಸ್ತು ಹೊಡೆಯುತ್ತಾ ಹುಡುಗರು ಗೋಡೆ ಹತ್ತಿ ಹಾರುವರೋ ಎಂದು ಕಾಯುತ್ತಿದ್ದರು. ಆಗ ಮೊದಲನೆಯ ಪಾಠ ಸಾಧಾರಣವಾಗಿ ಅನೇಕ ತರಗತಿಗಳಿಗೆ ಕನ್ನಡ ಸಂಸ್ಕೃತ ಉರ್ದು ಇರುತ್ತಿದ್ದಿತು. ಮೇಷ್ಟರುಗಳ ಪೈಕಿ ಈ ದೇಶಭಾಷಾ ಪಂಡಿತರು ಹೊಳ್ಳೆ ಹಾವುಗಳಂತೆ ಸಾಧು ಪ್ರಾಣಿಗಳು. ಅವರ ಪಾಠಗಳಿಗೆ ಸಾಧಾರಣವಾಗಿ ಹುಡುಗರು ಹೊತ್ತು ಮೀರಿಯೇ ಬರುತ್ತಿದ್ದರು. ಹೆಡ್ಮಾಸ್ಟರು ಕಾಂಪೌಂಡಿನಲ್ಲಿ ಗಸ್ತು ತಿರುಗಲು ಪ್ರಾರಂಭಿಸಿದ ಮೇಲೆ ಸ್ಕೂಲಿಗೆ ಹೊತ್ತಾಗಿ ಬರುತ್ತಿದ್ದ ಹುಡುಗರ ಸಂಖೆ ಕಡಿಮೆಯಾಯಿತು.

ಈ ಹೆಡ್ಮಾಸ್ಟರು ಸಾಧಾರಣವಾಗಿ ಹುಡುಗರಿಗೆ ಇದ್ದಕ್ಕಿದ್ದಂತೆ ಗಾಬರಿ ಹತ್ತಿಸಿ ಬಿಡುತ್ತಿದ್ದರು. ಎಲ್ಲಾ ತರಗತಿಗಳಿಗೂ ಅವರು ವಾಲ್ಟನ್ ಸಿಂತಿಸಿಸ್ ಎಂಬ ವ್ಯಾಕರಣವನ್ನು ತೆಗೆದುಕೊಳ್ಳುತ್ತಿದ್ದರಷ್ಟೆ. ಅದು ಸಾಧಾರಣವಾಗಿ ವಾರಕ್ಕೆ ಎರಡು ಪಾಠ ಬೀಳುತ್ತಿದ್ದಿತು. ಆ ಎರಡು ಪಾಠ ಎಂದರೆ ಹುಡುಗರಿಗೆ ನಡುಕ ಬರುತ್ತಿದ್ದಿತು. ಆ ಪಾಠದ ಪ್ರಾರಂಭದಲ್ಲಿ ಹೆಡ್ಮಾಸ್ಟರು ಹಾಜರಿ ಗೈರು ಹಾಜರಿ ರಿಜಸ್ಟರ್ ತರಿಸಿ ಯಾವ ವಿದ್ಯಾರ್ಥಿ ತಾವು ಹಿಂದೆ ರಿಜಸ್ಟರ್ ನೋಡಿದ ಈಚೆಗೆ ಗೈರ್‌ಹಾಜರ್ ಆಗಿದ್ದಾನೆ. ಯಾವ ಹುಡುಗ ಹೊತ್ತು ಮೀರಿ ಬಂದಿದ್ದ ಎಂದೂ

ಮುಂತಾಗಿ ವಿಚಾರಿಸಿ ಕಾರಣಗಳನ್ನು ಕೇಳುತ್ತಿದ್ದರು. ಅವರಿಗೆ ಪ್ರತ್ಯುತ್ತರವನ್ನು ಕೊಡುವಾಗ ಇಂಗ್ಲೀಷ್ ಚೆನ್ನಾಗಿ ಒರದಿದ್ದ ಹುಡುಗರು ಏನು ಹೇಳಿದರೂ ಅದು ತಪ್ಪೇ ಆಗುತ್ತಿದ್ದಿತು. ಒಬ್ಬ ವಿದ್ಯಾರ್ಥಿಯು I was sufferring from Sick (ನಾನು ರೋಗ ನರಳಿದೆ) ಎಂದರೆ ಹೆಡ್ಮಾಸ್ಟರು Is that so. Then you deserve a kick (ಹಾಗಾದರೆ ನಿನಗೆ ಒಂದು ಏಟು ಬೇಕು) ಎನ್ನುತ್ತಿದ್ದರು. ಇನ್ನೊಬ್ಬ ಗೈರು ಹಾಜರಾದ ಹುಡುಗ I was not in the station (ನಾನು ಪಟ್ಟಣದಲ್ಲಿ ಇರಲಿಲ್ಲ) ಎಂದರೆ "ಓ ನೀನೊಬ್ಬ ಸ್ಟೇಟ್ ಆಫೀಸರ್. ಡೆಪುಟಿ ಕಮೀಶನರ್. ಅಬ್ಬ, ಸ್ಟೇಷನ್. ಊರಲ್ಲಿ ಎಂಬುದಾಗಿ ಯಾಕೆ ಬಗುಳುವುದಿಲ್ಲ" ಎನ್ನುತ್ತಿದ್ದರು. ಇದರಿಂದ ಹುಡುಗರಿಗೆ ದೊಡ್ಡವರಿಗೆ ಮಾತ್ರ ಸ್ಟೇಶನ್ ಎಂದು ಹೇಳಬೇಕೇನೋ ಎಂದು ತೋರುತ್ತಿದ್ದಿತು. ಒಬ್ಬ ಹುಡುಗ ರಜಾ ತೆಗೆದುಕೊಂಡು ಹೋಗಿದ್ದನು. ರಜದಿಂದ ಬಂದನಂತರ ಹೆಡ್ಮಾಸ್ಟರು ಅವನನ್ನು "ರಜ ಅರ್ಜಿ ಒರೆಯದೆ ಹೇಗೆ ಗೈರು ಹಾಜರ್ ಆದೆ" ಎಂದು ಕೇಳಿದರು. ಹೆದರಿದ ವಿದ್ಯಾರ್ಥಿ "I asked leave in front of you" ನಾನು ನಿಮ್ಮ ಮುಂದೆ ರಜಾ ಕೇಳಿದೆ ಎಂದನು. ಹೆಡ್ಮಾಸ್ಟರು ಕೂಡಲೆ you asked in front of me ; not on my back, not on my neck ಎಂದರು. (ನನ್ನ ಮುಂದೆ ಕೇಳಿದೆ? ನನ್ನ ಬೆನ್ನಿನ ಮೇಲೆ ಅಲ್ಲ ನನ್ನ ಕತ್ತಿನ ಮೇಲೆ ಅಲ್ಲ) ಇಂಗ್ಲಿಷ್ ಒರದೆ ಇದ್ದ ಆ ಹುಡುಗರು ಪಾಪ ತಾವು ಹೇಳಿದುದರ ತಪ್ಪೇ ತಿಳಿಯದೆ ಕಣ್ಣು ಬಿಡುತ್ತಿದ್ದರು.

ಆಗ ಸರ್ಕಾರ ಕನ್ನಡದ ಮಕ್ಕಳಿಗೆ ಕನ್ನಡದಲ್ಲಿ ಪಾಠ ಹೇಳಿದರೆ ತಿಳಿಯುವುದೋ ಇಲ್ಲವೋ ಎಂಬ ವಿಚಾರದಲ್ಲಿ ಇನ್ನೂ ಚರ್ಚೆ ನಡೆಸುತ್ತಿದ್ದರು. ಸರಿಯಾದ ತೀರ್ಮಾನಕ್ಕೆ ಬಂದಿರಲಿಲ್ಲ. ಉಪಾಧ್ಯಾಯರು ಎಲ್ಲಾ ಪಾಠಗಳನ್ನೂ ಇಂಗ್ಲೀಷಿನಲ್ಲಿಯೇ ಹೇಳುತ್ತಿದ್ದರು. ಅವರು ಇಂಗ್ಲೀಷಿನಲ್ಲಿ ಪಾಠಗಳನ್ನು ನಿಷ್ಕೃಷ್ಟವಾಗಿ ಹೇಳುತ್ತಿದ್ದರೆಂದು ಹೇಳಲು ಸಾಧ್ಯವಿಲ್ಲ. ಮಾಳವೀಯ ಮಹಾತ್ಮಾ ಗಾಂಧಿ ಮುಂತಾದ 40—50 ವರುಷ ಇಂಗ್ಲೀಷ್ ಉಪಯೋಗಿಸಿದವರೆಲ್ಲಾ ಇಂದಿಗೂ ಕೂಡ ನಾವು ಹೇಳುವ ಅರ್ಥಕ್ಕೂ ಇಂಗ್ಲೀಷಿನಲ್ಲಿ ಇರುವ ಪದಕ್ಕೂ ಹೆಚ್ಚು ಕಡಿಮೆ

ಆಗುತ್ತದೆ ಎನ್ನುವಾಗ ಆ ಬಡಪಾಯಿ ಉಪಾಧ್ಯಾಯರು, ಅವರಿಗಿಂತ ಬಡಪಾಯಿಗಳಾದ 10-12 ವರುಷದ ಹುಡುಗರಿಗೆ ಇಂಗ್ಲೀಷಿನಲ್ಲಿ ತಿಳಿಯು ವಂತೆ ಪಾಠ ಹೇಳುತ್ತಿದ್ದರೆಂಬ ಮಾತು ಕೇವಲ ಅಸಂಭವ. ಹುಡುಗರಿಗೆ ಆ ವಿಚಾರಗಳು ಖಂಡಿತ ತಿಳಿಯುತ್ತಿರಲಿಲ್ಲ. ಮೊದಲನೆಯದು ವಿಷಯವೇ ಹೊಸದು. ವಿಷಯಗಳನ್ನು ತಿಳಿಯುವುದೇ ಕಷ್ಟ. ಅದರ ಜತೆಗೆ ಭಾಷೆ ಒಂದು ಕಡೆ ಕಷ್ಟ. ಹೀಗಾಗಿ ಹುಡುಗರು ಉರು ಹಾಕುವುದು ಒಂದನ್ನು ಮಾತ್ರ ಕಲಿತಿದ್ದರು. ನಮ್ಮ ದೇಶದಲ್ಲಿ ಲೋವರ್ ಸೆಕಂಡರಿ ಯಂತಹ ಸಣ್ಣ 8-10 ವಯಸ್ಸಿನ ಬಾಲಕರ ಪರೀಕ್ಷೆಗಳಲ್ಲಿಯೂ ಇಂದಿಗೂ ಇಂಗ್ಲೀ ಷಿಗೆ ಮೊದಲನೆಯ ಸ್ಥಾನ. ಇಂಗ್ಲೀಷು ಪ್ರಥಮಭಾಷೆ. ಕನ್ನಡ ದ್ವಿತೀಯ ಭಾಷೆ. ಆ ಪರಭಾಷೆಯಾದ ಪ್ರಥಮ ಭಾಷೆಯಲ್ಲಿ, ತೇರ್ಗಡೆಯಾಗು ವುದಕ್ಕೆ ನೂರಕ್ಕೆ 40 ನಂಬರು ಬರಬೇಕು. ಆದರೆ ಕನ್ನಡದಲ್ಲಿ 35 ಬಂದರೆ ಸಾಕು. ಈ ಅಸ್ವಾಭಾವಿಕ ಪರಿಸ್ಥಿತಿ ಜಗತ್ತಿನಲ್ಲಿ ಮತ್ತೆಲ್ಲಿಯೂ ಇಲ್ಲ.

ಒಂದೊಂದು ಸಲ ಹುಡುಗರು ಯಾವುದನ್ನು ಮಾಡಿದರೂ ಹೆಡ್ಮಾ ಸ್ಟರಿಗೆ ತಪ್ಪೇ ಆಗಿ ತೋರುತ್ತಿದ್ದಿತು ಹುಡುಗರು ಅವರ ಎದುರಿಗೆ ಬಂದರೆ "you have got the audacity to trespass me (ನನ್ನ ಎದುರಿಗೆ ಬರುವ ಧೈರ್ಯ ನಿನಗೆ ಇದೆಯೋ) ಎನ್ನುತ್ತಿದ್ದರು. ಅವರು ದೂರದಲ್ಲಿ ಬರುತ್ತಿರುವುದನ್ನು ಕಂಡು ಹುಡುಗರು ಅಡ್ಡದಾರಿ ಹಿಡಿದು ಹೋದರೆ "ಕೆಲವು ವಿದ್ಯಾರ್ಥಿಗಳಿಗೆ ನನಗೆ ನಮಸ್ಕಾರ ಮಾಡಲು ಬೇಕಿಲ್ಲ. ಅದಕ್ಕೇ ಅಡ್ಡದಾರಿ ಹಿಡಿಯುತ್ತಾರೆ" ಎನ್ನುತ್ತಿದ್ದರು. ಒಂದೇ ಕೈ ಎತ್ತಿ ಸಲಾಮು ಮಾಡಿದರೆ "ಹುಡುಗರಿಗೆ ಎರಡು ಕೈ ಜೋಡಿಸಿ ನಮಸ್ಕಾರ ಮಾಡುವುದಕ್ಕೂ ಸೋಮಾರಿತನ" ಎನ್ನುವರು. ಎರಡು ಕೈಗಳನ್ನೂ ಮುಗಿದು ನಮಸ್ಕಾರ ಮಾಡಿದರೆ you must salute me in a disciplinary way. This is a clumsy farce (ನೀವು ಸರಿಯಾದ ಶಿಸ್ತಿನಿಂದ ನನ್ನನ್ನು ನಮಸ್ಕರಿಸಬೇಕು. ಇದು ಶಿಸ್ತು ಅಲ್ಲ ನಟನೆ) ಎನ್ನುವರು. Good-after-noon (ಮಧ್ಯಾಹ್ನದ ನಮಸ್ಕಾರ) ಎಂದು ಅವರಿಗೆ ಯಾರಾದರೂ ನಮಸ್ಕಾರ ಮಾಡಿದರೆ ತನ್ನನ್ನು ಅವಮಾನ ಮಾಡಲು ಹೀಗೆ ಮಾಡುತ್ತಾನೆಂದು ಅವರು ಖಂಡಿತ ವಾಗಿ ನಂಬುತ್ತಿದ್ದರು.

೪ನೇ ಫಾರಂಗೆ ಹತ್ತು ಹನ್ನೊಂದು ವಯಸ್ಸಿನ ಹುಡುಗರೆಲ್ಲಾ ಬಂದು ಬಿಡುತ್ತಾರೆ. ಮದುವೆ ಯಾದವರೂ ಬಂದಿರುತ್ತಾರೆಂಬುದು ಮತ್ತೊಂದು ವಿಚಾರ. ಆ ಹುಡುಗರು ಸ್ಕೂಲಿನಲ್ಲಿ ಆಗಾಗ್ಗೆ ಗುಲ್ಲು ಎಬ್ಬಿಸಿ ಬಿಡುತ್ತಿದ್ದರು. ಹೆಡ್ಮಾಸ್ಟರು (ನಿಮ್ಮನ್ನು ತಡೆಯುವುದಕ್ಕೆ ನಿಮ್ಮ ತಾಯಿ ತಂದೆಗಳಿಗೆ ಸಾಧ್ಯವಿಲ್ಲ. ತಿಂಗಳಿಗೆ ಮೂರು ರೂಪಾಯಿ ಕೊಟ್ಟು ಬಿಟ್ಟರೆ ನಿಮ್ಮ ಅವಾಂತರ ಅವರಿಗೆ ಕಡಿಮೆಯಾಗುತ್ತದೆ. ಈ ದೊಡ್ಡೀಲಿ ನಿಮ್ಮನ್ನು ಸೇರಿಸಿಬಿಡಬಹುದು. ನಿಮ್ಮನ್ನು ಕಾಯುವುದು ಅನಂತರ ನಮ್ಮ ಕೆಲಸವಾಗುತ್ತೆ) ಎಂದೂ ಮುಂತಾಗಿ ಕೂಗಾಡುತ್ತಿದ್ದರು. ಹೆಡ್ಮಾಸ್ಟರು ಸಿಟ್ಟು ಬಂದಾಗ ಹುಡುಗರಿಗೆ ನಿತ್ಯಾ ಜುಲ್ಮಾನೆ ಹಾಕುತ್ತಿದ್ದರು. ಆದರೆ ಸಮಾಧಾನವಾದಮೇಲೆ ಆ ಜುಲ್ಮಾನೆಯನ್ನು ವಜಾ ಮಾಡುತ್ತಿದ್ದರು. ಆದುದರಿಂದ ಕೆಲವು ವಿದ್ಯಾರ್ಥಿಗಳು (I have fined you four annas. If you do not pay I will excuse you ನಿಮಗೆ ನಾಲ್ಕು ಆಣೆ ಜುಲ್ಮಾನೆ ಹಾಕಿದ್ದೇನೆ, ಕೊಡದಿದ್ದರೆ ಕ್ಷಮಿಸುತ್ತೇನೆ) ಎಂಬುದಾಗಿ ಹಾಸ್ಯ ಮಾಡುತ್ತಿದ್ದರು.

ಉಪ್ಪಿಟ್ಟಿಗಾಗಿ ತುಪ್ಪದ ಕಳವು ನಡೆದ ದಿನ ಹೆಡ್ಮಾಸ್ಟರು ಹುಡುಗರನ್ನೆಲ್ಲಾ ಕರೆಸಿ "ಬೀಗ ಒಡೆದವರು ? ಯಾರು ಖಂಡಿತ ಹೇಳಿಬಿಡಿ" ಎಂದರು. ರಂಗಪ್ಪ ಆಗ ನೀರಿನ ಮನೆಯಲ್ಲಿ ಸ್ನಾನಮಾಡುತ್ತಿದ್ದವನು. ಒದ್ದೆ ಚೌಕವನ್ನು ಸುತ್ತಿಕೊಂಡೇ, ಹೆಡ್ಮಾಸ್ಟರು ಕರೆಯುತ್ತಾರೆ ಎಂದ ಕೂಡಲೇ ಒದ್ದೆ ಮೈನಲ್ಲಿಯೇ ಕೊಟಡಿಗೆ ಬಂದು ಬಿಟ್ಟನು. ಹೆಡ್ಮಾಸ್ಟರು ಕರೆಯುತ್ತಾರೆ ಎಂದರೆ ಹುಡುಗರಿಗೆ ಅಷ್ಟು ಭಯವಿದ್ದಿತು. ರಂಗಪ್ಪನ ವೇಷವನ್ನು ನೋಡಿ ಹೆಡ್ಮಾಸ್ಟರಿಗೆ ನಗು ಬಂದಿತು. ಹೆಡ್ಮಾಸ್ಟರು ಬರುವುದಕ್ಕೆ ಮುಂಚೆ ಹುಡುಗರು "ನಾವೆಲ್ಲಾ ಸೇರಿ ಒಡೆದೆವು. ಇದರಲ್ಲಿ ತಪ್ಪು ಯಾರದೂ ಇಲ್ಲ. ಮಾಡಿದರೆ ಎಲ್ಲರಿಗೂ ಶಿಕ್ಷೆ ಮಾಡಬೇಕು', ಎಂದೂ ಮುಂತಾಗಿ ಹೇಳುತ್ತಿದ್ದವರು ಹೆಡ್ಮಾಸ್ಟರನ್ನು ಕಂಡಕೂಡಲೆ ತೆಪ್ಪಗಾದರು. ಹೆಡ್ಮಾಸ್ಟರು ಹುಡುಗರನ್ನೆಲ್ಲಾ ಸಾಲಾಗಿ ನಿಲ್ಲಿಸಿ ಒಂದು ಕಡೆಯಿಂದ "ನೀನು ಬೀಗ ಒಡೆದೆಯಾ, ನೀನು ಬೀಗ ಒಡೆದೆಯಾ" ಎಂಬುದಾಗಿ ಕೇಳಲು ಪ್ರಾರಂಭಿಸಿದರು. ಒಬ್ಬೊಬ್ಬ ಹುಡುಗನೂ ತನ್ನ ತನ್ನ ಸರದಿ ಬಂದಾಗ ಇಲ್ಲ ಎಂದು ಹೇಳಿಬಿಟ್ಟನು. ಅವರಿಗೆ ಬೀಗ.

ಒಡೆಯುವುದಕ್ಕೆ ತಾವೆಲ್ಲಾ ಸಹಾಯಕರಾದರೂ, ತಾವೇ ಬೀಗವನ್ನು ಒಡೆಯಲಿಲ್ಲವಲ್ಲ ಎಂಬ ಭಾವನೆ. ಜತೆಗೆ ಭಯ. ಹೆಡ್ಮಾಸ್ಟರು ಹೀಗೆ ಒಂದು ಕಡೆಯಿಂದ ಕೇಳುತ್ತಿರುವಾಗ ರಂಗಪ್ಪನ ಮೈ ಬೆವರಲು ಪ್ರಾರಂಭಿಸಿತು. ಕೈಕಾಲು ನಡುಗಿತು. ಎದೆ ಡವ ಡವ ಎನ್ನತೊಡಗಿತು. ಅಪಾಯವು ನಿಧಾನವಾಗಿ ಅವನ ಕಡೆಗೆ ಕೈಚಾಚಿಕೊಂಡು ಒಬ್ಬನಾದ ಮೇಲೆ ಒಬ್ಬನನ್ನು ಬಿಟ್ಟು ಅವನನ್ನೇ ಕುರಿತು ಬರುತ್ತಿದ್ದಿತು. ರಂಗಪ್ಪನಿಗೆ "ನಾನೇ ಬೀಗವನ್ನು ತೆಗೆದೆ ! ಅಂತ ಹೆಡ್ಮಾಸ್ಟರಿಗೆ ತಿಳಿದಿದೆ. ಆದರೆ ಬೇಕು ಅಂತಲೆ ನೆಪಮಾತ್ರಕ್ಕೆ ಹೀಗೆ ಎಲ್ಲರನ್ನೂ ಕೇಳಿಕೊಂಡು ಬರುತ್ತಿದ್ದಾರೆ" ಎನ್ನಿಸಿತು. ಅವನ ಆಶೋತ್ತರಗಳಿಗೆಲ್ಲಾ ಅಲ್ಲೇ ತಿಲಾಂಜಲಿಯನ್ನು ಕೊಟ್ಟಂತೆ ಆಯಿತು. ಬಿ.ಎ. ಪ್ಯಾಸು ಮಾಡಬೇಕು. ನಮ್ಮ ತಾಲ್ಲೂಕಿನಲ್ಲಿ ದೊಡ್ಡ ಹುದ್ದೆದಾರನಾಗಬೇಕು, ಎಂಬ ಅವನ ಆಸೆಗಳು ಮಣ್ಣುಪಾಲಾದವು. ರಂಗಪ್ಪನಿಂದ ಹಿಂದಲ ಐದನೆಯ ಹುಡುಗನನ್ನು ವಿಚಾರಿಸುವಾಗಲೇ ರಂಗಪ್ಪನ ನಾಲಿಗೆ ಮೇಲು ತುಟಿಗೆ ಅಂಟಿಕೊಂಡಿತು. ರಂಗಪ್ಪನ ಹಿಂದಲವನ ವಿಚಾರಣೆ ನಡೆಯುತ್ತಿರುವಾಗಲೇ ರಂಗಪ್ಪನಿಂದ ಮುಂದೆ ಇದ್ದ ಸುದರ್ಶನನು "ನಾನೇ ಸಾರ್ ಬೀಗ ತೆಗೆದವನು" ಎಂದನು. ಹೆಡ್ಮಾಸ್ಟರು ಕೂಡಲೆ ಹಗ್ಗದಿಂದ ಎಳೆಯಲ್ಪಟ್ಟವರಂತೆ ಅವನ ಕಡೆ ತಿರುಗಿದರು. ಉಳಿದ ಹುಡುಗರೂ ಬೆಚ್ಚಿಬಿದ್ದು ಸುದರ್ಶನನ ಕಡೆಯೇ ದುರದುರನೆ ನೋಡತೊಡಗಿದರು. ಹೆಡ್ಮಾಸ್ಟರು "ನಾಳೆ ಹನ್ನೊಂದು ಗಂಟೆಗೆ ನನ್ನ ಆಫೀಸಿಗೆ ಬಾ" ಎಂದು ಹೇಳಿ ಮನೆಗೆ ಹೋದರು.

ಮರುದಿವಸ ಹೆಡ್ಮಾಸ್ಟರು ಸುದರ್ಶನನಿಗೆ ಹನ್ನೊಂದು ಗಂಟೆಗೆ ಹೇಳಿಕಳುಹಿಸಲಿಲ್ಲ. ಆ ದಿನ ಮಧ್ಯಾಹ್ನ ವಾಲ್ಟನ್ ಸಿಂತಿಸಿಸ್ ಪಾಠ ಇತ್ತು. ಹೆಡ್ಮಾಸ್ಟರ ಭಯದಿಂದ, ಉತ್ತರ ತಿಳಿದಿದ್ದರೂ ಹುಡುಗರ ಬಾಯಿನಿಂದ ಉತ್ತರ ಹೊರಡುತ್ತಿರಲಿಲ್ಲ. ಆದರೆ ಸುದರ್ಶನನು ಸಾಧಾರಣವಾಗಿ ಹೆಡ್ಮಾಸ್ಟರು ಕೇಳಿದ ಪ್ರಶ್ನೆಗಳಿಗೆ ಉತ್ತರಕೊಡುತ್ತಿದ್ದನು. ಅವನು ಆಯಾ ಪಾಠದ ಉತ್ತರಗಳನ್ನು ಉತ್ತರದ ಪುಸ್ತಕದಲ್ಲಿ (Key) ನೋಡಿಕೊಂಡು ಒಂದು ಕಾಗದದಲ್ಲಿ ಬರೆದು ಅದನ್ನು ತನ್ನ ಮುಂದೆ ಕುಳಿತಿದ್ದ ವಿದ್ಯಾರ್ಥಿಯ ಬೆನ್ನಿಗೆ ಅಂಟಿಸಿರುತ್ತಿದ್ದನು. ಹೆಡ್ಮಾಸ್ಟರು ಪ್ರಶ್ನೆ

ಕೇಳಿದ ಕೂಡಲೆ ಸುದರ್ಶನ ಎದ್ದು ನಿಂತುಕೊಂಡು ಅವರ ಮುಖವನ್ನು ನೋಡುವ ಬದಲು ಮುಂದಲ ವಿದ್ಯಾರ್ಥಿಯ ಬೆನ್ನನ್ನು ನೋಡಿಕೊಂಡು ಸರಿಯಾದ ಉತ್ತರವನ್ನು ಹೇಳುತ್ತಿದ್ದನು. ಆ ದಿನ ಸುದರ್ಶನನ ಬೆಂಚಿನ ಕೊನೆಯಲ್ಲಿದ್ದ ರಂಗಸ್ವಾಮಿಯನ್ನು ಹೆಡ್‌ಮಾಸ್ಟರು ಪ್ರಶ್ನೆ ಕೇಳಿದ ಕೂಡಲೆ ರಂಗಸ್ವಾಮಿ ಕತ್ತನ್ನು ಒಂಟೆಯಂತೆ ಚಾಗಿಸಿ ಸುದರ್ಶನನ ಮುಂದಲ ಹುಡುಗನ ಬೆನ್ನನ್ನು ಹುಡುಕತೊಡಗಿದನು. ವಿದ್ಯಾರ್ಥಿ ತನ್ನ ಕಡೆ ನೋಡದೆ ಎಲ್ಲೋ ನೋಡುತ್ತಿದ್ದುದರಿಂದ ಹೆಡ್ಮಾಸ್ಟರು "ಎಲ್ಲಿ ನೋಡುತ್ತಿ" ಎಂದು ಗದರಿಸಿದರು. ಅನಂತರ ತಮ್ಮ ಆಸನವನ್ನು ಬಿಟ್ಟು ರಂಗಸ್ವಾಮಿಯು ಕುಳಿತಿದ್ದ ಬೆಂಚಿನ ಬಳಿಗೆ ಬಂದರು. ಮುಂದೆ ಕುಳಿತಿದ್ದ ನರಸಿಂಹಸ್ವಾಮಿಯ ಬೆನ್ನಿಗೆ ಗುಂಡುಸೂಜಿಯಿಂದ ಅಂಟಿಸಿದ್ದ ಉತ್ತರದ ಕಾಗದ ಅವರ ಕಣ್ಣಿಗೆ ಬಿದ್ದಿತು. ಸುದರ್ಶನನ ಮೇಲೆ ಅಪಾದನೆ ಸ್ಥಿರವಾಯಿತು. ಹೆಡ್ಮಾಸ್ಟರು "ನಾನು ಕೇಳಿದ ಪ್ರಶ್ನೆಗೆ ನೀನ ನಿತ್ಯಾ ಜವಾಬುಕೊಡುವುದು ಹೀಗೆಯೋ. ಆಗಲಿ ವಿರಾಮದಲ್ಲಿ ನನ್ನ ಆಫೀಸಿಗೆ ಬಾ. ನಿನಗೆ ಬುದ್ಧಿ ಕಲಿಸುತ್ತೇನೆ" ಎಂದು ಹೇಳಿ ಪಾಠವನ್ನು ಮುಂದುವರಿಸಿದರು.

ಸುದರ್ಶನನಿಗೆ, ವಾಲ್ಟನ್ ಸಿಂತಿಸಿಸ್‌ನಲ್ಲಿ ಪಾಠ ತಿಳಿಯದಿದ್ದರೂ ಗಣಿತ ಎಂದರೆ ತಲೆನೋವೇ ಆಗಿದ್ದರೂ ಕನ್ನಡ ವಾಕ್ಯರಚನೆಯಲ್ಲಿ ಒಳ್ಳೆಯ ನಂಬರು ಬರುತ್ತಿದ್ದಿತು. ಆ ವಿಷಯ ಕನ್ನಡ ಪಂಡಿತರಿಗೆ ಮೊದಲನೆಯ ಪಾಠದ ದಿನವೇ ಗೊತ್ತಾಯಿತು. ಯಾಕೆಂದರೆ ಆ ದಿನ ಕನ್ನಡದ ಪಂಡಿತರು ಬೇರೆ ಬೇರೆ ಕಡೆಗಳಿಂದ ಬಂದಿರುವ ಈ ಹುಡುಗರ ಯೋಗ್ಯತೆ ನೋಡೋಣ ಎಂದುಕೊಂಡು "ಊರ ಮಧ್ಯ ಒಂದು ಗಡಿಯಾರವನ್ನು ಇಟ್ಟಿದ್ದರೆ ಅದರಿಂದಾಗುವ ಪ್ರಯೋಜನವೇನು? ಈ ವಿಷಯದ ಮೇಲೆ ಒಂದು ವಾಕ್ಯರಚನೆ ಬರೆಯಿರಿ" ಎಂಬುದಾಗಿ ಹೇಳಿದರು. ಸುದರ್ಶನ ಓದಿದ್ದ ಪ್ರಬಂಧಮಂಜರಿಯಲ್ಲಿಯೂ, ಎಲ್ಲಿಯೂ ಈ ತರಹದ ವಾಕ್ಯರಚನೆ ಇರಲಿಲ್ಲ. "ಈ ಹಾಳು ಮೇಷ್ಟರುಗಳೇ ಇಷ್ಟು. ಇವರು ಕೊಡೋ ಪ್ರಶ್ನೆಗಳಿಗೆ ಉತ್ತರ ಇವರಿಗೇ ತಿಳಿಯಬೇಕು. ಹುಡುಗರನ್ನು ಮೋಸಮಾಡುವುದಕ್ಕೇ ಇವರು ಈ ತೆರದ ಪ್ರಶ್ನೆಗಳನ್ನು ಕೊಡುತ್ತಾರೆ ಎಂದುಕೊಂಡು ಸುದರ್ಶನ ತನಗೆ ತಿಳಿದಿದ್ದ ನಾಲ್ಕು ವಾಕ್ಯಗಳನ್ನು ಬರೆದಿದ್ದನು. ಸುದರ್ಶನ

ನಿಗೆ ತಾನು ಓದಿದ್ದುದೂ ಓದದುದೂ ಎರಡೂ ಒಂದೇ ಆಗಿತ್ತು. ಅವನು ಮೂರು ನಾಲ್ಕು ಪುಟ, ಬಾಯಿಗೆ ಬಂದುದನ್ನು ಬರುಡೆ ಬಿಟ್ಟನು. ಕನ್ನಡ ಪಂಡಿತರಿಗೆ ಅವನ ವಾಕ್ಯರಚನೆ ಬಹಳ ಚೆನ್ನಾಗಿಯೇ ತೋರಿತು. ಅವರು ಅದನ್ನು ತರಗತಿಯ ವಿದ್ಯಾರ್ಥಿಗಳಿಗೆ ಓದಿ ಹೇಳಿ ದರು. ಅಂದಿನಿಂದ ಕನ್ನಡ ಪಂಡಿತರಿಗೆ ಸುದರ್ಶನನಲ್ಲಿ ವಿಶ್ವಾಸ ಹೆಚ್ಚಾ ಯಿತು. ಆದರೆ ಯಾವ ಪಂಡಿತರೂ ತೋರಿಸುತ್ತಿದ್ದ ವಿಶ್ವಾಸದಿಂದಲೂ ಅವನ ಚೇಷ್ಟೆಯ ಸ್ವಭಾವ ಕಡಿಮೆಯಾಗಲಿಲ್ಲ. ಹಾಸನ್ ಹೈಸ್ಕೂಲಿನ ಪಂಡಿತರು ಬಹಳ ಸಾತ್ವಿಕರಾಗಿದ್ದರು. ಅದರಿಂದ ಅವರಿಗೆ ಸ್ಕೂಲಿನಲ್ಲಿ ವಿದ್ಯಾರ್ಥಿಗಳು ಹೆಚ್ಚು ಗೌರವವನ್ನು ತೋರಿಸುತ್ತಿರಲಿಲ್ಲ. ಭಯಪಡು ತ್ತಿರಲಿಲ್ಲ. ಅವರು ಇತರ ಇಂಗ್ಲೀಷ್ ಮೇಷ್ಟರುಗಳಂತೆ ವಿದ್ಯಾರ್ಥಿಗಳಿಗೆ ಜುಲ್ಮಾನೆ, ರಿಜಿಸ್ಟರಿನಲ್ಲಿ ಗೈರುಹಾಜರಿ, ಪರೀಕ್ಷೆಯಲ್ಲಿ ಬರೆ, ಹೆಡ್ಮಾಸ್ಟರಿಗೆ ಚಾಡಿ, ಇವುಗಳಲ್ಲಿ ತೊಡಗಿರಲಿಲ್ಲ. ಆ ಕಾರಣದಿಂದ ಹುಡುಗರು ಯಾವ ಕೂಲಿ ಮಠದಲ್ಲಿಯೂ ಮಾಡದಷ್ಟು ಗದ್ದಲಮಾಡುತ್ತಿದ್ದರು. ಆ ಪಂಡಿ ತರು ಸಾಧಾರಣವಾಗಿ ಬನಿಯನ್ನು ಅಥವಾ ಶರಟು ಹಾಕಿಕೊಳ್ಳುತ್ತಿರ ಲಿಲ್ಲ, ಆದರೆ ಕೋಟು ರುಮಾಲು ಮಾತ್ರ ಹಾಕಿಕೊಳ್ಳುತ್ತಿದ್ದರು. ಕೋಟಿನ ಒಳಗಡೆ ತಮ್ಮ ಉಡುವ ಪಂಚೆಯನ್ನು ಎದೆಗೆ ಕಟ್ಟಿಕೊಂಡು ಅದರ ಮೇಲೆ ಕೋಟು ಹಾಕಿಕೊಳ್ಳುತ್ತಿದ್ದರು. ಆ ಒಳಗೆ ಪಂಚೆ ಕಟ್ಟಿ ಕೊಂಡಿರುವುದು ಇತರರಿಗೆ ತಿಳಿಯಬಾರದೆಂದು ಪಂಡಿತರ ಆಸೆ. ಆದರೆ ಆ ಪಂಚೆಯ ಕೆಂಪು ಕಂಬಿ ಹೇಗಾದರೂ ಕತ್ತಿನ ಹತ್ತಿರ ಕೋಟಿನ ಸಂದಿ ಯಲ್ಲಿ ಇಣಕುತ್ತಿದ್ದಿತು. ಸುದರ್ಶನನು ಅವರ ಹತ್ತಿರ ನೋಡಿ "ಏನು ಸಾರ್ ಕತ್ತಿನ ಹತ್ತಿರ ಕೆಂಪು ಕಂಬಿ ಕಾಣುತ್ತದೆ" ಎನ್ನುತ್ತಿದ್ದನು. ಹುಡುಗರು ಗೊಳ್ಳೆಂದು ನಗುತ್ತಿದ್ದರು. ಒಂದು ನಿಮಿಷ ಬಿಟ್ಟು ಪಂಡಿ ತರೂ ನಕ್ಕುಬಿಡುತ್ತಿದ್ದರು. ಕನ್ನಡಪಂಡಿತರ ತರಗತಿಯಿಂದ ಮೂರು ಫರ್ಲಾಂಗ್ ವರೆಗೆ ಹುಡುಗರ ಗದ್ದಲ ಸಮುದ್ರದ ಗರ್ಜನೆಯಂತೆ ಅವಿ ಚ್ಛಿನ್ನವಾಗಿ ಕೇಳುತ್ತಲೇ ಇದ್ದಿತು.

ಆ ದಿವಸ ಪಂಡಿತರ ತರಗತಿಯಲ್ಲಿ ನಿತ್ಯಕ್ಕಿಂತ ಗದ್ದಲ ಹೆಚ್ಚಾಗಿ ದ್ದಿತು. ಹೆಡ್ಮಾಸ್ಟರು ಇಲ್ಲದುದರಿಂದ ಹುಡುಗರು ಬೋನಿನಿಂದ ಹೊರಕ್ಕೆ ಬಂದ ತೋಳಗಳಂತೆ ಅವಾಂತರ ಮಾಡತೊಡಗಿದರು. ಆ ದಿನ ಸುದ

ರ್ಶನನು ನಿಜವಾಗಿಯೂ ಹೆಚ್ಚು ಗಲಾಟೆಮಾಡಿರಲಿಲ್ಲ. ಮೊದಲ ದಿನದ ತನ್ನ ಮೇಲೆ ಬಂದಿದ್ದ ತಪ್ಪುಗಳನ್ನು ಅವನು ನೆನಸಿಕೊಂಡು ಸ್ವಲ್ಪ ಸಾಧುವಾಗಿಯೇ ಇದ್ದನು. ಅವನಂತಹ ಆಶಾವಾದಿಗೂ ಸಹ ತನ್ನ ವಿರೋಧವಾಗಿ ನಡೆದಿದ್ದ ಸಂಗತಿಗಳಿಂದ ಗಾಬರಿಯಾಗಿದ್ದಿತು. ಅವನು ಯೋಚಿಸುತ್ತಾ ಹಿಂದಲ ಬೆಂಚಿನ ಮೇಲೆ ಕುಳಿತಿದ್ದನು. ಪಂಡಿತರ ತರಗತಿಗಳಲ್ಲಿ ಹಿಂದಲ ಬೆಂಚುಗಳಲ್ಲಿ ಕುಳಿತಿರುವ ಹುಡುಗರೇ ಗಲಾಟೆ ಮಾಡುವ ಹುಡುಗರೆಂಬುದು ಪಂಡಿತರ ಅಭಿಪ್ರಾಯ. ಪಾಠದಲ್ಲಿ ಶ್ರದ್ಧೆಯಿದೆಯೆಂದು ನಟಿಸುವ ಹುಡುಗರು ಎಂದಿಗೂ ಹಿಂದಲ ಬೆಂಚುಗಳಲ್ಲಿ ಕೂರುವುದಿಲ್ಲ. ಆ ದಿನ ತರಗತಿಯುಲ್ಲಿ ಅಷ್ಟೊಂದು ಗದ್ದಲವಾದುದನ್ನು ಕಂಡು ಪಂಡಿತರು ಹಿಂದಲ ಬೆಂಚಿನಲ್ಲಿ ಕುಳಿತಿದ್ದ ಸುದರ್ಶನನನ್ನು "ನಿನ್ನಿಂದ ನನಗೆ ಪಾಠ ಹೇಳಲು ಸಾಧ್ಯವೇ ಇಲ್ಲ. ನೀನು ಯಾವ ರಾವಣನ ವಂಶದಲ್ಲಿ ಹುಟ್ಟಿದೆಯೊ. ಹೊರಕ್ಕೆ ಹೋಗು" ಎಂಬುದಾಗಿ ಕಳುಹಿಸಿಬಿಟ್ಟರು.

ತರಗತಿಯಿಂದ ಹೊರಕ್ಕೆ ಒಂದನಂತರ ಸುದರ್ಶನನಿಗೆ ಮುಂದಲ ಪಾಠ ಪ್ರಾರಂಭವಾಗುವವರೆಗೆ ನಿಲ್ಲಲು ಸ್ಥಳವಿರಲಿಲ್ಲ. ಆಗ ಹಾಸನದ ಹೈಸ್ಕೂಲಿನಲ್ಲಿ ಕ್ಲಾಸ್ ರೂಮುಗಳ ಹೊರತು ಮೇಷ್ಟರಿಗೇ ನಿಲ್ಲಲು ಸ್ಥಳವಿರಲಿಲ್ಲ. ಸ್ಕೂಲಿನ ಹೊರಗೆ ನಿಂತಿರುವುದಕ್ಕೆ ಸುದರ್ಶನನಿಗೆ ನಾಚಿಕೆಯಾಗಿದ್ದಿತು. ಅಲ್ಲದೆ ಹೆಡ್ಮಾಸ್ಟರು ಎಲ್ಲಿಯಾದರೂ ಬಂದು ಕಂಡಾರು ಎಂಬುದೂ ಭಯ. ಹುಡುಗರು ಮರಗೆಲಸ ಮಾಡುತ್ತಿದ್ದ "ಸ್ಲಾಯಿಡ್ ರೂಮು" ಖಾಲಿಯಿದ್ದಿತು. ಅಲ್ಲಿ ಉದ್ದಕ್ಕೂ ಮರಗೆಲಸಕ್ಕೆ ಬೇಕಾದ ಸಾಮಾನುಗಳನ್ನೆಲ್ಲಾ ಸಿಕ್ಕಿಸಿದ್ದ ಮೇಜುಗಳು ಇದ್ದವು. ಅಲ್ಲಿಗೆ ಯಾವ ಹುಡುಗರೂ ಮೇಷ್ಟರೂ ಬರುವ ಭಯವಿರಲಿಲ್ಲ. ಕನ್ನಡ ಪಾಠ ಮುಗಿಯುವವರೆಗೆ ಆ ಕೊಠಡಿಯಲ್ಲಿ ಕುಳಿತಿದ್ದರೆ ಎಲ್ಲಾ ಸರಿಹೋಗುತ್ತೆ ಎಂದುಕೊಂಡು ಸುದರ್ಶನನು ಹೋಗಿ ಒಂದು ಸ್ಟೂಲಿನ ಮೇಲೆ ಕುಳಿತನು.

ಸುದರ್ಶನನು ಅಲ್ಲಿ ಕುಳಿತ ಸ್ವಲ್ಪ ಹೊತ್ತಿನ ಮೇಲೆ ಕಿಟಕಿಯಿಂದ ಹೊರಕ್ಕೆ ನೋಡಿದಾಗ ಹೆಡ್ಮಾಸ್ಟರು ಸ್ಕೂಲಿನ ಕಡೆಗೆ ಬರುತ್ತಿರುವುದು ಕಂಡಿತು. ಸದ್ಯಃ ಹೆಡ್ಮಾಸ್ಟರು ಮನೆಗೆಹೋಗಿದ್ದಾರೆ ಎಂದು ನಿರಾಳವಾಗಿದ್ದಾಗ "ಎಲ್ಲಿ ದೆವ್ವ ಎಂದರೆ ಇಲ್ಲೆ ಕಿಟಕೀಲಿ ಇದೇನೆ" ಎಂದಂತೆ

ಇವರು ಬಂದೇ ಬಂದರೆಲ್ಲಾ ಎಂದು ಸುದರ್ಶನನಿಗೆ ಪೀಕಲಾಟಕ್ಕೆ ಬಂದಿತು. ಆದರೂ "ಹೆಡ್ಮಾಸ್ಟರು ಬಹುಶಃ ಇಲ್ಲಿಗೆ ಬರಲಾರರು-ಯಾವುದಾದರೂ ನಡೆಯುತ್ತಿರುವ ಕ್ಲಾಸಿಗೋ ಅಥವಾ ಆಫೀಸಿನ ಒಳಕ್ಕೋ ಹೋಗಬಹುದು" ಎಂದು ಅವನು ಸಮಾಧಾನದಿಂದಿದ್ದನು. ಹೆಡ್ಮಾಸ್ಟರು ಸ್ಕೂಲಿನ ಹತ್ತಿರ ಹತ್ತಿರ ಬಂದಂತೆ ಬೂಟ್ಸಿನ ಧ್ವನಿಯು ಎಲ್ಲಾ ತರಗತಿಗಳ ಒಳಕ್ಕೂ ಕೇಳಿಸಲು ಪ್ರಾರಂಭವಾಯಿತು. ಹುಡುಗರೆಲ್ಲಾ ಹೆಚ್ಚು ಗಂಭೀರವಾಗಿ ತಮ್ಮ ಪಾಠಗಳ ಮೇಲೆ ಕಣ್ಣುಗಳನ್ನು ಇಟ್ಟುಕೊಂಡರು. ಕನ್ನಡ ಪಂಡಿತರಿಗೆ ಕಿವಿ ಸ್ವಲ್ಪ ದೂರವಾಗಿದ್ದಿತು. ಆದರೆ ಹುಡುಗರು ಮಾಡುತ್ತಿದ್ದ ಗಲಾಟೆ ಹೆಣಗಳನ್ನು ಎಬ್ಬಿಸಿ ಕೂರಿಸಲು ಸಾಕಾಗುತ್ತಿದ್ದುದರಿಂದ, ತರಗತಿಯಲ್ಲಿರುವಾಗ ತಾವು ಕಿವುಡರೆಂಬುದು ಪಂಡಿತರಿಗೆ ಮರೆತೇ ಹೋಗುತ್ತಿದ್ದಿತು. ಹೆಡ್ಮಾಸ್ಟರ ಬೂಟ್ಸಿನ ಸದ್ದು ಹತ್ತಿರ ಹತ್ತಿರ ಬಂದಾಗ ಹುಡುಗರು ಗದ್ದಲ ಪೂರ್ತಾ ನಿಲ್ಲಿಸಿಗುದರಿಂದ, ಮಳೆ ನಿಂತಂತೆ ನಿಶ್ಶಬ್ದವಾಗಲು, ಪಂಡಿತರಿಗೆ ಏನೋ ವಿಚಾರವಿದೆಯೆಂದು ತಿಳಿಯಿತು. ಹೆಡ್ಮಾಸ್ಟರು ಎಲ್ಲಾ ತರಗತಿಗಳ ಮುಂದೆಯೂ ಬೂಟ್ಸನ್ನು ಚಟ್‌ಪಟ್ ಎನ್ನಿಸಿಕೊಂಡು ಹೋದರು. ಎಲ್ಲಿ ತರಗತಿಯೊಳಕ್ಕೆ ಬರುತ್ತಾರೋ ಎಂದು ಹುಡುಗರು ಹೆದರಿದ್ದರು. ಆದರೆ ಹೆಡ್ಮಾಸ್ಟರು ಯಾವ ತರಗತಿಯ ಒಳಕ್ಕೂ ಹೋಗಲಿಲ್ಲ. ಸ್ವಾಭಾವಿಕವಾಗಿ ಅವರು ಯಾವ ಉದ್ದೇಶವೂ ಇಲ್ಲದೆ ಸ್ಲಾಯಿಡ್ ತರಗತಿಯ ಕಡೆಗೆ ಹೊರಟರು. ಹೆಡ್ಮಾಸ್ಟರನ್ನು ದೂರದಿಂದ ಕಂಡ ಹೊತ್ತಿನಿಂದ ಅವರನ್ನೇ ಎವೆಯಿಕ್ಕದೆ ನೋಡುತ್ತಿದ್ದ ಸುದರ್ಶನನಿಗೆ, ಅವರು ತಾನು ಇರುವ ಕೊಠಡಿಯ ಕಡೆಗೆ ಬರುತ್ತಿರುವುದನ್ನು ಕಂಡು ಪುಕ ಪುಕ ಪ್ರಾರಂಭವಾಯಿತು. ಸ್ಲಾಯಿಡ್ ಹಾಲಿಗೆ ಎರಡು ಕೊನೆಗಳಲ್ಲಿಯೂ ಎರಡು ಬಾಗಿಲುಗಳಿದ್ದುವು. ಹೆಡ್ಮಾಸ್ಟರು ಒಂದು ಬಾಗಿಲಿನಲ್ಲಿ ಒಳಕ್ಕೆ ಕಾಲಿಟ್ಟಕೂಡಲೇ ಸುದರ್ಶನನು ಮತ್ತೊಂದು ಬಾಗಿಲಿನ ಮೂಲಕ ಹೊರಕ್ಕೆ ನಾಗಾಲೋಟದಲ್ಲಿ ಓಡಿಬಿಟ್ಟನು. ಅವನು ಓಡಿದುದನ್ನು ಹೆಡ್ಮಾಸ್ಟರು ಕಾಣಲಿಲ್ಲ. ಆದರೆ ಸುದರ್ಶನನ ಕೋಟಿನ ಒಳಜೇಬಿನಲ್ಲಿ ಸ್ವಲ್ಪ ಚಿಲ್ಲರೆ ಇದ್ದಿತು. ಅವನು ಓಡಿದಾಗ, ಅದು ಕುಣಿಯುವ ಕಾಲಿನ ಗೆಜ್ಜೆಯಂತೆ ಸದ್ದಾದುದು ಹೆಡ್ಮಾಸ್ಟರಿಗೆ ಕೇಳಿಸಿತು. "ಓಹೋ ಇದ್ದಾರೋ ಇಲ್ಲಿ ಓಡುತ್ತಿದ್ದಾರೆ." ಎಂಬು

ದಾಗಿ ಅವರೂ ಸುದರ್ಶನನು ಭರಬಿದ್ದ ಬಾಗಿಲಿನಿಂದಲೇ ತಾವೂ ಓಡುತ್ತಾ ಹೊರಬಿದ್ದರು. ಹಾಸನದ ಹೈಸ್ಕೂಲು ಆಗ ಈ ಆಕಾರದಲ್ಲಿದ್ದಿತು. ಮೂರು ಕಡೆಗೂ ಮೂರು ಭಾಗದ ಕಟ್ಟಡಗಳು; ಒಂದು ಕಡೆಗೆ ಏನೂ ಇಲ್ಲ. ಬರಿಯ ಮೈದಾನ. ಮೇಷ್ಟರು ಒಂದು ಮೂಲೆ ತಿರುಗುವ ವೇಳೆಗೆ ಸುದರ್ಶನ ಜೋರಾಗಿ ಓಡಿ ಇನ್ನೊಂದು ಮೂಲೆ ತಿರುಗಿಬಿಡುತ್ತಿದ್ದನು. ಹೀಗೆ ಸ್ಕೂಲನ್ನು ಮೂರು ಸುತ್ತು ಬಂದರೂ ಓಡುತ್ತಿರುವ ಹುಡುಗನಾರೆಂಬುದು ಹೆಡ್ಮಾಸ್ಟರ ಕಣ್ಣಿಗೆ ಬೀಳಲಿಲ್ಲ. ಹೆಡ್ಮಾಸ್ಟರು ದೊಡ್ಡ ಮೂಳೆಯ ಪ್ರಾಣಿಯಾದುದರಿಂದ ಬೂಟ್ಸಿನ ಕಟಪಟ ಶಬ್ದದೊಂದಿಗೆ ರೈಲ್ವೆ ಇಂಜನ್ನಿನಂತೆ ಏದುತ್ತಿದ್ದರು. ವಿದ್ಯಾರ್ಥಿಗಳೂ ಸಹಾಯೋಪಾಧ್ಯಾಯರೂ ಪಾಠಗಳನ್ನು ಬಿಟ್ಟು ಹೊರಕ್ಕೆ ಬರಲು ಧೈರ್ಯವಿಲ್ಲದೆ ಕುಳಿತ ಜಾಗದಿಂದಲೇ ಈ ಗುರು ಶಿಷ್ಯರ ಓಡುವ ಪಂದ್ಯವನ್ನೂ ಸರ್ಕಸ್ಸನ್ನೂ ನೋಡುತ್ತಿದ್ದರು. ಕೊನೆಗೆ ಹೆಡ್ಮಾಸ್ಟರಿಗೆ ತುಂಬ ಆಯಾಸವಾಯಿತು. ಅವರು ಒಂದು ತರಗತಿಯ "ಮಾನಿಟರ್"ನ್ನು ಕರೆದು "ನೀನು ಒಂದು ಕಡೆಯಿಂದ ಬಾ. ನಾನು ಇನ್ನೊಂದು ಕಡೆಯಿಂದ ಬರುತ್ತೇನೆ" ಎಂದರು. ಕೊನೆಗೆ ಸುದರ್ಶನನು ಸಿಕ್ಕಿದನು.

ಉಪಾಧ್ಯಾಯರಲ್ಲಿ ಒಬ್ಬರಿಗೊಬ್ಬರಿಗೆ ಇದ್ದ ಅಸಮಾಧಾನದಿಂದ ವಿದ್ಯಾರ್ಥಿಗಳಿಗೆ ಬಹಳ ಕಿರುಕುಳವುಂಟಾಗುತ್ತಿದ್ದಿತು. ಒಂದು ಸಲ ಹೈಸ್ಕೂಲಿನ ಹಾಸ್ಟೆಲಿನಲ್ಲಿ ವಿದ್ಯಾರ್ಥಿಗಳು ಗಣಪತಿಪೂಜೆ ಮಾಡಿದ್ದರು. ಗಣಪತಿಯನ್ನು ನೀರಿನಪಾಲು ಮಾಡುವ ದಿನ ವಿದ್ಯಾರ್ಥಿಗಳು ಸಾಯಂಕಾಲ ಪೂಜೆಗೆ ಏರ್ಪಡಿಸಿ ಉಪಾಧ್ಯಾಯರನ್ನೆಲ್ಲಾ ಆಹ್ವಾನಿಸಿದ್ದರು. ಹುಡುಗರಲ್ಲಿಯೇ ಗಂಟಲು ಧ್ವನಿ ಚೆನ್ನಾಗಿದ್ದವರು ನಾಲ್ಕು ಹಾಡುಗಳನ್ನು ಹಾಡಿದರು. ಪೂಜೆಯೂ ಆಯಿತು. ಭೂಗೋಳದ ಉಪಾಧ್ಯಾಯರೂ ವಿಜ್ಞಾನದ ಉಪಾಧ್ಯಯರೂ ಕನ್ನಡ ಸಂಸ್ಕೃತ ಪಂಡಿತರೂ ಡ್ರಾಯಿಂಗ್ ಡ್ರಿಲ್ ಉಪಾಧ್ಯಾಯರೂ ಎಲ್ಲರೂ ಬಂದರು. ಪೂಜೆ ಆಗಿ ಅರ್ಧಗಂಟೆಯಾದರೂ ಹೆಡ್ಮಾಸ್ಟರು ಇನ್ನೂ ಬರಲೇ ಇಲ್ಲ. ಹುಡುಗರು "ಒಂದು ಗಳಿಗೆ ಹೊತ್ತಾದರೆ ಆಗಲಿ ನಿಧಾನವಾಗಿ ಬರುತ್ತಾರೆ. ಅವರು ಬಂದ ಮೇಲೆಯೇ ಮಂಗಳಾರತಿ ಮಾಡಿ ಅನಂತರ ಗಣಪತಿಯನ್ನು ಬಿಡೋಣ" ಎಂದರು. ಆದರೆ ಭೂಗೋಳದ ಮೇಷ್ಟರು ಒಪ್ಪ

ಲಿಲ್ಲ. ಅಧಿಕಾರದಲ್ಲಿ ಹೆಡ್ಮಾಸ್ಟರು ತಮ್ಮನ್ನು ದಬಾಯಿಸುತ್ತಿದ್ದುದಕ್ಕೆ ಇಲ್ಲಿ ಅವರು ಪ್ರತೀಕಾರ ಮಾಡಿದರು. "ಸರಿ ಸರಿ. ಒಬ್ಬರಿಗಾಗಿ ಎಷ್ಟು ಹೊತ್ತು ಕಾಯುವುದು. ಎಲ್ಲಾ ಮೇಷ್ಟರೂ ಬಂದು ಅರ್ಧಗಂಟೆ ಆಯಿತು. ಹೆಡ್ಮಾಸ್ಟರಿಗಾಗಿ ದೇವರ ಪೂಜೆಯೂ ಕಾಯಬೇಕೋ; ಸ್ಕೂಲಿನಲ್ಲಿ ತೋರಿಸುತ್ತಿರುವ ಅಧಿಕಾರವೇ ಸಾಕು. ಎಲ್ಲಿ ಮಂಗಳಾರತಿ ಮಾಡಿ" ಎಂದರು. ವಿಜ್ಞಾನದ ಮೇಷ್ಟರೂ ಅದನ್ನೇ ಅನುಮೋದಿಸಿದರು. ವಿದ್ಯಾರ್ಥಿಗಳಿಗೆ ಪಾಪ ಹೇಗೆ ಮಾಡುವುದೂ ಕಷ್ಟವಾಯಿತು. ಇವರು ಕ್ಲಾಸ್ ಮೇಷ್ಟರು. ಅವರು ಹೆಡ್ಮಾಸ್ಟರು. ಯಾರು ಸಿಟ್ಟಾದರೂ ಕಷ್ಟ. ಏನು ಮಾಡುವುದು ಎಂದು ಅವರು ಯೋಚಿಸುತ್ತಿರುವಾಗಲೇ ಭೂಗೋಳದ ಮೇಷ್ಟರು "ಹೂ ಮಂಗಳಾರತಿ ಮಾಡಿ" ಎಂದು ಆಚಾರ್ರಿಗೆ ಆಜ್ಞೆಮಾಡಿದರು. ಅದನ್ನು ಹೇಳುವಾಗ ಅವರ ಮುಖಭಾವ ದೊಡ್ಡ ದಂಡಯಾತ್ರೆಗಾಗಿ ಸೈನ್ಯಗಳಿಗೆ ಅಪ್ಪಣೆಕೊಡುವ ಸೈನ್ಯಾಧಿಪತಿಯ ಮುಖಭಾವದಂತೆ "ಬಂದದ್ದನ್ನು ಅನುಭವಿಸುತ್ತೇನೆ" ಎಂಬಂತೆ ಇತ್ತು. ಮಂಗಳಾರತಿ ಆಯಿತು. ಎಲೆ ಅಡಿಕೆ ಪ್ರಸಾದ ಕೊಪ್ಪರಿ ಸಕ್ರೆ ವಿನಿಯೋಗಗಳೆಲ್ಲಾ ಆದುವು. ಹುಡುಗರೆಲ್ಲಾ ಭಜನೆ ಮಾಡುತ್ತಾ ಗಣಪತಿಯನ್ನು ತೆಗೆದುಕೊಂಡು ಕೆರೆಯಕಡೆ ಹೋದರು. ಸುದರ್ಶನನ ಕೊಠಡಿಯು ಬೀಗದ ಕೈ ಹಾಳಾಗಿದ್ದುದರಿಂದ, ಸುದರ್ಶನ ಬೀಗ ಹಾಕಿಕೊಂಡು ಹೋಗಲು ಅವಕಾಶವಿಲ್ಲದೆ ಕೊಠಡಿಯಲ್ಲಿಯೇ ಕುಳಿತಿದ್ದನು.

ಹೈಸ್ಕೂಲು ಹೆಡ್ಮಾಸ್ಟರು ಸುಮಾರು ಹತ್ತು ನಿಮಿಷಗಳ ನಂತರ ತಮ್ಮ ಅಳಿಯನನ್ನೂ ಕರೆದುಕೊಂಡು ಬಂದರು. ಅವರ ಜತೆಯಲ್ಲಿ ಡಿಸ್ಟ್ರಿಕ್ಟ್ ಮೆಡಿಕಲ್ ಆಫೀಸರ್ ಸಹ ಇದ್ದರು. ಹೆಡ್ಮಾಸ್ಟರೇನೋ "ಹುಡುಗರು ಎಷ್ಟೋ ಚೆನ್ನಾಗಿ ಏರ್ಪಾಡು ಮಾಡಿದ್ದಾರೆ. ಎಲ್ಲರನ್ನೂ ಚೆನ್ನಾಗಿ ಗೌರವಿಸುತ್ತಾರೆ" ಎಂದುಕೊಂಡೇ ಬಂದಿದ್ದರು. ಅವರು ಆ ವಿಚಾರಗಳನ್ನೇ ಮಾತನಾಡುತ್ತಾ ಹಾಸ್ಟೆಲ್ಲಿನ ಸಮೀಪಕ್ಕೆ ಬಂದು ನೋಡಿದಾಗ ಅಲ್ಲಿ ನಿಶ್ಶಬ್ದವಾಗಿದ್ದಿತು. ಅಡಿಗೆ ಮನೆಯಲ್ಲಿ ಪರಿಚಾರಕ ಅಡಿಗೆ ಮಾಡುತ್ತಿದ್ದನು. ಹೆಡ್ಮಾಸ್ಟರು ಬೂಟ್ಸು ಸದ್ದು ಮಾಡುತ್ತಾ ಬಂದ ಕೂಡಲೆ ಸುದರ್ಶನನು ಹಾಗೆಯೇ ಭಯದಿಂದ ಕೊಠಡಿಯಲ್ಲಿಯೇ ಅಡಗಿ

ಬಿಟ್ಟನು. ಅವರ ಕಣ್ಣಿಗೆ ಬೀಳುವಷ್ಟು ಧೈರ್ಯ ಅವನಿಗೆ ಉಂಟಾಗಲೇ ಇಲ್ಲ. ಹೆಡ್ಮಾಸ್ಟರು "ಎಲ್ಲಿ ಹುಡುಗರೆಲ್ಲ ಎಲ್ಲಿ? ಮಂಗಳಾರತಿ ಆಯಿತೋ ಬೇಜವಾಬ್ದಾರಿ ಹುಡುಗರು" ಎಂದುಕೊಂಡು ಗಟ್ಟಿಯಾಗಿ ಬೈದುಕೊಂಡೇ ಹೋದರು. ಆ ಧ್ವನಿ ಕೇಳಿ ಸುದರ್ಶನನಿಗೆ ಕುಳಿತ ಜಾಗದಲ್ಲಿಯೇ ಮೈ ಬೆವರಿತು. "ಇದರ ದೂರೂ ಎಲ್ಲಿ ನನ್ನ ತಲೆಗೇ ಕಟ್ಟುತ್ತಾರೋ" ಎಂದು ಅವನು ಹೆದರಿದನು. ವಿದ್ಯಾರ್ಥಿಗಳು ಗಣಪತಿಯನ್ನು ಬಿಟ್ಟು ಬಂದ ನಂತರ; ನಡೆದ ವಿಚಾರ ತಿಳಿದು ನಾವು ಏನು ತಾನೆ ಮಾಡುವುದು ಎಂದು ಕೊಂಡು ಸುಮ್ಮನಾದರು. ಆದರೆ ಸುದರ್ಶನ ಹುಡುಗರಿಂದ ಮತ್ತಷ್ಟು ಚಂದಾ ವಸೂಲ್ಮಾಡಿ ಅಂಗಡಿಯಿಂದ ಎಲೆ ಅಡಿಕೆ, ತೆಂಗಿನಕಾಯಿ ಬಾಳೆ ಹಣ್ಣುಗಳನ್ನು ತರಿಸಿ ತಟ್ಟೆಯಲ್ಲಿ ಗಣಪತಿ ಪ್ರಸಾದದೊಂದಿಗೆ ಇಟ್ಟು ಕೊಂಡು ಹುಡುಗರ ಜತೆಯಲ್ಲಿ ಹೆಡ್ಮಾಸ್ಟರ ಮನೆಗೆ ಹೋಗಿ ಅವುಗಳನ್ನು ಅವರಿಗೆ ಕೊಟ್ಟನು. ಹೆಡ್ಮಾಸ್ಟರು ತಟ್ಟೆಯಲ್ಲಿದ್ದುದರಲ್ಲಿ ಅರ್ಧವನ್ನು ತೆಗೆದುಕೊಂಡು, ಉಳಿದ ಅರ್ಧವನ್ನು ಅದರಲ್ಲಿಯೇ ಬಿಟ್ಟು "ಇದನ್ನು ಮೆಡಿಕಲ್ ಆಫೀಸರ ಮನೆಗೆ ಹೋಗಿ ಕೊಟ್ಟು ಹಾಸ್ಟೆಲ್‌ಗೆ ಹೋಗಿ" ಎಂದು ತಿಳಿಸಿದರು. ಮಾರನೆ ಬೆಳಿಗ್ಗೆ ವಿಷಯ ತಿಳಿದಾಗ ಭೂಗೋಳದ ಉಪಾಧ್ಯಾಯರು ಕೋಪಿಸಿಕೊಂಡರು. ಅದರ ಫಲವಾಗಿ ಭಾರತದಲ್ಲಿ ರುವ ಎಲ್ಲಾ ರೈಲ್ವೆಗಳ ಉದ್ದ ಅಗಲಗಳನ್ನೂ ಪ್ರಶ್ನೆ ಕೇಳಿ ಹುಡುಗರನ್ನು ಚೆನ್ನಾಗಿ ಬಯ್ದರು.

ಆಗ ಇನ್ನೂ ಸ್ಕೌಟು ಸಂಸ್ಥೆ ಎಂಬುದು ಈಗಿನಷ್ಟು ಸಾಮ್ರಾಜ್ಯ ವಾದಿಗಳ ಗುಂಪೆಂದು ತೀರ್ಮಾನವಾಗಿರಲಿಲ್ಲ. ಈಚೆಗೆ ಬೇಡನ್‌ಪವಲ್ ಭಾರತೀಯರನ್ನು ಕುರಿತು ಅವಮಾನವಾಗಿ ಅಹಂಕಾರದಿಂದಲೂ ಅಲ್ಪ ತನದಿಂದಲೂ ಮಾತನಾಡಿದ ಮೇಲೆ ಆತ್ಮ ಗೌರವವುಳ್ಳ ಯಾವ ಭಾರ ತೀಯನೂ ಆ ಹೆಸರಿನೊಂದಿಗೂ ಸಂಸ್ಥೆಯೊಂದಿಗೂ ತನ್ನ ಸಂಬಂಧ ವನ್ನು ಇಟ್ಟುಕೊಳ್ಳುತ್ತಿಲ್ಲವೆಂಬುದು ಸರಿಯಷ್ಟೆ. ಆದರೆ ಆಗ ಇನ್ನೂ ನಾವು ಬರೆಯುತ್ತಿರುವ ಕಾಲದಲ್ಲಿ ಬೇಡನ್‌ಪವಲ್‌ನ ನಿಜವಾದ ವಿಕಾರ ರೂಪ ನಮ್ಮವರಿಗೆ ತಿಳಿದಿರಲಿಲ್ಲ. ವಿದ್ಯಾರ್ಥಿಗಳು ನಿಜವಾದ ಉತ್ಸಾಹ ದಿಂದಲೇ ಆ ಸಂಸ್ಥೆಯ ಸದಸ್ಯರಾಗುತ್ತಿದ್ದರು. ಸುದರ್ಶನನೂ ರಂಗನೂ ಸುಬ್ಬುವೂ ಆ ಸಂಸ್ಥೆಯ ಸದಸ್ಯರಾದರು. ಪ್ರತಿದಿನವೂ ಒಂದಾದರೂ

ಒಳ್ಳೆಯ ಕೆಲಸ (good turn) ಮಾಡಬೇಕೆಂಬುದು ಸ್ಕ್ಯಾಟುಗಳ ನಿಯಮವಷ್ಟೆ. ಒಂದು ದಿನ ಅವರನ್ನು ಆ ಸಂಸ್ಥೆಗೆ ಸೇರಿಸಿಕೊಳ್ಳುವ ಕಾರ್ಯಕ್ರಮವನ್ನು (Investiture) ಇಟ್ಟಿದ್ದರು. ಆವತ್ತು ಸ್ಕ್ಯಾಟು ಕಮೀಶನರು ಬಂದು ಸ್ಕ್ಯಾಟುಗಳಿಗೆಲ್ಲಾ ಬಿಲ್ಲೆಗಳನ್ನು ಕೊಡುತ್ತಿದ್ದರು. ಮೊದಲ ದಿನವೇ ಸ್ಕ್ಯಾಟು ಮಾಸ್ಟರು ಸ್ಕ್ಯಾಟುಗಳನ್ನೆಲ್ಲಾ ಕರೆದು "ನಾಳೆ ಪ್ರವೇಶದ ಸಮಾರಂಭವಾದುದರಿಂದ ನೀವು ಪ್ರತಿಯೊಬ್ಬರೂ ಖಂಡಿತ ಒಂದೊಂದು ಗುಡ್ ಟರ್ನ್ ಮಾಡಲೇಬೇಕು. ಇಲ್ಲದಿದ್ದರೆ ವರ್ಷಾಕಾಲ ವೆಲ್ಲ ನೀವು ಗುಡ್ ಟರ್ನ್ ಮಾಡಲು ನಿಮಗೆ ಅವಕಾಶ ಸಿಕ್ಕದಂತೆ ಆಗು ತ್ತದೆ" ಎಂದು ಹೇಳಿದ್ದರು. ಸುದರ್ಶನನೂ ರಂಗನೂ ಸ್ನಾನಮಾಡಿ ಕೊಂಡು ಗುಡ್‌ಟರ್ನ್‌ಗೆ ಎಲ್ಲಾದರೂ ಅವಕಾಶ ಸಿಕ್ಕುತ್ತದೆಯೇ ಎಂದು ನೋಡುತ್ತಾ ಬೀದಿಯಲ್ಲಿ ಹೊರಟರು. ಯಾವ ಸುಂದರಿಯೂ ನದಿಯಲ್ಲಿ ಬಿದ್ದು ತೇಲಿ ಹೋಗುತ್ತಿದ್ದುದು ಅವರಿಗೆ ಕಾಣಿಸಲಿಲ್ಲ. ಹಾಸನದಲ್ಲಿ ನದಿ ಇಲ್ಲ. ಯಾವ ಮಗುವನ್ನೂ ಹುಚ್ಚುನಾಯಿಯಾಗಲಿ ಹೋರಿ ಯಾಗಲಿ ಓಡಿಸಿಕೊಂಡು ಹೋಗುತ್ತಿದ್ದುದು ಕಾಣಿಸಲಿಲ್ಲ. ಯಾವ ಮುದುಕಿಯೂ ಎಲ್ಲಿಯೂ ನೀರು ಸೇದುತ್ತಿರಲಿಲ್ಲ. ಪ್ರವೇಶದ ಸಮಾ ರಂಭದ ದಿನವೂ ಗುಡ್‌ಟರ್ನ್ (ಒಳ್ಳೆಯ ಕೆಲಸ) ಮಾಡಲು ಅವಕಾಶ ವಿಲ್ಲದೆ ಹೋಯಿತಲ್ಲಾ ಎಂದು ಅವರು ಬಹು ಪಶ್ಚಾತ್ತಾಪದಿಂದ ಸುಮಾರು ಒಂಭತ್ತೂಕಾಲು ಗಂಟೆ ವೇಳೆಗೆ ರೈಲ್ವೆ ಸ್ಟೇಶನ್ನಿಗೆ ಬಂದರು. ಅಷ್ಟು ಹೊತ್ತಿಗೆ ಎಲ್ಲೂ ಗುಡ್‌ಟರ್ನ್ ಮಾಡಲು ಅವಕಾಶ ಸಿಕ್ಕದೆ ಸುಬ್ಬುವೂ ಅಲ್ಲಿಗೆ ಬಂದನು. ಆಗತಾನೆ ಮೈಸೂರಿನಿಂದ ರೈಲು ಬಂದಿ ದ್ದಿತು. ಇದರಲ್ಲಿ ಏನಾದರೂ ಗುಡ್‌ಟರ್ನ್‌ಗೆ ಅವಕಾಶ ದೊರಕಬಹು ದೆಂದು ಅವರು ಆಶಿಸುತ್ತಿದ್ದರು. ರೈಲಿನಿಂದ ಇಳಿದ ಪ್ರಯಾಣಿಕರು ತಮ್ಮ ತಮ್ಮ ಸಾಮಾನುಗಳನ್ನು ತೆಗೆದುಕೊಂಡು ಕೆಲವರು ನಡೆದು ಕೊಂಡೂ ಕೆಲವರು ಜಟಕಾ ಗಾಡಿಗಳಲ್ಲಿಯೂ ತಮ್ಮ ತಮ್ಮ ಮನೆಗಳಿಗೆ ಹೊರಟು ಹೋದರು. ಇಬ್ಬರು ತುಂಡಾಂಡಿಗಳಾದ ಸಾಹೇಬರು ಮಾತ್ರ ಭಾರಿ ಭಾರಿ ಪೆಟ್ಟಿಗೆ ಹಾಸಿಗೆ ಬಟ್ಟೆ ಇವುಗಳನ್ನು ಇಟ್ಟುಕೊಂಡು ಕೂಲಿ ಯವರೊಂದಿಗೂ ಜಟ್ಕಾದವರೊಂದಿಗೂ ಚರ್ಚೆಮಾಡುತ್ತಾ ನಿಂತಿದ್ದರು. ಅವರು ಕೊಡುತ್ತೇನೆಂದ ಬಾಡಿಗೆಗೆ ಬರಲು ಯಾವ ಜಟ್ಕಾದವನೂ

ಸಿದ್ಧಸಾಗಿರಲಿಲ್ಲ. ಕೂಲಿಗಳಿಗೆ ಅವರ ಸಾಮಾನು ಪೆಟ್ಟಿಗೆ ನೋಡಿದ ರೇನೇ ಭಯವಾಗುತ್ತಿದ್ದಿತು. ಸಾಹೇಬರುಗಳು "ಈ ಸಾಮಾನುಗಳು ಇಲ್ಲದಿದ್ದರೆ ನಡೆದು ಕೊಂಡೇ ಹೋಗಿಬಿಡಬಹುದಾಗಿದ್ದಿತು. ಈ ಸಾಮಾನು ಇರುವುದರಿಂದ ಬಾಡಿಗೆ ಕೊಡಬೇಕಾಗಿದೆ" ಎಂದು ಗೊಣಗುಟ್ಟುತ್ತಾ ನಿಂತಿದ್ದರು. ಹತ್ತು ನಿಮಿಷಗಳೊಳಗಾಗಿ ಜಟಕಾಗಳೆಲ್ಲಾ ಊರಿನೊಳಕ್ಕೆ ಹೊರಟುಹೋದವು. ಕೂಲಿಯಾಳುಗಳೂ ಯಾರೂ ಅಲ್ಲಿ ನಿಲ್ಲಲಿಲ್ಲ.

ಗುಡ್‌ಟರ್ನ್‌ಗೆ ಅರ್ಹವಾದ ಪ್ರಾಣಿಗಳು ಇಲ್ಲಿವೆ ಎಂದುಕೊಂಡು ಸುದರ್ಶನನೂ ರಂಗಪ್ಪನೂ ಸುಬ್ಬುವೂ ಸಾಹೇಬರ ಬಳಿಗೆ ಹೋಗಿ ಅವರ ಗಂಟುಗಳನ್ನು ತಾವು ಹೊತ್ತುಕೊಂಡು ಬರುವುದಾಗಿಯೂ ತಮಗೆ ಏನನ್ನೂ ಕೂಲಿ ಕೊಡಬೇಕಾದುದಿಲ್ಲವೆಂದೂ ಹೇಳಿದರು. ಸಾಹೇಬರು ಮೊದಲು ಮೊದಲು ಇದಕ್ಕೆ ಒಪ್ಪಲಿಲ್ಲ. ಜಟಕಾದವರೂ ಕೂಲಿಯವರೂ ಸಾಗಿಸಲು ಒಪ್ಪದಿದ್ದ ಗಂಟುಗಳನ್ನು ಇವರು ಸಾಗಿಸಬೇಕಾದರೆ ಇವರ್‍ಯಾರೋ ಠಕ್ಕರಿರಬೇಕೆಂದು-ಅವರಿಗೆ ತೋರಿತು. ಸುದರ್ಶನನು ಗುಡ್‌ಟರ್ನ್ ವಿಚಾರವನ್ನು ಅವರಿಗೆ ಚೆನ್ನಾಗಿ ವಿವರಿಸಿದ ಮೇಲೆ, ಇವರು ಕೂಲಿ ಕೇಳಕೂಡದೆಂದು ಖಾಯಂಮಾಡಿ ಸಾಹೇಬರು ಸುದರ್ಶನನ ತಲೆಯ ಮೇಲೆ ಒಂದು ಪೆಟ್ಟಿಗೆಯನ್ನೂ ರಂಗಪ್ಪನ ತಲೆಯ ಮೇಲೆ ಒಂದು ಪೆಟ್ಟಿಗೆಯನ್ನೂ ಸುಬ್ಬುವಿನ ತಲೆಯ ಮೇಲೆ ಒಂದು ಹಾಸಿಗೆ ಬಟ್ಟೆಯನ್ನೂ ಹೊರಿಸಿದರು. ತಾವೂ ಕೈಯ್ಯಲ್ಲಿ ಒಂದು ಚೀಲ ಬುಟ್ಟಿ ಮುಂತಾದುವನ್ನು ಹಿಡಿದುಕೊಂಡು ಜತೆಯಲ್ಲಿ ನಡೆದರು. ಸುದರ್ಶನನೂ ರಂಗಪ್ಪನೂ ಒಳ್ಳೆಯ ತ್ರಾಣವಂತರಾದರೂ ಪಾಪ ಆ ಭಾರಕ್ಕೆ ಅವರ ಬೆನ್ನುಗಳು ಬಾಗಿ ಮುರಿಯುವಂತೆಯೇ ಆದವು. ಭಾರದಿಂದ ಅವರು ಸ್ವಲ್ಪ ಹಿಂದೆ ಬಿದ್ದರೂ ಸಾಹೇಬರುಗಳು ಅನುಮಾನದಿಂದ "ಇವರು ಎಲ್ಲಿ ಪೆಟ್ಟಿಗೆಗಳನ್ನು ಲಪಟಾಯಿಸಿಕೊಂಡು ಹೋಗುತ್ತಾರೋ" ಎಂದು ಅವರ ಕಡೆ, ಕಳ್ಳರನ್ನು ನೋಡುವಂತೆ ನೋಡುತ್ತಿದ್ದರು. ಸುಬ್ಬು ಹೊತ್ತಿದ್ದ ಆ ಬುಟ್ಟಿ ಎಲ್ಲೋ ಒಂದು ಸಲ ಸ್ವಲ್ಪ ಓರೆಯಾದಾಗ ಅದರಿಂದ ಭಾರವಾದ ಕೆಂಪು ದ್ರಾವಕ ಚೆಲ್ಲಿ ಅವನ ಹೆಗಲಿನ ಮೇಲೂ ಬಟ್ಟೆಯ ಮೇಲೆಯೂ ಹರಿಯತೊಡಗಿತು. ಮೊದಲೇ ಆ

ಬುಟ್ಟಿಯ ವಾಸನೆ ಅವನಿಗೆ ಸಹಿಸುವುದಕ್ಕೆ ಅಸಾಧ್ಯವಾಗಿದ್ದಿತು. ಹೀಗೆ ಮೈಮೇಲೆ ದ್ರಾವಕ ಸೇಚನವಾಗಲು ಪ್ರಾರಂಭವಾದ ಕೂಡಲೇ ಅವನು ಮುಂದೆ ಮುಂದೆ ಗಡ್ಡ ನೀವಿಕೊಳ್ಳುತ್ತ ಹೋಗುತ್ತಿದ್ದ ಸಾಹೇಬರನ್ನು ಕರೆದು ಬುಟ್ಟಿಯನ್ನು ಕೆಳಗಿಡಿ ಎಂದನು. ಸಾಹೇಬರಿಗೆ ಬಹಳ ಕೋಪ ಬಂತು. ಅವರು ಮಟನ್‌ಬ್ರಾತ್ ಮಟನ್‌ಬ್ರಾತ್ (ಮಾಂಸದ ಸಾರು) ಎಂದುಕೊಂಡು ಸಾರನ್ನು ನುಂಗುವ ಬದಲು ಸುಬ್ಬುವನ್ನೇ ನುಂಗುತ್ತಾರೋ ಎಂಬಂತೆ ಅವನ ಕಡೆ ದುರದುರನೆ ನೋಡಿದರು. ಪಾಪ. ಸ್ಕಾಟುಗಳಿಗೆ ನೂರು ಮೈಲಿ ಹೋದರೂ ಸಾಹೇಬರ ಮನೆಗಳು ಸಿಕ್ಕಲಿಲ್ಲ! ಹತ್ತೂವರೆ ಗಂಟೆ ವೇಳೆಗೆ ಸಾಮಾನುಗಳನ್ನು ಅವರ ಮನೆಗಳಲ್ಲಿ ಇಳಿಸಿ ಸರಸರನೆ ಹಾಸ್ಟೆಲ್ಲಿನಲ್ಲಿ ಊಟಮಾಡಿಕೊಂಡು ಬೀಳುವುದನ್ನೂ ಕಾಣದೆ ಹುಡುಗರು ಸ್ಕೂಲಿಗೆ ಓಡಿದರು. ಸುಬ್ಬುವಿಗೆ ಬೇರೆ ಕೋಟು ಇಲ್ಲದಿದ್ದುದರಿಂದ ಅವನು ಅದನ್ನೇ ತೊಳೆದು ಹಾಕಿಕೊಂಡು ಸ್ಕೂಲಿಗೆ ಹೋದನು. ಆದರೆ ಆ ದಿನ ಸ್ಕೂಲಿನಲ್ಲಿ ಅವನ ಸುತ್ತ ಕುಳಿತ ಹುಡುಗರೆಲ್ಲಾ ಮೂಗನ್ನು ಗಂಟುಹಾಕುತ್ತಾ "ಏನೋ ವಾಸನೆ ವಾಸನೆ" ಎನ್ನುತ್ತಿದ್ದರು. ಆ ದಿವಸ ಸ್ಕಾಟು ಕಮಿಶನರು ಬಿಲ್ಲೆ (ಬಾಡ್ಜ್) ಯನ್ನು ಸುಬ್ಬನ ಕೋಟಿಗೆ ಸಿಕ್ಕಿಸುವಾಗ "ಇದೇನೋ ಇಲ್ಲಿ ವಾಸನೆ ಬರುತ್ತಿದೆ" ಎಂದುಕೊಂಡರು. ಆ ಮೇಲೆ ಉಬ್ಬೆಗೆ ಹಾಕಿದರೂ ಸುಮಾರು ಎರಡು ತಿಂಗಳಿನ ಕಾಲ ಕೋಟಿನಿಂದ ಮಟನ್‌ಬ್ರಾತ್ ವಾಸನೆ ಹೋಗಲಿಲ್ಲ.

---

## ೧೫. ವೈದೇಹಿ ಮಂಗಳೆಯರ ಸ್ವಯಂವರ

---

ಸುದರ್ಶನನ ತಂಗಿ ವೈದೇಹಿ, ಬಹಳ ರೂಪವತಿಯಾದ ಹುಡುಗಿ. ಸ್ವಲ್ಪ ಓದು ಬರಹವೂ ಬರುತ್ತಿತ್ತು. ಆಗಲೇ ಮದುವೆಗೆ ಅರ್ಹವಾದ ವಯಸ್ಸಾಗಿತ್ತು. ಅನಂತುವಿನ ಮಗಳು ಮಂಗಳೆಗೂ ಮದುವೆಯ ವಯಸ್ಸಾಗಿತ್ತು. ಆದರೆ ಅವಳು ವೈದೇಹಿಯಷ್ಟು ಚೆನ್ನಾಗಿರಲಿಲ್ಲ. ಅವಳ ಬಣ್ಣ ಕಪ್ಪು. ಆದರೂ ಅನಂತು ಅವಳು ತನ್ನ ಮಗಳೆಂಬ ಕಾರಣ

ದಿಂದ ಅವಳಿಗೆ ವರ ದೊರಕುವುದು ಕಷ್ಟವಾಗುವುದಿಲ್ಲವೆಂದು ತಿಳಿದಿದ್ದನು. ಅವಳಿಗೆ ಹಾರ್ಮೋನಿಯಮ್ ವಿದ್ಯೆಯನ್ನು ಸಹ ಹಳ್ಳಿಯ ಸ್ಕೂಲಿನ ಸಂಗೀತದ ಮೇಷ್ಟರ ಸಹಾಯದಿಂದ ಕಲಿಸಿದ್ದನು. ವೈದೇಹಿಗೆ ಸಂಗೀತದ ಪಾಠ ಹೇಳಿಸಿರಲಿಲ್ಲ. ಆದರೆ ಮಂಗಳೆಗೆ ಹೇಳಿ ಕೊಡುತ್ತಿದ್ದಾಗ ಅವಳ ಕಿವಿಗೂ ಪಾಠ ಬೀಳುತ್ತಿತ್ತು. ಅವಳ ಶಾರೀರ (ಧ್ವನಿ) ಬಹಳ ಮೃದುವಾಗಿತ್ತು. ಆ ಎಳೆಯ ಕೊರಲನ್ನು ಕೇಳಿದವರು ಮುಗ್ಧರಾಗುತ್ತಿದ್ದರು.

ಅನಂತು, ಸ್ವಲ್ಪವೂ ಶ್ರಮ ವಹಿಸದುದರಿಂದ ವೈದೇಹಿಗೆ ಸರಿಯಾದ ವರ ಸಿಕ್ಕಲಿಲ್ಲ. ವೈದೇಹಿಯ ತಾಯಿ "ಒಳ್ಳೆ ಯೋಗ್ಯನಾದ ವರ ಸಿಕ್ಕಿದರೆ ಕೊಡುತ್ತೇನೆ. ಇಲ್ಲದಿದ್ದರೆ ಹೆಣ್ಣು ಮನೆಯಲ್ಲಿಯೇ ಇರಲಿ" ಎಂದಳು. ಅನಂತು ಅವಳ ಮೇಲೆ ಕೋಪಿಸಿಕೊಳ್ಳುವುದರ ಹೊರತು ಮತ್ತೇನೂ ಸಾಧ್ಯವಾಗಲಿಲ್ಲ. ವೈದೇಹಿಯನ್ನು ನೋಡಿದವರೆಲ್ಲಾ "ಪಾಪ ಒಳ್ಳೆಯ ಹುಡುಗಿ" ಎಂದು ಕನಿಕರಪಡುತ್ತಿದ್ದರು. ವೈದೇಹಿ ಹೊಡೆಯ ಕಾಲದ ಪೈರಿನಂತೆ ಒಳ್ಳೆಯ ಸೌಂದರ್ಯವನ್ನೂ ತುಂಬಿದ ಮೈಬಣ್ಣವನ್ನೂ ಹೊಂದಿದವಳಾದಳು. ಅವಳ ಸಮ ವಯಸ್ಕಳಾದ ಸೌಭಾಗ್ಯಳಿಗೆ ಮದುವೆ ಆಗಿ ನಾಲ್ಕು ವರುಷವಾಗಿತ್ತು. ಸೌಭಾಗ್ಯಳ ತಂಗಿ ಮಂಗಳೆಯೂ ಮದುವೆಗೆ ನಿಂತಿದ್ದಳು. ಮದುವೆಯಾಗಿದ್ದ ಗಂಡುಗಳು ವೈದೇಹಿಯನ್ನು ನೋಡಿ "ಏನು ಗಂದರ್ವ ಕನ್ನಿಕೆ ಇವಳನ್ನು ಮದುವೆಯಾಗುವ ಪುಣ್ಯ ಯಾವವನಿಗೆ ಇದೆಯೋ" ಎನ್ನುತ್ತಿದ್ದರು. ಮಲ್ಲಿಗೆ ಹಳ್ಳಿಯಲ್ಲಿ ವೈದೇಹಿಯ ಹಾಗೆ ಬೆಳೆದು ಅಷ್ಟು ವಯಸ್ಸಾಗಿದ್ದ ಮದುವೆಯಾಗದ ಹುಡುಗಿಯರು ಯಾರೂ ಇರಲಿಲ್ಲ.

ಮಲ್ಲಿಗೆಹಳ್ಳಿ ನರಸಿಂಹಸ್ವಾಮಿಗೆ ಭಕ್ತರು ಎಲ್ಲೆಲ್ಲೂ ಇದ್ದಾರೆ; ಮುಖ್ಯವಾಗಿ ಮದರಾಸು ಬೆಂಗಳೂರುಗಳಲ್ಲಿ ಈ ಭಕ್ತರ ಸಂಖ್ಯೆ ಅಧಿಕ. ಅವರು ವರುಷಕ್ಕೆ ಎರಡು ಮೂರು ಸಲ ಮಲ್ಲಿಗೆಹಳ್ಳಿಗೆ ಬಂದು ದೇವರ ದರುಶನ ಮಾಡಿಕೊಂಡು ಹೋಗುತ್ತಾರೆ. ಇವರುಗಳ ಪೈಕಿ ಬೆಂಗಳೂರಿನ ಎಲೆಕ್ಟ್ರಿಕ್ ಡಿಪಾರ್ಟ್ಮೆಂಟಿನಲ್ಲಿರುವ ದೊಡ್ಡ ಇಂಜನೀಯರು ಒಬ್ಬರು. ಇಂಜನೀಯರು ರಜಾ ದೊರೆತಾಗಲೆಲ್ಲಾ ನೆಟ್ಟಗೆ ಬೆಂಗಳೂರಿನಿಂದ ಮೋಟಾರಿನಲ್ಲಿಯೇ ಮಲ್ಲಿಗೆಹಳ್ಳಿಗೆ ಬಂದು ದೇವರ ದರುಶನ

ಮಾಡಿಕೊಂಡು ಹೋಗುತ್ತಿದ್ದರು. ಒಂದು ಸಲ ಅವರು ದೇವರ ದರುಶನಕ್ಕೆ ಬಂದಾಗ ಅವರ ಜತೆಯಲ್ಲಿ ಅವರ ಮಗ ಸೀತಾರಾಮುವೂ ಬಂದನು. ಸೀತಾರಾಮುವಿಗೆ ಸುಮಾರು ಇಪ್ಪತ್ತುಮೂರು ಇಪ್ಪತ್ತನಾಲ್ಕು ವಯಸ್ಸಾಗಿತ್ತು. ಬಿ.ಇ. ಪ್ಯಾಸುಮಾಡಿ ಎಲೆಕ್ಟ್ರಿಕ್ ಡಿಪಾರ್ಟ್ಮೆಂಟಿನಲ್ಲಿ ಎಂಭತ್ತು ರೂಪಾಯಿ ಕೆಲಸಕ್ಕೆ ಸೇರಿದ್ದನು. ಇನ್ನೂ ಅವನಿಗೆ ಮದುವೆಯಾಗಿರಲಿಲ್ಲ. ಅವನಿಗೆ ಒಪ್ಪಿಗೆಯಾಗುವ ಹೆಣ್ಣು ಅವನ ಕಣ್ಣಿಗೆ ಇನ್ನೂ ಬಿದ್ದಿರಲಿಲ್ಲ. ದೇವರ ಸೇವೆಗೆ ಬೆಂಗಳೂರಿನಿಂದ ಬಂದು ಹೇಮಾವತಿ ನದಿಯ ದಡದಲ್ಲಿ ದೇವಸ್ಥಾನದ ಎದುರಿನ ತೋಪಿನಲ್ಲಿ ಮೋಟಾರು ನಿಲ್ಲಿಸಿ ಇಂಜನಿಯರ್ ಸಾಹೇಬರೂ ಅವರ ಪತ್ನಿಯವರೂ ಸೀತಾರಾಮುವೂ ನದಿಯ ತೀರಕ್ಕೆ ಹೋಗಿ ಕೈಕಾಲು ತೊಳೆದುಕೊಂಡರು. ಆಗ ಸೂರ್ಯಾಸ್ತದ ಸಮಯವಾಗಿತ್ತು. ಮುಳುಗುವ ಸೂರ್ಯನ ಹೊನ್ನಿನ ಕಿರಣಗಳು ವಿಚಿತ್ರವಾದ ಶೋಭೆಯಿಂದ ಜಗತ್ತನ್ನು ಬೆಳಗುತ್ತಿದ್ದವು. ನದಿಯಲ್ಲಿ ಪಾತ್ರೆಗಳನ್ನು ಬೆಳಗಿಕೊಂಡು ಒಗೆದ ಸೀರೆಗಳನ್ನು ಕುಕ್ಕೆಗಳಲ್ಲಿ ಹಾಕಿಕೊಂಡು ಸ್ತ್ರೀಯರು ಮನೆಗಳಿಗೆ ಹೊರಟರು. ಅವರ ಪೈಕಿ ವೈದೇಹಿಯೂ ಇದ್ದಳು. ತೆಳುವಾದ ಎಳೆಯದಾದ ಮೈನಿಲುವು; ಗುಲಾಬಿಯ ಮೊಗ್ಗಿನಂತಹ ಮುಖಬಣ್ಣ, ದುಂಬಿಯಂತಹ ಕಣ್ಮಣಿಗಳು, ಮುತ್ತಿನ ಹಾಗೆ ಬೆಳ್ಳಗಿರುವ ಹಲ್ಲು ಸಾಲು, ಕರಿಯ ನಾಗರದಂತೆ ಹೊರಳಾಡುತ್ತಿದ್ದ ಸೊಗಸಾದ ಜಡೆ. ಕಳೆ ತೊಟ್ಟುತ್ತಿರುವ ಮುಖ-ಇವುಗಳನ್ನು ಕಂಡು ಸೀತಾರಾಮುವಿನ ದೃಷ್ಟಿ ಅವಳ ಮೇಲೆ ಹೋಯಿತು.

ಮದುವೆಯಾಗದ ವೈದೇಹಿಯಷ್ಟು ವಯಸ್ಸಿನ ಹುಡುಗಿ ಎಲ್ಲಿಯಾದರೂ ಇರಬಹುದೆಂಬುದು ಸೀತಾರಾಮುವಿಗೆ ಅಲ್ಲಿಯವರೆಗೆ ತಿಳಿದಿರಲಿಲ್ಲ. ಸಿನಿಮಾದಲ್ಲಿ ಅಂತಹ ವೇಷಧಾರಿಗಳಾದ ಸುಂದರಿಯನ್ನು ನೋಡಿದಾಗ ಅವನು "ನಮ್ಮ ಹುಡುಗಿಯರೂ ಇಷ್ಟು ವಯಸ್ಸಾದ ಮೇಲೆ ಯಾಕೆ ಮದುವೆ ಮಾಡಿಕೊಳ್ಳಬಾರದು?" ಎಂದುಕೊಳ್ಳುತ್ತಿದ್ದನು. ಮೊದಲು ವೈದೇಹಿ ಕಣ್ಣಿಗೆ ಬಿದ್ದಾಗ ಅವಳಿಗೆ ಮದುವೆಯಾಗಿಲ್ಲ ಎಂಬುದು ಅವನಿಗೆ ತಿಳಿಯಲಿಲ್ಲ. ಆದರೆ ಅವಳ ಕಣ್ಣಿನಲ್ಲಿ ಕಾಣುತ್ತಿದ್ದ ಒಂದು ವಿಧವಾದ ಹೊಳಪು, ಮುಖದ "ಎಳಕು" ಅಂಗಾಂಗಳ ಕಿಶೋರತೆ ಇವುಗಳಿಂದ ಆ ಸುಂದರಮೂರ್ತಿ ಇನ್ನೂ ಮದುವೆಯಾಗ

ದವಳು ಎಂಬುದು ಅವನಿಗೆ ಗೊತ್ತಾಯಿತು. ಸೀತಾರಾಮನ ದೃಷ್ಟಿ ಯಿಂದ ಅಂತೂ ಅದು ಸ್ವಯಂವರವೇ ಆಯಿತು. ಅವನು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ "ಎಲ್ಲಾ ಹುಡುಗಿಯರಿಗೂ ಈ ವಯಸ್ಸಿಗೇ ಮದುವೆಮಾಡಬೇಕು. ಅವರು ಆಗ ನಿಜವಾದ ಸೊಬಗು ಸೌಂದರ್ಯದಿಂದ ಬೆಳಗುವರು. ಗಂಡು ಬಂದು ನಾನು ಪುಣ್ಯಮಾಡಿದ್ದೆ ಎಂದುಕೊಂಡು ಮದುವೆಮಾಡಿಕೊಂಡು ಹೋಗುವುದು. ಅದು ಬಿಟ್ಟು ಸರಿಯಾಗಿ ಲಂಗ ಹಾಕಿಕೊಳ್ಳುವುದಕ್ಕೇ ಬರದ ಮೊಗುವನ್ನು ತಂದು ಗಂಡಿನ ಮುಂದೆ ನಿಲ್ಲಿಸಿದರೆ ಅವನು ಹೇಗೆ ಒಪ್ಪಿಯಾನು" ಎಂದುಕೊಂಡನು. ಇಂಜನೀಯರು ಈ ಸ್ವಯಂವರಕ್ಕೆ ಮೊದಲು ಒಪ್ಪಲಿಲ್ಲ. ಅವರು ಎಲ್ಲೆಲ್ಲೋ ದೊಡ್ಡ ಮನುಷ್ಯರ ಮೇಲೆ ಕಣ್ಣುಹಾಕಿಕೊಂಡಿದ್ದರು. ಆದರೆ ಮದುವೆಯಾಗುವವನು ಸೀತಾರಾಮನಾದುದರಿಂದ ಕೊನೆಗೆ ಅವರು ಒಪ್ಪಬೇಕಾಯಿತು.

ಅನಂತುವಿನ ಮನೆಗೆ ಇಂಜನೀಯರೂ ಅವರ ಹೆಂಡತಿಯವರೂ ಮೋಟಾರಿನಲ್ಲಿ ಬಂದು ಇಳಿದರು. ಇಂಜನೀಯರ ಹೆಂಡತಿಯವರ ಕೈಲಿ ಒಂದು ತಟ್ಟೆಯೂ ಅದರಲ್ಲಿ ಮಡಿಸಿದ್ದ ಒಂದು ಹೊಸ ಸೀರೆಯೂ ಇತ್ತು. ಅನಂತುವು ಇವರು ನನ್ನ ಎರಡನೆಯ ಮಗಳು ಮಂಗಳೆಯನ್ನು ನೋಡುವುದಕ್ಕೆ ಬಂದಿರಬಹುದು ಎಂದುಕೊಂಡನು. ವೈದೇಹಿ ಎಲ್ಲೋ ಒಳಗಡೆಯೇ ಇದ್ದಳು. ಮಂಗಳೆಯೇ ಹೊಸ ಸೀರೆ ಉಟ್ಟುಕೊಂಡು ಬಂದವರ ಎದುರಿಗೆ ಎರಡು ಮೂರುಸಲ ಓಡಾಡಿದಳು. ಸ್ವಲ್ಪ ಹೊತ್ತು ಹುಚ್ಚುನಾಯಿ ಗುರುಗುರು ಎಂದಂತೆ ಹಾರ್ಮೋನಿಯಂ ಸದ್ದು ಆಯಿತು. ಕೊನೆಯಲ್ಲಿ ಸೀತಾರಾಮುವಿನ ಅಪ್ಪ ಇಂಜನೀಯರು "ಸಾಯಂಕಾಲ ನದಿಗೆ ಬಂದಿದ್ದಳಲ್ಲಾ ಆ ಹುಡುಗಿ ಎಲ್ಲಿ?" ಎಂದರು. ಅನಂತು "ಎಲ್ಲೋ ಒಳಗೆ ಇದ್ದಾಳೆ. ವೈದೇಹಿ ಬಾಮ್ಮ" ಎಂದನು. ವೈದೇಹಿಗೆ ತನಗೆ ಬಂದಿರುವ ಭಾಗ್ಯ ತಿಳಿಯದೇ ತಿಳಿಯದು. ನದಿಯ ತೀರದಲ್ಲಿ ಒಬ್ಬ ನಾಗರಿಕ ಸುಂದರ ಮೋಟಾರಿನ ಹತ್ತಿರ ನಿಂತಿದ್ದು ತನ್ನ ಕಡೆಯೇ ನೋಡುತ್ತಿದ್ದುದೂ, ಒಂದು ಕ್ಷಣಮಟ್ಟಿಗೆ ಅವರು ತನ್ನನ್ನೇ ದುರುದುರನೆ ನೋಡಿದರೆಂದು ಅವಳಿಗೆ ಆಗ ಭಾಸವಾದುದೂ ಜ್ಞಾಪಕಕ್ಕೆ ಬಂದಿತು. ವೈದೇಹಿ ಬಂದು ನಮಸ್ಕರಿಸಿದಳು. ಇಂಜನಿಯರ್ ಸಾಹೇಬರ ಹೆಂಡತಿ

ವೈದೇಹಿಗೆ ಸೀರೆ ಕೊಟ್ಟು "ಅಮ್ಮಾ ಇವತ್ತು ನಮ್ಮ ಸೀತಾರಾಮುವಿನ ಬ್ರಹ್ಮಚರ್ಯ ಸೆರೆಬಿಡಿಸಿದೆ. ನಿನ್ನನ್ನು ಹೆತ್ತವಳು ಪುಣ್ಯಾತ್ಗಿತ್ತಿ. ನಿನ್ನ ಅದೃಷ್ಟವೂ ಬಹಳ ಒಳ್ಳೆಯದು. ತಪಸ್ಸು ಮಾಡುತ್ತಿದ್ದ ಪಾರ್ವತಿಯ ಬಳಿಗೆ ಈಶ್ವರ ತಾನಾಗಿಯೇ ಬಂದು ಕೇಳಿದಂತೆ ಸೀತಾರಾಮು ತಾನೇ ನಿನ್ನನ್ನು ಒಪ್ಪಿಬಿಟ್ಟ. ಬಹುಕಾಲ ಸುಮಂಗಲಿಯಾಗಿ ಬಾಳು" ಎಂದು ಆಶೀರ್ವದಿಸಿದಳು. ವೈದೇಹಿಗೆ ತಾನೇ ಭೂಮಿಯ ಮೇಲೆ ಇರುವೆನೋ ಅಥವ ಭೂಮಿಯೇ ತನ್ನ ಮೇಲೆ ಇರುವುದೋ ಎಂಬುದು ಗೊತ್ತಾಗ ಲಿಲ್ಲ. ಈ ಸ್ವಯಂವರ ಮಲ್ಲಿಗೆಹಳ್ಳಿಯವರಿಗೆಲ್ಲಾ ಅತ್ಯಂತ ಆಶ್ಚರ್ಯಕರ ವಾಯಿತು. ಇಂಜನೀಯರು ಸಾಹೇಬರು ಹದಿನೈದು ದಿನ ಬಿಟ್ಟು ಕೊಂಡು ಲಗ್ನಪತ್ರಿಕೆ ಮುಂತಾದುವುಗಳನ್ನು ಮಾಡಿಸುವುದಕ್ಕೆ ಒರುವು ದಾಗಿ ಹೇಳಿ ಹೊರಟುಹೋದರು.

ಅನಂತು ಯೋಚನೆಗೆ ಒಳಗಾದನು. ಗಂಡಿನ ಕಡೆಯವರು ದೊಡ್ಡವರಾದುದರಿಂದ ಮದುವೆ ಸ್ವಲ್ಪ ವಿಜೃಂಭಣೆಯಿಂದಲೇ ಮಾಡ ಬೇಕಾಗಿದ್ದಿತು. ಜಾನಕಮ್ಮನವರು ಹಾಗೇ ಅನಂತುವಿಗೆ ಹೇಳಿದರು. ಆದರೆ ಅನಂತುವಿಗೆ ಬರಿಯ ವೈದೇಹಿಯ ವಿವಾಹಕ್ಕಾಗಿಯೇ ಅಷ್ಟೊಂದು ಹಣ ವೆಚ್ಚಮಾಡಲು ಇಷ್ಟವಿರಲಿಲ್ಲ. ಆದುದರಿಂದ ಅವನು ಈ ಮದು ವೆಯ ಜತೆಗೆ ತನ್ನ ಮಗಳು ಮಂಗಳೆಯ ಮದುವೆಯನ್ನೂ ಗೊತ್ತು ಮಾಡಬೇಕೆಂದು ಯೋಚಿಸಿದನು. ಆದರೆ ಮಂಗಳೆಗೆ ಸರಿಯಾದ ವರ ದೊರೆತಿರಲಿಲ್ಲ.

ಮಲ್ಲಿಗೆಹಳ್ಳಿಯ ದೇವಸ್ಥಾನದ ಪೂಜಾರಿ ಗೋಪಾಲನ ಎರಡನೆಯ ಮಗ ನಾರಾಯಣ ಒಳ್ಳೆಯ ಲಾಯಕ್ಕಾದ ವರವಾಗಿದ್ದನು. ವಯಸ್ಸು ಇಪ್ಪತ್ತೆರಡು. ಇಂಟರ್‌ಮೀಡಿಯೇಟ್ ಪರೀಕ್ಷೆ ಮಾಡಿದ್ದನು. ಎಲ್ಲಾ ವಿಧದಲ್ಲಿಯೂ ಸಮರ್ಪಕವಾಗಿದ್ದ ನಾರಾಯಣನ ವಿಚಾರದಲ್ಲಿ ಒಂದು ಕೊರತೆ ಇತ್ತು. ಗೋಪಾಲ ಹುಟ್ಟು ಅರ್ಚಕನಲ್ಲ. ಕೆಲವು ವರುಷಗಳ ಕೆಳಗೆ ಮಲ್ಲಿಗೆಹಳ್ಳಿ ದೇವಸ್ಥಾನದ ಅರ್ಚಕ ತೀರಿ ಹೋದನು. ದೇವಸ್ಥಾ ನಕ್ಕೆ ಬೇರೆ ಅರ್ಚಕ ಇರಲಿಲ್ಲ. ದೇವಸ್ಥಾನದ ಅರ್ಚಕರದೂ ಒಂದು ಸಣ್ಣ ಪಂಗಡವಿದೆ. ಅದು, ನಮ್ಮ ದೇಶದ ಸಾವಿರಾರು ಪಂಗಡಗಳಿರು ವಂತೆ ಉಳಿದ ಎಲ್ಲಾ ಪಂಗಡಗಳಿಂದಲೂ ಬೇರೆಯಾದುದು. ಮಲ್ಲಿಗೆ

ಹಳ್ಳಿ ದೇವಸ್ಥಾನಕ್ಕೆ ಹುಟ್ಟು ಅರ್ಚಕ ಇಲ್ಲದುದರಿಂದ ಪೂಜೆ ವಗೈರೆ ಸರಿಯಾಗಿ ನಡೆಯುತ್ತಿರಲಿಲ್ಲ. ಭಗವಂತನಲ್ಲಿ ಪೂಜಾರಿಗಳು ಉದಾಸೀನ ರಾಗಿ ನಡೆಸುವ ಅಪಚಾರದಿಂದಲೋ ಅಥವ ಅಕಸ್ಮಾತ್ ಕಾರಣ ಗಳಿಂದಲೋ ಅಂತೂ ಪೂಜಾರಿಯಾದವನ ಅಭಿವೃದ್ಧಿ ಸಾಧಾರಣವಾಗಿ ಕಡಿಮೆಯಾಗುತ್ತದೆ. ಅವನಿಗೆ ಸಂಸಾರ ಜೀವನದಲ್ಲಿ ಸುಖ ಕಡಿಮೆ ಯಾಗುತ್ತದೆ. ಈ ಕಾರಣದಿಂದ ಪ್ರತಿಯೊಬ್ಬನಿಗೂ ಸ್ವಾಭಾವಿಕವಾಗಿ ತನ್ನಲ್ಲಿ ಇರುವಷ್ಟು ದೈವಭಕ್ತಿ ಇದ್ದರೂ ದೇವಸ್ಥಾನದಂತಹ ಸಂಸ್ಥೆ ಯಲ್ಲಿ ಪೂಜಾರಿಯಾಗಲು ಆ ಪಂಗಡದವರ ಹೊರತು ಮತ್ತ್ಯಾರೂ ಒಪ್ಪುವುದಿಲ್ಲ. ಆ ಕಸಬಿಗೂ ಸ್ವಲ್ಪ ಗೌರವ ಕಡಿಮೆಯೇ ಎಂಬಂತೆ ಜನ ನಡೆದುಕೊಳ್ಳುತ್ತಾರೆ.

ಮಲ್ಲಿಗೆಹಳ್ಳಿಯ ಹಳೆಯ ಅರ್ಚಕ ಮರೆಯಾಗಿ, "ದೇವರೂ" ಅನಾಥರಾಗಿ ನಿತ್ಯಾ ಎರಡು ಹೊತ್ತು ತಳಿಗೆ "ನೋಡುತ್ತಿದ್ದ" ದೇವರು ಒಂದೇ ಹೊತ್ತು ನೋಡುವುದಕ್ಕೂ ಕೆಲವುಸಲ ಎರಡು ದಿವಸಕ್ಕೆ ಒಂದು ಹೊತ್ತು ನೋಡುವುದಕ್ಕೂ ಪ್ರಾರಂಭಿಸಿದನು. ಊರಿನಲ್ಲಿ ಇದ್ದಕ್ಕಿದ್ದಂತೆ ಒಬ್ಬನ ಹಸು ಉಚ್ಚಿಕೊಂಡಿತು. ಒಂದು ಎಮ್ಮೆ ನಿತ್ಯಾ ಸಾಧುವಾಗಿ ಹಾಲು ಕೊಡುತ್ತಿದ್ದುದು ಆವತ್ತು ಒದೆಯಿತು. ತೇರಿನ ಹತ್ತಿರದ ಕತ್ತಿ ಕಾಯಿ ಮರದ ಮೇಲೆ ಒಂದುದಿನ ಇನ್ನೂ ಸಾಯಂಕಾಲವಾಗುತ್ತಿರು ವಾಗಲೇ ಗೂಬೆ ಕೂಗಿತು. ಇಂತಹ ಪ್ರಳಯದ ಸೂಚನೆಗಳು ಹಿಂದೆ ಎಷ್ಟೋ ಆಗಿದ್ದುವು. ಆದರೆ ಯಾರೂ ಅವುಗಳನ್ನು ಅಷ್ಟಾಗಿ ಗಮನಿ ಸಿರಲಿಲ್ಲ. ಈಗ ಇದ್ದಕ್ಕಿದ್ದಂತೆ "ದೇವಸ್ಥಾನದಲ್ಲಿ ಸರಿಯಾದ ಪೂಜಾರಿ ಇಲ್ಲ. ಆದುದರಿಂದಲೇ ಹೀಗೆಲ್ಲಾ ಆಗುತ್ತಿದೆ" ಎಂದು ವದಂತಿ ಹೊರಟಿತು. ಮುಖ್ಯವಾಗಿ ಗೌಡುಗಳೂ ಹರಿಜನರೂ ಸ್ತ್ರೀಯರೂ ಈ ವಿಷಯ ಬಹಳ ಮನಸ್ಸಿಗೆ ಹಚ್ಚಿಕೊಂಡರು. ನದಿಯ ತೀರದಲ್ಲಿ ಸುಂದರವಾದ ತೋಪಿನ ಮಧ್ಯೆ ಶಾಂತಿಯ ವಾತಾವರಣದಲ್ಲಿ ನಿಜ ವಾಗಿಯೂ ಭಗವಂತನ ಸಾನಿಧ್ಯವೇ ಆಗಿದ್ದ ದೇವಸ್ಥಾನ, ಸುಮಾರಾಗಿ ಪಾಳುಬೀಳಲು ಪ್ರಾರಂಭಿಸಿತ್ತು. ಸಾಯಂಕಾಲ ೬ ಗಂಟೆಯಿಂದ ಎಂಟು ಗಂಟೆಯುವರೆಗೂ—ಅನೇಕ ಬೆಳದಿಂಗಳಿನ ದಿನಗಳಲ್ಲಿ ೯-೧೦ ಗಂಟೆವರೆಗೂ—ಗ್ರಾಮಸ್ಥರಿಂದ ಕಲ ಕಲ ಶಬ್ದದೊಡನೆ! ನಗುತ್ತಿದ್ದ

ದೇವಾಲಯದಲ್ಲಿ, ಗೆಲುವೇ ಇಲ್ಲವಾಯಿತು. ಸ್ತ್ರೀ ಪುರುಷರು ಸ್ನಾನಕ್ಕೂ ನೀರು ತರುವುದಕ್ಕೂ ಬಟ್ಟೆ ಒಗೆದುಕೊಳ್ಳುವುದಕ್ಕೂ ಹೋಗುತ್ತಿದ್ದ ದೇವಸ್ಥಾನದ ಕಡುವಿನಲ್ಲಿ ಅವರಿಗೆ ಏನೋ ಒಂದು ಬಿಮ್‌ ಎಂದು ತೋರುತ್ತಿದ್ದಿತು. "ನಮ್ಮ ಮಿತ್ರ ಅಲ್ಲಿ ಒಳಗೆ ಎಚ್ಚರವಾಗಿ ನಮ್ಮನ್ನು ಕಾಯುತ್ತಿದ್ದ. ಈಗ ಮಲಗಿದ್ದಾನೆ ಪೂಜೆಯಿಲ್ಲ" ಎಂದು ಅವರಿಗೆ ಭಾಸವಾಯಿತು. ಸಂಧ್ಯಾಕಾಲ, ಮನೆಯಲ್ಲಿ ಹೆಚ್ಚು ಕೆಲಸಗಳಿದ್ದ ಒಬ್ಬಂಟಿಗರಾದ ಹೆಂಗಸರು ಹೊತ್ತಾಗಿ ನದಿಗೆ ಬಂದು ಬೇಗ ಬೇಗ ಪಾತ್ರೆ ಬೆಳಗಿಕೊಂಡು ಹೊರಡುವ ವೇಳೆಗೆ ಸೂರ್ಯಾಸ್ತಮಯವಾಗುತ್ತಿದ್ದಿತು. ದೂರದಲ್ಲಿ ಕತ್ತಲೆಯ ನೆರಳುಗಳು ಬೀಳುತ್ತಿರುವುದರಿಂದ ಅವರಿಗೆ ಒಂದೊಂದು ಸಲ ಭಯವಾಗುತ್ತಿದ್ದಿತು. ಆದರೆ ಅವರಿಗೆ ಎದುರಿಗೆ ಇರುವ ನರಸಿಂಹಸ್ವಾಮಿಯ ನೆನಪಿನಿಂದ ಧೈರ್ಯವುಂಟಾಗುತ್ತಿದ್ದಿತು. ಆ ವೇಳೆಗೆ ಸರಿಯಾಗಿ ದೇವಸ್ಥಾನದ ಸಂಧ್ಯಾಕಾಲದ ಪೂಜೆಯ ಗಂಟೆ ಢಂ ಎಂದು ಬಾರಿಸಿ "ಇಲ್ಲಿ ಇದ್ದೇನೆ" ಎಂದು ಸೂಚಿಸುತ್ತಿದ್ದಂತೆ ತೋರುತ್ತಿದ್ದಿತು.

ಇಂತಹ ಪವಿತ್ರವಾದ ಸ್ಥಳ, ಗ್ರಾಮದ ವಿಶ್ರಾಂತಿ ಸ್ಥಾನ, ಹೀಗೆ ಪಾಳು ಬಿದ್ದುದರಿಂದ ಯುವಕರಿಗೆ ಬಹಳ ಕಿಂಕೃತಿಯುಂಟಾಯಿತು. ಅವರು "ದೇವರು ಇದ್ದಾನೋ ಇಲ್ಲವೋ ಅದನ್ನು ಬಲ್ಲವರು ಯಾರು? ಆದರೆ ಎಂತಹ ಅನಿರ್ವಚನೀಯ ಪ್ರಕೃತಿ ಸೌಂದರ್ಯದ ಶಾಂತಿಯುತವಾದ ಸ್ಥಳ ಇದು. ಇದು ನಿಜವಾಗಿ ನಮ್ಮ ಆಸ್ತಿ. ಇದನ್ನು ಕಾಪಾಡಬೇಕು" ಎಂದುಕೊಂಡು ಗ್ರಾಮದ ಮುಖಂಡರಿಗೆ "ಸರಿಯಾದ ಅರ್ಚಕ ಬರುವ ವರೆಗೆ ನೀವೇ ಈ ಪೂಜೆ, ಯಾರಾದರೂ ಮಾಡಿ, ದೇವಸ್ಥಾನ ಗೆಲುವಾಗಿರಲಿ" ಎಂದು ಹೇಳಿಕೊಂಡರು. ಆದರೆ ಈ ಕೆಲಸಕ್ಕೆ ಯಾರೂ ಮುಂದಾಗಿ ಬರಲಿಲ್ಲ. "ದೇವರ ಪೂಜೆ ಒಂದು ದಿನ ಸರಿಯಾಗಿ ನಡೆಯದಿದ್ದರೂ ಪ್ರಳಯ ಸಂಭವಿಸುತ್ತದೆ" ಎಂದು ಹೇಳುತ್ತಿದ್ದ ಹಿರಿಯರೆಲ್ಲ "ಭಗವಂತನಲ್ಲಿ ನಮಗೆ ಆ ಅಪಚಾರ ಬೇಡ" ಎಂದು ಹಿಂದೆಗೆದರು. ಆಗ ಊರಿನ ಯುವಕರು ನಿಜವಾಗಿಯೇ ಬಡವನಾಗಿದ್ದ ಗೋಪಾಲನನ್ನು ಕೇಳಿಕೊಂಡರು. ಗೋಪಾಲ ಆ ವೇಳೆಗೆ ಆಗಲೆ ಸಮಾಜದ ತಿರಸ್ಕಾರಕ್ಕೆ ಪಾತ್ರನಾಗಿದ್ದನು. ಗೋಪಾಲ ತೆಗೆದುಕೊಂಡ ಸಾಲವನ್ನು

ಅನಂತುವಿನ ತಂದೆಗೆ ಹಿಂದಿರುಗಿಸದ ಕಾರಣದಿಂದ ಅವನಿಗೆ ಸಿವಿಲ್ ಜೈಲು ಆಗಿತ್ತು. ಆ ಸಾಲವನ್ನು ಅವನ ತಂದೆ ಸಾಯುವಾಗ ಅವನ ತಲೆಯ ಮೇಲೆ ಹಾಕಿ ಸತ್ತರು. ಅದೂ ಅವರು ಅನಂತುವಿನ ತಂದೆಗೆ ನಿಜವಾಗಿ ಕೊಡಬೇಕಾಗಿರಲಿಲ್ಲವಂತೆ. ಅನಂತುವಿನ ತಂದೆಯ ಸಾಲ ತೀರಿದ್ದರೂ ಇನ್ನೂ ಪತ್ರ ಅವರಲ್ಲಿಯೇ ನಂಬಿಕೆಯಿಂದ ನಿಂತಿತ್ತು. ಯಾವಾಗಲಾದರೂ ಸಾಹುಕಾರರಿಗೆ ಸುಳ್ಳು ಸಾಕ್ಷಿ ಹೇಳಬೇಕಾದರೆ ಗೋಪಾಲನ ತಂದೆಯನ್ನು ಕರೆಯುತ್ತಿದ್ದರು. ಗೋಪಾಲನ ತಂದೆ ಒಂದು ಸಲ ಹಿಂದೆಗೆದಾಗ ಸಾಹುಕಾರರು "ನಿನ್ನ ಪತ್ರ ನನ್ನ ಹತ್ತಿರ ಇರುವುದನ್ನು ಮರೆಯಬೇಡ" ಎಂದರು. ಆ ಬಡಪಾಯಿಗೆ ಬಹಳ ಭಯವುಂಟಾಯಿತು. ಅವನು ಸಾಹುಕಾರರು ಕರೆದಾಗ ಸುಳ್ಳು ಸಾಕ್ಷಿ ಹೇಳುತ್ತಲೇ ಬಂದನು. ತಂದೆ ಸತ್ತಮೇಲೂ ಪತ್ರ ಸಾಹುಕಾರರಲ್ಲಿಯೇ ಉಳಿದಿತ್ತು.

ಒಂದು ಸಲ ಸಾಹುಕಾರರು ಗೋಪಾಲನನ್ನು "ಇಂತಹ ಒಂದು ಸಾಕ್ಷಿ ಹೇಳು" ಎಂದು ಕರೆದರು. ಆ ಸಾಕ್ಷಿಯನ್ನು ಯಾರಿಗೆ ವಿರೋಧ ವಾಗಿ ಗೋಪಾಲ ಹೇಳಬೇಕಾಗಿದ್ದಿತೋ ಆ ಹೆಂಗಸು ಬಡವಳೂ ವಿಧವೆಯೂ ಆಗಿದ್ದುದರಿಂದ ಗೋಪಾಲ ಸಾಕ್ಷಿ ಹೇಳಲು ಒಪ್ಪಲಿಲ್ಲ. ಸಾಹುಕಾರರು ಗೋಪಾಲನ ತಂದೆಯ ಪತ್ರದ ಮೇಲೆ, ಗೋಪಾಲನನ್ನು ಕೋರ್ಟಿಗೆ ಎಳೆದು ಡಿಕ್ರಿ ಪಡೆದರು. ಗೋಪಾಲ ಇದ್ದ ವಿಚಾರ ಕೋರ್ಟಿ ನಲ್ಲಿ ಸ್ಪಷ್ಟವಾಗಿ ಹೇಳಿ ತಾನು ಹಣ ಕೊಡಬೇಕಾಗುವುದಿಲ್ಲವೆಂದೂ, ಸುಳ್ಳು ಸಾಕ್ಷ್ಯ ಕೊಡಲು ತಿರಸ್ಕರಿಸಿದುದರಿಂದ ಹೀಗೆ ಸಾಹುಕಾರರು ತನ್ನ ಮೇಲೆ ಅನ್ಯಾಯ ಮಾಡಿರುವರೆಂದೂ ಹೇಳಿದನು. ನ್ಯಾಯಾಧಿಪತಿ ಗೋಪಾಲನ ಮಾತನ್ನು ಕೇಳಿ ಅದು ನಿಜವೆಂದು ನಂಬಿದರೂ ಗೋಪಾಲ ನಿಗೆ ಯಾವ ಸಹಾಯವನ್ನೂ ಮಾಡಲಾರದೆ ಹೋದರು. ನಿಜ, ನಿಜವಾಗ ಬೇಕಾದರೆ ಕೋರ್ಟಿಗೆ ಹೋಗಬೇಕೆ? ಮಾತಿಗೆ ಮುಂಚೆ "ಕೋರ್ಟಿನಲ್ಲಿ ಹೇಳೊ ಮಾತು ಹೇಳಬೇಡ, ನಿಜ ಹೇಳು" ಎಂದು ಹೇಳುವುದಿಲ್ಲವೆ? ಕೋರ್ಟಿನಲ್ಲಿಯೂ ನಿಜವೇ ನಿಜವಾಗುವುದಾದರೆ ಇಷ್ಟೊಂದು ನ್ಯಾಯಾ ಧೀಶರೂ, ನ್ಯಾಯವಾದಿಗಳೂ ನ್ಯಾಯಶಾಸ್ತ್ರ ಹೇಳಿಕೊಡುವ ಕಾಲೇಜು ಗಳೂ ಯಾಕೆ?

ಸಾಹುಕಾರರ ದಾವದ ಮೇಲೆ ನ್ಯಾಯಾಧೀಶರು "ಪ್ರತಿವಾದಿ

ಯಾದ ಗೋಪಾಲ ಹೇಳುವ ಮಾತು ನಿಜವಾಗಿ ತೋರುತ್ತೆ. ಈ ನ್ಯಾಯ ಸ್ಥಾನದಲ್ಲಿ ಬರುತ್ತಿರುವ ಸಾಹುಕಾರರ ಅನೇಕ ವ್ಯವಹಾರದಿಂದ ಅವರು ಸತ್ಯಸಂಧರಲ್ಲವೆಂದೂ ಯಾವುದಕ್ಕೂ ಹೇಸುವವರಲ್ಲವೆಂದೂ ಚೆನ್ನಾಗಿ ಗೊತ್ತಾಗುತ್ತದೆ. ಸತ್ಯ ಈ ರೀತಿ ಇದ್ದರೂ ಗೋಪಾಲ ಹಣ ಕೊಡಬೇಕಾದುದಿಲ್ಲವೆಂದು ನನಗೆ ತೋರಿದರೂ, ಕೋರ್ಟಿನ ಕಾನೂನಿನಂತೆ ಗೋಪಾಲನ ಮೇಲೆ ಡಿಕ್ರಿ ಕೊಡುತ್ತೇನೆ'' ಎಂದು ಬರೆದರು. ಸಾಹುಕಾರರ ಕೆಲಸಗಳೆಲ್ಲಾ ಸರ್ಕಾರದ ಕೆಲಸಗಳಷ್ಟೇ ವೇಗವಾಗಿ ನಡೆಯುತ್ತಿದ್ದವು. ಅವರು ಸರಸರನೆ ಡಿಕ್ರಿಯನ್ನು ಜಾರಿಗೆ ಕೊಟ್ಟು ಹಣ ವಸೂಲಾಗಲಿಲ್ಲವೆಂಬ ಕಾರಣದಿಂದ ಗೋಪಾಲನನ್ನು ಸಿವಿಲ್ ಸಾಲದ ಜೈಲಿಗೆ ಸೇರಿಸಿದರು.

ಈ ಸೇಡಿನಿಂದ ಸಾಹುಕಾರರಿಗೇನೋ ಗೋಪಾಲನ ಮೇಲಿದ್ದ ಕೋಪ, ದ್ವೇಷ ಸ್ವಲ್ಪ ಶಮನವಾಯಿತು. ನ್ಯಾಯಾಧಿಪತಿ ತನ್ನನ್ನು ಕುರಿತು ''ಸುಳ್ಳುಗಾರ ಯಾವುದಕ್ಕೂ ಹೇಸದವನು'' ಎಂದು ಬರೆದಿದ್ದುದಕ್ಕೆ ಗೋಪಾಲನಿಗೆ ತಕ್ಕ ಪ್ರತೀಕಾರ ಮಾಡಿದೆ ಎಂದುಕೊಂಡರು ಅವರು. ಅವರ ವಿಚಾರದಲ್ಲಿ ಜನರಿಗೆ ಇದ್ದ ಭಯವೇನೋ ಮೊದಲಿಗಿಂತ ಹೆಚ್ಚಾಯಿತು. ಆದರೆ ಗೋಪಾಲನ ವಿಷಯದಲ್ಲಿ ಜನರಿಗೆ ಎಷ್ಟು ತಿರಸ್ಕಾರವುಂಟಾಗಬೇಕೆಂದು ಸಾಹುಕಾರರು ಬಯಸಿದ್ದರೋ, ಎಷ್ಟು ತಿರಸ್ಕಾರ ಆಗುತ್ತೆ ಎಂದು ನಿರೀಕ್ಷಿಸಿದ್ದರೋ ಅಷ್ಟು ಆದಂತೆ ತೋರಲಿಲ್ಲ. ಇದನ್ನು ನೋಡಿ ಸಾಹುಕಾರರಿಗೆ ಬಹಳ ಆಶ್ಚರ್ಯವಾಯಿತು. ಅದುವರೆಗೆ ಮಲ್ಲಿಗೆಹಳ್ಳಿಯಲ್ಲಿ ಹಣಕೊಡದೆ ಜೈಲಿಗೆ ಹೋಗಿದ್ದವನು ಗೋಪಾಲ ಒಬ್ಬನೇ. ಆದರೆ ಜನರ ಮನಸ್ಸು ಬಹಳ ಪರಿವರ್ತನೆ ಹೊಂದಿತ್ತು. ಜೈಲು ಎಂದರೆ ಹಿಂದೆ ಎಷ್ಟು ಭಯವಿತ್ತೊ, ಹೋಗಿ ಬಂದವನಲ್ಲಿ ಎಷ್ಟು ತಿರಸ್ಕಾರವಿತ್ತೊ ಅದು ಈಗ ಕಡಿಮೆಯಾಗಿತ್ತು. ಒಂದು ಹೊತ್ತು ಊಟ ಸಿಕ್ಕುವುದೇ ಕಷ್ಟವಾಗುತ್ತಿರುವ ದೇಶದಲ್ಲಿ ಜನರ ಮನಸ್ಸು ಬಹುಕಾಲ ನಿಜವಾದ ಪರಿಸ್ಥಿತಿಯನ್ನು ಎದುರಿಸದೆ ಇರುವುದು ಸಾಧ್ಯವಿಲ್ಲ. ''ಇದರಲ್ಲಿ ಏನು ಮಹಾ ಇವತ್ತು ಇವನಿಗೆ ಆಯಿತು. ನಾಳೆ ನಮಗೆ ಆಗುತ್ತೆ'' ಎಂದುಕೊಂಡರು ಜನ. ಜೈಲಿನಿಂದ ಹೊರಕ್ಕೆ ಬಂದ ಗೋಪಾಲನೂ ಎಲ್ಲರಂತೆ ಸ್ವಾಭಾವಿಕವಾಗಿ ನಡೆದುಕೊಂಡನು. ಏನೂ ನಡೆಯದಿದ್ದವ

ನಂತೆಯೇ ಊರಿನವರೊಂದಿಗೆ ಮಾತುಕಥೆಯಾಡಿದನು. ಜೈಲಿನ ಮಾತು ಬಂದಾಗ ಸರಳವಾಗಿ, ಆ ಮಾತನ್ನು ಬೇರೆ ಕಡೆ ತಿರುಗಿಸಲು ಪ್ರಯತ್ನ ಪಡದೆ ನಾಚಿಕೆಹೊಂದದೆ ಸರಿಯಾಗಿ ಪ್ರತ್ಯುತ್ತರ ಕೊಡುತ್ತಿದ್ದನು. ಸಾಹುಕಾರರಿಗಂತೂ, "ಗೋಪಾಲನ ಹೆಂಡತಿ ಮಕ್ಕಳೂ ಸಹ ಅವನೊಂದಿಗೆ ಸರಿಯಾಗಿ ಮಾತನಾಡುವುದಿಲ್ಲ. ನಾಚಿಕೆಯಿಂದ ತಲೆ ತಗ್ಗಿಸುತ್ತಾರೆ" ಎನ್ನಿಸಿತ್ತು. ಆದರೆ ಅವರು ಗೋಪಾಲನನ್ನು ಅವನಿಗೆ ಬಿಡುಗಡೆಯಾದಾಗ ಮನೆಬಾಗಿಲಿನಲ್ಲಿ ನಿಂತುಕೊಂಡು ಸ್ವಾಭಾವಿಕವಾಗಿ ಸ್ವಾಗತಿಸಿ, ಅವನ ಸ್ವಲ್ಪ ಬಾಡಿದ ಮುಖವನ್ನು ಕನಿಕರದಿಂದ ನೋಡಿ ಒಳಕ್ಕೆ ಕರೆದುಕೊಂಡು ಹೋದಾಗ ಸಾಹುಕಾರರು "ಜಗತ್ತು ತಲೆ ಕೆಳಕಾಯಿತು. ಲೋಕದಲ್ಲಿ ಮಾನ ಮರ್ಯಾದೆ ದೊಡ್ಡಸ್ತಿಕೆ ಎಲ್ಲಾ ಮಣ್ಣುಪಾಲಾಯಿತು. ಈ ಜನರಿಗೆ ಹಿಟ್ಟೂ ಒಂದೇ ಬೂದಿಯೂ ಒಂದೇ" ಎಂದುಕೊಂಡರು. ಅನಂತರ ಸಾಹುಕಾರರು "ಜೈಲಿಗೆ ಹೋಗಿ ಬಂದವನಿಗೆ ಪ್ರಾಯಶ್ಚಿತ್ತವಾಗಬೇಕು" ಎಂದರು. ಜನರು "ಹೋಗಿ ಹೋಗಿ. ಬಡತನವೇನೂ ಪಾಪವಲ್ಲ. ನಾಳೆ ನಮ್ಮ ಮೇಲೂ ನಿಮಗೆ ಸಿಟ್ಟು ಹತ್ತಿದರೆ ನಮಗೂ ಜೈಲು ಆಗಬಹುದು" ಎಂದರು. ಒಟ್ಟಿನಲ್ಲಿ ಗೋಪಾಲನಿಗೆ ಈ ಜೈಲಿನಿಂದ ಎಷ್ಟು ಅವಮಾನವಾಗಬೇಕೋ ಅಷ್ಟು ಆಗಲಿಲ್ಲವೆಂದು ಸಾಹುಕಾರರವರು ಅಸಮಾಧಾನಪಟ್ಟುಕೊಂಡರು.

ಗೋಪಾಲನಿಗೆ ಜೈಲನಿಂದ ಬಿಡುಗಡೆಯಾದ ಮೇಲೂ ಸಾಹುಕಾರರು ಸಾಧ್ಯವಾದಷ್ಟು ಮಟ್ಟಿಗೆ ಸಮಾಜದಲ್ಲಿ ಅವನ ಸ್ಥಾನವನ್ನು ಕಡಿಮೆಯಾಗಿ ಇಡಲು ಪ್ರಯತ್ನಿಸುತ್ತಿದ್ದರು. ಇದರಿಂದ ಮೊದಲೇ ಬಡಪಾಯಿಯೂ ನಿರ್ಧನನೂ ಆಗಿದ್ದ ಅವನಿಗೆ ತನ್ನ ಮಗಳಿಗೆ ಮದುವೆ ಮಾಡಲು ಸರಿಯಾದ ವರ ದೊರೆಯಲೇ ಇಲ್ಲ. ಆಕಸ್ಮಾತ್ತಾಗಿ ಯಾರಾದರೂ ನೋಡುವುದಕ್ಕೆ ಬಂದರೂ ಸಾಹುಕಾರರ ಬಾಯಿನಿಂದ ಅವರ ಕಿವಿಗೆ ಗೋಪಾಲ ಜೈಲಿನಲ್ಲಿದ್ದುದೂ ಯಾವ ವಿಧವಾದ ಪ್ರಾಯಶ್ಚಿತ್ತಾದಿಗಳನ್ನೂ ಮಾಡಿಕೊಳ್ಳದೆ ಇರುವುದೂ, ಅದರಿಂದ ಅವನಿಗೆ ಊರಿನಲ್ಲಿ ಸಮಾಜದಲ್ಲಿ ಸರಿಯಾದ ಸ್ಥಾನ ಇಲ್ಲದುದೂ ಗೊತ್ತಾಗುತ್ತಿದ್ದಿತು. ಇಂತಹ ನತದೃಷ್ಟದವನ ಮಗಳನ್ನು ಯಾರು ಮದುವೆಯಾಗುತ್ತಾರೆ? ಗೋಪಾಲ ವಿಧಿಯಿಲ್ಲದೆ ಹೆಣ್ಣನ್ನು ತನ್ನ ಪಂಗಡದಿಂದ ಸ್ವಲ್ಪ ಹೊರಗೆ ಮದುವೆ

ಮಾಡಿದನು. ಅದೂ ಅವನ ಮೇಲೆ ಅವನ ಸ್ವಂತ ಸಮಾಜದ ಕೂಪ ಕೂರ್ಮರ ಆಕ್ಷೇಪಣೆಗೆ ಕಾರಣವಾಯಿತು.

ಇಂತಹ ಸಂದರ್ಭದಲ್ಲಿ ಮಲ್ಲಿಗೆಹಳ್ಳಿಯ ಪೂಜಾರಿ ಓಡಿಬಿಟ್ಟುದರಿಂದ ಊರಿನ ಯುವಕರು ಗೋಪಾಲನನ್ನು ಪೂಜಾರಿವೃತ್ತಿ ವಹಿಸಿಕೊಳ್ಳುವಂತೆ ಬಲಾತ್ಕರಿಸಿದರು. ಆದರೆ ಆ ವೇಳೆಗೆ ಸಾಹುಕಾರರೂ ಸ್ವರ್ಗಸ್ಥರಾಗಿದ್ದುದರಿಂದ ಗೋಪಾಲನನ್ನು ಆ ದೇವಸ್ಥಾನದ ಪವಿತ್ರತೆಯ ಹೆಸರಿನಲ್ಲಿ ಪ್ರತಿಭಟಿಸುವವರೂ ಯಾರೂ ಇರಲಿಲ್ಲ. ಗೋಪಾಲನ ಸ್ಥಿತಿ ತನ್ನ ಸ್ವಂತ ಸಮಾಜದಲ್ಲಿ ಸ್ವಲ್ಪ ಕಡಿಮೆಯೇ ಆಗಿತ್ತು. ಆದರೆ ಅದನ್ನು ಅವನು ಲಕ್ಷ್ಯದಲ್ಲಿ ತರಲಿಲ್ಲ. ದೇವರ ಜಮೀನಿನಿಂದ ಅವನ ಜೀವನವೂ ಸಂಸಾರವೂ ಸುಖವಾಗಿ ಕಳೆಯುತ್ತಿತ್ತು.

ಗೋಪಾಲನ ನಾಲ್ಕು ಜನ ಗಂಡು ಮಕ್ಕಳೂ ನಿಧಾನವಾಗಿ ಬೆಳೆಯತೊಡಗಿದರು. ಬಡತನದಲ್ಲಿ ಬೆಳೆದ ಬಡ ಹುಡುಗರಾದುದರಿಂದ ಅವರು ಒಳ್ಳೆಯ ವಿನಯ ಸಂಪನ್ನರಾಗಿ ಕಷ್ಟಪಟ್ಟು ಕೆಲಸ ಮಾಡುವವರಾಗಿ ಸ್ಕೂಲಿನಲ್ಲಿಯೂ ತರಗತಿಯಿಂದ ತರಗತಿಗೆ ಪ್ರಶಸ್ತಿಯಿಂದಲೇ ಏರುವವರಾದರು. ಮಕ್ಕಳು ಬೆಳೆದು ದೊಡ್ಡವರಾದಂತೆಲ್ಲಾ ಗೋಪಾಲನ ಗೌರವವೂ ಸಮಾಜದಲ್ಲಿ ಬೆಳೆಯುತ್ತಾ ಬಂದಿತು. ಗೋಪಾಲನ ಹಿರಿಯ ಮಗ ನಾರಾಯಣ ಇಂಟರ್ ಮಿಡಿಯೇಟ್ ಪರೀಕ್ಷೆಮಾಡಿ ಬಿ.ಎ. ತರಗತಿಯಲ್ಲಿದ್ದನು. ಗೋಪಾಲನಿಗೆ ವೈದಿಕ ಸಮಾಜದಲ್ಲಿ ಹಿಂದೆ ಇದ್ದ ತಿರಸ್ಕಾರ ಕಡಮೆಯಾಯಿತು. ಹೆಣ್ಣಿನ ತಾಯಂದಿರು ಬಂದು ಸುಶೀಲಮ್ಮನವರ (ಗೋಪಾಲನ ಹೆಂಡತಿ) ಕಾಲು ಕಟ್ಟಲು ಪ್ರಾರಂಭಿಸಿದರು. ಎಲ್ಲಾದಕ್ಕಿಂತ ಹೆಚ್ಚು ವಿಚಿತ್ರ, ಯಾವ ಗೋಪಾಲನನ್ನು ಸಾಹುಕಾರರು ಜೈಲಿಗೆ ಸೇರಿಸಿ ಸಮಾಜದಿಂದ ತಿರಸ್ಕೃತನನ್ನಾಗಿ ಮಾಡಿದ್ದರೋ ಆ ಪುಟ್ಟೀರಪ್ಪನವರ ಮಗ ಅನಂತು ಈ ಗೋಪಾಲನನ್ನು ನಮ್ಮ ವಂಶ ಉದ್ಧಾರ ಮಾಡಬೇಕು ಎಂಬುದಾಗಿ ಬೇಡತೊಡಗಿದನು. ಕಾಲದ ಮಹಿಮೆ ವಿಚಿತ್ರ. ಅಥವ ಹೆಣ್ಣಿನ ಮಹಿಮೆ ವಿಚಿತ್ರ ಎನ್ನುತ್ತೇವೆ. ಅದು ಎದ್ದವನನ್ನು ಮೊಟ್ಟುತ್ತದೆ. ಬಿದ್ದವನನ್ನು ಎತ್ತುತ್ತದೆ. ಎದ್ದ ಅನಂತು ಬಿದ್ದ; ಬಿದ್ದ ಗೋಪಾಲ ಎದ್ದ. ನಾರಾಯಣನಿಗೆ ಅನಂತುವಿನ ಮಗಳು ಮಂಗಳೆಯನ್ನು ಕೊಟ್ಟು ವಿವಾಹಮಾಡುವುದು ಗೊತ್ತಾಯಿತು. ವೈದೇಹಿಗೂ ಮಂಗಳೆಗೂ ಒಂದೇ ದಿನ ಮದುವೆ ಗೊತ್ತಾಯಿತು.

# ೧೬. ಮರಿಯ

ಊಟಕ್ಕೆ ಕುಳಿತಿದ್ದಾಗ, ಕೋಟೆ ಆಚೆಯ ಹೆಂಡದಂಗಡಿಯ ಕೋಲಾಹಲವನ್ನು ಕೇಳಿ ಹೊಸ ಹೆಂಡ ಬಂದುದನ್ನರಿತು, ಹೆಂಡಕ್ಕೆ ಕೈಯಲ್ಲಿ ದುಡ್ಡಿಲ್ಲದುದರಿಂದ ಗಂಗಳದ ಹಿಟ್ಟನ್ನು ನೆಲದ ಮೇಲೆ ಸುರಿದು ಗಂಗಳವನ್ನು ಎತ್ತಿಕೊಂಡು ಓಡಿಹೋದ ಭೂಪ ತೋಪನ ಮಗ ಮರಿಯ. ಮರಿಯ ಅನಂತುವಿನ ಮನೆಯ ಆಳು.

ಮರಿಯ ವಿಚಿತ್ರವಾದ ಪ್ರಾಣಿ. ಅವನು ಬುದ್ಧಿವಂತನೋ ದಡ್ಡನೋ ಯಾರಿಗೂ ಗೊತ್ತಾಗುತ್ತಿರಲಿಲ್ಲ. ಒಂದೊಂದು ವೇಳೆ ಅವನು ಅತ್ಯಂತ ಬುದ್ಧಿವಂತರಿಗೆ ಮಾತ್ರ ತಿಳಿಯುವ ಕೆಲಸಗಳನ್ನು ಮಾಡುತ್ತಿದ್ದನು. ಅನೇಕ ವೇಳೆ ಯಾವ ಹೆಡ್ಡನೂ ಮಾಡದ ತಪ್ಪು ಕೆಲಸಗಳನ್ನು ಮಾಡುತ್ತಿದ್ದನು. ಯಾರು ಎಷ್ಟು ಬೈದರೂ ಅವನು ಅದನ್ನು ಮನಸ್ಸಿಗೇ ಹಚ್ಚಿಕೊಳ್ಳುತ್ತಿರಲಿಲ್ಲ. ವಸಿಷ್ಠನ ಮೇಲೆ ಬಿಟ್ಟ ವಿಶ್ವಾಮಿತ್ರನ ಬಾಣಗಳಂತೆ ಬೈಗಳೆಲ್ಲಾ ಅವನಲ್ಲಿ ವ್ಯರ್ಥವಾಗಿಬಿಡುತ್ತಿದ್ದವು. ತನ್ನ ಯಜಮಾನರು ತನ್ನನ್ನು ಪಟಪಟನೆ ಬೈಯ್ಯುತ್ತಾ ಇದ್ದುದನ್ನು ಕಂಡು ಮರಿಯ ಒಂದೊಂದು ಸಮಯದಲ್ಲಿ ಅಯ್ಯೋ ಪಾಪ ಎನ್ನುವಂತೆ ಅವರ ಕಡೆ ಕನಿಕರದಿಂದ ನೋಡಿದುದೂ ಉಂಟು. ಅವನ ಆ ನೋಟವನ್ನು ಕಂಡು ಯಜಮಾನರಿಗೆ ಮತ್ತಷ್ಟು ರೇಗಿಹೋಗುತ್ತಿದ್ದಿತು. ಆ ವೇಳೆಗಳಲ್ಲಿ ನಿಜವಾಗಿ ತಪ್ಪುಮಾಡಿದ್ದವನು ಮರಿಯನೇ ಆಗಿದ್ದರೂ ಯಜಮಾನರಿಗೆ ತಾನೇ ತಪ್ಪಿತಸ್ಥನೋ ಎಂಬ ಭಾವ ಉಂಟಾಗುತ್ತಿದ್ದಿತು. ಮರಿಯ ಅನಂತುವಿನ ಮನೆಯ ಆಳು ಆದರೂ ಯಾವ ಕೆಲಸವನ್ನೂ ತನ್ನ ಇಷ್ಟದಂತೆಯೇ ಮಾಡುತ್ತಿದ್ದನು. ಅನಂತು ಎಷ್ಟು ಕೂಗಿಕೊಂಡರೂ ಅದರಿಂದ ಅವನಿಗೇನೂ ಗಾಬರಿಯಾಗುತ್ತಲೇ ಇರಲಿಲ್ಲ. ಮನೆಯ ಯಜಮಾನ ಅನಂತುವಾದರೂ ಮನೆಯ ಕೆಲಸಗಳೆಲ್ಲಾ ಮರಿಯನ ಇಚ್ಛೆಯಂತೆಯೇ ನಡೆಯುತ್ತಿದ್ದವು.

ಮರಿಯನ ಯೋಗ್ಯತೆಯನ್ನು ಕಂಡುಹಿಡಿಯಲು ಅನಂತುವಿಗೆ ಹೆಚ್ಚು ಕಾಲ ಬೇಕಾಗಲಿಲ್ಲ. ಒಂದು ದಿನ ಅನಂತು ಹೊಳೆ ಆಚೆ ಹಳ್ಳಿ

ಯಿಂದ ರಾಗಿ ತರುವುದಕ್ಕಾಗಿ ಎತ್ತು ಗಾಡಿಯನ್ನೂ ಆಳನ್ನೂ ಜತೆಯಲ್ಲಿ ಸಹಾಯಕ್ಕಾಗಿ ಮರಿಯನನ್ನೂ ಕಳುಹಿಸಿದನು. ಸೂರ್ಯಾಸ್ತದ ಹೊತ್ತಿಗೆ ಗಾಡಿ ಹಿಂದಿರುಗಿ ಹೊಳೆದಾಟಿ ಮಲ್ಲಿಗೆಹಳ್ಳಿ ಕಡೆಗೆ ಹೊರಟಿತು. ಅಷ್ಟು ಹೊತ್ತಿಗೆ ಸರಿಯಾಗಿ ಎದುರಿಗೆ ತುರುಮಂದೆಯಲ್ಲಿ ಹೆಂಡದಂಗಡಿಗೆ ಹೆಂಡದ ಗಾಡಿ ಬಂತು. ಅನಂತುವಿನ ಗಾಡಿ ಆಳು ಮರಿಯನಿಗೆ "ಒಂದು ಗಳಿಗೆ ತಡಿ. ಮೈ ಕೈ ಎಲ್ಲಾ ನೋತ—ನೋತ ಅಂದರೆ ನೋತ. ಒಂದೇ ಒಂದು ಗುಟುಕು ಕುಡಿದು ಬರ್‍ತೇನೆ" ಎಂದನು. "ಗಾಡಿ ಇಲ್ಲಿ ಬಿಟ್ಟು ಹೋಗುವುದು ಬೇಡ. ಯಜಮಾನರು ಕಂಡರೆ ಚಾಟೀಲಿ ಬಾರಿಸ್ತಾರೆ. ಮನೇಲಿ ರಾಗಿ ಮೂಟೆ ಕಿತ್ತು ಆಮೇಲೆ ಬರೀವಂತೆ ಎಂದ ಮರಿಯ. ಆಳು "ಮನೆಗೆ ಹೋದ ಮೇಲೆ ಇನ್ನು ಬರೋದು ಎಲ್ಲಿ. ಮೂಟೆನೆಲ್ಲಾ ಸುರಿದು ಕಣಜಕ್ಕೆ ಹಾಕಿ ದನಕರ ನೋಡೋಹೊತ್ಗೆ ಅರ್ಧ ರಾತ್ರಿ ಆಗ್ತದೆ. ಒಂದೇಗಳಿಗೆ" ಎಂದು ಹೇಳಿ ಮೂಕಿ ಇಳುಕಿ ಹೊರಟು ಹೋದನು. ಸುಮಾರು ಅರ್ಧ ಗಂಟೆಯ ನಂತರ ಆಳು ಬಂದಾಗ ಅವನು ಪೂರ್ಣವಾಗಿ ಕುದುರೆಯ ಮೇಲೆ ಏರಿದ್ದನು. ಆಗತಾನೇ ಬಂದಿದ್ದ ಹೊಸ ಹೆಂಡವನ್ನು ಕಂಠಪೂರ್ತಿ ಹೀರಿದ್ದುದರಿಂದಲೂ ಮೊದಲೆ ಹೆಚ್ಚಾಗಿ ಆಯಾಸಗೊಂಡುದರಿಂದಲೂ ಅವನಿಗೆ ಪೂರ್ಣವಾಗಿ ಮತ್ತು ಹಿಡಿದಿತ್ತು. ಬಂದವನೇ ಹೇಗೋ ಕಷ್ಟಪಟ್ಟು ಗಾಡಿ ಹೂಡಿದನು. ಎತ್ತುಗಳು ನಾಲ್ಕು ಹೆಜ್ಜೆ ಹಾಕುವುದರೊಳಗಾಗಿ ರಸ್ತೆಯ ಆಚೆ ಈಚೆ, ದಿವಾನರು ಬಂದಾಗ ನೆಟ್ಟು ಸುಣ್ಣ ಹೊಡೆದಿದ್ದ ಚೌಕವಾದ ಕಲ್ಲಿನ ಮೇಲೆ ಗಾಡಿ ಚಕ್ರ ಉರುಳಿ ಒಂದೇ ಏಟಿಗೆ ಧಡಂ ಎಂದು ಮೂಟೆಗಳೊಂದಿಗೆ ಮಗುಚಿ ಕೊಂಡಿತು. ದಿವಾನರು ಬಂದು ಹೊರಟುಹೋಗಿ 6 ತಿಂಗಳುಗಳಾಗಿದ್ದರೂ ಆ ಕಲ್ಲುಗಳನ್ನು ಕಿತ್ತುಹಾಕಿರಲಿಲ್ಲ. ಎಡವಿ ಎಡವಿ ಗ್ರಾಮಸ್ಥರ ಕಾಲು ಬೆರಳುಗಳೆಲ್ಲಾ ಸವೆದಿದ್ದವು. ಆದರೆ ಅದನ್ನು ಎತ್ತುಗಾಡಿ ಎಡವಿದ್ದುದು ಅದೇ ಮೊದಲು. ಗಾಡಿ ಬಿದ್ದ ಕೂಡಲೆ ಮರಿಯ ಆಚೆಗೆ ಹಾರಿದನು. ಗಾಡಿ ಆಳಿಗೆ ಮೈಮೇಲೆ ಜ್ಞಾನವೇ ಇರಲಿಲ್ಲ. ಅವನು ಹುಲ್ಲಿನಮೇಲೆ ಕುಳಿತುಕೊಂಡು ತೂಗಡಿಸುತ್ತಾ ಒಂದೆರಡು ನಿಮಿಷಗಳಲ್ಲಿ ಕೈಕಾಲು ಚಾಚಿಕೊಂಡು ಮಲಗಿಯೇ ಬಿಟ್ಟನು. ಎತ್ತುಗಳೂ ಒಂದರ ಮಗ್ಗುಲಲ್ಲಿ ಒಂದು ಮೆಲುಕುಹಾಕುತ್ತಾ ಸ್ವಾಭಾವಿಕವಾಗಿ ಮಲಗಿದವು

ವಿಚಾರ ಅನಂತುವಿಗೆ ತಿಳಿದುದರಿಂದ ಅವನು ಪಂಚಾಯ್ತಿಯ ಪೆಟ್ರೊಮಾಕ್ಸ್ ದೀಪವನ್ನೂ ನಾಲ್ಕು ಆಳುಗಳನ್ನೂ ಕರೆದುಕೊಂಡು ಗಾಡಿ ಬಿದ್ದಲ್ಲಿಗೆ ಬಂದನು. ಸಾಯಂಕಾಲದ ಗಾಳಿ ಕೊರೆಯುವಂತೆ ತಣ್ಣಗೆ ಬೀಸುತ್ತಿತ್ತು. ಆಳುಗಳು ಛಳಿಯನ್ನು ಸಹಿಸಲಾರದೆ ನಡುಗುತ್ತಾ ಬೀಡಿ ಹತ್ತಿಸಿಕೊಂಡು ಮೈ ಬೆಚ್ಚಗೆ ಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದರು. ಗಾಡಿಯ ಸಮೀಪಕ್ಕೆ ಬಂದಕೂಡಲೇ ಅನಂತುವಿಗೆ ಒಂದು ವಿಚಿತ್ರ ಕಾಣಿಸಿತು. ಒಂದು ಕಡೆ ಗಾಡಿ ಆಳು ನೆಲದ ಮೇಲೆ ಮಲಗಿ ಗೊರಕೆ ಹೊಡೆಯುತ್ತಿದ್ದನು. ಮತ್ತೊಂದು ಕಡೆ ಎರಡು ಎತ್ತುಗಳು ಮಲಗಿ ನಿಧಾನವಾಗಿ ಮೆಲುಕು ಹಾಕುತ್ತಿದ್ದುವು. ಆದರೆ ಒಂದು ಎತ್ತಿಗೆ ಕಂಬಳಿಯನ್ನೂ ಮತ್ತೊಂದು ಎತ್ತಿಗೆ ದುಪಟಿಯನ್ನೂ ಹೊದಿಸಿದ್ದಿತು. ಅನಂತುವಿಗೆ ಎತ್ತುಗಳ ಉಡುಪು ನೋಡಿ ನಗು ಬಂತು. ಅವುಗಳಿಗೆ ಹೊದಿಸಿದ್ದ ಕಂಬಳಿ ದುಪಟಿ ತಾನು ಆಳಿಗೆ ತೆಗೆದುಕೊಟ್ಟು ಅವನು ಯಾವಾಗಲೂ ಮೈಮೇಲೆ ಹಾಕಿಕೊಂಡಿರುತ್ತಿದ್ದುವೆಂಬುದು ಅವನಿಗೆ ಆ ಕತ್ತಲೆಯಲ್ಲಿಯೂ ಗೊತ್ತಾಯಿತು. ಪಾಪ ಕಂಬಳಿ ದುಪಟಿಯ ಯಜಮಾನ ಬಡಪಾಯಿ ಆಳು ನಡುಗುತ್ತಾ (ನಡುಗುತ್ತಿದ್ದನೆಂದು ಅನಂತು ತಿಳಿದುಕೊಂಡಿದ್ದನು) ನೆಲದ ಮೇಲೆ ಬಿದ್ದಿದ್ದನು. ಮರಿಯ ಏನೋ ಒಂದು ಸಾಹಸದ ಕೆಲಸಮಾಡಿದವನಂತೆ ಮುಗುಳು ನಗೆ ನಗುತ್ತಾ ಸಂತೋಷದಿಂದ ಎತ್ತುಗಳ ಕಡೆ ನೋಡುತ್ತಿದ್ದನು. ಅನಂತುವು "ಏ ಮರಿಯ ಆಳನ್ನ ಛಳೀಲಿ ಕೆಡವಿ ಅವನ ಕಂಬಳಿ ದುಪಟಿ ಎತ್ತುಗಳಿಗೆ ನೀನೆತಾನೆ ಹೊದಿಸಿದವನು. ಯಾಕೆ ಹಾಗೆ ಮಾಡಿದೆ, ದನಕ್ಕಿಂತ ಆಳಿಗೆ ಛಳಿ ಹೆಚ್ಚಾಯಿತಲ್ಲೊ" ಎಂದನು. ಮರಿಯನು "ಇಲ್ಲ ಸ್ವಾಮಿ. ವರುಷಕ್ಕೆ ೭೦ ರುಪಾಯಿ ಕೊಟ್ಟರೆ ಆಳು ಸಿಕ್ಕುತ್ತಾನೆ. ಆದರೆ ಎತ್ತಿನ ಬೆಲೆ ನೋಡಿ ಮುನ್ನೂರು. ಆಳಿಗೆ ಅಷ್ಟು ಛಳಿ ಆಗೋದಿಲ್ಲ. ಯಾಕೆ ಅಂದರೆ ಆಳು ಹೆಂಡ ಕುಡಿದಿದ್ದಾನೆ. ಹೆಂಡದ ಕಾವು ಅವನಿಗೆ ಇರೋದರಿಂದ, ಅವ ಬೀಡಿ ಸೇದೋದರಿಂದ ಅವನಿಗೆ ಯಾವಾಗಲೂ ಬೆಚ್ಚಗೆ ಇರುತ್ತದೆ. ಆದರೆ ಪಾಪ ಎತ್ತು ಹೆಂಡನೂ ಕುಡಿಯೋಲ್ಲ ಬೀಡೀನೂ ಸೇದೊಲ್ಲ. ಆದ್ದರಿಂದ ಎತ್ತಿಗೆ ಕಂಬಳಿ ದುಪಟಿ ಹೊದಿಸಿದೆ. ಮಲಗಿರೋವಾಗ ಆಳಿಗೆ ಛಳಿ ಎಲ್ಲಿ ಬಂತು ಸ್ವಾಮಿ. ಹೇಗೂ ನಿದ್ರೆ

ಬಂದಿದೆ'' ಎಂದನು. ಅನಂತುವು ಆಳನ್ನು ಎಬ್ಬಿಸುವಂತೆ ಹೇಳಿ ಗಾಡಿ ಹೊಡೆಸಿಕೊಂಡು ಮನೆಗೆ ಬಂದನು.

ಅನಂತು ಹೊಸದಾಗಿ ಎರಡು ಎಮ್ಮೆಗಳನ್ನು ಕೊಂಡುಕೊಂಡಿದ್ದನು. ಎಮ್ಮೆಗಳು ಬಹಳ ಚೆನ್ನಾಗಿದ್ದವು. ಒಂದೊಂದು ಹೊತ್ತಿಗೆ ಮೂರು ಸೇರು ಹಾಲು ಕೊಡುತ್ತಿದ್ದುವು. ಆದರೆ ಅವುಗಳನ್ನು ತೆಗೆದುಕೊಂಡು ಬಂದ 2-3 ದಿನಗಳನಂತರ ಎರಡು ಎಮ್ಮೆಗಳೂ ಒಂದೇದಿನ ಮನೆಗೆ ಬರದೆ ತಪ್ಪಿಸಿಕೊಂಡವು. ಅನಂತುವಿಗೆ ಹೊಸದಾಗಿ ತಂದ ಎಮ್ಮೆಗಳು ಹೀಗೆ ತಪ್ಪಿಸಿಕೊಂಡು ಎಲ್ಲಿಗೋ ಹೊರಟುಹೋದವಲ್ಲ ಎಂದು ಬಹು ಬೇಜಾರಾಯಿತು. ಮರಿಯನು "ನಾನು ಹೋಗಿ ಪತ್ತೆಮಾಡಿ ಹೊಡೆದು ಕೊಂಡು ಬರುತ್ತೇನೆ'' ಎಂದನು. ಮರಿಯನ ಯೋಗ್ಯತೆಯನ್ನು ಚೆನ್ನಾಗಿ ತಿಳಿದಿದ್ದ ಅನಂತು "ಸಾಕು. ಸುಮ್ಮನೆ ಕೂತುಕೊ. ನೀನು ಮಾಡೋ ಕೆಲಸ ಒಂದೆರಡಲ್ಲ. ನೀನು ಮಾಡೋದೆಲ್ಲ ತಲೆಕಳಕು'' ಎಂದನು. ಮರಿಯನಿಗೆ ಸಿಟ್ಟುಹತ್ತಿತು. ಅವನು ಈ ದಿನ ಈ ಎಮ್ಮೆ ಹಿಡಿದುಕೊಂಡು ಬರದಿದ್ದರೆ ನಾನು ಮರಿಯನೇ ಅಲ್ಲ ಎಂದುಕೊಂಡು ಮನೆಬಿಟ್ಟು ಹೊರಟನು. ಮಧ್ಯಾಹ್ನದ ಹೊತ್ತಿಗೆ ೧೦-೧೫ ಮೈಲಿ ಅಲೆದು ಕೊನೆಗೆ ಮೊಸಳೆಯ ಕೆರೆಯ ಬೈಲಿನಲ್ಲಿ ಮಲಗಿದ್ದ ಎರಡು ಎಮ್ಮೆಗಳನ್ನೂ ನೋಡಿದನು. ಮರಿಯನಿಗೆ ಬಹಳ ಖುಷಿಯಾಯಿತು. ಹೋದ ಪ್ರಾಣ ಬಂದಂತಾಯಿತು. ಸಧ್ಯ ಈ ಒಳ್ಳೆಯ ಕೆಲಸಮಾಡಿದೆ ಎಂದುಕೊಂಡನು. ಎಮ್ಮೆಗಳನ್ನು ನೋಡಿ ಅವನು ಮೊದಲು ಕೈಕಾಲುಗಳನ್ನು ನೀರಿನಲ್ಲಿ ತೊಳೆದುಕೊಂಡು ಸುಖವಾಗಿ ನೀರು ಕುಡಿದು ಕೆರೆಯ ಏರಿಯ ಹೊಂಗೆಮರದ ನೆರಳಿನಲ್ಲಿ ಮಲಗಿಕೊಂಡು ಈಗ ಅನಂತಯ್ಯನವರಿಗೆ ಹೇಗೆ ಆಗುತ್ತೆ. ನನ್ನ ಸಾಹಸ ನೋಡಿ ಜಾನಕಮ್ಮನವರಿಗೆ ಬಹಳ ತೃಪ್ತಿಯುಂಟಾಗುತ್ತೆ ಎಂದುಕೊಂಡನು. ಹೀಗೆ ೧೦-೧೫ ನಿಮಿಷ ಹಗಲು ಕನಸು ಕಂಡನಂತರ ಮರಿಯನು ಎಮ್ಮೆಗಳ ಬಳಿಗೆ ಹೋಗಿ ಅವುಗಳನ್ನು ಬಳಸಿ ಸಾಷ್ಟಾಂಗ ನಮಸ್ಕಾರಮಾಡಿ "ಮಹಿಷಿ ರಾಣಿಯರೆ? ನನ್ನಲ್ಲಿ ಪ್ರಸನ್ನರಾಗಿ. ಊರಿನ ಕಡೆಗೆ ಪಾದ ಬೆಳೆಸಿ. ನಿಮ್ಮ ದಾಸನಾದ ಮರಿಯ ನಿಮ್ಮ ಸೇವೆಗೆ ಸಿದ್ಧವಾಗಿರುವನು'' ಎಂದು ಹೇಳಿ ತಲೆಯ ಮೇಲೆ ಸುತ್ತಿದ್ದ ಪಂಚೆಯನ್ನು ತೆಗೆದು ಅದರ ಎರಡು ಅರಗನ್ನೂ ಒಂದೊಂದು

ಎಮ್ಮೆಯ ಕೋಡಿಗೆ ಕಟ್ಟಿ ತಾನು ಮಧ್ಯೆ ಅದನ್ನು ಹಿಡಿದುಕೊಂಡು ಊರಿನ ಕಡೆಗೆ ಹೊರಟನು. ಮೊದಲೇ ಎಮ್ಮೆಯ ಜಾತಿಯಲ್ಲವೇ? ಆ ಎಮ್ಮೆಗಳು ಪಂಚೆ ಹಿಡಿದುಕೊಂಡು ಹಿಂದೆ ನಿಂತರೆ ಮುಂದೆ ಹೋಗುತ್ತಲೇ ಇರಲಿಲ್ಲ. ಅವುಗಳನ್ನು ನೂಕಿ ನೂಕಿ ಅವನಿಗೆ ಸುಸ್ತಾಯಿತು. ಪಂಚೆ ಮುಂದೆ ಹಿಡಿದುಕೊಂಡು ಎಳೆಯಲು ಪ್ರಾರಂಭಿಸಿದರೂ ಅವು ಮುಂದೆ ಬರುತ್ತಿರಲಿಲ್ಲ. ಎಳೆದು ಎಳೆದು ಮರಿಯನಿಗೆ ಸಾಕಾಯಿತು. ಅವನ ಪಂಚೆ ಸಹ ಹರಿಯುವಂತೆ ಆಯಿತು. ಹೀಗೆ ಏನು ಮಾಡುವುದಕ್ಕೂ ತೋರದೆ ಮರಿಯ ಆ ಮಹಿಷಿಣಿಯರನ್ನು ಕಟ್ಟಿಕೊಂಡು ನಿಜವಾದ ಒಂದು ಬೆಟ್ಟವನ್ನು ಹೊತ್ತುವನಷ್ಟು ಆಯಾಸದಿಂದ ಅವುಗಳನ್ನು ಹೆಜ್ಜೆಹೆಜ್ಜೆಯಾಗಿ ಎಳೆದುಕೊಂಡು ಬರುತ್ತಿದ್ದನು.

ಸುಮಾರು ಸಾಯಂಕಾಲ ನಾಲ್ಕು ಗಂಟೆಯ ವೇಳೆಗೆ ಮರಿಯ ಎಮ್ಮೆಗಳೊಂದಿಗೆ ಮಲ್ಲಿಗೆಹಳ್ಳಿಗೆ ೩ ಮೈಲಿ ದೂರದಲ್ಲಿ ಊರಕಡೆಗೆ ಬರುತ್ತಿದ್ದನು. ಆ ದಿವಸ ಮಂಗಳವಾರದ ಸಂತೆಯಿಂದ ಜನ ಊರಿಗೆ ಬರುತ್ತಿದ್ದರು. ದೂರದಲ್ಲಿ ಮಲ್ಲಿಗೆಹಳ್ಳಿಯ ಅಪ್ಪು ಕೆಂಪು ರುಮಾಲನ್ನು ತಲೆಗೆ ಸುತ್ತಿಕೊಂಡು ಛತ್ರಿ ಹಿಡಿದುಕೊಂಡು ಬರುತ್ತಿರುವುದು ಕಂಡಿತು. ಮರಿಯ ದೂರದಿಂದಲೇ "ಛತ್ರಿ ಮುಚ್ಚಿ ಎಮ್ಮೆ ಬೆದರುತ್ತೆ. ಮುಚ್ಚಿ ಸ್ವಾಮಿ ಮುಚ್ಚಿ" ಎಂದು ಕಿರಚಿದನು. ಅಪ್ಪು, ಕೇಳಿಸಿದರೂ ಕೇಳಿಸದವನಂತೆ ಬರುತ್ತಲೇ ಇದ್ದನು. ಹಳ್ಳಿಯವರು ಛತ್ರಿ ಅಷ್ಟು ಬೇಗ ಮುಚ್ಚುವುದೂ ಇಲ್ಲ. ಮುಚ್ಚಿದುದನ್ನು ತೆರೆಯುವುದೂ ಇಲ್ಲ ಎಂಬುದು ಅವರ ಅನುಭವವಿರುವವರಿಗೆ ಸಾಧಾರಣವಾಗಿ ಗೊತ್ತಾಗುತ್ತದೆ. ಅಪ್ಪುವಿಗೆ ವಿಚಾರ ಯಾವಾಗ ಗೊತ್ತಾಯಿತೋ ಆಗಂತೂ ಅವನು ಮನಸ್ಸಿನೊಳಗೇ ನಗುತ್ತಾ ಛತ್ರಿಯನ್ನು ಕುಣಿಸುತ್ತಾ ಹತ್ತಿರಕ್ಕೇ ಬಂದನು. ಮರಿಯ ಒಂದೇ ಸಮನೆ "ಛತ್ರಿ ಮುಚ್ಚಿ ಎಮ್ಮೆ ಬೆದರುತ್ತೆ" ಎಂದು ಒರಲುತ್ತಲೇ ಇದ್ದನು. ಎಮ್ಮೆಗಳು ಭೂತವನ್ನು ನೋಡುವಂತೆ ಒಂದೇ ಸಮನೆ ದುರುದುರನೆ ಛತ್ರಿಯಕಡೆ ನೋಡುತ್ತಿದ್ದುವು. ಅಪ್ಪು ಹತ್ತಿರಕ್ಕೆ ಬಂದವನೇ ಹೀಗೆ ಯಾಕೆ ಬಡಕೋತಿಯ ಎಂದು ಒಂದು ಸಲ ಛತ್ರಿಯನ್ನು ಮೆಲ್ಲನೆ ಕುಣಿಸಿದನು. ಬಂದೂಕದಿಂದ ಹೊರಟ ಫಿರಂಗಿಗಳಂತೆ ಒಂದೇ ಏಟಿಗೆ ಎರಡು ಎಮ್ಮೆಗಳೂ ಮುಂದೆ ಹಾರಿದುವು. ಮರಿಯ

ಕಟ್ಟಿದ್ದ ಪಂಚೆ ಮೊದಲು ಒಂದು ಎಮ್ಮೆಯ ಕೋಡಿನಿಂದ ಬಿಚ್ಚಿ ಕೊಂಡಿತು. ಅದೇ ಸಮಯದಲ್ಲಿ ಮರಿಯನ ಕೈಯಿಂದ ಪಂಚೆ ಕಳಚಿ ಕೊಂಡಿತು. ಪಂಚೆ ಒಂದು ಎಮ್ಮೆಯ ಕೋಡಿನಲ್ಲಿ ರುಮಾಲಾಗಿ ಉಳಿಯಿತು. ಎರಡು ಎಮ್ಮೆಗಳೂ ನಾಗಲೋಟದಿಂದ ಬಂದ ದಾರಿಯನ್ನು ಹಿಡಿದು ಓಡತೊಡಗಿದುವು. ಮುಂದೆ ಅವು ಓಡುತ್ತಿರುವಾಗ ಬಹುದೂರದ ವರೆಗೆ ಒಂದು ಎಮ್ಮೆಯ ಕೋಡಿನ ಪಂಚೆ ಧ್ವಜಪಟದಂತೆ ಹಿಂದಕ್ಕೆ ಹಾರಾಡುತ್ತಿದ್ದಿತು. ಮರಿಯನು "ಸಾಮಿ ನಾನು ಎಷ್ಟು ಬಡಕೊಂಡರೂ ನೀವು ಛತ್ರಿ ಮುಚ್ಚಲಿಲ್ಲ" ಎಂದನು. ಅಪ್ಪುವು "ಅಂತ ಬಲವಾದ ಹಗ್ಗ ಕೋಡಿಗೆ ಕಟ್ಟಿದ್ದೆಯೆಲ್ಲಾ ಅಂತ ಬಂದೆ. ಆಯಿತು. ಎಷ್ಟುದೂರ ಹೋಗಿದೆ. ನಾಲ್ಕು ಹೆಜ್ಜೆ ಹೋಗಿ ಹಿಡಿದುಕೊಂಡು ಬಾ" ಎಂದು ಹೇಳಿ ತನ್ನ ಪಾಡಿಗೆ ಊರಿನ ಕಡೆ ಹೊರಟನು.

ಮರಿಯು ಒಂದು ಮೈಲಿ ಹಿಂದಕ್ಕೆ ಹೋಗಿ, ತಾವಾಗಿಯೇ ಸುಸ್ತಾಗಿ ಮಲಗಿದ್ದ ಎರಡು ಎಮ್ಮೆಗಳನ್ನೂ ಮೊದಲಿನಂತೆ ಅದೇ ಪಂಚೆ ಯಲ್ಲಿ ಕಟ್ಟಿ ಮನೆಯ ಕಡೆಗೆ ಹಿಡಿದುಕೊಂಡು ಹೊರಟನು. ಅವನು ಎಮ್ಮೆಗಳನ್ನು ದೂರದಿಂದಲೇ ನೋಡುತ್ತಿದ್ದುದರಿಂದ ಅವನ ಪಂಚೆ ಯನ್ನೂ ಎಮ್ಮೆಯ ಕೋಡಿನಿಂದ ಯಾರೂ ಕಿತ್ತುಕೊಂಡಿರಲಿಲ್ಲ. ಅವನು ಮೊದಲಿನಂತೆ ಪಂಚೆಯ ಆಚೆ ಈಚೆ ಎರಡು ಎಮ್ಮೆಗಳನ್ನೂ ಕಟ್ಟಿಕೊಂಡು ಜಾನಕಮ್ಮನವರು ಎಷ್ಟೊಂದು ಸಂತೋಷಪಡಬಹುದು ಎಂದು ಅಂದಾಜುಹಾಕುತ್ತಾ ಊರಿನ ಕಡೆಗೆ ಹೋಗುತ್ತಿದ್ದನು. ಎಮ್ಮೆ ಪತ್ತೆ ಮಾಡಿ ಹೊಡೆದುಕೊಂಡು ಬರುತ್ತಿರುವ ಸಮಾಚಾರ ಅಪ್ಪುವಿನ ಮೂಲಕ ಊರಿಗೆ ಆಗಲೇ ಗೊತ್ತಾಗಿದ್ದಿತು. ಅನಂತು "ಅವನು ಯಾವ ಕೆಲಸ ಮಾಡಿದ್ರು ಮಾಡೋದು ತಲೆಕೆಳಕೆ. ಏನೋ ಇವತ್ತು ಅವನ ಅದೃಷ್ಟವೋ ನನ್ನ ಅದೃಷ್ಟವೋ ಕಾಣೆ. ಅವನಿಗೆ ಎಮ್ಮೆ ಸಿಕ್ಕಿ ಬಿಟ್ಟಿತು" ಎಂದುಕೊಂಡನು. ಅನಂತುವಿನ ಮನೆಯ ಮಗ್ಗುಲ ಮನೆ ರಾಮರಾಯರದು. ರಾಮರಾಯರಿಗೂ ಅನಂತುವಿಗೂ ಏನೋ ಕಾರಣ ದಿಂದ ಸ್ವಲ್ಪ ದಿನಗಳಿಂದ ಮನಸ್ತಾಪವುಂಟಾಗಿದ್ದಿತು. ಈ ಮನಸ್ತಾಪ ಅನಂತುವಿನ ಮನೆಯ ಮದುವೆಯಲ್ಲಿ ಸರಿಮಾಡಿಬಿಡಬೇಕು ಎಂದು ಗ್ರಾಮಸ್ಥರು, ಅನಂತುವಿಗೆ ತಿಳಿಯದಂತೆ ಪಿತೂರಿ ನಡೆಸಿದ್ದರು. ರಾಮ

ರಾಯರ ಮನೆಯ ಎರಡು ಎಮ್ಮೆಗಳೂ 3-4 ದಿನಗಳಿಂದ ತಪ್ಪಿಸಿಕೊಂಡು ಹೋಗಿದ್ದುವು. ಹುಡಿಕಿದರೂ ಸಿಕ್ಕಿರಲಿಲ್ಲ. ಅನಂತು ಬಾಗಿಲಿನ ಜಗಲಿಯ ಮೇಲೆ ಕುಳಿತಿದ್ದ ರಾಮರಾಯರಿಗೆ ಕೇಳಿಸುವಂತೆ ಗಟ್ಟಿಯಾಗಿ "ಸತ್ಯದ ಮಾಲು; ದೇವರು ಕಣ್ಣು ತೆರೆದು ನೋಡುತ್ತಾನೆ" ಎಂದನು. ರಾಮರಾಯರ ಮನೆ ಎಮ್ಮೆ ಬಂದಿಲ್ಲದುದರಿಂದಲೂ ತನ್ನ ಎಮ್ಮೆ ಬಂದುದರಿಂದಲೂ ಈ ಮಾತನ್ನು ಹೇಳಿದರೆ ರಾಮರಾಯರ ಮನಸ್ಸಿಗೆ ನೋವಾಗುತ್ತದೆ. ಇದು ನನ್ನ ಯೋಗ್ಯತೆಗೆ ತಕ್ಕ ಮಾತು ಅಲ್ಲ ಎಂಬುದು ಅನಂತುವಿಗೆ ಚೆನ್ನಾಗಿ ಗೊತ್ತಿದ್ದಿತು. ಆದರೂ ತನಗೂ ರಾಮರಾಯರಿಗೂ ಇದ್ದ ವಿರೋಧವನ್ನು ಈ ರೀತಿ ಪ್ರಕಟಿಸಲು ದೊರೆತ ಅವಕಾಶವನ್ನು ಬಿಟ್ಟುಕೊಡುವುದು ಅವನ ಸ್ವಭಾವವಾಗಿರಲಿಲ್ಲ. ರಾಮರಾಯರು ಈ ಮಾತನ್ನು ಕೇಳಿದರು. "ಹು. ಹೋಗಲಿ" ಎಂದುಕೊಂಡು ಸುಮ್ಮನಾದರು.

ಸಾಯಂಕಾಲ ಏಳು ಗಂಟೆ ಸೂರ್ಯಾಸ್ತವಾಗಿದ್ದಿತು. ಆಗತಾನೆ ದನಗಳು ಬಯಲಿನಿಂದ ಮನೆಗಳಿಗೆ ಬಂದಿದ್ದುವು. ಸೂರ್ಯನು ಹೊರಟು ಹೋದರೂ ಅದರ ಹಿಂದಲ ಕಾಂತಿಯು ಪುಷ್ಪ ಹೊರಟುಹೋದರೂ ಹಿಂದಲ ಸುಗಂಧದಂತೆ, ಗಾನ ಮುಗಿದರೂ ಅದರ ಹಿಂದಲ ಮಾಧುರ್ಯದಂತೆ ಮಹಾತ್ಮರು ಹೊರಟು ಹೋದರೂ ಅವರು ಹಿಂದೆ ಬಿಟ್ಟ ಪವಿತ್ರತೆಯಂತೆ ಇನ್ನೂ ಜಗತ್ತನ್ನು ಆವರಿಸಿದ್ದಿತು. ಮಲ್ಲಿಗೆಹಳ್ಳಿಯ ಸ್ತ್ರೀಯರು ಬಾಗಿಲಿನಲ್ಲಿ ಕುಳಿತಿದ್ದವರು ಮನೆಗಳ ಒಳಗಡೆ ಹೋಗಿ ದೀಪಗಳನ್ನು ಹಚ್ಚುತ್ತಿದ್ದರು. ಅನಂತುವಿನ ಜಗಲಿಯ ಮೇಲೆ ಪದ್ಧತಿಯಂತೆ ಅವನ ಮಿತ್ರರು ಕೆಲವರು ಅವನೊಡನೆ ಮಾತನಾಡುತ್ತಾ ಎಮ್ಮೆ ಬರುವುದನ್ನೇ ನಿರೀಕ್ಷಿಸುತ್ತಾ ಕುಳಿತಿದ್ದರು. ರಾಮರಾಯರೂ ಬಾಗಿಲಿನಲ್ಲಿ ಒಬ್ಬರೇ ಕುಳಿತಿದ್ದರು. ಆ ವೇಳೆಗೆ ಮರಿಯ ಪಂಚೆಯ ಎರಡು ಕಡೆಗೂ ಒಂದೊಂದು ಎಮ್ಮೆ ಕಟ್ಟಿಕೊಂಡು ಮಧ್ಯೆ ಹಿಡಿದುಕೊಂಡು ಬಾಗಿಲಿಗೆ ಬಂದನು. ಅವನು ಇನ್ನೂ ನಡುಬೀದಿಯಲ್ಲಿರುವಾಗಲೇ ಎಮ್ಮೆಗಳೆರಡೂ ಅವನ ಕೈಯಿಂದ ತಪ್ಪಿಸಿಕೊಂಡು ಸರ್ರನೆ ಮನೆ ಕಂಡಕೂಡಲೆ ರಾಮರಾಯರ ಮನೆಯೊಳಕ್ಕೆ ನುಗ್ಗಿಬಿಟ್ಟವು. ರಾಮರಾಯರು "ಮುಂಡೇದೆ ಮೂರು ದಿನದಿಂದ ಪೋಲಿ ಅಲೆದೆ ಬಾ" ಎಂದು ಹೇಳಿ ಒಳಕ್ಕೆ

ಹೊಡೆದುಕೊಂಡು ಹೋಗಿ ಕಟ್ಟಿಹಾಕಿದರು. ಅನಂತುವಿನ ಮನೆಬಾಗಿಲಿ
ನಲ್ಲಿ ಕುಳಿತಿದ್ದ ಮಿತ್ರರು ಅಸಾಧ್ಯವಾಗಿ ಹೋ ಎಂದು ಗಟ್ಟಿಯಾಗಿ
ನಕ್ಕರು. ಮರಿಯ ಕೈಯಲ್ಲಿ ಉಳಿದಿದ್ದ ತನ್ನ ಪಂಚೆಯನ್ನು ನೋಡಿ
ಕೊಳ್ಳುತ್ತಾ ಮಂಕನಂತೆ ಕೊಟ್ಟಿಗೆ ಬಾಗಿಲಿನಿಂದ ಮನೆಯೊಳಕ್ಕೆ ಪ್ರವೇಶಿ
ಸಿದನು. ಮಿತ್ರರು ಬಾಗಿಲಿನಲ್ಲಿ ಅನಂತುವಿನೊಂದಿಗೆ "ಎಮ್ಮೆಗೆ ಎಮ್ಮೆ
ಬಂತು. ನಿನ್ನ ಎಮ್ಮೆ ಹೋಯಿತು. ರಾಮರಾಯರ ಎಮ್ಮೆ ಬಂತು.
ಸತ್ಯದ ಮಾಲು ದೇವರು ಕಣ್ಣು ತೆರೆದು ನೋಡುತ್ತಾನೆ" ಎಂದರು.
ಅನಂತು ಮರಿಯನನ್ನು ಹುಯ್ಯಲು ದೊಣ್ಣೆ ತೆಗೆದುಕೊಂಡು ಕೊಟ್ಟಿಗೆಗೆ
ಹೋದನು. ಆದರೆ ಮರಿಯ ಎಲ್ಲೂ ಕಣ್ಣಿಗೆ ಬೀಳಲಿಲ್ಲ.

ಆಗ ಮಲ್ಲಿಗೆಹಳ್ಳಿಯಲ್ಲಿ ಎಮ್ಮೆಗಳು ಪೋಲಿ ಹೋಗುವುದು ಹೆಚ್ಚಾ
ಗಿತ್ತು. ಹನುಮಂತರಾಯನ ಪೂಜಾರಿಯ ಅಮ್ಮನ ಮನೆಯಲ್ಲಿದ್ದ
ಗಬ್ಬದ ಎಮ್ಮೆ ಒಂದು ದಿನ ಮೇಯುವುದಕ್ಕೆ ಹೋದದ್ದು ಹಿಂದಕ್ಕೆ ಬರ
ಲಿಲ್ಲ. ಆ ಎಮ್ಮೆಯನ್ನು ೧೬೦ ರುಪಾಯಿಗಳಿಗೆ ಕೇಳಿದ್ದರು. ಪೂಜಾ
ರಿಯ ಅಮ್ಮ ಪಾಪ ಹೆಂಗಸು ಎಲ್ಲಿ ಹೋಗುತ್ತಾಳೆ ಹುಡುಕುವುದಕ್ಕೆ ?
ದಿವಸಕ್ಕೆ ೪ ಆಣೆಯಂತೆ ನಾಲ್ಕು ಜನರನ್ನು ಎಮ್ಮೆ ಹುಡುಕಲು ನಾಲ್ಕು
ಕಡೆಗೂ ಕಳುಹಿಸಿದಳು. ಅವರಿಗೆ ಬೆಳಗ್ಗೆ ಅಡಿಗೆಮಾಡಿ ಮನೆಯಲ್ಲಿ
ಊಟಹಾಕಿ ಕಳುಹಿಸುವುದು; ಅವರು ರಾತ್ರಿಯಲ್ಲಿ ಎಮ್ಮೆ "ಹುಡುಕಿ"
ಇವತ್ತು ಸಿಕ್ಕಲಿಲ್ಲ. ನಾಳೆ ಸಿಕ್ಕುತ್ತದೆ ಎಂದು ಬರುವುದು. ರಾತ್ರಿಯ
ಊಟಮಾಡಿಕೊಂಡು ಮತ್ತೆ ಮಾರನೇದಿನ ಹೋಗುವುದು. ಹೀಗೆ
ಒಂದು ತಿಂಗಳ ಕಾಲ ಹುಡುಕಿಯೇ ಹುಡುಕಿದರು. ಮಧ್ಯೆ ಮಧ್ಯೆ
ತಿರುಗಿ ತಿರುಗಿ ಸುಸ್ತಾದುದಕ್ಕೆ ಅಭ್ಯಂಜನ ಸ್ನಾನ ಮಾಡಿಕೊಳ್ಳಬೇ
ಕೆಂದು ಎಣ್ಣೆ ಸೀಗೆಕಾಯಿ ಸೌದೆ ತೆಗೆದುಕೊಳ್ಳುತ್ತಿದ್ದರು. ತಿರುಗಿ
ತಿರುಗಿ ಉಷ್ಣವಾಯಿತು ಶೀತವಾಯಿತು, ಹೆಸರುಬೇಳೆ ಕಡಲೇಬೇಳೆ,
ತೆಂಗಿನಕಾಯಿ ಈರುಳ್ಳಿ ಬೆಳ್ಳುಳ್ಳಿ ಜತೆಗೆ ಆಗಾಗ್ಗೆ ಹೋಗಿ ಶಾಸ್ತ್ರ ಕೇಳಿ
ಬರುತ್ತೇವೆ ಎಂದು ಎಂಟಾಣೆ ನಾಲ್ಕಾಣೆ ಹೀಗೆ ಒಂದು ತಿಂಗಳ ಕಾಲ
ದಲ್ಲಿ ಪೂಜಾರಿ ಅಮ್ಮನ ೬೦-೭೦ ರುಪಾಯಿ ಕೈಬಿಟ್ಟು ಹೋಯಿತು.
ಹುಡುಕುವುದಕ್ಕೆ ನಿಯಾಮಿತರಾಗಿದ್ದ ಜನ "ಎಮ್ಮೆ ಎಂದೋ ಬರುತ್ತೆ.
ಸಂದೇಹವಿಲ್ಲ. ಮಾಡುವುದನ್ನೆಲ್ಲಾ ಮಾಡಿಯಾಗಿದೆ" ಎನ್ನುತ್ತಿದ್ದರು.

ಎಮ್ಮೆ ಬರುವುದನ್ನು ಪೂಜಾರಿ ಅಮ್ಮ ಇನ್ನೂ ಕಾಯುತ್ತಿದ್ದಾರೆ. ಈ ಕಾರಣದಿಂದ ಮಲ್ಲಿಗೆಹಳ್ಳಿಯಲ್ಲಿ ಎಮ್ಮೆಗಳು ಹೋದರೆ ಎಮ್ಮೆಗಳ ಮಾಲಿಕರು ಗಾಬರಿಪಡುತ್ತಿದ್ದರು. ಸತ್ಯದ ಮಾಲು ಆದರೆ ಹಿಂದಿರುಗುತ್ತದೆ ಎನ್ನುತ್ತಿದ್ದರು. ಅಂತೂ ಆ ಬೆಳಗಿನ ಜಾವ ಅನಂತುವಿನ ಮನೆಯ ಎರಡು ಎಮ್ಮೆಗಳೂ ಬಂದು ಅನಂತುವಿನ ಮನೆಯ ಹಿಂದಲ ಬಾಗಿಲಿನಲ್ಲಿ ನಿಂತಿದ್ದುವು. ಮರಿಯನಿಗೆ ಏಟು ಕೊಡಬೇಕೆಂಬ ಅನಂತುವಿನ ಮೊದಲದಿನದ ಕೋಪ ಶಾಂತವಾಯಿತು. ಆದರೂ ಮರಿಯ ಆ ದಿನವೆಲ್ಲಾ ಅನಂತುವಿನ ಕಣ್ಣಿಗೆ ಬೀಳಲಿಲ್ಲ.

ಮದುವೆಗೆ ಹದಿನೈದು ದಿನ ಮುಂಚಿತವಾಗಿ ಮದುವೆಗೆ ಬೇಕಾದ ಸಾಮಾನುಗಳನ್ನೆಲ್ಲಾ ತರಲು 5-6 ಗಾಡಿಗಳನ್ನು ತೆಗೆದುಕೊಂಡು ಅನಂತು ಹಾಸನಕ್ಕೆ ಹೋದನು. ಉರಗನೂ, ಮರಿಯಣ್ಣನೂ ಜತೆಯಲ್ಲಿ ಹೋದರು. ಅದು ಹಾಸನದಲ್ಲಿ ಭಾರಿ ಸಂತೆಯ ದಿನ. ಸಂತೆಯಲ್ಲಿ ವ್ಯಾಪಾರಗಳನ್ನೆಲ್ಲಾ ಮುಗಿಸಿಕೊಂಡು ಅನಂತು ಊರೊಳಗಿನ ಪೇಟೆಯಲ್ಲಿ ಜವಳಿ ಮೊದಲಾದುವನ್ನು ತೆಗೆದುಕೊಳ್ಳಲು ಬಂದನು. ಗಾಡಿಯವರಿಗೆ ಬೆಳಗ್ಗಿನಿಂದ ಊಟವಿಲ್ಲದೆ ಸುಸ್ತಾಗಿತ್ತು. ಅನಂತು ಅವರನ್ನು ಕರೆದು ಒಂದು ರುಪಾಯಿ ಕೊಟ್ಟು "ಹೋಟಲಿನಲ್ಲಿ ಸ್ವಲ್ಪ ತಿಂಡಿ ಮಾಡಿಕೊಳ್ಳಿ. ದೇವಗೆರೆಯ ಮುಂದಲ ಬಯಲಿನಲ್ಲಿ ಗಾಡಿ ಕೊರಳು ಇಳುಕಿ ಎತ್ತಿಗೂ ನೀರು ಕುಡಿಸಿ ಹುಲ್ಲು ಹಾಕಿ. ಎಲ್ಲಾ ಕೆಲಸವೂ ಪೂರ್ತಿ ಆಗಲಿಲ್ಲ. ರಾತ್ರಿ ೧೦ ಗಂಟೆಗೆ ಮುಂಚೆ ಹೊರಡೋದಕ್ಕೆ ಆಗೋದಿಲ್ಲ" ಎಂದನು. ಉರಗ ಗಾಡಿಗಳನ್ನೆಲ್ಲಾ ದೇವಗೆರೆ ಬಯಲಿನಲ್ಲಿ ಬಿಟ್ಟು ಗಾಡಿಗಳ ಕಾವಲಿಗೆ ಒಬ್ಬನನ್ನು ಬಿಟ್ಟು ಉಳಿದ ಐದು ಜನರೊಂದಿಗೆ ಹೋಟಲಿನ ಬಾಗಿಲಿಗೆ ಬಂದನು.

ಅಲ್ಲಿ ತಿಂಡಿ ತಿನ್ನಲು ಒಳಕ್ಕೆ ನುಗ್ಗುತ್ತಿದ್ದವರ ಗದ್ದಲ ಹೆಚ್ಚಾಗಿತ್ತು. ಆವತ್ತು ಸಂತೆಯಾದುದರಿಂದ ಹಳ್ಳಿಯ ರೈತರೇ ಅಲ್ಲಿ ನೆರೆದಿದ್ದರು. ಕುರ್ಚಿ ಬೆಂಚು ನೆಲ ಎಲ್ಲಾ ಅವರಿಂದಲೇ ತುಂಬಿದ್ದುವು. ದೋಸೆ ಇಡ್ಲಿ ಕಾಫಿ ಪೂರಿ ಇವುಗಳ ಕೂಗೇ ಕೂಗಾಗಿತ್ತು. ರೈತರು ಊರಿನಿಂದ ತರಕಾರಿ ಬೆಣ್ಣೆ ಕಿರಾಣಿಗಳನ್ನು ಹೊತ್ತುಕೊಂಡು ೪-೬-೮ ಮೈಲಿ ಎರಡಾಣೆ ನಾಲ್ಕಾಣೆ ಲಾಭ ಸಂಪಾದಿಸುವುದಕ್ಕೆ ಬಂದಿದ್ದವರು ಲಾಭದ

ಎರಡರಷ್ಟು ದುಡ್ಡನ್ನು ಹೋಟಲಿಗೆ ತಿಂಡಿಗೆ ಹಾಕಿ ಹೋಗುತ್ತಿದ್ದರು. ಹೋಟಲಿನ ಐಯರ್ ಸುಖವಾಗಿ ಬೊಜ್ಜು ಬೆಳೆಸಿಕೊಂಡು ತನ್ನ ಬಲೆಗೆ ಈ ಪ್ರಾಣಿಗಳು ಅಸಂಖ್ಯಾತ ಸಂಖೆಯಲ್ಲಿ ಬಂದು ಬೀಳುತ್ತಿರುವುದನ್ನು ಪ್ರಸನ್ನಮುದ್ರೆಯಿಂದ ನೋಡುತ್ತಾ ಕುರ್ಚಿಯ ಮೇಲೆ ಕುಳಿತಿದ್ದನು. ರುಪಾಯಿಗೆ ಚಿಲ್ಲರೆ ಕೊಡುವುದಕ್ಕೂ ಅವನಿಗೆ ವಿರಾಮವಿರಲಿಲ್ಲ. ಬೆಳಗಿನಿಂದ ಸಂಜೆಯವರೆಗೆ ಬಿಸಿಲಲ್ಲಿ ವ್ಯಾಪಾರಮಾಡಿ ದುಡಿದು ೪ ಆಣೆ ಲಾಭ ಸಂಪಾದಿಸಿದ್ದ ರೈತ, ಆ ನಾಲ್ಕಾಣೆಗೆ ಮನೆಗೆ ಬೇಕಾದ ಉಪ್ಪು ಮೆಣಸಿನ ಕಾಯಿ ತೆಗೆದುಕೊಂಡು ಹೋಗುವುದರ ಬದಲು, ಹೋಟಲಿನವನು ಜಾಗವಿಲ್ಲ ಎಂದರೂ ಕೇಳದೆ, ತಿಂಡಿ ಇಲ್ಲ ಎಂದರೂ ಬಿಡದೆ, ಹಳೆ ಮುಗ್ಗಿದ ತಿಂಡಿ ಕೊಟ್ಟರೂ ಅದನ್ನೇ ತಿಂದು ಬಲಾತ್ಕಾರವಾಗಿ ಹೋಟಲಿನವನ ಕೈಗೆ ದುಡ್ಡು ಹಾಕಿ ಹೋಗುತ್ತಿದ್ದ. ಇದು ಈಚಿನ ಬೆಳವಣಿಗೆ. ಹಿಂದೆ ಸಂತೆಯಲ್ಲಿ ೩ ಕಾಸು ೬ ಕಾಸಿನ ವಡೆ ಚಕ್ಕಲಿ ಉಂಡೆ ತಿನ್ನುತ್ತಿದ್ದ. ಒಂದು ಸಲ ಹೋಟಲಿನ ಅಭ್ಯಾಸವಾದ ಮೇಲೆ ಸಂತೆಯ ವಡೆ ಚಕ್ಕಲಿ ಅವನಿಗೆ ರುಚಿ ಹತ್ತುತ್ತಿರಲಿಲ್ಲ. ಆದರೆ ಆಗ ಮನೆಗೆ ಒಂದು ವಾರಕ್ಕೆ ಬೇಕಾದಷ್ಟು ಸಾಮಾನು ಬಂದು ಬೀಳುತಿತ್ತು. ಹೋಟಲಿಗೆ ಬರುವುದು ಪ್ರಾರಂಭವಾದ ಮೇಲೆ ಪ್ರತಿ ಸಂತೆಗೂ ರೈತ ತಿರುಗುತ್ತಿದ್ದರೂ ಸಂತೆ ದಿನ ೪ ಆಣೆ ೬ ಆಣೆ "ಒಳಲಾಭ" ಬಂದು ಸಾಲ ಪ್ರಾರಂಭವಾಯಿತು. ಮನೆಯಲ್ಲಿ ಹೆಂಡತಿ ದುಡ್ಡು ಏನು ಆಗುತ್ತಿರಬಹುದು ಎಂದು ಯೋಚಿಸ ತೊಡಗಿದಳು. ಸಂತೆಯಲ್ಲಿ ಬಂದ ೨ ಆಣೆ ೪ ಆಣೆ ಖರ್ಚುಮಾಡಲು ರೈತರಿಗೆ ಇನ್ನೊಂದು ಮಾರ್ಗ ಬೇರೆ ತೆರೆಯಿತು. ಸಾಧಾರಣವಾಗಿ ಮಲ್ಲಿಗೆಹಳ್ಳಿ ಕಡೆಯಿಂದ ಹಾಸನಕ್ಕೆ ಬೆಳಗ್ಗೆ ೮ ಗಂಟೆ ೮||ಗೂ ಸಾಯಂಕಾಲ ಹಾಸನದಿಂದ ಮಲ್ಲಿಗೆಹಳ್ಳಿಗೆ ೫-೫|| ಗಂಟೆಗೂ ಬಸ್ಸುಗಳು ಹೊರಡುತ್ತಿದ್ದುವು. ರೈತರೇನೋ ಹೊರಡುವಾಗ ನಡೆದುಕೊಂಡೇ ಹೊರಡುತ್ತಿದ್ದರು. ಆದರೆ ಹಾಸನಕ್ಕೆ ಇನ್ನು ೪-೫ ಮೈಲಿ ಇದೆ ಎನ್ನುವಾಗ ಬಸ್ಸು ಭರ್ ಎಂದು ಆ ಮಾರ್ಗದಲ್ಲಿ ಬರುತ್ತಿದ್ದಿತು. ೯ ಮೈಲಿ ಸುಖವಾಗಿ ನಡೆದುಕೊಂಡು ಬಂದಿದ್ದ ರೈತ ಬಸ್ಸನ್ನು ಕಂಡಕೂಡಲೇ ಮೈಲಿಗೆ ಒಂದು ಆಣೆಯಂತೆ ಕೊಟ್ಟು ಉಳಿದ ಐದು ಮೈಲಿಯನ್ನು ಕಾಲು ಗಂಟೆಯಲ್ಲಿ ತಲುಪುತ್ತಿದ್ದನು. ಅಲ್ಲೂ ಬಸ್ಸಿನಲ್ಲಿ ಅದೇ ಪೇಚಾಟ. ಜಾಗವಿಲ್ಲ;

ಗರುಡವಾಹನ; ಅವನು ಕೇಳಿದಷ್ಟು ದುಡ್ಡು ಕೊಡಬೇಕು ಹಾಗೂ ಒಂದು ಗಂಟೆ ಮುಂಚೆ ಬಂದರೆ ಹಾಸನದಲ್ಲಿ ಮಾಡುವುದಕ್ಕೆ ಕೆಲಸವೂ ಇರುತ್ತಿರಲಿಲ್ಲ. ನಿಲ್ಲುವುದಕ್ಕೆ ಜಾಗವೂ ಇರುತ್ತಿರಲಿಲ್ಲ. ಬಿಸಿಲಿನಲ್ಲಿ ಅಲೆಯಬೇಕಾಗುತ್ತಿದ್ದಿತು ದೂರ ಪ್ರಯಾಣ, ಹೆಚ್ಚಾಗಿ ಗಂಟುಮೂಟೆ, ಹೆಂಗಸರು ಮಕ್ಕಳು ಕಾಯಿಲೆಯವರು ಮಳೆಗಾಲ ಸರ್ಕಾರಿ ಅಧಿಕಾರಿ ಗಳು, ಪೈಗಳ್ಳ ದನಿಕರು ಇಂತಹ ಸಂದರ್ಭಗಳಿಗೆ ಮಾತ್ರ ಉಪಯೋಗಿಸ ಬಹುದಾದ ತುಟ್ಟಿಯಾದ ವಾಹನಗಳನ್ನು ಜನರು ನಿತ್ಯ ಉಪಯೋಗಿಸಿ ಕೊಂಡು, 'ಅರಸಿನದ ಕೂಳನ್ನು ನೆಚ್ಚಿಕೊಂಡು ವರುಷದ ಕೂಳು ಕಳೆದುಕೊಂಡರು' ಎಂಬಂತೆ ಹೊಟ್ಟೆ ತುಂಬುವ ಅನ್ನಕ್ಕೆ ಕಲ್ಲು ಹಾಕಿ ಕೊಳ್ಳುತ್ತಿದ್ದರು.

ಕಡಿಸಿಕೊಳ್ಳಲು ತಲೆ ಕೊಡುವುದಕ್ಕೆ ನಾನು ಮುಂದು ತಾನು ಮುಂದು ಎಂದು ನುಗ್ಗುತ್ತಿರುವ ಕುರಿಗಳಂತೆ ಜೇಬಿನ ದುಡ್ಡನ್ನು, ಮೇಜಿನ ಮೇಲೆ ವಿಶ್ರಮಿಸುತ್ತಿರುವ ಐಯರ ಹೊಟ್ಟೆ ಮುಂದೆ ಹಾಕಲು ಆತುರರಾಗಿದ್ದ ಆ ಗುಂಪನ್ನು ಉರಗನೂ ಉಳಿದ ಗಾಡಿ ಆಳುಗಳೂ ಸೇರಿ ಕೊಂಡರು. ಇವರು ಕೇಳಿದುದು ಏನೋ ಹೋಟಲಿನವರು ಕೊಟ್ಟುದು ಏನೋ. ಸ್ವಲ್ಪ ದಿಂಡಾಗಿ ದೋಸೆಹೊಡೆಯೋಣ ಎಂದು ಅವರು ಕೇಳಿದು ದಕ್ಕೆ ದೋಸೆ ಇಲ್ಲವೆಂಬ ಜವಾಬು ಬಂತು. ಅನಂತರ ಹೋಟಲಿನವನು ಬುಡಬುಡಕೆಯ ದಾಸಯ್ಯನಂತೆ ಒಂದೇ ಸಮನೆ ಛಟಛಟನೆ ನಾಸಿವೆ ಸಿಡಿದಂತೆ ಅನೇಕ ಪ್ರಾಣಿಗಳು, ಅನೇಕ ದೇಶಗಳು, ಅನೇಕ ರಾಜರು, ನಾನಾ ಜಾತಿ ಸ್ತ್ರೀಪುರುಷರು ಇವರುಗಳ ಹೆಸರೆಲ್ಲಾ ಇದ್ದ ಒಂದು ತಿಂಡಿಯ ಪಟ್ಟಿಯನ್ನು ಉಚ್ಚರಿಸಿದನು. ಮಾಟಗಾರನು ಜನರಿಗೆ ಮಂಕನ್ನು ಕವಿಸಲು ಉಚ್ಚರಿಸುವ ಮಂತ್ರಗಳಂತೆ ಕಿವಿಯಮೇಲೆ ಬೀಳು ತ್ತಿದ್ದ ಆ ಮಾತಿನ ಸುರಿಮಳೆಯಲ್ಲಿ ಕೇಳಿದವರಿಗೆ ಯಾವ ಅರ್ಥವೂ ಆಗ ದಿದ್ದರೂ, ಅವರು ಹೇಳುತ್ತಿದ್ದವನ ಮುಖವನ್ನು ಆಶ್ಚರ್ಯದಿಂದ ಒಂದೇ ಸಮನೆ ಕುರಿತು ನೋಡುತ್ತಿದ್ದರು. ಅಂತೂ ಉರಗನಿಗೂ ಅವನ ಜತೆಯ ವರಿಗೂ ಹೋಟಲಿನವನು ಒಂದು ತಟ್ಟೆಯಲ್ಲಿ ನಿಂಬೆಹಣ್ಣಿನ ಗಾತ್ರದ ಒಂದು ಪದಾರ್ಥವನ್ನು ಮತ್ತೊಂದು ತಟ್ಟೆಯಲ್ಲಿ ಒಂದಷ್ಟು ಖಾರದ ಪದಾರ್ಥವನ್ನೂ, ಒಲೆಯ ಮೇಲೆ ಕಾಯಿದು ಕಾಯಿದು ಪಾತ್ರೆಯ

ಸಾರ ಸಹ ಪೂರ್ಣವಾಗಿ ಇಳಿದಿದ್ದ ಕೊತ ಕೊತನೆ ಕುದಿಯುತ್ತಿದ್ದ ಕಾಫಿ ಎಂಬ ದ್ರಾವಕವನ್ನೂ ತಂದು ಕೊಟ್ಟನು. ಹದಿನೈದೂ ಮುಕ್ಕಾಲಾಣೆ ಆಯಿತು ಎಂದನು. ಪಾಪ ಉರಗನಿಗೂ ಅವನ ಜತೆಯವರಿಗೂ ಅದು ಒಂದು ಮೂಲೆಗೂ ಆಗಲಿಲ್ಲ. ಆ ತಿಂಡಿ ತಂದು ಕೊಟ್ಟ ತಟ್ಟೆಯನ್ನೂ ಕೊಟ್ಟವನನ್ನೂ ಕುರ್ಚಿ ಮೇಜುಗಳನ್ನೂ ಏಕಕಾಲದಲ್ಲಿ ನುಂಗಿದ್ದರೂ ಅವರ ಹಸಿವು ಹೋಗುವುದಾಗಿರಲಿಲ್ಲ. ಅವರು ಹದಿನೈದು ಮುಕ್ಕಾಲಾಣೆ ಎಸೆದು ಹೋಟಲಿನವನ್ನು ಒಯ್ದುಕ್ಕೊಂಡು ಅಲ್ಲಿ ಕುಳಿತಿದ್ದ ತಮಗೆ ಗುರುತಿದ್ದ ಇತರ ರೈತರನ್ನೂ ಬೈದುಕೊಂಡು ಹೊರಕ್ಕೆ ಬಂದರು. ರಾತ್ರಿ ಅನಂತು ಮತ್ತೆ ದುಡ್ಡು ಕೊಟ್ಟು ಎಲ್ಲರನ್ನೂ ಊಟಕ್ಕೆ ಕಳುಹಿಸಿದನು.

ಆಳುಗಳು ಐವರೂ ಐಯರ್ ಹೋಟಲಿಗೆ ಹೋದರು. ರಾತ್ರಿ ಸುಮಾರು ೯ ಗಂಟೆ ಆಗಿತ್ತು. ಆಗ ಅಯ್ಯರು ತಮ್ಮ ಅಡಿಗೆಯುವನನ್ನು ಕುರಿತು “ ಇನ್ನು ಎಷ್ಟು ಜನಕ್ಕೆ ಊಟಕ್ಕೆ ಆಗಬಹುದು ” ಎಂದರು. ಅಡಿಗೆಯುವನು “ ೭-೮ ಜನಕ್ಕೆ ಆಗುತ್ತೆ. ಒಲೆಯ ಮೇಲೆ ನೀರು ತಪ್ಪಲೆಯಲ್ಲಿ ಕಾಯು ಸಿದ್ಧವಾಗಿದೆ. ಯಾವ ಗಳಿಗೆ ಅಂದರೆ ಆ ಗಳಿಗೆ ಅನ್ನ ಇಳಿಸುತ್ತೇನೆ ” ಎಂದನು. ಅಯ್ಯರು ಪಲ್ಯ ಇದೆಯೇ ಎಂದರು. ಅಡಿಗೆಯುವನು ಇಲ್ಲ ಎಂದು ಹೇಳಿ ಇವತ್ತು ಬರುವವರಿಗೆ ಪಲ್ಯವಿಲ್ಲದಿದ್ದರೂ ಆಗುತ್ತೆ. ಎರಡು ಉಪ್ಪಿನಕಾಯಿ ಹೆಚ್ಚಾಗಿ ಹಾಕಿದರೆ ಆಯಿತು ಎಂದನು. ಆಮೇಲೆ “ ಆದರೆ ಮಜ್ಜಿಗೆ ಒರಿಯು ನೀರು ” ಎಂದನು. ಅಯ್ಯರು ಫಸ್ಟ್ ಕ್ಲಾಸ್ ಆಗಿ ನಿಂಬೆಹಣ್ಣು ಉಪ್ಪು ಕರುಬೇವು ಹಸಿಶುಂಠಿ ಕೊತ್ತಂಬರಿ ಸೊಪ್ಪು ಹಾಕಿಬಿಡಿ. ಅಮೃತವಾಗುತ್ತೆ ಎಂದು ಹೇಳಿ ಕಳುಹಿಸಿದರು. ಬಂದ ಗಾಡಿಯುವರನ್ನು ನೋಡಿ ಐಯ್ಯರ್ ಊಟ ಮಾಡ್ತಿರೋ ಎಂದರು ಗಾಡಿಯುವರ ಮುಖಂಡ ಹೂ ಎಂದನು. ಅಯ್ಯರು ಟಿಕೆಟ್ ಎಷ್ಟು ಎಂದರು. ಗಾಡಿಯುವನು ಒಂದೇ ಎಂದನು. ಅಯ್ಯರು ಮತ್ತೆ “ ಒಬ್ಬ ಊಟ ಮಾಡೋದಾದರೆ ಐದು ಜನ ಯಾಕೆ ಬಂದಿರಿ ” ಎಂದರು. ಗಾಡಿಯುವನು ಕೋಪವನ್ನು ನಟಿಸುತ್ತಾ “ಒಂದು ಗಳಿಗೆ ನಿಮ್ಮ ಹೋಟಲಿನಲ್ಲಿ ಸುಮ್ಮನೆ ಕೂತಿರೋಕು ಆಗ್ದೊ. ಅದಕ್ಕೂ ದುಡ್ಡು ಕೊಡಬೇಕೋ ” ಎಂದನು. ಐಯರು “ ಇದಾವ ಪಿಶಾಚಿ. ಇದರ ಹತ್ತಿರ ಯಾಕೆ ವ್ಯಾಜ್ಯ ” ಎಂದುಕೊಂಡು “ ಮಹಾರಾಯರಾಗಿ ಕುತ್ಕೋಳಿ.

ಊಟಮಾಡುವರು ಯಾರು ಎಂದು ಕೇಳಿದೆ. ಅಷ್ಟೆ" ಎಂದರು. ಗಾಡಿಯವನು ಹತ್ತು ಆಣೆ ಕೊಟ್ಟು ಒಂದು ಟಿಕೆಟ್ ತೆಗೆದುಕೊಂಡನು. ಐದು ಜನವೂ ಹೋಗಿ ಊಟದ ಮನೆಯಲ್ಲಿ ಕುಳಿತರು.

ಊಟದ ಮನೆ, ಅಡಿಗೆ ಮನೆ ಮಗ್ಗುಲಲ್ಲಿ ಜಿಂಕ್‌ಶೀಟ್ ಹಾಕಿ ಕಟ್ಟಿದ್ದ ಹೊಸ ಬಡಾವಣೆ. ಅದರಲ್ಲಿಯು ದೀಪ ಅಷ್ಟೇನೂ ಪ್ರಕಾಶವಾಗಿರಲಿಲ್ಲ. ಎಲೆಯ ಮುಂದೆ ಒಬ್ಬ ಗಾಡಿಯವನೂ, ಮೂಲೆಯಲ್ಲಿ ಒಬ್ಬನ ಮಗ್ಗುಲಲ್ಲಿ ಒಬ್ಬನಂತೆ ಉಳಿದ ನಾಲ್ಕು ಜನರೂ ತಲೆಯು ಪೂರಾ ದುಪಟಿ ಹೊದೆದುಕೊಂಡು ಕುಳಿತಿದ್ದರು. ಅಡಿಗೆಯವನು ಎಲೆ ಹಾಕಿ ಮೊದಲು ಉಪ್ಪಿನಕಾಯನ್ನೂ ಅನಂತರ ಅನ್ನ ಹುಳಿಯನ್ನೂ ಬಡಿಸಿದನು. ಆಮೇಲೆ ಅನ್ನ ಬಡಿಸಿ ಸಾರು ಬಡಿಸಿದನು. ಸಾರಿನ ಊಟವಾದ ಮೇಲೆ ಅಡಿಗೆಯವನು ಮಜ್ಜಿಗೆ ಅನ್ನಾ ತರಲು ಒಳಕ್ಕೆ ಹೋದಾಗ ಊಟಕ್ಕೆ ಕುಳಿತಿದ್ದವನು ಎಲೆಯ ಮುಂದಲಿಂದ ಎದ್ದು ಮೂಲೆಗೆ ಬಂದು ಕುಳಿತನು. ಅಲ್ಲಿದ್ದ ಗಾಡಿಯವನೊಬ್ಬನು ಅದೇ ಎಲೆಯ ಮುಂದೆ ಹೋಗಿ ಊಟಕ್ಕೆ ಕುಳಿತನು. ಅಡಿಗೆಯವನು ಮಜ್ಜಿಗೆಗೆ ಅನ್ನವನ್ನು ಬಡಿಸಿದಾಗ ಇನ್ನಷ್ಟು ಹಾಕು ಎಂದು ತಟ್ಟೆಯ ಅನ್ನವನ್ನೆಲ್ಲಾ ಪೂರಾ ಹಾಕಿಸಿಕೊಂಡು ಮತ್ತೆ ಹುಳಿ ತತ್ರಾ ಎಂದನು. ಅಡಿಗೆಯವನು "ಇದು ಅನ್ನದ ಭೂತ" ಎಂದುಕೊಂಡು ಹುಳಿ ತಂದು ಬಡಿಸಿದನು. ಊಟಕ್ಕೆ ಕೂತಿದ್ದವನು ಮತ್ತೆ ಸಾರಿಗೆ ಅನ್ನ ತರಿಸಿ ಹಾಕಿಸಿಕೊಂಡು ಊಟ ಮಾಡಿದ ನಂತರ ಅವನ ಜಾಗಕ್ಕೆ ಮೂರನೆಯವನು ಬಂದು ಕುಳಿತನು. ಸರಿ ಮತ್ತೆ ಸಾರಿಗೆ ಅನ್ನ, ಹುಳಿಗೆ ಅನ್ನ ಅಡಿಗೆಯವನು "ಭಗವಂತ ಭಗವಂತ ಇದೇನು" ಎಂದುಕೊಂಡನು. ಮೂಲೆಯಲ್ಲಿ ಕುಳಿತಿದ್ದವರನ್ನು ನೋಡಿದಾಗ ಅವರು ಹದ್ದುಗಳಂತೆ ಇವನನ್ನೆ ನುಂಗುವಂತೆ ಇವನ ಕಡೆಯೇ ನೋಡುತ್ತಿದ್ದರು. ಹೀಗೆ ನಾಲ್ಕು ಜನಕ್ಕೆ ಊಟವಾಗಿಯೇ ಹೋಯಿತು. ಐದನೆಯವನು ಬಂದು ಕುಳಿತಾಗ ಒಳಗೆ ಅನ್ನ ಎಲ್ಲೊ ಸ್ವಲ್ಪ ಇತ್ತು. ಅಡಿಗೆಯವನು ಅದನ್ನು ತಂದು ಹಾಕಿ ಕೋಪದಿಂದ "ನಿನೊಬ್ಬನೇ ಹತ್ತು ಆಳಿನ ಅನ್ನ ತಿಂದೆ. ಇನ್ನು ಒಳಗೆ ಅನ್ನ ಇಲ್ಲ. ನಿನ್ನ ಹೊಟ್ಟೇಲಿ ದೆಯ್ಯ ಕೂತಿದೆ ನೀನು ಖಂಡಿತ ಬೆಳಗಿನ ವರೆಗೆ ಬದುಕೊಲ್ಲ. ರಾತ್ರಿಯೇ ನಿನ್ನನ್ನ ಹೊತ್ತು ಹಾಕುತಾರೆ" ಎಂದು ಅನ್ನದ ಮೇಲೆ ಒಂದಷ್ಟು

ಮಜ್ಜಿಗೆ ಸುರಿದನು. ಅಂತೂ ಕೊನೆಯಲ್ಲಿ ಊಟಕ್ಕೆ ಕುಳಿತಿದ್ದವನು
ಎದ್ದನು. ಬಾಗಿಲಿನ ಡಬ್ಬದಲ್ಲಿ ನೀರಿದ್ದರೂ ಕೈಕೊಳ್ಳದೆ ದುಪ್ಪಟಿಗಳನ್ನು
ಹೊದ್ದುಕೊಂಡು ಎಲ್ಲರೂ ಹೊಟಲಿನಿಂದ ಹೊರಕ್ಕೆ ಹೊರಟರು. ಎರಡು
ಗಳಿಗೆಯನಂತರ ಅಡಿಗೆಯವನು ಅಯ್ಯನವರ ಹತ್ತಿರ ಬಂದು "ಸ್ವಾಮಿ,
ತಪ್ಪಲೆ ಅನ್ನ ಇಳಿಸುವವರೆಗೆ ಯಾರಾದರೂ ಊಟಕ್ಕೆ ಬಂದರೆ ಒಂದು
ನಿಮಿಷ ಕೂರಿಸಿ" ಎಂದನು. ಐಯ್ಯರು "ಈಗತಾನೆ ಎಂಟು ಜನರ
ಅನ್ನವಿದೆ ಎಂದೆಯಲ್ಲಾ" ಎಂದರು. ಅಡಿಗೆಯವನು "ನಿಜ ಆದರೆ
ಈಗ ಬಂದಿದ್ದ ಅಕ್ಕಿಭೂತ ಹತ್ತು ಜನರ ಅನ್ನ ತಿಂದಿತು" ಎಂದನು
ಅಯ್ಯರು "ನಿನ್ನ ಮಾತಿಗೆ ಬೆಂಕಿ ಹಾಕಿತು. ನಿನಗೆ ಅಂದಾಜು ಗೊತ್ತಾ
ಗೊಲ್ಲ. ವರುಷದಿಂದ ತಿಡಿಗೆ ಮಾಡಿದೆ" ಎಂದರು. ಅನಂತರ "ಆ
ಮನುಷ್ಯನ ಮುಖ ಜ್ಞಾಪಕ ಇಟ್ಟುಕೊ. ಮುಂದೆ ಹೋಟಲಿಗೆ ಊಟಕ್ಕೆ
ಬಂದರೆ ಅನ್ನ ಇಲ್ಲ ಎನ್ನು" ಎಂದರು. ಅಡಿಗೆಯವನು "ಜ್ಞಾಪಕ
ವಿಲ್ಲ ಸ್ವಾಮಿ. ಆವನು ಒಂದೊಂದು ಸಲ ಒಂದೊಂದು ತರಹ ಕಂಡ."
ಎಂದನು. ಐಯರು ನಿನಗೆ ಅಡಿಗೆ ಮನೆಯ ಹೊಗೆಯು ಪಿತ್ಥ ಏರಿತು"
ಎಂದರು

## ೧೭. ಹಾವಾಡಿಗನ ವಿಚಾರ

ಅನಂತು ತಾನು ಬಸ್ಸಿನಲ್ಲಿ ಬರುವುದಾಗಿ ಹೇಳಿ, ಗಾಡಿಗಳನ್ನೆಲ್ಲಾ
ಮರಿಯನ ಜತೆಯಲ್ಲಿ ಕಳುಹಿಸಿದನು. ಜತೆಯಲ್ಲಿ ಸುದರ್ಶನನೂ ಇದ್ದನು.
ಅವರು ಸುಮಾರು ಏಳು ಮೈಲಿ ಬರುವ ವೇಳೆಗೆ ಕೋಣನ ಕಂಡಿಯ
ದಟ್ಟವಾದ ಕಾಡು ಸಿಕ್ಕಿತು. ಒಂದು ತಿರುವಿನಲ್ಲಿ ರಸ್ತೆ ಸ್ವಲ್ಪ ಜಡಾವಿ
ನಲ್ಲಿ ಹೋಗಿ ಅಲ್ಲಿಂದ ಮುಂದೆ ಉತಾರು ಇಳಿಜಾರಾಗಿ ಹೋಗುತ್ತಿದ್ದಿತು.
ಆ ಎತ್ತರದಲ್ಲಿ ಗಾಡಿ ನಿಂತಾಗ ಸುತ್ತಾ ವಿಶಾಲವಾದ ಕಾಡೂ ಅದರಲ್ಲಿ
ಜಿಂಕೆ ಮೊಲ ನವಿಲು ಮುಂತಾದ ಪ್ರಾಣಿಗಳೂ ಪಕ್ಷಿಗಳೂ ಓಡಾಡು
ವುದೂ ಕಾಣುತ್ತಿದ್ದಿತು. ಕೊಲ್ಲುವುದರಲ್ಲಿಯೇ ವಿನೋದವನ್ನು ಕಾಣು
ತ್ತಿದ್ದ ಬಿಳಿಯವರು ಬಸ್‌ಗಳಲ್ಲಿ ಬಂದು ಆ ಜಾಗದಲ್ಲಿ ಬಸ್ಸನ್ನು ನಿಲ್ಲಿಸಿ
ಬೆಳಗಿನಿಂದ ರಾತ್ರಿಯ ವರೆಗೆ ಆ ಪ್ರಾಣಿಗಳ ಮೇಲೆ ತಮ್ಮ ಶೌರ್ಯವನ್ನು

ತೋರಿಸಿ ಸಾಯಂಕಾಲದ ವೇಳೆಗೆ ಒಂದು ಜಿಂಕೆಯನ್ನೋ ಒಂದು ನವಿಲನ್ನೋ ಹೊಡೆದು ೧೦-೧೨ ಜನ ಅದರ ಮೆರವಣಿಗೆ ಮಾಡಿಕೊಂಡು ಹೋಗುತ್ತಿದ್ದರು. ಈ ಅವಾಂತರದಲ್ಲಿ ಅವರು ಜಿಂಕೆ ನವಿಲು ಮಾತ್ರವೇ ಅಲ್ಲ. ಯಾವ ಪ್ರಾಣಿ ಕಣ್ಣಿಗೆ ಬಿದ್ದರೂ ಅದನ್ನು ಹೊಡೆದು ಬಿಡುತ್ತಿದ್ದರು. ಯಾವ ಹಕ್ಕಿ ಹಾರುತ್ತಿದ್ದರೂ ಹೊಡೆಯುತ್ತಿದ್ದರು. ಅವರ ಈ ಹೊಟ್ಟೆ ಹರಕತನವನ್ನು ಕಂಡು ರೈತರು ನಾಲ್ಕು ಕಾಲಿನದರ ಪೈಕಿ ಬಿಳಿಯುವರು ತಿನ್ನದುದು ಕುರ್ಚಿ ಮಾತ್ರ. ಹಾರಾಡುವುದರ ಪೈಕಿ ಪಟ ಮಾತ್ರ ಎನ್ನುತ್ತಿದ್ದರು. ಉತಾರಿನಲ್ಲಿ ಗಾಡಿಯುವರು ಗಾಡಿ ನಿಲ್ಲಿಸಿಕೊಂಡು ಸುತ್ತಾ ನೋಡುತ್ತಿರುವಾಗ ಸ್ವತಃ ಬೇಟೆಗಾರರಾದ ಅವರಿಗೂ ಸಹ, ಆಶೆಯನ್ನು ಮೀರಿ ಒಂದು ವಿಧವಾದ ಮೇಲು ದರ್ಜೆಯ ಆನಂದ ವುಂಟಾಯಿತು. ಕೆಳಗೆ ಕಾಣುತ್ತಿದ್ದ ತಪ್ಪಲು ಪ್ರದೇಶದಲ್ಲಿ ನೂರಾರು ನವಿಲುಗಳು ವಿಶಾಲವಾದ ಮಾರುದ್ದದ ರಕ್ಕೆಗಳನ್ನು ಹರಡಿಕೊಂಡು ಸಾವಿರಾರು ಕಣ್ಣುಗಳ ಚಿತ್ರವಿಚಿತ್ರಗಳನ್ನು ತೋರಿಸುತ್ತಾ ಒಳ್ಳೆಯ ಗತ್ತಿನಿಂದ ಬೆಡಗಿನಿಂದ ನಡೆಯುತ್ತಿದ್ದುವು. ಜಿಂಕೆಗಳು ಅಗಲವಾದ ಕಣ್ಣುಗಳಿಂದ ಗಾಡಿಯ ಕಡೆಯೇ ಕುರಿತು ನೋಡುತ್ತಾ ಗಾಳಿಯಂತೆ ಓಡಾಡುತ್ತಿದ್ದವು. ಕೆಲವು ಶಾಶ್ವತವಾಗಿಯೋ ಎಂಬಂತೆ ನಿಂತ ಜಾಗದಲ್ಲಿಯೇ ನಿಂತು ರಸ್ತೆಯ ಕಡೆ ನೋಡುತ್ತಿದ್ದವು. ಮೊಲಗಳು ನೊರೆ ನೊರೆಯಾಗಿ ಬೆಳ್ಳಗೆ ಮುಡಿ ಮಾಡಿದ ಹತ್ತಿಯಂತೆ, ಹತ್ತಿಗಿಂತ ಹಗುರವಾಗಿ ಕಿವಿಗಳನ್ನು ನಿಮಿರಿಸಿಕೊಂಡು ಒಂದೇ ಏಟಿಗೆ ೧೦ ಗಜ ೨೦ ಗಜಗಳನ್ನು ಹಾರುತ್ತಿದ್ದುವು. ಪ್ರಾಣಿಗಳು ತಮ್ಮನ್ನು ಭಕ್ಷಿಸುವ ಮನುಷ್ಯ ದೈತ್ಯನ ಯೋಚನೆಯನ್ನು ಮರೆತು ತಮ್ಮ ಪಾಡಿಗೆ ತಾವು ಸ್ವೇಚ್ಛೆಯಿಂದ ವ್ಯವಹರಿಸುತ್ತಿದ್ದವು. ಗಾಡಿಯುವರು ಎಂಥಾ ಮೊಲ ಎಂಥಾ ನವಿಲು ಎಂದುಕೊಂಡು ಗಾಡಿಯನ್ನು ಮುಂದುವರಿಸಲು ಸವರಿಸುತ್ತಾ ಬೀಡಿಗಳನ್ನು ಹತ್ತಿಸುತ್ತಿದ್ದರು. ಆಗ ಹಿಂದುಗಡೆ ಹೆಗಲಿನ ಮೇಲೆ ಹಗ್ಗದ ಅಡ್ಡೆಯನ್ನು ಹೊತ್ತುಕೊಂಡು ಅದರ ಆಚೆ ಈಚೆ ಬುಟ್ಟಿ ಮೊದಲಾದವುಗಳನ್ನು ತುಂಬಿಕೊಂಡು ಒಬ್ಬ ಗಂಡಸೂ ಅವನ ಮುಗ್ಗುಲಿನಲ್ಲಿ ತಲೆಯ ಮೇಲೆ ಒಂದು ಕುಕ್ಕೆಯನ್ನೂ ಕತ್ತಿಗೆ ತಮಟೆಯನ್ನೂ ನೇತು ಹಾಕಿಕೊಂಡಿದ್ದ ಹೆಂಗಸೂ ಬರುತ್ತಿರುವುದು ಅವರಿಗೆ ಕಂಡಿತು. ನೋಡಿದ ಕೂಡಲೆ ಇವರು ಹಾವಾಡಿ

ಗಳು ಎಂಬುದು ಮರಿಯನಿಗೆ ಗೊತ್ತಾಯಿತು. ಹಾವಾಡಿಗರೆಂದರೆ ಯಾವಾಗಲೂ ಉತ್ಸಾಹಶಾಲಿಯಾಗಿದ್ದ ಸುದರ್ಶನ ಈಗಲೂ ಅಷ್ಟೇ ಚಪಲದಿಂದ ಅವರು ಹತ್ತಿರಕ್ಕೆ ಬರುವವರೆಗೆ ನಿಂತನು. ಎರಡು ನಿಮಿಷ ದೊಳಗಾಗಿ ಹಾವಾಡಿಗನೂ ಅವನ ಜತೆಯ ಸ್ತ್ರೀಯೂ ಹತ್ತಿರಕ್ಕೆ ಬಂದರು.

ಹಾವಾಡಿಗನ ವಯಸ್ಸು ಎಷ್ಟು ಎಂಬುದು ಸರಿಯಾಗಿ ತಿಳಿಯುತ್ತಿರಲಿಲ್ಲ. ಅವನು ಇನ್ನೂ ಹುಡುಗನಾಗಿಯೇ ಕಾಣುತ್ತಿದ್ದನು. ಆದರೆ ಕುರಿತು ನೋಡಿದರೆ ಅವನಿಗೆ ಮಧ್ಯವಯಸ್ಸಾಗಿದ್ದಂತೆ ತೋರುತ್ತಿದ್ದಿತು. ಯಾವಾಗಲೂ ಗಾಳಿ ಬೆಳಕಿನಲ್ಲಿ ತಿರುಗುತ್ತಿದ್ದುದರಿಂದಲೂ ಯಾವ ಯೋಚನೆಗೂ ಅವಕಾಶ ಕೊಡದುದರಿಂದಲೂ ಅವನ ಮೇಲೆ ಹಾಯ್ದು ಹೋಗಿದ್ದ ವಯಸ್ಸು ಅವನ ಮುಖದಲ್ಲಿ ತೋರುತ್ತಿರಲಿಲ್ಲ. ಅವನು ಯಾವ ಜಾತಿ ಎಂಬುದೂ ತಿಳಿಯುತ್ತಿರಲಿಲ್ಲ. ಅವನು ಗೃಹಸ್ಥರು ಉಡುವಂತೆ ಕಚ್ಚೆಪಂಚೆಯುಟ್ಟಿದ್ದನು. ಅರ್ಧ ತೋಳಿನ ಕೋಟಿನಂತಿರುವ ಮೇಲಕ್ಕಾದ ಒಂದು ಅಂಗಿಯನ್ನು ಹಾಕಿಕೊಂಡಿದ್ದನು. ಮೀಸೆ ಬಿಟ್ಟಿದ್ದನು. ತಲೆಯ ಮೇಲೆ ಒಂದು ಕೆಂಪು ಬಣ್ಣದ ರುಮಾಲನ್ನು ಸುತ್ತಿದ್ದನು. ಒಂದೊಂದು ಸಲ ಮುಖ ಒಳ್ಳೆಯ ಕ್ರೌರ್ಯವುಳ್ಳದುದಾಗಿ ಕಾಣುತ್ತಿದ್ದಿತು. ಅವನ ಜತೆಯಲ್ಲಿದ್ದ ಸ್ತ್ರೀಯ ವಯಸ್ಸು ಅವನಿಗೆ ಅನುಸಾರವಾಗಿದ್ದಿತು. ಅವಳು ಇನ್ನೂ ಯುವತಿಯಾಗಿದ್ದಳು. ಅವಳು ಸುಂದರಿಯಲ್ಲದಿದ್ದರೂ ಕುರೂಪಿಯಾಗಿರಲಿಲ್ಲ. ಅವಳನ್ನು ನೋಡಿದರೆ ಒಳ್ಳೆಯ ಸಂಸ್ಕೃತಳಾದ ಸ್ತ್ರೀಯಾಗಿ ತೋರುತ್ತಿದ್ದಳು. ಅವಳ ಮುಖದಲ್ಲಿ ಕಷ್ಟವನ್ನು ಅನುಭವಿಸಿದ ಶಾಂತಿ ನೆಲಸಿತ್ತು. ಹೋಲಿಕೆ ಮಾಡಿ ನೋಡಿದರೆ ಆ ಹಾವಾಡಿಗ ಅವಳಿಗೆ ಪೂರ್ಣವಾಗಿ ಅನರ್ಹನಾಗಿಯೇ ತೋರುತ್ತಿದ್ದನು. ಗಂಡಸು ಹತ್ತಿರಕ್ಕೆ ಬಂದು ಬಂಡಿ ಗಾಡಿಯವನೊಂದಿಗೆ "ಅಪ್ಪಾ ಈ ಗಂಟು ಸ್ವಲ್ಪ ಗಾಡೀಲಿ ಇಡುತ್ತೇನೆ ಹೆಗಲು ಬಿದ್ದು ಹೋಯಿತು" ಎಂದನು. ಗಾಡಿಯವನು "ಅದೆಲ್ಲಾ ಆಗೋಕಿಲ್ಲ" ಎಂದನು. ಮರಿಯವನಿಗೆ, ಸುದರ್ಶನನಿಗೆ ಯಾವಾಗಲೂ ಹಾವಾಡಿಗ ಎಂದರೆ ಒಂದು ಪ್ರೀತಿ ಒಂದು ಮಂಕು. ಹಾವಾಡಿಗರು ದೊಂಬರು ಯಕ್ಷಗಾನ ಕುಣಿಯುವವರು ಇವರು ಊರಿಗೆ ಬಂದು

'ಕ್ಯಾಂಪು' ಹಾಕಿದಾಗ ಮರಿಯ ತನ್ನ ಕಾಲವನ್ನೆಲ್ಲಾ ಅವರ ಸುತ್ತಲೇ ಕಳೆಯುತ್ತಿದ್ದನು. ಹಾವಾಡಿಗನ ಯಕ್ಷಣಿ ವಿದ್ಯೆಗಳನ್ನು ಕಲಿಯಬೇಕು; ಅವನಂತೆ ಹಾವುಗಳನ್ನು ಆಡಿಸುವುದನ್ನು ಕಲಿಯಬೇಕು; ದೊಂಬರಂತೆ ಲಾಗ ಹಾಕುವುದನ್ನೂ ಹಿಂದೆ ಊರಿಗೆ ಬಂದಿದ್ದ ಆ ದೊಂಬರ ಹುಡುಗಿಯಂತೆ ಗಣೆಯ ಮೇಲೆ ಆಡುವುದನ್ನೂ, ಹಾಸನದ ಯಕ್ಷಗಾನದ ರಾವಣನಂತೆ ಅಭಿನಯಿಸುವುದನ್ನೂ ಕಲಿಯಬೇಕೆಂಬುದು ಅವನ ಆಶೆಯಾಗಿದ್ದಿತು. ಸುದರ್ಶನನು ಗಾಡಿಯವನಿಗೆ "ಏ ಕಾಳ ಪಾಪ ಗಂಟು ಮಡಗಲಿ ಸೋತಿದಾನೆ" ಎಂದನು. ಹಾವಾಡಿಗನು "ಮಹಾರಾಯ ನಿನಗೆ ಒಳ್ಳೆಯದಾಗಲಿ. ನಿನಗೆ ಒಳ್ಳೆಯ ಹೆಂಡತಿ ಬರಲಿ" ಎಂದು ಹೇಳಿ ತನ್ನ ತಲೆಯ ಮೇಲಿದ್ದ ಒಂದು ಹೊರೆಯನ್ನು ಗಾಡಿಯಲ್ಲಿ ಇಳುಕಿದನು. ಮರಿಯನೂ ಸುದರ್ಶನನೂ "ಆ ಅಡ್ಡೆಯನ್ನೂ ಗಾಡಿಗೆ ಇಟ್ಟು ನೀನೂ ಕುಳಿತುಕೊ" ಎಂದರು. ಗಾಡಿ ಆಳು ಕಾಳನು ಕೂಡಲೆ ಗಾಡಿಯಿಂದ ಕೆಳಕ್ಕೆ ಧುಮುಕಿ "ಒಲ್ಲೆ ಒಲ್ಲೆ ನಾಸೊಲ್ಲೆ. ಅದರಲ್ಲಿ ಹಾವಯ್ತೆ. ಅದರ ಮಗ್ಗುಲಲ್ಲಿ ಕೂರೋಕೆ ನನ್ನಿಂದ ಆಗೋಕಿಲ್ಲ. ಇಕೊ ಗಾಡಿ ಬಿಟ್ಟು ನಡೆದೆ" ಎಂದನು. ಸುದರ್ಶನನಿಗೂ ಹಾವು ಎಂದರೆ ಭಯ. ಅವನು ಹಾವಾಡಿಗನ ಹೆಂಡತಿ ಕಡೆ ಸ್ವಾಭಾವಿಕವಾಗಿ ನೋಡಿದನು. ಅವಳ ಮುಖದಲ್ಲಿ ಸ್ವಲ್ಪ—ಎಲ್ಲೊ ಬಹು ಸ್ವಲ್ಪ-ತಿರಸ್ಕಾರವುಂಟಾಗಿದ್ದಂತೆ ತೋರಿತು. ಹಾವು ಎಂದರೆ ಇವರು ಇಷ್ಟು ಹೆದರುತ್ತಾರೆಲ್ಲ ಎಂದು ಅವಳಿಗೆ ತಿರಸ್ಕಾರವಲ್ಲವೇ ಎಂದುಕೊಂಡು ಸುದರ್ಶನನು "ಏ ಕಾಳ ಬುಟ್ಟಿಯಲ್ಲಿರುವ ಹಲ್ಲುಮುರಿದ ಹಾವು ನಿನ್ನನ್ನ ಏನ್ಮಾಡುತ್ತೆ ಗಾಡಿ ಹತ್ತು" ಎಂದನು. ಕಾಳನು "ಪರಾಣ ಹೋದರೂ ನಾ ಒಲ್ಲೆ. ನಡಕೊಂಡೇ ಬರ್ತೀನಿ" ಎಂದನು. ಸುದರ್ಶನನು "ನೀವೆಲ್ಲಾ ಶುದ್ಧ ಹೇಡಿಗಳು. ಆಗಲಿ ನೀನು ನಡೆದುಕೊಂಡೆ ಬಾ ನಾನೇ ಗಾಡಿ ಹೊಡೆಯುತ್ತೇನೆ" ಎಂದು ಹೇಳಿ ತಾನೇ ಗಾಡಿ ಮೂಕಿ ಮೇಲೆ ಕುಳಿತನು.

ಅದೇ ಗಾಡಿಯಲ್ಲಿ ಹಾವಾಡಿಗನು ತನ್ನ ಹಾವಿನ ಅಡ್ಡೆಯನ್ನಿಟ್ಟು ಕುಳಿತುಕೊಂಡನು. ಅವನ ಹೆಂಡತಿಯೂ ಅವನ ಮಗ್ಗುಲಲ್ಲಿ ಕುಳಿತುಕೊಂಡಳು. ಸುದರ್ಶನ ಗಾಡಿ ಹೊಡೆಯುತ್ತಿದ್ದನು. ಮರಿಯ ಮಗ್ಗು

ಲಲ್ಲಿ ನಡೆದುಬರುತ್ತಿದ್ದನು. ಗಾಡಿಗಳು ನಿಧಾನವಾಗಿ ಹೊರಡಲು ಪ್ರಾರಂಭಿಸಿದುವು. ಸುಮಾರು ಒಂದು ಮೈಲಿ ಹೋಗುವ ಹೊತ್ತಿಗೆ ನಡೆದು ನಡೆದು ಸುಸ್ತಾಗಿದ್ದ ಹಾವಾಡಿಗನೂ ಅವನ ಹೆಂಡತಿಯೂ ಗಾಡಿಯಲ್ಲಿ ಕುಳಿತಿದ್ದಂತೆಯೇ ಮೈಮೇಲೆ ಜ್ಞಾನವಿಲ್ಲದೆ ತೂಗಡಿಸಲಾರಂಭಿಸಿದರು. ಎತ್ತುಗಳು ನಿಧಾನವಾಗಿ ಹೋಗುತ್ತಿದ್ದುವು. ಸುದರ್ಶನನೂ ಎತ್ತುಗಳನ್ನು ಹೊಡೆದು ಹೆದರಿಸದೆ, ಚಾವಟಿಯನ್ನು ಗಾಡಿಯ ಒಳಗೆ ಹಾಕಿ ಎತ್ತುಗಳ ಹಗ್ಗಗಳನ್ನು ಗಾಡಿಯ ತಡಿಕೆಗೆ ಕಟ್ಟಿ ಅದೇ ತಡಿಕೆಗೆ ಒರಗಿಕೊಂಡು ಆರಾಮವಾಗಿ ಕುಳಿತಿದ್ದನು. ಗಾಡಿ ರಸ್ತೆಯಲ್ಲಿ ಕುಲಕಾಡಿ ಕುಲಕಾಡಿ ಒಂದು ಅಡ್ಡೆಯ ಬುಟ್ಟಿಯ ಮುಚ್ಚಳ ಸ್ವಲ್ಪ ಓರೆಯಾಯಿತು. ಕಾಲು ನಿಮಿಷದೊಳಗಾಗಿ ಅದರಿಂದ ಒಂದು ಹಾವು ಈಚೆಗೆ ಹೊರಟಿತು. ಒಂದು ನಿಮಿಷದ ಒಳಗೆ ಅದು ನೆಟ್ಟಗೆ ಹರಿದುಕೊಂಡು ಸುದರ್ಶನನ ತೊಡೆಯ ಮೇಲೆ ಬಂದಿತು. ಏನನ್ನೋ ಯೋಚಿಸುತ್ತಾ ಕುಳಿತಿದ್ದ ಸುದರ್ಶನನ ತೊಡೆಯ ಮೇಲೆ ಇದ್ದಕ್ಕಿದ್ದಂತೆ ಒಂದು ಒನಕೆಯ ತುಂಡನ್ನು ಇಟ್ಟಂತೆ ಭಾರವಾಯಿತು. ಸುದರ್ಶನನು ತಲೆ ತಗ್ಗಿಸಿ ತೊಡೆಯ ಕಡೆ ನೋಡಿದನು; ಬೆಂಕಿ ಸಿಡಿಲು ಮಿಂಚು! ಹೋ ಎಂದು ಒಂದೇ ಏಟಿಗೆ ವಿಕಾರವಾಗಿ ಕೂಗಿದವನೇ ಗಾಡಿಯಿಂದ ಪ್ರಾಣ ಹೋಗುವುದನ್ನೂ ಲಕ್ಷಿಸದೆ ಕೆಳಕ್ಕೆ ಹಾರಿಬಿಟ್ಟನು. ಅವನ ಜತೆಯಲ್ಲಿ ಹಾವೂ ಕೆಳಕ್ಕೆ ಬಿದ್ದುಹೋಯಿತು.

ಈ ಆರ್ಭಟವನ್ನು ಕೇಳಿ ಗಾಡಿಯಲ್ಲಿದ್ದ ಹಾವಾಡಿಗನೂ ಅವನ ಹೆಂಡತಿಯೂ ಕಣ್ಣುಬಿಟ್ಟರು. ಹಾವಾಡಿಗನ ಹೆಂಡತಿ ಕಣ್ಣುಬಿಟ್ಟ ಕೂಡಲೆ ಸ್ವಾಭಾವಿಕವಾಗಿ ಬುಟ್ಟಿಯನ್ನು ನೋಡಿ ಅದರ ಮುಚ್ಚಳ ತೆರೆದಿದ್ದುದರಿಂದ ಹಾವು ಹೊರಕ್ಕೆ ಹೊರಟಿದೆಯೆಂದುಕೊಂಡಳು. ಸುದರ್ಶನ ನೆಲದ ಮೇಲೆ ಬಿದ್ದು ನಿಧಾನವಾಗಿ ಗುತ್ತಿಯಕಡೆ ಹರಿದುಕೊಂಡು ಹೋಗುತ್ತಿದ್ದ ಹಾವನ್ನು ನೋಡುತ್ತಾ ನಿಂತಿದ್ದನು. ಗಾಡಿಯವರೆಲ್ಲಾ ಗಾಡಿ ನಿಲ್ಲಿಸಿ ಬಂದು ಸೇರಿದರು. ಹಾವಾಡಿಗನು ಹೆಂಡತಿಗೆ "ಹೋಗಿ ಅದನ್ನು ಹಿಡಿದುಕೊಂಡು ಬಾ" ಎಂದನು. ಅವಳು ಕೆಳಕ್ಕೆ ಇಳಿದಳು. ಗಾಡಿಯವರೆಲ್ಲಾ ಗಡಗಡನೆ ನಡಗುತ್ತಾ ನಿಂತಿದ್ದರು. ಹಾವಾಡಿನ ಹೆಂಡತಿ ನಿಧಾನವಾಗಿ ಹರಿದುಕೊಂಡು ಹೋಗುತ್ತಿದ್ದ ಹಾವನ್ನು ಒಂದು

ಹಗ್ಗವನ್ನು ತೆಗೆದುಕೊಳ್ಳುವಂತೆ ಹಿಡಿದುಕೊಂಡಳು. ಆ ಮುಂಡೇದು ಅವಳನ್ನು ನೋಡಿದ ಕೂಡಲೇ ತಾನು ಹಾವು ಎಂಬುದನ್ನೇ ಮರೆತು ನಾಯಿಯ ಮರಿಯಾಗಿ "ಕೈಕಾಲು" ಬಾಲ ಸಹ ಅಲ್ಲಾಡಿಸದೆ ನೆಟ್ಟಗೆ ಅವಳ ಕೈಗೆ ಸಿಕ್ಕಿತು. ಅವಳು ಅದನ್ನು ಹಿಡಿದುಕೊಂಡು ಗಾಡಿಯೊಳಗಿನ ಬುಟ್ಟಿಗೆ ಹಾಕುವುದಕ್ಕಾಗಿ ಹಿಂದಿರುಗುತ್ತಿರುವಾಗ ಗಾಡಿಯವರೆಲ್ಲಾ "ನಮ್ಮವ್ವ ಪುಣಾತ್ಗಿತ್ತಿ ನಿನ್ನಾಪ್ಪದ್ವೆ ಗತಿ" ಎಂದು ಕೈಮುಗಿದೇ ಬಿಟ್ಟರು. ಹಾವಾಡಿಗನು "ಆ ಮುಂಡೇದು ಏನ್ಮಾಡುತ್ತೆ. ಹಲ್ಮುರಿದ ಹಾವು. ಅದಕ್ಕೆ ಜೋರಾಗಿ ಹರ್ಕೊಂಡು ಹೋಗೋದು ಸಹ ಮರೆತುಹೋಗಿದೆ" ಎಂದನು. ಸುದರ್ಶನನಿಗೆ ಹೀಗೆ ತಾನು ಹಲ್ಲು ಮುರಿದ ಹಾವಿಗೆ ಹೆದರಿದುದರಿಂದ ಬಹಳ ನಾಚಿಕೆಯಾಯಿತು. ಅದರಲ್ಲಿಯೂ ಆ ಹೆಂಗಸಿನ ಎದುರಿಗೆ ಗಂಡಸಾದ ತಾನು ಹೀಗೆ ಹೇಡಿತನವನ್ನು ತೋರಿಸಿಕೊಂಡುದು ಅವನಿಗೆ ತನ್ನಲ್ಲಿಯೇ ತಿರಸ್ಕಾರವನ್ನುಂಟು ಮಾಡಿತ್ತು. ಉಳಿದ ಗಾಡಿಯವರು "ಇವರನ್ನು ಇಳಿಸಿ ಬಿಡೋಣ" ಎಂದರೂ ಸುದರ್ಶನ ಕೇಳಲಿಲ್ಲ. "ಹಲ್ಲು ಮುರಿದ ಹಾವು ಅದೇನು ಮಾಡುತ್ತೆ; ನನಗೆ ಅದು ತಿಳಿಯದುದರಿಂದ ಹೆದರಿದೆ. ಇಲ್ಲದೆ ಇದ್ದಿದ್ದರೆ ತೆಗೆದು ಸುರುಳಿಸುತ್ತಿ ನಾನೇ ಅದನ್ನ ಬುಟ್ಟಿಗೆ ತುರುಕುತ್ತಿದ್ದೆ." ಎಂದು ಹೇಳಿ ಹೆಮ್ಮೆಯ ಮುಖಭಾವದಿಂದ ತಾನೇ ಗಾಡಿಯ ಮೇಲೆ ಕುಳಿತುಕೊಂಡು ಮೊದಲಿನಂತೆ ಗಾಡಿ ಹೊಡೆಯತೊಡಗಿದನು.

ಸಾಯಂಕಾಲದ ಹೊತ್ತಿಗೆ ಗಾಡಿಗಳು ಊರಿಗೆ ಬಂದವು. ದಾರಿ ಉದ್ದಕ್ಕೂ ಸುದರ್ಶನ ಹಾವುಗಳನ್ನು ಹಿಡಿಯುವುದು ಹೇಗೆ? ಪಳಗಿಸುವುದು ಹೇಗೆ? ಹಲ್ಲು ಮುರಿಯುವುದು ಹೇಗೆ? ಮುರಿದ ಹಲ್ಲು ಎಷ್ಟು ದಿವಸಕ್ಕೆ ಮತ್ತೆ ಮೊಳೆಯುತ್ತೆ? ಕೈಯಲ್ಲಿ ಗರುಡನ ಗರಿ ಇರಬೇಕೆ? ತನ್ನ ಕೈಯಲ್ಲಿ ಇದೆಯೆ? ವಿಷಹಾರಿಯಾದ ಗುರುಡಪಚ್ಚೆ ಮಣಿ ಹಾವಾಡಿಗನಲ್ಲಿ ಇದೆಯೆ? ಅವನಿಗೆ ಗೊತ್ತಿರುವ ಮಂತ್ರ ತಂತ್ರಗಳಾವುವು? ಮೋಡಿ ವಿದ್ಯೆಯಲ್ಲಿ ಇದುವರೆಗೆ ಎಷ್ಟು ಜನರನ್ನು ಜಯಿಸಿದ್ದಾನೆ. ಅವನಿಗೆ ತಿಳಿದಿರುವ ಇತರ ಯಕ್ಷಣಿಗಳು ಯಾವವು; ತನಗೆ ಕಲಿಸುತ್ತಾನೆಯೇ. ತಾನು ಕಲಿಯುವ ಯೋಗವಿದೆಯೆ? ಇವೇ ಮುಂತಾದ ಅನೇಕ ಪ್ರಶ್ನೆಗಳನ್ನು ಹಾವಾಡಿಗನಿಗೆ ಹಾಕಿದನು. ಹಾವಾಡಿಗನು ಅವನ ಮಾತುಗಳ

ಗೆಲ್ಲಾ ಆ ಕಸಬಿನವರು ಪ್ರತ್ಯುತ್ತರ ಕೊಡುವಂತೆ "ನನಗೆ ಎಲ್ಲಾ ವಿದ್ಯೆಯೂ ಗೊತ್ತು. ಗರುಡಪಚ್ಚೆ ಇದೆ. ಹಾವು ಕಚ್ಚಿದು ಸತ್ತವನನ್ನು ಬದುಕಿಸುತ್ತೇನೆ. ಎಂತಹ ಹಾವನ್ನು ಬೇಕಾದರೂ ಒಂದೇ ನಿಮಿಷಕ್ಕೆ ಹಿಡಿಯುತ್ತೇನೆ" ಎಂದನು. ಸುದರ್ಶನನ ಕೈಯನ್ನು ನೋಡಿ "ನಿನ್ನ ಕೈಯಲ್ಲಿ ಗರುಡನ ಗೆರೆ ಇದೆ. ನಿನಗೆ ಯಾವ ಹಾವುಗಳೂ ಸ್ವಾಧೀನಕ್ಕೆ ಬರುತ್ತವೆ" ಎಂದನು. ಅವನ ಹೆಂಡತಿ ಮಾತ್ರ ಯಾವ ಮಾತನ್ನೂ ಆಡಲಿಲ್ಲ. ಸುಮ್ಮನೆ ಗಂಡನ ಕಡೆ ನೋಡುತ್ತಿದ್ದಳು. ಸುದರ್ಶನನ ಮನಸ್ಸಿನಲ್ಲಿ "ಈ ಹಾವಿನ ವಿದ್ಯೆ ಕಲಿತೇ ತೀರಬೇಕು. ಇದರಲ್ಲಿ ಪೂರ್ಣ ಪಾಂಡಿತ್ಯವನ್ನು ಹೊಂದಿ ಊರಿನವರಿಗೆ ಒಂದುದಿನ ವಿದ್ಯೆ ತೋರಿಸಬೇಕು. ಸುಬ್ಬುವಿನ ಕಣ್ಣಿನ ಮುಂದೆ ಒಂದು ಹಾವನ್ನು ಹಿಡಿದುಕೊಂಡು ಅವನು ಗಡಗಡನೆ ನಡಗುವುದನ್ನು ನೋಡಿ ನಗಬೇಕು" ಎಂದು ಯೋಚಿಸಿಕೊಂಡನು.

ಹಾವಾಡಿಗ ಮಲ್ಲಿಗೆಹಳ್ಳಿಯಲ್ಲಿ ಸಾಮಾನ್ಯವಾಗಿ ಹೊರಗಿನಿಂದ ಬಂದವರು ಇಳಿದುಕೊಳ್ಳುತ್ತಿದ್ದ ಪಾಳು ಛತ್ರದಲ್ಲಿ ಇಳಿದುಕೊಂಡನು. ಮಾರನೆಯ ಪ್ರಾತಃಕಾಲವೇ ಅವನು ಒಬ್ಬನೇ ಊರಿನೊಳಕ್ಕೆ ತನ್ನ ಪಿಪಿ ವಾದ್ಯದೊಂದಿಗೆ ಬಂದನು. ಕೈಚಳಕ ಯಕ್ಷಿಣಿ ವಿದ್ಯದಲ್ಲಿ ಅವನು ಬಹಳ ಪಳಗಿದವನಾಗಿ ತೋರುತ್ತಿದ್ದನು. ಬಾಯಿನಲ್ಲಿ ಏನೂ ಇಲ್ಲವೆಂದು ತೋರಿಸಿ ಆ ಬಾಯಿನಿಂದ ಹಲಸಿನಕಾಯಿ ಗಾತ್ರದ ನೂಲಿನ ಉಂಡೆಯನ್ನು ಹೊರಕ್ಕೆ ತೆಗೆಯುತ್ತಿದ್ದನು; ಬಟ್ಟೆಗಳನ್ನೆಲ್ಲಾ ಚೂರು ಚೂರು ಮಾಡಿ ಅನಂತರ ಕೈಯಲ್ಲಿಟ್ಟು ಮಂತ್ರ ಹಾಕಿ ಮತ್ತೆ ಹೊಸದಾಗಿಯೇ ಮಾಡಿಬಿಡುತ್ತಿದ್ದನು; ನಾಲ್ಕು ಗಡಿಗೆ ನೀರನ್ನು ಬೇಕಾದರೂ ಕುಡಿದು ಅನಂತರ ಆ ನೀರನ್ನೆಲ್ಲಾ ನಕ್ಲಿಯಿಂದ ಹೊರಕ್ಕೆ ಬಿಡುವಂತೆ ದಡದಡನೆ ಬಾಯಿಂದ ಹೊರಕ್ಕೆ ಬಿಡುತ್ತಿದ್ದನು. ಅವನ ಈ ವಿದ್ಯೆಗಳನ್ನೆಲ್ಲಾ ನೋಡಿ ಸುದರ್ಶನನಿಗೆ ತಾನೂ ಅವುಗಳಲ್ಲಿ ಅನುಭವವನ್ನು ಹೊಂದಬೇಕೆಂದು ತುಂಬ ಆಸೆಯಾಯಿತು. ಅವನು ಹಾವಾಡಿಗನಿಗೆ "ನಿನ್ನ ಜಾಗಕ್ಕೆ ಬರಲೇ" ಎಂದನು. ಹಾವಾಡಿಗನು "ಆಗಲಿ. ಸಾಯಂಕಾಲ ಬನ್ನಿ. ಏನಾದರೂ ಚಿಲ್ಲರೆ ದುಡ್ಡು ಜೇಬಿನಲ್ಲಿ ಹಾಕಿಕೊಂಡು ಬನ್ನಿ" ಎಂದನು. ಸುದರ್ಶನ ಚಿಲ್ಲರೆ ದುಡ್ಡನ್ನು ಹೇಗೆ ಸಂಪಾದಿಸಬೇಕೆಂದು ಯೋಚಿಸುತ್ತಿರು

ವಾಗ ಅಲ್ಲಿಗೆ ಸುಬ್ಬು ಬಂದನು. ಸುದರ್ಶನನಿಗೆ ಸುಬ್ಬುವನ್ನು ಜತೆಯಲ್ಲಿ ಕರೆದುಕೊಂಡು ಹೋಗಲು ಇಷ್ಟವಿರಲಿಲ್ಲ. ಆದರೆ ಸುಬ್ಬುವಿನ ಚಿಲ್ಲರೆ ದುಡ್ಡು ಸಿಕ್ಕದಿದ್ದರೆ ಅಲ್ಲಿಗೆ ಹೋಗುವಂತೆಯೇ ಇರಲಿಲ್ಲ. ಸುದರ್ಶನ ಸುಬ್ಬುವನ್ನು ಪುಸಲಾಯಿಸಿ ಹಾವಾಡಿಗನ ಯಕ್ಷಿಣಿ ಕಲಿಯೋಣ ಎಂದು ಆಶೆತೋರಿಸಿ " ಅವನ ಹೆಂಡತಿ ಬಹಳ ಒಳ್ಳೆಯವಳು ಪಾಪ. ಏನಾದರೂ ಕೊಡೋಣ " ಎಂದು ಹೇಳಿ ಸುಬ್ಬುವನ್ನು ಕರೆದುಕೊಂಡು ಹೋದನು. ಸುಬ್ಬುವಿನ ಜೇಬಿನಲ್ಲಿ ಒಂದು ರೂಪಾಯಿ ಇದ್ದಿತು. ಸುಬ್ಬುವಿಗೆ ಸುದರ್ಶನನ ಮಾತಿನಲ್ಲಿ ನಂಬಿಕೆ ಇರಲಿಲ್ಲ. ಆದರೆ ಸುದರ್ಶನನ ಇಷ್ಟಕ್ಕೆ ವಿರೋಧವಾಗಿ ಹೋಗಲು ಅವನು ಸ್ವಲ್ಪ ಹೆದರುತ್ತಿದ್ದನು. ಆದುದರಿಂದ ಅವನು ಸುಮ್ಮನೆ ಜೇಬಿನಲ್ಲಿ ಒಂದು ರೂಪಾಯಿ ಹಾಕಿಕ್ಕೊಂಡು ಹೊರಗೆ ಹೊರಟನು.

ಸುದರ್ಶನನೂ ಸುಬ್ಬುವೂ ಪಾಳು ಛತ್ರದೊಳಕ್ಕೆ ಹೋದರು. ಹಾವಾಡಿಗನೂ ಅವನ ಹೆಂಡತಿಯೂ ಆ ಛತ್ರದ ಜಗಲಿಯ ಮೇಲೆ ಇಳಿದುಕೊಂಡಿದ್ದರು. ಜಗಲಿಯ ಹಿಂದಲ ಕೊಠಡಿಗೆ ಬೀಗ ಹಾಕಿತ್ತು. ವಿಶಾಲವಾಗಿದ್ದ ಜಗಲಿಯ ಒಂದು ಕಡೆ ಎರಡು ಮೂರು ಕಲ್ಲುಗಳನ್ನು ಇಟ್ಟು ಒಂದು ಒಲೆ ಮಾಡಿದ್ದರು. ಆದರ ಮೇಲೆ ಒಂದು ಮಡಕೆಯೂ ಸುತ್ತಾ ೨-೩ ಮಡಕೆಗಳೂ ಇದ್ದವು. ಒಂದು ಹಗ್ಗ ಕಂಬದಿಂದ ಕಂಬಕ್ಕೆ ಕಟ್ಟಿದ್ದು ಅದರ ಮೇಲೆ ಕೆಲವು ಬಟ್ಟೆಗಳೂ ದುಪ್ಪಟಿ ಹರಕಲು ಕಂಬಳಿಯೂ ಬಿದ್ದಿದ್ದಿತು. ಜಗಲಿಯ ಒಂದು ಮೂಲೆಯಲ್ಲಿ ಹಾವಾಡಿಗನ ಬುಟ್ಟಿ ಇತ್ತು. ಜಗಲಿಯ ಕೆಳಗೆ ನೆಲದ ಮೇಲೆ ಜಗಲಿಗೆ ಹೋಗುವ ದಾರಿಯಲ್ಲಿ ದೊಡ್ಡ ಒನಕೆಯ ಗಾತ್ರದ ಒಂದು ಹೆಬ್ಬುಹಾವು ಮಲಗಿದ್ದಿತು. ಅದು ಉಸಿರಾಡುವುದು ಅದರ ಮೈಯಲ್ಲಿ ಕಾಣುತ್ತಿದ್ದುದರಿಂದ ಅದು ಒದುಕಿರುವುದೆಂದು ತಿಳಿಯುತ್ತಿದ್ದಿತೇ ಹೊರತು ಇಲ್ಲದಿದ್ದರೆ ಖಂಡಿತಾ ಗೊತ್ತಾಗುತ್ತಿರಲಿಲ್ಲ. ಬಾಗಿಲಿನಲ್ಲಿ ಹಾವನ್ನು ನೋಡಿದ ಕೂಡಲೇ ಸುಬ್ಬುವಿನ ಕೈಕಾಲು ನಡುಗಲು ಪ್ರಾರಂಭಿಸಿತು. ಸುದರ್ಶನನಿಗೂ ಭಯವೇ ಆಯಿತು. ಆದರೆ ಸುದರ್ಶನ ಸ್ವಭಾವದಿಂದ ಧೈರ್ಯಶಾಲಿಯಾದುದರಿಂದಲೂ, ಹಾಸನದಿಂದ ಬರುವ ದಾರಿಯಲ್ಲಿ ಹೆಂಗಸು ಹಾವನ್ನು ಹಿಡಿದುಕೊಂಡು ಬಂದುದನ್ನು ಅವನು ನೋಡಿದ್ದುದ

ರಿಂದಲೂ, ಸಾಕಿದ ಹಾವುಗಳು ಪಳಗಿವೆ. ಇವುಗಳ ಹಲ್ಲುಗಳನ್ನು ಕಿತ್ತಿದ್ದಾರೆ ಎಂಬುದು ಅವನಿಗೆ ಚೆನ್ನಾಗಿ ಗೊತ್ತಾಗಿದ್ದಿತು. ಅವನು ಅಷ್ಟು ಹೆದರಲಿಲ್ಲ. ಆದರೂ ಹಾವನ್ನು ದಾಟಿಕೊಂಡು ಮುಂದೆ ಬರುವ ಧೈರ್ಯ ಅವನಿಗೆ ಉಂಟಾಗಲಿಲ್ಲ. ಇವರ ಭಯವನ್ನು ನೋಡಿ ಹಾವಾಡಿಗನಿಗೆ ನಗುವುಂಟಾಯಿತು. ಅವನು ಬನ್ನಿ ಎಂದನು. ಆದರೆ ಹೋದ ಇಬ್ಬರು ಧೀರರೂ ಮುಂದುವರಿಯಲಿಲ್ಲ. ಹಾವಾಡಿಗ ಆ ಹಾವಿನ ಬಾಲ ಎಳೆದು ಆಚೆಗೆ ಹಾಕಿ ಎಂದನು. ಕೊನೆಗೆ ಹಾವಾಡಿಗನೇ ಎದ್ದು ಬಂದು ಹಾವಿನ ಬಾಲವನ್ನು ಹಿಡಿದು ದರದರನೆ ಮುಗ್ಗಲಿಗೆ ಎಳೆದು ಹಾಕಿದನು. ಹೀಗೆ ಎಳೆಯುತ್ತಿರುವಾಗ ಒಂದು ಸಲ ಹಾವಾಡಿಗನು ಸುದರ್ಶನನಿಗೆ ಒನ್ನಿ ಈ ಬಾಲ ಹಿಡಿದುಕೊಳ್ಳಿ ಭಯವಿಲ್ಲ ಎಂದನು. ಸುದರ್ಶನನು ಹೆದರುತ್ತಾ ಹೆದರುತ್ತಾ ಎರಡು ಕೈಯಿನಿಂದಲೂ ಬಾಲವನ್ನು ಹಿಡಿದುಕೊಂಡನು. "ಅಬ್ಬಾ-ಅದು ಏನು ನುಣುಪಾಗಿ ಮಂಜಿನಂತೆ ತಣ್ಣಗೆ" ಇದ್ದಿತು. ಹಾವಿನ ಭಾರವೂ ಅಸಾಧ್ಯವೇ ಆಗಿದ್ದಿತು. ಅದನ್ನು ಒಂದು ಮಾರು ಎಳೆಯುವ ಹೊತ್ತಿಗೆ ಸುದರ್ಶನನಿಗೆ ಸುಸ್ತಾಗಿ ಹೋಯಿತು. ಸುಬ್ಬುವಂತೂ ದೂರದಲ್ಲಿಯೇ ನಿಂತಿದ್ದನು.

ಹಾವಾಡಿಗನ ಹೆಂಡತಿ ಎದುರಿಗಿದ್ದ ಬೈಲಿನಲ್ಲಿ ಬಿದ್ದಿದ್ದ ಪುರಳೆಗಳನ್ನು ಆರಿಸಿಕೊಂಡು ಬರಲು ಹೋದಳು. ಸುಬ್ಬುವೂ ಸುದರ್ಶನನೂ ಹಾವಾಡಿನ ಮುಂದೆ ಕುಳಿತುಕೊಂಡರು. ಸುದರ್ಶನನಿಗೆ ಅವನ ಮಂತ್ರ ತಂತ್ರಗಳನ್ನು ತಿಳಿದುಕೊಳ್ಳಬೇಕೆಂದು ಆತುರ. ಅವನು ಹಾವಾಡಿಗ ಉಪಯೋಗಿಸುತ್ತಿದ್ದ ಮಂತ್ರದ ಮೂಳೆಯ ಚೂರನ್ನು ತೋರಿಸಿ ಸುಬ್ಬುವಿಗೆ "ನೋಡು ಇದೇ ಮಂತ್ರದ ಕೋಲು. ಇದರಲ್ಲಿ ಮಂತ್ರ ಹಾಕಿದರೆ ಯಾವ ಕೆಲಸಬೇಕಾದರೂ ಆಗುತ್ತೆ. ಇದು ಸಿಕ್ಕಿಬಿಟ್ಟರೆ ಸಾಕು" ಎಂದನು. ಹಾವಾಡಿಗರೆಲ್ಲಾ, ಮೂಳೆಯಲ್ಲಿ ಮಂತ್ರ ಹಾಕುವುದು; ಮೂಳೆಯ ಮಂತ್ರದಿಂದ ಧೂಳನ್ನು ರುಪಾಯಿ ಮಾಡುವುದು, ಮೂಳೆಯ ಮಂತ್ರದಿಂದ ಮೂರು ನಾಲ್ಕು ಕರಟಗಳಲ್ಲಿ ಬಟ್ಟೆಯ ಸಣ್ಣ ಚೆಂಡುಗಳನ್ನಿಟ್ಟು ಅವುಗಳ ಮೇಲೆ ಒಂದು ಸಲ ಮೂಳೆ ಆಡಿಸಿ ಅವು ಸ್ಥಳ ಬದಲಾಯಿಸುವಂತೆ ಮಾಡುವುದು, ಬಣ್ಣದ ಚಂಡನ್ನು ಇದ್ದಕ್ಕಿದ್ದಂತೆ ಬಣ್ಣದ ಲಾಂದ್ರದಲ್ಲಿ ಕೂಡಿಸುವುದು ಇವುಗಳನ್ನೆಲ್ಲಾ ನೋಡಿದ್ದ

ಸುದರ್ಶನನಿಗೆ ಹೇಗಾದರೂ ಮಾಡಿ ಅಂತಹ ಮಂತ್ರದ ಕೋಲು ಒಂದನ್ನು ಸಂಪಾದಿಸಿಕೊಳ್ಳಬೇಕೆಂದು ಆಶೆಯಿದ್ದಿತು. "ಈ ಕೋಲು ಒಂದು ಕೈಗೆ ಸಿಕ್ಕಿದರೆ ಸಾಕು; ಅನಂತರ ಮಂತ್ರಗಳು ನಾವು ಹೇಳಿದಂತೆ ಕೇಳುತ್ತವೆ. ಏನು ಹೇಳಿದರೆ ಅದು ಆಗುತ್ತೆ" ಎಂದು ಅವನ ನಂಬಿಕೆ. ಅವನು ಹಾವಾಡಿಗನಿಗೆ "ಇಂತಹ ಮೂಳೆಯ ಚೂರು ಒಂದನ್ನು ನನಗೆ ಕೊಡು" ಎಂದನು. ಹಾವಾಡಿಗನು "ಅಯ್ಯೋ ಸ್ವಾಮಿ ಅದು ಅಷ್ಟು ಸುಲಭವೆ. ಒಂದು ಮೂಳೆಯ ಚೂರು ಸಂಪಾದಿಸಬೇಕಾದರೆ ಪ್ರಾಣಾನೇ ಬಲಿಕೊಡಬೇಕಾಗುತ್ತೆ" ಎಂದನು. ಸುದರ್ಶನನೂ ಸುಬ್ಬುವೂ ಗಾಬರಿಯಿಂದ "ನಿಜವಾಗಿಯೂ" ಎಂದರು ಹಾವಾಡಿಗನು "ಈಗ ನೋಡಿ ಈ ಮೂಳೆ ಗರ್ಭಿಣಿ ಹೆಂಗಸರದು. ಇದನ್ನ ಶ್ಮಶಾನದಲ್ಲಿಯೇ ಹೆಣದ ದೇಹದಿಂದ ಕತ್ತರಿಸಬೇಕು. ಅಮಾವಾದಸೆ ಅರ್ಧ ರಾತ್ರಿ ಮನೆಬಿಟ್ಟು ಶ್ಮಶಾನಕ್ಕೆ ಒಬ್ಬನೇ ಹೋಗಬೇಕು. ಹೋಗುವಾಗ ಯಾರೊಂದಿಗೂ ಮಾತನಾಡಬಾರದು. ಯಾರಿಗೂ ತಿಳಿಯಬಾರದು. ಯಾರಾದರೂ ಎಲ್ಲಿಗೆ ಹೋಗುತ್ತಿ ಎಂದು ಕೇಳಿದರೆ ಇವನ ಕೆಲಸ ಆಗುವುದಿಲ್ಲ. ಅಲ್ಲಿ ಹೋಗಿ ಆವತ್ತೇ ಸತ್ತ ಗರ್ಭಿಣಿ ಸ್ತ್ರೀಯ ಮೂಳೆ ಕತ್ತರಿಸಿಕೊಳ್ಳಬೇಕು. ಕತ್ತರಿಸಿ ಕೈಗೆ ತೆಗೆದುಕೊಂಡಕೂಡಲೇ ಮನೆಯಕಡೆ ಹೊರಡಬೇಕು. ಹಿಂದೆ ಹೆಜ್ಜೆಯ ಸದ್ದಾಗುತ್ತದೆ. ಯಾರೋ ಕೂಗಿದಂತೆ ಆಗುತ್ತದೆ. ಯಾರೋ ಮನೆಯವರೆಗೆ ಇವನನ್ನು ಅನುಸರಿಸಿ ಕೊಂಡು ಬರುತ್ತಾರೆ. ಒಂದೇ ಒಂದುಸಲ ಹಿಂದಿರುಗಿ ನೋಡಿದರೆ ಇವನ ತಲೆ ಸಾವಿರ ಪಾಲಾಗುತ್ತದೆ. ಹೀಗೆ ಹಿಂದಕ್ಕೆ ತಿರುಗದೆ ಮನೆಗೆ ಒಂದು ಬಾಗಿಲು ಹಾಕಿಕೊಂಡು ಆ ಮೂಳೆಯನ್ನು ಎಣ್ಣೆಯ ಮಡಿಕೆಯಲ್ಲಿ ಒಂದು ವರುಷಕಾಲ ನೆನೆ ಹಾಕಿದ್ದು ಅನಂತರ ಮಂತ್ರಿಸಿ ತೆಗೆದುಕೊಳ್ಳಬೇಕು" ಎಂದನು. ಸುದರ್ಶನನು ತನಗೆ ವಿದ್ಯೆ ಪೂರ್ಣವಾಗಿ ಸ್ವಾಧೀನವಾಗಿದ್ದಂತೆ, ಸುಬ್ಬುವಿನ ಕಡೆ ನೋಡಿ. ಎಷ್ಟುಕಷ್ಟ ಎಂಬ ಭಾವದಿಂದ ನೋಡುತ್ತಾ ಒಂದು ಮೂಳೆ ಇದ್ದರೆ ನನಗೆ ಕೊಡು ಎಂದನು. ಹಾವಾಡಿಗನು ನಗುತ್ತಾ "ನನ್ನ ಹತ್ತಿರ ಇರೋದೆ ಒಂದು ಸ್ವಾಮಿ. ಇದನ್ನ ಕೊಟ್ಟರೆ ಆಮೇಲೆ ನನ್ನ ಜೀವನ ಮುಗೀತು. ಎಂತೆಂತಹ ಮಹಾರಾಜರು ಸಾವಿರ ರುಪಾಯಿ ಕೊಡ್ತೇನೆ ಅಂದರೂ

ಕೊಡಲಿಲ್ಲ. ಆದರೆ ನಿಮಗೆ ಇದು ಯಾಕೆ. ಎಲ್ಲಾ ವಿದ್ಯಾನೂ ಕಲಿಸ್ತೇನೆ. ಎಲ್ಲ ಚಿಲ್ಲರೆ ದುಡ್ಡು ತನ್ನಿ ಅಂತ ಹೇಳಿದ್ದೆನೆಲ್ಲಾ ತಂದಿರಾ'' ಎಂದನು. ಸುದರ್ಶನ ಸುಬ್ಬುವನ್ನು ತೆಗಿ ಎಂದನು. ಹಾವಾಡಿಗನು ಸುಬ್ಬುವಿನ ಕೈಯಿನಿಂದ ರುಪಾಯಿಯನ್ನು ತೆಗೆದುಕೊಂಡು ತನ್ನ ಹೆಂಡತಿ ಬರುತ್ತಿರುವುದನ್ನು ನೋಡಿ ನಾನು ಹೇಳಿದ ಮಾತು ಒಂದನ್ನೂ ಅವಳಿಗೆ ಹೇಳಬೇಡಿ. ಹೆಂಗಸರ ಕಿವಿಗೆ ಬಿದ್ದರೆ ಮಂತ್ರಗಳು ನಿಮಗೆ ಸಿದ್ಧಿಸುವುದಿಲ್ಲ ಎಂದನು. ಹಾವಾಡಿನ ಹೆಂಡತಿ ಒಂದು ಕೈನಲ್ಲಿ ತುಂಬ ಪುರಳೆಯನ್ನೂ ಇನ್ನೊಂದು ಕೈಯಲ್ಲಿ ಕೆಲವು ಸೊಪ್ಪುಗಳನ್ನೂ ಹಿಡಿದುಕೊಂಡು ಒಳಕ್ಕೆ ಬಂದಳು. ಸುದರ್ಶನನು ನಾವು ಹೋಗಿ ಬರ್ತೇವೆ ಎಂದು ಹೊರಟನು. ಸ್ವಲ್ಪ ದೂರ ಬಂದನಂತರ ಸುಬ್ಬುವು "ಸುದರ್ಶನ ಹಾವಾಡಿನ ಹೆಂಡತಿ ಬಹಳ ಸಾಧು. ಒಳ್ಳೆಯವಳು. ನೋಡಿದರೆ ನನಗೆ ನನ್ನ ಅಕ್ಕನನ್ನು ನೋಡಿದ ಪ್ರೀತಿ ಗೌರವವುಂಟಾಗುತ್ತದೆ. ಕೈಮುಗಿಯಬೇಕು ಎನ್ನಿಸುತ್ತದೆ. ಇಂತಹ ಒರಟ ಕ್ರೂರಿ ಹಾವಾಡಿಗನಿಗೆ ಇವಳು ಹೇಗೆ ಹೆಂಡತಿಯಾದಳೋ'' ಎಂದನು. ಸುದರ್ಶನನೂ "ನನಗೂ ಅದೇ ಆವತ್ತಿನಿಂದ ಅನುಮಾನ; ಅವರು ಗಂಡ ಹೆಂಡತಿ ಅನ್ನೋದು ನಿಜ. ಆದರೆ ಇಂತಹ ಸಾಧ್ವಿ ಹೆಂಡತಿಯಾಗಬೇಕಾದರೆ ಈ ಹಾವಾಡಿಗನ ಪುಣ್ಯ ಹೆಚ್ಚಾಗಿದ್ದಿರಬೇಕು'' ಎಂದನು. ಸುಬ್ಬುವು "ಅಂತೂ ಒಂದು ರುಪಾಯಿ ಕರಗಿಹೋಯಿತು. ಮಂತ್ರವೂ ಇಲ್ಲ. ತಂತ್ರವೂ ಇಲ್ಲ. ಈ ಹಾವಾಡಿಗನ ಮಾತಿನಲ್ಲಿ ನನಗೆ ನಂಬಿಕೆಯೂ ಇಲ್ಲ. ಆ ಸಾಧ್ವಿಗೆ ಕೊಟ್ಟಹಾಗೆ ಆಯಿತು ಎಂದನು.'' ಸುದರ್ಶನನು "ನಿನಗೆ ಹಾವಾಡಿಗರ ವಿಚಾರ ತಿಳಿಯದು. ಸಾಧ್ವಿಗೆ ಎಲ್ಲಿ ಹೋಗುತ್ತೆ? ಎಲ್ಲಾ ಇವನಿಗೆ ಅಫೀಮು ತಿನ್ನೋಕೆ ಸಾಲೋದಿಲ್ಲ'' ಎಂದನು. ಅಂತೂ ಇಬ್ಬರೂ ಅವರವರಮನೆ ಸೇರಿದರು.

ಮರುದಿವಸ ಊರಿನಲ್ಲಿ ಹಾವಾಡಿಗನಿಗೂ ರಾಚಪ್ಪನಿಗೂ ಭಾರಿ ಮೋಡಿ ಎಂದು ಪ್ರಕಟವಾಯಿತು. ಮೋಡಿ ಎಂದರೆ ಏನು ಎಂಬುದು ಈಗಿನ ಕಾಲದವರಿಗೆ ತಿಳಿಯುವುದು ಕಷ್ಟವಾಗಿದೆ. ಯಾಕೆಂದರೆ ಈಚೆಗೆ ಮೋಡಿ ಹಾಕುತ್ತೇನೆಂದು ಬರುವವರು ಕಡಿಮೆಯಾಗಿದ್ದಾರೆ. ಈ ಕಥೆ ಹೇಳುವ ಕಾಲದಲ್ಲಿ ಮೋಡಿ ಎಂಬುದು ಹಳ್ಳಿಗಳಲ್ಲಿಯೂ ಮುಖ್ಯ ವಿನೋದ

ವಾಗಿದ್ದಿತು. ಒಂದು ಕಡೆ ಮೋಡಿ ಹಾಕುತ್ತಾರೆ ಎಂದರೆ ಸುತ್ತಲ ನೂರಾರು ಹಳ್ಳಿಯ ಜನ ಬಂದು ವಿನೋದ ನೋಡಲು ಸೇರಿಬಿಡುತ್ತಿದ್ದರು. ಸುಮಾರು ಒಂದೂವರೆ ಫರ್ಲಾಂಗ್ ರಸ್ತೆಯಲ್ಲಿ ಆಚೆ ಒಂದು ಚಪ್ಪರ ಈಚೆ ಒಂದು ಚಪ್ಪರ. ಒಂದೊಂದು ಚಪ್ಪರ ಒಬ್ಬೊಬ್ಬ ಮೋಡಿಯವನಿಗೆ; ಆ ಚಪ್ಪರಗಳನ್ನು ಅವರವರ ಕಡೆಯವರು, ಅವರವರ ಪ್ರೋತ್ಸಾಹಕರು ತಮಗೆ ಮನಬಂದಂತೆ ಜಬರ್ಾಗಿ ಅಲಂಕರಿಸುತ್ತಿದ್ದರು. ಒಂದಕ್ಕೆ ಇಂದ್ರಜಿತ್ತುವಿನ ಶಿಬಿರ ಎಂದು ಹೆಸರಾದರೆ ಮತ್ತೊಂದಕ್ಕೆ ಮಾರೀಚನ ಶಿಬಿರವೆಂದು ಹೆಸರು. ಒಂದಕ್ಕೆ ಬಕನ ಬಿಡಾರ ಎಂದು ಹೆಸರಾದರೆ ಮತ್ತೊಂದಕ್ಕೆ ನರಕಾಸುರನ ನಗರವೆಂದು ಹೆಸರು. ಹೀಗೆಯೇ ಅವರವರು ತಮಗೆ ಇಷ್ಟವಾದ 'ಜಾದು' ಯಕ್ಷಿಣಿ ಮಾಯಾಮಂತ್ರಗಾರರ ಹೆಸರನ್ನು ತಮ್ಮ ಶಿಬಿರಕ್ಕೆ ಇಡುತ್ತಿದ್ದರು. ಇಂತಹ ಮೋಡಿಯಲ್ಲಿ ಯಾರು ಶಕ್ತರು ಎಂಬುದನ್ನು ಕಂಡುಹಿಡಿಯಲು ಎರಡು ಮಾರ್ಗಗಳನ್ನು ಅನುಸರಿಸುತ್ತಿದ್ದರು. ಮೊದಲನೆಯದು ಒಬ್ಬ ಮೋಡಿಕಾರ ಎಲ್ಲಿಯಾದರೂ ಒಂದು ಕಡೆ ಒಂದು ಗಂಟನ್ನು ಗುಟ್ಟಾಗಿ ಹೂಳಿ ಇಡುತ್ತಿದ್ದನು. ಅದನ್ನು ಮತ್ತೊಬ್ಬ ಅಂದರೆ ಅವನ ಎದುರಾಳಿ ಕಂಡುಹಿಡಿಯಬೇಕು. ಅಥವ ಮೋಡಿಯವನು ಒಂದು ನೊಗವನ್ನೊ ಗಾಣದ ಕಣೆಯನ್ನೊ (ಗಾಣದಲ್ಲಿ ಎಳ್ಳನ್ನು ಅರೆಯಲು ಇಟ್ಟಿರುವ ಎತ್ತರವೂ ದಪ್ಪವೂ ಆದ ದುಂಡಾದ ಮರದ ತುಂಡು) ಮಧ್ಯದಲ್ಲಿಟ್ಟು ಅದಕ್ಕೆ ಮಂತ್ರ ಹಾಕುತ್ತಿದ್ದರು. ಅದನ್ನು ಎದುರಾಳಿ ಕೀಳಬೇಕಾಗಿದ್ದಿತು. ಆ ಮಂತ್ರದ ಬಲ ಅದಕ್ಕೆ ಇರುವವರೆಗೆ ಆ ನೋಗವೋ ಕಣೆಯೋ ಒಳ್ಳೆಯ ಬೆಟ್ಟದ ಹಾಗೆ ಚಲಿಸದೆ ಬಿದ್ದಿರುತ್ತಿದ್ದಿತು. ಅದನ್ನು ಅಲ್ಲಾಡಿಸಬೇಕಾದರೆ, ಅಥವ ಒಬ್ಬ ಮೋಡಿಯವನು ಯಾರಿಗೂ ಸಿಕ್ಕದಂತೆ ಮುಚ್ಚಿಟ್ಟಿರುವ ಗಂಟನ್ನು ಕಂಡುಹಿಡಿಯಬೇಕಾದರೆ ಎದುರಾಳಿಯೂ ಮೋಡಿ ಮಂತ್ರವನ್ನೇ ಉಪಯೋಗಿಸಬೇಕಾಗುತ್ತಿದ್ದಿತು. ಜಯಾಪಜಯಗಳು, ಪರಸ್ಪರರ ಶಕ್ತಿ ನಿರ್ಣಯಗಳು, ಅವರವರ ಮಂತ್ರದ ಬಲಗಳು, ಈ ಪಂದ್ಯದಲ್ಲಿ ಯಾರು ಸೋಲುತ್ತಾರೆ, ಯಾರು ಗೆಲ್ಲುತ್ತಾರೆ ಎಂಬುದರ ಮೇಲೆ ತೀರ್ಮಾನದಾಗುತ್ತಿದ್ದುವು. ಗೆದ್ದವನಿಗೆ ಸೋತವನು ನಲವತ್ತು ರುಪಾಯಿ, ಐವತ್ತು ರುಪಾಯಿ ಕೊನೆಗೆ ನೂರುರುಪಾಯಿ

ವರೆಗೆ ಕೊಡಬೇಕೆಂದೂ ಗೊತ್ತಾಗುತ್ತಿದ್ದಿತು. ಇದರ ಜತೆಗೆ ಗೆದ್ದವನಿಗೆ ನೆರೆದಿದ್ದ ಅವನ ಅನೇಕ ಭಕ್ತರೂ ಪ್ರೋತ್ಸಾಹಿಗಳೂ ಮೋಡಿ ವಿದ್ಯೆ ಕಲಿಯಬೇಕೆಂದು ಅವನನ್ನು ಆಶ್ರಯಿಸುತ್ತಿದ್ದವರೂ ಒಂದು ರುಪಾಯಿ ಎಂಟಾಣೆ ನಾಲ್ಕಾಣೆ ಹೀಗೆ ಕಾಣಿಕೆ ಕೊಡುತ್ತಿದ್ದರು.

ಯಾವ ಮೋಡಿಯವನು ಗಂಟನ್ನಾಗಲಿ ಅಥವ ಇತರ ಮೋಡಿ ಹಾಕಿದ ಸಾಮಾನನ್ನಾಗಲಿ ಮುಚ್ಚಿಟ್ಟಿರುತ್ತಾನೆಯೋ ಅವನ ಎದುರಿಗೆ ಅವನನ್ನು ಎದುರಿಸುವವನು ಸುಮಾರು ೧-೧|| ಫರ್ಲಾಂಗು ದೂರವುಳ್ಳ ತನ್ನ ಚಪ್ಪರದಿಂದ ಬಂದು ನಿಲ್ಲುತ್ತಿದ್ದನು. ಉದ್ದಕ್ಕೂ ಅವನ ಸುತ್ತಾ ಜನ ನೆರೆದಿರುತ್ತಿದ್ದಿತು. ಹತ್ತು ಜನ ತಿರುಗುವುದಕ್ಕೆ ಬಿಟ್ಟುಕೊಂಡಿದ್ದ ರಸ್ತೆಯ ಹೊರತು ಉಳಿದ ಜಾಗ ಸುತ್ತಾ ಇರುವೆ ಹರಿಯುವುದಕ್ಕೂ ಅವಕಾಶವಿಲ್ಲದಂತೆ ಜನರಿಂದ ತುಂಬಿರುತ್ತಿದ್ದಿತು. ಎರಡು ಚಪ್ಪರಗಳ ಲ್ಲಿಯೂ ಅವರವರಿಗೆ ಇಷ್ಟವಾದ ದೇವರ ಪಠಗಳು ಧೂಪಗಳ ಹೊಗೆ ಕಠಾರಿಯ ತುದಿಗೆ ಸಿಕ್ಕಿಸಿರುವ ನಿಂಬೆಹಣ್ಣು ಹಾವಾಡಿಗನ ಮಾಟದ ಮೂಳೆಯ ದೊಣ್ಣೆ. ಎಲ್ಲಿಯಾದರೂ ದೊರಕಿದ್ದರೆ ಒಂದು ಮೂಳೆಯ ಮುಂಡ; ಇದು ಮನುಷ್ಯರದೇ ಆಗಿರಬೇಕೆಂಬ ನಿಯಮವಿಲ್ಲ. ಕೆಲವು ವೇಳೆ ದನ ನಾಯಿ ಮುಂತಾದ ಪ್ರಾಣಿಗಳದೂ ಆಗಿರುತ್ತಿದ್ದಿತು. ಇಬ್ಬರು ಮೋಡಿಯವರೂ ೨ ಸೇರು ಮೂರು ಸೇರು ಅಕ್ಷತೆ ಮಾಡಿ ಇಟ್ಟುಕೊಳ್ಳು ತ್ತಿದ್ದರು. ಒಬ್ಬನ ಅಕ್ಷತೆ ಕೆಂಪಾಗಿದ್ದರೆ ಮತ್ತೊಬ್ಬನದು ಹಳದಿಯಾಗಿ ರುತ್ತಿದ್ದಿತು. ಹಸಿರು ಬಣ್ಣದ ಅಕ್ಷತೆ ಇಟ್ಟುಕೊಂಡವರೂ ಉಂಟು. ಮೊದಲನೆಯ ಸ್ಪರ್ಧೆಗಾರ ಅಂದರೆ ಗಂಟನ್ನು ಹೂಳಿದ್ದವನು ತಾನು ಕುಳಿತಲ್ಲಿಯೇ ಅಂದರೆ ತನ್ನ ಚಪ್ಪರದಲ್ಲಿಯೇ ಕುಳಿತಿರುತ್ತಿದ್ದನು. ಎದು ರಾಳಿ ಎದುರಿಗೆ ಬಂದು ನಿಂತಕೂಡಲೆ ನಾಲ್ಕು ಅಕ್ಷತೆಗಳನ್ನು ತೆಗೆದು ಕೊಂಡು ಅವನ ಮೇಲೆ ಎಸೆಯುತ್ತಿದ್ದನು. ಅದು ಅವನ ಕಡೆಗೆ ನುಗ್ಗು ತ್ತಿದ್ದ ಎದುರು ಮೋಡಿಯವನನ್ನು, ಬಿರುಗಾಳಿ ಹುಲ್ಲುಕಡ್ಡಿಯನ್ನು ಎಳೆದುಕೊಂಡು ಹೋಗುವಂತೆ ಸುಮಾರು ೧೦-೨೦ ಗಜ ಹಿಂದಕ್ಕೆ ತಳ್ಳಿ ಬಿಡುತ್ತಿದ್ದಿತು. ಅವನು ಹಾಗೆ ಹಿಂದಕ್ಕೆ ಹೋದವನು ಮತ್ತೆ ಚೇತರಿಸಿ ಕೊಂಡು ಚಪ್ಪರದ ಕಡೆಗೆ ನುಗ್ಗುತ್ತಿದ್ದನು. ಸರಿ ಮತ್ತೆ ಅಕ್ಷತೆ ಅವನನ್ನು ಎದುರಿಸುತ್ತಿದ್ದಿತು. ಒಂದೊಂದು ಸಲ ಅವನು ತನ್ನ ಮೈಮೇಲೆ

ಜ್ಞಾನವೇ ಇಲ್ಲದವನಂತೆ ಯಾವುದೋ ಶಕ್ತಿ ತನ್ನನ್ನು ಎಳೆದುಕೊಂಡು ಹೋಗುತ್ತಿದೆ ಎಂಬಂತೆ ಒಂದು ಕಡೆಗೆ ಹೊರಡುತ್ತಿದ್ದನು. ಆಗ ಜನ "ಅವನಿಗೆ ಎದುರಾಳಿ ಹೂಳಿಟ್ಟಿರುವ ಗಂಟು ಪತ್ತೆಯಾಗಿದೆ" ಎನ್ನುತ್ತಿದ್ದರು. ಅವನು ಹಾಗೆ ಹೋಗುತ್ತಿರುವಾಗ ಎದುರಾಳಿ ಮತ್ತೆ ತಾನು ಕೂತ ಜಾಗದಿಂದಲೇ ಅವನ ಕಡೆಗೆ ಅಕ್ಷತೆ ಎಸೆಯುತ್ತಿದ್ದನು. ಆ ಅಕ್ಷತೆ ಅವನಿಗೆ ತಗಲುತ್ತಿರಲಿಲ್ಲ. ಆದರೂ ಅದರ ಮಂತ್ರಶಕ್ತಿಯು ಅವನನ್ನು ಎತ್ತಿಕೊಂಡು ಹೋಗಿ ತನ್ನ ಚಪ್ಪರಕ್ಕೆ ಎಸೆದುಬಿಡುತ್ತಿದ್ದಿತು. ಹೀಗೆ ಎದುರಾಳಿಯು ದೇಹದಲ್ಲಿ ಶಕ್ತಿ ಇರುವವರೆಗೆ ಮಂತ್ರ ಅವನನ್ನು ಸರ್‍ರನೆ ಹಿಂದಕ್ಕೂ ಮುಂದಕ್ಕೂ ಓಡಿಯಾಡಿಸುತ್ತಿದ್ದಿತು. ಹೀಗೆ ಒಂದೆರಡು ಗಂಟೆ ನಡೆದ ಮೇಲೆ ಮಂತ್ರಕ್ಕೆ ಸುಸ್ತಾಗುತ್ತಿದ್ದಿತೋ ಅಥವ ಮೋಡಿಯುವನಿಗೇ ಸುಸ್ತಾಗಿದ್ದಿತೋ ಅಂತೂ ಮೋಡಿಯುವನು ಮೊದಲಿನಷ್ಟು ವೇಗವಾಗಿ ಬಿಲ್ಲಿನಿಂದ ಕಡೆದ ಬಾಣದಂತೆ ಅಕ್ಷತೆಗೆ ಹೆದರಿ ಹಿಂದಕ್ಕೆ ಓಡುತ್ತಿರಲಿಲ್ಲ. ಅಕ್ಷತೆ ಮೊದಲಿಗಿಂತ ಹೆಚ್ಚಾಗಿಯೇ ಬೀಳುತ್ತಿದ್ದರೂ ಮಂತ್ರದ ಬಲ ಸ್ವಲ್ಪ ಕಡಮೆಯಾದಂತೆಯೇ ತೋರುತ್ತಿದ್ದಿತು.

ಒಂದು ಕಡೆಯ ಮೋಡಿಯುವನು ಕಣ್ಣಿಗೆ ಕಾಣುವಂತೆ ನೊಗವನ್ನೋ ಗಾಣದ ಕಣೆಯನ್ನೋ ಒಂದು ಹಾರೆಯ ಚೂರನ್ನೋ ಮಂತ್ರಿಸಿ ಇಟ್ಟಿರುವಾಗ ಸ್ಪರ್ಧೆ ಪ್ರಾರಂಭವಾಗುವುದಕ್ಕೆ ಮುಂಚೆ ಪ್ರೇಕ್ಷಕರಲ್ಲಿ ದೊಡ್ಡ ಮನುಷ್ಯರಾದ ನಾಲ್ಕಾರು ಜನ ಅದನ್ನು ಎತ್ತಲು ಅಲ್ಲಾಡಿಸಲು ಪ್ರಯತ್ನಪಡುತ್ತಿದ್ದರು. ಮೋಡಿಯುವನ ಮಂತ್ರ ಅವರನ್ನೂ ಹಿಡಿಯುತ್ತಿದ್ದಿತೋ ಅಥವ ಅವರೂ ಮೋಡಿಯುವರೊಂದಿಗೆ ಒಂದಾಗುತ್ತಿದ್ದರೋ ಪ್ರೇಕ್ಷಕರಿಗೆ ತಿಳಿಯುತ್ತಿರಲಿಲ್ಲ. ಅವರು ಮುಕ್ಕರಿದು "ನೊಗವನ್ನು ಅಲ್ಲಾಡಿಸುವುದಕ್ಕೆ ಆಗುವುದಿಲ್ಲ. ಮಂತ್ರ ಬಲವಾಗಿ ಕೂತಿದೆ" ಎನ್ನುತ್ತಿದ್ದರು. ಸರಿ ಅನಂತರ ಎದುರಾಳಿ ಅದರ ಹತ್ತಿರ ಹೋಗುವುದಕ್ಕೆ ಮುಂಚೆ, ಅದನ್ನು ಮುಟ್ಟುವುದಕ್ಕೆ ಮುಂಚೆ, ಕೊನೆಗೆ ಅದನ್ನು ಎತ್ತುವುದಕ್ಕೆ ಮುಂಚೆ, ದ್ರೌಪದಿಯನ್ನು ಹಿಡಿಯುವುದಕ್ಕೆ ಬಂದ ಕೀಚಕ ಅದೃಶ್ಯನಾದ ಸೂರ್ಯದೂತನಿಂದ ಏಟು ತಿಂದವನಂತೆ ಮಂತ್ರದಿಂದ ಏಟು ತಿಂದು ಕೊನೆಗೆ ತನ್ನ ಉದ್ದೇಶವನ್ನು ಸಾಧಿಸುತ್ತಿದ್ದನು. ಹೂಳಿಟ್ಟಿದ್ದ ಗಂಟನ್ನೂ ಹೀಗೆಯೇ ತೆಗೆಯುತ್ತಿದ್ದನು. ಒಂದೊಂದು ಸಲ ಹೂಳಿಟ್ಟ

ಗಂಟು ಏನು ಮಾಡಿದರೂ ಸಿಕ್ಕುತ್ತಿರಲಿಲ್ಲ. ಅದರ ಹತ್ತಿರಕ್ಕೆ ಹೋದ ಹೋದಂತೆ ಮಂತ್ರ ಅವನನ್ನು ದೂರ ದೂರಕ್ಕೆ ತಳ್ಳುತ್ತಿದ್ದಿತು. ಆಗ ಇಬ್ಬರು ಮೋಡಿಯವರೂ ಸಾರ್ವಜನಿಕರ ಎದುರಿಗೇ ಮಾತನಾಡಿ ಕೊಂಡು ಮೋಡಿಯನ್ನು ಪೂರ್ತಿಗೊಳಿಸಲು ಮತ್ತೊಂದು ದಿನವನ್ನು ಗೊತ್ತುಮಾಡಿಕೊಳ್ಳುತ್ತಿದ್ದರು. ನಂಬಿಕೆಯಿಲ್ಲದವರು ಇವರು "ಗಂಟು ಹೂಳಿಯೇ ಇಟ್ಟಿಲ್ಲ" ಎನ್ನುತ್ತಿದ್ದರು. ಆರು ತಿಂಗಳು ಎಂಟು ತಿಂಗ ಳಿಗೆ ಮುಂಚೆ ಒಂದೊಂದು ಮೋಡಿ ಆಗುತ್ತಿರಲಿಲ್ಲ. ಸಾಧಾರಣವಾಗಿ ಮೂರು ಸಾವಿರ ಜನಕ್ಕೆ ಕಡಿಮೆ ಇಲ್ಲದಂತೆ ನೋಡಲು ನೆರೆಯುತ್ತಿ ದ್ದರು. ಜಮೀನ್‌ದಾರರು ಜೋಡಿದಾರರು ಪಟೇಲರು ಹಳ್ಳಿಗಳಲ್ಲಿಯ ರಿಟೈರ್ ಅಧಿಕಾರಿಗಳು ಸಾಹುಕಾರರು ರೈತರು; ಅಂತೂ ಒಂದು ಮೋಡಿ ಅಂದರೆ ಎರಡು ಚಪ್ಪರಗಳ ಮುಂದೆಯೂ ೩೦-೪೦ ರೂಪಾಯಿ, ಒಂದು ಕಾಸಿನಿಂದ ಹಿಡಿದು ಐದು ರೂಪಾಯಿ ನೋಟಿನ ವರೆಗೆ ಬಿದ್ದಿರುತ್ತಿ ದ್ದಿತು.

ಈಗಿನ ಅನೇಕ ಕುಸ್ತಿಗಳಲ್ಲಿ ಇರುವಂತೆ ಎರಡು ಕಡೆಯ ಮೋಡಿ ಯವರೂ ಮಾತನಾಡಿಕೊಂಡು ಜೀವನಕ್ಕಾಗಿ ಈ ರೀತಿ ಜನರನ್ನು ಮೋಸಗೊಳಿಸುತ್ತಿದ್ದರೋ ಅಥವಾ ನಿಜವಾಗಿಯೂ ಮಂತ್ರ ತಂತ್ರಗಳು ಅವರಿಗೆ ತಿಳಿದಿದ್ದವೋ ಯಾರು ಬಲ್ಲವರು? ಆದರೆ ಕುದುರೆ ಜೂಜಿನಲ್ಲಿ ಅನೇಕರು ದಿವಾಳಿಗಳಾಗುವಂತೆ ಈ ಮೋಡಿ ಜೂಜಿನಲ್ಲಿಯೂ ಅನೇಕರು "ಅವನು ಗೆದ್ದರೆ ಇಷ್ಟು—ಇವನು ಗೆದ್ದರೆ ಇಷ್ಟು" ಎಂದು ನೂರಾರು ರೂಪಾಯಿ ಕಳೆದುಕೊಳ್ಳುತ್ತಿದ್ದರು. ಮಲ್ಲಿಗೆಹಳ್ಳಿಯಲ್ಲಿ ಒಬ್ಬ ವ್ಯಾಪಾರಿ ಈ ಮೋಡಿಯ ಜೂಜಿನಲ್ಲಿ ಹಣ ಕಳೆದುಕೊಂಡು 'ಪಾಪರ್' ಆಗಿ ಊರು ಬಿಟ್ಟು ಓಡಬಟ್ಟನು. ಯಾವ ದಿವಸ ಇದು ನಡೆಯಿತೋ, ಯಾವ ದಿನ ವ್ಯಾಪಾರಿ ರಾತ್ರಿಯೋ ರಾತ್ರಿ ಮನೆಗೆ ಬಾಗಿಲು ಹಾಕಿ ಕ್ಕೊಂಡು, ತೆಗೆದುಕೊಂಡಿದ್ದವರ ಗಂಟನ್ನು ಹಿಂದಕ್ಕೆ ತಿರುಗಿಸದೆ ಓಡಿ ಬಿಟ್ಟನೋ, ಆ ಮೊದಲ ದಿನ ಮಲ್ಲಿಗೆಹಳ್ಳಿಗೆಹಳ್ಳಿಗೆ ಆಗತಾನೆ ಬಂದಿದ್ದ ಹಿಂದೆ ಹೇಳಿದ ಹಾವಾಡಿಗನಿಗೂ, ಅವನೇ ಬೇರೆ ಊರಿನಿಂದ ಕರೆಸಿದ್ದ ಮತ್ತೊಬ್ಬ ಹಾವಾಡಿಗನಿಗೂ ಮೋಡಿ ನಡೆದಿತ್ತು. ಓಡಿಹೋಗಿದ್ದ ವ್ಯಾಪಾರಿ ಜೂಜಿನಲ್ಲಿ ನೂರಾರು ರುಪಾಯಿ ಸೋತಿದ್ದನು.

ಮೋಡಿ ಮುಗಿದ ಮರು ದಿನ ಸುದರ್ಶನ ಹಾವಾಡಿಗನ ಬಳಿಗೆ ಹೋದಾಗ ಹಾವಾಡಿಗ ಸುದರ್ಶನನಿಗೆ ಒಂದು ಮಾಟವನ್ನೂ ಮಾಡಿದನು. ಸುದರ್ಶನನು ಅವನಿಗೆ ಒಂದು ರೂಪಾಯಿ ಕೊಟ್ಟು "ಎಲ್ಲಿ ಬಟ್ಟೆ ಚೂರು ಚೂರು ಮಾಡಿ ಸುಟ್ಟ ಮೇಲೆ ಮೊದಲಿನಂತೆ ಆಗುವುದು ಹೇಗೆ? ನಾಲ್ಕು ಗಡಿಗೆ ನೀರನ್ನ ಕುಡಿದು ಅದನ್ನು ಹೊರಕ್ಕೆ ಬಿಡುವುದು ಹೇಗೆ? ಎಲ್ಲಿ ಹೇಳಿಕೊಡು" ಎಂದನು. ಹಾವಾಡಿಗನು ಇವನ ರುಪಾಯಿ ತೆಗೆದುಕೊಂಡು ಅವನಿಗೆ ಬ್ರಂ, ಹ್ರಂ, ಫ್ರಂಥಂ ಎಂದು ಐದಾರು ಸದ್ದುಗಳನ್ನು ಹೇಳಿಕೊಟ್ಟು "ನದಿಯ ನೀರಿನಲ್ಲಿ ಪ್ರತಿ ದಿನವೂ ಒಂದೊಂದು ಮಂತ್ರವನ್ನೂ ಹೇಳಿ ನೂರು ನೂರು ಹೂವುಗಳನ್ನು ಹಾಕಬೇಕು. ಹೀಗೆ ೭ ತಿಂಗಳು ಮಾಡಿದ ನಂತರ ಮಂತ್ರ ಸ್ವಾಧೀನವಾಗುತ್ತದೆ. ಯಾರೊಂದಿಗೂ ಮಂತ್ರದ ವಿಚಾರ ಹೇಳಬಾರದು" ಎಂದು ಹೇಳಿದನು. "ಇದು ಎಲ್ಲಾದಕ್ಕಿಂತ ಇನ್ನೊಂದು ಇದೆ. ಯಾವ ಹುಡುಗಿ ನಿಮ್ಮನ್ನು ಮದುವೆಯಾಗಬೇಕೆಂದು ಬಯಸುತ್ತೀರೋ, ಅವಳು ತಾನಾಗಿಯೇ ನಿಮ್ಮನ್ನು ಹುಡಿಕಿಕೊಂಡು ಬರುವಂತೆ ಮಾಡುವ ಸಂಜೀವಿನಿ ಇದು. ಅದಕ್ಕೆ ಬೇಕಾದುದು ಐದು ರೂಪಾಯಿ; ತಂದರೆ ಅದನ್ನೂ ಹೇಳಿಕೊಟ್ಟು ಮುಂದೆ ಈ ಊರು ಬಿಟ್ಟು ನನ್ನ ದಾರಿ ಹಿಡಿಯುತ್ತೇನೆ" ಎಂದನು. ಸುದರ್ಶನನಿಗೆ ಯಾವ ಹುಡುಗಿಯ ಆಸೆಯೂ ಇರಲಿಲ್ಲ. ಆದರೂ ಆ ಸಂಜೀವಿನಿ ಎಲ್ಲಾ ಮಂತ್ರಗಳಿಗಿಂತ ಬಹಳ ಹೆಚ್ಚು ಉತ್ತಮವಾಗಿ ತೋರಿತು. ಆದರೆ ಐದು ರೂಪಾಯಿ ಎಲ್ಲಿಂದ ತರಲಿ ಎಂದು ಅವನು ಚಿಂತಿಸತೊಡಗಿದನು.

ಬರ ಬರುತ್ತಾ ಸುದರ್ಶನನಿಗೆ ನಿತ್ಯಾ ಹಾವಾಡಿಗನೊಡನೆ ಸಂಭಾಷಣೆ ಪ್ರಾರಂಭವಾಯಿತು. ನೋಡುತ್ತಾ ಹೋದಂತೆ ಅವನಿಗೆ ಹಾವಾಡಿನಲ್ಲಿ ಹೆಚ್ಚು ಹೆಚ್ಚು ತಿರಸ್ಕಾರವೂ ಅವನ ಹೆಂಡತಿಯಲ್ಲಿ ಹೆಚ್ಚು ಹೆಚ್ಚು ಗೌರವ ಭಕ್ತಿಗಳೂ ಉಂಟಾಗತೊಡಗಿದವು. ಅವಳ ಕಾರಣದಿಂದಲೇ ಹಾವಾಡಿಗನು ಒಬ್ಬ ಮನುಷ್ಯನಾಗಿದ್ದನು. ಒಂದು ದಿನ ಸಾಯಂಕಾಲ ಸುದರ್ಶನ ಹಾವಾಡಿಗನ ಬಿಡಾರಕ್ಕೆ ಹೋದಾಗ ಅವನ ಜೇಬಿನಲ್ಲಿ ಐದು ರೂಪಾಯಿ ಇದ್ದಿತು. ಹೇಗಾದರೂ ಮಾಡಿ ಆ ದಿವಸ ಮಂತ್ರ ಕಲಿತ್ತು ಬಿಡಬೇಕು ಎಂಬುದು ಅವನ ಹಂಬಲವಾಗಿದ್ದಿತು. ಅವನು ಹೋಗುವ

ವೇಳೆಗೆ ಹಾವಾಡಿಗ ಅಫೀಮು ತಿಂದು ಮತ್ತನಾಗಿ ಬಿದ್ದಿದ್ದನು. ಅವ ನಿಗೆ ಮರಿಯ ಒಂದುದೂ ಅಲ್ಲಿ ಏನು ನಡೆಯುತ್ತಿದೆ ಎಂಬುದೂ ತಿಳಿಯು ವಂತೆ ಇರಲಿಲ್ಲ. ಸುದರ್ಶನ ಹಾವಾಡಿಗನ ಹೆಂಡತಿಯೊಂದಿಗೆ "ತಾಯಿ ಇಪತ್ತು ಐದು ರೂಪಾಯಿ ಸಿಕ್ಕಿತು. ಎಲ್ಲಾ ಮಂತ್ರವನ್ನೂ ಕಲಿತು ಬಿಡುತ್ತೇನೆ" ಎಂದನು. ಹಾವಾಡಿಗನ ಹೆಂಡತಿಗೆ ಸುದರ್ಶನ ಹೀಗೆ ಮಂತ್ರವನ್ನು ಕಲಿಯುವುದಕ್ಕೆ ಬರುತ್ತಿದ್ದಾನೆ ಎಂಬುದು ಗೊತ್ತಿರಲಿಲ್ಲ. ಅವಳು "ನಿನಗೆ ಮಂತ್ರ ಹೇಳಿಕೊಡುವುದಾಗಿ ಹೇಳಿದವರು ಯಾರು" ಎಂದಳು. ಸುದರ್ಶನನು "ಮತ್ತಾರಿಗೆ ತಿಳಿಯುತ್ತೆ. ಒಳಗೆ ಬಿದ್ದಿರುವ ಹಾವಾಡಿಗನೇ" ಎಂದನು. ತಾವು ಬಂದ ಮೇಲೆ ಮೋಡಿಯ ನೆಪದಲ್ಲಿ ಒಬ್ಬ ವ್ಯಾಪಾರಿ 'ಪಾಪರ್' ಆದುದೂ ಅವಳ ಮನಸ್ಸಿಗೆ ದುಃಖವಾಗಿ ದ್ದಿತು. ಅವಳು ಆ ದಿವಸವೇ ಗಂಡನೊಂದಿಗೆ "ಈ ಸುಳ್ಳು ವಿದ್ಯೆ ನಮಗೆ ಯಾಕೆ? ಈಗ ನೋಡಿ ನಾವು ಈ ಊರು ಬಿಟ್ಟು ಹೋದರೂ ನಮ್ಮ ಮೇಲೆ ಜನರ ಶಾಪ ತಟ್ಟುವುದು ಬಿಡುವುದಿಲ್ಲ. ನಾವು ಹೋದ ಕಡೆಯಲ್ಲೆಲ್ಲಾ ಹೀಗೆ ಕಷ್ಟ ದೌರ್ಭಾಗ್ಯಗಳನ್ನು ಬಿತ್ತುತ್ತಲೇ ಹೋಗುತ್ತಿ ದ್ದೇವೆ ಇನ್ನಾದರೂ ಈ ಮಂತ್ರ ತಂತ್ರ ಅನ್ನೋ ವೇಷ ಬಿಟ್ಟು ಬಿಡೋಣ" ಎಂದಿದ್ದಳು. ಹಾವಾಡಿಗನು "ನಮ್ಮ ಜೀವನ ಹೊರೆದು ಕೊಳ್ಳುವುದು ನಮ್ಮಗೆಲಸ. ನಮ್ಮನ್ನು ಹೊರಕ್ಕೆ ಹಾಕಿದ ಸಮಾಜಕ್ಕೆ ನಾವು ಏನೂ ದಾಕ್ಷಿಣ್ಯ ತೋರಿಸಬೇಕಾದುದಿಲ್ಲ. ಇದಕ್ಕೆ ಮೋಸ ಮಾಡು ವುದೇ ನಮ್ಮ ಧರ್ಮ" ಎಂದಿದ್ದನು. ಸುದರ್ಶನನು ಹೀಗೆ ಹಾವಾಡಿಗ ತನಗೆ ಮಂತ್ರಗಳನ್ನು ಹೇಳಿಕೊಡುವನೆಂದು ಹೇಳಿದುದರಿಂದ ಅವಳಿಗೆ ಮತ್ತೆ ಬೇಜಾರಾಯಿತು. ಅವಳು "ಅಪ್ಪಾ ಈ ಮಂತ್ರ ತಂತ್ರನೆಲ್ಲ ನಂಬ ಬೇಡ. ಅದೆಲ್ಲಾ ಬರಿಯ ಸುಳ್ಳು; ಹೊಟ್ಟೆ ಹೊರೆಯುವುದಕ್ಕೆ ಮಾತ್ರ ಮಾಡುತ್ತಿರುವ ಉಪಾಯ. ಮಂತ್ರ ತಂತ್ರಗಳಿವೆ ಎಂದು ನಿನಗೆ ನೂರು ಹೇಳಿದರು ಯಾರಲ್ಲಿಯೂ ಮಂತ್ರಗಳಿಲ್ಲ. ನಮ್ಮಲ್ಲಿಯಂತೂ ಖಂಡಿತಾ ಇಲ್ಲ" ಎಂದಳು. ಸುದರ್ಶನ ಕೋಪದಿಂದ "ಹಾಗಾದರೆ ಹಾವಾ ಡಿಗ ಇಷ್ಟು ದಿನಗಳಿಂದ ನನ್ನ ಹತ್ತಿರ ಸುಳ್ಳು ಹೇಳಿ ದುಡ್ಡು ಸುಲಿಗೆ ಮಾಡಿ ಬಿಟ್ಟನೆಲ್ಲಾ ಶುದ್ಧ ಕಳ್ಳ ಮೋಸಗಾರ" ಎಂದನು. ಅವನ ಹೆಂಡತಿಯು "ಅಪ್ಪಾ ಹೇಗಾದರೂ ಹೊಟ್ಟೆ ಹೊರೆಯಬೇಕು. ಒಂದ್ಯ

ಸುಳ್ಳೂ ಹೇಳಬೇಕಾಗುತ್ತದೆ. ನಮ್ಮಲ್ಲಿ ಕನಿಕರದಿಂದ ನೀನು ಬಂದು ನಮ್ಮನ್ನು ನೋಡಿಕೊಂಡು ಹೋಗುತ್ತಿದ್ದಿಯೆ ಎಂದು ಮಾಡಿದ್ದೆ. ಹೀಗೆ ನೀನು ಮಂತ್ರಗಳಿಗಾಗಿ ಬರುತ್ತಿರುವುದು ಗೊತ್ತಾಗಿದ್ದಿದ್ದರೆ ಆವತ್ತೇ ನಿನಗೆ ಎಚ್ಚರಿಕೆ ಕೊಡುತ್ತಿದ್ದೆ" ಎಂದಳು. ಸುದರ್ಶನನಿಗೆ ಅವಳು ಹೇಳಿದ ಮಾತುಗಳು ಸರಿಯಾಗಿ ಕಂಡುವು. ಅವಳು ಒಂದೊಂದು ಮಾತನ್ನೂ ಹೇಳುತ್ತಿದ್ದಂತೆ ಅವನಿಗೆ ಮಂತ್ರ ಹೋಯಿತಲ್ಲಾ, ಹಾವಾಡಿಗ ಮೋಸಮಾಡಿದನಲ್ಲಾ ಎಂಬ ಕಿಂಕೃತಿ ಕೊರೆಯು ಭಾವ ಏರುತ್ತಿದ್ದರೂ ಹಾವಾಡಿಗನ ಹೆಂಡತಿಯಲ್ಲಿ ಮಾತ್ರ ಗೌರವ ಆದರ ಬುದ್ಧಿ ಬೆಳೆಯುತ್ತಲೇ ಹೋಯಿತು. ಈ ಮುಖರ್ಜ ಮೋಸಗಾರ ದಗಾಕೋರ ಠಕ್ಕನಿಗೆ ಸೇರಿರುವ ಈ ಪುಣ್ಯಾತ್ಗಿತ್ತಿ ಯಾರು ?

ಹಾವಾಡಿಗನ ಹೆಂಡತಿ ಪುರಳೆ ಆರಿಸಿಕೊಂಡು ಬರುವುದಕ್ಕೆ ಎದುರು ಬೀಲಿಯ ಕಡೆಗೆ ಹೋದಳು. ಸುದರ್ಶನ ಮೂಲೆಯಲ್ಲಿ ಬಿದ್ದಿದ್ದ ಹೆಬ್ಬಾವನ್ನು ಮೆಲ್ಲಗೆ ಬಾಲಮುಟ್ಟಿ ಮಾತನಾಡಿಸುತ್ತಿದ್ದನು. ಸುಮಾರು ೮-೯ ನಿಮಿಷ ಕಳೆದ ನಂತರ ಹಾವಾಡಿಗನಿಗೆ ಅಪೀಮಿನ ನಿಶಾ ಕಡಿಮೆಯಾಯಿತು. ಅವನು ಬಿದ್ದಿದ್ದಲ್ಲಿಯೇ ಕಣ್ಣುಬಿಟ್ಟು ಸುದರ್ಶನನನ್ನು ನೋಡಿ "ಏನು ಸ್ವಾಮಿ ಮಂತ್ರಗಳು ಬೇಕೋ. ಎಲ್ಲಿ ಐದುರುಪಾಯಿ ತಂದಿದ್ದೀರಾ ?" ಎಂದನು. ಸುದರ್ಶನನಿಗೆ ಅವನ ಮುಖವನ್ನು ನೋಡಿಯೇ ತಿರಸ್ಕಾರವುಂಟಾಯಿತು. ಅವನು "ನೀನು ಶುದ್ಧ ಠಕ್ಕ ಮೋಸಗಾರ ನಿಮ್ಮಂಥಾವರನ್ನು, ಜನ ಇರುವ ಊರಿಗೆ ಸೇರಿಸಬಾರದು. ನೀವು ಪ್ಲೇಗು ಕಾಲರಾ ಇದ್ದಹಾಗೆ; ಇವತ್ತೇ ಯಜಮಾನರಿಗೆ ಹೇಳಿ ನಿನ್ನ ಹಾವಿನ ಬುಟ್ಟಿಗಳನ್ನು ಸುಡಿಸಿ ಹಾವುಗಳನ್ನು ಕಾಡಿಗೆ ಬಿಟ್ಟು ನಿನ್ನನ್ನು ಈ ಊರು ಬಿಟ್ಟು ಹೊರಡಿಸುತ್ತೇನೆ. ನಿನ್ನ ತಮಟೆಗೆ ಬೆಂಕಿಹಾಕಿಸುತ್ತೇನೆ" ಎಂದನು. ಹಾವಾಡಿಗನು "ಎಲ್ಲಾ ಸ್ವಾಮಿ ಯಾಕೆ ನಾನು ನಿನಗೆ ಮಾಡಿದ ಮೋಸವೇನು" ಎಂದನು. ಸುದರ್ಶನನು "ಮೋಸವಲ್ಲದೆ ಮತ್ತೇನು? ಮಂತ್ರ ತಂತ್ರ ಎಂದು ಹೇಳಿ ನನ್ನ ಹತ್ತಿರ ಇದ್ದ ದುಡ್ಡನ್ನೆಲ್ಲಾ ಕಸಿದುಕೊಂಡೆ. ನಿನಗೆ ತಿಳಿದಿರುವ ಮಂತ್ರವೂ ಅಲ್ಲಿ ಮೇಯುತ್ತಿರುವ ಕೋಣಕ್ಕೆ ತಿಳಿದಿರುವ ಮಂತ್ರವೂ ಎರಡೂ ಒಂದೇ. ಆದರೆ ಅದು ನಿನಗಿಂತ ವಾಸಿ. ನಿನ್ನ ಹಾಗೆ ಅದು ಅಪೀಮು ತಿನ್ನುವು

ದಿಲ್ಲ. ನಿನ್ನಹಾಗೆ ಮೋಸಮಾಡುವುದಿಲ್ಲ" ಎಂದನು. ಹಾವಾಡಿಗನು "ನನಗೆ ಮಂತ್ರ ತಿಳಿಯದು ಎಂದು ಹೇಳಿದವರು ಯಾರು? ನನ್ನಷ್ಟು ಮಂತ್ರವನ್ನು ತಿಳಿದವರು ಈ ಪ್ರಾಂತ್ಯದಲ್ಲಿಯೇ ಇಲ್ಲ. ಈ ಸುತ್ತು ಮುತ್ತಿಗೆಲ್ಲಾ ನಾನೊಬ್ಬನೇ; ಮೋಡಿಯಲ್ಲಿ ನನ್ನನ್ನು ಇದುವರೆಗೆ ಜಯಿಸಿದವರು ಯಾರೂ ಇಲ್ಲ ನನಗೆ ಮಂತ್ರ ಗೊತ್ತಿಲ್ಲ ಎನ್ನುವವರು ನನ್ನ ಎದುರಿಗೆ ಬರಲಿ. ಅವರು ಕುಳಿತ ಜಾಗದಿಂದಲೇ ಮಂತ್ರದ ಮೂಲಕ ಅವರ ಪ್ರಾಣ ಹೀರುತ್ತೇನೆ. ಯಮನಪಾಶ ಪ್ರಾಣಗಳನ್ನು ಸೆಳೆದುಕೊಂಡು ಹೋಗುವಂತೆ ನನ್ನ ಮಂತ್ರಗಳು ಕಣ್ಣಿಗೆ ಕಾಣುವಂತೆ ಅವರ ಪ್ರಾಣವನ್ನು ಎಳೆದುಕೊಂಡು ಬರುತ್ತವೆ" ಎಂದನು ಸುದರ್ಶನ "ಸಾಕು ಮುಚ್ಚು ನಿನ್ನ ಒಡಾಯಿ. ನಿನ್ನ ಹೆಂಡತಿಗೇ ನಿನ್ನ ಮಂತ್ರದಲ್ಲಿ ನಂಬಿಕೆ ಇಲ್ಲ" ಎಂದನು. ಹಾವಾಡಿಗನು "ಹಾ ನನ್ನ ಹೆಂಡತಿ ನನ್ನಲ್ಲಿ ಮಂತ್ರವಿಲ್ಲವೆಂದು ನಿನಗೆ ಹೇಳಿದಳಲ್ಲವೇ" ಎಂದನು. ಅವನ ಮುಖ ಕೋಪದಿಂದ ಪಿಶಾಚಿಯ ಮುಖವಾಯಿತು ಅವನ ಕಣ್ಣುಗಳು ಕೆಂಪಾದುವು. ಮೀಸೆ ಅದುರುತ್ತಿತ್ತು; ತುಟಿ ನಡುಗುತ್ತಿತ್ತು. ಆ ಕಣ್ಣುಗಳಲ್ಲಿ ಕಂಡ ಕ್ರೌರ್ಯವನ್ನು ನೋಡಿ ಸುದರ್ಶನನಿಗೆ ಒಹಳ ಭಯ ವಾಯಿ. ಅಫೀಮಿನ ಮತ್ತಿನಿಂದ ಕೆಂಡವಾಗಿದ್ದ ಅವನ ಕಣ್ಣುಗಳು ಕೋಪದಿಂದ ಗಿರಗಿರನೆ ತಿರುಗಿದುವು. ಅವನು "ಜೇಬಿನಲ್ಲಿ ದುಡ್ಡು ಸದ್ದಾಯಿತಲ್ಲ ತೆಗೆಯಿರಿ" ಎಂದನು. ಬೇರೆ ಕಾಲವಾಗಿದ್ದರೆ ಅಥವ ಹಾವಾಡಿಗನನ್ನು ಅದೇ ಮೊದಲನೆಯ ಸಲವಾಗಿ ಸುದರ್ಶನ ನೋಡಿದ್ದರೆ ಅವನು ಹೆದರಿ ಜೇಬಿನಲ್ಲಿದ್ದ ಹಣವನ್ನು ಕೊಟ್ಟು ಪಾರಾಗುತ್ತಿದ್ದನು. ಆದರೆ ಈಗ ಅವನಿಗೆ ಹಾವಾಡಿಗನನ್ನು ಅವನ ಅನೇಕ ವೇಷಗಳಲ್ಲಿ ಕಂಡು ಅಭ್ಯಾಸವಾಗಿದ್ದಿತು. ಹಾವಾಡಿಗನಲ್ಲಿ ಅವನಿಗೆ ತಿರಸ್ಕಾರವೂ ಉಂಟಾ ಗಿದ್ದಿತು. ಸಾಧಾರಣವಾಗಿ ಎಲ್ಲಿ ತಿರಸ್ಕಾರವಿರುತ್ತದೆಯೋ ಅಲ್ಲಿ ಗೌರವ ಭಯ ಎರಡೂ ಇರುವುದಿಲ್ಲ. ಅವನು ಕೋಪದಿಂದ "ಎಲಾ ಪಾಪಿ ಈವರೆಗೆ ನಿನ್ನಲ್ಲಿ ಮಂತ್ರವಿದೆಯೆಂದು ಹೆದರಿದೆ. ಈಗ ನೀನೂ ಹಲ್ಲು ಕಿತ್ತ ಹಾವು" ಎಂದನು. ಹಾವಾಡಿಗನು "ರುಪಾಯಿ ಕೊಡ್ತೀರೋ ಇಲ್ಲವೋ" ಎಂದನು. ಸುದರ್ಶನನು ಇಲ್ಲ'ಎಂಬಂತೆ ತಲೆಯಲ್ಲಾಡಿಸಿದನು. ಹಾವಾಡಿಗನು "ಆಗಲಿ ನಾನು ಹಲ್ಲು ಕಿತ್ತ ಹಾವಲ್ಲವೆ? ಹಲ್ಲು ಕಿತ್ತ

ಹಾವನ್ನು ಕಂಡರೆ ನಿಮಗೆ ಭಯವಿಲ್ಲ ತಾನೇ" ಎಂದವನೇ ಎಡಗೈನಿಂದ ಹಾವಿನ ಬುಟ್ಟಿಯ ಮುಚ್ಚಳವನ್ನು ಮೆತ್ತಗೆ ತೆಗೆದನು. ಸುದರ್ಶನ ಅವನು ಏನು ಮಾಡುತ್ತಿದ್ದಾನೆ ಎಂಬುದನ್ನೇ ನೋಡುತ್ತಿದ್ದನು. ಅವನು ತನ್ನನ್ನು ಹೆದರಿಸಲು ಹಾವನ್ನು ಹೊರಕ್ಕೆ ಬಿಡುತ್ತಾನೆ ಎಂಬುದೂ ಅವನಿಗೆ ತಿಳಿಯಿತು. ಆದರೆ ಪದೇ ಪದೇ ಹಾವಾಡಿಗನ ಹತ್ತಿರ ಬರುತ್ತಿದ್ದುದರಿಂದಲೂ ಹಾವಾಡಿಗನ ಬಳಿ ಇದ್ದ ಹಲ್ಲು ಕಿತ್ತಿದ್ದ ಹಾವನ್ನು ನೋಡಿದ್ದುದರಿಂದಲೂ ಅವನು ಮನಸ್ಸಿನಲ್ಲಿ ನಗುತ್ತಾ 'ಈ ಆಟವೆಲ್ಲಾ ನನ್ನಲ್ಲಿ ನಡೆಯುವುದಿಲ್ಲ ಮಗು. ಇದನ್ನೆಲ್ಲಾ ಹಳ್ಳಿಯರಿಗೆ ಹೇಳು" ಎಂದುಕೊಂಡು ನಿರೀಕ್ಷಿಸುತ್ತಿದ್ದನು.

ಹಾವು ಬುಟ್ಟಿಯಿಂದ ಹೊರಟ ಕೂಡಲೇ ಸುದರ್ಶನನ ಮೈ ಜಿಲ್ಲೆಂದು ಬೆವರಿತು. ನೋಡಿದ ಕೂಡಲೇ ಅದು ಹಿಂದಲಿಂದ ತಾನು ನೋಡಿದ್ದ, ರಸ್ತೆಯಲ್ಲಿ ತನ್ನ ತೊಡೆಯ ಮೇಲೆ ತೊಟ್ಟಿಲಲ್ಲಿಯ ಮಗುವಿನಂತೆ ಮಲಗಿದ್ದ, ಹಾವಾಡಿಗನ ಹೆಂಡತಿ ಹಿಡಿದುಕೊಂಡು ಬಂದಿದ್ದ ಹಲ್ಲು ಮುರಿದ ಹಾವಲ್ಲವೆಂಬುದು ಅವನಿಗೆ ಗೊತ್ತಾಯಿತು. ಈ ಹಾವಿನ ತಲೆ ಒಳ್ಳೆಯ ರಬ್ಬರು ಚೆಂಡಿನಂತೆ ದಪ್ಪವಾಗಿದ್ದಿತು. ಇದು ಹಾವಾಡಿಗನ ಹತ್ತಿರ ಇದ್ದುದನ್ನು ಸುದರ್ಶನ ಯಾವಾಗಲೂ ನೋಡಿರಲಿಲ್ಲ. ಈ ಹಾವು ಆ ಸತ್ವಹೀನವಾಗಿದ್ದ ಹೊಟ್ಟೆಗೇ ಇಲ್ಲದೆ ಸಣ್ಣ ನೂಲಿನಂತೆ ಬಡಕಲಾಗಿದ್ದ ಹಾವಲ್ಲ. ಇದು ಒಳ್ಳೆ ಗಾತ್ರವಾಗಿಯೂ ಇದ್ದಿತು. ಬುಟ್ಟಿಯಿಂದ ಹೊರಕ್ಕೆ ಬರಲು ದಾರಿ ದೊರೆತ ಕೂಡಲೇ ಅದು ಸರ್ರನೆ ತಲೆಯನ್ನು ಹೊರಕ್ಕೆ ಇಟ್ಟು ಒಂದೇ ನಿಮಿಷಕ್ಕೆ ಪೂರ್ಣ ದೇಹವನ್ನು ಬುಟ್ಟಿಯಿಂದ ಈಚೆಗೆ ಎಳೆದುಕೊಂಡು ಹಾವಾಡಿಗನ ಮೇಲೆ ಬೀಳುವಂತೆ ಅವನ ಕಡೆಗೆ ನುಗ್ಗಿತು. ಹಾವಾಡಿಗ ಇದನ್ನು ನಿರೀಕ್ಷಿಸದೆ ಇರಲಿಲ್ಲ. ಆದರೆ ಅವನಿಗೆ ಹಾವು ಹಾಯುವ ಹಸುವಿನಂತೆ ಪಳಗಿದ್ದ ವಸ್ತು. ತನ್ನ ಕಡೆಗೆ ಬರುತ್ತಿದ್ದ ಹಾವನ್ನು ಅವನು ಒಂದು ದೊಣ್ಣೆಯಿಂದ "ಛೀ ಹೋಗು ಆಚೆ" ಎಂದು ತಳ್ಳಿಬಿಟ್ಟನು. ಹಾವು ಅವನನ್ನು ಬಿಟ್ಟು ಗೋಡೆಯ ಮಗ್ಗುಲಲ್ಲಿ ಹರಿಯುತ್ತಾ ನೆಟ್ಟಗೆ ಸುದರ್ಶನನ ಕಡೆಗೆ ಬಂದಿತು. ಸುದರ್ಶನ ಅದರ ಹೊಳೆಯುತ್ತಿರುವ ಕಣ್ಣನ್ನೂ ಅದು ಹೊರಕ್ಕೆ ದಬ್ಬಳದಂತೆ ಚೂಪಾದ ನಾಲಿಗೆಯನ್ನು ಆಡಿಸುತ್ತಿರುವಾಗ

ಸಣ್ಣ ಅವರೇಬೇಳೆಯಂತೆ ಕಂಡ ಅದರ ಹಲ್ಲನ್ನೂ ನೋಡಿ ಬೆದರಿದ. "ಹಾವಾಡಿಗ ಪಾಪಿ, ಹಾವನ್ನು ನನ್ನ ಮೇಲೆ ಬಿಡುತ್ತಿದ್ದಾನೆ ಇದರ ಕೈಯಿಂದ ತಪ್ಪಿಸಿಕೊಳ್ಳುವುದು ಹೇಗೆ ಎಂದು ಅವನಿಗೆ ತೋರದಾಯಿತು. ಸುದರ್ಶನ ಅನೇಕ ಹುಡುಗರಂತೆ ಪುಕ್ಕನಲ್ಲ. ಅವನು ಒಂದು ದೊಣ್ಣೆ ಗಿಣ್ಣೆ ಸಿಕ್ಕುತ್ತದೆಯೋ ಎಂದು ಸುತ್ತಾ ನೋಡಿದನು. ಆ ಹಾವು ಎರಡು ಒನಕೆ ಗಾತ್ರವಿದ್ದದ್ದು ಇಂತಹ ದೊಣ್ಣೆ ಏಟಿಗೆ ಎಂದಿಗೂ ಹೆದರುವುದಾಗಿರಲಿಲ್ಲ. ಹತ್ತು ಏಟು ಕೊಟ್ಟರೂ ಅದರ ಮೈಗೆ ಸ್ವಲ್ಪವೂ ಚುರುಕೇ ತಗಲುತ್ತಿರಲಿಲ್ಲ. ಹಾವಿನ ಕೈಯಿಂದ ತಪ್ಪಿಸಿಕೊಳ್ಳಲು ಸುದರ್ಶನನಿಗೆ ಸರಿಯಾದ ದಾರಿ ಇರಲಿಲ್ಲ. ಜಗಲಿಯ ಸುತ್ತಾ ಕಟಕಟೆ ಹಾಕಿತ್ತು. ಜಗಲಿಯು ಸುಮಾರಾಗಿ ಅಗಲವಾಗಿದ್ದರೂ ಹಾವನ್ನು ದಾಟಿಕೊಂಡು ಹೋಗಲು ಜಾಗವೇ ಇರಲಿಲ್ಲ. ಹಾವು ಬಂದು ಅವನ ಮೇಲೆ ಬೀಳಬಹುದು ಅಥವ ಬೀಳದೆ ಇರಬಹುದು. ಅಂತೂ ಅದು ಬೀಳಬೇಕೆಂದು ಮನಸ್ಸುಮಾಡಿಕೊಂಡೇ ಬಂದಿದ್ದರೆ ಹ್ಯಾಗೆ ತಪ್ಪಿಸಿಕೊಳ್ಳುವುದು ಸುದರ್ಶನನಿಗೆ ಕಷ್ಟವಾಗುತ್ತಿದ್ದಿತೋ ಈಗಲೂ ಅವನಿಗೆ ಹಾಗೆ ತೋರಿತು. ಸುದರ್ಶನ ಹಾವು ಸರ್ರನೆ ಹತ್ತಿರಕ್ಕೆ ಬರುತ್ತಿದ್ದುದನ್ನು ನೋಡಿ ಜಗಲಿಯಿಂದ ಸೂರಿನವರೆಗೆ ಕಟ್ಟಿದ್ದ ಕಟಕಟೆಯಲ್ಲಿ ಮಧ್ಯೆ ದಪ್ಪವಾಗಿ ಒಂದು ತೀರು ಇದ್ದುದ್ದರ ಮೇಲೆ ಕಾಲು ಇಟ್ಟುಕೊಂಡು ಮೇಲಿನ ರಿಪೀಸನ್ನು ಹಿಡಿದುಕೊಂಡು ಹಿಂದುಗಡೆ ನೋಡುತ್ತಾ ನಿಂತುಕೊಂಡನು. ನಿಂತುಕೊಂಡನೆಂಬುದಕ್ಕಿಂತ ಅವನು ಅರ್ಧಮುಟ್ಟಿಗೆ ಕಟಕಟೆಗೆ ನೇತುಬಿದ್ದಿದ್ದ ಎಂದೇ ಹೇಳಬಹುದು.

ಹಾವಾಡಿಗನು ನಗುತ್ತಾ "ಸ್ವಾಮಿ ಹಲ್ಲಿಲ್ಲದ ಹಾವು ಅಲ್ಲವೆ? ರಾಜ ಅಲ್ಲಿಗೂ ಬರುತ್ತೆ. ರಾಜನ ಕಣ್ಣು ಬಲುಚುರುಕು. ಅದಕ್ಕೆ ಮನುಷ್ಯನ ವಾಸನೆ ತಿಳಿಯುತ್ತೆ; ಮನುಷ್ಯ ಸಿಕ್ಕುತ್ತೈ ಅಂತ ಕಾದಿತ್ತು. ಈಗ ನೋಡು ಚೆನ್ನಾಗಿ ಅರೆದುಹಾಕುತ್ತೆ. ಎಲ್ಲಿ ಸ್ವಾಮಿ ಈಗಲೂ ಬೇಗ ಜೇಬಿನಲ್ಲಿರುವ ರುಪಾಯಿ ತೆಗೆದು ಎಸೆದುಬಿಡಿ. ರಾಜನ್ನ ಹಿಂದಕ್ಕೆ ಕರೆದು ಬಿಡುತ್ತೇನೆ ಎಂದನು. ಸುದರ್ಶನನಿಗೆ "ಹಾಳಾಗಲಿ, ಜೇಬಿನಲ್ಲಿರುವ ರುಪಾಯಿ ಎಸೆದುಬಿಡೋಣ. ಪ್ರಾಣ ಉಳಿಸಿಕೊಂಡು ಆಚೆಗೆ ಹೋಗೋಣ" ಎನ್ನಿಸಿತು. ಸುದರ್ಶನ ಹೀಗೆ ಯೋಚಿಸುತ್ತಿರುವಾಗ

ಬಾಗಿಲಿನ ಹೊರಗಡೆ ಹಾವಾಡಿಗನ ಹೆಂಡತಿ ಬರುತ್ತಿರುವುದು ಸುದರ್ಶ ನನಿಗೆ ಕಾಣಿಸಿತು. ಅವಳ ತಲೆಯ ಮೇಲೆ ಮಂಕರಿಯಲ್ಲಿ ಪುರಲೆ ಇತ್ತು. ಹಾವಾಡಿಗನ ಹೆಂಡತಿ ಆಗಿನಷ್ಟು ದೇವತೆಯಾಗಿ ಅವನಿಗೆ ಮತ್ತಾ ವಾಗಲೂ ಕಾಣಲಿಲ್ಲ. ಒಂದು ಗಳಿಗೆಯೊಳಗೆ ಅವಳು ಬಾಗಿಲನ್ನು ದಾಟಿ ಸಮೀಪಕ್ಕೆ ಬಂದಳು.! "ಸುದರ್ಶನನು ತಾಯಿ ಇಲ್ಲಿ ಒಂದು ಕಾಡು ಹಾವು ಇದೆ. ಹಲ್ಲು ಕಿತ್ತಿಲ್ಲ. ಒಳಕ್ಕೆ ಬರಬೇಡ. ಒಂದು ದೊಣ್ಣೆಯಲ್ಲಿ ಇದನ್ನು ಬಡಿದು ಹಾಕು. ನಿನಗೆ ಏನಾದರೂ ಮಂತ್ರಗಳು ಗೊತ್ತಿದ್ದರೆ, ಅಥವಾ ಉಪಾಯವಾಗಿ ಹಾವನ್ನು ಕೊಲ್ಲುವುದು ನಿನಗೆ ಗೊತ್ತಿದ್ದರೆ ಇದನ್ನು ಹೊಡೆದುಹಾಕು" ಎಂದು ಕೂಗಿದನು. ಹಾವು ಹರಿದು ಕೊಂಡು ಬರುತ್ತಿರುವಾಗ ಅಲ್ಲಿ ಇಟ್ಟಿದ್ದ ಒಂದು ಮಡಕೆ ಅದರ ನೀಟಿ ಕೊಂಡು ಬರುತ್ತಿದ್ದ ನಾಲಗೆಗೆ ತಗುಲಿತು. ಹಾವು ಕೋಪದಿಂದ ಹೆಡೆ ಯನ್ನು ಒಂದು ಜೊಗಸೆಯಗಲ ಮಾಡಿಕೊಂಡು ಮಡಕೆಗೆ ಎತ್ತಿ ಕೊಟ್ಟಿತು. ಆ ಏಟಿಗೆ ಮಡಕೆ ಫಳಾರನೆ ನೂರಾರು ಚೂರುಗಳಾಗಿ ಒಡೆದುಹೋಯಿತು. ಅದರ ಜತೆಯಲ್ಲಿ ಸುದರ್ಶನನ ಎದೆಯೂ ಒಡೆ ದಂತೆ ಆಯಿತು. ಹಾವಿನ ಹೆಡೆ ಅಷ್ಟೊಂದು ಅಗಲವಾಗಿದ್ದುದನ್ನು ಅವನು ಆವರೆಗೆ ನೋಡಿರಲಿಲ್ಲ.

ಹಾವಾಡಿಗನ ಹೆಂಡತಿ ಬಾಗಿಲಿಗೆ ಬರುವವೇಳೆಗೆ ಸರಿಯಾಗಿ ಒಳ ಗಡೆಯ ಮಡಕೆಯ ಸದ್ದು ಕೇಳಿ ಅವಳಿಗೆ ಗಾಬರಿಯಾಯಿತು. ಸುದರ್ಶನ ನಡುಗುವ ಧ್ವನಿಯಲ್ಲಿ "ಅಲ್ಲೇ ಇರು ಅಲ್ಲೇ ಇರು" ಎಂದು ಕೂಗಿದನು. ಹಾವಾಡಿಗನ ಹೆಂಡತಿ ನೆಟ್ಟಗೆ ಜಗಲಿಗೆ ಬಂದಳು. ಹಾವನ್ನೂ ಸುದರ್ಶನನ ಸ್ಥಿತಿಯನ್ನೂ ಒಂದುಕಡೆ ಕೂತಿದ್ದ ಗಂಡನನ್ನೂ ನೋಡಿ "ಅದರ ಹಲ್ಲು ಕಿತ್ತಿದ್ದೀರಾ" ಎಂದಳು. ಹಾವಾಡಿಗನು "ಇಲ್ಲ. ಇಲ್ಲ. ಅಫೀಮು ಮುಗಿಯಿತು. ಹೋಗಿ ಸ್ವಲ್ಪ ಅಫೀಮು ಈ ಊರು ಅಂಗಡೀಲಿ ತತ್ತಾ. ಅನಂತರ ಕಿತ್ತುಹಾಕುತ್ತೇನೆ" ಎಂದನು. ಹಾವಾಡಿಗನ ಹೆಂಡತಿ "ಹಾಗಾದರೆ ಹಾವು ಯಾಕೆ ಹೊರಗೆ ಬಿಟ್ಟಿರಿ. ನಿಮ್ಮದು ಒಳ್ಳೆ ಹುಡುಗಾಟವಾಯಿತು. ಅಫೀಮಿನ ಅಮಲಿನಲ್ಲಿ ನೀವು ಯಾರದಾದರೂ ಪ್ರಾಣ ತೆಗೆಯುತ್ತೀರಿ ಖಂಡಿತ" ಎಂದಳು. ಹಾವಾಡಿ ಗನು "ರುಪಾಯಿ ತಂದಿದ್ದಾನೆ. ಕೊಡುವುದಿಲ್ಲವಂತೆ. ನನ್ನ ಹತ್ತಿರ

ಮಂತ್ರ ಇಲ್ಲವಂತೆ. ತೋರಿಸುತ್ತೇನೆ'' ಎಂದನು. ಅವನ ಹೆಂಡತಿ ನಿಧಾನವಾಗಿ ಹಾವಿನ ಬಳಿಗೆ ಹೋಗಿ ಚೂಟಿಯಿಂದ ಅದರ ಬಾಲವನ್ನು ಎಡಗೈನಲ್ಲಿ ಎತ್ತಿ ಹಿಡಿದಳು. ಹಾವು, ಬಾಯನ್ನು ಕೆಳಗೆ ಮಾಡಿಕೊಂಡು ಅವಳ ಕೈನಲ್ಲಿ ನೇತುಬಿದ್ದಿತು. ಅದು ಮೇಲಕ್ಕೆ ತಲೆ ಎತ್ತಿದ್ದಂತೆಲ್ಲಾ ಅವಳು ಅದನ್ನು ಅಲ್ಲಾಡಿಸುತ್ತಲೇ ಅದಕ್ಕೆ ಯಾವುದಕ್ಕೂ ಅವಕಾಶ ಕೊಡದೆ ಅದರ ತಲೆಯನ್ನು ಕೆಳಗೇ ಇರುವಂತೆ ಹಿಡಿದುಕೊಂಡು ಬುಟ್ಟಿಯ ಸಮೀಪಕ್ಕೆ ಬಂದಳು. ಬುಟ್ಟಿಯ ಹತ್ತಿರ ಅದರ ತಲೆಯನ್ನು ಸ್ವಲ್ಪ ನೆಲದ ಮೇಲೆ ತೂಗಾಡುವಂತೆ ಬಿಟ್ಟು ಬಲಗೈನಲ್ಲಿದ್ದ ಒಂದು ಸೌದೆ ಕವೆಯನ್ನು ಅದರ ಕತ್ತಿನ ಮೇಲಿಟ್ಟು ಎಡಗೈ ಬಾಲವನ್ನು ಕೆಳಕ್ಕೆ ಬಿಟ್ಟಳು. ಹಾವು ಕವೆಯ ಸಂದಿಯಲ್ಲಿ ಇಕ್ಕಳದಲ್ಲಿ ಸೇರಿದ ಪದಾರ್ಥ ದಂತೆ, ಅಡಕೆಯ ಕತ್ತರಿಯಲ್ಲಿ ಸಿಕ್ಕಿಕೊಂಡ ಗೋಟಿನಂತೆ ಸಿಕ್ಕಿಕೊಂ ಡಿತು. ಅದು ಎರಡು ಸಲ ಬಾಲವನ್ನು ಬಡಿಯಿತು. ಒಂದು ಸಲ ಬಾಲವನ್ನು ಕವೆಗೆ ಸುತ್ತಿತು. ಆದರೆ ಅದರ ಕೈಯ್ಯಲ್ಲಿ ಏನೂ ಆಗಲಿಲ್ಲ. ಸ್ಕೂಲಿಗೆ ಹೋಗುವ ಹುಡುಗ ಜೀರುಂಬೆಯ ಕಾಲಿಗೆ ನೂಲು ಕಟ್ಟಿ ಆಡಿಸುವಂತೆ, ಯಾವಾಗ ಹಾವಿನ ಕತ್ತು ತನ್ನ ಬಲಗೈಯ ಕವೆಯ ಕೆಳಗೆ ಸಿಕ್ಕಿಕೊಂಡಿತೋ ಅನಂತರ ಹಾವಾಡಿಗನ ಹೆಂಡತಿಗೆ ಆ ಹಾವು ಒಂದು ವಸ್ತುವಾಗಿಯೇ ಕಾಣಲಿಲ್ಲ. ಹಾವು ಹುಳುವಿನಂತೆ ನಿರ್ಜೀವವಾಗಿ ಒಂದೊಂದು ಸಲ ಬಾಲವನ್ನು ಅಲ್ಲಾಡಿಸುತ್ತಾ ಸುಮ್ಮಗೆ ಬಿದ್ದಿತು. ಹಾವಾಡಿಗನ ಹೆಂಡತಿ ಬುಟ್ಟಿಯ ಬಾಗಿಲನ್ನು ಸ್ವಲ್ಪ ತೆರೆದು ಹಾವಿನ ಕತ್ತಿನ ಮೇಲಿದ್ದ ಕವೆಯ ಹಿಡಿತವನ್ನು ತುಸ ಕದಲಿಸಿದಳು. ಉಸಿರು ಕಟ್ಟಿದ್ದ ಹಾವು ಸ್ವಲ್ಪ ಅವಕಾಶ ಸಿಕ್ಕಿದಕೂಡಲೇ ಮುಂದಕ್ಕೆ ಹೊರಟಿತು. ನೆಟ್ಟನೆ ಅದರ ತಲೆ ಬುಟ್ಟಿಯೊಳಕ್ಕೇ ಹೋಯಿತು. ಹಾವಾಡಿಗನ ಹೆಂಡತಿ ಬುಟ್ಟಿಯ ಮುಚ್ಚಲವನ್ನು ಹಾವಿನ ಮೈಮೇಲೆ ಸ್ವಲ್ಪ ಅಮುಕಿದಳು. ಅದು ನಿಧಾನವಾಗಿ ದೇಹವನ್ನು ಪೂರ್ತಾ ಬುಟ್ಟಿಯೊಳಕ್ಕೆ ಎಳೆದುಕೊಂ ಡಿತು. ಅವಳು ಅದರ ಮೇಲೆ ಅಲ್ಲೇ ಬಿದ್ದಿದ್ದ ಒಂದು ಹಲಗೆಯ ಚೂರನ್ನು ಇಟ್ಟಳು.

ಕಟಕಟೆಯಿಂದ ಕೆಳಕ್ಕೆ ಬಿದ್ದು ಸುದರ್ಶನ ಒಂದೇ ಏಟಿಗೆ ಅವಳು ಬೇಡ ಎನ್ನುವುದಕ್ಕೆ ಮುಂಚೆ ಅವಳ ಕಾಲಿಗೆ ಬಿದ್ದನು. ಜೇಬಿನಲ್ಲಿದ್ದ

5 ರುಪಾಯಿಗಳನ್ನು ಅವಳಿಗೆ ಕೊಡುವುದಕ್ಕೆ ಹೋದನು. ಅವಳು "ನಿನ್ನ ರುಪಾಯಿ ನೀನು ಇಟ್ಟುಕೋ" ಎಂದಳು. ಇದನ್ನೆಲ್ಲಾ ನೋಡಿ ಹಾವಾಡಿಗನಿಗೆ ಕೋಪ ಹೆಚ್ಚಾಯಿತು. ಅವನಿಗೆ ಅಪೀಮಿನ ಅಮಲು ಇಳಿದಿದ್ದರೂ ಸಿಟ್ಟಿನಿಂದಲೇ ಮತ್ತಷ್ಟು ಮತ್ತು ಏರಿತು. ಅವನು "ಏ ಇಲ್ಲಿ ತತ್ತಾ. ಸ್ವಾಮಿ ಆ ರುಪಾಯಿ ತಂದಿರೋದು ನನ್ನ ಮಂತಕ್ಕೆ" ಎಂದನು. ಅವನ ಹೆಂಡತಿಯು ಸುದರ್ಶನನಿಗೆ "ಅಪ್ಪಾ ನೀನು ಇಲ್ಲಿ ಬರಬೇಡ. ಮನೆಗೆ ಹೋಗಿಬಿಡು" ಎಂದಳು. ಹಾವಾಡಿಗನು "ನನಗೆ ಮಂತ್ರ ಬರುವುದಿಲ್ಲ ಎಂದು ಇವನಿಗೆ ಹೇಳಿದವಳು ನೀನೆ ಅಲ್ಲವೇ" ಎಂದು ಹೇಳಿ ಅಲ್ಲೆ ಬಿದ್ದಿದ್ದ ಸೌದೆಯ ತುಂಡಿನಿಂದ ಎತ್ತಿ ಹೆಂಡತಿಗೆ ಒಂದು ಬಾರಿಸಿದ. ಅವಳು ಆ ಏಟನ್ನು ತಡೆಯಲಾರದೆ ಹೊರಳಾಡುತ್ತಾ ಕೆಳಗೆ ಬಿದ್ದುಬಿಟ್ಟಳು. ಹಾವಾಡಿಗನು ಅವಳಿಗೆ ಮತ್ತೊಂದು ಏಟು ಹಾಕಬೇಕೆಂದು ಕೈಎತ್ತಿದನು. ಆ ಏಟು ಬಿದ್ದಿದ್ದರೆ ಅವಳು ಖಂಡಿತ ಸಾಯುತ್ತಿದ್ದಳು. ಸುದರ್ಶನನಿಗೆ ತನ್ನ ಬುದ್ಧಿ ತನ್ನ ಸ್ವಾಧೀನ ತಪ್ಪಿತು. ತನಗೆ ಏನಾದರೂ ಅಪಾಯ ಬರಬಹುದೆಂಬ ಭಯವೂ ಅವನನ್ನು ಬಾಧಿಸಲಿಲ್ಲ. ಅವನು ಒಂದೇ ಏಟಿಗೆ ನೆಟ್ಟನೆ ಹಾವಾಡಿಗನ ಮೇಲೆ ಬಿದ್ದು ಅವನನ್ನು ಕೆಡವಿ ಅವನ ಎದೆಯ ಮೇಲೆ ಕುಳಿತುಕೊಂಡನು. ಅವನ ಗದ್ದಕ್ಕೂ ಕತ್ತಿಗೂ ನಾಲ್ಕು ಬಿಡುವುದರೊಳಗಾಗಿ ಅವನ ಹೆಂಡತಿ ಮೇಲಕ್ಕೆ ಎದ್ದು ಸುದರ್ಶನನ್ನು ಹಿಂದಕ್ಕೆ ಎಳೆದುಕೊಂಡು "ಇನ್ನು ನೀನು ಮನೆಗೆ ಹೋಗು. ಅವರನ್ನು ಯಾಕೆ ಹೊಡೆದೆ. ನಮ್ಮ ಪಾಡು ನಮಗೆ. ಇದು ಗಂಡ ಹೆಂಡರ ವ್ಯಾಜ್ಯ. ಇದರಲ್ಲಿ ನೀನು ಪ್ರವೇಶಿಸ ಬಾರದು. ಅಪ್ಪಾ ಇನ್ನು ಮುಂದೆ ನೀನು ಇಲ್ಲಿ ಬರಬೇಡ. ಹೋಗು" ಎಂದಳು. ಸುದರ್ಶನ ಗಂಡನ ಮೇಲೆ ಬಿದ್ದದ್ದು ಅವಳಿಗೆ ಸ್ವಲ್ಪವೂ ಸಮಾಧಾನವಾಗಲಿಲ್ಲ. ಅವನು ಅವಳಿಗೆ "ನಾನು ಹೋದ ಮೇಲೆ ಇವನು ನಿನ್ನನ್ನು ಕೊಂದೇ ಬಿಡುತ್ತಾನೆ" ಎಂದನು. ಹಾವಾಡಿಗನ ಹೆಂಡತಿ "ಅದು ಹೇಗಾದರೂ ಆಗಲಿ. ಅದು ನಮ್ಮ ಪಾಡು. ನೀನು ಹೋಗು" ಎಂದಳು. ಸುದರ್ಶನನು ಹೊರಟನು. ಈ ವಿಚಿತ್ರ ದಂಪತಿ ಗಳ ಬಾಳು, ಗಂಡನ ಕ್ರೌರ್ಯ, ಒಂದುಗಳಿಗೆ ಮುಂಚೆ ತನ್ನನ್ನು ಕೊಲ್ಲಲು ಸಿದ್ಧನಾಗಿದ್ದರೂ ಗಂಡನ ಮೇಲೆ ತಾನು ಬಿದ್ದುದರಿಂದ ಹೆಂಡತಿಗೆ

ಉಂಟಾದ ಕೋಪ ಇವುಗಳನ್ನೆಲ್ಲಾ ಯೋಚಿಸಿ ಯೋಚಿಸಿದಷ್ಟೂ ಅವನ ಬಾಲ್ಯದ ಮೃದುವಾದ ಮನಸ್ಸಿಗೆ ಹಾವಾಡಿಗನು ರಾಕ್ಷಸನಾಗಿಯೂ ಅವನ ಹೆಂಡತಿ ದೇವತೆಯಾಗಿಯೂ ತೋರಿದಳು. ಇಂತಹ ಹೆಂಗಸಿಗೆ ಇಂತಹ ಗಂಡನನ್ನು ದೇವರು ಕೊಡಬಹುದೇ ಎಂದುಕೊಂಡು ಅವನು ಮನೆಗೆ ಹೋದನು. ಅವನ ಜೇಬಿನ ಐದು ರುಪಾಯಿ ಅಲ್ಲೇ ಉಳಿದು ಕೊಂಡಿತ್ತು.

ಮರುದಿವಸ ಸಾಯಂಕಾಲ ಸುದರ್ಶನ ಅನಂತುವಿನ ಮನೆಯಲ್ಲಿ ಜೋಳ ಕತ್ತರಿಸುತ್ತಿರುವಾಗ ಛತ್ರದ ಹಾವಾಡಿಗನನ್ನು ಹಾವು ಕಡಿಯಿತು ಸತ್ತ ಎಂದು ವರ್ತಮಾನ ಬಂತು. ಅನಂತುವೂ ಪಟೇಲರೂ ಊರಿನವ ರೆಲ್ಲಾ ಛತ್ರದ ಮುಂದೆ ಸೇರಿದರು. ಸುದರ್ಶನ ಅವನ ಹತ್ತಿರ ಗರುಡ ಮಣಿ ಇತ್ತಲ್ಲ ಆದರೂ ಹೀಗಾಯಿತೆ ಎಂದುಕೊಂಡು ತಾನೂ ಛತ್ರದ ಬಳಿಗೆ ಹೋದನು. ಜನ ಛತ್ರದ ಹೊರಗೆ ನಿಂತಿದ್ದರು. ಒಳಕ್ಕೆ ಹೋಗು ವುದಕ್ಕೇ ಆ ಶೂರರಲ್ಲಿ ಯಾರಿಗೂ ಧೈರ್ಯವಿರಲಿಲ್ಲ. ಸುದರ್ಶನ ಸೆಟ್ಟಗೆ ಒಳಕ್ಕೆ ಹೋಗಿ ನೋಡಿದನು. ಹೆಬ್ಬಾವು ಹಿಂದೆ ತಾನು ಬಿದ್ದಿರುತ್ತಿದ್ದ ಸ್ಥಳದಲ್ಲಿ ಬಿದ್ದಿತ್ತು. ಹಾವಾಡಿಗನ ಮಗ್ಗುಲಲ್ಲಿ ಮೊದಲ ದಿನದ ನಾಗರ ಹಾವು ಮಧ್ಯಕ್ಕೆ ಕತ್ತರಿಸಲ್ಪಟ್ಟು ತುಂಡಾಗಿ ಬಿದ್ದಿದ್ದಿತು. ಅದರ ಮಗ್ಗಲಲ್ಲಿ ಉದ್ದವಾದ ಚೂರಿ ಬಿದ್ದಿತ್ತು. ಹಾವಾಡಿಗನಂತೂ ಸತ್ತುಬಿದ್ದಿದ್ದನು. ಮೂಲೆಯಲ್ಲಿ ಅವನ ಹೆಂಡತಿ ಕುಳಿತಿದ್ದಳು. ಸುದರ್ಶನನ್ನು ನೋಡಿ "ಅಪ್ಪಾ ನೀನು ಯಾಕೆ ಇಲ್ಲಿ ಈಗ ಬಂದೆ" ಎಂದಳು. ಸುದರ್ಶನನು ಅವಳ ಮಾತಿಗೆ ಪ್ರತ್ಯುತ್ತರ ಕೊಡದೆ "ಇದು ಹೀಗಾಗಲು ಕಾರಣ ವೇನು. ನಿನ್ನಲ್ಲಿ ಗರುಡಮಣಿ ಇಲ್ಲವೇ? ಅದನ್ನು ಹಾವು ಕಡಿದ ಜಾಗಕ್ಕೆ ಇಟ್ಟರೆ ವಿಷವನ್ನು ಪೂರ್ಣವಾಗಿ ಹೀರುವುದೆಂದು ಅವನು ಹೇಳುತ್ತಿದ್ದ ನೆಲ್ಲ" ಎಂದನು. ಹಾವಾಡಿಗನ ಹೆಂಡತಿ "ಅದೆಲ್ಲಾ ಸುಳ್ಳು ಅಂತ ಹೇಳಿದೆನೆಲ್ಲಾ. ಈಗ ಮುಂದಲ ಕಾರ್ಯ ನಡೆಯಬೇಕು" ಎಂದಳು. ಸುದರ್ಶನನು "ಈ ಹಾವು ಅವನನ್ನು ಕಡಿದುದು ಹೇಗೆ? ಹಾವು ಯಾಕೆ ಸತ್ತುಬಿದ್ದಿದೆ. ಅದನ್ನು ಕೊಂದವರು ಯಾರು?" ಎಂದನು. ಹಾವಾ ಡಿಗನ ಹೆಂಡತಿ "ನೀನೂ ನೆನ್ನೆ ನೋಡಿದ ಹಾವೇ ಅಲ್ಲವೇ ಇದು. ಇದನ್ನು ಹೊಸದಾಗಿ ನೆನ್ನೆಯೇ ನಿಂಗಣ್ಣನ ಹಾಳಿನಲ್ಲಿ ಹಿಡಿದರು. ಹಿಡಿ

ದಾಗಲೇ ಹಲ್ಲು ಕಿತ್ತುಹಾಕಿ ಎಂದು ಹೇಳಿದೆ. ಹಾಗೆ ಮಾಡಲಿಲ್ಲ. ಆದರೆ ಎಚ್ಚರವಾಗಿದ್ದರೆ ಹಲ್ಲು ಕೀಳದಿದ್ದರೂ ಚಿಂತೆಯಿಲ್ಲ. ಆದರೆ ಅವರು ಇವತ್ತು ಅಫೀಮು ಪೂರಾ ತಿಂದುಬಿಟ್ಟರು. ಮೈಮೇಲೆ ಜ್ಞಾನವಿರಲಿಲ್ಲ. ಆ ಮತ್ತಿನಲ್ಲಿ ಹಾವಿನೊಂದಿಗೆ ಆಟವಾಡುತ್ತಿದ್ದರು. ಹೀಗೆ ಆಡುತ್ತಿರುವಾಗ ಅದರ ಹಲ್ಲನ್ನು ಕಿತ್ತಿಲ್ಲವೆಂಬುದನ್ನು ಮರೆತು ಅದಕ್ಕೆ ಅತಿ ಪ್ರೇಮವನ್ನು ತೋರಿಸುತ್ತಾ ಅದನ್ನು ಕುತ್ತಿಗೆಗೆ ನೇತುಹಾಕಿಕೊಂಡರು. ಹಾವು ಇದ್ದಕ್ಕಿದ್ದಂತೆ ಕುತ್ತಿಗೆಯನ್ನು ಅಗಿಯಿತು. ಆಗ ಅವರಿಗೆ ಬುದ್ಧಿ ಸ್ತಿಮಿತವಾಯಿತು. ಹಾವನ್ನು ಕತ್ತಿನಿಂದ ಎಳೆದು ಚೂರಿಯಿಂದ ಎರಡು ತುಂಡುಮಾಡಿದರು. ಇಬ್ಬರ ಲೀಲೆಗಳೂ ಸಮಾಪ್ತವಾದುವು.'' ಸುದರ್ಶನ ಹೊರಗಡೆ ಬಂದು ವಿಷಯಗಳನ್ನೆಲ್ಲಾ ಅನಂತುವಿಗೆ ತಿಳಿಸಿದನು. ಅನಂತು ಸುದರ್ಶನನಿಗೆ "ಅವನ ಜಾತಿ ಯಾವುದು. ಶವವನ್ನು ಹೂಳುತ್ತಾರೆಯೋ ಸುಡುತ್ತಾರೆಯೋ, ಸುಡುವುದಾದರೆ ಸೌದೆ ಕಳುಹಿಸೋಣ'' ಎಂದನು. ಸುದರ್ಶನನಿಗೂ ಹಾವಾಡಿಗನ ಜಾತಿಯಾವುದು ಎಂಬುದು ಗೊತ್ತಿರಲಿಲ್ಲ. ಆದರೆ ಅವನ ಹೆಂಡತಿ ಉತ್ತಮ ಜಾತಿಯ ಹಿಂದುವಾಗಿ ತೋರುತ್ತಿದ್ದಳು. ಸುದರ್ಶನ ಒಳಗೆ ಹೋಗಿ ಹಾವಾಡಿಗನ ಹೆಂಡತಿಯನ್ನು ಕುರಿತು "ಅವನನ್ನು ಹೂಳಬೇಕೊ ಸುಡಬೇಕೊ'' ಎಂದನು. ಅವಳು ನಾವು ಕ್ರಿಸ್ತರು ಹೂಳುತ್ತೇನೆ'' ಎಂದಳು. ಅನಂತು ಬೇಕಾದ ಏರ್ಪಾಡುಮಾಡಿ ಹೊರಟು ಹೋದನು. ಸುದರ್ಶನನೂ ಅವನ ಇತರ ಗೆಳೆಯರೂ ಅದೇ ದಿನ ರಾತ್ರಿಯೇ ಹಾವಾಡಿಗನ ಶವವನ್ನು ಸ್ಮಶಾನದಲ್ಲಿ ಸಮಾಧಿಮಾಡಿದರು. ರಾತ್ರಿ ೧೧ ಗಂಟೆ ವೇಳೆಗೆ ಹಾವಾಡಿಗನ ಹೆಂಡತಿಯೂ ನದಿಯ ನೀರಿನಲ್ಲಿ ಸ್ನಾನಮಾಡಿ ಛತ್ರಕ್ಕೆ ಬಂದಳು. ಉಳಿದವರು ತಮ್ಮ ತಮ್ಮ ಮನೆಗಳಿಗೆ ಹೋದರು. ಸುದರ್ಶನ ಮಾತ್ರ ಅಲ್ಲೇ ಕುಳಿತಿದ್ದನು. ಹಾವಾಡಿಗನ ಹೆಂಡತಿ ಒಂದು ಎಣ್ಣೆ ಬುಡ್ಡಿ ಹಚ್ಚಿದಳು. ಅನಂತರ ಏನೂ ಮಾತನಾಡದೆ ಸುಮ್ಮನೆ ಕುಳಿತುಕೊಂಡಳು.

---

# ೧೭. ಆಕೆಯ ಕಥೆ

ಒಂದು ಗಳಿಗೆಯ ನಂತರ ಸುದರ್ಶನನು " ನೀವು ಕ್ರಿಸ್ತರು ಅಂತ ನನಗೆ ತಿಳಿದಿರಲಿಲ್ಲ. ನೋಡಿದರೆ ನಮ್ಮ ಊರು ಬ್ರಾಹ್ಮಣರಿಗೂ ನಿಮಗೂ ಏನೂ ವ್ಯತ್ಯಾಸವಿಲ್ಲ. ನೀವು ಬ್ರಾಹ್ಮಣರೇ ಅಂತ ನಾನು ತಿಳಿದಿದ್ದೆ. ಕ್ರಿಸ್ತರಾಗುವುದಕ್ಕೆ ಕಾರಣವೇನು " ಎಂದನು. ಹಾವಾಡಿಗನ ಹೆಂಡತಿ ಒಂದು ಗಳಿಗೆ ಯೋಚಿಸಿ " ಅಪ್ಪಾ ಅದೆಲ್ಲಾ ಒಂದು ದೊಡ್ಡ ಕತೆ. ನೀನು ಇನ್ನೂ ಹುಡುಗ, ನಿನಗೆ ಅಂತಹ ವಿಷಯಗಳೆಲ್ಲಾ ಈಗಲೇ ತಿಳಿಯುವುದಿಲ್ಲ. ಆದರೂ ಈ ಮಾತುಗಳನ್ನು ಯಾರ ಹತ್ತಿರವಾದರೂ ಹೇಳಬೇಕು. ಇಲ್ಲದಿದ್ದರೆ ಹೊಟ್ಟೆ ಉರಿ ತೀರುವುದಿಲ್ಲ. ನಿನ್ನ ಹತ್ತಿರವೇ ಹೇಳುತ್ತೇನೆ.

" ಅಪ್ಪಾ ನನ್ನ ಕತೆಯೆಲ್ಲಾ ನಿನಗೆ ಈಗ ಅರ್ಥವಾಗುವುದಿಲ್ಲ. ಆದರೆ ಈ ಮಾತುಗಳನ್ನು ನೀನು ಜ್ಞಾಪಕದಲ್ಲಿಟ್ಟುಕ್ಕೊಂಡಿದ್ದರೆ ಮುಂದೆ ನೀನು ದೊಡ್ಡವನಾದಾಗ ಇದು ಅರ್ಥವಾಗುತ್ತೆ. ನಾನು ಬ್ರಾಹ್ಮಣ ವಂಶದಲ್ಲಿ ಹುಟ್ಟಿದವಳು. ನನ್ನ ತಂದೆ ದೊಡ್ಡ ಜಮೀನ್ದಾರ. ವೈದಿಕ ವಿದ್ಯಾವಂತ. ನನ್ನನ್ನು ಕೊಟ್ಟು ಮದುವೆ ಮಾಡುವುದಕ್ಕಾಗಿ, ಅನೇಕ ವರುಷಗಳ ಕಾಲ ಒಬ್ಬನನ್ನು ಮನೆಯಲ್ಲಿ ಸಾಕಿ ಅವನಿಗೆ ವಿದ್ಯೆ ಕಲಿಸಿ ಸಾವಿರಾರು ರೂಪಾಯಿ ಖರ್ಚುಮಾಡಿ ನನ್ನ ಮದುವೆ ಮಾಡಿದರು. ನನ್ನ ಮೈಮೇಲೆ ತುಂಬ ನಗಹಾಕಿದ್ದರು. ಮದುವೆಯಾದ ೩-೪ ದಿವಸಕ್ಕೆ ನಾವು ಬೇರೆ ಸಂಸಾರ ಮಾಡಬೇಕೆಂದು ನನ್ನ ಗಂಡ ಹಟ ಹಿಡಿದರು. ನಮ್ಮ ತಂದೆ ವಿಧಿಯಿಲ್ಲದೆ ಒಪ್ಪಿಕೊಂಡರು. ನನ್ನ ಗಂಡನಿಗೆ ಬೇರೆ ಸಂಪಾದನೆ ಇರಲಿಲ್ಲ. ನಮ್ಮ ತಂದೆಯವರೇ ಒಂದು ಬಾಡಿಗೆ ಮನೆ ಮಾಡಿ ಕೊಟ್ಟು ಪ್ರತಿ ತಿಂಗಳೂ ನಮಗೆ ಬೇಕಾದ ಸಕಲ ಸಾಂಭಾರಗಳನ್ನೂ ಒದಗಿಸುತ್ತಿದ್ದರು. ನನ್ನನ್ನು ಮದುವೆಯಾದಾಗಲೇ ನನ್ನ ಗಂಡನಿಗೆ ನನ್ನ ಮೇಲೆ ವಿಶ್ವಾಸವಿರಲಿಲ್ಲ. ಪ್ರೇಮ ಎಂಬುದು ಏನೆಂದು ನಿನಗೆ ಈಗ ಗೊತ್ತಾಗುವುದಿಲ್ಲ. ಆದರೂ ಜತೆಯಲ್ಲಿ ಒಟ್ಟಿಗೆ ಸಂಸಾರ ಮಾಡಿ ಮನಸ್ಸು ಒಲಿಸಿಕೊಳ್ಳಬಹುದೆಂದು ನಾನು ಯೋಚಿಸಿದೆ. ಆದರೆ ಅವೊಂದೂ

ಪ್ರಯೋಜನವಾಗಲಿಲ್ಲ. ನನ್ನ ಗಂಡನ ಮನಸ್ಸು ನಮ್ಮ ಊರಿನಲ್ಲಿದ್ದ ಒಬ್ಬ ಗಂಡ ಸತ್ತವಳ ಮೇಲೆ ಹೋಯಿತು. ಒಂದೊಂದಾಗಿ ನನ್ನ ಒಡವೆ ಗಳನ್ನೆಲ್ಲಾ ನನ್ನ ಗಂಡ ಕಿತ್ತುಕೊಳ್ಳತೊಡಗಿದರು. ಕೊಡುವುದಿಲ್ಲ ಎಂದರೆ ಎಲ್ಲಿ ಅವರ ಮನಸ್ಸು ಪೂರ್ಣವಾಗಿ ನನ್ನಿಂದ ಬಿಟ್ಟೇ ಹೋಗು ವುದೋ; ಒಡವೆಗಳು ಮುಗಿದ ಮೇಲೆ ಆ ವಿಧವೆಗೂ ಇವರಲ್ಲಿ ತಿರಸ್ಕಾರ ವುಂಟಾಗುತ್ತೆ. ಅನಂತರ ನನ್ನಲ್ಲಿಗೇ ಬರುತ್ತಾರೆ ಎಂಬ ಆಸೆಯಿಂದಲೂ ನಾನು ಅವರು ಕೇಳಿದ ಒಡವೆಗಳನ್ನೆಲ್ಲಾ ಕೊಟ್ಟುಬಿಟ್ಟೆ. ಕೊನೆಗೆ ನನ್ನಲ್ಲಿ ಏನೂ ಉಳಿಯಲಿಲ್ಲ. ಒಂದು ದಿವಸ ಇದ್ದಕ್ಕಿದ್ದಂತೆ ನನ್ನ ಗಂಡ ಆ ವಿಧವೆಯನ್ನು ಮನೆಗೆ ಕರೆದುಕೊಂಡು ಬಂದರು. ಅವರು ಇಬ್ಬರೂ ಒಟ್ಟಿಗೆ ಸಂಸಾರ ಮಾಡತೊಡಗಿದರು. ಗಂಡ ಒಬ್ಬನಿಗೆ ದಾಸಿಯಾಗಿದ್ದ ನಾನು, ಈಗ ಅವರಿಬ್ಬರಿಗೂ ದಾಸಿಯಾದೆನು.

"ಇಷ್ಟಾದರೂ ನನ್ನ ಕಷ್ಟ ಕೇಳುವವರು ಯಾರೂ ಇರಲಿಲ್ಲ. ನಮ್ಮ ತಾಯಿ ಸತ್ತು ಅನೇಕ ವರುಷಗಳಾಗಿದ್ದಿತು. ನಮ್ಮ ತಂದೆ ಎರ ಡನೆಯ ಮದುವೆ ಮಾಡಿಕೊಂಡಿದ್ದರು. ಮಾಡುವುದನ್ನೆಲ್ಲಾ ಮಾಡಿ ಯಾಯಿತು. ಮದುವೆ ಮಾಡಿ ಗಂಡನ ಮನೆಗೆ ಕಳುಹಿಸಿದೆ; ಇನ್ನು ಅವಳ ಹಣಪಾಡು ಎಂದು ತಂದೆ ಸುಮ್ಮನಾದರು. ಊರಿನವರಿಗೆಲ್ಲಾ ನನ್ನ ಗಂಡನ ಚಾಷ್ಟೆ ಕಣ್ಣೆದುರಿಗೆ ಸ್ಪಷ್ಟವಾಗಿ ತೋರುತ್ತಿದ್ದರೂ, ಗಂಡಸು ಏನು ಮಾಡಿದರೂ ಸರಿ ಎಂಬ ಭಾವನೆಯಿಂದಲೋ ಏನೋ, ಯಾರೂ ನನ್ನ ಗಂಡನನ್ನು ಪ್ರತಿಭಟಿಸಲೇ ಇಲ್ಲ. ಅವನ ಗೃಹಸ್ಥರು ಸಾಂಸಾರಿ ಕರು ಎನ್ನಿಸಿಕೊಳ್ಳುವ ಮಿತ್ರರೆಲ್ಲಾ ನಮ್ಮ ಮನೆಗೆ ಬಂದು ನನ್ನ ಗಂಡ ನೊಂದಿಗೆ ಮಾತುಕತೆ ಆಡಿಕೊಂಡು ಕೆಲವು ವೇಳೆ ಹಾಸ್ಯವನ್ನೂ ಮಾಡಿ ಕೊಂಡು ಹೋಗುತ್ತಿದ್ದರು. ನನ್ನ ಗಂಡನಿಗೇ ಆಗಲಿ ಅವನ ಜತೆಗಾರರು ಯಾರಿಗೇ ಆಗಲಿ ಸಮಾಜದಲ್ಲಿ ಇದರಿಂದ ಸ್ಥಾನ ಕಡಿಮೆಯಾದಂತೆಯೇ ತೋರಲಿಲ್ಲ. ನಾನು ನನ್ನ ಒಬ್ಬಿಬ್ಬರು ಗೆಳತಿಯರಲ್ಲಿ ಈ ವಿಚಾರ ಪ್ರಸ್ತಾಪಿಸಿದಾಗ ಅವರು "ಗಂಡಸರೆಲ್ಲಾ ಹೀಗೆಯೇ. ನಾವು ಅವ ರೊಂದಿಗೆ ಹೊಂದಿಕೊಂಡು ಹೋಗಬೇಕು. ಇಷ್ಟರಲ್ಲಿಯೇ ಎಲ್ಲಾ ಸರಿ ಹೋಗುತ್ತದೆ. ಅಲ್ಲಿಯವರೆಗೆ ಸಹಿಸಿಕೊಂಡಿರು" ಎಂದರು. ಒಂದು ದಿನ ವಿಧವೆ ಮನೆ ಸಾಮಾನುಗಳು ಪಾತ್ರೆಗಳು ನನ್ನ ಒಳ್ಳೆಯ ಸೀರೆಗ

ಳನ್ನಿಟ್ಟಿದ್ದ ಪೆಟ್ಟಿಗೆ ಎಲ್ಲವನ್ನೂ ಹೊತ್ತುಕೊಂಡು ಹೋದಳು. ಹೋದರೆ ಹೋಗಲಿ. ಗಂಡನಾದರೂ ಉಳಿದುಕೊಂಡ ಎಂದು ಸಮಾಧಾನದಿಂದಿದ್ದೆ. ಮೂರು ನಾಲ್ಕು ದಿನಗಳ ನಂತರ ಗಂಡನೂ ಹೇಳದೆ ಕೇಳದೆ ಮನೆಬಿಟ್ಟು ಎಲ್ಲಿಯೋ ಹೊರಟು ಹೋದನು. ನಾನು ಮನೆಯಲ್ಲಿ ಒಂದು ವಾರ ಇದ್ದೆ. ಮನೆ ಬಾಡಿಗೆ ಕೊಟ್ಟಿರಲಿಲ್ಲ. ಮನೆಯ ಯಜಮಾನ ಬಂದು ಬಾಡಿಗೆಗೆ ಹಿಂಸಿಸಿದ. ನನ್ನ ತಂದೆಯುವರಿಂದ ತಂದು ಬಾಡಿಗೆ ಕೊಟ್ಟೆ. ಮೂರು ತಿಂಗಳ ಕಾಲ ವಿಧವೆಯ ದಾಸಿಯಾಗಿದ್ದ ನಾನು ನಮ್ಮ ಚಿಕ್ಕ ತಾಯಿಯ ದಾಸಿಯಾಗಲು ಮತ್ತೆ ತಂದೆಯ ಮನೆಗೇ ಬಂದೆ.

" ಆಗ ನನಗೆ ಹದಿನೈದು ವರುಷ. ನನ್ನ ಬಾಳು ಇನ್ನೂ ಪ್ರಾರಂಭ ವೇ ಆಗಿರಲಿಲ್ಲ. ಮನೆಯಲ್ಲಿ ಚಿಕ್ಕ ತಾಯಿ ಇಲ್ಲದೆ ಇದ್ದಿದ್ದರೆ ಸಾಧಾರಣ ವಾಗಿ ನನ್ನ ವಯಸ್ಸಿನ ಹುಡುಗಿಯರನ್ನು ಗಂಡನ ಮನೆಗೆ ಕಳುಹಿಸು ತ್ತಲೇ ಇರಲಿಲ್ಲ. ನನ್ನ ಗಂಡನಿಗೆ ಒಡವೆಗಳನ್ನು ಕಸಿದುಕೊಳ್ಳುವ ಆಸೆ ಇಲ್ಲದಿದ್ದರೆ, ನಮ್ಮ ತಂದೆಯ ಮನೆಯಲ್ಲಿಯೇ ನನ್ನ ಒಡವೆಗಳನ್ನು " ಕದಿ ಯಲು " ನಮ್ಮ ತಂದೆಯು ಆಕ್ಷೇಪಿಸುವರೆಂಬ ಭಯ ಅವನಿಗೆ ಇಲ್ಲದೆ ಇದ್ದಿದ್ದರೆ, ಅವನು ೨-೩ ತಿಂಗಳು ಬೇರೆ ಸಂಸಾರ ಹೂಡುವ ನೆಪಮಾಡಿ ನನ್ನನ್ನು ತಂದೆಯ ಮನೆ ಬಿಡಿಸುತ್ತಿರಲಿಲ್ಲ. ನಾನು ನನ್ನ ತಂದೆಯ ಮನೆಗೆ ಹೋದ ೧೫ ದಿನಗಳು ಎಲ್ಲರೂ ನನ್ನಲ್ಲಿ ಕನಿಕರವುಳ್ಳವರಾಗಿಯೇ ಇದ್ದರು. ಅನಂತರ ಎಲ್ಲರಿಗೂ ನಿಧಾನವಾಗಿ ಔದಾಸೀನ್ಯ ಪ್ರಾರಂಭ ವಾಯಿತು. ಚಿಕ್ಕ ತಾಯಿಯಂತೂ " ಇವಳಿಗೆ ಮಾಡುವುದನ್ನೆಲ್ಲಾ ಮಾಡಿ ಕಳುಹಿಸಿಯಾಯಿತು ಮತ್ತೂ ಬಂದಳಲ್ಲ " ಎಂದು ಹೇಳುತ್ತಿ ದ್ದಳು. ನಮ್ಮ ತಂದೆಯುವರಿಗೂ ಅದೇ ಭಾವ ಬಂದಿತ್ತು. ಇವಳಿಗೆ ಕೊಡುವು ದನ್ನೆಲ್ಲಾ ಕೊಟ್ಟಾಯಿತು. ಇನ್ನು ಇವಳು ಗಂಡನೊಂದಿಗೆ ಬಾಳುವು ದನ್ನು ಕಲಿಯಬೇಕು. ಕಷ್ಟಪಡುವುದನ್ನೂ ಕಲಿಯಬೇಕು. ನಾವು ಎಷ್ಟು ದಿವಸ ಅಂತ ಆತುಕೊಳ್ಳುವುದು ; ಕಟ್ಟಿ ಕೊಟ್ಟ ಬುತ್ತಿ ಎಷ್ಟು ದಿವಸ ಬರುತ್ತೆ " ಎನ್ನುತ್ತಿದ್ದರು. ಹೀಗೆಯೇ ಇನ್ನೂ ಒಂದು ವರುಷ ಕಳೆದುಹೋಯಿತು. ನನ್ನ ಗಂಡ ಬರುತ್ತಾನೆ ಬರುತ್ತಾನೆ ಎಂದು ನೋಡಿ ಯಾಯಿತು. ಅವನು ಬರಲಿಲ್ಲ. ಅವನ ವಿಳಾಸ ಕಂಡು ಹಿಡಿಯಬೇ ಕೆಂದು ನಾವು ಮಾಡಿದ ಪ್ರಯತ್ನವೆಲ್ಲಾ ವ್ಯರ್ಥವಾಯಿತು. ಸುತ್ತ

ಮುತ್ತಲ ಸಂಸಾರಗಳವರು ನನ್ನನ್ನು ನೋಡಿ ದೂರಿಕೊಳ್ಳುತ್ತಿದ್ದರು. ಇವಳಿಗೆ ಏನು ಬಂದಿದೆ. ಯಾಕೆ ಗಂಡನ ಮನೆಗೆ ಹೋಗುವುದಿಲ್ಲ ಎನ್ನುತ್ತಿದ್ದರು. ಅವರಿಗೆ ತಪ್ಪೆಲ್ಲಾ ನನ್ನದೇ ಎಂಬಂತೆ ತೋರುತ್ತಿದ್ದಿತು. ನನ್ನ ಗಂಡನ ತಪ್ಪನ್ನು ಯಾರೂ ಒಪ್ಪುತ್ತಲೇ ಇರಲಿಲ್ಲ. ನನ್ನ ಮುಖವೇ ಜನಕ್ಕೆ ಅಪಶಕುನವಾಯಿತು.

" ಹೀಗೆ ಇನ್ನೂ ಮೂರು ವರುಷ ಕಳೆಯಿತು. ನನ್ನ ಗಂಡ ಮಂಗಳೂರಿನಲ್ಲಿದ್ದಾನೆ ಎಂದು ಯಾರೋ ಹೇಳಿದರು. ಮಂಗಳೂರಿಗೆ ಹೋಗಿದ್ದವರೊಬ್ಬರು ಬಂದು ಅವನಿಗೆ ಅಲ್ಲಿ ಕೆಲಸ ಸಿಕ್ಕಿದೆ ಎಂದು ವಿಳಾಸವನ್ನು ಹೇಳಿದರು. ನನಗೂ ತಂದೆಯ ಮನೆಯಲ್ಲಿ ಚಿಕ್ಕಮ್ಮನ ತಿರಸ್ಕಾರವನ್ನು ಉಂಡು ಸಾಕಾಗಿತ್ತು. ಹೇಗಾದರೂ " ಹಿಂದೂ ಮಹಿಳೆಗೆ ಅಗ್ನಿ ಸಾಕ್ಷಿಯಾಗಿ ಮದುವೆಯಾದ ಗಂಡನ ಜತೆಯಲ್ಲಿ ಸಂಸಾರ ಮಾಡುವುದೇ ಆದರ್ಶ ; ಎಷ್ಟು ಕಷ್ಟಬಂದರೂ ಸರಿಯೆ. ಆ ಆದರ್ಶವನ್ನು ಬಿಡಬಾರದು " ಎಂದು ನನಗೂ ಚೆನ್ನಾಗಿ ಮಂದಟ್ಟಾಗಿಗ್ದಿತು. ಗಂಡನ ಮನೆಯಲ್ಲಿ ಸತ್ತರೂ ಚಿಂತೆಯಿಲ್ಲ. ಮದುವೆಯಾದ ಮೇಲೆ ಮಾತ್ರ ತಂದೆಯ ಮನೆಯಲ್ಲಿ ಇರಬಾರದು ಎಂಬುದು ನನ್ನ ಹಗಲು ರಾತ್ರಿಯ ಆಸೆಯಾಯಿತು. ನಾನು ಬಲಾತ್ಕಾರವಾಗಿ ನಮ್ಮ ತಂದೆಯನ್ನು ಮಂಗಳೂರಿಗೆ ಹೊರಡಿಸಿದೆ. ಮೊದಲು ಮೊದಲು ಅವರು ಒಪ್ಪಲಿಲ್ಲ. ಕಾಗದ ಒರೆಯೋಣ ಎಂದರು. ಕಾಗದ ಬರೆದರೆ ಎಲ್ಲಿ ನನ್ನ ಗಂಡ ಊರು ಬಿಟ್ಟು ಹೋಗಿ ನಮಗೆ ಮತ್ತೆ ಅವರ ವಿಳಾಸವೇ ಸಿಕ್ಕುವುದಿಲ್ಲವೋ ಎಂದು ನಾನು ಹೆದರಿದೆ. ನನ್ನ ಜತೆಯಲ್ಲಿ ತಂದೆಯನ್ನು ಮಂಗಳೂರಿಗೆ ಕಳುಹಿಸಲು ನಮ್ಮ ಚಿಕ್ಕ ತಾಯಿಗೆ ಇಷ್ಟವಿಲ್ಲದಿರಲು ಕಾರಣ, ಎಲ್ಲಿ ಬೇರೆ ಊರಿನಲ್ಲಿ, ಹೋದಾಗ ನನ್ನ ಗಂಡ ಮತ್ತೆ ಏನಾದರೂ ದುಡ್ಡು ಕೇಳುತ್ತಾನೋ, ಅದನ್ನು ಎಲ್ಲಿ ನಮ್ಮ ತಂದೆಯವರು ಕೊಟ್ಟುಬಿಡುತ್ತಾರೋ ಎಂಬ ಭಯವೇ ಆಗಿತ್ತು. ಹಾಗೆ ಆಗುವುದಾದರೆ ಇದೇ ಊರಿನಲ್ಲಿ ಆದರೆ ತನ್ನ ಕೈವಾಡದಿಂದ ಅದನ್ನು ತಪ್ಪಿಸಬಹುದೆಂದು ನನ್ನ ಚಿಕ್ಕ ತಾಯಿಗೆ ಆಸೆ ಇದ್ದಿತು. ನಮ್ಮ ತಂದೆಯನ್ನು ಮಂಗಳೂರಿಗೆ ಕರೆದುಕೊಂಡು ಹೋಗಲು ನನಗಿದ್ದ ಆಸೆಯೂ ನನ್ನ ಮಲತಾಯಿಗೆ ಇದ್ದ ಭಯವೇ. " ತಂದೆಯನ್ನು ಜತೆಯಲ್ಲಿ ಕರೆದುಕೊಂಡು ಹೋಗಿ ಹೇಗಾದರೂ ಮಾಡಿ ಗಂಡ

ನನ್ನು ಪತ್ತೆಮಾಡಿ ಅವನ ಜತೆಯಲ್ಲಿ ಸಂಸಾರ ಮಾಡಬೇಕು. ಇದಕ್ಕಾಗಿ ಎಷ್ಟು ಖರ್ಚಾದರೂ ಸರಿಯೆ; ಖರ್ಚಾಗುವ ಸಮಯ ಬಂದರೆ ಜತೆಯಲ್ಲಿ ತಂದೆ ಇರಬೇಕು.''

'' ಕಡೆಗೆ ನಮ್ಮ ತಂದೆ ಒಂದು ಸಲ ಧೈರ್ಯಮಾಡಿ '' ಹೊರಡು ತ್ತೇನೆ '' ಎಂದರು. ಅವರು ಅದು ವರೆಗೆ ಎಂದಿಗೂ ಹೆಂಡತಿಯ ಮಾತಿಗೆ ಎದುರಾಗಿ ಹೇಳಿದವರಲ್ಲ. ನಮ್ಮ ಚಿಕ್ಕ ತಾಯಿ ನಮ್ಮ ತಂದೆಯನ್ನು ಬೆಕ್ಕು ಇಲಿಯನ್ನು ಆಡಿಸುವಂತೆ ಆಡಿಸುತ್ತಿದ್ದಾಗ ನನಗೆ ನಾನೂ ನನ್ನ ಗಂಡನಿಗೆ ಎರಡನೆಯ ಹೆಂಡತಿಯಾಗಿದ್ದರೆ ಅವರು ನನ್ನ ಮಾತನ್ನು ಕೇಳು ತ್ತಿದ್ದರೇನೋ ಎನ್ನಿಸುತ್ತಿದ್ದಿತು. ಅಂತೂ ನಮ್ಮ ತಂದೆ ಧೈರ್ಯಮಾಡಿ ಬಿಟ್ಟರು. ನಾನೂ ಅವರೂ ಮಂಗಳೂರಿಗೆ ಹೋದೆವು. ಮಂಗಳೂರಿ ನಲ್ಲಿ ಒಂದು ಛತ್ರದಲ್ಲಿ ಇಳಿದುಕೊಂಡು, ನಮ್ಮ ತಂದೆಯವರು ನನ್ನ ಗಂಡನು ಕೆಲಸದಲ್ಲಿರುವುದಾಗಿ ತಿಳಿದಿದ್ದ ವಿಳಾಸಕ್ಕೆ ಹೋಗಿ ವಿಚಾರಿಸಿ ದರು. ಅದು ಒಂದು ದೊಡ್ಡ ಕಾಫಿ ಮಂಡಿ, ಅದರ ಯಜಮಾನ ನಮ್ಮ ತಂದೆಯವರನ್ನು ನೋಡಿ '' ನೀವು ಅಳಿಯನೆಂದು ಹೇಳಿಕೊಳ್ಳುವ ಮನುಷ್ಯ ಇಲ್ಲಿ ಈಗ ಒಂದು ತಿಂಗಳಿನ ವರೆಗೆ ಇದ್ದ. ಅವನ ಕೆಲಸ ಇಲ್ಲಿ ಅಸಮರ್ಪಕವಾಗಿದ್ದಿತು. ಅವನ ಮೇಲೆ ಕಂಪನಿಯ ಹಣ ತಿಂದ ಆಪಾ ದನೆಯೂ ಬರುವ ಸ್ಥಿತಿ ಇತ್ತು. ಒಂದು ದಿನ ಅವನು ಹೇಳದೆ ಕೇಳದೆ ಆಫೀಸಿಗೆ ಬರುವುದನ್ನು ಬಿಟ್ಟುಬಿಟ್ಟ. ಈಚೆಗೆ ಲೆಕ್ಕಾ ನೋಡುವುದರಲ್ಲಿ ಅವನು ಅನೇಕ ನೂರು ರೂಪಾಯಿಗಳನ್ನು ಈ ಮಂಡಿಯಿಂದ ತಿಂದಿ ದ್ದಾನೆ. ಇನ್ನು ಅವನ ಮೇಲೆ ಯಾವ ಕಾರ್ಯಕ್ರಮ ನಡೆಸಬೇಕೋ ನಾವು ತೀರ್ಮಾನಿಸಿಲ್ಲ '' ಎಂದನು. ನನ್ನ ತಂದೆಯವರಿಗೆ ನನ್ನ ಗಂಡ ಮಂಗ ಳೂರಿನಲ್ಲಿಯೇ ಇದ್ದಾರೋ ಇಲ್ಲವೋ ತಿಳಿಯುವುದು ಸಹ ಕಷ್ಟವಾ ಯಿತು. ಹೀಗೆ ನಾಲ್ಕು ಐದು ದಿನ ಹುಡುಕುವುದರೊಳಗಾಗಿ ಮಂಗ ಳೂರಿನ ಒಂದು ವಿಸ್ತರಣದಲ್ಲಿ ನನ್ನ ಗಂಡ ಇರುವ ಮನೆ ಗೊತ್ತಾಯಿತು. ನಾನೂ ನಮ್ಮ ತಂದೆಯವರೂ ಆ ಮನೆಗೆ ಹೋದೆವು.

'' ಮನೆಯ ಬಾಗಿಲು ಹಾಕಿತ್ತು. ಬಾಗಿಲನ್ನು ನಾನು ತಟ್ಟಿದೆ. ಒಳಗಿನಿಂದ ಬಾಗಿಲು ತೆರೆಯಿತು. ತೆರೆದವಳು ಒಬ್ಬ ಸ್ತ್ರೀ. ಯಾವ ಸ್ತ್ರೀಯು ನಮ್ಮ ಊರಿನಲ್ಲಿ ನನ್ನ ಗಂಡನ ಜತೆಯಲ್ಲಿ ಸಂಸಾರ ಮಾಡಿ

ಕೊಂಡಿದ್ದಳೋ ಅವಳೇ ಇಲ್ಲೂ ಇದ್ದಳು. ಊರು ಬಿಟ್ಟು ಬರುವಾಗ ನನಗೆ ಇದು ತಿಳಿದಿರಲಿಲ್ಲ. ಗಂಡ ಒಬ್ಬನೇ ಎಲ್ಲಿಯೋ ಅಲೆಯುತ್ತಿದ್ದಾರೆ ಎಂದುಕೊಂಡೆ. ಈಗ ನೋಡಿದರೆ ಅವರಿಗೆ ನನ್ನ ಆವಶ್ಯಕತೆ ಇಲ್ಲ. ಅವರ ಪಾಲಿಗೆ ಅವರು ಸುಖವಾಗಿದ್ದಾರೆ. ಆದರೆ ನನಗೆ ಇರುವುದಕ್ಕೇ ಜಾಗ ವಿಲ್ಲವೆಲ್ಲ? ನೋಡಿದರೆ ಅವರು ಗಂಡ, ನಾನು ಹೆಂಡತಿ. ಈಗ ಅವರು ಸಂಸಾರಮಾಡಿಕೊಂಡಿರುವುದು ಬೇರೆ ಒಂದು ಸ್ತ್ರೀಯ ಜತೆಯಲ್ಲಿ. ಈ ಮಧ್ಯೆ ನನ್ನ ಸ್ಥಾನ ಯಾವುದು? ತಂದೆತಾಯಿ ನೆರೆಹೊರೆಯವರು ಗಂಡನ ಮನೆಗೆ ಹೋಗು ಎನ್ನುತ್ತಾರೆ. ಗಂಡ, ಗಂಡ ಸತ್ತವಳ ಗುಲಾಮ ನಾಗಿದ್ದಾರೆ. ನನಗೆ ದಿಕ್ಕು ಯಾವುದು? ದಾರಿ ಯಾವುದು?

"ಒಳಗೆ ಹೋಗಿ ಕುಳಿತುಕೊಂಡಕೂಡಲೆ ನನ್ನ ಗಂಡ ಬಂದರು. ಅವರಿಗೆ ನನ್ನನ್ನು ನೋಡಿ ಸ್ವಲ್ಪವೂ ಸಮಾಧಾನವಾಗಲಿಲ್ಲ." ನನಗೆ ಕಾಗದ ಬರೆಯದೆ ನೀವು ಯಾಕೆ ಬಂದಿರಿ" ಎಂದು ಕೇಳಿದರು. ನಮ್ಮ ತಂದೆಯವರು ಹೇಳಬೇಕಾದುದನ್ನೆಲ್ಲಾ ಹೇಳಿದರು. "ನಿನ್ನ ಹೆಂಡತಿ ಯನ್ನು ನಿನ್ನೊಂದಿಗೆ ಬಿಟ್ಟು ಹೋಗಲು ಬಂದಿದ್ದೇನೆ. ಇನ್ನು ನಿನ್ನ ಹಣಪಾಡು" ಎಂದರು. ನನ್ನ ಗಂಡ "ನನಗೆ ಅವಳನ್ನು ಸಾಕುವುದಕ್ಕೆ ಸಾಧ್ಯವಿಲ್ಲ. ನನ್ನ ಹುದ್ದೆ ಹೋಯಿತು. ನಿರುದ್ಯೋಗಿಯಾಗಿದ್ದೇನೆ. ಸಾವಿರ ರುಪಾಯಿ ಕೊಡಿ. 'ಒಂದು ಅಂಗಡಿ ಇಡುತ್ತೇನೆ. ಅದರಿಂದ ಜೀವನವಾಗುತ್ತೆ" ಎಂದರು. ನನ್ನ ತಂದೆಯವರು ರುಪಾಯಿ ಕೊಡಲು ಒಪ್ಪಲಿಲ್ಲ. "ಹಿಂದೆ ನೀನು ನಿನ್ನ ಹೆಂಡತಿಯ ಮೈಮೇಲಿದ್ದ ಮೂರು ನಾಲ್ಕು ಸಾವಿರ ರುಪಾಯಿ ಒಡವೆ ಕಳೆದೆ. ಈಗ ನಿನ್ನ ಜತೆಯಲ್ಲಿ ಆ ವಿಧವೆ ಇನ್ನೂ ಇದ್ದಾಳೆ. ಈಗ ನಾನು ರುಪಾಯಿ ಕೊಟ್ಟರೆ ಅದಕೂ ಹಿಂದಲ ರುಪಾಯಿಗೆ ಆದ ಗತಿಯೇ ಆಗುತ್ತದೆ. ವಿಧವೆಯನ್ನು ಇಲ್ಲಿಂದ ಕಳುಹಿಸಿಬಿಡು. ಇಲ್ಲದಿದ್ದರೆ ನೀನೆ ಊರಿಗೆ ಬಾ. ಅಲ್ಲಿ ಹೋಗಿ ನಿನಗೆ ಬೇಕಾದ ಕಸಬು ಮಾಡುವಿಯಂತೆ. ಬೇಕಾದ ಹಣ ಸಹಾಯ ಈ ಪರಸ್ಥಳ ಕ್ಕಿಂತ ಅಲ್ಲಿ ಚೆನ್ನಾಗಿ ದೊರೆಯುತ್ತದೆ" ಎಂದರು. ನನ್ನ ಗಂಡ "ಅದೆಲ್ಲಾ ನಿಧಾನವಾಗಿ ಮಾಡುವ ಮಾತು. ಈಗ ಸದ್ಯಕ್ಕೆ ಸಾವಿರ ರುಪಾಯಿ ಕೊಡಿ. ನಿಮ್ಮ ಮಾತಿನಂತೆ 8-10 ದಿನಗಳೊಳಗೆ ಒಳಗೆ ಇರುವವಳನು ಅವಳ ಮನೆಗೆ ಕಳುಹಿಸಿಬಿಡುತ್ತೇನೆ" ಎಂದರು. ನಮ್ಮ ತಂದೆಯವರಿಗೆ

ಸ್ವಲ್ಪವೂ ನಂಬಿಕೆಯುಂಟಾಗಲಿಲ್ಲ. ಸಾವಿರ ರುಪಾಯಿ ಕೀಳಲು ಅಳಿಯ ಇದೊಂದು ಉಪಾಯಮಾಡಿದ್ದಾನೆ ಎಂದು ಅವರಿಗೆ ತಿಳಿಯದಿರಲಿಲ್ಲ. ನನಗೂ ಹಾಗೆಯೇ ಅನ್ನಿಸಿತು. ಆದರೂ ನನಗೆ ಏನೋ ಒಂದು ನಂಬಿಕೆ. "ನಾನು ಹೆಂಡತಿ; ಅವರು ಗಂಡ. ಹೇಗಾದರೂ ಇವತ್ತಲ್ಲ ನಾಳೆಯಾದರೂ ಇವರನ್ನು ನನ್ನ ಮಾರ್ಗಕ್ಕೆ ತಿರುಗಿಸುತ್ತೇನೆ. ಇನ್ನು ಇವರ ಸಮೀಪವನ್ನು ಬಿಟ್ಟು ಹೋಗುವುದೇ ಇಲ್ಲ" ಎಂದುಕೊಂಡು "ತಂದೆಯೇ ಕೊಟ್ಟುಬಿಡಿ." ಎಂದು ಕೇಳಿಕ್ಕೊಂಡೆ. ನನ್ನ ತಂದೆಯವರು "ನಿನಗೆ ಈ ಮನೆಯಲ್ಲಿ ಆ ಮತ್ತೊಬ್ಬಳ ಜತೆಯಲ್ಲಿ ಸಂಸಾರಮಾಡುವುದಕ್ಕೆ ಆಗುತ್ತದೆಯೇ" ಎಂದರು. ನಾನು "ಇಲ್ಲ. ಅವಳನ್ನು ಬಡಿದು ಓಡಿಸುತ್ತೇನೆ" ಎಂದೆ. ನಮ್ಮ ತಂದೆಯವರು ನನ್ನ ಗಂಡನಿಗೆ ಹಣ ಕೊಟ್ಟು, "ಹೆಂಡತಿಯನ್ನು ಚೆನ್ನಾಗಿ ನೋಡಿಕೊ ಆದದ್ದು ಆಗಿಹೋಯಿತು. ಆ ಇನ್ನೊಬ್ಬಳನ್ನು ಹೊರಡಿಸಿಬಿಡು" ಎಂದು ಹೇಳಿ ನನ್ನನ್ನು ನೋಡಿ ಕಣ್ಣೀರುಬಿಟ್ಟು ಊರಿಗೆ ಹೋದರು.

ಇದಾದ ಹದಿನೈದು ದಿನಗಳವರೆಗೆ ನಾನು ನನ್ನ 'ಸವತಿ'ಯ ಜತೆಯಲ್ಲಿಯೇ ಸಂಸಾರ ಮಾಡಿಕೊಂಡಿದ್ದೆ. ಯಾವ ಉಪಾಯದಿಂದ ಅವಳನ್ನು ಹೊರಡಿಸುವುದು ಎಂದು ಯೋಚಿಸುತ್ತಲಿದ್ದೆ. ಒಂದುದಿನ ಅವರಿಬ್ಬರೂ ಗಾಡಿಯಲ್ಲಿ ಕುಳಿತು ಅಂಗಡಿಬೀದಿಗೆ ಹೋದರು. ನಾನು ಒಬ್ಬಳೇ ಮನೆಯಲ್ಲಿ ಉಳಿದೆ. ೨-೩ ಗಂಟೆಯನಂತರ ಸಂಸಾರಕ್ಕೆ ಬೇಕಾದ ಅನೇಕ ಸಾಮಾನುಗಳು, ಅವಳಿಗೆ ಸೀರೆ ಜಾಕೆಟ್‌ಗಳು ಇವುಗಳನ್ನೆಲ್ಲಾ ತೆಗೆದುಕೊಂಡು ಮನೆಗೆ ಬಂದರು. ಆಗ ಸಾಯಂಕಾಲವಾಗಿದ್ದಿತು. ಗಾಡಿಯ ಸಾಮಾನುಗಳನ್ನು ಇಳಿಸಿ ಗಾಡಿಯನ್ನು ಹಿಂದಕ್ಕೆ ಕಳುಹಿಸಿದ ನಂತರ ಮನೆಯ ಬಾಗಿಲನ್ನು ಹಾಕಿಕ್ಕೊಂಡು ನನ್ನ ಗಂಡನೂ ಸವತಿಯೂ ನನಗೆ ಚೆನ್ನಾಗಿ ಕೋಲಿನಿಂದ ಬಡಿದರು. ಇಬ್ಬರೂ ಸುಧಾರಿಸಿಕ್ಕೊಂಡು ಒಬ್ಬರಾದಮೇಲೆ ಒಬ್ಬರು ಬಡಿದರು. ಪ್ರಾಯಶಃ ಅವರು ಹೊರಗೆ ಹೋಗಿದ್ದಾಗ ಈ ರೀತಿ ಮಾತನಾಡಿಕೊಂಡು ಬಂದಿದ್ದಿರಬಹುದೆಂದು ತೋರುತ್ತದೆ. ನಾನು ಎಷ್ಟು ಹೊಡೆದರೂ ಹೊಡೆಯಲಿ ಎಂದು ಸಹಿಸಿಕೊಂಡು ಸುಮ್ಮನೆಯೇ ಇದ್ದೆ. ನನ್ನ ಮೈಕೈ ಬೆನ್ನು ಕೋಲಿನ ಏಟಿಗೆ ಬಾಸುಂಡೆಯಿಂದ ಊದಿಕೊಂಡಿತು. ಹೀಗೆ ತಮಗೆ ಸುಸ್ತು ಆಗುವ

ವರೆಗೆ ನನ್ನನ್ನು ಬಡಿದು ಇಬ್ಬರೂ ಸೇರಿ ಹೊರಕ್ಕೆ ತಳ್ಳಿಬಿಟ್ಟು ಬಾಗಿಲು ಹಾಕಿಕೊಂಡರು.

"ಆ ವೇಳೆಗೆ ಸರಿಯಾಗಿ ಆ ಮಾರ್ಗದಲ್ಲಿ ಬೈಸಿಕಲ್ಲು ಏರಿಕೊಂಡು ಒಬ್ಬರು ಬಂದರು. ಸುಮಾರು ೨೫ ವಯಸ್ಸಿನವರು. ನನ್ನನ್ನು ಮನೆಯವರು ಹೊರಕ್ಕೆ ತಳ್ಳಿದುದನ್ನು ಅವರು ನೋಡಿದರು. ಸಂಕೋಚದಿಂದ ಏನು ಅಂತ ವಿಚಾರಿಸಿದರು. ನಾನೂ ಸಂಕೋಚದಿಂದಲೇ ಪ್ರತ್ಯುತ್ತರ ಕೊಟ್ಟೆ. ಅವರು ನನ್ನ ಗಂಡನನ್ನು ಹೋಗಿ ಬೈದು ಹೆಂಡತಿಯನ್ನು ಒಳಕ್ಕೆ ಕರೆದುಕೊ ಎಂದು ಹೇಳಿದರು. ಅವರು ಒಪ್ಪಲಿಲ್ಲ. "ನಾನು ಅವಳನ್ನು ಬರಹೇಳಲಿಲ್ಲ; ಬಂದಳು; ಅನುಭವಿಸಲಿ ಅವಳು ನನಗೆ ಬೇಕಿಲ್ಲ" ಎಂದರು. ನನ್ನನ್ನು ಮಾತನಾಡಿಸಿದುದು ಅವರಿಗೆ ಕಷ್ಟಕ್ಕೇ ಬಂದಿತು. ಕೊನೆಯಲ್ಲಿ ನಾನು ಹಿಂದೆ ಯಾವ ಛತ್ರದಲ್ಲಿ ಇಳಿದುಕೊಂಡಿದ್ದೆನೋ ಆ ಛತ್ರಕ್ಕೇ ಇಬ್ಬರೂ ಬಂದು ಅಲ್ಲೇ ಒಂದು ಕೋಣೆಯನ್ನು ತೆಗೆದುಕೊಂಡೆವು. ಆ ರಾತ್ರಿ ಅವರೇ ನಾನು ಬ್ರಾಹ್ಮಣರವಳು ಎಂದು ತಿಳಿದು ಹೋಟಲಿನಿಂದ ಊಟ ತರಿಸಿದರು. ನನ್ನ ಹತ್ತಿರ ಹಾಸಿಗೆ ಹೊದ್ದಿಕೆ ಇರಲಿಲ್ಲ. ಒಂದು ಜಮಖಾನ ದಿಂಬು ಒಂದು ದುಪಟಿ ಅಂಗಡಿಯಿಂದ ೪-೫ ರುಪಾಯಿ ಕೊಟ್ಟು ಕೊಂಡುಕೊಂಡು ಬಂದರು. "ನನ್ನದು ಈ ಊರಲ್ಲ. ಹಳ್ಳಿ; ಇಲ್ಲಿ ನಾನು ಉದ್ಯೋಗ ಹುಡುಕುತ್ತಾ ತಿರುಗುತ್ತಿದ್ದೇನೆ. ಯಾರೋ ಗುರುತು ಇರುವವರ ಮನೆಯ ಬಾಗಿಲು ಕೊಠಡಿಯಲ್ಲಿ ಮಲಗುತ್ತಿದ್ದೇನೆ. ಹೋಟಲಿನಲ್ಲಿ ಊಟಮಾಡುತ್ತಿದ್ದೇನೆ. ರಾತ್ರಿ ಕಳೆಯಲಿ. ಬೆಳಗ್ಗೆ ಮತ್ತೆ ನಿಮ್ಮ ಗಂಡನಬಳಿ ಹೋಗಿ ಹೇಳುತ್ತೇನೆ. ನಿಮಗೆ ತಾಯಿ ತಂದೆ ಯಾರಾದರೂ ಇದ್ದಾರೆಯೇ, ಅವರ ವಿಳಾಸ ಹೇಳಿ. ಕಾಗದ ಬರೆಯೋಣ ಇಲ್ಲದಿದ್ದರೆ ನೀವು ಒಪ್ಪುವುದಾದರೆ ಕರೆದುಕೊಂಡು ಹೋಗುತ್ತೇನೆ. ನಡಿಯಿರಿ" ಎಂದು ಹೇಳಿ ಅವರು ಬೈಸಿಕಲ್ಲನ್ನು ಏರಿಕೊಂಡು ತಮ್ಮ ಮನೆಗೆ ಹೋದರು.

"ಆ ರಾತ್ರಿ ನನಗೆ ಸ್ವಲ್ಪವೂ ನಿದ್ರೆ ಬರಲಿಲ್ಲ. ಊಟವಂತೂ, ಹೋಟಲಿನಿಂದ ಬಂದದ್ದು ಅಲ್ಲೇ ಇದ್ದಿತು. ಮೈ ಕೈ ಕಾಲುಗಳನ್ನೆಲ್ಲಾ ನೋವಿನಿಂದ ಅಲ್ಲಾಡಿಸುವುದಕ್ಕೆ ಸಹ ಆಗುವಂತೆ ಇರಲಿಲ್ಲ. ಅಂತೂ ಬೆಳಗಾಯಿತು. ಸುಮಾರು ೮ ಗಂಟೆ ಹೊತ್ತಿಗೆ ಅವರು ಬೈಸಿಕಲ್ಲಿನ

ಮೇಲೆ ಬಂದರು. ಮುಖ ಸ್ವಲ್ಪ ಪೆಚ್ಚಾಗಿದ್ದಿತು. ಬಂದವರೇ "ಮನೆಗೆ ಹೋಗಿದ್ದೆ. ಮನೆ ಖಾಲಿ. ಇಬ್ಬರೂ ನೆನ್ನೆ ರಾತ್ರಿಯೇ ಎಲ್ಲಿಗೋ ಹೊರಟು ಹೋಗಿದ್ದಾರೆ. ಎಲ್ಲಿಗೆ ಎಂಬುದು ಯಾರಿಗೂ ಗೊತ್ತಿಲ್ಲ. ಪುನಃ ಅವರು ಇಲ್ಲಿ ಬರುವಂತೆ ಕಾಣುವುದಿಲ್ಲ. ಎಲ್ಲಾ ಸಾಮಾನುಗಳನ್ನೂ ತೆಗೆದು ಕೊಂಡು ಹೋಗಿಬಿಟ್ಟಿದ್ದಾರೆ" ಎಂದರು. ನನಗೆ ಕೈಕಾಲಿನ ಶಕ್ತಿಯೇ ಉಡುಗಿದಂತೆ ಆಯಿತು.

"ನನ್ನ ಊರು, ತಂದೆಯ ವಿಳಾಸ ಅವರು ಬಹಳ ವಿಚಾರಿಸಿದರು. ನಾನು ಹೇಳಲೇ ಇಲ್ಲ. ಮತ್ತೆ ಊರಿಗೆ ಹೋಗಲು ನನಗೆ ಖಂಡಿತ ಇಷ್ಟವಿರಲಿಲ್ಲ. ನಮ್ಮ ತಂದೆಯವರಿಗೆ ನನ್ನ ಸ್ಥಿತಿಯನ್ನು ತಿಳಿಸಲೂ ನನಗೆ ಇಷ್ಟವಿರಲಿಲ್ಲ. ನಾನು "ನನಗೆ ತಾಯಿ ತಂದೆ ಯಾರೂ ಇಲ್ಲ. ಊರೂ ಇಲ್ಲ. ನನಗೆ ಊರಿಗೆ ವಾಪಸು ಹೋಗುವ ಇಷ್ಟವಿಲ್ಲ. ಆದ್ದರಿಂದ ನಿಮ್ಮ ದಾರಿ ನೀವು ನೋಡಿಕೊಳ್ಳಿ. ನಾನು ನನಗೆ ದೇವರು ಕೊಟ್ಟದಾರಿ ಹುಡುಕಿಕೊಂಡು ಹೋಗುತ್ತೇನೆ. ಮದುವೆಯಾಗಿ ಗಂಡ ಬಿಟ್ಟ ಹಿಂದೂ ಸ್ತ್ರೀಗೆ ಉಳಿದಿರುವುದು ಸಾವು ಒಂದೇ. ಸಾಯುವುದಕ್ಕೆ ಹೆಚ್ಚು ಕಷ್ಟ ಪಡಬೇಕಾದುದಿಲ್ಲ" ಎಂದೆ. ಅವರು "ಅದೆಲ್ಲಾ ಈಗ ಯಾಕೆ. ಸುಮ್ಮನೆ ಇಲ್ಲಿ 8 ದಿವಸ ಇರಿ. ನಿಮ್ಮ ಗಂಡ ಇಲ್ಲಿಯೇ ಸುತ್ತಮುತ್ತ ಯಾವುದೋ ಊರು ಸೇರಿರಬಹುದು" ಎಂದರು. ಇನ್ನು ಅವರನ್ನು ಮತ್ತೆ ಹುಡುಕುವುದು ಕಷ್ಟ ಎಂದು ನನಗೆ ಗೊತ್ತಿತ್ತು. ಆದರೂ ನನಗೆ ಏನೂ ಬೇರೆ ದಾರಿಯಿಲ್ಲದುದರಿಂದ ಸುಮ್ಮನಾದೆ.

"ಹೀಗೆ ಇನ್ನೂ ಆರು ತಿಂಗಳು ಕಳೆಯಿತು. ನನ್ನ ಗಂಡನ ಸಮಾಚಾರ ತಿಳಿಯಲು ಅವರು ಪಟ್ಟ ಸಾಹಸವೆಲ್ಲಾ ವ್ಯರ್ಥವಾಯಿತು. ಕೆಲವರು ಅವರು ಬೊಂಬಾಯಿಗೆ ಹೋದರು ಎಂದರು. ಕೆಲವರು ಪಾಂಡಿಚರಿಗೆ ಹೋದರು ಎಂದರು. ನನ್ನ ಬಾಳು ದಿನ ದಿನಕ್ಕೆ ಕಷ್ಟವಾಯಿತು. ಮಧ್ಯೆ ಟೈಫಾಯಿಡ್ ಜ್ವರ ಬಂತು. ಹಾಳು ಪ್ರಾಣ ಹೋದರೆ ಹೋಗಲಿ ಅಂತ ಸುಮ್ಮನೆ ಇದ್ದೆ. ಆದರೆ ಅವರು ಸುಮ್ಮನಿರಲಿಲ್ಲ. ಯಾರೋ ಅವರ ಜತೆಯಲ್ಲಿ ಬಾಲ್ಯದಲ್ಲಿ ಓದಿದ ಸ್ನೇಹಿತರಂತೆ. ಕರೆದು ಕೊಂಡು ಬಂದು ಔಷಧಿ ಕೊಡಿಸಿದರು. ಹಗಲು ರಾತ್ರಿ ನನ್ನ ಹಾಸಿಗೆ ಹತ್ತಿರವೇ ಕುಳಿತಿರುತ್ತಿದ್ದರು. ಅವರಿಗೆ ಸರಿಯಾಗಿ ನಿದ್ರೆ ಊಟ ಇರಲಿಲ್ಲ.

ಅವರ ಬೈಸಿಕಲ್ ಗಡಿಯಾರ ಫೌಂಟನ್‌ಪೆನ್ ಕೊಸೆಗೆ ಮೈಮೇಲಿದ್ದ ಹೊಸ ಕೋಟು ಎಲ್ಲಾ ಒಂದೊಂದಾಗಿ ಹೋದುವು. ಅವರು ನನಗೆ ಮಾಡಿದ ಸೇವೆ ಅಷ್ಟು ಇಷ್ಟು ಅಲ್ಲ. ತಾಯಿ ಮಗುವಿಗೆ ಮಾಡುವಂತೆ ತಮ್ಮ ಸಮಸ್ತ ಸುಖವನ್ನೂ ತೊರೆದು ನನ್ನ ಸೇವೆ ಮಾಡಿದರು. ಮೊದಲು ಮೊದಲು ನನಗೆ ಬಹು ಸಂಕೋಚವಾಯಿತು. ಆದರೆ ನಾನು ಖಾಯಿಲೆ ಬಿದ್ದಿದ್ದ ಸ್ಥಿತಿಯಲ್ಲಿ ನಾನು ಮಾಡುವುದುತಾನೇ ಏನಿದ್ದಿತು? ಅಂತೂ ನನ್ನ ಜ್ವರ ಗುಣವಾಯಿತು. ಆದರೆ ನನ್ನ ಹಿಂದೆ ಅವರಿಗೆ ಜ್ವರ ಬಂದಿತು. ದೇವರು ಇವರ ಸೇವೆ ಮಾಡುವುದಕ್ಕೆ ಈ ಅವಕಾಶ ಕೊಟ್ಟ ನೆಲ್ಲ ಎಂದು ಅತ್ಯಂತ ಸಂತೋಷವನ್ನೇ ಪಟ್ಟೆ. ಮೊದಲಿನಿಂದ ಬರುತ್ತಿದ್ದ ಅವರ ಮಿತ್ರ ಡಾಕ್ಟರು ಅವರನ್ನು ನೋಡಿ "ಹೀಗೆ ಆಗುತ್ತದೆ ಅಂತ ನನಗೆ ಗೊತ್ತಿತ್ತು. ಆ ಪ್ರಾಣಿ ೨೦ ದಿನದಿಂದ ಸರಿಯಾಗಿ ಊಟ ತಿಂಡಿ ನಿದ್ರೆ ವಿಶ್ರಾಂತಿ ಹೊಂದಲಿಲ್ಲ. ಈಗ ಅವನ ದೇಹದಲ್ಲಿ ನಿಶ್ಶಕ್ತಿ ಬಹಳ. ಸ್ವಲ್ಪ ಚೆನ್ನಾಗಿ ನೋಡಿಕೊಳ್ಳಿ. ಹಾಸಿಗೆಯಿಂದ ಏಳುವುದಕ್ಕೆ ಅವಕಾಶ ಕೊಡಬೇಡಿ" ಎಂದರು. ಹೀಗೆ ಸುಮಾರು ೨ ತಿಂಗಳು ಕಳೆಯುವುದ ರೊಳಗಾಗಿ ಇಬ್ಬರಿಗೂ ಪೂರ್ಣ ಗುಣವಾಯಿತು.

ಒಂದು ದಿವಸ ಅವರು "ಜಾನಕಿ ನಾವಿಬ್ಬರೂ ಮದುವೆಯಾಗಿ ಬಿಡೋಣ. ನಮ್ಮಿಬ್ಬರ ಮನಸ್ಸು ಪೂರ್ಣವಾಗಿ ಮಿಲನವಾಗಿದೆ. ನಿನಗೆ ಬೇರೆ ಯಾರೂ ಇಲ್ಲ. ನನಗೂ ಬೇರೆ ಯಾರೂ ಇಲ್ಲ" ಎಂದರು. ನಾನು ಸುಮಾರು 3-4 ತಿಂಗಳು ಪ್ರತಿಭಟಿಸಿದೆ. ಅಷ್ಟರಲ್ಲಿ ಅವರ ದೂರದ ನೆಂಟರೊಬ್ಬರು ಬಂದರು. ಅದುವರೆಗೆ ಆ ನೆಂಟರು ಅವರನ್ನು "ಸತ್ತೆಯಾ ಬದುಕಿದೆಯಾ" ಎಂದು ವಿಚಾರಿಸಿರಲಿಲ್ಲ. ಬಂದವರೇ "ನಮ್ಮವರಲ್ಲೆಲ್ಲಾ ನಿನ್ನ ಮೇಲೆ ಬಹಳ ಅಸಮಾಧಾನವಾಗಿದೆ. ಈ ಹುಡುಗಿಯ ಜತೆಯಲ್ಲಿರುವುದು ಸರಿಯಲ್ಲ. ಬಿಟ್ಟುಬಿಡು. ನಿನ್ನ ಪಾಡಿಗೆ ನೀನು ಇರು" ಎಂದರು. ಅವರು "ನನಗೆ ಕಾಯಿಲೆಯಾಗಿದ್ದಾಗ ನೀವೆಲ್ಲಾ ಎಲ್ಲಿದ್ದಿರಿ. ಈ ಹುಡುಗಿ ಇಲ್ಲದಿದ್ದರೆ ನನ್ನ ಪ್ರಾಣ ಉಳಿಯುತ್ತಿ ರಲಿಲ್ಲ. ನಾನು ಅವಳನ್ನು ಮದುವೆಯಾಗುತ್ತೇನೆ" ಎಂದರು. ಅವ ರಿಗೂ ಆ ನೆಂಟರಿಗೂ ಬಹಳ ಚರ್ಚೆ ನಡೆಯಿತು. ಆಗ ಅವರು ನೆಂಟರಿಗೆ ಹೇಳಿದ ಮಾತು ಕೇಳಿ ನನಗೆ ಅವರಲ್ಲಿ ಬಹಳ ಭಕ್ತಿಯುಂಟಾಯಿತು.

ಅವರು "ಸ್ವಾಮಿ. ಇವಳನ್ನು ಮದುವೆಯಾದ ಗಂಡ ಬಿಟ್ಟು ಓಡಿ ಹೋದ. ಅವನು ಬದುಕಿದ್ದಾನೋ ಇಲ್ಲವೋ ತಿಳಿಯದು; ಹೊರಡು ವುದಕ್ಕೆ ಮುಂಚೆ ಸತ್ತರೂ ಮರೆಯಬಾರದ ಬಲವಾದ ಏಟುಗಳನ್ನು ಹಾಕಿ ಹೋದ. ಈಗ ಇವಳಿಗೆ ಯಾರೂ ಗತಿ ಇಲ್ಲ. ಇವಳು ಅನಾಥಳು. ಗಂಡಸಾದವನು ತನ್ನ ಕರ್ತವ್ಯ ಧರ್ಮ ಎಲ್ಲವನ್ನೂ ಇವಳಿಗೆ ನಾಲ್ಕು ಒದೆತ ಕೊಡುವುದರಲ್ಲಿಯೇ ತೀರಿಸಿಬಿಟ್ಟ. ಅವನು ಗಂಡತನಕ್ಕೆ ಅರ್ಹತೆ ಯನ್ನು ಪಡೆದುದು ಹಾಗೆಯೇ. ಆದರೆ ಇವಳು ಮಾತ್ರ ಸಾಯುವವರೆಗೆ ಅವನನ್ನೇ ಧ್ಯಾನಿಸಿಕೊಂಡು ಇರಬೇಕಲ್ಲವೆ? ಈ ಕಟುಕನಿಗೆ ಈ ಕುರಿ ಯನ್ನು ಕೊಡುವುದು ಅದಾವ ಧರ್ಮ ಸ್ವಾಮಿ? ಧರ್ಮವೆಲ್ಲವೂ ಹೆಂಗ ಸಿಗೆಯೋ ಇರುವುದು? ಗಂಡಸಿಗೆ ಯಾವ ಧರ್ಮವೂ ಇಲ್ಲವೇ ಇಲ್ಲವೋ? ಈ ಜಾನಕಿ ಹೇಳುತ್ತಾಳೆ, ಮದುವೆಯಾದುದು ಇವಳಿಗೆ ಎಲ್ಲಿಯೋ ಕನಸಿನಂತೆ ಜ್ಞಾಪಕವಂತೆ; ಜೀವನದಲ್ಲಿ ಬಾಕಿಯದೆಲ್ಲಾ ಸುಳ್ಳು. ಆ ಕನಸು ಮಾತ್ರ ನಿಜವೇ? ಮಸಕು ಮಸಕಾಗಿ ಯಾವಾ ಗಲೋ ಒಬ್ಬ ಬ್ರಾಹ್ಮಣನ ಬಾಯಲ್ಲಿ ಒಂದು ಮಂತ್ರ ಹೇಳಿಸಿಬಿಟ್ಟಿದ್ದು. ಜ್ಞಾಪಕವಿದ್ದ ಮಾತ್ರಕ್ಕೆ ಹೆಣ್ಣು ಗಂಡನು ಸಮೀಪಕ್ಕೆ ಬರಬೇಡವೆಂದರೂ ಅವನನ್ನೇ ಅನುಸರಿಸಿಕ್ಕೊಂಡು ಹೋಗಬೇಕು? ಗಂಡಸೇನೋ ಹೊರಟು ಹೋದ; ಒಬ್ಬಳಲ್ಲದಿದ್ದರೆ ಮತ್ತೊಬ್ಬಳನ್ನು ಮದುವೆಯಾಗುತ್ತಾನೆ. ಅವನನ್ನು ಯಾವ ಧರ್ಮವೂ ಕಟ್ಟುವುದಿಲ್ಲ. ಅವನ ಪಾಲಿನ ಧರ್ಮ ವನ್ನೂ ಹೆಂಡತಿಯೇ ಅನುಸರಿಸಬೇಕಲ್ಲವೇ? ಹೋಗಲಿ ಸ್ವಾಮಿ ಇಂತಹ ಸಣ್ಣ ಹುಡುಗಿಗೆ ಈಗ ಯಾರು ದಿಕ್ಕು?"

"ಅವರ ಸೆಂಟರಿಗೆ ಜವಾಬು ಕೊಡುವುದಕ್ಕೆ ತಿಳಿಯಲಿಲ್ಲ. ಅವರು ಇದು ಹಿಂದೂ ಧರ್ಮಕ್ಕೆ ಕಳಂಕ. ಹೇಗಾದರೂ ಹೆಂಡತಿ ಗಂಡನನ್ನೇ ಅನುಸರಿಸಿಕ್ಕೊಂಡು ಹೋಗಬೇಕು. ಅವನ ಕೈನಲ್ಲಿ ಸತ್ತರೂ ಚಿಂತೆ ಯಿಲ್ಲ. ಅವನನ್ನು ಬಿಟ್ಟು ಬೇರೆ ಬಾಳಬಾರದು ಎಂದರು. ಇವರಿಗೆ ಮತ್ತೆ ಉದ್ರೇಕ ಬಂತು. "ಸ್ವಾಮಿ ಹೆಂಡತಿ ಮಾತ್ರ ಗಂಡನನ್ನು ಅನು ಸರಿಸಬೇಕು. ಗಂಡ ಹೆಂಡತಿಯನ್ನು ಅನುಸರಿಸಬೇಡವೋ. ಗಂಡನ ಕೈಯಲ್ಲಿ ಸತ್ತರೂ ಪರವಾಯಿಲ್ಲ. ಅವನನ್ನು ಅನುಸರಿಸಬೇಕು. ಹೌದು ಸ್ವಾಮಿ. ಆದರೆ ಅವನನ್ನು ಅನುಸರಿಸಲು ಆ ಕಳ್ಳನನ್ನು ಕಂಡುಹಿಡಿ

ಯುವುದು ಹೇಗೆ? ಹೇಳದೆ ಕೇಳದೆ ಓಡಿಹೋಗುವ ಗಂಡನನ್ನು ಹೇಗೆ ಅನುಸರಿಸುವುದು? ಇಲ್ಲಿ ಗಂಡನಿಗೇ ಒಂದು ನ್ಯಾಯ. ಹೆಂಡತಿಗೇ ಒಂದು ನ್ಯಾಯ. ನ್ಯಾಯವೆಲ್ಲಿ ಬಂತು? ಹೆಂಡತಿಗೆ ನ್ಯಾಯವೇ ಇಲ್ಲ. ಇನ್ನು ಹಿಂದೂ ಧರ್ಮಕ್ಕೆ ಕಳಂಕ ಎಂದಿರಿ. ಹಿಂದೂ ಧರ್ಮಕ್ಕೆ ಕಳಂಕ ಇಂತಹ ಸ್ತ್ರೀಯರಲ್ಲ. ಅವಳ ಗಂಡನಂತಹ ಗಂಡಸರು. ನಿಮ್ಮ ಧರ್ಮದ ಯೋಗ್ಯತೆ ಇಷ್ಟೇಯೆ? ಅನಾಥೆಯಾಗಿ ಗಂಡನೆನ್ನಿಸಿಕೊಳ್ಳುವ ಕಿರಾತ ಬಿಟ್ಟವಳಿಗೆ ಒಂದು ದಿಕ್ಕನ್ನು ತೋರಿಸಿದರೇ ನಿಮ್ಮ ಧರ್ಮ ಕಳಂಕವಾಗಿ ಬಿಡುವುದೆ? ಈ ಧರ್ಮವನ್ನು ಕಳಂಕ ಮಾಡುವುದು ಮತ್ತಾವುದೂ ಇಲ್ಲವೆ? ಸ್ತ್ರೀಯರ ಹಕ್ಕನ್ನು ಪೂರ್ಣವಾಗಿ ಕಸಿದು ಕೊಳ್ಳುವುದರಲ್ಲಿಯೇ ನಿಮ್ಮ ಧರ್ಮದ ತಿರುಳು ಇರುವುದು?'' ಸೆಂಟ ಮಹಾಶಯರು ಏನೂ ಹೇಳಲಾರದೆ ಹೋದರು. ಕೊನೆಯಲ್ಲಿ "ನೋಡಪ್ಪ. ಈ ಕಾಲದಲ್ಲಿ ಜೀವನ ನಡೆಯಬೇಕು, ಕೆಲಸ ಸಿಕ್ಕುವುದು ಕಷ್ಟ. ನೀನು ಗಂಡನಿಲ್ಲದವಳನ್ನು ಮದುವೆ ಆಗ್ತೀನಿ ಅಂತ ಕೂತರೆ ಕೆಲಸ ಕೊಡಬೇಕು ಅನ್ನೋರೂ ಬೇಜಾರು ಪಟ್ಟುಕೊತಾರೆ. ನೀನು ಹೀಗಿಲ್ಲದೆ ಇದ್ದಿದ್ದರೆ ಇಲ್ಲಿಯೇ ಯಾವುದಾದರೂ ಕಾರ್ಖಾನೆಯಲ್ಲಿಯೋ ಮಂಡಿಯಲ್ಲಿಯೋ ಕೆಲಸ ಸಿಕ್ಕೋದು ಕಷ್ಟವಾಗುತ್ತಿರಲಿಲ್ಲ'' ಎಂದರು. ಸೆಂಟ ಮಹಾಶಯರು ಹೊರಟುಹೋದರು. ನಾನು ಅವರಿಗೆ "ನೀವು ನಿಮ್ಮ ದಾರಿ ಹಿಡಿದುಕೊಂಡು ಹೋಗಿ. ಅವರು ಹೇಳುವುದು ನಿಶ್ಚಯ. ಈ ಗುಂಡಕಲ್ಲನ್ನು ಕತ್ತಿಗೆ ನೇತುಹಾಕಿಕೊಂಡು ಯಾಕೆ ನಿಮ್ಮ ಮಾರ್ಗಕ್ಕೆ ಅಡ್ಡಿಯನ್ನು ತಂದುಕೊಳ್ಳುತ್ತೀರಿ'' ಎಂದೆ. ಅವರು "ನಿನ್ನಿಂದ ನನ್ನ ಮಾರ್ಗಕ್ಕೆ ಅಡ್ಡಿ ಇಲ್ಲ. ಏನೋ ನೀನೊಬ್ಬಳಾದರೂ ಇರುವ ಹೊತ್ತಿಗೆ ನನಗೆ ಬಾಳಬೇಕು ಬದುಕಬೇಕು ಅನ್ನುವ ಉತ್ಸಾಹ ಎದೆ. ಇಲ್ಲದೆ ಇದ್ದಿದ್ದರೆ ಅದೂ ಹೋಗಿ ಬಿಡುತ್ತಿತ್ತು'' ಎಂದರು.

"ನನ್ನ ಕಾರಣದಿಂದ ಅವರ ಮಿತ್ರರೆಲ್ಲರೂ ಅವರಿಂದ ಬೇರೆಯಾದರು. ಅವರಿಗೆ ಸಮಾಜದಲ್ಲಿ ಸ್ಥಾನವೂ ಹೋಯಿತು. ಯಾರ್‍ಯಾರು ಅವರಿಗೆ ಸಹಾಯಮಾಡಬಹುದೆಂದು ಅವರು ತಿಳಿದಿದ್ದರೋ ಅವರೆಲ್ಲರೂ ನನ್ನ ಕಡೆ ಕೈತೋರಿಸಿ "ಈ ಶನಿಯನ್ನು ಆಚೆಗೆ ತೊಲಗಿಸು, ನಿನಗೆ ಉದ್ಯೋಗ ಕೊಡುತ್ತೇವೆ'' ಎನ್ನತೊಡಗಿದರು. ಅಷ್ಟರಲ್ಲಿ ಗಂಡ ಎನ್ನಿಸಿ

ಕೊಳ್ಳುವವನು ಬೊಂಬಾಯಿನಲ್ಲಿ ಸತ್ತುಹೋದ ಅಂತ ಬೇರೆ ವದಂತಿ ಬಂತು. ಸರಿ ನಾನು ಅವನ ಜತೆಯಲ್ಲಿ ಒಂದು ದಿನವೂ ಸಂಸಾರ ಮಾಡಿರಲಿಲ್ಲ. ನಾನು ಅವನ ಮನೆಗೆ ಹೋದಷ್ಟು ದಿವಸದಿಂದಲೂ ಅವನ ಜತೆಯಲ್ಲಿ ಆ ಮುತ್ತೊಬ್ಬಳು ಇರುತ್ತಿದ್ದಳು. ಈಗ ನಾನು ವಿಧವೆ ಎನ್ನಿಸಿಕೊಂಡುದರಿಂದ ನನಗೆ ಸ್ವಲ್ಪವೂ ದುಃಖವೂ ಬೇಜಾರೂ ಆಗಲಿಲ್ಲ. ಮನಸ್ಸಿಗೆ ಒಂದು ವಿಧವಾದ ಸಂತೋಷವೇ ಆಗಿಬಿಟ್ಟಿತು. ಆ ವಿಚಾರ ಎಷ್ಟು ಸುಳ್ಳೊ ನಿಜವೋ ಇನ್ನೂ ಗೊತ್ತಾಗಿರಲಿಲ್ಲ. ಗಂಡ ಸತ್ತುದರಿಂದ ನಿಜವಾಗಿ ನನಗೆ ಎಷ್ಟು ಸಂತೋಷವುಂಟಾಯಿತು ಎಂಬುದು ಗಂಡಸರಿಗೆ ತಿಳಿದರೆ ಅವರಿಗೆ ಹೆಂಗಸರ ವಿಚಾರದಲ್ಲಿರುವ ಸ್ವಪ್ರತಿಷ್ಠೆ ಕ್ರೌರ್ಯ ಸ್ವಲ್ಪ ವಾದರೂ ಕಡಿಮೆಯಾದೀತು. ಇರಲಿ.

"ಅವರಿಗೂ ನನಗೂ ಜೀವನ ನಡೆಯುವುದೇ ಕಷ್ಟವಾಯಿತು. ಒಂದೊಂದು ದಿನ ನಿಜವಾಗಿಯೂ ಉಪವಾಸವೇ ಸಂಭವಿಸುತ್ತಿದ್ದಿತು. ಅವರಿಗೂ ಬೇಸರಿಕೆಯಾಯಿತು. ಕ್ರಿಸ್ತ ಪಾದ್ರಿಗಳ ವಿಚಾರ ನಿನಗೆ ತಿಳಿ ಯದು. ಅವರು ಇಲ್ಲದ ಆಸೆಗಳನ್ನು ತೋರಿಸಿ ಜನರನ್ನು ಬಲೆಗೆ ಹಾಕಿ ಕೊಳ್ಳುತ್ತಾರೆ. ಒಬ್ಬ ಪಾದ್ರಿ ಅವರಿಗೆ ಗಂಟುಬಿದ್ದ. "ನಿಮ್ಮ ಸಮಾಜ ದಲ್ಲಿ ದಯಾ ದಾಕ್ಷಿಣ್ಯಕ್ಕೆ ಜಾಗ ಇಲ್ಲ. ಈಗ ನೋಡಿ, ಆ ಸ್ತ್ರೀಗೆ ನೀವು ಸ್ವಲ್ಪ ದಯೆ ತೋರಿಸಿರಿ. ಈಗ ನಿಮ್ಮ ಜನಕ್ಕೆ ನೀವು ಇದ್ದರೂ ಒಂದೇ ಸತ್ತರೂ ಒಂದೇ. ಇಂತಹ ಅನಿಷ್ಟ ಸಹವಾಸ ನಿಮಗೆ ತಾನೆ ಏಕೆ ಬೇಕು? ನಿಮ್ಮಂತಹ ದಯಾಮಯರಾದವರನ್ನು ಸಮಾಜದ ಭೂಷಣವೆಂದು ಎಣಿಸಬೇಕು. ಆದರೆ ನಿಮ್ಮವರು ಮಾಣಿಕ್ಯವನ್ನು ಕಪಿ ಎಸೆಯುವಂತೆ ನಿಮ್ಮನ್ನು ತಿರಸ್ಕರಿಸುತ್ತಿದ್ದಾರೆ. ನಮ್ಮಲ್ಲಿ ಬನ್ನಿ. ನಮ್ಮ ಏಸುವಿನ ಮಹಿಮೆ ಅಪಾರವಾದುದು; ಅವನು ಎಲ್ಲರಿಗೂ ಆಶ್ರಯ ಕೊಡುತ್ತಾನೆ. ನಮ್ಮ ಜನರೂ ನಿಮ್ಮನ್ನು ಬಹಳ ಗೌರವಿಸುತ್ತಾರೆ. ನಿಮ್ಮ ಜೀವನಕ್ಕೆ ಒಂದು ಕಷ್ಟವೇ? ಯಾರಿಗೆ ನೀವು ಬೇಡವೋ ಅಂತಹವರ ಕಾಲನ್ನೇ ಯಾಕೆ ಅಪ್ಪಿಕೊಳ್ಳುತೀರಿ. ನಿಮ್ಮನ್ನು ಆಲಿಂಗಿಸಿಕೊಳ್ಳಲು ಎರಡು ಕೈಗಳನ್ನೂ ತೆರೆದು ನಿಂತುಕೊಂಡಿರುವ ನಮ್ಮಲ್ಲಿಗೆ ಬನ್ನಿ. ನಿಮಗೆ ಇಹವೂ ಉಂಟು ಪರವೂ ಉಂಟು. ಇಲ್ಲಿ ನಿಮ್ಮ ಯೋಗ್ಯತೆಗೆ ಸರಿಯಾದ ಒಂದು ಹುದ್ದೆ ಕೊಡಿಸುತ್ತೇನೆ. ಪರದಲ್ಲಿಯಂತೂ ಪರಮಾತ್ಮ ನಿಮಗಾಗಿ

ಕಾಯುತ್ತಲೇ ಇರುತ್ತಾನೆ" ಎಂದರು. ಇಂತಹ ಮಾತು ಪಾದ್ರಿಯ ಬಾಯಿಂದ ಅವರು ಅನೇಕಸಲ ಕೇಳಿದ್ದರು. ಆದರೆ ಆ ಮಾತುಗಳು ಒಂದರಲ್ಲಿಯೂ ಅವರಿಗೆ ನಂಬಿಕೆ ಇರಲಿಲ್ಲ. ಕೋಪ ಬಂದಾಗ, ಅವರ ಮಿತ್ರರು ಬಂದು ಉಪದೇಶ ಮಾಡಿದಾಗ, ಹೊಟ್ಟೆಗಿಲ್ಲದೆ ಇಬ್ಬರೂ ಹಸಿವು ಎಂಬುದನ್ನು ಒಬ್ಬರಿಗಾಗಲಿ ಹೇಳದೆ ಮಲಗಿಕೊಳ್ಳುವ ಪ್ರಸಂಗ ಬಂದಾಗಲೆಲ್ಲಾ ಅವರು "ಕ್ರಿಸ್ತನಾಗಿ ಬಿಡುತ್ತೇನೆ" ಎನ್ನುತ್ತಿದ್ದರು. ಆದರೆ ನಿಜವಾಗಿಯೂ ಅವರಿಗೆ ಆ ಮತದಲ್ಲಿ ಅಭಿಮಾನವಿರಲಿಲ್ಲ. ಪಾದ್ರಿಗಳ ಹೆಸರನ್ನು ಹೇಳಿದರೇ ಅವರು ಕಿಡಿಕಿಡಿಯಾಗುತ್ತಿದ್ದರು. "ಪಾದ್ರಿಗಳು ಯಾವುದಕ್ಕೂ ಹೇಸುವುದಿಲ್ಲ. ಮತ ಪ್ರಚಾರಕ್ಕಾಗಿ ಎಷ್ಟು ಸುಳ್ಳುಬೇಕಾದರೂ ಹೇಳುತ್ತಾರೆ. ಎಷ್ಟು ಮೋಸಬೇಕಾದರೂ ಮಾಡುತ್ತಾರೆ. ಈ ಪಾದ್ರಿಗಳಿಗೂ ಏಸುವಿನ ಧರ್ಮಕ್ಕೂ ಸಂಬಂಧವೇ ಇಲ್ಲ. ಇದೊಂದು ಠಕ್ಕರ ಕೂಟ. ಇಂಗ್ಲೆಂಡ್ ಅಮೆರಿಕದಲ್ಲಿರುವ ಮತಾಂಧರಿಂದಲೂ ವೃದ್ಧ ಸ್ತ್ರೀಯರಿಂದಲೂ, ಪೂರ್ವದೇಶದ ಕಾಡು ಜನಗಳನ್ನು ಏಸುವಿನ ಮಾರ್ಗಕ್ಕೆ ತಿರುಗಿಸಿ ಉದ್ಧಾರಮಾಡಬೇಕೆಂದು ಹೇಳಿ ಚಂದಾ ವಸೂಲ್ಮಾಡಿಕೊಂಡು ಬರುತ್ತಾರೆ. ಇಲ್ಲಿ ದಾಸ್ಯ ಮನೋವೃತ್ತಿಯಲ್ಲಿರುವ ನಮ್ಮ ಸರ್ಕಾರಗಳಿಗೆ ಅವರನ್ನು ಕಂಡರೇ ಭಯ. ಇವರೂ ಅವರಿಗೆ ಬಗೆಬಗೆಯ ರೂಪದಿಂದ ಸಹಾಯಮಾಡುತ್ತಾರೆ. ಅವರು ಒಂದು ಸ್ಕೂಲು ಪ್ರಾರಂಭಿಸಿದರೆ ಸರ್ಕಾರ ತಾವು ಸ್ವತಃ ಸ್ಕೂಲು ನಡೆಸಿದರೆ ಎಷ್ಟು ಖರ್ಚು ಆಗುತ್ತದೆಯೋ ಅದಕ್ಕಿಂತ ಹೆಚ್ಚಾಗಿಯೇ ತಮ್ಮ ಭಾಗದ ಹಣ ಸಹಾಯ ಕೊಡುತ್ತಾರೆ. ಅವರಿಗೆ ಆ ಸಂಸ್ಥೆಯ ಮೇಲೆ ಸ್ವಲ್ಪವೂ ಹಿಡಿತ ಇರುವುದಿಲ್ಲ. ಜತೆಗೆ ಅಲ್ಲಿಯೂ ನಡೆಯುವ ಮತಪ್ರಚಾರ ಬೇರೆ. ಆ ಸ್ಕೂಲಿನಲ್ಲಿ ಮತಪ್ರಚಾರ ನಮ್ಮ ಮತವನ್ನು ತೆಗಳುವುದು ನಮ್ಮ ದೇವರುದಿಂಡರನ್ನು ತಿರಸ್ಕರಿಸುವುದು ಇವು ಮೊದಲು. ಪಾಠವಿದ್ಯೆ ಅನಂತರ; ಇಂತಹ ಸ್ಕೂಲುಗಳಿಗೆ ನಮ್ಮ ಜನ ನಮ್ಮ ಹೆಣ್ಣುಮಕ್ಕಳನ್ನು ಬೇರೆ ಕಳುಹಿಸುತ್ತಾರೆ. ಕಾನ್ವೆಂಟು ಸ್ಕೂಲು ಎಂದರೆ ಅದೇನು ನಮ್ಮವರಿಗೆ ಮಂಕೋ? ನನ್ನ ಮಗಳು ಕಾನ್ವೆಂಟ್ ಸ್ಕೂಲಿಗೆ ಹೋಗುತ್ತಾಳೆ ಎಂದು ಹೇಳಿಕೊಳ್ಳುವಾಗ ಆ ತಂದೆಗೆ ಅದೇನು ಹೆಮ್ಮೆಯೋ. ಈ ಸ್ಕೂಲು ವೈದ್ಯ, ಇವುಗಳ ಮೂಲಕ ಈ ಜನ ಮತಪ್ರಚಾರ ಮಾಡುತ್ತಾರೆ" ಎಂದು ಅವರು ಯಾವಾಗಲೂ ಪಾದ್ರಿಗಳನ್ನು ಬಯ್ಯುತ್ತಿದ್ದರು.

“ಒಂದು ದಿವಸ ಬೆಳಿಗ್ಗೆ ಅವರನ್ನು ನೋಡಲು ಅವರ ಪರಿಚಿತರೊಬ್ಬರು ಬಂದರು. ಬಂದವರೇ ಅಯ್ಯಾ ಮಂಗಳೂರು ಕಾಫಿ ಮಂಡಿಯಲ್ಲಿ—ಅದು ನಮ್ಮ ಭಾವನದೇ ನಿನಗೆ ಗೊತ್ತಿಲ್ಲ—60 ರುಪಾಯಿನ ಗುಮಾಸ್ತೆ ಕೆಲಸವೊಂದು ಖಾಲಿಬಿದ್ದಿದೆ. ಅದನ್ನು ನಿನಗೆ ಕೊಡಿಸುವುದಕ್ಕೆ ಏರ್ಪಾಡು ಮಾಡುತ್ತಿದ್ದೇನೆ. ಏನು ಹೇಳುತ್ತೀಯಾ” ಎಂದರು. ಅವರು “ನಿಮಗೆ ಕೈಮುಗಿಯುತ್ತೇನೆ ಎಂದು ಹೇಳುತ್ತೇನೆ. ಸದ್ಯ ಯಾವುದಾದರೂ ಒಂದು ಕೆಲಸ ಸಿಕ್ಕಿದರೆ ಸಾಕಾಗಿದೆ. ಈಗ 6 ತಿಂಗಳಿನಿಂದ ಒಂದು ದಿನವೂ ಎರಡು ಹೊತ್ತು ಊಟ ಮಾಡಲಿಲ್ಲ” ಎಂದರು. ಬಂದಿದ್ದವರು “ನನಗೆ ಅದು ಗೊತ್ತು. ಅದಕ್ಕೇ ನಿನಗೋಸ್ಕರ ಕೆಲಸಮಾಡಿದೆ. ಆದರೆ ಅವರದು ಒಂದು ಕಂಡಿಶನ್ ಇದೆ” ಎಂದರು. ಇವರು “ಯಾವ ಕಂಡೀಶನ್ ಬೇಕಾದರೂ ಇರಲಿ. ಎಷ್ಟು ಕಷ್ಟವಾದ ಕೆಲಸವಾದರೂ ಸರಿಯೆ; ಹಗಲು ರಾತ್ರಿ ಬೇಕಾದರೂ ಮಾಡುತ್ತೇನೆ; ಕೆಲಸ ಅಂತ ಒಂದು ಸಿಕ್ಕಿಬಿಡಲಿ” ಎಂದರು. ಬಂದಿದ್ದವರು ಸ್ವಲ್ಪ ಹೊತ್ತು ಯೋಚಿಸಿ “ನೀವು ಸಿಟ್ಟುಕೊಬಾರದು. ನಿಮ್ಮ ಒಳ್ಳೆಯದಕ್ಕೇ ಹೇಳುತ್ತೇನೆ. ನಿಮ್ಮ ಜೀವನ ಕ್ರಮ ಬದಲಾಯಿಸಿ. ನಿಮ್ಮ ಜತೆಯಲ್ಲಿ ಅದ್ಯಾರೋ ಜಾನಕಿ ಎನ್ನುವವಳು ಇದ್ದಾಳೆಯಂತೆಲ್ಲ; ಅವಳನ್ನು ಬಿಟ್ಟುಬಿಡಿ. ಎಲ್ಲಾ ಸರಿಹೋಗುತ್ತೆ” ಎಂದರು. ಬಂದಿದ್ದವರು ಅಲ್ಲಿಂದ ಮುಂದೆ ಅಲ್ಲಿ ಒಂದು ಗಳಿಗೆಗೆ ಹೆಚ್ಚಾಗಿ ನಿಲ್ಲಲಿಲ್ಲ. ಇವರು ಅವರನ್ನು ಚೆನ್ನಾಗಿ ಬಯ್ದು “ಈ ರೀತಿ ಹಗಲು ರಾತ್ರಿ ಬಂದು ಹೆಣ್ಣನ್ನು ಬೇಟೆಯಾಡುವ ನಿಮ್ಮ ಹಾಳು ಸಮಾಜ ನಮಗೆ ಬೇಡ. ಈ ಜಾತಿಯನ್ನೇ ಬಿಡುತ್ತೇವೆ. ಯಾವ ಜಾತಿಯವರಿಗೆ ನಾವು ಬೇಕೊ ಅಲ್ಲಿಗೆ ಹೋಗುತ್ತೇವೆ” ಎಂದು ಹೇಳಿ ಆ ಜಾಗವನ್ನು ಬಿಟ್ಟು ಹೊರಟುಹೋದರು. ಬಂದಿದ್ದವರೂ ಅವರ ಹಿಂದೆಯೇ ಹೊರಟುಹೋದರು.

“ಸುಮಾರು ಒಂದು ಗಂಟೆಯ ನಂತರ ಇವರು ವಾಪಸು ಬಂದರು. ಇವರ ಮುಖ ಗಂಭೀರವಾಗಿದ್ದಿತು. ನನಗೆ ಅವರನ್ನು ಮಾತನಾಡಿಸುವುದಕ್ಕೇ ಸ್ವಲ್ಪ ಭಯವಾಯಿತು. ಅವರು ಬಂದು ಕುಳಿತುಕೊಂಡು ಜೇಬಿನಿಂದ 15-20 ರುಪಾಯಿಗಳನ್ನೂ ತೆಗೆದು ನೆಲದ ಮೇಲೆ ಹಾಕಿದರು. ನನಗೆ ಆಶ್ಚರ್ಯವಾಯಿತು. ನಾನು ರುಪಾಯಿನ ಮುಖ

ನೋಡಿಯೇ ೧ ವರುಷವಾಗಿದ್ದಿತು. ಅವರು "ಕ್ರಿಸ್ತಮತಕ್ಕೆ ಸೇರಿದೆ. ಸಾಕು. ಇದುವರೆಗೆ ಅನುಭವಿಸಿದುದು. ಪಾದ್ರಿಯೇ ಪೋಸ್ಟ್ ಆಫೀಸಿನಲ್ಲಿ ಒಂದು ಕೆಲಸ ಕೊಡಿಸಿದ. ನಾಳೆಯಿಂದ ಹೋಗುತ್ತೇನೆ. ನಿನಗೆ ಬೇಜಾರಾದರೆ ನಿನಗೆ ಇಷ್ಟ ಬಂದ ಕಡೆ ಹೋಗು. ನನ್ನ ಅಡ್ಡಿ ಇಲ್ಲ. ಜಾತಿ ಕೆಟ್ಟವನ ಜತೆಯಲ್ಲಿ ನೀನು ಇರಬೇಕಾದುದಿಲ್ಲ" ಎಂದರು. ನನ್ನ ತಲೆಯ ಮೇಲೆ ಕಲ್ಲು ಬಿದ್ದಂತೆ ಆಯಿತು. ಅವರು ಕ್ರಿಸ್ತರು! ಅದನ್ನು ಯೋಚಿಸುವುದೇ ನನಗೆ ಕಷ್ಟವಾಯಿತು. ನನಗೆ ಮುಖ್ಯವಾಗಿ ನಮ್ಮ ಜನರ ಮೇಲೆಯೇ ಕೋಪ ಬಂತು. ಈ ಸಮಾಜಕ್ಕೆ ಸ್ವಲ್ಪ ದಯಾದಾಕ್ಷಿಣ್ಯಗಳು ಇರಬೇಡವೆ? ಇನ್ನು ಸ್ವಲ್ಪ ಈ ಸಮಾಜದ ಸ್ವಭಾವ ಬದಲಾಯಿಸಿದರೆ ಹೀಗೆ ಹೊರಗೆ ಹೋಗುವವರನ್ನೆಲ್ಲಾ ತಡೆಯಬಹುದಲ್ಲ. ಕಾಲಾನುಕಾಲಕ್ಕೆ ಧರ್ಮವನ್ನೂ ಮತ ಪದ್ಧತಿಗಳನ್ನೂ ಬದಲಾಯಿಸಿ ಸಮಾಜವನ್ನು ಆಧುನಿಕವಾಗಿ ಮಾಡುತ್ತಿದ್ದ ಆ ಪೂರ್ವದ ಋಷಿಗಳೆಲ್ಲಿ? ಈಗಿನ ಈ ಮಠಾಧಿಪತಿಗಳಾದರೂ ಏನು ಮಾಡುತ್ತಿದ್ದಾರೆ; ಸಂಸಾರಿಕರಂತೆ ತಾವೂ ಅರಮನೆಗಳ ಮುಂದೆಯೂ ಅಧಿಕಾರಿಗಳ ಮುಂದೆಯೂ ಬಾಲ ಬಡಿಯುತ್ತಾ ಶಿಷ್ಯರೆನ್ನಿಸಿಕೊಳ್ಳುವ ಕುರಿಗಳ ತಲೆ ಒಡೆದು ಒಂದೊಂದು ಆಳು ಎತ್ತರದ ಕೊಳಗದಪ್ಪಲೆಗಳಲ್ಲಿ ಪಾಯಸ ಜಿಲೇಬಿ ಮಾಡಿಸಿ ಮೋಟಾರಿನಲ್ಲಿ ತಿರುಗುತ್ತಾ ತಮ್ಮ ಮೆರವಣಿಗೆಗಳನ್ನು ಮಾಡಿಸಿಕೊಳ್ಳುವ ಈ ಮಠದ ಪಾಳೆಗಾರರು, ಆಧುನಿಕ ಜಗತ್ತಿನ ಬದಲಾಯಿಸಿದ ಪರಿಸ್ಥಿತಿಗಳು ಎದುರಿಗೆ ಎದ್ದು ನಿಂತಾಗ, ಯಾವ ಹಳೆಯ ಓಲೆಗರಿ ಪುಸ್ತಕದ ಧೂಳನ್ನು ಕೊಡುವುತ್ತಿದ್ದಾರೆ? ನಾವು ಹಿಂದುಗಳಲ್ಲವೆ? ನಮ್ಮ ಧರ್ಮದಲ್ಲಿ ತಿರುಳು ಯಾವುದು, ಜಳ್ಳು ಯಾವುದು? ಈ ಸಮಾಜದ ಅಸ್ತಿತ್ವ ಉಳಿಯಬೇಕಾದರೆ ನಾವು ಅವಲಂಬಿಸಬೇಕಾದ ಆಧುನಿಕ ಮಾರ್ಗಗಳಾವುವು; ತ್ಯಜಿಸಬೇಕಾದ ಪ್ರಾಚೀನ ರೋಗಗಳಾವುವು? ಧರ್ಮವನ್ನೂ ವಿಜ್ಞಾನವನ್ನೂ ಬೆರೆಸುವುದು ಹೇಗೆ? ಇವುಗಳನ್ನೆಲ್ಲಾ ಈ ಗುರುಗಳು ಎನ್ನಿಸಿಕೊಳ್ಳುವವರು ತಮ್ಮ ಮಠಗಳನ್ನೇ ಪ್ರಯೋಗಕ್ಷೇತ್ರಗಳಾಗಿ ಮಾಡಿಕೊಂಡು ಜನಕ್ಕೆ ತೋರಿಸಬೇಡವೇ. ಅದು ಬಿಟ್ಟು ಏನು ಬರಲಿ ಏನು ನಡೆಯಲಿ? ಯಾವ ಪ್ರಶ್ನೆ ಏಳಲಿ? ಎಲ್ಲಾದಕ್ಕೂ ಸಾವಿರ ವರುಷಗಳ ಕೆಳಗೆ ಹೇಳಿದ ಬುಕ್ಕಿನಲ್ಲಿ! ಏನಿದೆ. ಅದಕ್ಕೆ ಸರಿಹೋಗುತ್ತ

ದೆಯೋ; ಅದಕ್ಕೆ ಸರಿಹೋಗದುದಕ್ಕೆ ಸಮಾಜದಲ್ಲಿ ಜಾಗವೇ ಇಲ್ಲ. ಸಮಾಜವನ್ನು ಸುಧಾರಿಸುವುದಿಲ್ಲ; ಸಮಾಧಿಮಾಡುತ್ತೇವೆ ಎಂದು ಮೆರೆಯುವ ಗುರುಗಳಿಂದ ಏನು ಪ್ರಯೋಜನ'' ಹೀಗೆಲ್ಲಾ ನಾನು ಯೋಚಿಸಿದೆ. ಅವರು ಹತ್ತು ನಿಮಿಷಗಳ ನಂತರ ''ಅಯ್ಯೋ ಹಿಂದು ಸಮಾಜವೇ ನನ್ನನ್ನು ಏನು ಮಾಡಿದರೂ ನಿನ್ನಲ್ಲಿ ಇರಗೊಡದೆ ಹೋದೆಯಲ್ಲ. ನಾನು ಬಹಿರಂಗವಾಗಿ ಗಂಡನು ಬಿಟ್ಟವಳೊಡನೆ ಸಂಸಾರ ಮಾಡುತ್ತೇನೆ ಎಂದರೆ ನನ್ನನ್ನು ಹೊರಕ್ಕೆ ಹಾಕಿದೆ. ಇಂತಹ ಠಕ್ಕರು ನಿನ್ನಲ್ಲಿ ಎಷ್ಟು ಜನ ಇದ್ದಾರೆ ಬಲ್ಲೆಯಾ? ಸರಳತೆ ಧೈರ್ಯ ಇವಕ್ಕೆ ನಿನ್ನಲ್ಲಿ ಪುರಸ್ಕಾರವಿಲ್ಲ. ಮೋಸ ಹೇಡಿತನ ಇವಕ್ಕೇ ನಿನ್ನ ಆದರಣೆ; ಇಂತಹ ಪರಿಸ್ಥಿತಿ ಹಿಂದೆ ಬಂದಿದ್ದರೆ ನಮ್ಮ ಪೂರ್ವಿಕರು ನನ್ನನ್ನು ಓಡಿಸುತ್ತಿರಲಿಲ್ಲ. ಪದ್ಧತಿಯನ್ನೇ ಬದಲಾಯಿಸುತ್ತಿದ್ದರು. ಇಂದಿಗೆ ಅನೇಕ ತಲೆಗಳಿಂದ ಬಂದಿದ್ದ ನನ್ನ ಹಿಂದೂಮತ ಬದಲಾವಣೆಯಾಯಿತು'' ಎಂದು ಬಹಳವಾಗಿ ಅತ್ತರು. ಎದೆ ಒಡೆಯುವಂತೆ ಅತ್ತರು. ಅವರ ಅಳುವನ್ನು ನೋಡಿ ಅವರಿಗೆ ಎಲ್ಲಿ ಹುಚ್ಚು ಹಿಡಿಯುವುದೋ ಎಂದು ನಾನು ಹೆದರಿದೆ. ಕೊನೆಗೆ ಅವರು ''ಆಯಿತು, ನರಕಕ್ಕೆ ಬಿದ್ದುದಾಯಿತು. ಈ ಯಜ್ಞಕ್ಕೆ ನಾನೇ ಕೊನೆಯ ಆಹುತಿಯಾಗಲಿ. ನಮ್ಮ ದೇಶದವರಿಗೆ ಮುಂದೆ ಇಂತಹ ನರಕವೂ ಅದರ ಸಂಭವವೂ ಉಂಟಾಗದೆ ಇರಲಿ'' ಎಂದುಕೊಂಡು ಸುಮ್ಮನಾದರು.

''ಮಾರನೆಯ ದಿನವೇ ಅವರಿಗೆ ಪೋಸ್ಟ್ ಆಫೀಸಿನಲ್ಲಿ ಕೆಲಸ ಸಿಕ್ಕಿತು. ಒಂದು ವರುಷದಿಂದ ನನಗೆ ಆಶ್ರಯವನ್ನು ಕೊಟ್ಟಿದ್ದ ಛತ್ರವನ್ನು ಬಿಟ್ಟು ಊರಿನ ಸ್ವಲ್ಪ ನಿರ್ಜನವಾದ ಮೂಲೆಯಲ್ಲಿದ್ದ ಒಂದು ವಿಸ್ತರಣದಲ್ಲಿ ಸಣ್ಣದೊಂದು ಮನೆಯನ್ನು ಬಾಡಿಗೆಗೆ ತೆಗೆದುಕೊಂಡೆವು. ಹೀಗೆ ಆ ಮನೆಯಲ್ಲಿ ಒಂದು ತಿಂಗಳು ಇರುವುದರೊಳಗಾಗಿ ಅಲ್ಲಿ ಚರ್ಚಿನ ಸುತ್ತಾ ಕ್ರಿಸ್ತರಿಗಾಗಿಯೇ ಕಟ್ಟಿರುವ ಒಂದು ವಠಾರದಲ್ಲಿ ಇರಬೇಕೆಂದು ನಮ್ಮನ್ನು ಬಲಾತ್ಕರಿಸಿದರು. ಇವರು ಒಪ್ಪಲಿಲ್ಲ. ಆಗ ಪೋಸ್ಟು ಮೇಷ್ಟರು ''ಪಾದ್ರಿಗೆ ಸಂತೋಷವುಂಟಾಗುವಂತೆ ನಡೆದುಕೊಳ್ಳುವುದರಲ್ಲಿ ಲಾಭವಿದೆ. ಇಲ್ಲದಿದ್ದರೆ ಯಾವುದರಲ್ಲಿ ಲಾಭವುಂಟೋ ಅದರಲ್ಲಿಯೇ ನಷ್ಟವೂ ಉಂಟು'' ಎಂದು ಹೇಳಿದರು. ಇವರಿಗೆ ಮೊದಲು ಒಹು

ಕೋಪ ಬಂತು. "ನನ್ನ ಇಷ್ಟ ಬಂದ ಕಡೆ ಇರುತ್ತೇನೆ" ಎಂದರು. ಆದರೆ ಇವರಂತೆಯೇ ಕ್ರಿಸ್ತರಾಗಿದ್ದ ಕೆಲವರು "ಈಗಲೇ ಪಾದ್ರಿಯ ಹತ್ತಿರ ವ್ಯಾಜ್ಯ ಮಾಡಬೇಡಿ. ಅವರು ಕಾಯುತ್ತಿರುವುದೂ ಅದಕ್ಕೆಯೇ. ನೀವು ಸ್ವಲ್ಪ ಅಸಮಾಧಾನ ವ್ಯಕ್ತಪಡಿಸಿದರೆ ನಿಮ್ಮ ಕೆಲಸ ಹೋಗುತ್ತೆ. ಅಷ್ಟೇ ಅಲ್ಲ. ಅದೇ ಜಾಗಕ್ಕೆ ಮತ್ತೊಬ್ಬನನ್ನು ಜಾತಿ ಕೆಡಿಸಿ ತಂದು ಹಾಕುತ್ತಾರೆ. ಆದುದರಿಂದ ಈಗ ನಿಮ್ಮ ಮನೆ ಬಿಟ್ಟು ಇಲ್ಲಿಗೇ ಬನ್ನಿ. ಆರು ತಿಂಗಳು ಎಂಟು ತಿಂಗಳು ಕಳೆದು ಸ್ವಲ್ಪ ಬೇರು ಬಿಟ್ಟ ನಂತರ ನೋಡಿಕೊಳ್ಳೋಣ" ಎಂದರು. ಇವರೂ ಹಾಗೆಯೇ ಯೋಚಿಸಿ ಕ್ರಿಸ್ತರ ವಠಾರಕ್ಕೇ ಹೋದರು. ಅಲ್ಲಿಯೂ ಮನೆಗೆ ಬಾಡಿಗೆ ಕೊಡಬೇಕಾಗಿದ್ದಿತು. ಆದರೆ ಚರ್ಚಿನ ಸಂಸ್ಥೆಯವರು ಮುನಿಸಿಪಾಲಿಟಿ ಮತ್ತು ಸರ್ಕಾರದಿಂದ ಚರ್ಚು ಸಾರ್ವಜನಿಕ ಸಂಸ್ಥೆಯೆಂದು ಹೇಳಿ ಆ ಮನೆಗಳಿಗೆ ದೀಪ ನೀರು, ಮನೆ ಕಟ್ಟಿದ ನಿವೇಶನ ಇವುಗಳನ್ನು ಉಚಿತವಾಗಿಯೂ ರಿಯಾಯ್ತಿ ದರದಲ್ಲಿಯೂ ತೆಗೆದುಕೊಳ್ಳುತ್ತಿದ್ದರು. ಉಳಿಯುತ್ತಿದ್ದ ಹಣವನ್ನು ಹಿಂದುಗಳನ್ನು ಕ್ರಿಸ್ತರನ್ನಾಗಿ ಮಾಡಲು ಉಪಯೋಗಿಸುತ್ತಿದ್ದರು.

"ವಠಾರಕ್ಕೆ ಹೋದ ಎಂಟು ದಿನದಲ್ಲಿಯೇ ಪಾದ್ರಿ ಆ ವಠಾರಕ್ಕೆ ನಮ್ಮನ್ನು ಸೇರಿಸಲು ಯಾಕೆ ಅಷ್ಟು ಉತ್ಸುಕನಾಗಿದ್ದ ಎಂಬುದು ನಮಗೆ ಗೊತ್ತಾಯಿತು. ಆ ವಠಾರದಲ್ಲಿಯೂ ಸುತ್ತಲ ಹಳ್ಳಿಗಳಲ್ಲಿಯೂ ಪ್ರತಿದಿನವೂ ರಾತ್ರಿ ಪಾದ್ರಿಗಳು ಮತ ಪ್ರಚಾರದ ಉಪನ್ಯಾಸಗಳನ್ನು ಏರ್ಪಡಿಸಿದ್ದರು. ಇವುಗಳಿಗೆ ರಾತ್ರಿಯ ಸ್ಕೂಲುಗಳೆಂದು ಹೆಸರಿಟ್ಟು ಮೇಷ್ಟರ ಸಂಬಳ ಇತರ ಗ್ರಾಂಟು ವಗೈರೆ ಸರ್ಕಾರದಿಂದ ತೆಗೆದುಕೊಂಡು ವಠಾರದಲ್ಲಿ ವಾಸವಾಗಿರುತ್ತಿದ್ದ ಜಾತಿ ಕೆಟ್ಟ ಕ್ರಿಸ್ತನೊಬ್ಬನಿಂದ ಪ್ರಚಾರ ಕಾರ್ಯ ನಡೆಸುತ್ತಿದ್ದರು. ಸ್ಕೂಲಿಗೆ ಹೋದ ಕೂಡಲೆ ಗೋಡೆಗೆ ಒಂದು ಪಠವನ್ನು ನೇತುಹಾಕಿ ಒಬ್ಬ ಮನುಷ್ಯ ಹಾರ್ಮೋನಿಯಂ ಅಥವಾ ಪಿಟೀಲನ್ನು ಇಟ್ಟುಕೊಂಡು ವಿಕಾರವಾದ ಧ್ವನಿಯಲ್ಲಿ ಹಾಡುತ್ತಿದ್ದನು. ಅವನು ಸಂಗೀತಗಾರನೇ ಆಗಿರಬೇಕೆಂಬ ನಿಯಮವಿರಲಿಲ್ಲ. ಹಾಡುಗಳು ನಾಲ್ಕು ದಿಕ್ಕಾಪಾಲಾಗಿ ಬಾಯಿಗೆ ಬಂದರೇಯೆ ಅವನಿಗೆ ಸಾಕಾಗಿದ್ದಿತು. ಅನಂತರ ಒಬ್ಬನು ಕ್ರಿಸ್ತಮತ ಪ್ರಚಾರದ ಉಪನ್ಯಾಸವನ್ನು ಮಾಡುತ್ತಿದ್ದನು. ಕೊನೆಯಲ್ಲಿ ೧೦-೧೫ ನಿಮಿಷ ಅಲ್ಲಿ ಉಳಿದಿದ್ದವರಿಗೆ ರಾತ್ರಿ ಸ್ಕೂಲಿನ ಪಾಠ ಕಲಿ

ಸುತ್ತಿದ್ದರು. ಇದು ಯಾವಾಗಲೂ ನಡೆಯುತ್ತಿದ್ದಿತು. ಈ ಪ್ರಚಾರ ಕಾರ್ಯ ಸಾಧ್ಯವಾದಷ್ಟು ಹೆಚ್ಚು ಹಳ್ಳಿಗಳಲ್ಲಿ ಮಾಡಲು, ಚರ್ಚ ಸಂಸ್ಥೆಗೆ ಜನರ ಆವಶ್ಯಕತೆಯಿದ್ದಿತು. ಹೊಸ ಹೊಸದಾಗಿ ಕ್ರಿಸ್ತಮತಕ್ಕೆ ಸೇರಿದವ ರನ್ನೇ ಅವರು ಈ ಕಾರ್ಯಕ್ಕೆ ಆರಿಸುತ್ತಿದ್ದರು. ಯಾಕೆಂದರೆ ನಿತ್ಯಾ ನಿತ್ಯಾ ಹೊಸಬರು ಮತಕ್ಕೆ ಸೇರುತ್ತಿದ್ದಾರೆ ಎಂಬುದನ್ನು ಪ್ರಚಾರ ಮಾಡು ವುದೂ ಅವರ ಉದ್ದೇಶವಾಗಿದ್ದಿತು.

" ನಾವು ಚರ್ಚಿನ ವಠಾರದಲ್ಲಿ ಹೋಗಿ ನೆಲಸಿದ ೩-೪ ದಿನಗಳ ನಂತರ ಒಂದು ದಿನ ಪಾದ್ರಿ ಇವರನ್ನು ಕರೆಸಿ " ಇವತ್ತು ರಾತ್ರಿ ನೀವು ಇಂತಹ ಹಳ್ಳಿಯಲ್ಲಿ ಪ್ರಚಾರ ಕಾರ್ಯ ರಾತ್ರಿಯ ಸ್ಕೂಲು ನಡೆಸಬೇಕೆಂದು" ಹೇಳಿದರು. ಇವರಿಗೆ ಬಹಳ ಸಿಟ್ಟು ಹತ್ತಿತು. " ನಾನು ನಡೆಸುವುದಿಲ್ಲ. ನನಗೆ ಇಷ್ಟವಿಲ್ಲ. ನಾನು ನರಕಕ್ಕೆ ಬಿದ್ದದ್ದು ಸಾಕು. ಇನ್ನು ಬಾಕಿ ಯುವರನ್ನು ಈ ಕೂಪಕ್ಕೆ ತಳ್ಳಲು ನಾನು ಒಪ್ಪುವುದಿಲ್ಲ " ಎಂದರು. ಪಾದ್ರಿ ಸ್ವಲ್ಪ ಒತ್ತಿ ಹೇಳಿದರು. ಇವರು ಮತ್ತೂ ಅವನ ಸೂಚನೆಯನ್ನು ತಿರಸ್ಕರಿಸಿದರು. ಪಾದ್ರಿ " ಈಗಲೇ ಇಷ್ಟು ಖಂಡಿತವಾಗಿ ಯಾಕೆ ಹೇಳು ತ್ತೀರಿ. ಇನ್ನೂ ೨-೩ ದಿನ ಯೋಚನೆ ಮಾಡಿ " ಎಂದರು. ಮಾರನೆಯ ದಿನ ಮತ್ತೆ ಪೋಸ್ಟುಮಾಸ್ಟರು ಹಿಂದಲಂತೆ ಮತ್ತೆ " ಪಾದ್ರಿಯ ಪ್ರೀತಿ ಸಂಪಾದಿಸುವುದು ಒಳ್ಳೆಯದು. ಕೆರೆ ಮುಳುಗಲು ಹೊರಟವನಿಗೆ ಮಳೆ ಯೇನು ಛಳಿಯೇನು ? ಧೈರ್ಯವಾಗಿ ಇನ್ನು ಮುಂದೆ ನುಗ್ಗಬೇಕು. ದೇವ ರನ್ನು ಕಂಡು ಮತವನ್ನು ಬದಲಾಯಿಸಿದ ಮೇಲೆ, ಸಂಕೋಚದಿಂದ ಹಿಂದಕ್ಕೆ ಸರಿದರೂ ದೇವರು ಬಿಡುವುದಿಲ್ಲ. ಕೈಹಿಡಿದು ಎಳೆದು ಸೇವೆ ಮಾಡಿಸಿಕೊಳ್ಳುತ್ತಾನೆ " ಎಂದು ಹೇಳಿದರು. ಇವರು ಬಂದು ನನ್ನೊಂದಿ ಗೆ ಚರ್ಚಮಾಡಿದರು. ಕೊನೆಗೆ ಪಾದ್ರಿ ಆ ಸಾಯಂಕಾಲ ಮತ್ತೆ ಹೇಳಿ ದಾಗ " ನನಗೆ ಇದು ಅಭ್ಯಾಸವಿಲ್ಲ. ಹೋಗಿ ನೋಡುತ್ತೇನೆ " ಎಂದರು. ಪಾದ್ರಿ ಮೋಸದ ನಗೆಯನ್ನು ನಗುತ್ತಾ " ಏಸುಸ್ವಾಮಿ ಅಭ್ಯಾಸ ಮಾಡಿ ಸುತ್ತಾನೆ. ಭಯವಿಲ್ಲ " ಎಂದನು.

" ನಾವು ಕ್ರಿಸ್ತರೇನೋ ಆಗಿಬಿಟ್ಟೆವು. ಈ ರೀತಿ ಮತ ಬದಲಾಯಿ ಸುವಾಗ ಹಿಂದೂ ಮತೀಯರ ಮೇಲಿನ ದ್ವೇಷದಿಂದ ಹಾಗೆ ಮಾಡಿದೆವೇ ಹೊರತು ಕ್ರಿಸ್ತಮತದ ಅಭಿಮಾನದಿಂದಲ್ಲ. ಮತ ಬದಲಾಯಿಸಿದ ಗಳಿಗೆ

ಯಿಂದಲೇ ಅವರಿಗೆ ಪಶ್ಚಾತ್ತಾಪ ಪ್ರಾರಂಭವಾಯಿತು. ಪಾದ್ರಿಗಳ ದೃಷ್ಟಿಯಲ್ಲಿ ನಮಗೂ ನಾಯಿಗಳಿಗೂ ಏನು ವ್ಯತ್ಯಾಸವಿಲ್ಲ. ಅವರಿಗೆ ನಮ್ಮಲ್ಲಿರುವ ಲಕ್ಷ್ಯ, ನಾವು ಒಂದು ಸಲ ಗಾಳಕ್ಕೆ ಮೀನು ಸಿಕ್ಕಿದಂತೆ ಅವರ ಕೈಗೆ ಸಿಕ್ಕಿದ ಮೇಲೆ ನಿಂತು ಹೋಗುತ್ತವೆ. ಅಲ್ಲಿಂದ ಮುಂದೆ ಅವರ ಲಕ್ಷ್ಯ ಮುಂದಲ ಮೀನನ್ನು ಗಾಳಕ್ಕೆ ಹಾಕುವುದರ ಕಡೆಗೆ ಇರುತ್ತದೆ. ಮತ್ತು ಅಷ್ಟೇ ಅಲ್ಲ. ಈ ಪಾದ್ರಿ ನಮ್ಮನ್ನು ನಮ್ಮ ಪಾಡಿಗೆ ಬಿಟ್ಟರೆ ಸಾಕು ಅಂತ ನಮಗೆ ಅನ್ನಿಸತೊಡಗಿತು. ಅದೇ ವಠಾರದಲ್ಲಿ ನಮ್ಮ ಹಾಗೆಯೇ ಮತ ಬದಲಾಯಿಸಿದ್ದ ಅನೇಕರಿದ್ದರು. ಅವರೆಲ್ಲರೂ ಪಾದ್ರಿಗಳ ಸವಿನುಡಿ ಕೇಳಿ ಮತ ಬದಲಾಯಿಸಿದ್ದವರೇ ಹೊರತು ಸ್ವತಃ ಏಸುವಿನಲ್ಲಿ ಭಕ್ತಿಯಿಂದಲಾಗಲಿ ಆ ಏಸುವಿನ ಮತ ತತ್ವಗಳನ್ನು ತಿಳಿದಾಗಲಿ ಬದಲಾಯಿಸಿದವರಲ್ಲ. ಆದರೆ ಅವರೆಲ್ಲರಿಗೂ ಹಿಂದೂ ಮತದ ಮೇಲೆ ದ್ವೇಷ ಉಂಟಾಗಿತ್ತು. ಒಬ್ಬ ಬ್ರಾಹ್ಮಣ, ಬ್ರಾಹ್ಮಣರ ಪೈಕಿ ಸ್ವಲ್ಪ ಕಡಿಮೆ ಜಾತಿಯವಳನ್ನು ಮದುವೆಯಾಗಿದ್ದನು. ಜನ ಅವನನ್ನು ಬಹಿಷ್ಕರಿಸಿದ್ದರು; ಅವನು ಕ್ರಿಸ್ತನಾದನು. ಇನ್ನೊಬ್ಬ ವಯಸ್ಸಾದ ಹಿಂದು ವಯಸ್ಸಾದ ಒಬ್ಬ ವಿಧವೆಯನ್ನು ಸಂಸಾರದಲ್ಲಿ ಸಂಗಾತಿಯಾಗಿ ಮಾಡಿಕೊಂಡನು. ಅವನನ್ನು ಜನ ಹಳ್ಳಿಯಿಂದ ಬೆಂಕಿ ಬಿಸಿನೀರು ಕೊಡದೆ ಓಡಿಸಿದರು; ಬಂದು ಅವನೂ ಕ್ರಿಸ್ತನಾದನು. ಇನ್ನು ಕ್ರಿಸ್ತರಾದ ಹರಿಜನರಿಗಂತೂ ಕಡಿಮೆ ಇರಲಿಲ್ಲ. ಆದರೆ ಮತವನ್ನು ಬದಲಾಯಿಸಿದುದರಿಂದ ಅವರೆಲ್ಲರಿಗೂ ಪಶ್ಚಾತ್ತಾಪವಾಗಿದ್ದಿತು. ಆದರೆ ಹಿಂದೂ ಮತ ಹೆಚ್ಚು ಆಧುನಿಕವಾಗಬೇಕು ಎಂದು ಅವರೆಲ್ಲಾ ಹೇಳುತ್ತಿದ್ದರು; ನಮ್ಮಂತವರಿಗೆಲ್ಲಾ ನಮ್ಮ ಮತದಲ್ಲಿ ಜಾಗ ಸಿಕ್ಕುವಂತೆ ಅದು ವಿಶಾಲವಾಗಬೇಕು ಎಂದು ಅವರು ಹೇಳುತ್ತಿದ್ದರು. ಕೆಲವು ಹರಿಜನರು, ಹಿಂದೂ ಮತ ನಮ್ಮನ್ನು ಅಸ್ಪೃಶ್ಯರನ್ನಾಗಿ ಮಾಡಿದೆ ಆದುದರಿಂದ ಕ್ರಿಸ್ತರಾದೆವು ಎನ್ನುತ್ತಿದ್ದವರು " ಸ್ವಾಮಿ ಹಿಂದೂ ಮತದಲ್ಲಿ ಅಸ್ಪೃಶ್ಯರಾಗಿದ್ದರೂ ನಾವು ಮನುಷ್ಯರಾಗಿದ್ದೆವು. ಇಲ್ಲಿ ನಾವು ದನ ನಾಯಿಗಳಿಗಿಂತ ಕಡಿಮೆಯಾಗಿದ್ದೇವೆ " ಎನ್ನುತ್ತಿದ್ದರು. ಅಲ್ಲಿಯ ಅಸ್ಪೃಶ್ಯ ಇಲ್ಲಿಯೂ ಅಸ್ಪೃಶ್ಯನೇ. ಅಲ್ಲಿ ಎಷ್ಟಾದರೂ ಅವನ ಮತದ ಇತರ ಅನುಯಾಯಿಗಳು ಇರುತ್ತಾರೆ. ಇಲ್ಲಿ ಅವನು ಸತ್ತರೂ ಕೇಳುವವರಿಲ್ಲ. ಹರಿಜನ

ಕ್ರಿಸ್ತರು " ಅಲ್ಲಿ ನಮ್ಮನ್ನು ಹೊಲೆಯರು ಅಂದರೂ ಸಹಿಸಬಹುದು. ಅಲ್ಲಿ ನಮ್ಮನ್ನು ೨ ಮಾರು ದೂರದಲ್ಲಿಟ್ಟಿರುತ್ತಿದ್ದರು. ಇಲ್ಲಿ ಪಾದ್ರಿಗಳು ನಮ್ಮನ್ನು ೨೦ ಮಾರು ದೂರದಲ್ಲಿದ್ದರೂ ಇನ್ನೂ ಸಾಲದು ಎಂದು ಗದರಿಸುತ್ತಾರೆ. ಅದೂ ಇರಲಿ, ನಾವು ಕ್ರಿಸ್ತಮತಕ್ಕೆ ಕೊಡುವ ದಂಡಗಳೆಷ್ಟು ಸ್ವಾಮಿ ? ಮನೆಯಲ್ಲಿ ಮಗು ಹುಟ್ಟಿದರೆ ನಾಲ್ಕು ರುಪಾಯಿ ಕೊಡಬೇಕು. ಮದುವೆ ಮಾಡಿದರೆ ೫ ರುಪಾಯಿ ಕೊಡಬೇಕು. ಹಬ್ಬ ಹಬ್ಬಕ್ಕೂ ಇವರಿಗೆ ಕಾಣಿಕೆ ಕೊಡಬೇಕು. ಪಾದ್ರಿಯ ಮನೆಯಲ್ಲಿ ಬಿಟ್ಟಿ ಕೆಲಸ ಮಾಡಬೇಕು. ಚರ್ಚಿನಲ್ಲಿ ಬಿಟ್ಟಿ ಕೆಲಸ ಮಾಡಬೇಕು. ಪಾದ್ರಿಗೆ ಸಿಟ್ಟು ಹತ್ತಿದರೆ, ಬಾಯಿಗೆ ನೀರು ಕೇಳುವವರೆಗೆ ಹೊಡೆದುಬಿಡುತ್ತಾರೆ. ಕಟುಕರು ಸ್ವಾಮಿ ಕಟುಕರು ! ಒಂದು ಸಲದ ಕಾಣಿಕೆ ಕೊಡದಿದ್ದರೆ ಹಿಂದೂ ಧರ್ಮದಲ್ಲಿ ಹಾಕುವುದಕ್ಕಿಂತ ಹೆಚ್ಚು ಬಹಿಷ್ಕಾರ ಹಾಕುತ್ತಾರೆ. ನಾವು ಪೂರ್ಣವಾಗಿ ಹಸಿವಿನಿಂದ ಸಾಯುತ್ತಿದ್ದರೂ ಇವನಿಗೆ ಕೊಡುವ ಕಾಣಿಕೆ ಸುಂಕ ಮಕ್ಕಳ ಹೊಟ್ಟೆ ಕಟ್ಟಿ ತಂದು ಕೊಡಲೇಬೇಕು " ಎಂದೂ ಮುಂತಾಗಿ ಹೇಳುತ್ತಿದ್ದರು. ಈ ರೀತಿ ದಂಡ ತೆರೆವುದು ಆ ಅವಿದ್ಯಾವಂತರಿಗೆ ಮಾತ್ರವೇ ಅಲ್ಲ. ನಮ್ಮ ಪಾಲಿಗೂ ಬಿದ್ದಿತು. ಎರಡು ತಿಂಗಳು ಇರುವುದರೊಳಗಾಗಿ ಇವರು ಈ ಕಾಣಿಕೆ ದಂಡಗಳಿಗಾಗಿ ಎಂಟು ರುಪಾಯಿ ಕೊಡಬೇಕಾಯಿತು. ನಮಗೂ ಬಹಳ ಬೇಜಾರಾಯಿತು.

" ಆ ದಿನ ರಾತ್ರಿ ಅಲ್ಲಿಂದ ಒಂದು ಮೈಲಿ ದೂರದಲ್ಲಿದ್ದ ಒಂದು ಹಳ್ಳಿಯಲ್ಲಿ ಇವರು ರಾತ್ರಿಯ ಸ್ಕೂಲು ಪ್ರಚಾರ ಕಾರ್ಯ ನಡೆಸಲು ಹೊರಟರು. ಪಾದ್ರಿ, ಹೊಸದಾಗಿ ಮತಕ್ಕೆ ಸೇರಿದವನು ಎಂದು ಇವರನ್ನು ಪ್ರಚಾರ ಮಾಡಬೇಕೆಂದು ಜತೆಯಲ್ಲಿ ತಾವೂ ಬಂದರು. " ಇವತ್ತು ನಾನು ಬಂದು ನಿಮ್ಮನ್ನು ಜನರಿಗೆ ಪರಿಚಯಮಾಡಿಸಿ ಬರುತ್ತೇನೆ. ನಾಳೆಯಿಂದ ನೀವೇ ಹೋಗಿ " ಎಂದರು. ಅವರು ನನ್ನನ್ನೂ ಜತೆಯಲ್ಲಿ ಬಾ ಎಂದರು. ಆದರೆ ನಾನು ಒಪ್ಪಲಿಲ್ಲ. "ಇಲ್ಲಿ ಕೂತುಕೊಂಡು ಮಾಡುವುದೇನು? ಬೆಳದಿಂಗಳಿದೆ. ದೂರವಿಲ್ಲ. ನಡಿ ಹೋಗಿ ಬರೋಣ" ಎಂದರು. ಅವರ ಜತೆಯಲ್ಲಿ ಹೋಗುವುದು ನನಗೂ ಬಹಳ ಸಂತೋಷವಾಗಿದ್ದಿತು. ಇಬ್ಬರೂ ಹೊರಟೆವು. ಸ್ವಲ್ಪ ಮುಂದೆ ಪಾದ್ರಿಯೂ ಅವನ ಜತೆ ಗ್ರಾಮ

ಫೋನ್ ಪೆಟ್ಟಿಗೆ ಹಾರ್ಮೋನಿಯಂ ಪೆಟ್ಟಿಗೆ ಹೊತ್ತುಕೊಂಡು ಇನ್ನು ಇಬ್ಬರೂ ಹೋಗುತ್ತಿದ್ದರು.

,, ನಾವು ಹೋದ ಹಳ್ಳಿಗೆ ರಸ್ತೆಯಿರಲಿಲ್ಲ. ಹಾಗೂ ಹೀಗೂ ಕಾಲು ದಾರಿಯಲ್ಲಿ ಹೋದೆವು. ಹೋದ ಕೂಡಲೆ ಒಂದು ಚಾವಡಿಯ ಮೇಲೆ ಏಸುವಿನ ಪಟ ತೂಗ ಹಾಕಿ ಪೆಟ್ರೋಮಾಕ್ಸ್ ದೀಪ ಹತ್ತಿಸಿ ಗ್ರಾಮ ಫೋನ್ ರಿಕಾರ್ಡುಗಳನ್ನು ಕಿರಚಿಸಲು ಪ್ರಾರಂಭಿಸಿದರು. ಆಳು ಪ್ರತಿ ಯೊಂದು ಮನೆಗೂ ಹೋಗಿ ಜನರನ್ನು ಕರೆದನು. ಹೀಗೆ ಒಂದು ಗಂಟೆ ಕರೆಯುವ ಹೊತ್ತಿಗೆ ೧೫ ಜನ ವಯಸ್ಸಾದವರೂ ೪-೫ ಮುದುಕಿಯರೂ ಬಂದರು. ಅವರನ್ನು ನೋಡಿದರೆ ಅವರಿಗೆ ಮುಖ್ಯವಾಗಿ ಬೇಕಾಗಿ ದ್ದುದು ಆಹಾರ, ಬಟ್ಟೆ ಮಾತ್ರವೆಂದು ಚೆನ್ನಾಗಿ ಗೊತ್ತಾಗುತ್ತಿದ್ದಿತು. ಮತ ಬೋಧನೆ ಅವರಿಗೆ ಯಾವ ವೈರಾಗ್ಯವನ್ನು ಕೊಡಬೇಕಾಗಿದ್ದಿತೋ ಆ ವೈರಾಗ್ಯ ಅವರಿಗೆ, ಬೇಕಾದುದಕ್ಕಿಂತ ಹೆಚ್ಚಾಗಿಯೇ ಇದ್ದಿತು. ಆದರೂ ಪಾದ್ರಿ ಭಗವಂತನ ಪ್ರಾರ್ಥನೆಯನ್ನು ಹಾರ್ಮೋನಿಯಂ ಶಬ್ದ ದೊಂದಿಗೆ ಮಾಡಿ ಆ ಮೇಲೆ ಮತಬೋಧೆ ಹೀಗೆ ಪ್ರಾರಂಭಿಸಿದರು.

" ಉಪದೇಶಿಗಳೇ—ಕೇಳಿ, ಏಸುವಿನ ಮಹಿಮೆಯನ್ನು ಬೋಧಿಸುವ ಅನೇಕ ಕತೆಗಳಿವೆ. ಆದರೆ ಮೊದಲು ನಿಮ್ಮ ಹಿಂದೂ ಶಾಸ್ತ್ರದಿಂದಲೇ ಒಂದು ಕತೆಯನ್ನು ಹೇಳುತ್ತೇನೆ ಕೇಳಿ. ಆಗ ನಮ್ಮ ಏಸು ಸ್ವಾಮಿಯ ನಿಜವಾದ ಮಹಿಮೆ ನಿಮಗೇ ಗೊತ್ತಾಗುವುದು. ' ಒಂದು ಇಲಿ, ಸಣ್ಣ ಇಲಿ ಮರಿ, ಪುಟ್ಟ ಇಲಿ ಮರಿ, ಒಂದು ಮೂಲೆಯಲ್ಲಿ ಮಲಗಿತ್ತು. ನಿದ್ರೆ ಯಿಂದ ಎಚ್ಚರವಾಗಿ ನೋಡುವಾಗ ಆ ಪುಟ್ಟ ಮರಿಯನ್ನು ಒಂದು ಬೆಕ್ಕು ಹಿಡಿದಿತ್ತು, ಪಾಪ ಚಿಕ್ಕ ಮರಿ ಪುಲ ಪುಲನೆ ಒದ್ದಾಡುವುದು; ಮಿಂಚಿನಂತೆ ಕಣ್ಣು; ಪುಟ್ಟ ಪುಟ್ಟ ಹಲ್ಲು; ರಾಕ್ಷಸನಂತೆ ಕಣ್ಣು ಬಿಡು ತ್ತಿದ್ದ ಬೆಕ್ಕನ್ನು ನೋಡಿ ಇಲಿಗೆ ಪಾಪ ಬಹಳ ಭಯವುಂಟಾಯಿತು. ಆಗ ಇಲಿ ಪ್ರಾಣವನ್ನು ಉಳಿಸು ಎಂದು ಬೆಕ್ಕನ್ನು ಬಹಳ ಅಂಗಲಾಚಿತು. ಆದರೆ ಬೆಕ್ಕು ಬಿಡಲಿಲ್ಲ. ಗುರ್ ಎಂದಿತು. ಇಲಿ ಹೆದರಿಕೊಂಡು ನಿಮ್ಮ ಬ್ರಹ್ಮ ದೇವನಲ್ಲಿಗೆ ಹೋಯಿತು. ಆಗ ನಿಮ್ಮ ಬ್ರಹ್ಮದೇವ ಏನು ಮಾಡುತ್ತಿ ದ್ದನು? ತನ್ನ ಮಗಳಾದ ಸರಸ್ವತಿಯನ್ನು ಹೆಂಡತಿಯನ್ನಾಗಿ—ಹೂಂ ಹೆಂಡತಿಯನ್ನಾಗಿ—ಮಾಡಿಕೊಂಡು ಲೋಲುಪ್ತನಾಗಿದ್ದನು. ಆ ಕಡೆ

ಯಿಂದ ಇಲಿಗೆ ಯಾವ ಧೈರ್ಯವೂ ಬರಲಿಲ್ಲ. ಆಗ ಇಲಿ ವೈಕುಂಠದಲ್ಲಿದ್ದ ವಿಷ್ಣುವಿನಲ್ಲಿಗೆ ಹೋಯಿತು. ವಿಷ್ಣುವು ಮಹಾಲಕ್ಷ್ಮಿಯೊಂದಿಗೆ ಪಗಡೆ ಯಾಡುತ್ತಿದ್ದನು. ಇಲಿ ಪ್ರಭೋ ಕಾಪಾಡು ಎಂದಿತು. ವಿಷ್ಣುವಿನ ಜ್ಞಾನವೆಲ್ಲಾ ಪಗಡೆಯ ಮೇಲೆ ಇದ್ದಿತು. ವಿಷ್ಣುವು ಬಂದನೋ—ಉಪದೇಶಿಗಳೇ ಬಂದನೋ? ಇಲ್ಲ ಇಲ್ಲ. ಆಗ ಇಲಿ ಇನ್ನೂ ಹೆಚ್ಚಾಗಿ ನಡಗುತ್ತಾ ಕೈಲಾಸೇಶ್ವರನಾದ ಶಿವನಲ್ಲಿಗೆ ಹೋಯಿತು. ಶಿವನು ಪಾರ್ವತಿಗೆ ಹಾವಿನ ಆಟವನ್ನು ತೋರಿಸುತ್ತಿದ್ದನು. ಇಲಿ ಪುಲ ಪುಲನೆ ಕಣ್ಣು ಬಿಡುತ್ತಾ "ಶಿವಾ ಈ ಬೆಕ್ಕು ನನ್ನನ್ನು ತಿನ್ನುವುದು ಕಾಪಾಡು ಕಾಪಾಡು" ಎಂದಿತು. ಶಿವನು ಬಂದನೋ? ಉಪದೇಶಿಗಳೇ ಬಂದನೋ—ಇಲ್ಲ ಬರಲಿಲ್ಲ! ಆಗ ಉಪದೇಶಿಗಳೆ, ಪಾಪ ಇಲಿಯು ಏನು ಮಾಡುವುದು? ಏಸು ಸ್ವಾಮಿಯ ಬಳಿಗೆ—ದೇವರ ಮಗನಾದ ಏಸುಸ್ವಾಮಿಯ ಬಳಿಗೆ—ಹೋಯಿತು. ಏಸುಸ್ವಾಮಿ ಕ್ರಿಸ್ತರ ಯೋಗ ಕ್ಷೇಮವನ್ನೇ ಕುರಿತು ಯೋಚಿಸುತ್ತಾ ಕುಳಿತಿದ್ದನು. ಉಪದೇಶಿಗಳೇ ಇಲಿಯ ಮೊರೆಯನ್ನು ಕೇಳಿ ಏಸುಸ್ವಾಮಿಯು ಬಂದನೋ—ಹೂ ಬಂದೇ ಬಂದನು; ಬಂದು ಏನು ಮಾಡಿದನು?"

"ಹಳ್ಳಿಯವರು ತಮಗೆ ಪಾದ್ರಿಯ ಮಾತು ಕೇಳಿಸಲೇ ಇಲ್ಲವೇನೋ ಎಂಬಂತೆ ಕುಳಿತಿದ್ದರು. ಅವರ ಮುಖದಲ್ಲಿ ಪಾದ್ರಿಯ ಮಾತನ್ನು ಕೇಳಿ ಅದರ ಪರವಾಗಿಯಾಗಲಿ ವಿರೋಧವಾಗಿಯಾಗಲಿ ಉಸಿರು ಹೊರಡಲಿಲ್ಲ. ಅವರ ಮುಖದಲ್ಲಿ, ಇವರು ಹೇಳಿದ್ದು ಅಲ್ಲಿಗೆ ಪ್ರವೇಶಿಸಿತೋ ಇಲ್ಲವೋ ಎಂಬಷ್ಟು ಮಂಕು ಇತ್ತು. ಆದರೆ ನಮ್ಮವರಿಗೆ ಪಾದ್ರಿಯ ಮಾತನ್ನು ಕೇಳಿ ಸಹಿಸಲಾರದಷ್ಟು ನಗುವೂ ಸಿಟ್ಟೂ ಏಕ ಕಾಲದಲ್ಲಿ ಬಂದಿತು. ಏಸುವು ಬಂದು ಏನು ಮಾಡಿದನು ಎಂದು ಪಾದ್ರಿಯು ಹೇಳಿದಾಗ ಇವರು "ಬೆಕ್ಕನ್ನು ಕೊಂದು ಇಲಿಯನ್ನು ತಿಂದನು!" ಎಂದು ಗಟ್ಟಿಯಾಗಿ ಹೇಳಿಬಿಟ್ಟರು. ಅದುವರೆಗೆ ನಿಶ್ಶಬ್ದವಾಗಿ ಪಾದ್ರಿಯ ಮಾತು ಕೇಳಿಸಿತೋ ಇಲ್ಲವೋ ಎಂಬಂತೆ ಕುಳಿತಿದ್ದ ರೈತರೆಲ್ಲಾ—ಸ್ತ್ರೀ ಪುರುಷರು—ಒಂದೇ ಏಟಿಗೆ ಘೊಳ್ಳೆಂದು ನಗುತ್ತಾ ಮೇಲಕ್ಕೆ ಎದ್ದರು. ಹಾರ್ಮೋನಿಯಂ ಬಾರಿಸುತ್ತಿದ್ದವನಿಗೂ ಗ್ರಾಮಫೋನು ತಟ್ಟೆಗಳನ್ನು ಹಾಕುತ್ತಿದ್ದವನಿಗೂ ನಗುವನ್ನು ಸಹಿಸಲು ಸಾಧ್ಯವಾಗಲಿಲ್ಲ. ಅವರೂ ಪಾದ್ರಿಯ

ಭಯವನ್ನು ಬಿಟ್ಟು ಗಟ್ಟಿಯಾಗಿಯೇ ನಕ್ಕುಬಿಟ್ಟರು. ಹಳ್ಳಿಯವರೆಲ್ಲಾ ಒಬ್ಬೊಬ್ಬರಾಗಿ ಪಾದ್ರಿಯ ಮುಖವನ್ನು ನೋಡುತ್ತಾ ಗಟ್ಟಿಯಾಗಿ ಅವನ ಕೆನ್ನೆಯ ಮೇಲೆ ಹೊಡೆದಂತೆ "ಬೆಕ್ಕನ್ನು ಕೊಂದು ಇಲಿಯನ್ನು ತಿಂದನು" ಎಂದು ಹೇಳಿಕೊಂಡು ಹೊರಟು ಹೋದರು.

"ಎಲ್ಲರೂ ಹೊರಟು ಹೋಗುವ ವರೆಗೆ ಪಾದ್ರಿಯು ಸುಮ್ಮನೆ ಇದ್ದನು. ಅನಂತರ ಮುಖದಲ್ಲಿ ಕೆಂಡವನ್ನು ಸುರಿಸುತ್ತಾ "ಬೆಕ್ಕನ್ನು ಕೊಂದು ಇಲಿಯನ್ನು ತಿಂದನು" ಅಲ್ಲವೇ..ಸರಿ. ನಮ್ಮ ಏಸುವಿಗೆ ಹೀಗೆ ನೀವು ಅವಮಾನ ಮಾಡುತೀರಾ ಎಂದನು. ನಮ್ಮವರು "ನೀವು ಮಾತ್ರ ನಮ್ಮ ಬ್ರಹ್ಮ ವಿಷ್ಣು ಮಹೇಶ್ವರರಿಗೆ ಅವಮಾನ ಮಾಡಬಹುದೋ. ನಿಮ್ಮ ಏಸುವಿಗೆ ಅವಮಾನ ಮಾಡಿದವರು ನೀವೇ ಹೊರತು ನಾನಲ್ಲ. ಇತರರ ದೇವರನ್ನು ಗೌರವಿಸುವವನು ತನ್ನ ದೇವರನ್ನೂ ಗೌರವಿಸುತ್ತಾನೆ. ತನ್ನ ದೇವರನ್ನು ತಿರಸ್ಕರಿಸುವವನು ಇತರರ ದೇವರನ್ನೂ ತಿರಸ್ಕರಿಸುತ್ತಾನೆ. ಪಾದ್ರಿಗಳು ಇಲ್ಲದಿದ್ದರೆ ಇನ್ನೂ ಅನೇಕರು ಕ್ರಿಸ್ತನ ಅನುಯಾಯಿಗಳಾಗುತ್ತಿದ್ದರು. ನಿಮ್ಮ ಅಪಪ್ರಚಾರದಿಂದ ಕ್ರಿಸ್ತನ ಹೆಸರನ್ನೂ ನಿಮ್ಮ ಮಟ್ಟಕ್ಕೆ ಇಳಿಸಿದ್ದೀರಿ" ಎಂದರು. ಮನೆಗೆ ಹೋದ ಕೂಡಲೇ ಪಾದ್ರಿ "ನೀವು ನಾಳೆ ಈ ವಠಾರ ಬಿಟ್ಟುಬಿಡಿ. ನೀವು ಹೇಳಿದ ಮಾತಿನಿಂದ ಏಸುವಿಗೆ ಬಹಳ ಅಪಮಾನವಾಗಿದೆ" ಎಂದನು. ಮರುದಿವಸ ಪೋಸ್ಟ್ ಆಫೀಸಿಗೆ ಇವರು ಹೋದಾಗ ಪೋಸ್ಟು ಮಾಸ್ಟರು "ನಿಮ್ಮನ್ನು ಹಂಗಾಮಿಯಾಗಿ ನಿಯಮಿಸಿದ್ದೆವು. ಇನ್ನು ನಿಮ್ಮ ಆವಶ್ಯಕತೆಯಿಲ್ಲ" ಎಂದು ಹೇಳಿದರು.

"ಅದೇ ದಿನ ನಾವು ಕ್ರಿಸ್ತರ ವಠಾರವನ್ನು ಬಿಟ್ಟೆವು. ಇರುವುದಕ್ಕೆ ಬೇರೆ ಮನೆಯಿರಲಿಲ್ಲ. ಕ್ರಿಸ್ತರಾದುದರಿಂದ ಹಿಂದೆ ಇದ್ದ ಛತ್ರದಲ್ಲಿ ಮತ್ತೆ ಜಾಗ ಸಿಕ್ಕುವಂತೆ ಇರಲಿಲ್ಲ. ಕೈಯಲ್ಲಿ ಒಂದು ಕಾಸೂ ಇರಲಿಲ್ಲ. ಯಾವುದಾದರೂ ಹಳ್ಳಿ ಸೇರಿ ಜೀವಿಸೋಣ ಎಂದುಕೊಂಡು ನಾವಿಬ್ಬರೂ ನಮ್ಮ ಸಾಮಾನುಗಳನ್ನು ತಲೆಯ ಮೇಲೆಯೇ ಹೊತ್ತುಕೊಂಡು ಮಂಗಳೂರು ಬಿಟ್ಟು ಹೊರಟೆವು. ದಾರಿಯಲ್ಲಿ ನಮಗೆ ಒಬ್ಬ ಹಾವಾಡಿಗನ ಪರಿಚಯವಾಯಿತು. ಅವನು ಒಬ್ಬನೇ ಇದ್ದನು. ಊರಿನಿಂದ ಊರಿಗೆ ಹಾವನ್ನು ಆಡಿಸುತ್ತಾ ಕಾಲ ಕಳೆಯುತ್ತಿದ್ದನು. ನಾವೂ ಅವನ ಜತೆ

ಸೇರಿದೆವು. ಹೀಗೆ ಐದು ವರುಷ ಕಳೆದು ಹೋಯಿತು. ಇವರಿಗೆ ಹಾವುಗಳನ್ನು ಆಡಿಸುವುದರಲ್ಲಿ ಒಳ್ಳೆಯ ಪರಿಶ್ರಮವುಂಟಾಯಿತು. ಆ ಐದು ವರುಷ ನಾವು ಬಹು ಸುಖವಾಗಿ ನದಿ ತೀರ ತೋಪು ಬೆಟ್ಟಗಳ ತಪ್ಪಲು ಕಾಡುಗಳು ಮನಸ್ಸು ಬಂದ ಕಡೆ ಯಾವ ಯೋಚನೆಯೂ ಇಲ್ಲದೆ ತಿರುಗುತ್ತಾ ಕಾಲ ಕಳೆದೆವು. ಮುಂದೆ ನಮ್ಮ ಜತೆಯಲ್ಲಿದ್ದ ಹಾವಾಡಿಗ ಸತ್ತುಹೋದ. ಅವನ ಆಸ್ತಿಗಳಾದ ಪುಂಗಿ ಎರಡು ಹಾವು ಎರಡು ಬುಟ್ಟಿ ಒಂದು ತಮಟೆ ಇವು ನಮಗೆ ಬಂದವು. ಈ ತಿರುಗಾಟದ ಜೀವನ ನಮಗೆ ಅಭ್ಯಾಸವಾಗಿದ್ದಿತು. ನಾವು ಬಹು ಸುಖವಾಗಿಯೇ ಇದ್ದೆವು. ಈಚೆಗೆ ಇವರಿಗೆ ಆಫೀಮು ಅಭ್ಯಾಸ ಹೆಚ್ಚಾಯಿತು. ನೆನ್ನೆ ನನ್ನನ್ನು ಅವರು ಹೊಡೆಯುವುದಕ್ಕೆ ಬಂದುದನ್ನು ನೀನು ನೋಡಿದೆ. ಆದರೆ ಅದು ಏನು ಮಹಾ ! ಅದು ಆಫೀಮಿನ ಅಮಲಿನಿಂದ ಅವರಿಗೆ ಉಂಟಾಗಿದ್ದ ಹುಚ್ಚು. ಪ್ರತಿಯೊಬ್ಬ ಗಂಡನೂ ಹೆಂಡತಿಯನ್ನು ಇಷ್ಟೇ ಸುಖವಾಗಿಡಲು ಪ್ರಯತ್ನಿಸಿದರೆ ಲೋಕದಲ್ಲಿ ಎಷ್ಟೋ ಕಷ್ಟ ಕಡಿಮೆಯಾಗುವುದು. ''

ಹಾವಾಡಿಗನ ಹೆಂಡತಿ ಈ ಕತೆ ಹೇಳುತ್ತಿರುವಾಗ, ಸುದರ್ಶನನಿಗೆ ತಾನು ಮಲ್ಲಿಗೆಹಳ್ಳಿಯ ಯಜಮಾನರಿಂದ ಕೇಳಿದ್ದ ಭಾರತ ರಾಮಾಯಣದ ಕಥೆಗಳೆಲ್ಲಾ ಜ್ಞಾಪಕ ಬಂದುವು. ಆ ಕತೆ ಕೇಳುವಾಗ ಅವನಿಗೆ ಎಷ್ಟು ಏಕಾಗ್ರತೆ ಆಸೆ ಇರುತ್ತಿದ್ದಿತೋ ಈ ಅನಾಮಧೇಯಳಾದ ಹಳ್ಳಿ ಹೆಂಗಸಿನ ಕಥೆ ಕೇಳುವಾಗಲೂ ಅವನಿಗೆ ಅಷ್ಟೇ ಉತ್ಸಾಹವಿದ್ದಿತು. ಹಾವಾಡಿಗನ ಹೆಂಡತಿ ಕಥೆ ಹೇಳುತ್ತಾ ಹೇಳುತ್ತಾ ಎದುರಿಗೆ ಒಬ್ಬ ಹುಡುಗ ಇರುವುದನ್ನೇ ಮರೆತಳು ; ಅವಳು ತನ್ನ ಪಾಡಿಗೆ ತಾನು ಮಾತನಾಡಿಕೊಳ್ಳುತ್ತಿರುವಂತೆ ತೋರಿತು. ಅವಳ ಮಾತಿನಲ್ಲಿ ಯಾವ ವಿಧವಾದ ಕಾವೂ ಇರಲಿಲ್ಲ. ಅವಳು ಸ್ವಾಭಾವಿಕವಾಗಿ ಗಂಭೀರವಾಗಿ ಮೃದುವಾಗಿ ಸರಳವಾಗಿ ಮಾತನಾಡುತ್ತಿದ್ದಳು. ಅವಳ ಮಾತು ಮುಗಿದ ಮೇಲೆ ಸುದರ್ಶನ ಅಲ್ಲಿಯೇ ಜಗಲಿಗೆ ಒರಗಿ ಮಲಗಿಕ್ಕೊಂಡು ಬಿಟ್ಟನು. ಅವನಿಗೆ ನಿದ್ರೆ ಯಾವಾಗ ಬಂತೋ ಗೊತ್ತಿಲ್ಲ. ಬೆಳಿಗ್ಗೆ ಏಳುವ ಹೊತ್ತಿಗೆ ಆಗತಾನೆ ಸೂರ್ಯೋದಯವಾಗುತ್ತಿತ್ತು. ಸುದರ್ಶನ ಕಣ್ಣುಬಿಟ್ಟು ನೋಡಿದನು. ನಿಶ್ಶಬ್ದವಾಗಿದ್ದಿತು. ಹಾವಾಡಿಗನ ಹೆಂಡತಿ ಎಲ್ಲಿಯೂ ಕಾ

ಲಿಲ್ಲ ಹಾವಾಗಲಿ ಬುಟ್ಟಿಯಾಗಲಿ ಅದರ ಸೂಚನೆಯಾಗಲಿ ಎಲ್ಲಿಯೂ ಕಣ್ಣಿಗೆ ಬೀಳಲಿಲ್ಲ. ಹಾವಾಡಿಗನ ಹೆಂಡತಿ ಬೆಳಗಿನ ಜಾವ ಎದ್ದು ಹೊರಟುಹೋಗಿರುವಳೆಂಬುದು ಸುದರ್ಶನನಿಗೆ ಗೊತ್ತಾಯಿತು. ಅವನು 'ಪುಣ್ಯಾತ್ಗಿತ್ತಿ ಎಲ್ಲಾದರೂ ಸುಖವಾಗಿರು' ಎಂದುಕೊಂಡು ಅನಂತು ವಿನ ಮನೆಗೆ ಬಂದನು. ಹಾವಾಡಿಗನ ಹೆಂಡತಿ "ನಮ್ಮಲ್ಲಿ ಮಂತ್ರವಿಲ್ಲ" ವೆಂದು ಹೇಳಿದ್ದರೂ ಸುದರ್ಶನನು ಅವನು ಹೇಳಿಕೊಟ್ಟಿದ್ದ ಹ್ರಂಶ್ರಂ ಮುಂತಾದ ಮಂತ್ರಗಳನ್ನು ಸಿತ್ಯಾ ನೂರು ಸಲ ಹೇಳಿ ನದಿಯಲ್ಲಿ ಹೂವು ಹಾಕಿ, ಒಟ್ಟೆ ಹರಿದು ಅದು ಮಂತ್ರದ ಪ್ರಭಾವದಿಂದ ಮೊದಲಿನಂತೆ ಸೇರುವುದೋ ಎಂದು ನೋಡುತ್ತಿದ್ದನು ಹೀಗೆ ಎರಡು ತಿಂಗಳು ಮಾಡಿದ ಮೇಲೂ ಹರಿದ ಒಟ್ಟೆ ಮೊದಲಿನಂತೆಯೇ ಇದ್ದುದರಿಂದ ಅಲ್ಲಿಂದ ಮುಂದೆ ಒಟ್ಟೆ ಹರಿಯುವುದನ್ನು ಬಿಟ್ಟು 'ಈ ಮಂತ್ರದಿಂದ ಪ್ರಯೋಜನವಿಲ್ಲ. ಇತರ ತಂತ್ರ ಪತ್ತೆಯಾಗಲಿಲ್ಲ" ಎಂದುಕೊಂಡು ಸುಮ್ಮನಾದನು ಮಂತ್ರ ಯಾವತ್ತಾದರೂ ಒಂದು ದಿನ ಸ್ವಾಧೀನ ವಾಗಬಹುದು ಎಂಬ ನಂಬಿಕೆ ಸುದರ್ಶನನನ್ನು ಇನ್ನೂ ಬಿಟ್ಟಿಲ್ಲ.

---

## ೧೮. ಕಣಜದಲ್ಲಿ ಮುಚ್ಚಿಟ್ಟ ಹೆಣ್ಣು

---

ಊರಿನಲ್ಲಿ ಅಸಾಧ್ಯವಾಗಿ ಒಂದು ಬೀದಿಯಿಂದ ಒಂದು ಬೀದಿಗೆ ವೈದೇಹಿ ಮಂಗಳೆಯರ ಮದುವೆಯ ಚಪ್ಪರ ಏರ್ಪಾಡಾಯಿತು. ಎಲ್ಲೆ ಲ್ಲಿಂದಲೂ ಅಡಕೆ ಮರಗಳೂ ಗಳುಗಳೂ ಮಾವಿನಸೊಪ್ಪು ಬಗಿನೆ ಗರಿ ಗಳೂ ಬಂದು ಅನಂತುವಿನ ಮನೆಯ ಮುಂದೆ ಬಿದ್ದವು.

ಬಕ್ಕಪ್ಪನ ಮಗಳು ಲಕ್ಷ್ಮಿಗೂ ಪೇಟೆಯ ಅಯ್ಯಣ್ಣನಿಗೂ ಪ್ರೇಮ ಬೆಳೆದಿತ್ತು. ಲಕ್ಷ್ಮಿಗೆ ವಯಸ್ಸು ಹದಿನೆಂಟು ಆಗಿದ್ದಿತು. ಅಯ್ಯಣ್ಣನಿಗೆ 23-24 ವಯಸ್ಸು. ಆದರೆ ಬಕ್ಕಪ್ಪನಿಗೂ ಅಯ್ಯಣ್ಣನ ತಂದೆಗೂ ಕೋರ್ಟಿನ ಮಾತಿಗೆ ವ್ಯಾಜ್ಯ ಬಂದು ಬಕ್ಕಪ್ಪ ಅಯ್ಯಣ್ಣನನ್ನು ಮನೆಗೆ ಬರಬೇಡ ವೆಂದು ಹೇಳಿದ್ದನು. ಅಷ್ಟೇ ಅಲ್ಲ ಅಯ್ಯಣ್ಣನ ಹತ್ತಿರ ಮಾತನಾಡಿದರೆ ಅಯ್ಯಣ್ಣ ಇರುವ ಕಡೆ ನಿಂತರೆ ನಿನ್ನತಲೆ ಒಡೆಯುತ್ತೇನೆ ಎಂದೂ ಹೆದರಿ ಸಿದ್ದನು. ಆದರೆ ಯುವಕ ಯುವತಿಯರಿಗೆ ತಂದೆಗಳ ಕೋರ್ಟು

ವ್ಯಾಜ್ಯ ಕಟ್ಟಿಕೊಂಡು ಆಗಬೇಕಾದುದೇನು? ಒಟ್ಟಿಗೆ ಸೇರಲು, ಒಂದೆರಡು ಮಾತನಾಡಲು ಎಲ್ಲಿಯಾದರೂ ಅವಕಾಶ ಸಿಕ್ಕುವುದೇ ಎಂದು ಅವರು ಸವರಿಸುತ್ತಿದ್ದರು. ಆ ಬೆಳಿಗ್ಗೆ ಅನಂತು ಸುದರ್ಶನನಿಗೆ "ಊರಲ್ಲಿರುವ ಎಲ್ಲಾ ಹೆಣ್ಣಾಳು ಗಂಡಾಳುಗಳನ್ನೂ ಇವತ್ತು ಕೂಲಿಗೆ ಕರೆ. ಗಂಡಾಳು ಚಪ್ಪರ ಹಾಕಲಿ. ಹೆಣ್ಣಾಳು ಮಣ್ಣು ಹೊತ್ತು ಹಾಕಲಿ. ತೋರಣ, ಮಾವಿನ ಸೊಪ್ಪು ಕಟ್ಟಲಿ" ಎಂದನು. ಮರಿಯ ಆಳುಗಳನ್ನೆಲ್ಲಾ ಕರೆಯುತ್ತಾ ಅಯ್ಯಣ್ಣನ ಮನೆಗೆ ಹೋದನು. ಅಯ್ಯಣ್ಣನಿಗೆ ಲಕ್ಷ್ಮಿಯನ್ನು ನೋಡದುದರಿಂದ ಬೇಜಾರಾಗಿದ್ದಿತು. ಅವನಿಗೆ ಜೀವನದಲ್ಲಿ ಯಾವುದರ ಮೇಲೆಯೂ ಉತ್ಸಾಹವಿರಲಿಲ್ಲ. ಅವನು "ಹೋಗಯ್ಯ ಯಾರಿಗೆ ಬೇಕು ನಿನ್ನ ಕೂಲಿ?" ಎಂದನು. ಮರಿಯು ಅವನ ಕಡೆಯೇ ನೋಡುತ್ತಾ "ಊರಿನಲ್ಲಿರುವ ಹೆಣ್ಣಾಳು ಗಂಡಾಳು ಎಲ್ಲಾ ಇವತ್ತು ಬೇಕಾಗಿದೆ. ಎಲ್ಲಾ ಹೆಣ್ಣಾಳುಗಳೂ ಬರ್ತಾರೆ. ಲಕ್ಷ್ಮಿಯೂ ಬರ್ತಾಳೆ" ಎಂದನು. ಅಯ್ಯಣ್ಣ "ಸಮಚಾರ ಹಾಗೋ, ನಡಿ ಬಂದೆ" ಎಂದನು. ಲಕ್ಷ್ಮಿಯ ಅವಸ್ಥೆಯೂ ಅಷ್ಟೇ ಆಯಿತು. ಮೊದಲು ಬರುವುದಿಲ್ಲ ಎಂದಿದ್ದವಳು ಅಯ್ಯಣ್ಣ ಬರುತ್ತಾನೆ ಎಂದ ಕೂಡಲೆ ಹಾರಿದಳು. ಆದರೆ ಅಯ್ಯಣ್ಣ ಬರುವ ವಿಚಾರ ಲಕ್ಷ್ಮಿಯ ಅಪ್ಪ ಬಕ್ಕಪ್ಪನ ಕಿವಿಗೆ ಬಿದ್ದಿರಲಿಲ್ಲ. ಅವನು 'ಏ ಲಕ್ಷ್ಮಿ' ಅಲ್ಲಿಗೇನಾದರೂ ಅಯ್ಯಣ್ಣ ಬಂದರೆ ಒಂದು ಗಳಿಗೆಯೂ ಅಲ್ಲಿ ಇರಬೇಡ ಜೋಪಾನ. ಅವನ ಹತ್ತಿರ ಒಂದು ಮಾತನ್ನು ಆಡಿದರೂ ನಿನ್ನ ಸೊಂಟ ಮುರಿಯುತ್ತೇನೆ" ಎಂದನು. ಲಕ್ಷ್ಮಿಯು 'ಮಾತನಾಡುವುದಿಲ್ಲ' ಎಂದು ಹೇಳಿ ಹೋದಳು.

ಬೀದಿ, ಕೆಲಸ ಮಾಡುವ ಆಳುಗಳಿಂದ ತುಂಬಿ ಹೋಗಿದ್ದಿತು. ಅನಂತುವಿನ ಮನೆಯ ಒಂದು ಮಗ್ಗಲಿನ ವಠಾರದಲ್ಲಿ ಎರಡು ಕಣಜಗಳೂ ಅವುಗಳ ಮುಂದೆ ಭತ್ತ ರಾಗಿ ಸುರಿಯಲು ಸ್ವಲ್ಪ ಜಾಗವೂ ಇದ್ದಿತು. ಮನೆಗೂ ಕಣಜಕ್ಕೂ ಸಂಬಂಧವನ್ನು ತಪ್ಪಿಸಿ ಬೀದಿಯಿಂದಲೇ ಕಣಜದ ಮನೆಗೆ ಹೋಗುವಂತೆ ಬಾಗಿಲು ಇಟ್ಟಿದ್ದರು. ಚಪ್ಪರದ ಹೊಚ್ಚು ಹಗ್ಗ ಹುರಿಗಳನ್ನು ಅಲ್ಲಿ ಇಟ್ಟಿದ್ದರು. ಹುರಿಗಳನ್ನು ತರಲು ಲಕ್ಷ್ಮಿ ಆ ಮನೆಯೊಳಕ್ಕೆ ಹೋದಾಗ, ಅಯ್ಯಣ್ಣನೂ ಹೋದನು. ತಂದೆ

ಗಳು ವ್ಯಾಜ್ಯವಾಡುವುದಕ್ಕೆ ಮುಂಚೆ ಲಕ್ಷ್ಮಿಯನ್ನು ಅಯ್ಯಣ್ಣನಿಗೆ ಕೊಟ್ಟು ಮದುವೆ ಮಾಡಬೇಕೆಂದು ತೀರ್ಮಾನವಾಗಿದ್ದಿತು. ಆದರೆ ಮಧ್ಯೆ ಹಾಳು ಲಾಯರ ಮಾತು ಕೇಳಿ ಅಯ್ಯಣ್ಣನ ತಂದೆ ಬಕ್ಕಪ್ಪನಿಗೆ ವಿರೋಧ ವಾಗಿ ಸಾಕ್ಷಿ ಹೇಳಿಬಿಟ್ಟನು. ತಂದೆಯ ಆ ತಪ್ಪಿಗಾಗಿ ಅಯ್ಯಣ್ಣ ಲಕ್ಷ್ಮಿ ಯನ್ನು ಮನಸ್ಸಿನಲ್ಲಿ ಸಾವಿರ ಸಲ ಕ್ಷಮಾಪಣೆ ಕೇಳಿದ್ದನು. ಆದರೆ ಅಯ್ಯಣ್ಣನ ಕ್ಷಮಾಪಣೆ ಕೇಳುವರಾರು? ಹಿರಿಯರು ಇಬ್ಬರೂ ಸೋಲ ಲಿಲ್ಲ. ಹೀಗೆ ಸುಮಾರು ಒಂದು ವರುಷವೇ ಕಳೆದಿತ್ತು. ಬಕ್ಕಪ್ಪ "ಮಗಳಿಗೆ ಬೇರೆ ವರನನ್ನು ನೋಡಿ ಮದುವೆ ಮಾಡುತ್ತೇನೆ" ಎಂದಿ ದ್ದನು. ಅಯ್ಯಣ್ಣನ ತಂದೆ "ಗಂಡಸಾಗಿ ಹುಟ್ಟಿದವನಿಗೆ ಹೆಂಡತಿಗೆ ದರಿದ್ರವಲ್ಲ. ಲೋಕದಲ್ಲಿ ಇವನೊಬ್ಬನೇ ಅಲ್ಲ ಹೆಣ್ಣು ಹೆತ್ತವನು" ಎಂದು ಗದ್ದಲವಾಗಿಯೇ ಕೂಗುತ್ತಿದ್ದನು. ಈ ಮುದುಕರ ಆರ್ಭಟ ಕೇಳಿ ಆ ಯುವಕ ಯುವತಿಯರ ಹೊಟ್ಟೆಯಲ್ಲಿ ಹುಣಸೇಹಣ್ಣು ಕಿವಿಚಿ ದಂತೆ ಆಗುತ್ತಿದ್ದಿತು. ಲಕ್ಷ್ಮಿಯ ಹಿಂದೆ ಒಳಕ್ಕೆ ಹೋದ ಅಯ್ಯಣ್ಣ, ಲಕ್ಷ್ಮಿಯೊಡನೆ ಮಾತನಾಡುತ್ತಾ ನಿಂತನು. "ನೀನು ಏನು ಮಾಡಿ ದರೂ ಬೇರೆ ಯಾರನ್ನೂ ಮದುವೆಯಾಗಲು ಒಪ್ಪಬೇಡ. ನಾನೂ ಒಪ್ಪು ವುದಿಲ್ಲ. ನಾವಿಬ್ಬರೂ ಗಟ್ಟಿಯಾಗಿ ಮೊಂಡು ಹಿಡಿದರೆ ಅವರು ಏನೂ ಮಾಡುವುದಕ್ಕಾಗುವುದಿಲ್ಲ. ಆಗ ಅವರೇ ರಾಜಿಯಾಗುತ್ತಾರೆ" ಎಂದು ಅಯ್ಯಣ್ಣ ಹೇಳುತ್ತಿರುವಾಗ ಮರಿಯನು ಬೀದಿಯಿಂದ ಬಂದು "ಅಯ್ಯಣ್ಣ, ಬಕ್ಕಪ್ಪ ಇಲ್ಲಿಗೇ ಬರುತ್ತಿದ್ದಾರೆ" ಎಂದ. ಅಯ್ಯಣ್ಣನಿಗೆ ಸ್ವಲ್ಪ ಗಾಬರಿಯಾಯಿತು. ಲಕ್ಷ್ಮಿಯಂತೂ ಗಡಗಡನೆ ನಡುಗಿಯೇ ಬಿಟ್ಟಳು. ಅಯ್ಯಣ್ಣನ ಮನೆಯವರಲ್ಲಿ ತನ್ನ ತಂದೆಗಿದ್ದ ದ್ವೇಷದ ಆಳ ಅವನು ಮನೆಯಲ್ಲಿ ಮಾತನಾಡುವುದರಲ್ಲಿಯೇ ಲಕ್ಷ್ಮಿಗೆ ಗೊತ್ತಾಗಿದ್ದಿತು. ಅಯ್ಯಣ್ಣನು ಅವಳಿಗೆ "ನೀನು ಮೊದಲು ಬೀದಿಗೆ ನಡಿ" ಎಂದನು. ಅವಳು ನಡುಗುತ್ತಾ "ಇಷ್ಟು ಜನರ ಎದುರಿಗೆ ನಾನು ಖಂಡಿತ ತಂದೆಯ ಮುಂದೆ ಹೋಗುವುದಿಲ್ಲ. ಇಲ್ಲಿಂದ ಹೊರಡುವುದಕ್ಕೆ ಕಾಲೇ ಬಾರದು ಏನು ಮಾಡಲಿ" ಎಂದಳು. ಮರಿಯ ಮತ್ತೆ ಬಾಗಿಲಿನವರೆಗೆ ಹೋಗಿ ನೋಡಿ "ಬಕ್ಕಪ್ಪ ಬಂದೇಬಿಟ್ಟ" ಎಂದನು. ಲಕ್ಷ್ಮಿಯು "ಅಯ್ಯೊ ಅಯ್ಯೊ ದೇವರೆ ಏನುಮಾಡಲಿ. ಕೈಯ್ಯಲ್ಲಿರುವ ದೊಣ್ಣೆ

ಯಿಂದ ನಿಮ್ಮ ತಲೆಯನ್ನೂ ಒಡೆಯುತ್ತಾನೆ'' ಎಂದಳು. ಮರಿಯ 'ತಡೆಯಿರಿ' ಎಂದು ಅಲ್ಲೇ ಇದ್ದ ಒಂದು ಸಣ್ಣ ಕಾಲುಮಣೆಯನ್ನು ರಾಗಿಯ ಕಣಜದ ಮುಂದೆ ಇಟ್ಟು ಕಣಜದ ಬಾಗಿಲನ್ನು ತೆರೆದು ಅಯ್ಯ ಣ್ಣನಿಗೆ "ಲಕ್ಷ್ಮಿಯನ್ನು ಇದರೊಳಕ್ಕೆ ತಳ್ಳು. ಹೂ ಬೇಗ'' ಎಂದನು. ಅಯ್ಯಣ್ಣನಿಗೂ ಗಾಬರಿಯಲ್ಲಿ ಏನೂ ತೋರಲಿಲ್ಲ. ಅವನು ಲಕ್ಷ್ಮಿಯನ್ನು ಎಳೆದುಕೊಂಡು ಬಂದೇ ಕಾಲುಮಣೆ ಮೇಲೆ ನಿಲ್ಲಿಸಿ ಒಳಕ್ಕೆ ಇಳಿಸಿದನು. ಮರಿಯ ಸ್ಟೂಲನ್ನು ಮಗ್ಗುಲಿನ ಭತ್ತದ ಕಣಜದೊಳಕ್ಕೆ ಎಸೆದ.

ಒಕ್ಕಪ್ಪ ಬಂದು ಬಾಗಿಲಿನಲ್ಲಿದ್ದವರನ್ನು ಲಕ್ಷ್ಮಿ ಎಲ್ಲಿ ಎಂದು ಕೇಳಿ ದನು. ಅವರವರ ಕೆಲಸದಲ್ಲಿ ತೊಡಗಿದ್ದ ಕೂಲಿಗಳೊಬ್ಬರೂ ಸರಿಯಾಗಿ ಜವಾಬು ಕೊಡಲಿಲ್ಲ. ಒಕ್ಕಪ್ಪ ಕಣಜದ ವಠಾರಕ್ಕೆ ಬಂದನು. ಅವನ ಎದುರಿಗೆ ಒಳಗಿನಿಂದ ಹೊಚ್ಚುಗಳನ್ನು ಹಿಡಿದುಕೊಂಡು ಅಯ್ಯಣ್ಣ ಹೊರಕ್ಕೆ ಬಂದನು. ಒಕ್ಕಪ್ಪ ನುಂಗುವಂತೆ ಅವನನ್ನೇ ನೋಡಿದನು. ಒಳಗೆ ಹೋದಾಗ ಮತ್ತೊಂದು ಮೂಲೆಯಲ್ಲಿ ಮರಿಯ, ಗಂಟುಬಿದ್ದಿದ್ದ ಹೊಚ್ಚುಗಳನ್ನು ಬಿಡಿಸುತ್ತಾ ಕುಳಿತಿದ್ದನು. ಒಕ್ಕಪ್ಪ ಅವನನ್ನು "ಏ ಮರಿಯ ಎಲ್ಲಿ ಲಕ್ಷ್ಮಿ'' ಎಂದನು. ಮರಿಯ "ಬಾಗಿಲಿನಲ್ಲಿಯೇ ಇರ ಬೇಕು. ಅಥವ ಅಯ್ಯ ಅವರ ಮನೆ ಒಳಗೆ ಯಾವುದಾದರೂ ಕೆಲಸ ಮಾಡ್ತಾ ಇರಬಹುದು ನೋಡಿ'' ಎಂದನು. ಒಕ್ಕಪ್ಪ ಒಂದು ಗಳಿಗೆ ಮರಿಯನ ಮುಖವನ್ನೇ ನೋಡಿ ಅನಂತರ ಹೆಗಲಿನ ಮೇಲೆ ಇದ್ದ ಚೀಲ ವನ್ನು ರಾಗಿಯ ಕಣಜದ ಮುಂದೆ ನೆಲದ ಮೇಲೆ ಹಾಸಿಕೊಂಡು ಅದರ ಮೇಲೆ ಕುಳಿತನು. ಮರಿಯ ಒಳಗಿರುವವಳಿಗೆ ತಿಳಿಯಲಿ ಎಂದು "ಏನು ಕೂತೇಬಿಟ್ರೆಲ್ಲ'' ಎಂದನು. ಒಕ್ಕಪ್ಪ ಬೇಜಾರಿನಿಂದ "ಯಾಕೆ ಕೂತ್ಕೊ ಳ್ಳೋಕಾಗದೋ'' ಎಂದನು. ಆ ಧ್ವನಿಯಿಂದ ಅವನು ಕುಳಿತಿದ್ದ ಜಾಗ ಲಕ್ಷ್ಮಿಗೆ ಗೊತ್ತಾಯಿತು. ಅವಳ ಹೃದಯ ಬಾಯಿಗೆ ಬಂದಂತಾಯಿತು.

ಒಕ್ಕಪ್ಪ ಜಾಗಬಿಟ್ಟು ಏಳಲಿಲ್ಲ. ಅವನಿಗೆ ತನ್ನ ಮಗಳು ಲಕ್ಷ್ಮಿ ಕಣಜದಲ್ಲಿ ಕುಳಿತಿರುವುದು ಗೊತ್ತಾಯಿತೋ ಇಲ್ಲವೊ ತಿಳಿಯದು; ಗಳಿಗೆ ಗಳಿಗೆಗೂ ಮರಿಯನ ಭಯ ಹೆಚ್ಚುತ್ತಾ ಹೋಯಿತು. ಅವನು "ಈ ದೆಯ್ಯ ಇನ್ನೂ ಇಲ್ಲಿಯೇ ಕೂತಿದೆ'' ಎಂಬುದು ಲಕ್ಷ್ಮಿಗೆ ಗೊತ್ತಾಗಲಿ. ಅವಳು ಎಲ್ಲಿಯಾದರೂ ಸದ್ದು ಮಾಡಿಯಾಳು ಎಂದುಕೊಂಡು ಮಧ್ಯೆ

ಮಧ್ಯೆ ಒಕ್ಕಪ್ಪನನ್ನು ಮಾತನಾಡಿಸುತ್ತಿದ್ದನು. ಒಕ್ಕಪ್ಪ ಔದಾಸೀನ್ಯ ದಿಂದಲೇ ಉತ್ತರ ಕೊಡುತ್ತಿದ್ದನು. ಮರಿಯು ಪರಕೆ ತಗೆದುಕೊಂಡು ಬಂದು ಕಡೆಯಿಂದ ತುಂಬ ಧೂಳನ್ನು ಎಬ್ಬಿಸುತ್ತಾ ಗುಡಿಸಲು ಪ್ರಾರಂ ಭಿಸಿದನು. ಈ ಧೂಳನ್ನು ಕುಡಿಯಲಾರದೆಯಾದರೂ ಒಕ್ಕಪ್ಪ ಹೊರಕ್ಕೆ ಹೋಗಲಿ ಎಂಬುದು ಅವನ ಆಸೆಯಾಗಿದ್ದಿತು. ಒಕ್ಕಪ್ಪ ಕೂತ ಜಾಗ ಬಿಟ್ಟು ಏಳಲಿಲ್ಲ. ಮರಿಯು ತನ್ನ ಹತ್ತಿರ ಬಂದು ಗುಡಿಸಿದಾಗ ಒಕ್ಕಪ್ಪ ಗೋಣೀಚೀಲ ಕೈಯ್ಯಲ್ಲಿ ಹಿಡಿದುಕೊಂಡು ಎದ್ದು ಗುಡಿಸುವುದಕ್ಕೆ ಜಾಗ ಬಿಟ್ಟು ಮತ್ತೆ ಮೊದಲಿನಂತೆ ಕುಳಿತುಕೊಂಡನು. ಒಕ್ಕಪ್ಪನನ್ನು ಹೊರಕ್ಕೆ ಹೊರಡಿಸುವ ಉಪಾಯ ಯಾವುದು ಎಂದು ಅಯ್ಯಣ್ಣನೂ ಯೋಚಿಸು ತ್ತಲೇ ಇದ್ದನು. ಆದರೆ ಅವನಿಗೂ ಏನೂ ಹೊಳೆಯಲೇ ಇಲ್ಲ.

ಅಷ್ಟು ಹೊತ್ತಿಗೆ ಅಯ್ಯಣ್ಣನ ತಂದೆ ಹೆಗಲ ಮೇಲೆ ಗೋಣಿ ಚೀಲ ಹಾಕಿಕೊಂಡು ಅನಂತುವಿನ ಮನೆಗೆ ಬಂದನು. ಇಪ್ಪತ್ತು ಬಳ್ಳ ರಾಗಿ ಮತ್ತು ೨೦ ಬಳ್ಳ ಭತ್ತ ಸಾಲಕೊಡಿ ಎಂದು ಅವನು ಅನಂತುವನ್ನು ಹಿಂದೆ ಕೇಳಿದ್ದಾಗ ಅನಂತು “ ಆಗಲಿ. ಬೇಕಾದಾಗ ಬಂದು ತೆಗೆದು ಕೊ ” ಎಂದು ಹೇಳಿದ್ದನು. ಈಗ ಅವನು ಬೇಕೆಂದು ಬಂದುದರಿಂದ ಅನಂತು ಅವನ ಕೈಯ್ಯಲ್ಲಿಯೇ ಬಳ್ಳವನ್ನು ಹಿಡಿಸಿಕೊಂಡು ಕಣಜದ ಮನೆಗೆ ಬಂದನು. ಅನಂತುವೂ ತನ್ನ ತಂದೆಯೂ ಬರುತ್ತಿರುವುದನ್ನು ನೋಡಿ ಅಯ್ಯಣ್ಣ “ ಇವರು ರಾಗಿನೋ ಭತ್ತಾನೋ ಅಳೆಯೋದಕ್ಕೆ ಬರುತ್ತಿದ್ದಾರೆ. ಭಗವಂತ ಭತ್ತವಾಗಲಿ ” ಎಂದು ಪ್ರಾರ್ಥಿಸಿದನು. ತಂದೆ ಹತ್ತಿರಕ್ಕೆ ಬಂದಾಗ ಅಯ್ಯಣ್ಣ “ಅಪ್ಪಾ ಯಾಕೆ ಬಂದೆ” ಎಂದನು. ಅವನ ತಂದೆ “ ರಾಗಿ ತೆಗೆದುಕೊಂಡು ಹೋಗಿ ಮನೆಗೆ ಹಾಕಿ ಹೊಳೆ ಆಚೆ ಹೋಗಿಬರ್ತೇನೆ ” ಎಂದನು. ಅಯ್ಯಣ್ಣನಿಗೆ ಪ್ರಾಣವೇ ಹೋದಂತೆ ಆಯಿತು. ಅವನು “ ಚೀಲ ಇಲ್ಲಿ ಕೊಡು. ನೀನು ಮನೆಗೆ ಹೋಗು. ರಾಗಿ ಹೊರುವುದಕ್ಕೆ ನಿನ್ನ ಕೈಲಿ ಆಗುವುದಿಲ್ಲ. ನಾನು ತರುತ್ತೇನೆ ನಡಿ ” ಎಂದನು. ಮುದುಕ “ ನನ್ನ ಕೈಯಲ್ಲಿ ರಾಗಿ ಹೊರೋದಕ್ಕೆ ಆಗೋ ದಿಲ್ವೆ ? ನಿಮ್ಮ ಕಾಲದ ಹುಡುಗರೂ ಒಂದೇ ನಮ್ಮ ಕಾಲದ ಮುದು ಕರೂ ಒಂದೇ. ನಾನು ನಿನ್ನ ವಯಸ್ಸಿನಲ್ಲಿದ್ದಾಗ ಒಂದು ಪಲ್ಲ ರಾಗಿ ಲೀಲಾಜಾಲವಾಗಿ ಹೊತ್ತುಕೊಂಡು ಹೋಗುತ್ತಿದ್ದೆ. ಎಷ್ಟು ದೂರ ?

ನಾಲ್ಕು ಮೂರು ತಕೊಂಡು ಹೋಗಿ ಹಾಕಿಬಿಡ್ತೇನೆ. ನಿನ್ನ ಕೆಲಸ ನೀನು ಮಾಡು " ಎಂದು ಒಳಕ್ಕೆ ಹೊರಟನು. ಅನಂತು ಮುಂದೆ ಹೋಗಿದ್ದನು. ಅಯ್ಯಣ್ಣ "ಇವತ್ತು ಭತ್ತನೇ ತಕೊಂಡು ಹೋಗು. ನಾಳೆ ರಾಗಿ ತಕೋಳೀಪಂತೆ. ನನಗೆ ಇವತ್ತು ಹೊಟ್ಟೆ ನೋವು. ರಾಗಿ ಊಟ ಮಾಡೋದಕ್ಕೆ ಆಗೋದಿಲ್ಲ" ಎಂದನು. ಅಯ್ಯಣ್ಣನ ತಂದೆ "ಹೊಟ್ಟೆ ನೋವಾದರೆ ಇವತ್ತು ಕೆಲಸಕ್ಕೆ ಯಾಕೆ ಬಂದೆ. ಭತ್ತ ಈಗ ಮನೆಗೆ ತಕೊಂಡು ಹೋಗಿ ಹಾಕಿದರೆ ಒಂದು ಗಳಿಗೆ ಉಳಿಯುತ್ತದೆಯೆ? ಎರಡು ದಿವಸದಲ್ಲಿ ಮುಗಿಸಿಬಿಡುತ್ತಾರೆ. ಹಬ್ಬ ಹರಿ ದಿನ ಮಾಳ್ಯಕ್ಕೆ ಇರಲಿ ಅಂತ ಅಯ್ನೋರತಾವ ಬಿಟ್ಟಿದೀನಿ. ನಿನಗೆ ಹೊಟ್ಟೆ ನೋವಾದರೆ ಹಿಟ್ಟು ಊಟ ಮಾಡಬೇಡ. ಮನೇಲಿ ಸ್ವಲ್ಪ ಅಕ್ಕಿ ಇದೆ ಅಂತ ನಿಮ್ಮಮ್ಮ ಹೇಳಿದ್ಲು. ಹೋಗಿ ಮಾಡಿಸುತ್ತೇನೆ" ಎಂದು ಹೇಳಿ ಅನಂತುವಿನ ಜತೆಯಲ್ಲಿ ತಾನು ಕಣಜದ ಮನೆಯೊಳಕ್ಕೆ ಪ್ರವೇಶಿಸಿದನು.

ಒಳಕ್ಕೆ ಹೋದ ಕೂಡಲೆ ಅನಂತುವಿನ ಕಣ್ಣಿಗೆ ಕಣಜದ ಮಗ್ಗುಲಲ್ಲಿ ಕುಳಿತಿದ್ದ ಬಕ್ಕಪ್ಪ ಕಾಣಿಸಿದನು. ಅನಂತು "ಏನು ಬಂದೆ ಬಕ್ಕಪ್ಪ" ಎಂದನು. ಬಕ್ಕಪ್ಪ "ಇಪ್ಪತ್ತು ಬಳ್ಳ ರಾಗಿಗೆ ಹೇಳಿದ್ದೆನೆಲ್ಲ ಕೊಡಿ" ಎಂದನು. ಇನ್ನೂ ಅಯ್ಯಣ್ಣನ ತಂದೆ ಒಳಕ್ಕೆ ಬಂದಿರಲಿಲ್ಲ. ಅನಂತು "ಸರಿ ಕೂತುಕೋ ಇಬ್ಬರಿಗೂ ಅಳಿಸಿಕೊಡುತ್ತೇನೆ" ಎಂದನು. ಈ ವಿಚಾರ ಕೇಳಿದಾಗ ಅಯ್ಯಣ್ಣನಿಗೆ ಆಗಿದ್ದುದಕ್ಕಿಂತಲೂ ಈಗ ಮರಿಯನಿಗೇ ಹೆಚ್ಚು ನಡಕವುಂಟಾಯಿತು. ಆ ವೇಳೆಗೆ ಅಯ್ಯಣ್ಣನ ತಂದೆ ಒಳಕ್ಕೆ ಬಂದನು. ಅವನನ್ನು ನೋಡಿದ ಕೂಡಲೇ ಬಕ್ಕಪ್ಪನ ಮೈ ಉರಿಯಲು ಪ್ರಾರಂಭವಾಯಿತು. ಅಯ್ಯಣ್ಣನ ತಂದೆಯೂ ಬೆಕ್ಕನ್ನು ಕಂಡ ನಾಯಿಯಂತೆ ಗುರ್ ಎಂದು ಭುಸಗುಟ್ಟಿದನು. ಅಯ್ಯಣ್ಣನ ತಂದೆ ಅನಂತುವಿಗೆ "ಸ್ವಾಮಿ ಈಗ ನಿಮಗೆ ಕೆಲಸವಿರುವಂತೆ ಕಾಣುತ್ತೆ. ನಾನು ಮಧ್ಯಾನ್ನದ ಮೇಲೆ ಬರ್ತೇನೆ" ಎಂದು ಹೊರಟನು. ಈ ಇಬ್ಬರು ಮುದುಕರಿಗೂ "ತಿಸ್ರ" ಉಂಟಾಗಿದ್ದದ್ದು ಅನಂತುವಿಗೆ ತಿಳಿದಿದ್ದಿತು. ಅನಂತುವು "ಬಾ ಕೂತುಕೋ ಇನ್ನು ಮತ್ತೆ ಮಧ್ಯಾನ್ನ ಕಣಜ ಹತ್ತೋರ‍್ಯಾರು ಇಳಿಯೋರು ಯಾರು? ನನಗೋ ಒಂದು ಗಳಿಗೆಯೂ ಪುರಸತ್ತಿಲ್ಲ. ಮುಗಿದುಹೋಗಲಿ" ಎಂದನು. ಮರಿಯ ಬಕ್ಕಪ್ಪನಿಗೆ "ನಿಮ್ಮ

ಚೀಲ ಮಡಗಿಬಿಟ್ಟು ಹೋಗಿ. ನಾನು ಅಳಸಿ ತಂದು ಹಾಕುತ್ತೇನೆ" ಎಂದನು. ಅನಂತು ನಗುತ್ತಾ "ಸದ್ಯ ನೀನು ತೆಗೆದುಕೊಂಡು ಹೋದರೆ ರಾಗಿ ಮನೆಗೆ ಮುಟ್ಟೋದಿಲ್ಲ. ಅದರಲ್ಲಿ ಏನು ಅವಾಂತರ ಹತ್ತಿಸುತ್ತೀಯೋ? ಬಕ್ಕಪ್ಪ, ನಿನ್ನ ರಾಗಿ ನೀನು ಅಳೆಸಿ ಚೀಲದಲ್ಲಿ ಹಾಕಿಬಿಟ್ಟು ಹೋಗು. ಬೇಕಾದರೆ ಯಾರ ಕೈಲಾದರೂ ಪೊರಿಸಿ ತರಿಸಿಕೊಳ್ಳುವಿಯಂತೆ" ಎಂದನು. ಅನಂತು "ಇಲ್ಲಿದ್ದ ಸ್ಟೂಲು ಎಲ್ಲಿ" ಎಂದನು. ಮರಿಯ "ಆಚೆ ಮನೆಗೆ ಹೋಗಿರಬೇಕು" ಎಂದನು. ಅನಂತುವು "ಆಚೆ ಮನೆಗೆ ಎಲ್ಲಿ ಹೋಗುತ್ತೆ. ಯಾರು ತೆಗೆದುಕೊಂಡು ಹೋದವರು. ನೋಡು. ಭತ್ತದ ಕಣಜದಲ್ಲಿಯೋ ಬಾಗಲಿನಲ್ಲಿ ಆ ಕೆಲಸ ಮಾಡೋರ ಹತ್ತಿರವೋ ಇರಬೇಕು" ಎಂದನು. ಅಯ್ಯಣ್ಣನ ತಂದೆ ಕಣಜದ ಬಾಗಿಲನ್ನು ಎಳೆದಾಗ, ಮೇಲಿನ ವರೆಗೆ ತುಂಬಿ ಬಂದಿದ್ದ ಭತ್ತದ ಮೇಲೆ ಸ್ಟೂಲು ಇದ್ದದ್ದು ಕಂಡಿತು. ಅವನು ಅದನ್ನು ಕೆಳಕ್ಕೆ ತೆಗೆದುಕೊಂಡನು.

ಮರಿಯ "ಕಣಜ ಹತ್ತಲೇ" ಎಂದನು. ಅಯ್ಯಣ್ಣನ ತಂದೆ "ನಿನ್ನ ಕೆಲಸ ನೀನು ನೋಡು. ನಾವು ಯಾರಾದರೂ ಹತ್ತುತ್ತೇವೆ" ಎಂದನು. ಮರಿಯನಿಗೆ ಪೀಕಲಾಟಕ್ಕೆ ಬಂತು. "ಈ ಮುದಿ ಕಣಜದೊಳಕ್ಕೆ ಇಳಿದರೆ ಅಲ್ಲಿ ಲಕ್ಷ್ಮಿ ಇದ್ದಾಳೆಲ್ಲ ಗತಿ ಏನು" ಎಂದುಕೊಂಡು ಅವನು "ಯಜಮಾನರೆ ನೀವು ವಯೋವೃದ್ಧರು ಜ್ಞಾನವೃದ್ಧರು ಅವಿಂದರು ನಮ್ಮಂತಹ ಹುಡುಗರೆಲ್ಲಾ ಇರುವಾಗ ನೀವು ಯಾಕೆ ಇಳಿಯಬೇಕು. ಬೇಕಾದರೆ ಅಯ್ಯಣ್ಣನನ್ನ ಕರೆಯುತ್ತೇನೆ" ಎಂದನು. ಮುದುಕರಿಬ್ಬರಿಗೂ, ಅನಂತುವಿನ ಕೂಲಿಗಳು ಯಾರನ್ನೂ ಕರೆಯಲು ಇಷ್ಟವಿರಲಿಲ್ಲ. ಅನಂತು ಘೊಳ್ಳೆಂದು ಒಂದೇ ಸಮನೆ ಬಿದ್ದು ಬಿದ್ದು ನಗಲು ಪ್ರಾರಂಭಿಸಿದನು. ಬಕ್ಕಪ್ಪನಿಗೂ ಅಯ್ಯಣ್ಣನ ತಂದೆಗೂ ಅನಂತು ನಗುತ್ತಿರುವುದರ ಮರ್ಮ ತಿಳಿಯಲಿಲ್ಲ. ಆದರೆ "ಮರಿಯ ಹೇಳಿದುದರಲ್ಲಿ ಏನೋ ಒಂದು ಮರ್ಮವಿದೆ. ಇವ ಏನೋ ಹಾಸ್ಯಮಾಡ್ತಾ ಇದಾನೆ" ಎಂದು ಅವರು ತಿಳಿದು "ಯಾಕೆ ಸ್ವಾಮಿ" ಎಂದರು. ಅನಂತು "ಅವಿಂಥ; ಜ್ಞಾನವೃದ್ಧ ವಯೋವೃದ್ಧ ಅವಿಂಥ" ಎಂದು ನಗ ತೊಡಗಿದನು. ಬಕ್ಕಪ್ಪ "ಈ ಹುಡುಗನ ಚಾಷ್ಟೆಗೆ ಬೆಂಕಿ ಹಾಕಿತು. ನನ್ನನ್ನು

ಮುದುಕ ಹತ್ತುವುದಕ್ಕಾಗುವುದಿಲ್ಲ ಅಂತ ಹಾಸ್ಯಮಾಡ್ತಾನೆ. ನಾನು ಇಲ್ಲಿಗೆ ಬಂದಷ್ಟು ಹೊತ್ತಿನಿಂದಲೂ ಇವನು ನನ್ನನ್ನು ನೋಡಿ ಹಾಸ್ಯ ಮಾಡಿ ನಗುತ್ತಿದ್ದಾನೆ. ಈ ವಯಸ್ಸಿಗೆ ನಾನು ಹಾಲು ಕುಡಿದಿರುವಷ್ಟು ನೀನು ನೀರು ಕುಡಿದಿಲ್ಲ" ಎಂದು ಹೇಳಿ ಸ್ಟೂಲನ್ನು ರಾಗಿ ಕಣಜದ ಮುಂದಕ್ಕೆ ಎಳೆದನು. ಇಂತಹ ಪರಿಸ್ಥಿತಿ ಬಂದರೆ ಏನುಮಾಡಬೇಕೆಂದು ಅಷ್ಟು ಹೊತ್ತಿನಿಂದ ಯೋಚಿಸಿದ್ದ ಲಕ್ಷ್ಮಿಯು ಈಗ ಧೈರ್ಯಮಾಡಿಕೊಂಡು ಕೆಮ್ಮಿದಳು. ಸ್ಟೂಲಿನ ಮೇಲೆ ನಿಂತಿದ್ದ ಬಕ್ಕಪ್ಪ ನೆಲದ ಮೇಲೆ ಇಳಿದನು. ಆ ಕಡೆಯಿಂದ ಕರೆ ಕಳುಹಿಸಿದರೋ ಎಂಬಂತೆ ಅಯ್ಯಣ್ಣನೂ ಬಂದನು. ಬಕ್ಕಪ್ಪ, ಅಯ್ಯಣ್ಣನ ತಂದೆ, ಅನಂತು, ಇವರು ಅತ್ಯಂತ ಕುತೂಹಲದಿಂದ ಕಣಜದ ಕಡೆ ನೋಡತೊಡಗಿದರು. ಮರಿಯು ಜೇಬಿನಲ್ಲಿ ಚೇಳು ಬಿಟ್ಟುಕೊಂಡವನಂತೆ ಕೂತು ನಿಂತು ಆಚೆ ಈಚೆ ನೋಡುತ್ತಿದ್ದನು. ಅನಂತುವು "ಇದೇನೋ ಮರಿಯನ ಚಾಷ್ಟೆ ಇರಬೇಕು ಎಂದು ಮರಿಯನ ಕಡೆ ನೋಡತೊಡಗಿದನು. ಅನಂತು "ಯಾರೋ ? ಕಣಜದ ಒಳಗೆ ಬಾ, ಈಚೆಗೆ" ಎಂದನು. ಕಣಜದಲ್ಲಿ ಒಳಗಳ ಸದ್ದು ಆಯಿತು. ಅನಂತುವಿಗೆ ನಗು ಬಂತು. "ಕಣಜದಲ್ಲಿ ಯಾರನ್ನ ಔಸಿ ಇಟ್ಟಿದ್ದೀಯೆ" ಎಂದನು. ಅಯ್ಯಣ್ಣನ ತಂದೆಯೂ ಒಕ್ಕಪ್ಪನೂ ಒಬ್ಬರೊಂದಿಗೆ ಒಬ್ಬರು ಮಾತನಾಡುವುದಿಲ್ಲವೆಂಬುದನ್ನು ಮರೆತು ಗಟ್ಟಿಯಾಗಿ ಮರಿಯನ ಕಡೆ ನೋಡುತ್ತಾ "ನಿಜ ಹೇಳಿ ಬಿಡು" ಎಂದು ಕೂಗಿದರು. ಮರಿಯು ಅಲ್ಲೆ ಬಂದು ನಿಂತಿದ್ದ ಅಯ್ಯಣ್ಣನ ಕಡೆ ನೋಡತೊಡಗಿದನು. ಅನಂತು ಮತ್ತೆ "ಯಾರಾದರೂ ಆಗಲಿ ಈಚೆಗೆ ಇಳಿದು ಬಾಮ್ಮ" ಎಂದ. ಮುಂದಲ ನಿಮಿಷದಲ್ಲಿ ಮರಿಯು ಸ್ಟೂಲನ್ನು ಕಣಜದ ಒಳಕ್ಕೆ ಹಿಡಿದನು. ಒಳಗೆ ಇದ್ದವಳು ಸ್ಟೂಲನ್ನು ತೆಗೆದು ಹಾಕಿಕೊಂಡು ಅದರ ಮೇಲೆ ನಿಂತುಕೊಂಡಳು. ಕಣಜದಿಂದ ಮೊದಲು ಕಡಗದ ಒಂದು ಕೈಯೂ ಅನಂತರ ಲಕ್ಷ್ಮಿಯ ಪೂರ್ಣವಾದ ದೇಹವೂ ಹೊರಕ್ಕೆ ಬಂತು. ಮರಿಯು ಮೂಲೆಯಲ್ಲಿದ್ದ ದಪ್ಪ ಜಾಯಿಕಾಯಿ ಪೆಟ್ಟಿಗೆಯನ್ನು ಕಣಜದ ಮುಂದಕ್ಕೆ ಎಳೆದನು. ಲಕ್ಷ್ಮಿಯ ಸೀರೆ ಕೈಕಾಲು ಕುರುಳುಗಳಿಗೆಲ್ಲಾ ಧೂಳು ತುಂಬಿತ್ತು. ಹೂವಿನ ವನದಲ್ಲಿ ಸ್ವೇಚ್ಛೆಯಾಗಿ ಹಾರಾಡಿ ರಕ್ಕೆಗಳಿಗೆ ಪುಷ್ಪ ಪರಾಗವನ್ನು ಹಚ್ಚಿ

ಕೊಂಡ ದುಂಬಿಯಂತೆ ಅವಳು ತೋರುತ್ತಿದ್ದಳು. ಅವಳ ಸೊಬಗು ಧೂಳಿನಲ್ಲಿ ಮೊದಲಿಗಿಂತಲೂ ಚೆನ್ನಾಗಿಯೇ ಇದ್ದಿತು.

ಒಳಗಿನಿಂದ ಲಕ್ಷ್ಮಿ ಇಳಿದುದನ್ನು ನೋಡಿ ಒಕ್ಕಪ್ಪನ ಮೈ ಒಂದೇ ಏಟಿಗೆ ನಡುಗತೊಡಗಿತು. ಅನಂತುವೂ ನಗುತ್ತಿದ್ದ ಮುಖಭಾವ ಬದಲಾಯಿಸಿದ. ಒಕ್ಕಪ್ಪ ಮೂಲೆಯಲ್ಲಿಟ್ಟಿದ್ದ ಒಂದು ಉಳುವ ಕೋಲನ್ನು ತೆಗೆದುಕೊಂಡು ಅದನ್ನು ಲಕ್ಷ್ಮಿಯ ಮೇಲೆ ಎತ್ತಿ ಬೀಸಿದನು. ಆ ಏಟು ಏನಾದರೂ ಲಕ್ಷ್ಮಿಗೆ ತಗುಲಿದ್ದರೆ ಅವಳ ಸೊಂಟ ಮಧ್ಯಕ್ಕೆ ಮುರಿದುಕೊಳ್ಳುತ್ತಿದ್ದುದರಲ್ಲಿ ಸಂದೇಹವಿರಲಿಲ್ಲ. ಆದರೆ ಮರಿಯ ಜಾಯಿಕಾಯಿ ಪೆಟ್ಟಿಗೆಯನ್ನು ಮಧ್ಯದಲ್ಲಿ ಮೇಲಕ್ಕೆ ಎತ್ತಿದನು. ಆ ಕೋಲಿನ ಏಟು ಛಟಾರನೆ ಪೆಟ್ಟಿಗೆಗೆ ತಗುಲಿತು. ಲಕ್ಷ್ಮಿಯು ಮೂಲೆಯಲ್ಲಿ ಕುಳಿತು ಅಳುವುದಕ್ಕೆ ಪ್ರಾರಂಭಿಸಿದಳು. ಅನಂತು "ನೀನು ನಿನ್ನ ಕೆಲಸಕ್ಕೆ ಹೋಗಮ್ಮಾ" ಎಂದು ಹೇಳಿ ಅವಳನ್ನು ಕಳುಹಿಸಿದನು. ಲಕ್ಷ್ಮಿಯು ಅನಂತುವಿನ ಮನೆಗೆ ಹೋಗಿ ಅಳುತ್ತಾ ಕುಳಿತುಕೊಂಡಳು. ಅಯ್ಯಣ್ಣನ ತಂದೆ ಗದರಿಸಿದುದರಿಂದ ಅಯ್ಯಣ್ಣನೂ ತನ್ನ ಚಪ್ಪರದ ಕೆಲಸಕ್ಕೆ ಹೋದನು.

ಅನಂತು ಇವರ ತಳ ಸೋದಿಸಬೇಕೆಂದು ತೀರ್ಮಾನಿಸಿಕೊಂಡನು. ಅಯ್ಯಣ್ಣನನ್ನೂ ಕೂರಿಸಿಕೊಂಡು ಮರಿಯನನ್ನು ಕರೆದು ವಿಚಾರವನ್ನೆಲ್ಲಾ ತಿಳಿದುಕೊಂಡನು. "ಲಕ್ಷ್ಮಿಗೂ ಅಯ್ಯಣ್ಣನಿಗೂ ಒಬ್ಬರಲ್ಲಿ ಒಬ್ಬರಿಗೆ ಪ್ರೀತಿ ಇದೆ. ಈ ಮದುವೆ ಇಬ್ಬರ ತಂದೆಗಳಿಗೂ ವಿರೋಧವಿಲ್ಲ. ಆದರೆ ಒಕ್ಕಪ್ಪನ ಮೇಲೆ ರಾಮರಾಯರು ಮಾಡಿದ್ದ ದಾವಾನಲ್ಲಿ ಅಯ್ಯಣ್ಣನ ತಂದೆ ಒಕ್ಕಪ್ಪನಿಗೆ ವಿರೋಧವಾಗಿ ಸಾಕ್ಷಿ ಹೇಳಬೇಕಾಯಿತು. ವಿಚಾರಣೆಯ ದಿವಸ ಬೆಳಿಗ್ಗೆ ಅಯ್ಯಣ್ಣನ ತಂದೆ "ನಾನು ಸಾಕ್ಷಿ ಹೇಳುವುದಿಲ್ಲ. ಇದು ನನಗೆ ಮೊದಲು ತಿಳಿದಿರಲಿಲ್ಲ. ಈಗ ಗೊತ್ತಾಯಿತು. ನನ್ನ ಸಾಕ್ಷಿ ಬಿಟ್ಟುಬಿಡು. ದಾವಾ ಹಿಂದಕ್ಕೆ ತೆಗೆದುಕೊಳ್ಳಿ. ಒಕ್ಕಪ್ಪನಿಗೆ ಹೇಳಿ ರಾಜಿ ಮಾಡಿಸಿಬಿಡುತ್ತೇನೆ ಎಂದಿದ್ದನು. ಅದರಂತೆ ರಾಮರಾಯರೂ ಅಯ್ಯಣ್ಣನ ತಂದೆಯೂ ಲಾಯರಲ್ಲಿಗೆ ಹೋಗಿ ಹೇಳಿದರು. ಆ ಲಾಯರು ಹೊಸದಾಗಿ ಮೂರು ವರುಷದ ಹಿಂದೆ ಬೋರ್ಡು ಹಾಕಿದ್ದವರು. ಮೂರು ವರುಷದಿಂದ ಅವರಿಗೆ ಒಂದು ಕೇಸೂ ಬಂದಿರಲಿಲ್ಲ. ಬೋರ್ಡು ಬರೆ

ದವನ ದುಡ್ಡು ಸಹ ಅವರು ಇನ್ನೂ ಕೊಟ್ಟಿರಲಿಲ್ಲ. ಹೊಸ ಡೈರಿ ತೆಗೆದು ಕೊಂಡರೂ ಪ್ರಯೋಜನವಿಲ್ಲದುದರಿಂದ ಅವರು ಹಳೆಯ ಡೈರಿಯ ತಾರೀಖುಗಳನ್ನೇ ತಿದ್ದುತ್ತಾ ಅದೂ ಜನರಿಗೆ ತಿಳಿಯದಿರಲೆಂದು ಡೈರಿಗೆ ಹಳೆ ವಿಶ್ವಕರ್ನಾಟದ ರಟ್ಟು ಒಂದನ್ನು ಹಾಕಿ ಅದನ್ನೇ ಕೋರ್ಟಿಗೆ ಹಿಡಿದುಕೊಂಡು ಬರುತ್ತಿದ್ದರು. ಕೋರ್ಟಿನಲ್ಲಿ ಉಚಿತವಾಗಿ ಸಿಕ್ಕುತ್ತಿದ್ದ ಕೆಲವು ಫಾರಂಗಳೇ ಅವರ "ಫೈಲು" ಗಳಾಗಿದ್ದುವು. ಇಂತಹ ಲಾಯರಿಗೆ ರಾಮರಾಯರ ಮೊದಲನೆಯ ವ್ಯಾಜ್ಯ. ಒಬ್ಬ ಲಾಯರಲ್ಲದ ಮಿತ್ರರ ಶಿಪಾರಸಿನಿಂದ ಬಂದಾಗ ಎಕ್ಕಡವೆಲ್ಲ ಹರಿದು ಕಂಗಾಲಾಗಿ ಹುಚ್ಚರಂತೆ ಕಾಣುತ್ತಿದ್ದರು. ವ್ಯಾಜ್ಯವನ್ನು ಕೊಡುವುದಕ್ಕೆ ಹೋದಾಗ ತನ್ನನ್ನು ನೋಡುತ್ತಿದ್ದ ಅವರ ಕಣ್ಣನ್ನು ನೋಡಿ ರಾಮರಾಯರಿಗೆ ಈ ಕಣ್ಣಿನ ಹಸಿವನ್ನು ನೋಡಿದರೆ ಇವನು ನನ್ನನ್ನೇ ನುಂಗುವಂತೆ ಕಾಣುತ್ತಾನೆ ಎಂದು ಭಯವಾಯಿತು. ಅವರು ಇದೊಂದು ಪ್ರಾಣಿದಯೆ ಎಂದುಕೊಂಡು "ಈ ವ್ಯಾಜ್ಯ ಮುಗಿಯಲಿ. ಇನ್ನೂ ಕೆಲವು ಗಿರಾಕಿಗಳನ್ನು ಕರೆದುಕೊಂಡು ಬರುತ್ತೇನೆ" ಎಂದು ಲೋಕಾಭಿರಾಮವಾಗಿ ಹೇಳಿದ್ದರು.

ವಿಚಾರಣೆಯ ದಿವಸ ಬೆಳಿಗ್ಗೆ ರಾಮರಾಯರು ಅಯ್ಯಣ್ಣನ ತಂದೆಯನ್ನು ಕರೆದುಕೊಂಡು ಲಾಯರ ಹತ್ತಿರಕ್ಕೆ ಹೋಗಿ "ಈ ಸಾಕ್ಷಿಗೂ ಪ್ರತಿವಾದಿಗೂ ತುಂಬ ಬಂಧುತ್ವ. ಪ್ರತಿವಾದಿಗೆ ವಿರೋಧವಾಗಿ ಇವನು ಸಾಕ್ಷಿ ಹೇಳಲು ಹಿಂದೆಗೆಯುತ್ತಾನೆ. ಪ್ರತಿವಾದಿ ನನ್ನೊಂದಿಗೆ ರಾಜಿ ಆಗ್ತಾನೆ. ವಿಷಯ ಕೋರ್ಟಿಗೆ ತಿಳಿಸಿಬಿಡಿ" ಎಂದಾಗ ಆ ಲಾಯರಿಗೆ ತನಗೆ ಬಂದಿದ್ದ ಮೊದಲನೆಯ ವ್ಯಾಜ್ಯಕ್ಕೆ ಈ ಅವಸ್ಥೆಯೇ ಎಂದು ಬಹಳ ಕೋಪವುಂಟಾಯಿತು. "ಕಕ್ಷಿಗಾರರೆಲ್ಲಾ ತಾವು ತಾವೇ ಈ ರೀತಿ ರಾಜಿ ಮಾಡಿಕೊಳ್ಳಲು ಪ್ರಾರಂಭಿಸಿದರೆ ಇನ್ನು ಲೋಕದಲ್ಲಿ ಲಾಯರು ಯಾಕೆ? ಹೀಗಾದರೆ ನಾವೆಲ್ಲಾ ಸರ್ ಫಿರೋಜಶಹಾ ಮೆಹತಾ ತೇಜಬಹದ್ದೂರ್ ಸಪ್ರು ಎಸ್. ಶ್ರೀನಿವಾಸಯ್ಯಂಗಾರ್ ಅಲ್ಲಾಡಿ ಆಗುವುದು ಹೇಗೆ?" ಅವರು ಕೋಪದಿಂದ "ನಿಮ್ಮಂತಹ ಕಕ್ಷಿಗಾರರನ್ನು ನೆಚ್ಚಿಕೊಂಡೇ ನಮ್ಮ ಮಾನ ಕಾಸಿಗೆ ಮೂರು ಪಂಚೇರು ಆದುದು. ನಿಮ್ಮಿಂದ ನನ್ನ ಯೋಗ್ಯತೆ ಹೋಯಿತು" ಎಂದು ಹೇಳಿ ಕಟ್ಟನ್ನು ತೆಗೆದು ನೆಲದ ಮೇಲೆ ಸರ್ರನೆ ಎಸೆದರು. ಅನಂತರ ಮೇಜಕ್ಕೆ ತಲೆಯನ್ನು ಕುಟ್ಟಿಕೊಂಡು

ಗೊಳೋ ಎಂದು ಅಳಲು ಪ್ರಾರಂಭಿಸಿದರು. ಅವರ ಕಣ್ಣಿನಿಂದ ನೀರು ಧಾರೆ ಧಾರೆಯಾಗಿ ಹರಿಯಲು ಪ್ರಾರಂಭಿಸಿತು. ರಾಮರಾಯರಿಗೆ ಅವರಲ್ಲಿ ತಿರಸ್ಕಾರವೂ ಕನಿಕರವೂ ಉಂಟಾಯಿತು. ಅವರಿಗೆ ಅನುಭವವಿದ್ದ ಎಲ್ಲಾ ಲಾಯರುಗಳೂ ಹೀಗೆ ಕಿರಾತರಾಗಿದ್ದರು. "ರಾಜಿ ಮಾಡಿಕೊಳ್ಳುತ್ತೇವೆ" ಎಂದರೆ ಎಲ್ಲರೂ ಹೀಗೆಯೇ ಕಟ್ಟನ್ನು ಕೋಪದಿಂದ ಎಸೆಯುತ್ತಿದ್ದರು. ಕೆಲವರು ಕಟ್ಟನ್ನು ಎಸೆದರೆ ಅದರಲ್ಲಿರುವುದು ಎಲ್ಲಿ ತನ್ನ ಕಕ್ಷಿಗಾರನಿಗೆ ಪ್ರಯೋಜನವಾಗಿಬಿಡುವುದೋ ಎಂದುಕೊಂಡು ಆ ಕಟ್ಟನ್ನೂ ಎಸೆಯುತ್ತಿರಲಿಲ್ಲ. ತಮ್ಮ ವಕೀಲರ ಗೋಳನ್ನು ರಾಮರಾಯರು ಸಹಿಸಲಾರದೆ ಹೋದರು. ಅಯ್ಯೋ ಮುಂಡೆ ಬಿ.ಎ.ಬಿ ಎಲ್ಲೇ? ಹಳ್ಳಿಯ ಕಸಗುಡಿಸುವವನಿಗೆ ಇರುವ ಧೈರ್ಯ ಇದಕ್ಕೆ ಇಲ್ಲವಲ್ಲ ಎಂದುಕೊಂಡು ಕಟ್ಟನ್ನು ಅಲ್ಲಿಯೇ ಬಿಟ್ಟು ಕೋರ್ಟಿಗೆ ಹೋದರು. ವಿಚಾರಣೆಯಾಯಿತು. ಅಯ್ಯಣ್ಣನ ಅಪ್ಪ, ಒಕ್ಕಪ್ಪನಿಗೆ ವಿರೋಧವಾಗಿಯಲ್ಲದಿದ್ದರೂ ತನಗೆ ತಿಳಿದ್ದುದನ್ನು ಹೇಳಿದ. ಅಂದಿನಿಂದ ಒಕ್ಕಪ್ಪನಿಗೂ ಅಯ್ಯಣ್ಣನ ಅಪ್ಪನಿಗೂ ಮನಸ್ತಾಪವುಂಟಾಯಿತು. ಅಯ್ಯಣ್ಣ ಲಕ್ಷ್ಮಿಯನ್ನು ಕಾಣದೆ ಬೆಳಕನ್ನು ಕಾಣದ ಗಿಡದಂತೆ ಬಾಡಿದ್ದನು. ಇವತ್ತು ಒಬ್ಬರೊಂದಿಗೆ ಒಬ್ಬರು ಮಾತನಾಡುವುದಕ್ಕಾಗಿಯೇ ಅಲ್ಲಿ ಬಂದುದು."

ಇಷ್ಟು ವಿಚಾರ ತಿಳಿದ ಮೇಲೆ ಅನಂತು ಇಬ್ಬರಿಗೂ ಸಮಾಧಾನ ಮಾಡಿದನು. "ಕೋರ್ಟಿನ ಮಾತನ್ನು ಹಚ್ಚಿಕೊಂಡು ಬಾಳುವವರ ತಲೆಯ ಮೇಲೆ ಕಲ್ಲು ಎತ್ತಿ ಹಾಕಬಾರದೆಂದು ಹೇಳಿ ನಮ್ಮ ಮನೆ ಮದುವೆ ಚಪ್ಪರ ಹಾಕುವ ಒಳ್ಳೆಯ ಶುಭ ಕಾಲದಲ್ಲಿ ಸೇರಿದ್ದೀರಿ. ನಿಮ್ಮ ಮನೆಯ ಮದುವೆಯೂ ಹೀಗೆ ಆಗಬೇಕೆಂದು ಭಗವಂತನ ಸಂಕಲ್ಪವಿದ್ದಂತೆ ಕಾಣುತ್ತದೆ. ಇಲ್ಲದಿದ್ದರೆ ಇವತ್ತು ನಡೆದ ವಿಚಾರಗಳು ನಡೆಯುವುದು ಊಹಿಸುವುದಕ್ಕೂ ಅಸಾಧ್ಯವಾದುದು. ಎಲ್ಲಿ ಒಬ್ಬರೊಂದಿಗೆ ಒಬ್ಬರು ಸ್ನೇಹವಾಗಿ ಮಾತನಾಡಿ. ಒಬ್ಬರಿಗೆ ಒಬ್ಬರು ವಿಳ್ಯ ಕೊಡಿ" ಎಂದು ಹೇಳಿ ಬಲಾತ್ಕಾರವಾಗಿ ವೀಳ್ಯ ತರಿಸಿ ಒಕ್ಕಪ್ಪನ ಕೈಯಿಂದ ಅಯ್ಯಣ್ಣನ ತಂದೆಗೂ, ಅವನಿಂದ ಇವನಿಗೂ ಕೊಡಿಸಿ ತಾನೇ ಒಂದು ಮದುವೆಯ ತಾರೀಖನ್ನೂ ಗೊತ್ತುಮಾಡಿಕೊಟ್ಟನು. ಮುದುಕರಿಬ್ಬರಿಗೂ ಹಳೆಯ ಅಸಮಾಧಾನ ಮರೆತುದರಿಂದ ಬಹು ಸಂತೋಷವಾಯಿತು. ಒಕ್ಕಪ್ಪನು

"ಒಳ್ಳೆ ರಮುಷೋಲಾಗಿ ಗಂಜಾಲಾಗಿ ಮದುವೆ ಬಾರಿಸಿಬಿಡೋಣ ನಡಿ" ಎಂದನು. ಅನಂತು ಮುದುಕರಿಬ್ಬರಿಗೂ "ಇನ್ನು ನೀವು ನಡಿಯಿರಿ. ಒಂದು ಹೆಣ್ಣನ್ನು ಅನಾಮತ್ತು ರಾಗಿ ಕಣಜಕ್ಕೆ ಎತ್ತಿ ಬಿಸಾಡಿದವನಿಗೆ ಇಪ್ಪತ್ತು ಬಳ್ಳ ರಾಗಿ ತರುವುದು ಕಷ್ಟವೇ? ಬಕ್ಕಪ್ಪ ನೀನು ನಡಿ ಲಕ್ಷ್ಮಿ, ಹೆಕ್ಕತ್ತಿನ ಮೇಲೆ ಗುದ್ದಿ ಅಯ್ಯಣ್ಣನ ಹತ್ತಿರ ಹೊರಿಸಿಕೊಂಡು ಬರುತ್ತಾಳೆ" ಎಂದನು. ಬಕ್ಕಪ್ಪನಿಗೂ ಬೇಗ ಹೋಗಿ ಮನೆಯಲ್ಲಿ ಹೆಂಡತಿಗೆ ಸಂತೋಷ ಸಮಾಚಾರ ತಿಳಿಸುವ ಆಸೆಯಾಯಿತು. ಮುದುಕರಿಬ್ಬರೂ ಎಲೆ ಅಡಿಕೆ ಜಗಿಯುತ್ತಾ ಮನೆಗಳಿಗೆ ಹೋದರು. ಇವರನ್ನು ಬಾಗಿಲಿನಲ್ಲಿ ನೋಡಿದ ಅಯ್ಯಣ್ಣ ಏನೋ ಮಾಟ ನಡಿದಿದೆ ಎಂದುಕೊಂಡನು.

ಅನಂತು ಅಯ್ಯಣ್ಣನನ್ನು ಒಳಕ್ಕೆ ಕರೆದು ಕೆಳಕ್ಕೆ ರಾಗಿ ಸುರಿಸಿ ಚೀಲಗಳಿಗೆ ತುಳಸಿ ಕಟ್ಟಿಹಾಕಿ "ಒಳ್ಳೆ ಭೂಪಕಣಯ್ಯ. ಕಂಡವರ ಹೆಣ್ಣನ್ನು ನನ್ನ ಮನೆ ರಾಗಿ ಕಣಜದಲ್ಲಿ ಔಸಿ ಇಡ್ತೀಯ" ಎಂದು ಹೇಳಿ ಮರಿಯನಿಗೆ "ಎಲ್ಲಿ ಲಕ್ಷ್ಮಿಯನ್ನು ಕರೆ" ಎಂದನು. ಮರಿಯ ಅನಂತು ಏನ ಮನೆಯಲ್ಲಿ ಅಳುತ್ತಾ ಕುಳಿತಿದ್ದ ಲಕ್ಷ್ಮಿಯನ್ನು ಕರೆದುಕೊಂಡು ಒಂದನು. ಲಕ್ಷ್ಮಿಗೆ ಇಲ್ಲಿ ನಡೆದ ವಿಚಾರ ಗೊತ್ತಿರಲಿಲ್ಲ. ಅವಳು ಅಳುತ್ತ ಅಳುತ್ತಲೇ ಹೊರಟಳು. ಮರಿಯ "ಎರಡು ಮುದುಕರೂ ಮನೆಗೆ ಹೋಗಿದ್ದಾರೆ" ಎಂದು ಮಾತ್ರ ಹೇಳಿ ಸಮಾಧಾನಮಾಡಿ ಕರೆದುಕೊಂಡು ಬಂದನು. ಲಕ್ಷ್ಮಿಗೆ ಅನಂತುವನ್ನು ನೋಡುವುದಕ್ಕೇ ನಾಚಿಕೆಯಾಗಿದ್ದಿತು. ಅವಳು ಬಂದ ಕೂಡಲೇ ಅನಂತು "ನಿನ್ನದೇನೂ ತಪ್ಪಿಲ್ಲ. ತಪ್ಪೆಲ್ಲವೂ ಆ ಧಾಂಡಿಗನದು. ಪಾಪ ಎತ್ತಿ ನಿನ್ನನ್ನು ಕಣಜಕ್ಕೆ ಎಸೆದಾಗ ನಿನ್ನ ಮೈಗೆ ಎಷ್ಟು ನೋವಾಯಿತೋ. ಇವನಿಗೆ ತಕ್ಕ ಶಿಕ್ಷೆ ಕೊಟ್ಟಿದ್ದೇನೆ. ಈ ರಾಗಿ ಮೂಟೆ ಇವನ ಹತ್ತಿರ ಹೊರಸಿಕೊಂಡು ಮನೆಗೆ ಹೋಗು" ಎಂದು ಹೇಳಿ ಅಯ್ಯಣ್ಣನಿಗೆ "ನಿಮ್ಮ ಮನೆ ಚೀಲವೂ ಇಲ್ಲೇ ಇದೆ. ಆ ಮೇಲೆ ಅದನ್ನೂ ತೆಗೆದುಕೊಂಡು ಹೋಗು ಮರೆತುಬಿಟ್ಟೀಯ" ಎಂದು ಹೇಳಿ ಮನೆಗೆ ಹೋದನು. ಅಯ್ಯಣ್ಣ ಲಕ್ಷ್ಮಿ ಇಬ್ಬರೂ ಉಶ್ಶಪ್ಪಾಡ ಎಂದು ಒಂದೊಂದು ಚೀಲದ ಮೇಲೆ ಒಬ್ಬೊಬ್ಬರು ಕುಳಿತು ಐದು ನಿಮಿಷ ಚೆನ್ನಾಗಿ ನಕ್ಕರು. ಲಕ್ಷ್ಮಿ ನಗುವಿನ ಮಧ್ಯೆ ಮಧ್ಯೆ, ಮಳೆ

ಬಿಸಿಲಿನಂತೆ ಅಳುತ್ತಲೂ ಇದ್ದಳು. ಸಮಾಧಾನವಾಗಿ, ನೋಡುವಾಗ ಮರಿಯನೂ ಅಲ್ಲಿ ಇರಲಿಲ್ಲ.

ಲಕ್ಷ್ಮಿ ಅಯ್ಯಣ್ಣನ ತಲೆಯ ಮೇಲೆರಾಗಿಯ ಚೀಲವನ್ನು ಮೊದಲು ಹೊರಿಸಿಕೊಂಡು ಮನೆಗೆ ಹೊಳಟಳು. ಬಾಗಿಲಿನ ಚಪ್ಪರದಲ್ಲಿ ಕೆಲಸ ಮಾಡುತ್ತಿದ್ದ ಪುಂಡು ಯುವಕರು "ನೋಡಿ ನೋಡಿ ಲಕ್ಷ್ಮಿ. ಅಯ್ಯಣ್ಣನ ಕೈನಲ್ಲಿ ಮೂಟೆ ಹೊರಿಸಿಕೊಂಡು ಹೋಗುತ್ತಿದ್ದಾಳೆ. ಆಗಲೇ ಪ್ರಾರಂಭವಾಯಿತೇನೋ ಜೀತ" ಎಂದು ಕೂಗಿದರು. ಸ್ವಲ್ಪ ಹಿರಿಯರಾಗಿ, ಮದುವೆಯಾಗಿ ವಯಸ್ಸಾಗಿದ್ದವರೂ, ೨-೩ ಮಕ್ಕಳಾಗಿದ್ದವರೂ "ಸ್ವಲ್ಪ ತಡಿ ಮಗು. ಈಗಲೇ ಕೂಗಬೇಡ. ನಾಳೆ ನೀನೂ ಮಾಡುವುದೂ ಇದೆಯೋ ಎಂದರು" ನಿಲ್ಲಿಸಿದ್ದ ಅಡಿಕೆ ಮರದ ತುದಿ ಏರಿ ಎರಡು ಅಡಿಕೆಯ ಮರಗಳನ್ನು ಒಟ್ಟಾಗಿ ಕಟ್ಟುತ್ತಿದ್ದ ಒಬ್ಬ ಯುವಕನು "ಅದೆಲ್ಲಾ ನಿಮ್ಮಂಥಾವರಿಗೆ ಹೇಳಿಕೊಳ್ಳಿ. ನಾವು ಈ ಕಾಲದ ಹುಡುಗರು ನಮ್ಮ ಮುಂದೆ ಅದೆಲ್ಲಾ ನಡೆಯುವುದಿಲ್ಲ" ಎಂದು ಕೂಗಿದನು. ಮತ್ತೊಬ್ಬ ಅಡಿಕೆ ಮರ ನೆಡಲು ಗುಣಿ ತೆಗೆಯುತ್ತಿದ್ದ ಹಿರಿಯ ಮನುಷ್ಯ "ನಾವೆಲ್ಲ ಹೇಳಿದ್ದೂ ಹಾಗೇಪ್ಪ. ಯಾವಾಗಲೂ ಮೇಲೆ ಕುಳಿತಿರುವುದಕ್ಕಾಗುವುದಿಲ್ಲ. ಕೆಳಕ್ಕೆ ಬರಲೇ ಬೇಕು" ಎಂದನು. ಅಯ್ಯಣ್ಣ ಏನೂ ಜವಾಬೇ ಕೊಡಲಿಲ್ಲ. ಲಕ್ಷ್ಮಿ ಮಾತ್ರ ನಾಚಿಕೆಯಿಂದ ತಲೆ ತಗ್ಗಿಸಿಕೊಂಡು ಬೇಗ ಬೇಗ ಮುಂದುವರಿದಳು.

---

## ೧೯. ನಾರಾಯಣನ ಆರ್ಭಟ

ಅನಂತುವಿನ ತಂಗಿಯ ಮಗಳು ವೈದೇಹಿಯನ್ನು ಬೆಂಗಳೂರು ಎಕ್ಸಿಕುಟೀವ್ ಇಂಜನೀಯರ ಮಗ ಸೀತಾರಾಮುವಿಗೂ ಅನಂತುವಿನ ಮಗಳು ಮಂಗಳೆಯನ್ನು ಮಲ್ಲಿಗೆಹಳ್ಳಿಗೋಪಾಲನ ಮಗ ಬಿ.ಎ. ತರಗತಿಯಲ್ಲಿ ಓದುತ್ತಿದ್ದ ನಾರಾಯಣನಿಗೂ ಕೊಟ್ಟು ಎರಡು ಮದುವೆಗಳನ್ನೂ ಒಂದೇ ದಿನ ಜಬ‍ರ್ಾಗಿ ಮಾಡಬೇಕೆಂದು ನಿಷ್ಕರ್ಷೆ ಮಾಡಿದ್ದರೆಂದು ಮೊದಲೇ ತಿಳಿಸಿದೆವಷ್ಟೆ. ವೈದೇಹಿಯೇನೊ ಒಳ್ಳೆ ಸುಂದರಿಯಾಗಿದ್ದಳು. ಸೀತಾರಾಮು ಅವಳನ್ನು ತಾನೇ ನೋಡಿ ಮೆಚ್ಚಿದ್ದನು. ಆ ವರಸಾಮ್ಯ

ಎಲ್ಲರಿಗೂ ಸಮರ್ಪಕವಾಯಿತು. ಇಂಜನೀಯರು ಮಾತ್ರ ಸ್ವಲ್ಪ ಹಳ್ಳಿಯ ಸಂಬಂಧ ಎಂದು ಮೊರೆದಾಡಿದರು. ಅವರ ಹೆಂಡತಿಯವರು "ನಿಮ್ಮ ತಂದೆಯವರು ಇದ್ದದ್ದು ನೀರಿಗೇ ಗತಿಯಿಲ್ಲದ ಹಳ್ಳಿಯಲ್ಲವೆ? ನಮ್ಮ ಮಗಳನ್ನೂ ಹಳ್ಳಿಗೇ ಕೊಟ್ಟಿದ್ದೇವೆಲ್ಲಾ" ಎಂದರು.

ನಾರಾಯಣನಿಗೆ ಮಂಗಳೆಯನ್ನು ಮದುವೆಯಾಗಲು ಇಷ್ಟವಿರಲಿಲ್ಲ. ಮಂಗಳೆ ವಾಸ್ತವವಾಗಿಯೂ ಕುರೂಪಿಯಾಗಿರಲಿಲ್ಲ. ಭಗವಂತ ಯಾವ ಹೆಣ್ಣನ್ನೂ, ಮದುವೆ ಮಾಡಿಕೊಂಡು ಸಂಸಾರ ಮಾಡಲು ಅನರ್ಹವಾಗುವಷ್ಟು ಕುರೂಪಿ ಮಾಡಿರುವುದಿಲ್ಲ. ಇದ್ದರೂ ರೂಪಕ್ಕಿಂತ ಹೆಚ್ಚಾಗಿರುವ ಒಳ್ಳೆಯ ಗುಣ ತ್ಯಾಗ ಇವುಗಳಿಗಾಗಿ ಅವರನ್ನೇ ಹುಡುಕಿಕೊಂಡು ಬರುವ ಹೆಚ್ಚು ಸುಸಂಸ್ಕೃತರಾದ ವರಗಳು ಇದ್ದೇ ಇರುತ್ತಾರೆ. ಮದುವೆಯಾಗಿಬಿಟ್ಟ ಮೇಲೆ ಹೆಂಡತಿಯ ರೂಪವೂ ಗುಣವೂ ಬೆಳೆಯುತ್ತಾ ಹೋಗುತ್ತದೆ. ಗಂಡ "ನೀನು ಚೆನ್ನಾಗಿಲ್ಲ" ಎಂದರೆ ಹೆಂಡತಿಯೂ ಒಂದೊಂದು ಸಲ "ನೀವು ಚೆನ್ನಾಗಿರುವುದೂ ಅಷ್ಟರಲ್ಲಿಯೇ ಇದೆ" ಎನ್ನುತ್ತಾಳೆ. "ಇಂಥವನ ಹೆಂಡತಿಗೆ ಸಂಗೀತ ಹೇಗೆ ಬರುತ್ತೆ, ಏನು ನಾಜೂಕು, ಏನು ನಾಗರೀಕತೆ" ಎಂದು ಗಂಡ ಹೇಳಿದರೆ ಹೆಂಡತಿ ಏನೂ ತಿಳಿಯದವಳಂತೆ ಮಾರನೆಯ ದಿವಸ "ಅಂಥವಳ ಗಂಡ ಈ ವರುಷ ನಾಲ್ಕು ಸೀರೆ ತಂದಿದ್ದಾರೆ. ತಿಂಗಳಿಗೆ ಇನ್ನೂರು ರುಪಾಯಿ ಸಂಪಾದಿಸುತ್ತಾರೆ. ಅಮಲ್ದಾರರು ಡೆಪುಟಿ ಕಮಿಶನರು ಬಂದರೆ ಅವರ ಮನೆಗೆ ಹೋಗದೇ ಇರುವುದೇ ಇಲ್ಲವಂತೆ" ಎನ್ನುತ್ತಾಳೆ. ಈ ಮಾತುಗಳನ್ನ ಹೆಂಡತಿ ಸ್ವಾಭಾವಿಕವಾಗಿ ಮೊದಲಿನ ದಿನದ ಮಾತಿಗೆ ಸಂಬಂಧವಿಲ್ಲದಂತೆ ಹೇಳುತ್ತಾಳೆ. ಇಂತಹ ಉದಾಹರಣೆ ಆಗಾಗ್ಗೆ ಹೇಳಿ ಕೊನೆಗೆ ನನಗೆ ಇವಳು ಸಿಕ್ಕಿದ್ದೂ ನನ್ನ ಪುಣ್ಯ ಎಂಬ ಭಾವ, ಗಂಡನಿಗೆ ಉಂಟಾಗುವಂತೆ ಮಾಡುತ್ತಾಳೆ. ಅಷ್ಟು ಹೊತ್ತಿಗೆ ಇವನು ನಾಲ್ಕು ಮಕ್ಕಳ ತಂದೆಯಾಗಿರುತ್ತಾನೆ. ಕುರೂಪಿಯಾದ ಹೆಂಡತಿ, ಸಿಕ್ಕಿದ್ದೂ ನನ್ನ ಪುಣ್ಯ ಎಂಬ ಭಾವ ಗಂಡನಿಗೆ ಬರಬೇಕಾದರೆ, ಇನ್ನು ನಿಜವಾದ ಸುಂದರಿ ಹೆಂಡತಿಯಾದರೆ ಗಂಡನ ಗತಿಯೇನು? ಉದ್ದಕ್ಕೂ ಸ್ತ್ರೀಜಾತಿ ಪುರುಷ ಜಾತಿಯನ್ನು ಹೀಗೇ ಎಳೆದುಕೊಂಡು ಹೋಗುತ್ತಿದೆ. ಮುಂದೆಯೂ ಹೀಗೆಯೇ.

ನಾರಾಯಣ ಇನ್ನೂ ಆ ಪ್ರಭಾವಕ್ಕೆ ಒಳಗಾಗಿರಲಿಲ್ಲ. ಹುಡುಗನಾಗಿದ್ದ ಅವನಿಗೆ, ಎಲ್ಲಾ ಹುಡುಗರಂತೆ "ಒಳ್ಳೆ ಸುಂದರಿ, ಸ್ವಪ್ನ ಸುಂದರಿ ಬೇಕಾಗಿತ್ತು." ತನ್ನ ಹೆಂಡತಿ ಹೇಗಿರಬೇಕು ಎಂತಹ ಗುಲಾಬಿ ಹೂವಿನಂತೆ ಇರಬೇಕು. ಟಾಗೂರ್ ಹೇಳಿರುವ ಊರ್ವಶಿಯಂತೆ, ಉಷಾದೇವಿಯಂತೆ ಇರಬೇಕು. ಇಲ್ಲದಿದ್ದರೆ ಮದುವೆಯೇ ಬೇಡ" ಎಂಬುದು ಅವನ ಅಭಿಪ್ರಾಯವಾಗಿದ್ದಿತು. ಇದು ಮದುವೆಯಾಗುವವರೆಗೆ ಈಗಿನ ಕಾಲದ ಎಲ್ಲಾ ಹುಡುಗರ ಇಷ್ಟವಯಾಗಿರುತ್ತದೆ. ಅವರು ಕೇವಲ ಸಿನಿಮಾ ತಾರೆಗಳನ್ನು ಮಾತ್ರ ಮದುವೆಯಾಗಲು ಇಷ್ಟಪಡುತ್ತಾರೆ. ಹಾಗೆಯೇ ಅನೇಕ ಕನ್ಯೆಯರೂ ತಮ್ಮ ಕಣ್ಣಿಗೆ ಬೀಳುವ, ತಮ್ಮನ್ನು ನೋಡುವುದಕ್ಕೆ ಬರುವ ಅಥವ ತಮ್ಮನ್ನು ಪರೀಕ್ಷಿಸುವುದಕ್ಕೆ ಬರುವ ವರಗಳನ್ನು ಕುರಿತು ಯೋಚಿಸುತ್ತಾರೆ. ಆದರೆ ಪುರುಷರಿಗಿಂತ ಅವರು ಹೆಚ್ಚು ಸಂಸ್ಕೃತರೂ ಮಾನಸ್ತರೂ ಆದುದರಿಂದ ಇವರಂತೆ ಅವರು ಎದುರಿಗೇ ತಮ್ಮ ಅಸಮಾಧಾನವನ್ನು ತೋರಿಸುವುದಿಲ್ಲ. ತಮ್ಮನ್ನು ಪರೀಕ್ಷಿಸುವುದಕ್ಕೆ ಬರುವ ವರಗಳ ವಿಚಾರದಲ್ಲಿ ಆ ಹುಡುಗಿಯರಿಗೆ ಇರುವ ನಿಜವಾದ ಭಾವ ಒಂದುಸಲ ಈ ಪರೀಕ್ಷಕನಿಗೆ ತಿಳಿಯಲು ಸಾಧ್ಯವಾದರೆ, ಅವನು ಮತ್ತೆ ಈ ಪರೀಕ್ಷಿಸುವ, ಪರೀಕ್ಷಿಸಿದರೂ ಅದನ್ನು ಉದ್ಧತತನದಿಂದ ಪ್ರಕಟಿಸುವ ಅಪಚಾರಕ್ಕೆ ಹೋಗುವುದಿಲ್ಲ. ಅಂತೂ ನಾರಾಯಣನು ನಾನು ಮಂಗಳೆಯನ್ನು ಮದುವೆಯಾಗುವುದಿಲ್ಲ ಎಂದು ಮೊಂಡುಬಿದ್ದನು.

ನಾರಾಯಣನಿಗೆ ವೈದೇಹಿಯನ್ನು ಮದುವೆಯಾಗಲು ಆಸೆ ಇತ್ತು. ತಂದೆಯಿಲ್ಲದ ಆ ಮಗಳನ್ನು ತನಗೆ ಮದುವೆ ಮಾಡಿಕೊಡಲು ಅನಂತು ಅಸಮ್ಮತಿಸುವುದಿಲ್ಲವೆಂದು ಅವನಿಗೆ ತಿಳಿದಿದ್ದಿತು. ತಮ್ಮ ತಂದೆಯನ್ನು ಸುಳ್ಳು ಸಾಲಕ್ಕೆ ಸೆರೆಮನೆಗೆ ಕಳುಹಿಸಿದ ಪುಬೇರಪ್ಪನ ಮಗ ಅನಂತು ತನ್ನ ಮಗಳನ್ನು ಖಂಡಿತ ತನಗೆ ಕೊಡುವುದಿಲ್ಲವೆಂದು ಅವನು ನಂಬಿದ್ದನು. ಅವನಿಗೆ ಬೆಂಗಳೂರು ಇಂಜನೀಯರ್ ಮೇಲೂ ಅವರ ಮಗ ಸೀತಾರಾಮುವಿನ ಮೇಲೂ ಕೋಪವುಂಟಾಯಿತು. "ಇವರು ಪಟ್ಟಣದಲ್ಲಿರುವವರು. ದೊಡ್ಡ ದೊಡ್ಡ ಅಧಿಕಾರಿಗಳೊಡನೆ ಸಂಪರ್ಕವುಳ್ಳವರು. ಅಲ್ಲಿ ಹೆಣ್ಣನ್ನು ಹುಡುಕದೆ ಇಂತಹ ಸ್ಥಳದಲ್ಲಿ ಬಂದು ಇರುವ ಒಂದೆರಡು

ಹುಡುಗಿಯರನ್ನು ಹೊಡೆದುಕೊಂಡು ಹೋಗುತ್ತಾರೆ. ಈ ದುಡ್ಡಿರುವವರ ಕಾಟ ನಮಗೆ ಸಾಕು" ಎಂದು ಅವನು ಗೊಣಗುಟ್ಟಿದನು. ನಾರಾಯಣನ ತಂದೆ ಗೋಪಾಲನಿಗೆ, "ಈ ಮದುವೆ ನಡೆಸಿಬಿಟ್ಟು ತಾನು ಮತ್ತೆ ಎಲ್ಲರಂತೆ ಸಮಾಜದೊಳಕ್ಕೆ ಸೇರಿಬಿಡಬೇಕು. ಅದರಲ್ಲಿಯೂ ಊರಿಗೆ ಅತ್ಯಂತ ಧನಿಕರಾದ ಅನಂತುವಿನ ಮನೆ ಹೆಣ್ಣು ತಂದುಕೊಂಡರೆ ಎಲ್ಲಾ ವಿಧದಲ್ಲಿಯೂ ತನ್ನ ಬಾಳು ಹೆಚ್ಚು ಅನುಕೂಲವಾಗುವುದೆಂದು" ಆಸೆ ಇತ್ತು. ಅನಂತುವಿನ ಹೆಂಡತಿ, ಜಾನಕಮ್ಮನವರು ಅರುಂಧತಿಯಂತಹ ಸಾಧ್ವಿ ಗೋಪಾಲನ ಹೆಂಡತಿಯನ್ನು ಕರೆದು ವಿಧವಿಧವಾಗಿ ಉಪಚರಿಸಿ "ಹಿಂದಲದೆಲ್ಲಾ ಮರೆಯೋಣ" ಎಂದು ಸಮಾಧಾನ ಹೇಳಿದ್ದರು. ಸುತ್ತಮುತ್ತಲ ಹಳ್ಳಿಗಳಲ್ಲಿ ಎಲ್ಲಿ ನೋಡಿದರೂ, ಸಮಾಜದ ದೃಷ್ಟಿಯಲ್ಲಿ ಕೆಳಕ್ಕೆ ಬಿದ್ದಿದ್ದ ಗೋಪಾಲ ಹೀಗೆ ಇದ್ದಕ್ಕಿದ್ದಂತೆ ಮೇಲಕ್ಕೆದ್ದುದು ಒಂದು ಆಶ್ಚರ್ಯವಾಗಿದ್ದಿತು. ಈ ಕಾರಣದಿಂದ ಈ ಮದುವೆ ಬದಲಾಯಿಸಲು ಗೋಪಾಲನಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ಅಷ್ಟೇ ಅಲ್ಲ. ಇದನ್ನು ನಡೆಸಲು ಅವನು ಸರ್ವಪ್ರಯತ್ನವನ್ನೂ ಮಾಡಲು ಸಿದ್ಧನಾಗಿದ್ದನು. ನಾರಾಯಣನಿಗೆ ಇದೆಲ್ಲಾ ಗೊತ್ತಿದ್ದಿತು. ತನ್ನ ತಂದೆ ಸಂಸಾರದಲ್ಲಿ ಅಷ್ಟೊಂದು ಕಷ್ಟಪಟ್ಟವನು. ತನ್ನ ವಿದ್ಯಾಭ್ಯಾಸಕ್ಕಾಗಿ ಗಾಣದ ಎತ್ತಿನಂತೆ ದುಡಿಯುತ್ತಿರುವವನು. ಅವನು ಸಮಾಜದಲ್ಲಿ ತನ್ನ ಸ್ಥಾನ ಸ್ಥಾಪಿಸಲು ದೊರಕಿಸಿಕೊಂಡಿರುವ ಈ ಅವಕಾಶವನ್ನು ತಪ್ಪಿಸಲು ನಾರಾಯಣನಿಗೆ ಎಂದಿಗೂ ಇಷ್ಟವಿರಲಿಲ್ಲ, ತನ್ನ ಪ್ರಾಣ ಬೇಕಾದರೂ ಕೊಟ್ಟು ಇಂತಹ ಅವಕಾಶ ಅವನು ತಂದೆಗೆ ಕೊಡಲು ಸಿದ್ಧನಾಗಿದ್ದನು. ಆದರೆ ಅದನ್ನು ಹೀಗೆ ಇಷ್ಟವಿಲ್ಲದ ಹೆಣ್ಣನ್ನು ಮದುವೆಯಾಗಿಯೇ ಮಾಡಬೇಕೆ? ತಂದೆಯಾದವನು ಹೀಗೆ ತನಗೆ ಇಷ್ಟವಿಲ್ಲದ ಕೆಲಸವನ್ನು ಮಾಡಿಯೇ ತನ್ನನ್ನು ಪರೀಕ್ಷಿಸಬೇಕೆ? ಇನ್ನು ನನ್ನ ತಾಯಿ? ನನ್ನ ಜೀವ ಅರೆದು ದುಡಿದರೆತಾನೇ ಇವರ ಋಣ ತೀರಿಸುವುದಕ್ಕೆ ಆಗುತ್ತದೆಯೆ? ಈ ತಾಯಿ ಈ ನಿರ್ಗತಿಕವಾದ ಸುದಾಮನ ಈ ಬಡ ಸಂಸಾರವನ್ನು ಎಷ್ಟು ಕಷ್ಟದಿಂದ ಸಂರಕ್ಷಿಸಿದಳೋ? ಯಾವಾಗಲೂ ಬಡ ಸಂಸಾರಗಳಲ್ಲಿ ಸಂಸಾರದ ಕಷ್ಟವೆಲ್ಲಾ ಹೆಂಡತಿಯ ಮೇಲೆ ಬೀಳುತ್ತದೆ. ಗೋಪಾಲ ಸೆರೆಯಲ್ಲಿರುವಾಗ ಇವಳು ಹೇಗೆ ಸಂಸಾರ ನಡೆಸಿದಳೋ?"

ಎಲ್ಲಾ ಸರಿ. ನಾರಾಯಣ ಸಂಸಾರಕ್ಕಾಗಿ ಯಾವ ಕಷ್ಟಪಡಲೂ ಸಿದ್ಧನಾಗಿದ್ದನು. ಆದರೆ ಮಂಗಳೆಯನ್ನು ಮದುವೆಯಾಗುವುದು ಎಂದರೆ ಆ ವಿಚಾರ ಬೇರೆ.

ನಾರಾಯಣನ ಈ ಆರ್ಭಟಗಳೊಂದನ್ನೂ ಗಮನಿಸದೆ ಗೋಪಾಲ ಮದುವೆಯ ಸಿದ್ಧತೆಯಲ್ಲಿ ಉತ್ಸಾಹದಿಂದ ತೊಡಗಿದ್ದನು. ಬಂದವರ ಜತೆಯಲ್ಲಿ ಆಗಲೇ ಅನಂತುವನ್ನು ಕುರಿತು "ನಮ್ಮ ಬೀಗರು" ಎಂದು ಹೇಳುತ್ತಿದ್ದನು. ಬೀಗರ ಮನೆಗೆ ಹೋಗಿದ್ದೆ ಎನ್ನುತ್ತಿದ್ದನು. ಮಂಗಳೆಯನ್ನು ಕುರಿತು ಮಾತನಾಡುವಾಗ "ನಮ್ಮ ಸೊಸೆ" ಎನ್ನುತ್ತಿದ್ದನು. ನಾರಾಯಣನಿಗೆ ಏನು ಮಾಡುವುದಕ್ಕೂ ತೋರಲಿಲ್ಲ. ಅವನು ಯಾರ ಹತ್ತಿರವಾದರೂ ನಾನು ಮದುವೆಯಾಗುವುದಿಲ್ಲ ಎಂದರೆ ಅವರು ಎಲ್ಲವನ್ನೂ ತಿಳಿದವರಂತೆ ಮೆಲ್ಲಗೆ ನಗುತ್ತಿದ್ದರು. ರಘುರಾಮ—ನಾರಾಯಣನಿಗೆ ಬೇಕಾದ ಸ್ವಲ್ಪ ಹಿರಿಯರಾದ ಅವನ ಮಿತ್ರರು—"ಅಪ್ಪಾ. ಇದು ಬ್ರಹ್ಮನ ಬರೆಹ. ಯಾಕೆ ಹಾರಾಡ್ತೀಯ. ನಾನೂ ಹೀಗೆ ಮದುವೆ ಕಾಲದಲ್ಲಿ ಹಾರಾಡಿದೆ. (ಬೆಳಗಿನಿಂದ ರಾತ್ರಿವರೆಗೆ ಮನೆಗೇ ಸೇರುತ್ತಿರಲಿಲ್ಲ. ರಾತ್ರಿ ಮಲಗುವುದಕ್ಕೆ ಬೇರೆ ಜಾಗವಿಲ್ಲದುದರಿಂದ ಮನೆಗೇ ಹೋಗಬೇಕಾಗಿದ್ದಿತು.) ಕೊಠಡಿ ಬಾಗಿಲು ಹಾಕಿಕೊಂಡು ಕೂತುಬಿಡುತ್ತಿದ್ದೆ. ನಮ್ಮ ತಂದೆಯವರೂ ತಾಯಿಯವರೂ ಕೊಠಡಿ ಬಾಗಿಲಿನಲ್ಲಿ ಕುಳಿತುಕೊಂಡು ನನ್ನನ್ನು ಕರೆಯುತ್ತಿದ್ದರು. ನಾನು ಜವಾಬೇ ಕೊಡುತ್ತಿರಲಿಲ್ಲ. ಅವರು ಹೊರಗಿನಿಂದಲೇ ಅರ್ಧಗಂಟೆ ಉಪನ್ಯಾಸ ಮಾಡುತ್ತಿದ್ದರು. ಅದರಲ್ಲಿ ಕಾಲು ಗಂಟೆ ನನ್ನ ಬೈಗಳವಿರುತ್ತಿದ್ದಿತು. ಕೆಲವು ದಿನ ನಾನು ನಿದ್ರೆ ನಟಿಸುತ್ತಿದ್ದೆ. ನನಗೆ ಮದುವೆಯೇ ಬೇಡ ಎನ್ನುತ್ತಿದ್ದೆ. ಏನೂ ಇಲ್ಲ. ಲಗ್ನಪತ್ರಿಕೆ ಸಿದ್ಧವಾಯಿತು. ನಮ್ಮ ಅತ್ತೆ ಮಾವ ನನ್ನ ಹೆಂಡತಿಯಾಗುವವಳೊಡನೆ ಊರಿಗೆ ಬಂದರು. ನೆಂಟರೆಲ್ಲ ಸೇರಿದರು. ನಾನು ಬೇಡ ಬೇಡ ಅಂತ ಹೇಳುತ್ತಲೇ ಇದ್ದೆ. ಮದುವೆ ದಿನ ಬಂತು. ಒಂದು ಎರಡು ಲಗ್ನ, ಹುಷಾರಿಲ್ಲವೆಂದು ಮುಂದೆ ತಳ್ಳಿದೆ. ನಮ್ಮ ಅತ್ತೆ ಮಾವ ನನ್ನ ಹೆಂಡತಿಯಾಗಲು ಬಂದಿರುವವಳು ಸಿಟ್ಟನ್ನಾದರೂ ಮಾಡಿಕೊಂಡು ಹೋಗುತ್ತಾರೆಂದು ಆಸೆ ಇಟ್ಟುಕೊಂಡೆ. ಮೀನು ಹಿಡಿಯಲು ಗಾಳ ತಂದಿರುವವನು ಮೀನು ಬರಲಿಲ್ಲವೆಂದು ಬಿಟ್ಟು

ಹೋಗುತ್ತಾನೆಯೇ. ಗಾಳವನ್ನು ಒಂದು ಬಂಡೆಗೆ ಕಟ್ಟಿಹಾಕಿ ಕಾಯ್ದು ಕೊಂಡಿದ್ದು ಮೀನು ಬಂದ ಕೂಡಲೆ ಹಿಡಿಯುತ್ತಾನೆ. ಏನೂ ಆಗಲಿಲ್ಲ. ಪ್ರಹ್ಮದಂಡ. ಮುಂದಲ ಲಗ್ನದಲ್ಲಿ ಮದುವೆ ಆಗಿಯೇ ಆಯಿತು. ಸಜ್ಜಪ್ಪ, ಹಪ್ಪಳ, ಸಂಡಿಗೆಗಳು ಮೊದಲ ಲಗ್ನಕ್ಕೆ ಮಾಡಿದವು—ಸ್ವಲ್ಪ ಹಳೆಯವಾದುದರಿಂದ ಊಟಕ್ಕೆ ಬಂದಿದ್ದವರು ನನ್ನನ್ನು ಅಷ್ಟು ಬೈದರು. ಈಗ ನೋಡುತ್ತಿದ್ದೀಯೆಲ್ಲ. ನನ್ನ ಜೋರು ಎಲ್ಲಿ?'' ಎಂದರು.

ನಾರಾಯಣನು "ಸ್ವಾಮಿ ನೀವು ರಸಿಕರು. ಮತ್ತು ಸ್ವಲ್ಪ ವಯಸ್ಸಾದರೂ ನನ್ನ ಹಿರಿಯ ಮಿತ್ರರೆಂದು ಭಾವಿಸುತ್ತೇನೆ. ನಿಮ್ಮ ಯಜಮಾಂತಿಗೂ ಮಂಗಳೆಗೂ ಎಲ್ಲಿಗೆಲ್ಲಿಗೆ ಸಂಬಂಧ ಸ್ವಾಮಿ. ನಿಮ್ಮ ಸುಕೃತದಿಂದ ಅಂತಹ ಮಹಿಳೆ ನಿಮಗೆ ದೊರೆತಿದ್ದಾರೆ'' ಎಂದ. ಅವನ ಮಿತ್ರರು "ಅಪ್ಪಾ ಮದುವೆಯಾದ ಮೇಲೆ ನಿನ್ನ ಹೆಂಡತಿ ಕುರಿತು ನೀನು ಹೇಳುವುದೂ ಹೀಗೆಯೇ. ಇದು ಭಗವಂತನ ಮಾಯೆ. ಭಗ ವಂತನ ಮಾಯೆ ಮಾತ್ರವೇ ಅಲ್ಲ. ಹೆಣ್ಣಿನ ಮಾಯೆಯೂ ಹೌದು. ಒಂದು ಸಲ ನಾವು ಅವರ ಕೈಗೆ ಸಿಕ್ಕುವುದೇ ತಡ. ಸಿಕ್ಕಿದ ಕೂಡಲೆ ನಮಗೆ ಮೂಗುದಾರ, ಗುದ್ದುಕಾಲು, ದಂಡಿ ಎಲ್ಲಾ ಹಾಕಿ ನಮ್ಮ ಹೆಗಲ ಮೇಲೆ ಜೀನನ್ನೂ ಹಾಕಿಕೊಂಡು ನಮ್ಮನ್ನು ಪಳಗಿಸುತ್ತಾರೆ. ಆ ಪಾರ ತಂತ್ರದಲ್ಲಿ ನಮಗೆ ಸುಖವೇ ಹೊರತು ಎಂದಿಗೂ ದುಃಖವಿಲ್ಲ'' ಎಂದರು. ನಾರಾಯಣನು "ಹೇಗಾದರೂ ಆಗಲಿ, ಈ ಮದುವೆಗೆ ನಾನು ಖಂಡಿತ ಒಪ್ಪುವುದಿಲ್ಲ'' ಎಂದ. ಅವನ ಮಿತ್ರರು "ಲೋಕದ ಮದು ವೆಗಳೆಲ್ಲಾ ಆಗಿರುವುದು ಹೀಗೆಯೆ. ಕೆಲವು ಮದುವೆಗಳಿಗೆ ವರಗಳು ಒಪ್ಪುವುದಿಲ್ಲ. ಕೆಲವು ಮದುವೆಗಳಿಗೆ ಕನ್ಯೆಯರು ಒಪ್ಪುವುದಿಲ್ಲ. ಆದರೂ ಮದುವೆ ಆಗಿಯೇ ಆಗುತ್ತೆ. ಆದಮೇಲೆ ಎಲ್ಲಾ ಸರಿಹೋಗುತ್ತೆ. ಗಂಡ ಜೋರಾದರೆ ಹೆಂಡತಿ ಮೆತ್ತಗಾಗುತ್ತಾಳೆ. ಹೆಂಡತಿ ಜೋರಾದರೆ ಗಂಡ ಮೆತ್ತಗಾಗುತ್ತಾನೆ. ಆದರೆ ಈ ಸವರಿಸಿಕೊಳ್ಳುವುದರಲ್ಲಿ ಸಾಮಾನ್ಯವಾಗಿ ಜಯಿಸುವವಳು ಹೆಂಡತಿಯೇ. ತನ್ನದು ಏನೂ ನಡೆಯುವುದಿಲ್ಲವೆಂಬುದು ಗಂಡನಿಗೆ ಬಹುಬೇಗ ಗೊತ್ತಾಗುತ್ತದೆ. ಮದುವೆಯಾಗುವುದಕ್ಕೆ ಮುಂಚೆ ಅವನು ತಂದೆ ತಾಯಿಗಳ ಎದುರಿಗೆ, ಹಸುವಿನ ಎದುರಿನ ಕರುವಿನಂತೆ ಹಾರಾಡುವುದು ಎಷ್ಟೋ ಅಷ್ಟೆ. ಹೆಂಡತಿ ಮನೆಗೆ ಬಂದ ಕೂಡಲೆ ಅವ

ನನ್ನು ಸರಿಯಾಗಿ ಎದುರಿಸುತ್ತಾಳೆ. ಆಗ ಅವನು ಅವಳು ಹೇಳಿದಂತೆ ಕೇಳುತ್ತಾನೆ. ಸಂಸಾರದ ಕಷ್ಟಸುಖವನ್ನು ಸಮಾನವಾಗಿ ಹಂಚಿಕೊಳ್ಳುವ ಹೆಂಡತಿಯೊಂದಿಗೆ ಇಪ್ಪತ್ತುನಾಲ್ಕು ಗಂಟೆಯೂ ಕಾದಾಡುತ್ತಿರುವುದು ಸಾಧ್ಯವೇ? ಮದುವೆಮಾಡುವ ತಂದೆ ತಾಯಿಗಳಿಗೆ ಈ ವಿಚಾರ ಚೆನ್ನಾಗಿ ಗೊತ್ತು. ನಾನು ಒಂದುಸಲ ನಮ್ಮ ತಾಯಿಯ ಮೇಲೆ ಯಾವುದಕ್ಕೊ ಕೂಗಾಡುತ್ತಿದ್ದೆ. ಅವರು "ನಾಳೆ ನಿನ್ನ ಹೆಂಡತಿ ಬರ್ತಾಳೆ ಹ್ಯಾಗೆ ಮಾಡಸ್ತೀಯೋ ನೋಡ್ತೇನೆ" ಎಂದರು. ತತ್‌ಕ್ಷಣ ನಮ್ಮ ತಂದೆಯವರು ನನ್ನ ಪಕ್ಷ ವಹಿಸಿ "ಅವನ ಹೆಂಡತಿ ಸೀರೆ ಅವ ಒಗೀತಾನೆ. ಅದ ಕಟ್ಕೊಂಡು ನಿನಗೇನು; ನಿನ್ನ ಕೆಲಸ ನೀನು ಮಾಡು" ಎಂದು ಗದರಿಸಿದರು. ಒಂದು ಗಳಿಗೆ ನನಗೆ "ನೋಡಿದ್ಯ. ನಮ್ಮ ತಂದೆ ಹೇಗೆ ನನ್ನ ಪರ ವಹಿಸಿಕೊಂಡು ಒಂದರು" ಎಂದು ಸಂತೋಷವಾಯಿತು. ಆದರೆ ಮರು ನಿಮಿಷದಲ್ಲಿ ನಮ್ಮ ತಂದೆಯವರ ಮಾತಿನಲ್ಲಿಯ ಕೊಂಕು ಗೊತ್ತಾಯಿತು. ಆಗ ಸ್ವಲ್ಪ ಕೋಪ ಒಂತು. ಆದರೆ ಇವತ್ತು ಆಗಿರುವುದೂ ಹಾಗೆಯೇ ಅಂತ ಇಟ್ಕೊಕೋ. ತಾಯೀನ ಗದರಿಸುವಂತೆ ಹೆಂಡತೀನ ಗದರಿಸಿದರೆ ಕೇಳುತ್ತಾಳೆಯೇ" ಎಂದರು. ನಾರಾಯಣನು "ಎಲ್ಲಾ ಸರಿ ಸ್ವಾಮಿ. ಆದರೆ ಇವಳು ಮಂಗಳೆಯೆಲ್ಲಾ" ಎಂದನು.

ನಾರಾಯಣನಿಗೆ ಉಡುಪು ಹೊಲಸಬೇಕೆಂದು ಅನಂತು ಗೋಪಾಲನಿಗೆ ಹೇಳಿ ಕಳುಹಿಸಿದಾಗ ನಾರಾಯಣ ಮತ್ತೆ ನಾನು ಮದುವೆಯಾಗುವುದಿಲ್ಲ ಎಂದನು. ಗೋಪಾಲನು ಕೋಪದಿಂದ "ಮದುವೆಯಾಗದಿದ್ದರೆ ನಿನ್ನನ್ನು ಮದುವೆಯ ದಿನ ಕೊಂದೇಬಿಡುತ್ತೇನೆ. ಹೇಗೂ ಹಿಂದೆ ಜೈಲು ಆಗಿದೆ. ಈಗ ಇನ್ನು ಉಳಿದಿರುವುದು ಮುಂದಲದೇ. ನಿನ್ನನ್ನೂ ಕೊಂದು ನಾನೂ ವಿಷ ತೆಗೆದುಕೊಂಡು ಸಾಯುತ್ತೇನೆ" ಎಂದು ಗದ್ದರಿಸಿದನು. ನಾರಾಯಣ ಊರಿಗೆ ಬರುವಾಗ ಹೊಲಿಸಿಕೊಂಡು ಬಂದಿದ್ದ ಹೊಸ ಸೂಟನ್ನೇ ಗೋಪಾಲ, ಅನಂತುವಿಗೆ ಅಳತೆಗೆ ಕೊಟ್ಟ. ಅನಂತುವು ಅದರ ಅಳತೆಗೆ ಸರಿಯಾಗಿ ಹೊಲಿಸಿಕೊಂಡು ಬರುವಂತೆ ಬೆಂಗಳೂರಿಗೆ ಅಳತೆಯನ್ನು ಕಳುಹಿಸಿದನು. ಯಥಾ ಕಾಲದಲ್ಲಿ ಲಗ್ನಪತ್ರಿಕೆ ಸಿದ್ಧವಾಯಿತು.

ಮದುವೆ 5-6 ದಿನ ಇರುವಾಗ ಗೋಪಾಲ "ಬೆಂಗಳೂರಿನಲ್ಲಿರುವ

ನಿನ್ನ ಚಿಕ್ಕಮ್ಮನನ್ನು ಹೋಗಿ ಮದುವೆಗೆ ಕರೆದುಕೊಂಡು ಬಾ" ಎಂದು ನಾರಾಯಣನನ್ನು ಕಳುಹಿಸಿದನು. ನಾರಾಯಣನಿಗೆ ತನ್ನ ಚಿಕ್ಕಮ್ಮನನ್ನು ಕಂಡರೆ ಪ್ರಾಣ. ಅವಳ ಗಂಡ ಬೆಂಗಳೂರಿನಲ್ಲಿ ಮುನಸೀಫ್ ಕೋರ್ಟಿನ ಗುಮಾಸ್ತನಾಗಿದ್ದ. ನಾರಾಯಣ ಅವರ ಮನೆಯಲ್ಲಿಯೇ ಇದ್ದುಕೊಂಡು ಓದುತ್ತಿದ್ದ. ನಾರಾಯಣ "ಬೇಡ ಎಂದರೂ ಮದುವೆ ಗೊತ್ತು ಮಾಡಿದಿರಿ. ನಾನು ಬೇರೆ ಈ ಹೆಂಡತಿಯೊಂದಿಗೆ ಸಂಸಾರ ಮಾಡುವುದಿಲ್ಲ" ಎಂದುಕೊಂಡು ಬೆಂಗಳೂರಿಗೆ ಹೋದ. ಅಲ್ಲಿಯೂ ಅವರ ಚಿಕ್ಕಪ್ಪ ಚಿಕ್ಕಮ್ಮನೊಂದಿಗೆ ಮದುವೆ ಬೇಡ ಎಂದು ಕೊರಚಾಡಿದ. ಅವರ ಚಿಕ್ಕಮ್ಮ ಮಂಗಳೆಯನ್ನು ನೋಡಿದ್ದಳು. ಅವಳು "ವೈದೇಹಿಯನ್ನು ನೋಡಿ ನೀನು ಹೀಗೆ ಆಡ್ತೀಯ. ಮಂಗಳೆ ಏನಾಗಿದ್ದಾಳೆ. ನಿಜವಾಗಿಯೂ ಚೆನ್ನಾಗಿಯೇ ಇದ್ದಾಳೆ. ವೈದೇಹಿಗೆ ವಯಸ್ಸಾಗಿದೆ. ಮೈಕೈ ತುಂಬಿಕೊಂಡು ಚೆನ್ನಾಗಿ ಕಾಣ್ತಾಳೆ. ಮಂಗಳೆ ಇನ್ನೂ ಪೀಚು. ಹುಡುಗಿ. ನಿನಗೂ ವೈದೇಹಿಗೂ ಸಾಮ್ಯ ಚೆನ್ನಾಗಿಲ್ಲ. ನಿನಗೂ ಮಂಗಳೆಗೂ ಚೆನ್ನಾಗಿದೆ. ರತಿ ಮನ್ಮಥರ ಹಾಗೆ ಇದ್ದೀರಿ" ಎಂದಳು. ಅವಳು ಹೇಳಿದ ಮೇಲೆ ನಾರಾಯಣನಿಗೆ ಇದ್ದಕ್ಕಿದ್ದಂತೆ ಅವನ ಹಿರಿಯ ಮಿತ್ರರು ಹೇಳಿದ ಮಾತು ಜ್ಞಾಪಕಕ್ಕೆ ಬಂತು. "ಈ ವಯಸ್ಸಾದವರ ಮಾತೆಲ್ಲಾ ಹೀಗೆಯೇ ಅಥವಾ ಮದುವೆಯಾದವರದೇ ಒಂದು ಪಿತೂರಿ. ಎಲ್ಲರದೂ ಒಂದೇ ಸಾಧನೆ. ಮದುವೆಯಾಗದವರನ್ನು ಗುಂಡಿಗೆ ಕೆಡಗುವುದು" ಎಂದುಕೊಂಡನು. ನಾರಾಯಣ ಯಾವ ಬಟ್ಟೆ ಅಂಗಡಿಯಲ್ಲಿ ತನ್ನ ಉಡುಪನ್ನು ಹೊಲಿಯುತ್ತಿದ್ದರೋ ಅಲ್ಲಿಗೆ ಹೋಗಿ ಅವರು ಆರಿಸಿರುವ ಬಟ್ಟೆ ತನ್ನ ಇಷ್ಟಕ್ಕೆ ಅನುಸಾರವಾಗಿರುವುದನ್ನು ನೋಡಿಕೊಂಡು ತನಗೆ ಬೇಕಾದ ರೀತಿಯಲ್ಲಿ ಹೊಲಿಯಲು ಸೂಚನೆಕೊಟ್ಟು ಮನೆಗೆ ಬಂದನು.

ಮದುವೆಗೆ ಮೊದಲು ದಿನ ಸಾಯಂಕಾಲ ಮಲ್ಲಿಗೆಹಳ್ಳಿಗೆ ಬರುವುದಾಗಿ ನಾರಾಯಣ ಗೋಪಾಲನಿಗೆ ಕಾಗದ ಬರೆದಿದ್ದನು. ಹಾಗೆ ಮದುವೆಯ ಮೊದಲ ದಿನವೇ ಊರಿಗೆ ಬರಲು ನಾರಾಯಣ ಯೋಚಿಸಿದ್ದುದಕ್ಕೆ ಒಂದು ಕಾರಣವಿತ್ತು. ಸೀತಾರಾಮುವೂ ಮನೆಯವರೊಂದಿಗೆ ಅವತ್ತೇ ಬರುವವನಾಗಿದ್ದನು. ಪರಸ್ಥಳದಿಂದ ವರಪೂಜೆಗೆ ಬರುವವರನ್ನು ಯಾವ

ರೀತಿ ಊರಿನವರೆಲ್ಲಾ ಸೇರಿ ರಸ್ತೆಯ ಹತ್ತಿರ ಬ್ಯಾಂಡು ಗ್ಯಾಸ್‌ಲೈಟು ಇಟ್ಟುಕೊಂಡು ಕೈಗೆ ಅರಸಿನದ ತೆಂಗಿನಕಾಯನ್ನೂ ಕತ್ತಿಗೆ ಹಾರವನ್ನೂ ಹಾಕಿ ಊರೊಳಕ್ಕೆ ಕರೆದುಕೊಂಡು ಹೋಗುತ್ತಾರೆ ಎಂಬುದು ನಾರಾಯಣನಿಗೆ ಗೊತ್ತಿದ್ದಿತು. ರಸ್ತೆಯ ಉದ್ದ ಹೆಚ್ಚಾದಷ್ಟೂ ಆ ಮೆರವಣಿಗೆಯ ವೈಭವ ಹೆಚ್ಚು. ತನ್ನ ವರಪೂಜೆಗೆ ಹಾಗೇ ಹೋಗಬೇಕೆಂದೂ ಅವನಿಗೆ ಆಸೆ ಇದ್ದಿತು. ಆದರೆ ಗೋಪಾಲ ಒಂದೇ ಊರಿನಲ್ಲಿ ಹತ್ತಿರದ ಎದುರು ಮನೆಯಲ್ಲಿ ಹೆಣ್ಣನ್ನು ಗೊತ್ತುಮಾಡಿಬಿಟ್ಟುದರಿಂದ ಅದಕ್ಕೆ ಅವಕಾಶವಿಲ್ಲದೆ ಹೋಯಿತು. ಆದರೂ ನಾರಾಯಣ ಅಷ್ಟು ಸುಲಭವಾಗಿ ಈ ವೈಭವವನ್ನು ಬಿಟ್ಟುಕೊಡುವವನಾಗಿರಲಿಲ್ಲ. ಅವನು ತಾನೂ ವರಪೂಜೆಯ ದಿನವೇ ರೈಲಿನಲ್ಲಿ ಬರುವುದಾಗಿಯೂ ಆದರೆ ತಾನು ಸೀತಾರಾಮು ಅವರು ಇಳಿಯುತ್ತಿದ್ದ ಸ್ಟೇಶನ್ನಿನಲ್ಲಿ ಇಳಿದು ಬಸ್ಸಿನಲ್ಲಿ ಬರದೆ ಅದರ ಮುಂದಲ ಮಾವಿನಕೆರೆ ಸ್ಟೇಶನ್ನಿನಲ್ಲಿ ಇಳಿಯುವುದಾಗಿಯೂ ಅಲ್ಲಿಗೇ ಗಾಡಿಯನ್ನು ಕಳುಹಿಸಬೇಕೆಂದೂ ಗೋಪಾಲನಿಗೆ ಕಾಗದ ಬರೆದನು. ಒಂದೇ ಸ್ಟೇಶನ್ನಿನಲ್ಲಿ ಇಳಿಯದೇ ಇರುವುದಕ್ಕೂ ನಾರಾಯಣನಿಗೆ ಕಾರಣಗಳಿದ್ದುವು. ಬೆಂಗಳೂರಿನಿಂದ ಬರುತ್ತಿದ್ದ ಬೀಗರು ರೈಲಿನಲ್ಲಿ ಎರಡನೆಯ ತರಗತಿಯಲ್ಲಿ ಬರುತ್ತಿದ್ದರು. ನಾರಾಯಣನಿಗೆ ಆ ಅನುಕೂಲವಿರಲಿಲ್ಲ. ಆದರೆ ತನ್ನ ದಾರಿದ್ರ್ಯ ಅವರೆದುರಿಗೆ ತೋರಿಸಲು ಅವನಿಗೆ ಇಷ್ಟವಿರಲಿಲ್ಲ ಆದುದರಿಂದ ಅವನು ಇವರ ಸಂಪರ್ಕವೇ ಬೇಡವೆಂದು ಮೂರನೆಯ ತರಗತಿಯಲ್ಲಿ ಒಂದು ಬೇರೆ ಗಾಡಿಯಲ್ಲಿ ಕುಳಿತುಕೊಂಡನು. ಹಾಸನದ ಸ್ಟೇಶನ್ನಿನಲ್ಲಿ ರೈಲು ನಿಂತಕೂಡಲೇ ಸೀತಾರಾಮುವೂ ಅವನ ಜತೆಯಲ್ಲಿ ಬಂದಿದ್ದ ಎಲ್ಲಾ ನೆಂಟರೂ ಕೆಳಗೆ ಇಳಿದು ಅನಂತು ಕಳುಹಿಸಿದ್ದ ಬಸ್‌ನಲ್ಲಿ ಕುಳಿತುಕೊಂಡು ಸರ್‍ರನೆ ಮಲ್ಲಿಗೆಹಳ್ಳಿಯನ್ನು ತಲಪಿದರು. ನಾರಾಯಣ ಊಹಿಸಿದ್ದಂತೆ ರಸ್ತೆಯ ಬ್ಯಾಂಡು ತೋರಣ ಗ್ಯಾಸ್ ಲೈಟುಗಳು ಅತ್ಯಂತ ಜಬರ್‌ದಸ್ತ ಆಗಿದ್ದುವು. ಬೆಂಗಳೂರಿನಿಂದ ಬಂದಿದ್ದ ಸ್ತ್ರೀ ಪುರುಷರು ಬಗೆಬಗೆಯ ವೇಷಗಳೊಡನೆ ಬಗೆಬಗೆಯ ಥಳಕುಗಳೊಡನೆ ಬಸ್ಸಿನಿಂದ ಇಳಿದರು. ಆ ಹಳ್ಳಿಯ ಜನ, ಪಟ್ಟಣದವರು ಇಷ್ಟು ಜನವನ್ನು ಒಟ್ಟಾಗಿ ನೋಡಿಯೇ ಇರಲಿಲ್ಲ. ಅವರ ಬಗೆ ಬಗೆಯ ವೇಷಗಳು ನಾಟಕದ ಗ್ರೀನ್ ರೂಮ್ (ವೇಷ ಧರಿಸುವ

ಕೊಠಡಿ) ವೇಷಧಾರಿಗಳ ಜ್ಞಾಪಕ ತರುತ್ತಿದ್ದಿತು. ಅವರ ಬಣ್ಣ ಬಣ್ಣದ ರೇಶಿಮೆ ಸೀರೆಗಳು ಕಣ್ಣು ಕೋರೈಸುವ ಆಭರಣಗಳು, ಕಾಲಿನ ಚಪ್ಪಲಿ ಕೆಲವರ ಕೈಚಕ್ಕಳದ ಚೀಲ ಇವು ಪಟ್ಟಣಗಳನ್ನು ನೋಡಿದ್ದವರಿಗೆ ಸಾಮಾನ್ಯವಾದುವುಗಳಾಗಿದ್ದರೂ ಮಲ್ಲಿಗೆಹಳ್ಳಿ ಜನರಿಗೆ ಅದ್ಭುತವಾಗಿ ತೋರಿದುವು. ಅನಂತುವೂ ಜಾನಕಮ್ಮನೂ ರಸ್ತೆಯ ಹತ್ತಿರವೇ ನಿಂತಿದ್ದು ಹೊಸ ಅಳಿಯನನ್ನು ಊರೊಳಕ್ಕೆ ಬಿಡದಿ ಮನೆಗೆ ಕರೆದುಕೊಂಡು ಹೋದರು, ನಾರಾಯಣನನ್ನು ಕರತರಲು ತನ್ನ ಗಾಡಿಯೇ ಮಾವಿನ ಕೆರೆಗೆ ಹೋಗಿದ್ದುದರಿಂದ ಅನಂತುವಿಗೆ ಗಾಬರಿಯಾಗಲಿಲ್ಲ. ಉರಗನೇ ಗಾಡಿ ಹೊಡೆಯುವವನಾಗಿದ್ದನು.

ಊರೊಳಗಿನ ದೇವಸ್ಥಾನದಲ್ಲಿ ವರಪೂಜೆಯ ಸಿದ್ಧತೆಗಳು ಬಹಳ ವೈಭವದಿಂದಲೇ ನಡೆಯುತ್ತಿದ್ದುವು. ಎರಡು ವರಪೂಜೆ ಒಟ್ಟಿಗೆ ನಡೆಯುತ್ತಿದ್ದುದರಿಂದ ಆಡಂಬರ ಇನ್ನೂ ಜೋರಾಗಿಯೇ ಇದ್ದಿತು. ಅನಂತುವಿನ ಹೆಂಡತಿ ಜಾನಕಮ್ಮ, "ಎರಡು ಹೆಣ್ಣುಗಳಿಗಾಗಿ ಮಾಡುವ ಏರ್ಪಾಡುಗಳಲ್ಲಿಯೂ ಯಾವ ವ್ಯತ್ಯಾಸವೂ ಇರಬಾರದು. ವೈದೇಹಿ ತಾನೆ ಇನ್ನು ಎಷ್ಟು ದಿನ ಈ ಮನೆಯಲ್ಲಿರುತ್ತಾಳೆ" ಎಂದು ಎಲ್ಲಾ ವ್ಯವಸ್ಥೆಗಳನ್ನೂ ಬಹಳ ಚೆನ್ನಾಗಿ ಮಾಡಿಸಿದ್ದರು. ರಾತ್ರಿ ಹತ್ತು ಗಂಟೆಯಾದರೂ ನಾರಾಯಣನನ್ನು ಕರೆದುಕೊಂಡು ಬರಲು ಹೋಗಿದ್ದ ಗಾಡಿ ಬರಲಿಲ್ಲ. ಅಷ್ಟು ಹೊತ್ತಿಗೆ ಗಾಡಿ ನ್ಯಾಯವಾಗಿ ಬರಬೇಕಾಗಿದ್ದಿತು. ಯಾರೋ ಒಬ್ಬರು ಅನಂತುವಿಗೆ "ಒಂದು ಗ್ಯಾಸ್ ಲೈಟ್ ಕೊಟ್ಟು ರಸ್ತೆಯ ಹತ್ತಿರಕ್ಕೆ ಯಾರನ್ನಾದರೂ ಕಳುಹಿಸು" ಎಂದರು. ಅನಂತುವು ಗದ್ದಲದಲ್ಲಿ ಮರತೇ ಬಿಟ್ಟನು. ಗೋಪಾಲನಿಗೆ ಸಿಟ್ಟು ಬಂತು. ಆದರೆ ಅವನ ಕೋಪ ನಾರಾಯಣನ ಮೇಲೆಯೇ ಇದ್ದುದರಿಂದ ಅವನು ಮಾತನಾಡಲಿಲ್ಲ. ಸೀತಾರಾಮುವಿನ ತಂದೆ ಇಂಜನೀಯರ್ ಸಾಹೇಬರು "ಇನ್ನೊಬ್ಬ ಅಳಿಯ ಬರುವವರೆಗೆ ಕಾಯುವುದಕ್ಕೆ ನಮ್ಮಿಂದ ಸಾಧ್ಯವಿಲ್ಲ. ಈಗಾಗಲೇ ನಿದ್ರೆ ಕಾಲ ಮೀರಿಹೋಯಿತು. ಜಾಗ್ರತೆ ವರಪೂಜೆ ಮಾಡುವುದಿದ್ದರೆ ಮಾಡಿ. ನಾವೂ ನೋಡುತ್ತೇವೆ. ಇಲ್ಲದಿದ್ದರೆ ನಾವಂತೂ ಮಲಗಿಕೊಳ್ಳುತ್ತೇವೆ. ನೀವು ನಿಧಾನವಾಗಿ ಇಬ್ಬರು ಅಳಿಯಂದಿರಿಗೂ ಒಟ್ಟಿಗೆ ಮಾಡಬಹುದು; ನನ್ನದು ಆಕ್ಷೇಪಣೆಯಿಲ್ಲ"

ಎಂದರು. "ಇಲ್ಲ ಉಂಟೆ. ಈಗಲೇ ಮಾಡಿ ಬಿಡೋಣ" ಎಂದು ಅನಂತು ಅದರ ಏರ್ಪಾಡಿನಲ್ಲಿ ತೊಡಗಿದನು. ವರಪೂಜೆಯಾಯಿತು. ವರಪೂಜೆ ಮೆರವಣಿಗೆಯಾಯಿತು. ಇನ್ನೇನು ನಾರಾಯಣ ಈಗ ಬರುತ್ತಾನೆ ಆಗ ಬರುತ್ತಾನೆ ಎಂದುಕೊಂಡು ಎಲ್ಲರೂ ಊಟ ಮಾಡಿದರು. ಬ್ಯಾಂಡಿನವರು ಬಾಗಿಲಿನಲ್ಲಿ ಕುಳಿತುಕೊಂಡು ತೂಕಡಿಸುತ್ತಲೇ ಇದ್ದರು. ನಾರಾಯಣನೂ ಬರಲಿಲ್ಲ. ಗಾಡಿಯೂ ಬರಲಿಲ್ಲ.

ಹಾಗಾದರೆ ನಾರಾಯಣ ಏನಾದ? ನಾರಾಯಣ ರೈಲಿನಲ್ಲಿ ತನ್ನ ಚಿಕ್ಕಮ್ಮನನ್ನು ಕರೆದುಕೊಂಡು—ಮಾವಿನಕೆರೆ ಸ್ಟೇಶನ್ನಿನಲ್ಲಿ ಇಳಿದ. ಅಲ್ಲಿಗೆ ಅವನು ನಿರೀಕ್ಷಿಸಿದಂತೆ ಉರಗನು ಎತ್ತಿನ ಗಾಡಿಯೊಂದಿಗೆ ಬಂದಿದ್ದ. ನಾರಾಯಣ ಚಿಕ್ಕಮ್ಮನೊಂದಿಗೆ ಗಾಡಿಯಲ್ಲಿ ಕುಳಿತ. ಮಾವಿನಕೆರೆಯಿಂದ ಮಲ್ಲಿಗೆಹಳ್ಳಿಗೆ ರಸ್ತೆಯಿಲ್ಲ. ಮಲ್ಲಿಗೆಹಳ್ಳಿ ಯಜಮಾನರ ಕಾಲದಲ್ಲಿಯೇ ರಸ್ತೆ ಆಗುವ ಸೂಚನೆಗಳಿದ್ದುವಂತೆ. ಈಚೆಗೆ ನೂರಾರು ಸಲ ಓವರ್‌ಸಿಯರ್‌ಗಳು ಬಂದು ಅಳತೆ ಮಾಡಿಕೊಂಡು ಹೋಗಿದ್ದಾರೆ. ಯಾವ ತಾಲ್ಲೂಕು ಡಿಸ್ಟ್ರಿಕ್ಟ್ ಕಾನಫರೆನ್ಸಿನಲ್ಲಿಯೂ ಇದೇ ಮಾತು. ಅಧಿಕಾರಿಗಳು ಮಾತನಾಡಿ ಮಾತನಾಡಿ ಸುಸ್ತಾಗುತ್ತಾರೆಯೇ ಹೊರತು ರಸ್ತೆ ಆಗಿಲ್ಲ. ಸುಮಾರು ಮೂರು ಮೈಲಿ ಬರುವ ವೇಳೆಗೆ ಚೆನ್ನಾಗಿ ಕಗ್ಗತ್ತಲೆಯಾಯಿತು. ಉರಗ ಗಾಡಿಗೆ ಕಟ್ಟಿದ್ದ ಲಾಂದ್ರವನ್ನೇನೋ ಹತ್ತಿಸಿದನು. ಆದರೆ ಸರಿಯಾದ ಗಾಡಿಯ ಜಾಡು ಅವನಿಗೆ ಗೊತ್ತಾಗಲಿಲ್ಲ. ಎತ್ತುಗಳು ಒಳ್ಳೆ ಬಲವಾಗಿದ್ದುವು. ಆದರೆ ದಾರಿ ತಿಳಿಯದುದರಿಂದ ಅವು ಯಾವ ಕಡೆಗೂ ಧೈರ್ಯದಿಂದ ನುಗ್ಗದೆ ಕೊರಕಲುಗಳಲ್ಲಿಯೂ ಹಳ್ಳಗಳಲ್ಲಿಯೂ ನಿಧಾನವಾಗಿ ಹೋಗುತ್ತಿದ್ದುವು. ಹೀಗೆ ಸುಮಾರು ಹತ್ತು ಗಂಟೆಯ ಹೊತ್ತಿಗೆ ಎತ್ತುಗಳು ತಿರುಗಿ ತಿರುಗಿ ಸುಸ್ತಾಗಿ ಒಂದು ಆಲದ ಮರದ ಕೆಳಗೆ ಬಂದು ನಿಂತವು. ರೈಲ್ವೆ ಪ್ರಯಾಣದ ಶ್ರಮದಿಂದಲೂ ಬೆಳಗಿನಿಂದಲೂ ಆಹಾರವಿಲ್ಲದುದರಿಂದ ನಾರಾಯಣನ ಚಿಕ್ಕಮ್ಮ ತೂಕಡಿಸುತ್ತಿದ್ದರು. ಅವರಿಗೆ ಕೂತಿದ್ದಂತೆಯೇ ನಿದ್ರೆ ಬರುತ್ತಿದ್ದಿತು. ನಾರಾಯಣನಿಗೂ ತೂಕಡಿಕೆ. ಆದರೆ ಮಧ್ಯೆ ಮಧ್ಯೆ ಕಣ್ಣೆದುರಿಗೆ ಮಂಗಳೆ ಬಂದಂತಾಗಿ ಅವನು ಬೆಚ್ಚಿಬೀಳುತ್ತಿದ್ದನು. ಎತ್ತುಗಳು ಸುಸ್ತಾಗಿ ನಿಂತ ಕೂಡಲೆ ನಾರಾಯಣನು "ನಿನಗೆ ದಾರಿ ಗೊತ್ತಿಲ್ಲವೇ" ಎಂದನು. ಉರ

ಗನು "ಇಲ್ಲ ಸ್ವಾಮಿ" ಎಂದನು. ನಾರಾಯಣನಿಗೆ ಕೋಪ ಬಂತು. ಮಾರನೆಯ ದಿವಸ ಅಳಿಯನಾಗುವವನು ಯಾರ ಮೇಲೆ ಬೇಕಾದರೂ ಕೋಪಮಾಡಿಕೊಳ್ಳಬಹುದು. ಎತ್ತುಗಳ ಮೇಲೆ ಬೇಕಾದರೂ ಕೋಪ ಮಾಡಿಕೊಳ್ಳಬಹುದು. "ಹಾಗಾದರೆ ನೀನು ಯಾಕೆ ಗಾಡಿ ಹೊಡೆದುಕೊಂಡು ಬಂದೆ" ಎಂದನು. ಉರಗನು "ಯಜಮಾನರು ಹೇಳಿದರು ಬಂದೆ" ಎಂದನು. "ಗಾಡಿ ದಾರಿ ನನಗೆ ಗೊತ್ತಿಲ್ಲ ಅಂತ ನೀನು ಯಜಮಾನರಿಗೆ ಹೇಳಲಿಲ್ಲವೆ?" ಉರಗನು ಇಲ್ಲ ಎಂದನು. ನಾರಾಯಣನು "ನೀನು ಹಿಂದೆ ಮಾವಿನಕೆರೆಗೆ ಗಾಡಿಯಲ್ಲಿ ಯಾವಾಗ ಲಾದರೂ ಬಂದಿದ್ದೆಯಾ?" ಎಂದ. ಉರಗ "ಬಂದಿದ್ದೆ" ಎಂದನು. ನಾರಾಯಣ "ದಾರಿ ಗೊತ್ತಿಲ್ಲದ ಮೇಲೆ ಊರನ್ನು ಹೇಗೆ ತಲಪಿದೆ" ಎಂದನು. ಉರಗನು "ಎತ್ತುಗಳೇ ಎಳೆದುಕೊಂಡು ಹೋದುವು" ಎಂದ. ನಾರಾಯಣ ಏನೂ ಮಾತನಾಡದೆ ಹಾಳಾಗಲಿ ಎಂದುಕೊಂಡು ಈಗಲೂ ಎತ್ತುಗಳು ಎಳೆದುಕೊಂಡು ಹೋಗುತ್ತವೆ. ನಿನ್ನ ಪಾಡಿಗೆ ನೀನು ಸುಮ್ಮನಿರು" ಎಂದ.

ಹುಡುಗನಾದ ಉರಗನಿಗೆ ನಿದ್ರೆ ಬಂದುಬಿಟ್ಟಿತು. ಅವನು ಮೂಕಿ ಮೇಲೆ ಕುಳಿತುಕೊಂಡೇ ನಿದ್ರೆಮಾಡಲು ಪ್ರಾರಂಭಿಸಿದ. ನಾರಾಯಣ ನಿಗೂ ಜೋಂಪು ಹತ್ತಿತು. ನಿಧಾನವಾಗಿ ಎತ್ತುಗಳು ತಮ್ಮ ಪಾಡಿಗೆ ತಾವು ಮುಂದುವರೆದವು. ನೋಡಿದರೆ ಅವು ನಿಂತುಕೊಂಡು ಯೋಚನೆ ಮಾಡಿ ಮಲ್ಲಿಗೆಹಳ್ಳಿಗೆ ದಾರಿಯಾವುದು ಎಂಬುದನ್ನು ಸರಿಯಾಗಿ ತಿಳಿದು ಕೊಂಡು ಅನಂತರ ಹೊರಟವೋ ಎಂಬಂತೆ ತೋರುತ್ತಿದ್ದಿತು. ಅವುಗಳ ಹೆಜ್ಜೆ ಹೆಚ್ಚು ದೃಢವಾಗಿದ್ದಿತು. ಹೀಗೆ ಸುಮಾರು ಅವು ಒಂದು ಗಂಟೆ ಹೋದಾಗ ನಾರಾಯಣನಿಗೆ ಜೋಂಪಿನಿಂದ ಸ್ವಲ್ಪ ಎಚ್ಚರವಾಯಿತು. ಅವನು "ಲೊ! ಉರಗ ಎತ್ತು ಸರಿಯಾದ ದಾರೀಲಿ ಹೋಗ್ತಾ ಇದೆ ಯೇನೋ" ಎಂದ. ಉರಗ ಕಣ್ಣನ್ನೇ ಬಿಡದೆ ನಾರಾಯಣ ಹೇಳಿದ ಮಾತನ್ನು ಸರಿಯಾಗಿ ಗ್ರಹಿಸದೆ ಹೂ ಎಂದ. ಚಿಕ್ಕಮ್ಮ ಯಾವುದನ್ನೂ ಗಮನಿಸದೆ ತೂಕಡಿಸುತ್ತಿದ್ದಳು.

ಆ ಬುದ್ಧಿಶಾಲಿಗಳಾದ ಎತ್ತುಗಳು ಸರಿಯಾದ ದಾರಿಯನ್ನು ಹಿಡಿದೇ ಬಂದಿದ್ದವು. ಅವು ನೆಟ್ಟಗೆ ಮಲ್ಲಿಗೆಹಳ್ಳಿಯ ಊರು ಬಾಗಿಲಿಗೆ ಬಂದವು.

ಅಲ್ಲಿಯವರೆಗೇ ಬಸ್ಸುಗಳೂ ಬರುತ್ತಿದ್ದುದ್ದು. ಅಲ್ಲಿಂದ ಆಚೆಗೆ ಎಡಗಡೆಗೆ ಒಂದು ಅಡ್ಡ ರಸ್ತೆ. ಆ ರಸ್ತೆಯಲ್ಲಿ ಹೋಗಿ ಮಲ್ಲಿಗೆಹಳ್ಳಿಯನ್ನು ಸೇರ ಬೇಕಾಗಿದ್ದಿತು. ಎತ್ತುಗಳು ಅಲ್ಲಿಯವರೆಗೆ ಸುಖವಾದ ಗಾಡಿ, ಬಸ್ ರಸ್ತೆಯಲ್ಲಿ ಬಂದು ಮುಂದೆ ಊರಿಗೆ ಹಳ್ಳಕೊಳ್ಳದ ಕೊರಕಲು ರಸ್ತೆಯಲ್ಲಿ ಹೋಗಬೇಕಲ್ಲ ಎಂದು ಸ್ವಲ್ಪ ಯೋಚಿಸುತ್ತಾ ನಿಂತಿದ್ದಿರಬಹುದು. ಅಲ್ಲಿ ನ್ಯಾಯವಾಗಿ ಇರಬೇಕಾಗಿದ್ದಂತೆ ಗ್ಯಾಸ್ ಲೈಟ್‌ನೊಂದಿಗೆ ಅನಂತುವಾಗಲಿ ಅಥವಾ ಅವನ ಕಡೆಯವರು ಯಾರಾದರೂ ಆಗಲಿ ಕೊನೆಗೆ ಗೋಪಾಲನಾಗಲಿ ಇರಬೇಕಾಗಿತ್ತು. ಗೋಪಾಲನಿಗೆ ಮಗನ ಮೇಲೂ ಬೀಗನ ಮೇಲೂ ಸಿಟ್ಟುಬಂದಿತ್ತು. ಮಗನ ಮೇಲೆ ಅವನೂ ಯಾಕೆ ಬಸ್ಸಿನಲ್ಲಿ ಸಕಾಲದಲ್ಲಿ ಬಂದು ವೈಭವದಿಂದ ವರಪೂಜೆ ಮಾಡಿಸಿಕೊಳ್ಳಬಾರದಾಗಿತ್ತು ಎಂದು. ಬೀಗಯ್ಯನ ಮೇಲೆ ಅವನು ಈ ವಿಚಾರವನ್ನೇ ಮನಸ್ಸಿಗೆ ಹಚ್ಚಿಕೊಳ್ಳದೆ ಸುಮ್ಮನೆ ತನ್ನ ಆಟಾಟೋಪದಲ್ಲಿಯೇ ತಾನು ಇದ್ದಾನೆಲ್ಲಾ ಎಂದು. ಅವನು "ನಾರಾಯಣನನ್ನು ಬೆಳಿಗ್ಗೆ ಕೊಲ್ಲುತ್ತೇನೆ ಅನಂತುವಿನ ಸಂಬಂಧ ಕಿತ್ತು ಒಗೆಯುತ್ತೇನೆ" ಎಂದು ಆರ್ಭಟಿಸುತ್ತಾ ಮನೆಯಲ್ಲಿ ಕೂತಿದ್ದ. ಊರುಬಾಗಿಲಿನ ಅಡ್ಡ ರಸ್ತೆಯಲ್ಲಿ ಯಾರೂ ಇರಲಿಲ್ಲ. ಎತ್ತುಗಳ ಪೈಕಿ ಬಲಗೋಲು ಅರಕಲಗೂಡಿನಲ್ಲಿ ಅನಂತು ಕೊಂಡುದು. ಮಲ್ಲಿಗೆಹಳ್ಳಿ ಬಾಗಿಲಿನಲ್ಲಿ ಒಂದು ಗಳಿಗೆ ಗಾಡಿ ನಿಂತಿದ್ದಾಗ ಸ್ವಾಭಾವಿಕವಾಗಿ ಬಲಗಡೆಯ ಎತ್ತು ತನ್ನ ಊರಿನ ಅಭಿಮಾನದಿಂದ ತನ್ನ ಊರಿನ ಕಡೆಗೆ ಅದನ್ನು ಜಗ್ಗಿತು. ಎಡಗಡೆಯ ಎತ್ತು ಸಡಿಲ ಬಿಟ್ಟಿತು. ಗಾಡಿ ಸುಖವಾಗಿ ರಸ್ತೆಯಲ್ಲಿ ಅರಕಲಗೂಡು ಕಡೆಗೆ ಹೊರಟಿತು. ಆಗ ಇನ್ನೂ ಹತ್ತುವರೆ ಹತ್ತುಮುಕ್ಕಾಲು ಗಂಟೆಯಾಗಿದ್ದಿತು. ಊರೊಳಗಿನ ದೇವಸ್ಥಾನದಲ್ಲಿ ಸೀತಾರಾಮುವಿನ ವರಪೂಜೆಯ ಬ್ಯಾಂಡು ಗದ್ದಲವಾಗಿ ಕೇಳಿಸುತ್ತಿದ್ದಿತು. ಆದರೆ ಅವು ಎತ್ತುಗಳಿಗೆ ಮಾತ್ರ ಕೇಳಿಸಿದ್ದಿರಬೇಕು. ಯಾಕೆಂದರೆ ಗಾಡಿಯಲ್ಲಿದ್ದವರು ಗೊರಕೆ ಹೊಡೆಯುತ್ತಿದ್ದರು.

ಬಸ್ಸು ತಿರುಗಾಡುವ ಮತ್ತು ಡೆಪುಟಿ ಕಮೀಶನರು ಕಾರಿನಲ್ಲಿ ತಿರುಗುವ ರಸ್ತೆಯಾದುದರಿಂದ ಅರಕಲಗೂಡು ಕಡೆ ಹೋಗುವ ರಸ್ತೆ ಸುಮಾರಾಗಿ ಚೆನ್ನಾಗಿದೆ. ಅಲ್ಲದೆ ಒಂದು ಎತ್ತಿಗೆ ಅದು ತನ್ನ ಊರಿನ ದಾರಿ

ಯಾಗಿದ್ದುದರಿಂದ ಎತ್ತುಗಳು ಸರ ಸರನೆ ಹೋಗತೊಡಗಿದುವು. ಆ ದಾರಿಯಲ್ಲಿ ಮೂರು ಮೈಲಿ ಹೋಗಿರಬಹುದು. ಆಗ ನಾರಾಯಣನಿಗೆ ಮತ್ತೆ ನಿದ್ರೆಯ ಜೊಂಪು ಸ್ವಲ್ಪ ತಿಳಿಯಾಯಿತು. ಅವನು "ಗಾಡಿ ಸರಿಯಾದ ದಾರಿಯಲ್ಲಿ ಹೋಗುತ್ತಿದೆಯೇ" ಎಂದು ಉರಗನನ್ನು ಕೇಳಿದನು. ಉರಗ ಕಣ್ಣು ಹೊಸಕಿಕೊಂಡು "ರಸ್ತೆಗೆ ಬಂದು ಬಿದ್ದಿದೆ. ಇನ್ನೇನು ಊರ ಬಾಗಲಿಗೆ ಹೋಗುತ್ತೆ" ಎಂದ. ಪಾಪ ಹುಡುಗನಾದ ಅವನಿಗೆ ಹಸಿವು ನಿದ್ರೆ. ಸ್ವಲ್ಪ ದೂರ ಮುಂದೆ ಹೋಗುವುದರೊಳಗೆ ರಸ್ತೆಯ ಮಗ್ಗುಲಲ್ಲಿ ಒಳ್ಳೆಯ ಕೊಂಬಿನ ಧ್ವನಿಯಾಯಿತು. ನಾಲ್ಕು ಗ್ಯಾಸ್ ಲೈಟುಗಳನ್ನು ಇಟ್ಟುಕೊಂಡು ಗೌಡಗಳೂ ಗೌಡತಿಯರೂ ನೆರೆದಿದ್ದರು. ಕೊಂಬಿನ ಸದ್ದನ್ನು ಕೇಳಿ ದೀಪದ ಹೊಳಪನ್ನೂ ಜನಸಂದಣಿಯನ್ನೂ ಕಂಡು ಎತ್ತುಗಳು ಮುಂದೆ ಹೋಗದೆ ನಿಂತವು. ಉರಗನಿಗೆ ಪೂರ್ಣವಾಗಿ ಎಚ್ಚರವಾಯಿತು. ನಾರಾಯಣನು ಗಾಡಿಯಲ್ಲಿಯೇ ಕುಳಿತುಕೊಂಡು ಇನ್ನೇನು ಊರಿಗೆ ಬಂದೋ ಎಂದುಕೊಂಡು ಹೊರಗೆ ನೋಡಿದನು. ಅಷ್ಟು ಹೊತ್ತಿಗೆ ಇನ್ನೂ ೨-೩ ಸಲ ಕೊಂಬಿನ ಆರ್ಭಟ ಹೆಚ್ಚಾಯಿತು. ನಾರಾಯಣ ತನ್ನ ಹಳ್ಳಿಯಲ್ಲಿ ಹರಿಜನರು ಬಾರಿಸುತ್ತಿದ್ದುದನ್ನು ಕೇಳಿದ್ದ "ಝುಗುಣಕ ಝುಗ್ಗು ಝುಗ್ಗು" ವಾದ್ಯ ಪ್ರಾರಂಭವಾಯಿತು. ನಾರಾಯಣನಿಗೆ ಇದೇನು ಕನಸೋ ಎಂಬಂತೆ ತೋರಿತು. ಇದೇನು ಸಮಾಚಾರ ನೋಡೋಣವೆಂದು ಅವನು ಗಾಡಿಯ ಹಿಂದಲಿಂದ ಕೆಳಕ್ಕೆ ಇಳಿದ ಕೂಡಲೆ ಒಬ್ಬ ಗೌಡ ಕೈಯಲ್ಲಿ ಹಾರವನ್ನು ಹಿಡಿದುಕೊಂಡು ಅವನಿಗೆ ಹಾಕಲು ಮುಂದುವರಿದನು. ಆದರೆ ನಾರಾಯಣನ ಮುಖವನ್ನು ನೋಡಿ ಹಾಗೇ ನಿಂತನು. ದೀಪವನ್ನು ನೋಡಿ ಎತ್ತುಗಳು ಗಳು ಕಿತ್ತುಕೊಳ್ಳಲು ಪ್ರಯತ್ನಿಸುತ್ತಿದ್ದುದರಿಂದ ಉರಗನು ಗಾಡಿ ಕೊರಳು ಇಳುಕಿದನು. ನಾರಾಯಣನಿಗೆ ಸಮಾಚಾರ ಗೊತ್ತಾಯಿತು.

"ಅರಕಲಗೂಡು ಗೌಡುಗಳ ಮಗಳಿಗೆ ಸಕಲೇಶಪುರದ ಗೌಡನನ್ನು ಕೊಟ್ಟು ಮದುವೆ. ಮದುವೆ ವರ ಸಕಲೇಶಪುರದಿಂದ ಸ್ವಂತ ಗಾಡಿಯಲ್ಲಿ ಬರುವ ಹೊತ್ತು. ಅವನಿಗಾಗಿ ಅತ್ತೆ ಮಾವನ ಮನೆಯವರೆಲ್ಲಾ ಕಾದು ನಿಂತಿದ್ದಾರೆ ಗಾಡಿ ಬಂದುದುರಿಂದ ಅಳಿಯನೇ ಬಂದ ಎಂದು ತಿಳಿದುಕೊಂಡರು. ಊರ ಮುಂದಲ ದೇವಸ್ಥಾನದಲ್ಲಿ ವರನನ್ನು ಇಳಿಸಿ

ಅವನನ್ನು ಊರೊಳಕ್ಕೆ ಕರೆದುಕೊಂಡು ಹೋಗಬೇಕು" ಕೇಳಿ ನಾರಾಯಣನಿಗೆ ನಗು ಬಂತು. ನೆರೆದಿದ್ದವರೆಲ್ಲಾ ನಕ್ಕರು. ಅಷ್ಟುಹೊತ್ತಿಗೆ ಎತ್ತಿನ ಕತ್ತಿನ ಘಂಟೆ ಕಡಾಣೆ ಝುಣ ಝುಣ ಶಬ್ದದೊಂದಿಗೆ ದೂರದಲ್ಲಿ ಮತ್ತೊಂದು ಗಾಡಿ ಬರುತ್ತಿರುವುದು ಕೇಳಿಸಿತು. ಗೌಡರು ಅವರೆ ಅವರೇ. ಕೊಂಬು ಬಾರಿಸಿ ಎಂದರು. ಭಯಂಕರವಾದ ವಾದ್ಯ ರಭಸ ಅಂತರಿಕ್ಷವನ್ನು ಮುಟ್ಟಿತು. ಗಾಡಿ ಒಳ್ಳೆ ಸಾರೋಟಿನಂತೆ ನಾಗಾಲೋಟದಲ್ಲಿ ಬಂದು ನಿಂತಿತು. ನಾರಾಯಣನು ಆ ಗಾಡಿಯುನ್ನು ನೋಡಿ "ಗಾಡಿ ಎಂದರೆ ಹೀಗಿರಬೇಕು. ಅನಂತುವಿನ ಗಾಡಿ ಇದ್ಯಾವ ಒಡ್ಡರ ಬಂಡಿ" ಎಂದುಕೊಂಡನು. ಪರೀಕ್ಷೆಗೆ ಕುಳಿತಿರುವ ಹುಡುಗರು ಇತರ ವಿದ್ಯಾರ್ಥಿಗಳನ್ನು ನೋಡುವಂತೆ ನಾರಾಯಣ ಈ ಅಳಿಯ ಹೇಗಿದ್ದಾನೆ ನೋಡೋಣ ಎಂದು ನೋಡಲು ನೆಲದ ಮೇಲೆಯೇ ನಿಂತಿದ್ದನು. ಬಂದ ಗಾಡಿಯಿಂದ ವರ ಇಳಿದ. ನೋಡಿದರೆ ಬೆಂಗಳೂರಿನಲ್ಲಿ ಇವನ ತರಗತಿಯಲ್ಲಿಯೇ ಓದುವ ಇವನ ಸ್ನೇಹಿತನೇ ಇವನು. ಇಬ್ಬರಿಗೂ ಮಾತುಗಳಾದ ಮೇಲೆ ನಡೆದ ಸಂಗತಿ ಕೇಳಿ ವರನಿಗೆ ಬಹಳ ನಗು ಬಂತು. ನಾಳೆ ಮದುವೆ ಇದ್ದು ಹೋಗು ಎಂದು ಅವನು ಬಲಾತ್ಕರಿಸಿದನು. ಸ್ನೇಹಿತ ತಪ್ಪು ತಿಳಿದುಕೊಳ್ಳದೆ ಇರಲಿ ಎಂದು, ನಾರಾಯಣ ನಡೆದ ಸಂಗತಿ ನಡೆದಂತೆ ಹೇಳಿದ. "ನನಗೂ ನಾಳೆ ಮದುವೆ. ಇಷ್ಟು ಹೊತ್ತಿಗಾಗಲೇ, ತಪ್ಪಿಸಿಕೊಂಡು ಹೋದ ಪೋಲಿ ದನವನ್ನು ಹುಡುಕಲು ನಾನಾ ದಿಕ್ಕುಗಳಿಗೆ ಜನ ಬರುವಂತೆ ನನ್ನ ಬೇಟೆಗೆ ಜನ ಹೊರಟಿರುತ್ತಾರೆ. ನಮ್ಮ ತಂದೆ ಒಂದೇ ಏಟಿಗೆ ಕೊಂದೇಬಿಡುತ್ತೇನೆ ಎಂದು ಆರ್ಭಟಿಸುತ್ತಿದ್ದಾರೆ" ಎಂದನು. ಅರ್ಧನಿಮಿಷ ಬಿಟ್ಟು "ನಿನ್ನ ಹೆಂಡತಿ ಒಳ್ಳೆ ಸುಂದರಿಯೋ" ಎಂದನು. ಮಿತ್ರನು "ಇದ್ದಾಳೆ ಒಂದು ತರಹ" ಎಂದ. ನಾರಾಯಣ "ಕನ್‌ಗ್ರಾಟ್ಸ್" ಎಂದು ಹೇಳಿ ಗಾಡಿ ಹತ್ತಿದ. ಹತ್ತುವುದಕ್ಕೆ ಮುಂಚೆ ಅವನ ಮಿತ್ರನ ಮಾವ ಇವರಿಬ್ಬರೂ ಇಷ್ಟು ಸ್ನೇಹಿತರು ಎಂಬುದನ್ನು ನೋಡಿ ಹೂವಿನ ಹಾರವನ್ನು ನಾರಾಯಣನ ಕತ್ತಿಗೆ ಹಾಕಿ ತೆಂಗಿನ ಕಾಯಿ ವೀಳ್ಯ ಕೊಟ್ಟು ಕಳುಹಿಸಿದನು. ನಾರಾಯಣ ಗಾಡಿಯಲ್ಲಿ ಕುಳಿತು ಕತ್ತಿನ ಹಾರವನ್ನು ತೆಗೆದು ಕೈಯ್ಯಲ್ಲಿ ಹಿಡಿದುಕೊಂಡು ಒಂದೇ ದಿನ ನನಗೆ ಎರಡು ವರಪೂಜೆಯಾಗುವುದರಲ್ಲಿತ್ತು ಎಂದುಕೊಂಡನು.

ಊರಗ ಗಾಡಿಯನ್ನು ಹಿಂದಿರುಗಿಸಿದ. ಎರಡು ಎರಡೂವರೆ ಗಂಟೆಗೆ ಗಾಡಿ ನಾರಾಯಣನ ಮನೆ ಬಾಗಿಲಿನಲ್ಲಿ ಬಂದು ನಿಂತಿತು. ಅವನೂ ಅವನ ಚಿಕ್ಕಮ್ಮನೂ ಗಾಡಿಯಿಂದ ಇಳಿದರು. ಊರೆಲ್ಲಾ ನಿದ್ರೆಯ ಮಡಲಿನಲ್ಲಿ ನಿಶ್ಶಬ್ದವಾಗಿದ್ದಿತು.

ನಾರಾಯಣ ಸಕಾಲದಲ್ಲಿ ಬರದುದರಿಂದ ಊರಿನಲ್ಲಿ ದೊಡ್ಡ ಗೊಂದಲವೇ ಎದ್ದಿತು. ಮದುವೆ ಹೀಗೆ ಗೊತ್ತಾಗಿ ತಪ್ಪಿಹೋಗುವಂತೆ ಇದ್ದುದು ಮಲ್ಲಿಗೆಹಳ್ಳಿಯಲ್ಲಿ ಅದೇ ಮೊದಲನೆಯ ಸಲವಲ್ಲ. ಆದರೆ ಹಿಂದೆ ಮದುವೆ ನಿಂತುಹೋದುದಕ್ಕೆ ಒಂದು ಕಾರಣವಿದ್ದಿತು. ಅದೂ ಅನಂತುವಿನ ಸಂಸಾರದಲ್ಲಿಯೇ. ಅದು ಅನಂತುವಿನ ಕೊನೆಯ ತಂಗಿಯ ಮದುವೆಯಲ್ಲಿ. ಆ ಹುಡುಗಿ ತಿಲೋತ್ತಮೆಯಂತಿದ್ದಳು. ಮೈಸೂರು ಓವರ್ ಸಿಯರ ಮಗನಿಗೆ ಅವಳನ್ನು ಕೊಟ್ಟು ಮದುವೆ ಮಾಡುವುದು ಗೊತ್ತಾಗಿದ್ದಿತು. ಆಗ ಮಲ್ಲಿಗೆಹಳ್ಳಿಯಲ್ಲಿ ಊರಿನವರು ಯಯಾತಿಯನ್ನು ಬಹಿಷ್ಕರಿಸಿದ್ದರು. (ಯಯಾತಿ ಎಂಬುದು ಅವನ ನಿಜವಾದ ಹೆಸರಲ್ಲ. ಆದರೆ ಊರಿನವರು ಆ ಹೆಸರನ್ನು ಇಟ್ಟಿದ್ದರು) ಯಯಾತಿಯನ್ನು ಬಹಿಷ್ಕರಿಸುವುದಕ್ಕೆ ಸರಿಯಾದ ಕಾರಣ ಯಾರಿಗೂ ಗೊತ್ತಾಗಿರಲಿಲ್ಲ. ಆದರೆ ಮುಖ್ಯವಾಗಿ ಹೊರಗೆ ತಿಳಿದಿದ್ದ ಕಾರಣ ಯಯಾತಿ ತಂದೆ ತಾಯಿಗಳ ಶ್ರಾದ್ಧವನ್ನು ಬಿಟ್ಟಿದ್ದಾನೆ ಎಂಬುದು. ಆದರೆ ಆಗಿನ ಮಲ್ಲಿಗೆಹಳ್ಳಿಯ ಜನ ಆ ವಿಚಾರ ಅಷ್ಟು ಹಚ್ಚಿಕೊಳ್ಳುವವರಾಗಿರಲಿಲ್ಲ. ತಂದೆ ತಾಯಿಗಳ ಶ್ರಾದ್ಧ ಅವನು ಬಿಟ್ಟರೆ ಅದು ಅವನಿಗೂ ಅವನ ತಂದೆ ತಾಯಿಗಳಿಗೂ ಸಂಬಂಧಪಟ್ಟ ವಿಚಾರ. ಅದನ್ನು ಕಟ್ಟಿಕೊಂಡು ನಮಗೇನು ಎಂದರು ಅವರು. "ಈ ಶ್ರಾದ್ಧ ತಂದೆ ತಾಯಿಗಳಿಗೆ ತಲಪುತ್ತದೆಯೋ ಎಂಬ ಪ್ರಶ್ನೆ ಯಾವಾಗಲೂ ಇದ್ದೇ ಇತ್ತು. ಈ ಪ್ರಸಾದವನ್ನು ತಂದೆ ತಾಯಿಗಳಿಗೂ ಪಿತೃಗಳಿಗೂ ಸಾಗಿಸುವ ವಾಹಕವೋ ಕಾಗೆ. ಲೋಕದಲ್ಲಿ ಪಿತೃಗಳಿಗೆ ಆಹಾರ ಕಾಗೆಗಳ ಮೂಲಕವೇ ಹೋಗಬೇಕೆ? ವೇದಗಳ ವಿಚಾರವನ್ನೇ ತಿಳಿಯದ, ಶ್ರಾದ್ಧ ಕಾಲದಲ್ಲಿ ಮಂತ್ರಗಳನ್ನು ಉಚ್ಚರಿಸುವುದಕ್ಕೇ ಬರದ, ಕೇಳಿದ ಪ್ರಶ್ನೆಗೆ ಜವಾಬ್ ಕೊಡುವುದೂ ತಿಳಿಯದ ಬ್ರಾಹ್ಮಣ, ಮಿತಿ ಮೀರಿ ತಿಂದು ತೇಗು ಬಿಟ್ಟುಬಿಟ್ಟರೆ ಒಬ್ಬ ಪಿತೃವಿಗೆ ಸದ್ಗತಿಯುಂಟಾಗಿ ಹೋಯಿತೆ? ಹೀಗೆ ಬಂದು ತಿನ್ನುವುದು ತಾನೇ ಇದ್ಯಾವ ಸಾತ್ವಿಕತೆ"

ಎಂದು ಆಗಲೇ ಜನ ಪ್ರಶ್ನೆ ಹಾಕಲು ಪ್ರಾರಂಭಿಸಿದರು. ಒಬ್ಬರು "ಈ ಶ್ರಾದ್ಧಕ್ಕೆ ಒಂದು ಲಿಮಿಟೇಶನ್ ಬೇಡವೆ? ಸಾಯುವವರೆಗೆ ಒಂದೇ ಸಮನೆ ಮಾಡುತ್ತಲೇ ಇರಬೇಕೆ? ಸರ್ಕಾರಿ ಸರ್ವಿಸಿನಲ್ಲಿ ೩೦ ವರುಷಕ್ಕೆ ಬಿಡುಗಡೆ. ಈ ಶ್ರಾದ್ಧದ ಸರ್ವಿಸ್‌ಗೆ ಬಿಡುಗಡೆಯೇ ಇಲ್ಲವಲ್ಲ. ನಲವತ್ತೂ ವರುಷವಾದ ಮೇಲೆ ಬಿಡುಗಡೆ ಕೊಡಿ. ಒಬ್ಬ ಮನುಷ್ಯ ೪೦ ವರುಷ ಶ್ರಾದ್ಧ ಮಾಡಿದರೆ ಮುಂದೆ ಮಾಡಬೇಕಾದುದಿಲ್ಲ. ಅಂತ ಮಾಡಿ. ಈಗ ನೋಡಿ ನನ್ನ ವಯಸ್ಸು ೭೨; ನನ್ನ ತಂದೆ ಸತ್ತುದು ನನ್ನ ೧೮ನೇ ವಯಸ್ಸಿನಲ್ಲಿ. ತಾಯಿ ನಾನು ಹುಟ್ಟಿದಾಗಲೇ ಸ್ವರ್ಗಸ್ಥರಾದರಂತೆ. ನಾನು ಶ್ರಾದ್ಧ ಮಾಡುವುದಕ್ಕೆ ಪ್ರಾರಂಭಿಸಿ ೫೪ ವರುಷವಾಯಿತು. ನನ್ನ ಹೆಸರಿನಲ್ಲಿ ನನ್ನ ತಾಯಿ ಶ್ರಾದ್ಧ ಎಪ್ಪತ್ತು ವರುಷದಿಂದ ನಡೆಯುತ್ತಿದೆ. ನನಗೆ ಕೂತರೆ ಏಳುವುದಕ್ಕೆ ಆಗುವುದಿಲ್ಲ. ಎದ್ದರೆ ಕೂರುವುದಕ್ಕೆ ಆಗುವುದಿಲ್ಲ. ಇನ್ನಾದರೂ ಬಿಡುಗಡೆ ಕೊಡಿ" ಎನ್ನುತ್ತಿದ್ದರು. ಒಂದುಸಲ ಅವರಿಗೆ ಶ್ರಾದ್ಧದ ದಿನ ಏಳುವುದಕ್ಕೇ ಆಗದಷ್ಟು ಸೊಂಟ ಹಿಡಿದುಕೊಂಡಿತು. ಆವತ್ತು ಬ್ರಾಹ್ಮಣರೂ ಸಕಾಲದಲ್ಲಿ ಬರಲಿಲ್ಲ. ಒಬ್ಬನು ತೋಟಕ್ಕೆ ಹೋಗಿ ಕೂತವನು ಎರಡುಗಂಟೆಗೆ ಬಂದನು. ಬ್ರಾಹ್ಮಣರು ಆ ದಿವಸ ಸಾಧ್ಯವಾದಷ್ಟು ಹೆಚ್ಚು ಕಿರುಕುಳ ಕೊಡುತ್ತಾರೆ. ಆ ದಿವಸ ಸುಸ್ತಾದ ಎಪ್ಪತ್ತೆರಡು ವರುಷದ ಯಜಮಾನರು ನನ್ನ ಮಗ ನನ್ನ ಅನಂತರ ನನಗೆ ಶ್ರಾದ್ಧವನ್ನು ಮಾಡಕೂಡದೆಂದು ಬರೆದು ಇಟ್ಟು ಸಾಯುತ್ತೇನೆ ಎಂದರು. ಅವರ ಮಿತ್ರರು "ನೀವು ಬರೆದು ಇಡಬಹುದು. ಆದರೆ ನಿಮ್ಮ ನಂತರ ಸಮಾಜವನ್ನು ಎದುರಿಸಲು ಅವನಿಗೆ ಶಕ್ತಿ ಎಲ್ಲಿದೆ. ನೀವೇ ಈಗ ಬಿಟ್ಟುಬಿಡಿ. ಅನಂತರ ಅವನಿಗೆ ಸುಲಭವಾಗುವುದು" ಎಂದರು. ಆದರೆ ಯಜಮಾನರು ನನ್ನ ಕಾಲ ಮುಗಿದೇ ಹೋಯಿತಲ್ಲ. ಬಿಟ್ಟಿದ್ದರೆ ಆಗಾಗಲೇ ಬಿಡಬೇಕಾಗಿತ್ತು. "ನಮ್ಮೆಲ್ಲರ ಪರವಾಗಿ ಯಯಾತಿ ಇದ್ದಾನೆಲ್ಲ" ಎಂದರು. ಶ್ರಾದ್ಧದ ಸಂಬಂಧದಲ್ಲಿ ಅಂತಹ ಹಿರಿಯರ ಮನೋಭಾವವೇ ಹೀಗೆ ಇದ್ದುದರಿಂದ ಯಯಾತಿಯನ್ನು ಅದಕ್ಕಾಗಿ ಬಹಿಷ್ಕರಿಸಿರಲಿಲ್ಲ.

ಆದರೆ ಯಯಾತಿಯನ್ನು ಬಿಟ್ಟಿದ್ದುದು ನಿಜ. ಯಾತಕ್ಕಾಗಿ ಎಂಬುದು ಯಾರಿಗೂ ತಿಳಿಯದು, ಯಯಾತಿಯ ಜೀವನದಲ್ಲಿ ಹಿಂದೆ

ಒಂದು ಸಂಗತಿ ನಡೆದಿತ್ತು. ಅವರಿಗೆ 60 ವಯಸ್ಸಾಗಿದ್ದಾಗ ಅವರು ಹೆಂಡತಿಯನ್ನು ಬಿಟ್ಟು ದೂರದ ಸಂಬಂಧವೇ ಆದ ಒಬ್ಬ ವಿಧವೆಯ ಪೋಷಣೆಗೆ ಒಳಗಾದರು. ಯಯಾತಿಯ ಮಿತ್ರರು ಅನೇಕರಿಗೆ ಇದರಲ್ಲಿ ಏನೂ ಆಕ್ಷೇಪಣೆ ತೋರಲಿಲ್ಲ. ಅವರ ಹೆಂಡತಿಯವರ ಆರೋಗ್ಯ ಚೆನ್ನಾಗಿರಲಿಲ್ಲ. ಅವರಿಗೆ ಇವರ ಶುಶ್ರೂಶೆ ಮಾಡಲು ಸಾಧ್ಯವಾಗಲಿಲ್ಲ. ಆದುದರಿಂದ ಯಯಾತಿ ಅವಳ ಸುಖಕ್ಕಾಗಿಯೇ ಆ ಇಳಿವಯಸ್ಸಿನಲ್ಲಿ ಹೀಗೆ ಪರರನ್ನು ಆಶ್ರಯಿಸಿದನು. ಆದರೆ ಕೆಲವು ಸ್ತ್ರೀಯರಿಗೆ ಗಂಡನ ಮೇಲಿನ ಸಂಶಯ ತಾವು ಸತ್ತರೂ ಹೋಗುವುದಿಲ್ಲ. ಗಂಡ ಸತ್ತರೂ ಹೋಗುವುದಿಲ್ಲ. ಅಂಥಹವರು, ಇರುವವರೆಗೆ ಗಂಡನನ್ನು ಹದ್ದು ನಾಯಿಗಳಂತೆ ಕಿತ್ತು ತಿನ್ನುತ್ತಾರೆ. ಯಯಾತಿಯ ಹೆಂಡತಿ ಗಂಡನ ಮೇಲಿನ ಸಂಶಯದಿಂದ ಹೀಗೆ ಅವನ ಮೇಲೆ ಅಪಪ್ರಚಾರವನ್ನೇ ಮಾಡಿದಳೋ ಏನು ಕಾರಣವೋ ಯಯಾತಿಗೆ ಮನಸ್ಸಿಗೆ ಬಹಳ ಬೇಜಾರಾಯಿತು. ಅವನು ಹೆಂಡತಿಯನ್ನು ಬಿಟ್ಟು ಬೇರೆ ಇರತೊಡಗಿದನು. ಅಂತೂ ಇದೆಲ್ಲಾ ಸೇರಿ ಒಟ್ಟಿನಲ್ಲಿ ಯಯಾತಿಯನ್ನು ಯಾವ ಕಾರಣವೂ ಇಲ್ಲದೆ ಸಮಾಜದಿಂದ ಬಿಟ್ಟಿದ್ದರು.

ಅನಂತುವಿನ ಕಿರಿಯ ತಂಗಿಯ ಮದುವೆಯ ಮೊದಲ ದಿನ ವರ ಪೂಜೆ ಆದನಂತರ ವರನ ತಂದೆಯವರು ತಾವು ಬಿಡದಿ ಮಾಡಿದ್ದ ಅಡಿಗೆ ಮನೆಯಲ್ಲಿ ಯಯಾತಿಯೊಡನೆ ಕುಳಿತುಕೊಂಡು ಮಾತನಾಡುತ್ತಿದ್ದರು. ಆ ಸಂಗತಿ ಮಲ್ಲಿಗೆಹಳ್ಳಿಯವರಿಗೆ ತಿಳಿದು ಅವರು ಬಹು ಕೋಪದಿಂದ ಅನಂತುವಿನ ಅಜ್ಜ ರಂಗಣ್ಣನವರಲ್ಲಿ ಬಂದು ಹೇಳಿದರು. ಮಲ್ಲಿಗೆಹಳ್ಳಿಯ ಅನೇಕರಿಗೆ ಯಯಾತಿಯನ್ನು ಯಾಕೆ ಬಹಿಷ್ಕರಿಸಿದ್ದರು ಎಂಬ ವಿಚಾರವೇ ಗೊತ್ತಿರಲಿಲ್ಲ. ಆದರೂ ಅವರೆಲ್ಲ ಬಂದು ರಂಗಣ್ಣನವರೊಂದಿಗೆ ಒಂದೇ ಧ್ವನಿಯಿಂದ ಕೂಗಿದರು. ರಂಗಣ್ಣನವರು ವರನ ತಂದೆಯನ್ನು ಕರೆಸಿ ಬಹಿಷ್ಕರಿಸಿದವನ ಸಹವಾಸ ಈ ಹಳ್ಳಿಯಲ್ಲಿ ನೀವು ಮಾಡಬೇಡಿ. ಮೈಸೂರಿನಲ್ಲಿ ನಿಮ್ಮ ಇಷ್ಟ ಬಂದಂತೆ ಮಾಡಿ" ಎಂದರು. ಬೀಗರು "ನಿಜವಾಗಿಯೂ ಯಯಾತಿಯ ಮೇಲೆ ಇರುವ ನಿಮ್ಮ ಆಕ್ಷೇಪಣೆ ಏನು" ಎಂದರು. ರಂಗಣ್ಣನವರು ಅವರು ಶ್ರಾದ್ಧ ಬಿಟ್ಟಿದ್ದಾರೆ" ಎಂದರು. ಬೀಗರು "ನನ್ನ ತಮ್ಮನೂ ಬಿಟ್ಟಿದ್ದಾನೆಲ್ಲಾ" ಎಂದರು. ರಂಗಣ್ಣನವರು

ಅವರಮೇಲೆ ಇನ್ನೂ ಏನೇನೋ ದೂರು ಇದೆ ಎಂದರು. ಬೀಗರು ಆದರೆ ಸರೋಜಳನ್ನು ಮದುವೆಯಾಗುವವನು ಯಯಾತಿಯಲ್ಲವಲ್ಲ ನನ್ನ ಮಗ. ಯಯಾತಿ ಹೇಗಿದ್ದರೆ ತಾನೇ ನಿಮಗೇನು ಎಂದರು. ರಂಗಣ್ಣನವರು ಅದೇ ನನ್ನ ಅಭಿಪ್ರಾಯವೂ. ಆದರೆ ಈಗ ಯಯಾತಿ ನಿಮ್ಮ ಸಹವಾಸ ಮಾಡಿದರೆ ಊರಿನವರು ನನ್ನನ್ನು ಬಿಡುತ್ತಾರೆ ಎಂದರು. ಬೀಗರು ಊರಿನವರು ಬಹಿಷ್ಕರಿಸಿದರೂ ನಾನು ನಿಮ್ಮ ಸರೋಜಳನ್ನು ನಮ್ಮ ಹುಡುಗನಿಗೆ ತಂದುಕೊಳ್ಳುತ್ತೇನೆ. ಹೆಂಡತಿ ಹೆಸರು ಹೇಳಿದರೇ ಅವನ ಮೈ ಉಬ್ಬುತ್ತೆ. ಯಾರು ನಿಮ್ಮನ್ನು ಬಹಿಷ್ಕರಿಸಿದರೂ ಅವನೇನು ನಿಮ್ಮ ಹುಡುಗಿಯನ್ನು ಬಿಡೋದಿಲ್ಲ ಎಂದರು. ಆದರೆ ರಂಗಣ್ಣನವರಿಗೆ ಆ ಇಳಿ ವಯಸ್ಸಿನಲ್ಲಿ ಊರಿನವರೊಂದಿಗೆಲ್ಲಾ ನಿಷ್ಠುರಕಟ್ಟಿಕೊಳ್ಳುವುದು ಬೇಕಾಗಿರಲಿಲ್ಲ. ಮಗ ಪುಟ್ಟೇರಪ್ಪನ ಅವಾಂತರದಿಂದ ಆಗಲೇ ಊರಿನಲ್ಲಿ ಅರ್ಧ ಜನ ಅವರ ಶತ್ರುಗಳಾಗಿದ್ದರು. ಅವರು ಇಲ್ಲಿರುವಾಗ ಈ ಸಂಪರ್ಕ ನೀವು ಬಿಡದಿದ್ದರೆ ಈ ಮದುವೆ ನಿಲ್ಲಿಸಬೇಕಾಗುತ್ತದೆ ಎಂದರು. ಬೀಗರಿಗೂ ಸಿಟ್ಟು ಬಂತು, ಅವರು ಆದ ಹಾಗೆ ಆಗಲಿ ಎಂದರು. ಮದುವೆ ನಿಂತುಹೋಯಿತು. ಬೆಳಗಾಗುವ ಹೊತ್ತಿಗೆ ಬೀಗರು ಹೊರಟುಹೋದರು. ಆದರೆ ರಂಗಣ್ಣನವರು ಸ್ವಭಾವದಿಂದ ಧೈರ್ಯಶಾಲಿಯಾದುದರಿಂದ ಇದನ್ನು ಮನಸ್ಸಿಗೆ ಹೆಚ್ಚಾಗಿ ಹಚ್ಚಿಕೊಳ್ಳಲಿಲ್ಲ. ಮದುವೆ ಆಗಿದ್ದರೆ ಹೇಗೋ ಹಾಗೆ ನಾಲ್ಕು ದಿನಗಳೂ ಮದುವೆಗಾಗಿ ಸಿದ್ಧಮಾಡಿದ್ದ ಪದಾರ್ಥಗಳನ್ನೆಲ್ಲಾ ವೆಚ್ಚಮಾಡಿ ಊರಿಗೆಲ್ಲಾ ಸಮಾರಾಧನೆ ಮಾಡಿಬಿಟ್ಟರು. ಮದುವೆ ಗಂಡು ಮಾತ್ರ "ಇನ್ನು ಇಂತಹ ಹುಡುಗಿ ಎಲ್ಲಿ ಸಿಕ್ಕುತ್ತೆ. ಎಲ್ಲಾ ವಿಧದಲ್ಲಿಯೂ ಪೂರ್ಣವಾಗಿ ನಾನು ಒಪ್ಪಿದ್ದೆ. ಇನ್ನು ಸಾಯುವವರೆಗೆ ಎಲ್ಲ ನನಗೆ ಮದುವೆ" ಎಂದೂ ತಲೆ ಚಚ್ಚಿಕೊಂಡು ಊರಿಗೆ ಹೋದನೆಂದು ಜನ ಹೇಳಿದರು.

ಮನುಷ್ಯನ ಸ್ವಭಾವ ವಿಚಿತ್ರ. ಯಾವುದು ನೀತಿ ಯಾವುದು ಅನೀತಿ ಎಂಬುದನ್ನು ತಿಳಿಯುವುದು ಕಷ್ಟ. ಯಾರು ಒಳ್ಳೆಯವನು ಯಾರು ಕೆಟ್ಟವನು ಎಂಬುದನ್ನು ತಿಳಿಯುವುದು ಹೇಗೆ? ಅದರ ಒರೆಗಲ್ಲು ಯಾವುದು? ಹೀಗೆ ಸಾಯುವವರೆಗೆ ತನ್ನನ್ನು ಬಹಿಷ್ಕರಿಸಿದ್ದ ಜನರಿಗೆ, ಯಯಾತಿ ತನ್ನ ಮರಣಕಾಲದಲ್ಲಿ ತನ್ನ ಆಸ್ತಿಯನ್ನೆಲ್ಲಾ ಬಿಟ್ಟುಹೋದ.

ದೇವಸ್ಥಾನ ಆಸ್ಪತ್ರೆ ಯಾವ ಯಾವ ಸಾರ್ವಜನಿಕ ಕೆಲಸಗಳುಂಟೋ ಎಲ್ಲವುಗಳಿಗೂ ತನ್ನ ಆಸ್ತಿಯನ್ನು ಪೂರ್ತಾ ಬಿಟ್ಟುಹೋದ. ಈ ನಾಸ್ತಿಕನ ದಾನ ನೋಡಿ ಆಸ್ತಿಕರಿಗೆ ವಿಸ್ಮಯವಾಯಿತು. ಅವನನ್ನು ಈಗ ಜನ ನಿತ್ಯಾ ನೆನೆಯುತ್ತಾರೆ. ದೇವರು ಅವನನ್ನು ಬಹು ಪ್ರೀತಿಯಿಂದ ಸ್ವಾಗತಿಸಿರುವುದರಲ್ಲಿ ಸಂದೇಹವಿಲ್ಲ.

ನಾರಾಯಣ ಬರದ ಸಾಯಂಕಾಲ ಜನರಿಗೆ ಇವುಗಳೆಲ್ಲಾ ಜ್ಞಾಪಕ ಬಂದುವು. ಎಲ್ಲಿ ನೋಡಿದರೂ ಇದನ್ನು ಕುರಿತೇ ಮಾತಾಗಿದ್ದಿತು. ಹತ್ತು ಗಂಟೆಯ ಸಮಯದಲ್ಲಿ ಅನಂತು "ಗಾಡಿಯೂ ಬರಲಿಲ್ಲವಲ್ಲ ಏನು ಸಮಾಚಾರ ನೋಡಿಕೊಂಡು ಬನ್ನಿ" ಎಂದು ಇಬ್ಬರನ್ನು ಮಾವಿನ ಕೆರೆಗೆ ಕಳುಹಿಸಿದನು. ಗಾಡಿ ರಾತ್ರಿ ಸುಮಾರು ಎರಡು ಗಂಟೆಗೆ ಗೋಪಾಲನ ಮನೆಯ ಬಾಗಿಲಿಗೆ ಬಂದು ನಿಂತಾಗ ಉರಗ ಬಹು ಕಷ್ಟದಿಂದ ಕಣ್ಣೊರಸಿಕೊಂಡು ಕೊಳ್ಳನ್ನು ಇಳಕಿ ಗಾಡಿಯಿಂದ ಒಂದು ತೆಕ್ಕೆ ಹುಲ್ಲನ್ನು ಎಳೆದು ಎತ್ತುಗಳಿಗೆ ಎಸೆದು ಮುಂದಲ ನಿಮಿಷದಲ್ಲಿಯೇ ಗೊರಕೆ ಹೊಡೆಯುತ್ತಾ ಬಿದ್ದುಕೊಂಡನು. ಅರ್ಧ ಗಂಟೆಯ ನಂತರ ನಾರಾಯಣ ಒಳಗೆ ಕಾಫಿ ಕಾಯಿಸಿ ಕುಡಿದು, ಪಾಪ ನನ್ನಷ್ಟೇ ಕಷ್ಟ ಪಟ್ಟಿದ್ದಾನೆ. ಒಂದು ತೊಟ್ಟು ಇವನಿಗೆ ಕೊಡೋಣ ಎಂದು ಬಂದು ಉರಗನನ್ನು ಎಷ್ಟು ಎಬ್ಬಿಸಿದರೂ ಗಾಢ ನಿದ್ರೆಯಲ್ಲಿದ್ದ ಅವನು ಜೇರೆ ಮುಲಕಲಿಲ್ಲ. ಬೆಳಗಿನ ಜಾವ ಐದು ಗಂಟೆಗೆ ಅನಂತು ಎದ್ದಾಗ ಗೋಪಾಲನ ಮನೆ ಮುಂದೆ ಗಾಡಿ ನಿಂತಿದ್ದುದನ್ನು ನೋಡಿ ಧೈರ್ಯಮಾಡಿಕೊಂಡನು. ನಾರಾಯಣ ಬರದೇ ಇದ್ದಿದ್ದರೆ ಗಾಡಿ ತನ್ನ ಮನೆ ಬಾಗಿಲಿನಲ್ಲಿ ನಿಂತಿರುತ್ತಿದ್ದಿತು. ಬೆಳಗಾದ ಮೇಲೆ ಅನಂತುವಿಗೆ ಊರವರಿಂದೆಲ್ಲಾ ಚೆನ್ನಾಗಿ ಬೈಗಳವಾಯಿತು. "ನೀನೂ ರಸ್ತೆಯಲ್ಲಿ ಹೋಗಿ ಕಾಯ್ದುಕೊಂಡು ಬಿದ್ದಿರಬೇಕಾಗಿದ್ದಿತು. ಅಲ್ಲಿ ಯಾರನ್ನಾದರೂ ನಿಲ್ಲಿಸಿದ್ದಿದ್ದರೆ ಗಾಡಿ ಮುಂದೆಹೋಗುತ್ತಿರಲಿಲ್ಲ" ಎಂದು. ಅನಂತುವಿಗೆ ಒಂದೇ ಕಾಲದಲ್ಲಿ ಪಾಪ ಎರಡು ಕಡೆಯೂ ಇರುವುದು ಹೇಗೆತಾನೇ ಸಾಧ್ಯ. ಅವನು ಇನ್ನೊಬ್ಬ ವರನ ವರಪೂಜೆಯಲ್ಲಿ ತೊಡಗಿರಲಿಲ್ಲವೇ ? ಆದರೆ ಅದನ್ನು ಕೇಳುವವರಾರು ? ಮಗಳ ತಂದೆಯದೇ ಯಾವಾಗಲೂ ತಪ್ಪು.

---

# ೨೦. ನಾವು ಕಳಕೊಂಡ ಆಸ್ತಿ

ಮಲ್ಲಿಗೆಹಳ್ಳಿಯಲ್ಲಿ ಸರಿಯಾದ ಪುರೋಹಿತರು ಇರಲಿಲ್ಲ. ಹಿಂದಲ ಜನಾಂಗದಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಎಲ್ಲರೂ ಸಂಸ್ಕೃತ ವಿದ್ಯಾವಂತರಾಗಿದ್ದರು. ಬ್ರಾಹ್ಮಣರಿಗೆ ಆಗಬೇಕಾದ ಶೋಡಷ ಕರ್ಮಗಳನ್ನು ಮಾಡಿಸುವುದರಲ್ಲಿಯೂ ಕ್ಷತ್ರಿಯ, ವೈಶ್ಯ, ಶೂದ್ರರಿಗೆ ಆವಶ್ಯಕವಾದ ಕರ್ಮ ಮಾಡಿಸುವುದರಲ್ಲಿಯೂ ಅವರು ನಿಷ್ಣಾತರಾಗಿದ್ದರು. ಅವರು ಆ ವಿದ್ಯೆಗಳನ್ನು ಯಾವುದಾದರೂ ಲಾಭದ ಆಸೆಯಿಂದಲಾಗಲಿ ಸರ್ಕಾರಿ ನೌಕರಿಯ ಆಸೆಯಿಂದಲಾಗಲಿ ಮತ್ತೊಬ್ಬನನ್ನು ಗುಂಡಿಗೆ ತಳ್ಳಬೇಕೆಂಬ ಉದ್ದೇಶದಿಂದಾಗಲಿ ಕಲಿಯಲಿಲ್ಲ. ಯಾವ ಅಧಿಕಾರವೂ ಖಂಡಿತ ದೊರೆಯುವುದಿಲ್ಲವೆಂಬುದನ್ನು ತಿಳಿದೂ ತಿಳಿದೂ ಮಲ್ಲಿಗೆಹಳ್ಳಿಯ ಈಗಿನ ಬ್ರಾಹ್ಮಣರ ಪೂರ್ವಿಕರು—ಪೂರ್ವಿಕರೆಂದರೆ ಬಹಳ ಪೂರ್ವಿಕರಲ್ಲ. ಒಂದೇ ತಲೆ ಹಿಂದಲವರು—ಅವರಲ್ಲಿ ಒಬ್ಬಿಬ್ಬರು ಈಗಲೂ ಇದ್ದಾರೆ. ಸಂಸ್ಕೃತ ಕನ್ನಡ, ನಿತ್ಯಕರ್ಮಗಳಿಗೆ ಬೇಕಾದ ವಿದ್ಯೆಗಳನ್ನು ಕಲಿತರು. ಕೆಲವರು ತರ್ಕ ವ್ಯಾಕರಣ ವೇದಾಂತ ಧರ್ಮಶಾಸ್ತ್ರದಲ್ಲಿ ನಿಷ್ಣಾತರಾಗಿದ್ದರು. ಸಾಹಿತ್ಯ ಸಾಮಾನ್ಯವಾಗಿ ಎಲ್ಲರಿಗೂ ತಿಳಿದಿದ್ದಿತು. ಅವರಿಗೆಲ್ಲಾ "ತಾನು ವಿದ್ಯೆ ಕಲಿಯಲು ಪ್ರಾರಂಭಿಸಿದಾಗ ಬರುತ್ತಿದ್ದ ನಾಲ್ಕು ಕಾಳು ಭತ್ತವೇ ವಿದ್ಯೆ ಮುಗಿದ ಮೇಲೂ ಬರುತ್ತೆ. ಇದೇನೂ ಹೆಚ್ಚುವುದಿಲ್ಲ. ತಾನು ಊರು ಬಿಟ್ಟುಹೋಗುವುದೂ ಇಲ್ಲ" ಎಂಬುದು ಚೆನ್ನಾಗಿ ಗೊತ್ತಿದ್ದಿತು. ಆದರೂ ಅವರು ವಿದ್ಯೆಯನ್ನು ಸಂಪಾದನೆಗೆ ಗಂಟುಹಾಕಲಿಲ್ಲ. ಸಂಪಾದನೆ ಮಾಡುವವನಿಗೂ ಮಾಡದವನಿಗೂ ವಿದ್ಯೆ ಬೇಕೆಬೇಕು. ಸಂಪಾದನೆ ಮಾಡದವನಿಗೆ ಹೆಚ್ಚಿಗೆಯೇ ಬೇಕು. ವಿದ್ಯೆ ಎಂಬುದು ಜೀವಕ್ಕೆ ಉಸಿರಿನಂತೆ; ಅದು ಕತ್ತಲೆಯಲ್ಲಿ ಹೋಗುವವನಿಗೆ ಬೇಕಾದ ಬೆಳಕಿನಂತೆ. ಅದು ಪ್ರೇಯಸಿಯ ಪ್ರೇಮದಂತೆ. ಅದಕ್ಕೆ ಅಂಗಡಿ ಬೀದಿಯಲ್ಲಿ ಜನ ಸರಿಯಾಗಿ ಅಳತೆ ತೂಕ ಮಾಡಿ ಬೆಲೆ ಕೊಡಲಿಲ್ಲ ಅಂತ ಅದನ್ನು ನಾವು ಉದಾಸೀನ ಮಾಡುವುದಕ್ಕಾಗುವುದೇ ?" ಎಂಬುದು ಅವರ ವಾದವಾಗಿದ್ದಿತು.

ಒಂದು ತಲೆಮಾರಿಗೆ ಹಿಂದೆ ಮಲ್ಲಿಗೆಹಳ್ಳಿಯ ಸಂಸ್ಕೃತ ವಿದ್ಯಾವಂತರು ವಿದ್ಯೆಗೂ ಬೆಲೆಗೂ ಗಂಟುಹಾಕಲಿಲ್ಲ. ಮಲ್ಲಿಗೆಹಳ್ಳಿ ಯಜಮಾನರು, ಸಂಸ್ಕೃತ ವಿದ್ಯೆದಿಂದ ತಮಗೆ ಏನೂ ಹಣದ ಲಾಭವಾಗುವುದಿಲ್ಲವೆಂದು ತಿಳಿದೂ ತಿಳಿದೂ, ಹಂಪಾಪುರಕ್ಕೆ ಹೋಗಿ ಅಲ್ಲಿಯ ಕುರುಡು ಘನಪಾಟಿಗಳ ಹತ್ತಿರ ಹನ್ನೆರಡು ವರುಷ ತರ್ಕ ಸಾಹಿತ್ಯ ವೇದಾಂತಗಳನ್ನು ಕಲಿತರು. ಈ ಘನಪಾಟಿಗಳು ಹುಟ್ಟುಕುರುಡರಾಗಿದ್ದರು. ಆದರೆ ಅವರ ವಿದ್ಯೆ ಅದ್ಭುತವಾಗಿದ್ದಿತು. ಅವರಿಗೆ ವೇದ ಘನ ಜಟೆ (ವೇದದ ಅನುಯಾಯಿಗಳಾದವರಿಗೆ ಸಹ ಈ ಮಾತು ಈಗ ಹೊಸದಾಗಿ ಅಪರೂಪವಾಗಿ ತೋರುತ್ತದೆ) ಪೂರ್ತಾ ಪಾಠ ಆಗಿತ್ತು. "ವೇದ ಪೂರ್ತಾ ಪಾಠವಾಗಿದ್ದಿತು" ಎಂದರೆ ಅದನ್ನು ಬಾಯಲ್ಲಿ ಹೇಳುವುದಕೆ ಒರುತ್ತಿದ್ದಿತೆಂದು ಅರ್ಥ. ಆ ಕಾಲದಲ್ಲಿ ಪುಸ್ತಕಗಳೂ ಇರಲಲ್ಲ. ವೇದದ ಈ ಪಾಂಡಿತ್ಯದಿಂದಲೇ ಅವರಿಗೆ ಘನಪಾಟಿ ಎಂಬ ಈ ಹೆಸರು ಬಂದಿದ್ದಿತು. ಇದರ ಜತೆಗೆ ಅವರಿಗೆ ರಘುವಂಶ, ಮಾಘ, ನೈಷಧ ಈ ಕಾವ್ಯಗಳೂ ಚಂಪೂ ರಾಮಾಯಣ ಭಾರತಗಳೂ ಅವುಗಳ ವ್ಯಾಖ್ಯಾನಗಳೊಂದಿಗೆ ಬಾಯಿಗೆ ಬರುತ್ತಿದ್ದುವು. ತರ್ಕ ವೇದಾಂತದಲ್ಲಿಯೂ ಅವರು ನಿಸ್ಸೀಮರಾಗಿದ್ದರು. ಅವರಿಗೆ, ಯಾವ ರಾಜರೂ ಈ ವಿದ್ಯೆಗಳಿಗಾಗಿ ಯಾವ ಅಧಿಕಾರವನ್ನೂ ಕೊಡುವ ಆಸೆ ಹುಚ್ಚು ಪ್ರಾರಂಭದಿಂದಲೂ ಇರಲಿಲ್ಲ. ಆದರೂ ಅವರು "ವಿದ್ಯೆ ಕಲಿಯುವುದು, ವಿದ್ಯೆ ಹರಡುವುದು, ಬ್ರಾಹ್ಮಣನಾದ ನನ್ನ ಧರ್ಮ. ಹೊಳೆದು ಉರಿಯುವುದು ದೀಪದ ಸ್ವಭಾವ. ಜನ ಅದಕ್ಕೆ ಬೆಲೆ ಕಟ್ಟಲಿಲ್ಲವೆಂದು ದೀಪ ಉರಿಯುವುದನ್ನು ಬಿಡುವುದಿಲ್ಲ. ಬ್ರಾಹ್ಮಣನಾದ ನಾನು ವಿದ್ಯೆಯ ಪ್ರಚಾರಕನಾಗದಿದ್ದರೆ ಮತ್ತಾರು ತಾನೆ ಆಗುತ್ತಾರೆ?" ಎಂದುಕೊಂಡು ತಾವು ಕುರುಡರಾದರೂ ಕಣ್ಣು ಕಾಣುವವರಿಗಿಂತ ಹೆಚ್ಚಾಗಿ ವಿದ್ಯಾವಂತರಾದರು.

ಘನಪಾಠಿಗಳಿಗೆ ಎಲ್ಲೋ ಜೀವನಕ್ಕೆ ಆಗುವಷ್ಟು ಜಮೀನಿನಲ್ಲಿ ಸ್ವಲ್ಪ ಭತ್ತ ಬರುತ್ತಿದ್ದಿತು. ಅವರು ಅದರಲ್ಲಿಯೇ ತೃಪ್ತರಾದರು. ತಮ್ಮ ವಿದ್ಯೆಕ್ಕಾಗಿ ಅವರು ಯಾರಿಂದಲೂ ಏನನ್ನೂ ಅಪೇಕ್ಷಿಸಲಿಲ್ಲ. ಯಾವ ಪರೀಕ್ಷೆಯಲ್ಲಿಯೂ ತೇರ್ಗಡೆಹೊಂದಿ ಪ್ರಶಸ್ತಿ ಪತ್ರವನ್ನಾಗಲಿ ಇತರ ಸರ್ಟಿಫಿಕೇಟುಗಳನ್ನಾಗಲಿ ತೆಗೆದು ಇಟ್ಟುಕೊಳ್ಳಲಿಲ್ಲ. "ಇಂತಹ ವಿದ್ಯವನ್ನು

ಇಟ್ಟುಕೊಂಡು ಯಾವ ಅಲ್ಪನಿಗೂ—ಅವನು ಎಷ್ಟೇ ದೊಡ್ಡವನಾಗಿದ್ದರೂ ಸರಿಯೆ—ಯಾವ ಸಹಾಯಕ್ಕಾಗಿಯೂ ದೈನ್ಯವನ್ನು ತೋರಿಸಲಾರೆ. ಸರಸ್ವತಿ ವಿದ್ಯಾಧಿ ದೇವತೆ. ಅಂಗಹೀನನಾದ ಯಾವುದಕ್ಕೂ ಬೆಲೆಯಿಲ್ಲದ ನನಗೆ ಒಲಿದು ನನಗೆ ಒಂದು ಬೆಲೆ ಕೊಟ್ಟಿದ್ದಾಳೆ. ಅವಳನ್ನು, ಹೊಟ್ಟೆ ಹೊರಿಯುವ ನಾಯಿ ನರಿಗಳಂತೆ ಬಗಳಿ, ಅನಾಮಧೇಯರಾದ ಅರಸಿಕರ ಕಾಲಿನಲ್ಲಿ ಹಾಕಲಾರೆ. ಇಂತಹ ವಿದ್ಯೆ ನನಗೆ ಇರಬೇಕಾದರೆ ಮತ್ತೇನೋ ಇಲ್ಲವೆಂದು ಯಾಕೆ ಕೊರಗಲಿ? ರಾಜರಂತೆ ಧನಿಕರಂತೆ, ಕೊಟ್ಟರೆ ಹೋಯಿತು ಅಂತ ನಾನ್ಯಾಕೆ ಕೊರಗಲಿ. ಕೊಟ್ಟಷ್ಟೂ ಇದು ಇನ್ನೂ ಬೆಳೆಯುತ್ತೆ. ಅಕ್ಷಯವಾಗುತ್ತೆ" ಎನ್ನುತ್ತಿದ್ದರು. ಇಂತಹ ಘನಪಾಟಿಗಳಲ್ಲಿಗೆ ಅದೇ ಬಗೆಯ ಅಭಿಪ್ರಾಯದಿಂದ ವಿದ್ಯೆಕಲಿಯಲು ಮಲ್ಲಿಗೆಹಳ್ಳಿ ಯಜಮಾನರೂ ಹೋದರು. ಇದು ಅಷ್ಟು ಬಹಳ ಹಿಂದಲಕಾಲದ ಮಾತೂ ಅಲ್ಲ. ಸುಮಾರು ೫೦-೬೦ ವರುಷಗಳಾಗಿರಬಹುದು.

ಘನಪಾಟಿಗಳಲ್ಲಿಗೆ ಮಲ್ಲಿಗೆಹಳ್ಳಿಯ ಯಜಮಾನರು ಬಾಲ್ಯದಲ್ಲಿ ಹೋಗಿ ಅವರ ಬಳಿ ಹನ್ನೆರಡು ಹದಿನಾಲ್ಕು ವರುಷ ಅಭ್ಯಾಸಮಾಡಿ ಸಾಹಿತ್ಯದಲ್ಲಿಯೂ ತರ್ಕ ವೇದಾಂತದಲ್ಲಿಯೂ ಒಳ್ಳೆಯ ಪಾಂಡಿತ್ಯವನ್ನು ಸಂಪಾದಿಸಿದರು. ಆಗ ಅವರು ನೌಕರಿ ದೊರೆಯುತ್ತದೆ ಎಂಬ ಆಸೆಯಿಂದ ಈ ಸಂಸ್ಕೃತ ಕನ್ನಡ ವಿದ್ಯದಲ್ಲಿ ಪಾರಂಗತರಾದವರಲ್ಲ. ಅವರು ಅಂತಹ ಧನಿಕರೂ ಅಲ್ಲ. ಆದರೂ "ಬ್ರಾಹ್ಮಣನಾದವನ ಕಸಬು ವಿದ್ಯೆ, ಅವನ ಸ್ವಭಾವ ವಿದ್ಯೆ, ಈ ಬೆಳಕು ನಂದದಂತೆ ಇಟ್ಟಿರಬೇಕು. ಈ ಸಂಸ್ಕೃತಿ ನಾಶವಾಗಲು ಅವಕಾಶ ಕೊಡಬಾರದು." ಈ ಭಾವದಿಂದ ಅವರು ವ್ಯಾಸಂಗಮಾಡಿ ಮಲ್ಲಿಗೆಹಳ್ಳಿಗೆ ಬಂದು ಕುಳಿತರು. ಆಗಿನ ಜನವೂ ಸಹ ಇವನು ಕಲಿತ ವಿದ್ಯೆಯನ್ನು ಮಾರಿದರೇ ಅದು ಪ್ರಯೋಜನಕ್ಕೆ ಬಂದಂತೆ, ಇಲ್ಲದಿದ್ದರೆ ಇಲ್ಲ ಎಂದು ನಿರೀಕ್ಷಿಸಲಿಲ್ಲ. ಆ ವಿದ್ಯೆಕ್ಕಾಗಿ ಯಜಮಾನರು ಸಾವಿರಾರು ರುಪಾಯಿ ಖರ್ಚುಮಾಡಲೂ ಇಲ್ಲ. ಹೀಗೆ ಪ್ರಾವೀಣ್ಯವನ್ನು ಹೊಂದಿದ ಯಜಮಾನರು ಮಲ್ಲಿಗೆಹಳ್ಳಿಯಲ್ಲಿ, ತಮ್ಮ ಪೂರ್ವಿಕರಂತೆ ತಮ್ಮ ಜಮೀನಿನಿಂದ ದೊರೆತ ಅಲ್ಪ ಸ್ವಲ್ಪ ಫಸಲಿನಿಂದ ಸಂತುಷ್ಟರಾಗಿದ್ದರು. ಆಗಿನ ಕಾಲದಲ್ಲಿ ತಮ್ಮ ಹಾಗೆಯೇ ಯಾವ ಕೆಲ

ಸವೂ ಇಲ್ಲದೆ ಕುಳಿತಿದ್ದ ಮಲ್ಲಿಗೆಹಳ್ಳಿಯ ಬ್ರಾಹ್ಮಣರಿಗೆ, ಸಂಸ್ಕೃತ ವಿದ್ಯೆಯನ್ನೂ ಸಾಹಿತ್ಯದ ಸೊಬಗನ್ನೂ ತರ್ಕ ವೇದಾಂತವನ್ನೂ ಪಂಪ ರನ್ನರನ್ನೂ ಕುಮಾರ ವ್ಯಾಸನನ್ನೂ ಹೇಳಿದರು. ಆಗಿನ ಜನ ಓದಿ ಓದಿ ಪಂಡಿತರಾದರು. ಕೇಳಿ ಕೇಳಿ ರಸಿಕರಾದರು. ಅವರ ಬುದ್ಧಿ ವಿಶಾಲವಾಯಿತು; ಜ್ಞಾನ ಕೂರಾಯಿತು; ದಕ್ಷತೆ ಚೆನ್ನಾಗಿ ಬೆಳೆಯಿತು: ಲೋಕವ್ಯವಹಾರ, ಸಮಯಾನುಸಾರವಾದ ಮಾತುಕಥೆ, ಜೀವನವನ್ನು ಬಾಳುವ ರೀತಿ, ಕಷ್ಟಗಳನ್ನು ಸಹಿಸಿ ಎದುರಿಸುವ ಶಕ್ತಿ, ತ್ಯಾಗ ತೃಪ್ತಿ ಸ್ವಾತಂತ್ರ್ಯಭಾವ ಎಲ್ಲವೂ ಅವರಲ್ಲಿ ಬೆಳೆದುವು. ಇದಕ್ಕೆ ಅವರು ಯಾವ ವಿಶ್ವವಿದ್ಯಾಲಯಕ್ಕೂ ಹೋಗಲಿಲ್ಲ. ವಿದ್ಯೆ ಮುಗಿದ ಕೂಡಲೆ ಹುದ್ದೆಗೆ ಅರ್ಜಿ ಹಿಡಿದುಕೊಂಡೂ ಹೋಗಲಿಲ್ಲ. ಯಜಮಾನರು ಸಂಸ್ಕೃತಿಯ ಬೆಳಕಾಗಿದ್ದಂತೆ, ಅವರ ಶಿಷ್ಯರು ತಾವೂ ಸಂಸ್ಕೃತಿ, ಸಂಸ್ಕೃತಗಳ ತೇಜಃಪುಂಜಗಳಾದ ಕಣಗಳಾಗಿದ್ದರು. ಇದೂ ಬಹಳ ಕಾಲದ ಮಾತಲ್ಲ. ಯಜಮಾನರಲ್ಲಿ ವಿದ್ಯೆ ಕಲಿತ ಕೆಲವರು ಈಗಲೂ ಇದ್ದಾರೆ. ಅವರ ಮಕ್ಕಳೇ ಇಂದಿನ ಜನಾಂಗ. ಯಜಮಾನರ ಮಕ್ಕಳು ಈಗ ಇದ್ದಾರೆ. ಅನಂತುವು ಯಜಮಾನರ ತಮ್ಮ ಪುಬ್ಬೇರಪ್ಪನವರ ಮಗ.

ಈಚೆಗೆ ಇಂಗ್ಲೀಷ್ ವಿದ್ಯಾಭ್ಯಾಸ ಪ್ರಾರಂಭವಾಯಿತು. ಪ್ರಾರಂಭದಲ್ಲಿ ಕಲಿತವರಿಗೆಲ್ಲಾ ಹುದ್ದೆಗಳು ದೊರೆತವು. ವಿದ್ಯೆಯ ಸ್ವರೂಪವೇ ಬದಲಾಯಿಸಿತು. ಹೂವಿಗೆ ಪರಿಮಳ ಹೇಗೆ ಸ್ವಾಭಾವಿಕವೋ ಹಾಗೆ ವಿದ್ಯೆ ಮನುಷ್ಯನಿಗೆ ಹುಟ್ಟುಗುಣ ಎಂಬ ಭಾವವೇ ಹೋಯಿತು. "ವಿದ್ಯೆ ಎಂದೆಂದಿಗೂ ಮುಗಿಯದುದು; ಇದನ್ನು ಸಾಯುವವರೆಗೆ ಅಭ್ಯಾಸ ಮಾಡುತ್ತಲೇ ಹೋಗಬೇಕು. ಬರಬರುತ್ತಾ ಮನುಷ್ಯನನ್ನು ಪುಟಕ್ಕೆ ಹಾಕಿದಂತೆ ಆಗುತ್ತದೆ" ಎಂಬ ಭಾವ ಹೋಗಿ ಇಷ್ಟು ವರುಷ ಇಷ್ಟು ಪುಸ್ತಕಗಳನ್ನು ಓದಿದರೆ ಒಬ್ಬ ವಿದ್ಯಾವಂತನಾದಂತೆ ಎಂಬ ತತ್ವ ಅಂಗೀಕಾರವಾಯಿತು. ವಿದ್ಯೆ ಮನುಷ್ಯನನ್ನು ಸ್ವಾಭಾವಿಕವಾಗಿ ಹೊಂದುವುದಾಗಲಿಲ್ಲ. ಹೂವು, ಹೀಚು ಕಾಯಾಗಿ ಹಣ್ಣಾಗಿ ಕೆಳಕ್ಕೆ ಉದುರಲು ಕೆಲವು ಕಾಲ ನಿಷ್ಕೃಷ್ಟವಾಗಿ ಬೇಕು. ಇಷ್ಟು ಕಾಲದೊಳಗೆ ಈ ಹೂವು ಹಣ್ಣಾಗಬೇಕು ಎಂದು ನಾವೇ ಅದರ ಸ್ವಭಾವದ ಕಡೆ ಲಕ್ಷ್ಯಕೊಡದೆ ತೀರ್ಮಾನಿಸುವಂತೆ, "ಇಷ್ಟು ವರ್ಷ ಇಷ್ಟು ತರಗತಿಗಳಲ್ಲಿ ಇಷ್ಟು

ರುಪಾಯಿ ಶುಲ್ಕ ಕೊಟ್ಟರೆ ವಿದ್ಯಾವಂತ" ಎಂದು ಹೊಸ ವಿದ್ಯೆ ತೀರ್ಮಾನಿಸಿತು. ನಿಜವಾದ ವಿದ್ಯೆಯಲ್ಲಿ ಮನಸ್ಸು ಹೆಚ್ಚು ಹೆಚ್ಚಾಗಿ ತೆರೆಯುತ್ತಿದ್ದುದರಿಂದ ಅದು ಮನುಷ್ಯನನ್ನು ವಿನಯವಂತನನ್ನಾಗಿ ಮಾಡುತಿದ್ದಿತು. ಆದರೆ ಹೊಸ ವಿದ್ಯೆ ಮನುಷ್ಯನನ್ನು ವಿನಯವಂತನನ್ನಾಗಿ ಮಾಡುವುದಂತೂ ಇರಲಿ. ಅವನ ಅಹಂಕಾರ ಮೇರೆ ಮೀರಿ ಹೆಚ್ಚುವಂತೆ ಮಾಡುತ್ತಿದ್ದಿತು. ಆ ವಿದ್ಯೆಯಲ್ಲಿ ಒಂದು ತೃಪ್ತಿ, ಒಂದು ಪರೋಪಕಾರ ಬುದ್ಧಿ, ನಿಜವಾದ ಕೆಚ್ಚುಗಾರಿಕೆ ಕಷ್ಟ ಸಹಿಷ್ಣುತೆ ಇತ್ತು. ಈ ವಿದ್ಯೆಯಲ್ಲಿ ಮಿತಿಮೀರಿದ ಸ್ವಾರ್ಥದ ದುರ್ಗಂಧ; ಎ. ಬಿ. ಸಿ. ಡಿ. ಕಲಿಯುವಾಗಲೇ ಗುಲಾಮಗಿರಿಯ ಮನೋವೃತ್ತಿ ಅತಿಯಾದ ಸುಖಾಭಿಲಾಷೆ, ಹೇಡಿತನ ತುಂಬಿತು. ಸಣ್ಣ ಮತ್ತು ದೊಡ್ಡ ಗುಮಾಸ್ತರನ್ನು ತಯಾರ್ಮಾಡುವ ಈ ಕಾರ್ಖಾನೆ ಬೇರೆ. ಇದಕ್ಕೂ ನಿಜವಾದ ನಮ್ಮ ಸಂಸ್ಕೃತಿ ವಿದ್ಯೆಗೂ ಸಂಬಂಧವಿಲ್ಲ. ಅದರ ಪಾಡಿಗೆ ಅದು; ಇದರ ಪಾಡಿಗೆ ಇದು. ಅದರ ಜತೆಗೆ ಇದು ಬೇಕು. ಅದು ನೆಯ್ಗೆಯವನ ವಿದ್ಯೆ, ಬಡಗಿಯ ವಿದ್ಯೆ, ಕಮ್ಮಾರನ ವಿದ್ಯೆ, ರೈಲು ನಡೆಸುವವನ ವಿದ್ಯೆ. ಅದರ ಜತೆಗೆ ಈ ಪಿದ್ಯೆ, ನಮ್ಮ ವಿದ್ಯೆ ನಿಜವಾದ ಸಂಸ್ಕೃತಿಬೇಕು ಎಂಬ ಯಜಮಾನರ ಮಾತು ನಮ್ಮವರಿಗೆ ಮರೆತು ಹೋಯಿತು.

ಸರಿ. ಇಂಗ್ಲಿಷ್ ವಿದ್ಯಾಭ್ಯಾಸ ಒಂದು ತರಹ ಸನ್ನಿಯಂತೆ ಪ್ರಾರಂಭವಾಯಿತು. ವಿದ್ಯೆ ಕಲಿತಂತೆ ಕಲಿತಂತೆ ಹುದ್ದೆಗಳೂ ದೊರಕಿದುದರಿಂದ, ನಿಜವಾದ ವಿದ್ಯೆ ಅದೇ ಆಯಿತು ಕೆಲವರಿಗಂತೂ ಹುಟ್ಟಿ ಸಾಯುವವರೆಗೆ ಪರೀಕ್ಷೆಗೆ ಕಟ್ಟುತ್ತಿರುವುದೇ ಆಯಿತು. ಅಧಿಕಾರದಲ್ಲಿ ಒಬ್ಬರಿಗಿಂತ ಒಬ್ಬರು ಸ್ವಲ್ಪ ಕಡಿಮೆ ಇದ್ದರೆ, ಕೂಡಲೆ ಆ ಕಡಿಮೆಯವರು ಹಗಲು ರಾತ್ರಿ ಉರುಹಾಕಿ ಯಾವುದೋ ಒಂದು ಗರಡಿಯಲ್ಲಿ ತಯಾರಾಗಿಬಿಡುತ್ತಿದ್ದರು ಸರಿ ನಾಲ್ಕಾರು ತಿಂಗಳಿನಲ್ಲಿ ಅವರ ಮೇಲೆ ಈ ಹೊಸ ಗರಡಿಯಲ್ಲಿ ಲಾಗ ಹಾಕಿದವರು ಏರುತ್ತಿದ್ದರು. ಪೂರ್ಣವಾಗಿ ಶ್ರದ್ಧೆಯಿಂದ ತಮ್ಮ ಕೆಲಸದಲ್ಲಿ ಮೇಲಿನವರಿಗೆ ತೃಪ್ತಿ ಕೊಟ್ಟು ನಡೆದಿದ್ದ ಅವರಿಗೆ, ಇದರಿಂದ ಗಾಬರಿಯಾಗಿ ತಾವು ಯಾವುದಾದರೂ ಮತ್ತೊಂದು ಪ್ಯಾಸು ಮಾಡಿ ಈ ಜಾರಿದ ತಮ್ಮ ಸ್ಥಳವನ್ನು ಗಟ್ಟಿಯಾಗಿ ಹಿಡಿದುಕೊಳ್ಳಬೇಕೆಂಬ ತವಕವುಂಟಾಗುತ್ತಿದ್ದಿತು. ಹೀಗೆ ಮಲ್ಲಿಗೆಹಳ್ಳಿಯಲ್ಲಿಯೂ ಅನೇ

ಕರು ಒಬ್ಬೊಬ್ಬರಾಗಿ ಓದಿ ಓದಿ ಸರ್ಕಾರಿ ಹುದ್ದೆಗಳಲ್ಲಿ ಮೈಸೂರು ಬೆಂಗ ಳೂರುಗಳಲ್ಲಿ ಸೇರಿಕೊಂಡರು. ಈ ಅಧಿಕಾರ ದೊರೆತಂತೆ, ಹುದ್ದೆಯ ದರ್ಜೆ ಮೇಲಮೇಲಕ್ಕೆ ಹೋದಂತೆ, ಅವರು ಅದೇ ವಿದ್ಯದಲ್ಲಿ ನುರಿತವ ರಲ್ಲದ ತಮ್ಮ ಅಣ್ಣ ತಮ್ಮಂದಿರನ್ನೂ ಸಹ ಮಾತನಾಡಿಸಲು ಹಿಂಜರಿ ಯುತ್ತಿದ್ದರು. ಅವರ ಅಹಂಕಾರ ಅಸಾಧ್ಯವಾಗಿದ್ದಿತು. ಅವರ ಅತ್ಯಂತ ರಕ್ತ ಸಂಬಂಧಿಗಳಾದವರು ಸಹ, "ಈ ಹುದ್ದೆ ಇವನನ್ನು ಈ ಸ್ಥಿತಿಗೆ ತಂದಿತೆ?" ಎಂದು ಕನಿಕರಪಡುವಂತೆ ಆಗುತ್ತಿತ್ತು. ಈ ವಿಕಟ ನರ್ತನ ಒಂದು ತಲೆಮಾರು ನಡೆದುಹೋಯಿತು. ಯೂರೋಪಿಯನ್‌ರಂತೆ ನಡೆಯುವರು ನಡೆದರು; ಫ್ರಾನ್ಸ್‌ನವರಂತೆ ಮೀಸೆ ಬಿಡುವರು ಬಿಟ್ಟರು; ಇಂಗ್ಲಿಷ್ ಸ್ತ್ರೀಯಂತೆ, ಹೆಂಡತಿಗೆ ವೇಷ ಹಾಕಿಸಿದವರು ಹಾಕಿದರು; ಜತೆಯಲ್ಲಿ ನಾಯಿಗಳನ್ನೂ ಕೈಚೀಲಗಳನ್ನೂ ಹಿಡಿದುಕೊಂಡು ಎತ್ತರ ವಾದ ಬೂಟ್ಸುಗಳನ್ನು ಧರಿಸಿಕೊಂಡು, ವ್ಯಾಪಾರಮಾಡುವ ಸ್ತ್ರೀಯರು ಮಾಡಿದರು. ಚಾಕೊಲೆಟ್ ಗ್ಲಾಸ್ಗೊ ಬಿಸ್ಕತ್‌ಗಳೇ ಅನೇಕರ ಮನೆಯ ನಿತ್ಯದ ತಿಂಡಿಗಳಾದವು ಗಣಪತಿಗಳನ್ನೂ ದೇವರನ್ನೂ ಹ್ಯಾಟು ಬೂಟು ಹಾಕಿ ಮೆರವಣಿಗೆ ಮಾಡಿದವರು ಮಾಡಿದರು. ವೈದಿಕರಾದವರ ಮಕ್ಕಳು ಅಧಿಕಾರಿಗಳಾದ ಕೂಡಲೇ, ಕ್ಲಬ್ಬಿನಲ್ಲಿ ಕುಳಿತು ಸೀಸೆ ಸೀಸೆ ಪರದೇಶಿ ಹೆಂಡವನ್ನು ಖಾಲಿ ಮಾಡುತ್ತಿದ್ದರು. ಸುಸ್ತಾಗಿ ಬಿದ್ದಿರುತ್ತಿದ್ದ ಅವರನ್ನು ಅವರ ಮೋಟಾರು ಡ್ರೈವರನೇ ಎತ್ತಿಕೊಂಡು ಗಾಡಿಯಲ್ಲಿ ಹಾಕಿ ಕೊಂಡು, ಮನೆಗೆ ಅರ್ಧರಾತ್ರಿಯ ವೇಳೆಗೆ ತಂದು ತಳ್ಳುತ್ತಿದ್ದನು. ಮನೆ ಯಲ್ಲಿ ಆ ಅವೇಳೆಯಲ್ಲಿ ಅವರನ್ನು ಯಾರೂ ನೋಡುತ್ತಿರಲಿಲ್ಲ. ಪರಿಚಾರಕ ಅವರ ಕೊಠಡಿಯಲ್ಲಿ ಒಂದಿಷ್ಟು ಅನ್ನ ಸಾರು ಇಟ್ಟಿರುತ್ತಿದ್ದನು. ಬೇಕಾ ದರೆ ತಿನ್ನುತ್ತಿದ್ದರು. ಇಲ್ಲದಿದ್ದರೆ ಹಾಗೆಯೇ ನೆಲದ ಮೇಲೆ ಬಿದ್ದಿರು ತ್ತಿದ್ದರು.

ಇದು ಒಂದು ಕೆಟ್ಟ ರಾತ್ರಿಯಂತೆ ಕಳೆದುಹೋಯಿತು. ಈ ವಿದ್ಯೆ ಬರಿಯ ಅಧಿಕಾರದ ವಿದ್ಯೆಯಾದುದರಿಂದ ಯಾವ ಸರ್ಕಾರತಾನೇ ವಿದ್ಯೆ ಕಲಿತವರಿಗೆಲ್ಲಾ ಹುದ್ದೆ ಕೊಡುತ್ತೆ? ವಿದ್ಯೆ ಕಲಿತವರಿಗೆಲ್ಲಾ ಹುದ್ದೆ ಕೊಡ ಬೇಕು ಎಂದರೆ ಹುದ್ದೆ ದೊರಕುವಷ್ಟು ಮಾತ್ರವೇ ಜನ ವಿದ್ಯೆ ಕಲಿಯ ಬೇಕೆಂದಾಯಿತು. ಪರಿಸ್ಥಿತಿ ಸ್ವಲ್ಪ ಹೆಚ್ಚು ಕಡಿಮೆ ಅಲ್ಲಿಗೇ ಬಂದಿತು

ತಂದೆ ಬಿ.ಎ. ಮಾಡಿ ಸಾವಿರ ರುಪಾಯಿ ಸಂಬಳ ತೆಗೆದ. ಮಗ ಎಂ. ಎ. ಮಾಡಿದ. ಅರವತ್ತೇ ರುಪಾಯಿ. ಇದಕ್ಕೆ ೭-೮ ಸಾವಿರ ಖರ್ಚು ಮಾಡಿದ. ಹಿಂದೆ ಎಂ.ಎ. ಮಾಡಿದವನು ೮ ವರುಷದಲ್ಲಿ ಡೆಪುಟಿ ಕಮಿಶನರ್ ಆದ. ಈಗ ವೇದಾಂತದ ಎಂಎ ಮಾಡಿದವನು ಹನ್ನೊಂದು ವರುಷವಾದರೂ ಎಕ್ಸೈಜ್ ಗುಮಾಸ್ತ. ಆವಶ್ಯಕವಿರುವಷ್ಟು ದರ್ಜಿಗಳು ಮಾತ್ರ ದರ್ಜಿ ವಿದ್ಯೆ ಕಲಿಯುವಂತೆ, ಆವಶ್ಯಕವಿರುವಷ್ಟು ಮಾತ್ರ ಈ ದೊಂಬರ ಆಟದ ವಿದ್ಯೆ ಕಲಿಯಬೇಕು. ಉಳಿದವರು ಸಾಮಾನ್ಯವಾಗಿ ಯಾವುದು ಸಂಸ್ಕೃತಿಯೋ, ಯಾವ ವಿದ್ಯದಿಂದ ಭಾರತದ ನಾಗರೀಕತೆ ಈವರೆಗೆ ಉಳಿದಿರುವುದೋ, ಯಾರ ಹಿಂದಲವರು ಫ್ರೆಂಚ್ ಮೀಸೆಗಳನ್ನು ಬಿಡದಿದ್ದರೂ ಭಾರತದ ಕೀರ್ತಿ ಕುಂದಲಿಲ್ಲವೋ, ಅಂತಹ ಭಾರತ ವಿದ್ಯೆ ಸಂಸ್ಕೃತಿ ಕಲಿಯಬೇಕು.

ಮಲ್ಲಿಗೆಹಳ್ಳಿಯಿಂದ ಬೆಂಗಳೂರಿಗೆ ಹೋಗಿ ಸಾವಿರ ರುಪಾಯಿ ಸಂಬಳದಲ್ಲಿರುವವನು ಶಾಮಣ್ಣ. ಆದರೆ ಅವನ ತಮ್ಮ, ಅದೇ ಪರೀಕ್ಷೆ ಮಾಡಿದ್ದರೂ ಹತ್ತು ವರುಷಗಳಿಂದ ೫೦ ರುಪಾಯಿನಲ್ಲಿಯೇ ನರಳುತ್ತಿದ್ದಾನೆ. ಮಲ್ಲಿಗೆಹಳ್ಳಿಯ ನರಸಿಂಹಮೂರ್ತಿಗೆ ಮೈಸೂರಿನಲ್ಲಿ ೮೦೦ ರೂ. ಸಂಬಳ. ಇನ್ನೇನು ರಿಟೈರ್ ಆಗುವ ಕಾಲ. ಅವನ ಮಗ ಎಂ.ಎ. ಪ್ಯಾಸ್ ಮಾಡಿ ೫ ವರುಷ ಆಯಿತು. ಹೋದ ವರುಷ ನಲವತ್ತು ರುಪಾಯಿನ ಕೆಲಸ ಸಿಕ್ಕಿತು. ಈ ಎಲ್ಲಾ ಕಾರಣಗಳಿಂದ ಕಲಿಯುವುದು—ಹಿಂದಲ ಒಂದು ಹುಚ್ಚು–೧೦-೨೦ ವರುಷ ಕಾಲದಂತೆ ಸರ್ಕಾರಿ ಅಧಿಕಾರಕ್ಕಾಗಿ ಮಾತ್ರವೇ ಅಲ್ಲ, ಸಾಮಾನ್ಯವಾದ ಜ್ಞಾನಕ್ಕೆ ಎಂಬುದು ಮಲ್ಲಿಗೆಹಳ್ಳಿಯವರಿಗೆ ಗೊತ್ತಾಯಿತು. ಆದರೆ ಆ ಸಾಮಾನ್ಯ ಜ್ಞಾನಕ್ಕೆ ಈ ವಿದ್ಯೆಯೇ ಬೇಕೆ? ಇಷ್ಟೊಂದು ಖರ್ಚೇ ಮಾಡಬೇಕೆ? ಬೆನ್ನುಮೂಳೆ ಮುರಿದುಕೊಂಡು ಈ ಪರಭಾಷೆಯನ್ನೇ ಕಲಿಯಬೇಕೆ? ಎಂಬುದನ್ನು ಯಾರೂ ಯೋಚಿಸಲಿಲ್ಲ. ವಿದ್ಯೆ ಕಲಿಸಬೇಕು. ಈ ವಿದ್ಯಕ್ಕೆ ಖರ್ಚು ಬಹಳ ಆಗುತ್ತೆ. ಒಬ್ಬೊಬ್ಬನ ವಿದ್ಯಕ್ಕೆ ಆರು ನಾಲ್ಕು ಸಾವಿರ ಬೀಳುತ್ತೆ. ಬಿದ್ದರೂ ಬೀಳಲಿ ಎಂದರೆ ಆಮೇಲೆ ಅದರಿಂದ ಏನೂ ಪ್ರಯೋಜನವಿಲ್ಲ'' ಹೀಗೆ ಅವರು ತೀರ್ಮಾನ ಮಾಡಿಕೊಂಡರು. ಹಿಂದೆ ಮಲ್ಲಿಗೆಹಳ್ಳಿಯಿಂದ ಪ್ರತಿವರುಷವೂ 6-7 ಇಂಟರ್‌ಮಿಡಿಯೇಟ್ 8-10 ಎಸ್. ಎಸ್. ಎಲ್. ಸಿ. ಎರಡು

ಬಿ. ಎ. ಹೀಗೆ ವಿದ್ಯಾರ್ಥಿಗಳು ಪರೀಕ್ಷೆಗೆ ಕುಳಿತುಕೊಳ್ಳುತ್ತಿದ್ದರು. ಈಚೆಗೆ ಅದೆಲ್ಲಾ ನಿಂತುಹೋಯಿತು. ಆ ಊರ ಮಿಡಲ್‌ಸ್ಕೂಲು ಪರೀಕ್ಷೆ ಮಾಡುವುದು. ಸರಿ ಮನೆಯಲ್ಲಿರುವುದು; ಇನ್ನು ಹಳ್ಳಿಯ ಉದ್ಯೋಗ ಗಳಿವೆಯೆಲ್ಲಾ, ಇಸ್ಪಿಟ್ಟು, ನಶ್ಯ, ಪೂಟು ಲಾಯರಿ, ವ್ಯಾಜ್ಯ, ಪರದೂಷಣೆ ಇವುಗಳಲ್ಲಿ ತೊಡಗುವುದು. ಈಗೀಗ ಲೋವರ್ ಸೆಕಂಡರಿಯ ಆಚೆಗೆ ವಿದ್ಯೆ ಸಾಧ್ಯವೇ ಇಲ್ಲ ಎಂದು ಅಲ್ಲಿಗೇ ವಿದ್ಯೆ ಮೊಟಕಾಗುತ್ತಿದೆ.

ಮಲ್ಲಿಗೆಹಳ್ಳಿ ಯಜಮಾನರು ಹೇಳುತ್ತಿದ್ದರು "ಇಂಗ್ಲಿಷ್ ಸಾಧ್ಯ ವಿರುವವರು ಹೋಗಿ ಆ ವಿದ್ಯೆ ಕಲಿಯಿರಯ್ಯ. ಆದರೆ ನಮ್ಮ ದೇಶದಲ್ಲಿ ಆ ವಿದ್ಯೆಗೆ ಖರ್ಚು ಬಹಳ. ಉಳಿದವರು ಇಂಗ್ಲಿಷಿನಿಂದ ಪ್ರಯೋಜನ ವಿಲ್ಲ ಎಂದು ಸುಮ್ಮನೆ ಇದ್ದುಬಿಡುವುದರಿಂದ ವಿದ್ಯೆ ಬಂತೆ? ನನಗೆ ಇಂಗ್ಲಿಷು ಬರುತ್ತದೆಯೆ? ನಮ್ಮ ತಂದೆಯವರಿಗೆ ಬರುತ್ತಿತ್ತೆ? ನಮ್ಮೂರ ಶ್ಯಾನುಭೋಗರಿಗೆ ಬರುತ್ತಿತ್ತೆ. ಸಂಪತ್ಕುಮಾರನ್‌ರಿಗೆ ಬರುತ್ತಿತ್ತೆ? ಆದರೆ ಅವರ ಸಂಸ್ಕೃತ ಪಾಂಡಿತ್ಯ ಯಾರಿಗಿಂತ ಕಡಿಮೆ ಇತ್ತು? ಅವರು ಯಾರಿಗಾದರೂ ಹೆದರುತ್ತಿದ್ದರೆ? ಅವರಿಗೆ ಏನಾದರೂ ಅಂತಹ ಬಲವಾದ ಆಸ್ತಿ ಇತ್ತೆ? ಅಥವ ಅವರು ಸರ್ಕಾರದ ಅಧಿಕಾರದ ಆಸೆಯಿಂದ ವಿದ್ಯೆ ಕಲಿತರೆ? ಆ ವಿದ್ಯೆ ಕಲಿಯುವುದಕ್ಕೆ ಅವರು ಎಲ್ಲಿಗೆ ಹೋದರು? ಎಲ್ಲಾ ಇಲ್ಲೆ? ಈಗ ನೀವು ನೋಡಿ ಸುಮಾರು ಮುವ್ವತ್ತು ಜನ ಇದ್ದೀರಿ. ಲೋವರ್ ಸೆಕೆಂಡರಿ ಮಾಡಿದಿರಿ. ಕೊಸ್‌ಪಸ್ ಅಂತೆ ಸ್ವಲ್ಪ ಇಂಗ್ಲಿಷೂ ಕಲಿತಿರಿ. ಆದರೆ ಅದು ಸಾಲದು. ನಮ್ಮ ದೇಶದ ವಿದ್ಯೆ ಕಲಿಯಬೇಕು; ರಾಮಾಯಣ ಭಾರತ ಓದಬೇಕು. ಸಂಸ್ಕೃತ ಸಂಸ್ಕೃತಿ ನಮ್ಮ ಮೈಗೂಡಬೇಕು. ಇಂಗ್ಲಿಷ್‌ಗೆ ಹೋಗುವವರು ಹೋಗಲಿ. ಆದರೆ ಉಳಿದವರು ಸುಮ್ಮನೆ ಕೂತರೆ ಆಗುತ್ತದೆಯೆ? ವಿದ್ಯೆ ನಮ್ಮ ಹಕ್ಕು. ಇದೇ ನಮ್ಮ ಆಯುಧ. ಇದೇ ನಮ್ಮ ಬೆಳಕು. ಈ ಬೆಳಕನ್ನು ನಾವು ಬೆಳಗಬೇಕು. ನಿಮ್ಮ ಬುದ್ಧಿ ಚುರುಕಾಗಬೇಕಾದ್ದರೆ ಯಾವುದಾದರೂ ಒಂದು ವಿದ್ಯೆ ಇರಬೇಕು. ಕಲಿತ ವಿದ್ಯೆಗೆಲ್ಲಾ ಗಿರಾಕಿ, ಕೊಳ್ಳುವವರು ಇರಬೇಕೆಂದು ನಿರೀಕ್ಷಿಸಬೇಡಿ" ಎಂದು ಹೇಳುತ್ತಿದ್ದರು. ಅವರ ಮಾತು ಮಲ್ಲಿಗೆಹಳ್ಳಿಯ ಜನರಿಗೆ ಆಗ ಪಥ್ಯವಾಗಲಿಲ್ಲ. ಇದರ ಫಲವಾಗಿ ನಮ್ಮ ಪ್ರಾಂತ್ಯದಲ್ಲೆಲ್ಲಾ ವಿದ್ಯಾವಂತರ ಊರು ಎಂದು

ಹೆಸರು ಹೊಂದಿದ್ದ ಮಲ್ಲಿಗೆಹಳ್ಳಿ ಈಗ ಕಾಡುಜನರ ಗ್ರಾಮವಾಗಿದೆ. ಮನೆಯಲ್ಲಿ 60 ವರುಷದ ಮುದುಕ ಇದ್ದಾನೆ. ಸಣ್ಣ ಶ್ಯಾನುಭೋಗನೋ ಜಮೀನುದಾರನೋ ಪ್ರೈಮರಿ ಮೇಷ್ಟರೋ ಆಗಿದ್ದ. ಒಳ್ಳೆ ವಿದ್ಯಾವಂತ ಮಾತು ಮಾತಿಗೂ ಸಂಸ್ಕೃತ ಶ್ಲೋಕ ಹೇಳುತ್ತಾನೆ. ಅವನು ಧರಿಸಿರುವ ಬಟ್ಟೆಗೂ ಅವನ ಮಾತಿಗೂ ಸಂಬಂಧವೇ ಇಲ್ಲ. ವೈರಾಗ್ಯ ಜ್ಞಾನಕ್ಕೆ, ಅರಿವೆಯು ಆವರಣದಂತೆ ತೋರುತ್ತಾನೆ. ಅದೇ ಮನೆಯಲ್ಲಿ ಅವನ ಮಗ ಇದ್ದಾನೆ. ಅವನಂತೆಯೇ ಜೀವಿಸುತ್ತಿದ್ದಾನೆ. ಆದರೆ ಮುದುಕನ ಮುಖದ ತೇಜಸ್ಸು ಮಗನ ಮುಖದಲ್ಲಿ ಇಲ್ಲ. ಮಗನಿಗೆ ಒಂದು ಪಂಚಾಂಗ ನೋಡುವುದಕ್ಕೂ ಬರುವುದಿಲ್ಲ. ತಮ್ಮನೋ ಅಣ್ಣನೋ ಇಂಗ್ಲೀಷು ಓದಿ ಕೆಲಸದಲ್ಲಿದ್ದಾನೆ. ಅದು ಒಂದು ಕ್ರಮ. ಅವನ ಪಾಡಾಯಿತು. ಊರಲ್ಲಿರುವವನಿಗೆ ಇಂಗ್ಲೀಷೂ ಇಲ್ಲ ಕೆಲಸವೂ ಇಲ್ಲ. "ಶಿರವರ ಮೊರಟ್ಟು, ಒಡೆದು ಮಾಡಿದ್ದಲ್ಲ. ಕಡೆದು ಮಾಡಿದ್ದಲ್ಲ" ಏನು ಮಾಡುವುದು?

ಸುತ್ತಲ ಹಳ್ಳಿಗಳು ನೂರಕ್ಕೆ ಕಣ್ಣಾಗಿದ್ದ ಮಲ್ಲಿಗೆಹಳ್ಳಿ ಈಗ ತನ್ನ ಪ್ರಾಶಸ್ತ್ಯನ್ನು ಕಳೆದುಕೊಂಡಿತು. ಯಾವ ಯಾವ ಮನೆಗಳಲ್ಲಿ ಶಾಸ್ತ್ರ ಪುರಾಣ ಪ್ರವಚನ ಚರ್ಚೆಗಳು ನಮಗೇ ಜ್ಞಾಪಕವಿರುವಂತೆ ನಡೆಯುತ್ತಿದ್ದುವೋ ಅಲ್ಲಿ ಈಗ ಬರಿಯ ಇಸ್ಪೀಟ್ ಕಛೇರಿ ಮಾತ್ರ ನಡೆಯುತ್ತಿದೆ. ಪಂಚಾಂಗ ಜ್ಯೋತಿಷ್ಯಗಳನ್ನು ಕೇಳುವುದಕ್ಕೆ ಯಾವ ಮನೆಗೆ ಜನ ಬರುತ್ತಿತ್ತೋ, ಆ ಜನ ಈಗ, ಈ ಮನೆಯಲ್ಲಿ ಹಿಂದೆ ಕುಳಿತುಕೊಳ್ಳುತ್ತಿದ್ದವರ ಜಾಗದಲ್ಲಿ ಕುಳಿತಿರುವವನಿಗೂ ನಮಗೂ ವ್ಯತ್ಯಾಸವಿಲ್ಲ ಎಂದುಕೊಂಡು ಬಂದ ದಾರಿ ಹಿಡಿದು ಹೋಗುತ್ತಾರೆ. ಆ ಬಂದವರಿಗೆ ಜ್ಯೋತಿಷ್ಯ ಜಾತಕದಲ್ಲಿ ಮೂಢ ನಂಬಿಕೆ ತಪ್ಪಿ ಅವರು ನಾಗರಿಕರಾದರೆಂದಲ್ಲ. ಇವುಗಳಲ್ಲಿ ನಂಬಿಕೆ ಯಾರಿಗೂ ತಪ್ಪಿಲ್ಲ. ಅತ್ಯಂತ ಆಧುನಿಕರಾದವರೂ ಕೂಡ ಪತ್ರಿಕೆ ಬಂದ ಕೂಡಲೇ ಬಿಚ್ಚಿ ನೋಡುವುದು ಅವರ ರಾಶಿಯ ಫಲವನ್ನೇ. ಅಂದರೆ ಕೇಳುತ್ತಿದ್ದವನ ಸ್ವಭಾವ ಉಳಿದೇ ಇದೆ. ಹೇಳುತ್ತಿದ್ದವನ ಸಂಸ್ಕೃತಿ ಮಾತ್ರ ಹೋಯಿತು. ಯಾರು ಸಮಾಜಕ್ಕೆ ವಿದ್ಯಾ ಬುದ್ಧಿ—ಬರಿಯ ಜೀವನವನ್ನು ಸಂಪಾದಿಸಿಕೊಳ್ಳುವ ವಿದ್ಯೆ ಮಾತ್ರವಲ್ಲ—ನಿತ್ಯ ಜೀವನಕ್ಕೆ, ಸಂಸಾರ ಜೀವನಕ್ಕೆ ಆವಶ್ಯಕವಾದ ವಿದ್ಯೆಯನ್ನು ಕಲಿಸುವವನಾಗಿದ್ದನೋ ಅವನು ತಾನು ಕರ್ತವ್ಯ ಪರಾಂಗ್ಮುಖನಾದನು. ಇದರಿಂದ

ಸಮಾಜದ ಕೀಲು ಸಡಿಲವಾಯಿತು. ಸಮಾಜದ ಸಂಸ್ಕೃತಿಯೇ ಶಿಥಿಲ ವಾಯಿತು.

ಒಂದು ಉದಾಹರಣೆ ಗಮನಾರ್ಹವಾದುದು; ಮಲ್ಲಿಗೆಹಳ್ಳಿ ಶ್ಯಾನುಭೋಗ ಸಂಪತ್ಕುಮಾರನ್ ಒಳ್ಳೆಯ ಸಂಸ್ಕೃತ ವಿದ್ಯಾವಂತರು. ಅವರ ಪೋಟಿಕೆ ಶ್ಯಾನುಭೋಗತನದ ಉತ್ಪತ್ತಿ ವರುಷಕ್ಕೆ ನೂರೇ ರುಪಾಯಿ. 7-8 ಖಂಡುಗ ಭತ್ತ ಬರುತ್ತದೆ. ಅವರ ಮೊದಲನೆಯ ಮಗ ಬಿ.ಎ. ಪ್ಯಾಸ್ ಮಾಡಿದ್ದಾನೆ. "ಆ ಕಾಲ ಚೆನ್ನಾಗಿತ್ತು" ಒಂದು ಒಳ್ಳೆಯ ಹುದ್ದೆ ಸಿಕ್ಕಿತು. ಪಟ್ಟಣದಲ್ಲಿ ಸೇರಿಕೊಂಡರು. ಆದರೆ ಈಗಾಗಲೆ ಆ ಬಿ. ಎ. ರವರ ಮಕ್ಕಳಿಗೆ ಹುದ್ದೆ ದೊರೆಯುತ್ತಿಲ್ಲ. ಆದರೆ ಯಾವುದೋ ಒಂದು ವಿದ್ಯೆ ಅಂತೂ ಇಂಗ್ಲಿಷ್ ವಿದ್ಯಾವಂತರಾಗಿದ್ದಾರೆ. ಸಂಪತ್ಕುಮಾರನ್ ಒಳ್ಳೆಯ ಶಿಸ್ತಿನಿಂದ ಶ್ಯಾನುಭೋಗತನ ಮಾಡಿದರು. ಅಮಲ್ದಾರ್ ಡೆಪುಟಿ ಕಮಿಶನರ್ ದಿವಾನ್ ಸಾಹೇಬರು ಯಾರು ಬಂದರೂ ಅವರ ಎದುರಿಗೆ ತಮ್ಮ ಗಾಂಭೀರ್ಯವನ್ನು ಉಳಿಸಿಕೊಂಡು ಶ್ಯಾನುಭೋಗತನದ "ಹುಟ್ಟು ತಿರುವೆ" ತಮ್ಮ ಮೂಲಕ ಸ್ವಲ್ಪವೂ ಪ್ರಕಟವಾಗದಂತೆ "ಇಂತವರು ಇರುವವರೆಗೆ ನಮ್ಮ ಸಂಸ್ಕೃತಿಗೆ ಚ್ಯುತಿಯಿಲ್ಲ" ಎಂಬ ಭಾವವನ್ನು ಜನರಲ್ಲಿ ಉಂಟುಮಾಡುತ್ತಿದ್ದರು. ಬಂದ ಅಧಿಕಾರಿಗಳೆಲ್ಲ ಅವರನ್ನು ಗೌರವಿಸುತ್ತಿದ್ದರು. ಅವರನ್ನು ಹೊಂದಿದ್ದ ಶ್ಯಾನುಭೋಗತನ ಸಹಿತ ಒಂದು ಭೂಷಣವಾದ ಹುದ್ದೆಯಾಗಿಯೇ ತೋರಿತು. ಅವರು ಸ್ವರ್ಗಸ್ತರಾದ ಐದಾರು ವರುಷಗಳ ನಂತರ ಹಿಂದೆ ಅಮಲ್ದಾರರಾಗಿದ್ದವರು ಮತ್ತೆ ಸಬ್‌ಡಿವಿಜನ್ ಅಧಿಕಾರಿಗಳಾಗಿ ಮಲ್ಲಿಗೆ ಹಳ್ಳಿಗೆ ಬಂದರು. ಹಿಂದಿಲ ಶ್ಯಾನುಭೋಗರ ಮಗನೇ ಶ್ಯಾನುಭೋಗ ನಾಗಿದ್ದನು. ಅವನ ಮುಖಕ್ಕೆಲ್ಲಾ ಅವನ ತುಟಿಯ ಒಂದು ಬೆರಳು ದಪ್ಪ ಎಲೆ ಅಡಿಕೆಯೂ ಮೂಗಿನ ಸುತ್ತ ಉದುರಿದ್ದ ನಶ್ಯವೂ ಸಾಕಾಗಿದ್ದಿತು. ಮತ್ತು ಸಬ್‌ಡಿವಿಜನ್ ಸಾಹೇಬರು ಕೇಳಿದ ಪ್ರಶ್ನೆಗಳಿಗೆ ಶಾನುಭೋಗ ಉತ್ತರವನ್ನೂ ದಿಕ್ಕಾಪಾಲಾಗಿ ಕೊಡುತ್ತಿದ್ದನು. ಶೇಕದಾರನು ಶ್ಯಾನುಭೋಗನನ್ನು ಕುರಿತು ಹೇಳುತ್ತಿದ್ದ ಮಾತುಗಳೂ, ತಿರಸ್ಕಾರ ದಿಂದಲೇ ಕೂಡಿದ್ದುವು. ಸಬ್‌ಡಿವಿಜನ್ ಸಾಹೇಬರು "ಏನ್ರಿ ಇದು? ನಿಮ್ಮ ಶ್ಯಾನುಭೋಗತನ! ನಿಮ್ಮ ಗೌರವ ಉಳಿಸಿಕೊಳ್ಳೋಕೆ ನಿಮಗೆ

ತಿಳಿಯೋದಿಲ್ಲ. ಸರ್ಕಾರದ ಕೆಲಸ ಎಷ್ಟೋ ಅಷ್ಟನ್ನ ನಿಮ್ಮ ಪಾಡಿಗೆ ನೀವು ಮಾಡಿಕೊಂಡಿರೋದಕ್ಕೆ ನಿಮಗೇನು ಕಷ್ಟ? ಈ ಊರಿನಲ್ಲಿದ್ದೂ ಹೀಗೆ ಮಾಡ್ತೀರೆಲ್ರಿ. ಈ ಊರು ಸಂಪತ್ಕುಮಾರನ್ ನಿಮ್ಮಂತೆಯೇ ಶ್ಯಾನುಭೋಗರಾಗಿದ್ದರೆಲ್ರಿ. ಸ್ವಲ್ಪ ಅವರ ವಿಚಾರ ತಿಳಿದು ಅವರಂತೆ ಇರಿಪ್ಪ'' ಎಂದರು. ಶೇಕದಾರರು ''ಇವರು ಅವರ ಮಕ್ಕಳೇ ಸ್ವಾಮಿ'' ಎಂದರು. ಸಬ್‌ಡಿವಿಜನ್ ಸಾಹೇಬರು ಕೂಡಲೇ ಕುರ್ಚಿಯಿಂದ ಎದ್ದು ನಿಂತುಕೊಂಡು ''ಸ್ವಾಮಿ ನಿಮಗೆ ನಮಸ್ಕಾರ ಮಾಡುತ್ತೇನೆ. ಅಂತಹ ಪುಣ್ಯಾತ್ಮರ ಮಕ್ಕಳಾಗಿ ಹುಟ್ಟಿದ ನೀವೇ ಧನ್ಯರು. ಅವರ ಹೆಸರನ್ನು ಜ್ಞಾಪಿಸಿಕೊಂಡ ಕೂಡಲೇ ನನಗೆ ತೀರ್ಥಯಾತ್ರೆ ಮಾಡಿದ ಅನುಭವ ವುಂಟಾಗುತ್ತದೆ'' ಎಂದರು. ಒಂದು ಗಳಿಗೆ ಬಿಟ್ಟು ''ಆ ವಿದ್ಯೆ ಆ ಸಂಸ್ಕೃತಿ ಆ ರಸಿಕತೆ ಎಲ್ಲಾ ಎಲ್ಲಿಹೋಯಿತಿರಿ? ನಿಮಗೆ ಯಾವ ಮಂಕು ಬಂದು ಆವರಿಸಿತರಿ'' ಎಂದು ಹೇಳಿ ಶ್ಯಾನುಭೋಗನ ಜಮಾಬಂದಿ ಯನ್ನು ಹೇಗೋ ಮುಗಿಸಿದರು.

ಈ ಸಬ್‌ಡಿವಿಜನ್ ಆಫೀಸರು ಹಿಂದೆ ಅಮಲ್ದಾರರಾಗಿದ್ದಾಗ ಮಲ್ಲಿಗೆಹಳ್ಳಿಗೆ ಬಂದರೆ, ಸಾಧಾರಣವಾಗಿ ಒಂದು ಗಂಟೆ ಸಂಪತ್ಕುಮಾರನ್‌ರವರ ಜತೆಯಲ್ಲಿ ಮಾತುಕಥೆ ಆಡುತ್ತಿದ್ದರು. ಸಂಪತ್ಕುಮಾರರವರು ಕಾಳಿದಾಸ, ವಾಲ್ಮೀಕಿ, ಮಹಾಭಾರತ, ಕುಮಾರವ್ಯಾಸ ಇವರುಗಳಿಂದ ಆಗಾಗ್ಗೆ ಶ್ಲೋಕಗಳನ್ನೂ ಪದ್ಯಗಳನ್ನೂ ಹೇಳುತ್ತಾ ಯಾವ ವಿಷಯ ದಲ್ಲಿಯೂ ಬಹಳ ಸ್ವಾರಸ್ಯವಾಗಿ ಮಾತನಾಡುತ್ತಿದ್ದರು. ಅಮಲ್ದಾರರು ''ಇವರ ಮಾತು ಎಷ್ಟು ಚೆನ್ನ. ಪ್ರತಿ ಮಾತೂ ಒಂದೊಂದು ಮುಕ್ತಾ ಫಲವೆಲ್ಲ'' ಎನ್ನುತ್ತಿದ್ದರು. ಸಂಪತ್ಕುಮಾರನ್‌ರವರ ವ್ಯವಹಾರ ಜ್ಞಾನವೂ ಬಹಳ ಚೆನ್ನಾಗಿದ್ದಿತು. ಅಮಲ್ದಾರರಿಗೆ ಅದರ ಎರಡು ಮೂರು ಉದಾಹರಣೆಗಳು ಗೊತ್ತಾಗಿದ್ದುವು. ಒಂದು ಸಲ ಪರಸ್ಥಳದ ಒಬ್ಬ ಮಹನೀಯರು ದೇವಸ್ಥಾನಕ್ಕೆ ಬಂದಿದ್ದರು. ಮಲ್ಲಿಗೆಹಳ್ಳಿ ದೇವ ಸ್ಥಾನದಲ್ಲಿ ಪೂರ್ವಿಕರು ಮಾಡಿದ ಸೇವೆ ತ್ಯಾಗಗಳಿಗಾಗಿ ಅವರಿಗೆ ಮಾಲೆ ತೀರ್ಥ ಮೊದಲಾದ ಯಾವುದೋ ಕೆಲವು ಬಹುಮಾನಗಳು ದೊರೆ ತಿದ್ದುವು. ಅವು ಆ ಪೂರ್ವಿಕರ ವಂಶದವರಾದ ಮಲ್ಲಿಗೆಹಳ್ಳಿಯವರಿಗೂ ದೊರೆತಿದ್ದುವು. ಆದರೆ ಈ ಪೀಳಿಗೆಯ ಜನ, ದೇವಸ್ಥಾನಕ್ಕೆ ಹೋಗು

ವುದೇ ತಿಂಗಳಿಗೆ ಒಂದು ದಿನ. ಹೋದರೂ ಆ ಬಹುಮಾನವನ್ನು ಕಾಯದೆ ಎಲ್ಲಿಯೋ ಹೊರಗಡೆ—ಅಂಗಿ ಬಿಚ್ಚಿ ಒಳಗೆ ತೀರ್ಥ ತೆಗೆದು ಕೊಳ್ಳಲಾರದುದಕ್ಕೆ—ನಿಂತಿದ್ದು—ಮನೆಗೆ ಬರುತ್ತಿದ್ದರು. ಮೊದಲನೆಯ ತೀರ್ಥ [ಅರ್ಚಕ ಗರ್ಭಗುಡಿಯಿಂದ ಹೊರಕ್ಕೆ ಬಂದು ಮೊದಲು ತೀರ್ಥ ಕೊಡುವುದು ಮೊದಲ ತೀರ್ಥ. ಎರಡನೆಯವರಿಗೆ ಕೊಡುವುದು ಎರಡ ನೆಯ ತೀರ್ಥ]. ಈ ಮರ್ಯಾದೆಯ ದೃಷ್ಟಿಯಿಂದ ಸಂಪತ್ಕುಮಾರನ್‌ರಿಗೆ ಬರಬೇಕಾಗಿದ್ದಿತು. ಆ ದಿವಸ ಪರಸ್ಥಳದಿಂದ ಬಂದಿದ್ದವರು ದೇವಸ್ಥಾ ನದ ಕೈಸಾಲೆ ಕಟ್ಟುವುದಕ್ಕಾಗಿ ಮೂರು ಸಾವಿರ ರುಪಾಯಿ ಚಂದಾ ಕೊಟ್ಟಿದ್ದರು. ಸಂಪತ್ಕುಮಾರನ್‌ರವರು ದೇವಸ್ಥಾನದಲ್ಲಿ ಮೊದಲು ಆ ಪರಸ್ಥಳದ ಮಹನೀಯರಿಗೆ ತೀರ್ಥ ಕೊಡಿಸಿದರು. ಆದರೆ ಎರಡನೆಯ ತೀರ್ಥ ತೆಗೆದುಕೊಳ್ಳಬೇಕಾಗಿದ್ದವರು ತಮ್ಮ ಮುಂದಕ್ಕೆ ತೀರ್ಥ ಬಂದಾಗ "ಹೋ ನಾನು ತೆಗೆದುಕೊಳ್ಳುವುದಿಲ್ಲ. ಮೊದಲನೆಯ ತೀರ್ಥ ಅವರಿಗೆ ಯಾಕೆ ಕೊಟ್ಟೆ" ಎಂದು ಗದ್ದಲ ಎಬ್ಬಿಸಿದರು. ಆ ಎರಡ ನೆಯ ತೀರ್ಥದವರು ಯಾವಾಗಲೂ ದೇವಸ್ಥಾನಕ್ಕೆ ಬರುತ್ತಿರಲಿಲ್ಲ. ಬಂದರೂ ಎರಡನೆಯ ತೀರ್ಥ ಎಂದಾಗ "ಕೊಡಿ ಚಿಂತೆಯಿಲ್ಲ" ಎಂದು ಇತರರಿಗೆ ಕೊಡಿಸುತ್ತಿದ್ದವರು ಇವತ್ತು ಹೀಗೆ ಕೂಗಿದರು. ಸಂಸ್ಕೃತಿ ಪೂರ್ಣವಾಗಿ ಕಡಮೆಯಾಗಿ ಒಂದು ಕಡೆ ಇಂಗ್ಲಿಷೂ, ಒಂದು ಕಡೆ ಸಂಸ್ಕೃತ ಕನ್ನಡವೂ ಇಲ್ಲದ ಜನ ಹೀಗೆ ವ್ಯಾಜ್ಯಕ್ಕೆ ಕಾರಣ ಸಿಕ್ಕುತ್ತ ದೆಯೋ ಎಂದೇ ಕಾಯ್ದುಕೊಂಡಿರುತ್ತಾರೆ. ಇವರು ಸಾಮಾನ್ಯವಾಗಿ ಮುರಿಯುವುದು ತಮ್ಮ ಮನೆಯವರ ಸೊಂಟವನ್ನೇ. ಈ ಗದ್ದಲ ಎದ್ದದ್ದು ನೋಡಿದ ಕೂಡಲೇ ಆ ಪರಸ್ಥಳದ ದೊಡ್ಡ ಮನುಷ್ಯರಿಗೆ ಭಯ ವುಂಟಾಯಿತು. "ಒಳ್ಳೆಯವರ ಮಾನ ಹಳ್ಳಿಯಲ್ಲಿ ಹೋಯಿತು ಎಂಬಂತೆ ಎಲ್ಲಿ ಬಂದು ಸಿಕ್ಕಿಕೊಂಡೆನಪ್ಪ. ಈ ಅರ್ಚಕ ಮುಟ್ಟಿದ ನೀರೇ ಇವರಿಗೆ ದೊಡ್ಡದಾಗಿದ್ದರೆ ಇಟ್ಟುಕೊಳ್ಳಲಿ. ನನಗೆ ಮೊದಲನೆಯ ತೀರ್ಥವೂ ಬೇಡ. ಕಡೆಯ ತೀರ್ಥವೂ ಬೇಡ. ಭಗವಂತ ಮಾತ್ರ ಈ ಕಾಗೆಗಳಿಗೆ ವಿವೇಕವನ್ನು ಕೊಡಲಿ" ಎಂದು ಪ್ರಾರ್ಥಿಸಿದರು. ಅರ್ಚಕ ಮುಂದೆ ತೀರ್ಥವನ್ನು ಕೊಡಲಿಲ್ಲ. ದೇವಸ್ಥಾನದಲ್ಲಿ ಪಂಚಾಯ್ತಿ ಸೇರಿಬಿಟ್ಟಿತು.

ಪರಸ್ಥಳದ ದೊಡ್ಡ ಮನುಷ್ಯರಿಗೆ ಹಳ್ಳಿಯವರ ಮಾತನ್ನೂ ಅದರ

ಮಟ್ಟವನ್ನೂ ಅವರ ಸಂಸ್ಕೃತಿಯನ್ನೂ ನೋಡಿ, "ಸಂಪತ್ಕುಮಾರನ್ ಮುಂತಾದ ಹಿರಿಯರು ಇರುವವರೆಗೆ ಇದೊಂದು ಊರು. ಅನಂತರ ಇದು ಅವಿವೇಕಿಗಳ ಶ್ಮಶಾನವಾಗುತ್ತೆ" ಎಂದು ತೋರಿತು. ಎರಡು ಮೂರು ನಾಲ್ಕನೇ ತೀರ್ಥದ ಮೂರು ಜನರೂ ಸಂಪತ್ಕುಮಾರನ್‌ರವರನ್ನು ಆಕ್ಷೇಪಿಸಿದರು. ಸಂಪತ್ಕುಮಾರನ್‌ರವರು ಅವರನ್ನು ಕುರಿತು "ಸ್ವಾಮಿ, ದೇವರಿಗೆ ನಮ್ಮ ಪೂರ್ವಿಕರು ಅದಾವ ಸೇವೆ ಮಾಡಿದರೋ ಅವರ ಪೂರ್ವ ಪುಣ್ಯದಿಂದ ಈ ತೀರ್ಥದ ಗೌರವ ನಮಗೆ ಸಿಕ್ಕುತ್ತಿದೆ. ಆದರೆ ಆ ಪೂರ್ವಿಕರೇನಾದರೂ ಇರುವ ಜಾಗದಿಂದ ನೋಡಿದರೆ ತಮ್ಮ ಗೌರವವನ್ನು ತೆಗೆದುಕೊಳ್ಳುತ್ತಿರುವ ಈ ಮಡ್ಡಿಗಳನ್ನು ನೋಡಿ ಕಣ್ಣೀರು ಸುರಿಸಿಯಾರು? ಅವರೇನೋ ಆ ಸೇವೆ ದೇವರಿಗೆ ಮಾಡಿದರು ಅಂದರೆ ನಾವು ಯಾವ ಸೇವೆ ಮಾಡುತ್ತಿದ್ದೇವೆ ಸ್ವಾಮಿ? ನಾವು ದೇವಸ್ಥಾನಕ್ಕೆ ತಿಂಗಳಿಗೆ ಒಂದು ದಿನ ಬರುವುದಿಲ್ಲ. ಒಂದು ಮಂತ್ರ ತಂತ್ರ ಆರಾಧನೆ ವೇದಭಾಗ ಸಂಸ್ಕೃತ ಶ್ಲೋಕ ಶಾತ್ತುಮೊರೆ ಯಾವುದಾದರೂ ನಮಗೆ ಬರುತ್ತದೆಯೇ ಸ್ವಾಮಿ. ಅದೂ ಹೋಗಲಿ. ಭಗವಂತನ ಸೇವೆ ಅಂದರೆ ಈ ಬಂದ ಮಹನೀಯರು ಈಗ ಕೈಸಾಲೆಗೆ ಕೊಟ್ಟಿರುವ ಮೂರು ಸಾವಿರ ರೂಪಾಯಿ ಭಗವಂತನ ಸೇವೆ ಅಲ್ಲವೆ ಸ್ವಾಮಿ? ಅಷ್ಟು ದಿವಸದಿಂದ ತೀರ್ಥ ಕುಡಿಯುತ್ತಿರುವ ನೀವು ದೇವಸ್ಥಾನಕ್ಕಾಗಿ ಒಂದು ಆಣೆ ಕೊಟ್ಟಿದ್ದೀರಾ ಸ್ವಾಮಿ. ಇದು—ಈಪರಸ್ಥಳದವರ ಸೇವೆ—ಯಾವ ಪೂರ್ವಿಕರಿಗೆ ಈ ತೀರ್ಥವನ್ನು ಕೊಡೋಣವಾಯಿತೋ ಆ ಪೂರ್ವಿಕರ ಸೇವೆಗಿಂತ ಕಡಿಮೆಯಾದುದಲ್ಲ. ಇವರು ಈ ರೂಪದಿಂದ ನಮ್ಮೂರ ದೇವರಿಗೆ ನಮಗಿಂತ ಹೆಚ್ಚು ಸೇವೆ ಸಲ್ಲಿಸಿರುವುದರಿಂದ ನನ್ನ ಪಾಲಿನ ಮೊದಲ ತೀರ್ಥವನ್ನು ಇವರಿಗೆ ಕೊಡಿಸಿದೆ" ಎಂದರು. ಎರಡನೆಯ ತೀರ್ಥದವನು "ಹಾಗಾದರೆ ನೀವು ಮತ್ತೆ ಮೊದಲನೆಯ ತೀರ್ಥ ತೆಗೆದುಕೊಳ್ಳುವುದಿಲ್ಲವೋ" ಎಂದು ಕೇಳಿದನು. ಸಂಪತ್ಕುಮಾರನ್‌ಗೆ ಈ ಮಾತಿಗೆ ಜವಾಬು ಕೊಡುವುದು ಬಹಳ ಕಷ್ಟವಾಯಿತು.

ಒಂದು ಕಾಲವಿದ್ದಿತು. ಆಗ ತೀರ್ಥಕ್ಕಾಗಿ ಜನ ಹೊಡೆದಾಡುತ್ತಿದ್ದರು ಸಾವಿರಾರು ರುಪಾಯಿ ಖರ್ಚು ಮಾಡುತ್ತಿದ್ದರು. ಪ್ರಾಣಬೇಕಾದರೂ ಕೊಡುತ್ತಿದ್ದರು. ಅಂತಹ ಕಾಲ ಸಾಧ್ಯವೆಂದು ಸಂಪತ್ಕುಮಾರನ್

ರವರಿಗೆ ಗೊತ್ತಿದ್ದಿತು. ತೀರ್ಥಕ್ಕಾಗಿ ದೇವರಿಗಾಗಿ ಪ್ರಾಣತ್ಯಾಗ ಮಾಡುವ ಜನರಿದ್ದ ಕಾಲದಲ್ಲಿ ಅವರು ಈಗಿನಷ್ಟು ಸುಲಭವಾಗಿ ಜವಾಬು ಕೊಡಲು ಸಾಧ್ಯವಾಗುತ್ತಿರಲಿಲ್ಲ. ಒಂದು ಸಲ ರಾಮೇಶ್ವರದ ದೇವಸ್ಥಾನ ಲೂಟಿ ಮಾಡುವುದಕ್ಕೆ ತುರುಕರು ಸೈನ್ಯದೊಂದಿಗೆ ಹೋದರಂತೆ, ಸೈನ್ಯವೆಲ್ಲಾ ಬಾಗಿಲಿನಲ್ಲಿ ಬಂದು ನಿಂತಿತು. ಬ್ರಾಹ್ಮಣರೂ ಬಾಗಿಲಿನಲ್ಲಿ ನಿಂತಿದ್ದರು. ಬ್ರಾಹ್ಮಣರ ಹತ್ತಿರವೂ ಆಯುಧಗಳಿವೆ ಎಂದು ವದಂತಿ ಹೊರಟಿದ್ದುದರಿಂದ ತುರುಕರು ಸ್ವಲ್ಪ ಯೋಚಿಸುತ್ತಾ ನಿಂತಿದ್ದರು. ಆಗ ಒಬ್ಬ ಬ್ರಾಹ್ಮಣ ದೇವಸ್ಥಾನದ ಗೋಪುರದ ಮೇಲು ಭಾಗಕ್ಕೆ ಹತ್ತಿ ನಿಂತುಕೊಂಡ. ಗೋಪುರ ಒಳ್ಳೆಯ ಎತ್ತರವಾಗಿದ್ದುದರಿಂದ, ಅದರ ಮೇಲೆ ಆಕಾಶದಲ್ಲಿ ಮೋಡಗಳು ಹೋಗುತ್ತಿದ್ದರೆ ಗೋಪುರ ತೂರಾಡುತ್ತಿರುವಂತೆ ಕಾಣುತ್ತಿದ್ದಿತು. ಅದರ ಜತೆಯಲ್ಲಿ ಬ್ರಾಹ್ಮಣನೂ ತೂರಾಡುವಂತೆ ತೋರುತ್ತಿದ್ದನು. ನೆರೆದಿದ್ದ ಬ್ರಾಹ್ಮಣರೂ ತುರುಕರೂ ಲೂಟಿಯ ಯೋಚನೆ ಬಿಟ್ಟು ಆ ಬ್ರಾಹ್ಮಣನ ಕಡೆಯೇ ನೋಡತೊಡಗಿದರು. ಬ್ರಾಹ್ಮಣ ಹೀಗೆ ಗಟ್ಟಿಯಾಗಿ ಕೂಗಿ ಹೇಳಿದ. "ಈ ದೇವಸ್ಥಾನದೊಳಕ್ಕೆ ನೀವು ಲೂಟಿ ಮಾಡಲು ಪ್ರವೇಶಿಸಿದರೆ ನಿಮ್ಮ ತಲೆ ಸಹಸ್ರ ಹೋಳಾಗುವುದರಲ್ಲಿ ಸಂದೇಹವಿಲ್ಲ. ನಾವು ಸಾವಿಗೆ ಖಂಡಿತ ಹೆದರುವುದಿಲ್ಲ. ಅದಕ್ಕೆ ಇಗೋ ನೋಡಿ ಇದೇ ಸಾಕ್ಷಿ" ಹೀಗೆ ಹೇಳಿಕೊಂಡು ಬ್ರಾಹ್ಮಣ ಜನರು ಹೊ ಹೊ ಎಂದು ಕೂಗುತ್ತಿರುವಾಗಲೆ ಗೋಪುರದಿಂದ ತಲೆ ಮುಂದಾಗಿ ಕೆಳಕ್ಕೆ ಬಿದ್ದುಬಿಟ್ಟನು. ಅವನು ಬಿದ್ದ ಪೆಟ್ಟಿಗೆ ಅವನ ತಲೆ ಸಹಸ್ರಾರು ಚೂರುಗಳಾಯಿತು. ಚೂರುಗಳು ಗಾಳಿಯಲ್ಲಿ ಹಾರಿ ಹೋದವು. ತುರುಕರಿಗೂ ಹಿಂದೂಗಳಿಗೂ ಏಕಕಾಲದಲ್ಲಿ ಭಯವುಂಟಾಯಿತು. ತುರುಕರು ಈ ತ್ಯಾಗವನ್ನು ಸಹಿಸಲಾರದೆ ಲೂಟಿಯ ಯೋಚನೆಯನ್ನು ಬಿಟ್ಟು ಬಂದ ದಾರಿ ಹಿಡಿದುಕೊಂಡು ಹಿಂದಿರುಗಿದರು. ಇಂತಹ ಕಾಲ ಸಂಪತ್‌ಕುಮಾರನ್‌ರಿಗೆ ಗೊತ್ತು. ಆ ಕಾಲದಲ್ಲಿ ಅವರು ತೀರ್ಥ ಬೇಡವೆಂದು ಉತ್ತರ ಕೊಡುತ್ತಿರಲಿಲ್ಲ. ಆದರೆ ಈಚಿನ ಅವರ ಅನುಭವದಲ್ಲಿ ದೇವಸ್ಥಾನಕ್ಕಾಗಲಿ ದೇವರಿಗೆ ಆಗಲಿ ಪ್ರಾಣ ಕೊಡುವವರು ಯಾರೂ ಇರುವಂತೆ ತೋರಿರಲಿಲ್ಲ. ದೇವರೂ ಇರಲಿ; ಒಂದು ಹೆಂಗಸನ್ನು ಬಂದು ಎತ್ತಿಕೊಂಡು ಹೋಗಿದ್ದರೂ ಪ್ರಾಣವನ್ನು ಕೊಟ್ಟು

ಆ ಹೆಂಗಸನ್ನು ರಕ್ಷಿಸುವ ಧೀರರು ನಮ್ಮಲ್ಲಿ ಯಾರೂ ಇಲ್ಲವೆಂದು ಅವರಿಗೆ ಗೊತ್ತಾಗಿದ್ದಿತು. ಶಿವಾಜಿ ಪ್ರತಾಪಸಿಂಹರ ಧೀರರ ದೇಶ, ಯಾವುದಾವುದೋ ಕಾರಣಕ್ಕಾಗಿ ಒಳ್ಳೆ ಹೇಡಿಗಳ ದೇಶವಾಯಿತು. ಸಂಪತ್ಕುಮಾರನ್‌ರವರು "ಬಿಟ್ಟೆ ನಾನು ಇನ್ನು ಮೊದಲನೆಯ ತೀರ್ಥವನ್ನು ತೆಗೆದುಕೊಳ್ಳುವುದಿಲ್ಲ. ಅದನ್ನು ನನಗಿಂತ ಹೆಚ್ಚು ಅರ್ಹರಾದ ಮೂರು ಸಾವಿರ ರುಪಾಯಿ ದಾನ ಕೊಟ್ಟಿರುವ ಇವರಿಗೆ ಮಾರಿದ್ದೇನೆ. ಹೋಗಲಿ. ರಥೋತ್ಸವದ ದಿನದ ನನ್ನ ಮೊದಲಿನ ಮಾಲೆಯನ್ನು ಮಾರುತ್ತೇನೆ. ನಿಮ್ಮಲ್ಲಿ ಯಾರಾದರೂ ದೇವಸ್ಥಾನದ ಗೋಪುರದ ಕೆಲಸಕ್ಕೆ 500 ರುಪಾಯಿ ಕೊಡಿ" ಎಂದರು. ನೀರಿನ (ತೀರ್ಥದ) ಧೀರರು ಯಾರೂ ಜವಾಬು ಕೊಡಲಿಲ್ಲ. ಸಂಪತ್ಕುಮಾರನ್ "ಬೇಡ. 50 ರೂಪಾಯಿ ಕೊಟ್ಟು ವಹಿಸಿಕೊಳ್ಳಿ" ಎಂದರು. ಯಾರೂ ಉಸಿರಾಡಲಿಲ್ಲ.

ಸಂಪತ್ಕುಮಾರನ್‌ರು ಕೋಪದಿಂದ "ನಿಮ್ಮ ಪೂರ್ವಿಕರು ಮಾಡಿದುದನ್ನು ಉಳಿಸಿಕೊಳ್ಳಲು ನೀವು ಕೊಡುವ ಬೆಲೆ ಇದು! ನಿಮಗೆ ಒಂದು ಕಾಸಿಗೂ ಬೇಡವಾದುದನ್ನು ಮೂರು ಸಾವಿರ ರೂಪಾಯಿಗೆ ಇವರಿಗೆ ನಾನು ಮಾರಿಬಿಟ್ಟೆ. ಆದರಲ್ಲಿ ಅವರ ದೊಡ್ಡಸ್ತಿಕೆ ಗೊತ್ತಾಗುತ್ತದೆ. ಐವತ್ತು ರುಪಾಯಿಗಳಿಗೆ ಕೊಳ್ಳುವವರಿದ್ದರೂ ನಿಮ್ಮ ತೀರ್ಥಗಳನ್ನು ನೀವು ಮಾರುತ್ತೀರಿ. ಪೂರ್ವಿಕರ ಹೆಸರು ಹೇಳುವುದಕ್ಕೆ ನಾಲಿಗೆ ದೊಡ್ಡದು ಮಾಡುತ್ತೀರಿ" ಎಂದರು. ಪರಸ್ಥಳದಿಂದ ಬಂದಿದ್ದ ಮಹನೀಯರು "ನಿಮ್ಮ ತೀರ್ಥ ನನಗೆ ಬೇಡ ಸ್ವಾಮಿ, ಹೇಮಾವತಿಯಲ್ಲಿ ನೀರಿಗೆ ಕಡಿಮೆ ಇಲ್ಲ. ನಿಮ್ಮ ಊರಿನ ಸಹವಾಸವೂ ಬೇಡ, ಏನೋ ಪೂರ್ವಿಕರ ಹೆಸರಿನ ಮೇಲೆ ಇಲ್ಲಿಗೆ ಬಂದೆ. ನಿಮ್ಮ ಮಾತಿನ ಮೇಲೆ ಹಣ ಕೊಟ್ಟೆ. ಇನ್ನು ಈ ಕಾಡಿಗೆ ತಲೆ ಹಾಕುವುದಿಲ್ಲ. ನಿಮ್ಮ ನೀರು ನೀವೇ ಕುಡಿದುಕೊಳ್ಳಿ" ಎಂದು ಹೇಳಿ ಹೊರಟುಹೋದರು. ಅಲ್ಲಿಂದ ಆಚೆಗೆ ಸಂಪತ್ಕುಮಾರನ್‌ರವರು ಯಾವಾಗಲೂ, ದೇವಸ್ಥಾನದಲ್ಲಿ ಸ್ತ್ರೀ ಪುರುಷರಿಗೆಲ್ಲಾ ಆದ ಮೇಲೆ ಕೊನೆಯಲ್ಲಿ ತೀರ್ಥ ತೆಗೆದುಕೊಳ್ಳುತ್ತಿದ್ದರು. ಯಾರಾದರೂ ತೀರ್ಥದ ವಿಚಾರದಲ್ಲಿ ಬಾಲ ಬಿಚ್ಚಿದರೆ "ನಿನ್ನ ತೀರ್ಥಕ್ಕೆ ಮೂರು ಕಾಸೂ ಬೆಲೆಯಿಲ್ಲ, ನಿನ್ನ ನೀರು ನೀನು ಕುಡಿದುಕೊ" ಎನ್ನುತ್ತಿದ್ದರು. ಆದೇ ದಿನ ಹಾಸನನಲ್ಲಿ ಅಮಲ್ದಾರರನ್ನು ಕಂಡ ಪರಸ್ಥಳದ ಆ

ದೊಡ್ಡ ಮನುಷ್ಯರು ಅವರಿಗೆ ನಡೆದ ಸಮಾಚಾರವನ್ನೆಲ್ಲಾ ತಿಳಿಸಿ "ನಾನು ದೇವರಿಗಾಗಿ ಹಣಕೊಡಲಿಲ್ಲ. ದೇವರಿಗೆ ಸಮಾನನಾದ ಮನುಷ್ಯನಿಗಾಗಿ ಕೊಟ್ಟೆ. ಇವತ್ತು ಸಂಪತ್ಕುಮಾರನ್ ಇಲ್ಲದೆ ಇದ್ದಿದ್ದರೆ ದೇವರ ಎದುರಿಗೆ ಮಾರಾಮಾರಿಯಾಗುತ್ತಿದ್ದಿತು ಎಂದು" ಹೇಳಿದರು.

ಹಿಂದೂ ಸಂಸ್ಕೃತಿಯನ್ನು ಉಳಿಸಿಕೊಳ್ಳುವುದರಲ್ಲಿಯೂ ಸಂಪತ್ಕುಮಾರನ್ ಅಷ್ಟೇ ದಕ್ಷರಾಗಿದ್ದರು. ಮಲ್ಲಿಗೆಹಳ್ಳಿಯಲ್ಲಿ ದೇವಸ್ಥಾನ ಹೊಳೆಯ ತೀರದಲ್ಲಿದೆ. ಅನೇಕ ಹೆಚ್ಚುಗಟ್ಟಲೆ ದಿನಗಳಲ್ಲಿ ದೇವರ ಮೆರವಣಿಗೆ ಉತ್ಸವ ಊರೊಳಕ್ಕೆ ಬರುತ್ತದೆ. ಆ ದಾರಿಯಲ್ಲಿ ಎರುಡ ಮೂರು ತುರುಕರ ಮನೆ ಇವೆ. ಹಿಂದೆ ಮೆರವಣಿಗೆ ಬರುತ್ತಿರುವಾಗ ವೃದ್ಧರಾದ ತುರುಕರು ಕುಳಿತಿದ್ದರೆ ಎದ್ದು ನಿಲ್ಲುತ್ತಿದ್ದರು. ಇಲ್ಲ ಒಳಕ್ಕೆ ಹೋಗಿಬಿಡುತ್ತಿದ್ದರು. ಈಚೆಗೆ ಯಾವಾಗಲೋ ಒಂದು ಸಲ ಹೀಗೆ ದೇವರ ಮೆರವಣಿಗೆ ಬರುತ್ತಿರುವಾಗ ಬಾಗಿಲಲ್ಲಿ ಬೀಡಿ ಸೇದುತ್ತಾ ಕಾಲು ನೀಡಿಕೊಂಡು ಕುಳಿತಿದ್ದ ತುರುಕರು, ಯಾರೋ ಪೋಕರಿ ತುರುಕರ ಮಾತು ಕೇಳಿಕೊಂಡು ಏಳಲಿಲ್ಲ. ಉತ್ಸವದಲ್ಲಿ ಹಿಂದುಗಳು ಬೆಸ್ತರು ಜಟ್ಟಿಗಳು ಇವರ ಸಂಖೆ ಅಸಂಖ್ಯಾತವಾಗಿದ್ದಿತು. ಅವರೆಲ್ಲ ಕಣ್ಣು ಕೆಂಪಗೆ ಮಾಡಿಕೊಂಡು ಎದ್ದರು. ಒಬ್ಬ ತುರುಕ ಪಚ್ಚಡಿಯಾಗುವುದರಲ್ಲಿ ಸಂದೇಹವಿರಲಿಲ್ಲ. ಯಾರು ಯಾರೋ ಏನು ಏನೋ ಮಾಡಿ ಗದ್ದಲವಿಲ್ಲದಂತೆ ಉತ್ಸವ ಸಾಗಿಸಿಕೊಂಡು ಹೋದರು. ತುರುಕರು ಜಬರ್ದಾಗಿ ಕಾಲು ನೀಡಿಕೊಂಡು ಬೀಡಿ ಸೇದುತ್ತಲೇ ಇದ್ದರು. ಹಿಂದೂಗಳ ದೇವರು ಬಂದುದರಿಂದ ಅವರು ಏಳಲಿಲ್ಲವೆಂದಲ್ಲ. ತುರುಕರ ದೇವರು ಬಂದಿದ್ದರೂ ಅವರು ಏಳುತ್ತಿರಲಿಲ್ಲ. ಅವರ ವಿದ್ಯಾ ಬುದ್ಧಿ ಸಂಸ್ಕೃತಿಗಳು ಆ ಮಟ್ಟದಲ್ಲಿದ್ದುವು.

ತುರುಕರ ಮನೆ ಮುಂದೆ ಹಿಂದೂ ದೇವರ ಮೆರವಣಿಗೆ ಬರುವಂತೆಯೇ ಹಿಂದೂಗಳ ಬೀದಿಯಲ್ಲಿಯೂ ತುರುಕರ ಮೊಹರಂ ಮೆರವಣಿಗೆ ಬರುತ್ತದೆ. ಮಲ್ಲಿಗೆಹಳ್ಳಿಯಲ್ಲಿ ತುರುಕರು ಇರುವುದು ಒಂದೇ ಜಾಗದಲ್ಲಿ ಯಾದರೂ ಅವರು ಮೊಹರಂ ಮೆರವಣಿಗೆ ಊರಿನ ನಾಲ್ಕು ಬೀದಿಗಳಲ್ಲಿಯೂ ಬರುತ್ತಾರೆ. ಮತ್ತು ಎಲ್ಲಾ ಹಿಂದುಗಳಿಂದಲೂ ಮೊಹರಂ ಚಂದಾ ವಸೂಲ್ಮಾಡುತ್ತಾರೆ. ಆ ವರುಷ ಈ ಹಿಂದುಗಳ ಉತ್ಸವ ನಡೆದ

೮-೧೦ ದಿನಕ್ಕೆ ಮೊಹರಂ ಹಬ್ಬ ಬಂತು. ಆ ದಿವಸ ಮಲ್ಲಿಗೆಹಳ್ಳಿಗೆ ಸುತ್ತ ಮುತ್ತಲ ಮೂರು ಹಳ್ಳಿಗಳಿಂದ ಮೂರು ಮೊಹರಂ ಅಲಾಬಿ ಮಂಟಪಗಳು ಬರುತ್ತವೆ. ಊರಿನ ಒಂದು ಬೀದಿ ಅಗಲ ಸ್ವಲ್ಪ ಕಡಿಮೆ ಯಾಗಿದೆ. ಅಲ್ಲಿ ಮನೆಗಳೂ ಇಲ್ಲ. ಮಳೆಗಾಲದಲ್ಲಿ ತುಂಬ ನೀರು ನಿಂತು ಕಿರುಕುಳ ಕೊಡುತ್ತೆ. ಅದರ ಮಗ್ಗುಲಲ್ಲಿ ಆ ಬೀದಿಗೆ ಸೇರಿದಂತೆಯೇ ಊರಿನ ಭಾರಿ ಅಗಳು ಇದೆ. ಬೀದಿಯನ್ನು ಸ್ವಲ್ಪ ಎತ್ತರ ಮಾಡಿದ್ದಾರೆ. ಇಲ್ಲದಿದ್ದರೆ ಅಗಳಿನ ನೀರು ರಸ್ತೆಗೆ ನುಗ್ಗುತ್ತದೆ. ಅಲಾಬಿ ಹಬ್ಬದ ಮೊದಲ ದಿನ ರಾತ್ರಿ ಇದ್ದಕ್ಕಿದ್ದಂತೆ ಗ್ರಾಮಪಂಚಾಯಿತಿ ಛೇರ್ಮನ್‌ಗೆ ಈ ರಸ್ತೆಯಲ್ಲಿ ನೀರು ನಿಲ್ಲುತ್ತಿರುವುದರಿಂದ ರಸ್ತೆಯನ್ನು ಪೂರ್ತಾ ಸೋದಿಸಿ ಜಲ್ಲಿ ಹಾಕಿ ರಿಪೇರಿ ಮಾಡಿಬಿಡಬೇಕೆಂದು ಮನಸ್ಸಾಯಿತು! ಹಿಂದು ಗಳೆಲ್ಲಾ ಮನೆಗೆ ಒಂದು ಆಳಿನಂತೆ ಹಾರೆ ಗುದ್ದಲಿ ಪಿಕಾಸಿಗಳನ್ನು ತೆಗೆದು ಕೊಂಡು ಬಂದು ಅರ್ಧ ರಾತ್ರಿಯಲ್ಲಿ ನಿಶ್ಶಬ್ದವಾಗಿ ಕೆಲಸ ಮಾಡತೊಡ ಗಿದರು. ೨-೩ ಗಂಟೆ ಕಾಲದಲ್ಲಿ ರಸ್ತೆಯ ಅಗಲದ ಪೂರ್ತಾ ಒಂದಾಳುದ್ದ ಆಳದ ಸುಮಾರು ೨೦ ಅಡಿ ಅಗಲದ ಚರಂಡಿ ಬಿತ್ತು. ಮಣ್ಣು ಆಚೆ ಈಚೆ ಇನ್ನೊಂದು ಆಳು ಎತ್ತರ ಬಿತ್ತು. ಗುಂಡಿ ನೋಡುವುದಕ್ಕೇ ಭಯಂಕರವಾಗಿದ್ದಿತು. ತುರುಕರು ನಿಧಾನವಾಗಿ ತಮ್ಮ ಮಂಟಪವನ್ನು ಅಲಂಕರಿಸುವುದರಲ್ಲಿ ತೊಡಗಿದ್ದರು. ಗುಂಡಿ ತೆಗೆದವರು ಸದ್ದಿಲ್ಲದೆ ತಮ್ಮ ತಮ್ಮ ಮನೆಗೆ ಹೋಗಿ ಸೇರಿಕೊಂಡರು.

ಮರುದಿವಸ ಸಾಯಂಕಾಲ ತುರುಕರ ಮೆರವಣಿಗೆ ಬಂದದ್ದೂ ಹಳ್ಳದ ಹತ್ತಿರ ನಿಂತುಬಿಟ್ಟಿತು. ಮುಂದಕ್ಕೆ ಒಂದು ಹೆಜ್ಜೆಯೂ ಹಾಕು ವಂತೆ ಇರಲಿಲ್ಲ. ವೇಷ ಹಾಕಿದ್ದ ಹಿಂದು ಹುಲಿಗಳಲ್ಲಿ ಕೆಲವರು ರಾತ್ರಿ ಕೆಲಸಕ್ಕೆ ಬಂದಿದ್ದವರು; ಬಣ್ಣದ ಸಂದಿಯಲ್ಲಿಯೇ ನಗುತ್ತಿದ್ದರು. ಇವತ್ತು ಅವರು ವೇಷ ಹಾಕಿದ್ದುದಕ್ಕೂ ಮೊದಲು ರಾತ್ರಿ ಬಂದು ಗುಂಡಿ ತೆಗೆದು ದಕ್ಕೂ ಸಂಬಂಧವಿಲ್ಲ. ಅದು ಹಿಂದೂಗಳಿಗೆ ಒಟ್ಟಿಗೆ ಆದ ಅವಮಾನಕ್ಕೆ ಪ್ರತೀಕಾರ. ಇದು ಅವರ ಖುಷಿ. ಅವರು "ಸಾಬಯ್ನೋರೆ ಏನು ಮೊಹರಂ ಮೆರವಣಿಗೆ ಕಸ್ಕೊಂಡು ಬಿದ್ದೋಯ್ತೆಲ್ಲ" ಎಂದರು. ಹಿಂದುಗಳ ಬೀದಿಯಲ್ಲಿ ಮೆರವಣಿಗೆ ಮಾಡಿಕೊಳ್ಳದೆ ಮಂಟಪಗಳನ್ನು ವಾಪಸು ತೆಗೆದುಕೊಂಡು ಹೋಗಲು ತುರುಕರಿಗೆ ಖಂಡಿತ ಇಷ್ಟವಿರಲಿಲ್ಲ.

ಯಾಕೆಂದರೆ ಮೂರು ತುರುಕರೂ ಮುನ್ನೂರು ಹಿಂದುಗಳೂ ಇರುವ ಹಳ್ಳಿಯಲ್ಲಿ ಹಿಂದುಗಳಲ್ಲದೆ ಆ ಮೆರವಣಿಗೆ ಮತ್ತಾರು ನೋಡಬೇಕು! ಕೊನೆಗೆ ಏನೂ ದಾರಿಯಿಲ್ಲದೆ ಸಾಹೇಬರು ಸಂಪತ್ಕುಮಾರನ್‌ರವರಲ್ಲಿಗೆ ಹೋದರು. ಅವರು ಎರಡು ಪಕ್ಷದ ಮಾತನ್ನೂ ಕೇಳಿ, ತುರುಕರ ಕೈಲಿ ಮೊದಲು, ಹಿಂದೂಗಳ ದೇವರು ಬಂದಾಗ ಕಾಲು ನೀಡಿಕೊಂಡಿದ್ದು ತಪ್ಪು ಎನ್ನಿಸಿ ಒಂದು ತಪ್ಪು ಕಾಣಿಕೆಯನ್ನೂ ದೇವಸ್ಥಾನಕ್ಕೆ ಕೊಡಿಸಿ ನೆರೆದಿದ್ದ ಜನರಿಗೆ "ಮತ್ತೆ ಆ ಮಣ್ಣನ್ನು ಗುಂಡಿಗೆ ಎಳೆದೇ ಬಿಡಿ" ಎಂದರು. ಆದರೆ ನೆರೆದಿದ್ದವರು ಯಾರಿಗೂ ತುರುಕರ ಮೇಲಿನ ಕೋಪ ಅಷ್ಟಕ್ಕೇ ಕಡಿಮೆಯಾಗಿರಲಿಲ್ಲ. ಸಂಪತ್ಕುಮಾರನ್‌ರು ತಾವೇ ಬಂದು ಹಾರೆ ಹಿಡಿದುಕೊಂಡು ಮಣ್ಣನ್ನು ಮತ್ತೆ ಹಳ್ಳಕ್ಕೆ ತಳ್ಳಲು ಪ್ರಾರಂಭಿಸುವವರೆಗೆ ಯಾರೂ ಕೆಲಸಕ್ಕೆ ಕೈಹಾಕಲಿಲ್ಲ. ಅವರು ಪ್ರಾರಂಭಮಾಡಿದ ಕೂಡಲೇ ತಮಾಷೆ ನೋಡುವುದಕ್ಕೆ ಬಂದಿದ್ದ ಸಾವಿರಾರು ಜನರು ಒಂದು ಅರ್ಧ ಗಂಟೆ ಕಾಲ ಕೆಲಸಮಾಡುವುದರೊಳಗಾಗಿ ಹಳ್ಳವನ್ನು ಭರ್ತಿಮಾಡಿ ಅಲಾಬಿ ಮಂಟಪ ಮುಂದೆ ಹೊರಟುಹೋಯಿತು. ಅಲ್ಲಿಂದ ಮುಂದೆ ತುರುಕರು ಯಾವಾಗಲೂ "ಹಿಂದುಗಳ ದೇವರು" ಬಂದಾಗ ಕಾಲು ನೀಡಿಕೊಂಡು ಕುಳಿತುಕೊಳ್ಳಲಿಲ್ಲ. ಸಂಪತ್ಕುಮಾರರು ಇದಕ್ಕೆ "ಶಠಸ್ಯ ಪ್ರತಿಶಾಠ್ಯಂ" ಎನ್ನುತ್ತಿದ್ದರು.

ಆಗ ಅಮಲ್ದಾರರಾಗಿದ್ದವರಿಗೆ ಈ ವಿಚಾರಗಳೆಲ್ಲಾ ತಿಳಿದಾಗ ಅವರಿಗೆ ಸಂಪತ್ಕುಮಾರನ್ ಶ್ಯಾನುಭೋಗರಾದರೂ ಅವರಲ್ಲಿ ಬಹಳ ಗೌರವ ವುಂಟಾಯಿತು. ಆದೇ ಅವರ ಮಕ್ಕಳ ಕಾಲಕ್ಕೆ, ಕೆಲಸ ಸಿಕ್ಕಲಿಲ್ಲವೆಂದು ಇಂಗ್ಲಿಷ್ ಕಲಿಯಲಿಲ್ಲ. ಇಂಗ್ಲಿಷ್ ಹೊರತು ಬೇರೆ ಯಾವುದೂ ವಿದ್ಯೆ ಅಲ್ಲವೆಂದು ತಿಳಿಯದುದರಿಂದ ಸಂಸ್ಕೃತ ಕನ್ನಡ ಕಲಿಯಲಿಲ್ಲ. ಹೀಗೆ ಯಾವುದಕ್ಕೂ ಕೆಲಸಕ್ಕೆ ಬಾರದ ಪಡ್ಡೆ ಹುಡುಗರು ಈಗ ಮಲ್ಲಿಗೆಹಳ್ಳಿಯಲ್ಲಿ ೨೫-೩೦ ಜನ ಇದ್ದಾರೆ. ಕೆಲಸ ಸಿಕ್ಕುವುದು ಮೊದಲಿಗಿಂತ ಕಮ್ಮಿಯಾಗಿದೆ. ಇಂಗ್ಲಿಷ್ ವಿದ್ಯದ ಮೇಲೆ ಅಭಿಮಾನವೂ ಕಡಿಮೆಯಾಗಿದೆ. ಆದರೆ ಅದರ ಸ್ಥಳವನ್ನು ನಮ್ಮ ವಿದ್ಯೆ ಆವರಿಸಲಿಲ್ಲ. ಸಂಸ್ಕೃತ ಭಾಷೆ ಆವರಿಸಲಿಲ್ಲ. ಒಂದೇ ಮನೆಯಲ್ಲಿ ಏಕಕಾಲದಲ್ಲಿ ಸಂಪತ್ಕುಮಾರನ್‌ರಂತಹ ಸುಸಂಸ್ಕೃತರೂ, ಶಿಲಾಯುಗದವರಿಗೆ ಸಮಾನರಾದ ಅವರ ಮಕ್ಕಳೂ

ಕಾಣುತ್ತಾರೆ. ಈ ವಿದ್ಯೆಯು ಹೊರತು ಉಳಿದುವೆಲ್ಲಾ ಇಬ್ಬರಿಗೂ ಒಂದೇ ಸಮನಾಗಿದೆ. ಅಂದರೆ ಪ್ರಾಣ ಒಂದಿಲ್ಲ. ಮನುಷ್ಯನೇನೋ ಇದ್ದಾನೆ ಎಂದಂತೆ ಆಯಿತು. ಇನ್ನು ಇಂತಹ ತಂದೆಗಳ ಮಕ್ಕಳು ಇನ್ನೆಂತಹ ಬೃಹಸ್ಪತಿಗಳಾದಾರು ?

ಯಜಮಾನರು ಸಾಯುವುದಕ್ಕೆ ಮುಂಚೆ "ನಾನು ಇರುವಾಗ ನಿಮಗೆ ಗೊತ್ತಾಗುವುದಿಲ್ಲ. ನಾನು ಸತ್ತ ಮೇಲೆ" ಯಜಮಾನರು ಇರುವಾಗ ಹಾಗೆ ಪೇಳುತ್ತಿದ್ದರು ಹೀಗೆ ಹೇಳುತ್ತಿದ್ದರು " ಎಂದುಕೊಳ್ಳುತ್ತೀರಿ. ಈ ನಮ್ಮ ದೇಶದ ಸಂಸ್ಕೃತಿ, ವಿದ್ಯೆ, ಸಂಸ್ಕೃತದಲ್ಲಿಯೇ ಇರುವುದು. ನಮ್ಮ ಪೂರ್ವಿಕರು ಉಳಿಸಿಕೊಂಡು ಬಂದಿರುವ ವಿದ್ಯೆಯನ್ನು ನಾವು ಹಾಳುಮಾಡಿದರೆ ಮತ್ತೆ ಎಷ್ಟು ಕೋಟಿ ಕೊಟ್ಟರೆ ತಾನೆ ನಮಗೆ ಅದು ದೊರಕೀತು. ಯಾವನೋ ಒಬ್ಬ ಕೆಲಸ ಕೊಡಲಿಲ್ಲ ಅಂತ ನಮ್ಮ ಹಕ್ಕನ್ನೇ, ನಮ್ಮ ಆಸ್ತಿಯನ್ನೇ ನಾವು ಬಿಡುವುದಕ್ಕೆ ಆಗುತ್ತದೆಯೇ. ಅದರಲ್ಲಿಯೂ ಸಂಸ್ಕೃತಭಾಷೆ ಸಾಹಿತ್ಯಕ್ಕೆ ಅದರದೇ ಒಂದುಶಕ್ತಿ ಇದೆ. ಆ ಶಕ್ತಿ ಅಮರವಾದುದು. ಆ ಶಕ್ತಿಯನ್ನು ಯಾವ ನಿರುದ್ಯೋಗವೂ ಅಲ್ಪವಾದ ದ್ವೇಷಾಸೂಯೆಗಳೂ ನಾಶಮಾಡಲಾರವು. ಸಂಸ್ಕೃತ ನಮ್ಮ ದೇಶದ ಪ್ರತಿಯೊಬ್ಬರ ಭಾಷೆ ಅದರ ಮಾಧುರ್ಯ, ಗಾಂಭೀರ್ಯ, ಲಾಲಿತ್ಯ ಜಗತ್ತಿನ ಮತ್ತಾವಭಾಷೆಗೂ ಇಲ್ಲ. ನಮ್ಮ ದೇಶದ ಕಲ್ಯಾಣಕ್ಕಾಗಿಯೂ ಜಗತ್ತಿನ ಕಲ್ಯಾಣಕ್ಕಾಗಿಯೂ ಆ ಭಾಷೆಯನ್ನು ಎಂದೆಂದಿಗೂ ಸಂರಕ್ಷಿಸಬೇಕು. ಸದ್ಯದಲ್ಲಿ ಕೆಲಸ ಸಿಕ್ಕಲಿಲ್ಲ, ಇದಕ್ಕೆ ಅರ್ಹವಾದ ಬೆಲೆಯನ್ನು ಕೊಡುವ ಯೋಗ್ಯತೆ ಜನರಲ್ಲಿಯೂ ಸರ್ಕಾರದಲ್ಲಿಯೂ ಇಲ್ಲವೆಲ್ಲ ಎಂದುಕೊಂಡು ಕೆಲವರು ಈ ಭಾಷೆಯೇ ಬೇಡವೆನ್ನಬಹುದು. ಆದರೆ ಒಂದು ಸಲ ಈ ಸಂಸ್ಕೃತಿ ಹೋದರೆ ಮತ್ತೆ ಹೇಗೆ ತಾನೆ ಅದು ಬರುತ್ತೆ. ಸಂಸ್ಕೃತ ಸಾಹಿತ್ಯ ಆಪ್ತವಾಕ್ಯಗಳ ಗಣಿ; ಈ ದೃಷ್ಟಿಯಿಂದ ಇದನ್ನು ಉದಾಸೀನ ಮಾಡಿರುವುದು ನಮ್ಮ ದೇಶಾಭಿಮಾನಕ್ಕೆ ದೊಡ್ಡ ಕುಂದು. ಯಾವುದು ಸತ್ಯವೋ ಯಾವುದು ಶಾಶ್ವತವೋ ಮತ್ತು ಯಾವುದು ಜಗತ್ತಿನ ಕಲ್ಯಾಣಕ್ಕೆ ಆವಶ್ಯಕವಾದುದೋ ಅದಕ್ಕೆ ಸಾವಿಲ್ಲ. ಅದನ್ನು ಕಾಲವೂ ನಾಶ ಮಾಡಲಾರದು. ಇಂದಿನ ಬ್ರಾಹ್ಮಣರಿಗೂ ಹಿಂದಲ ಋಷಿಗಳಿಗೂ ಯಾವ ಸಂಬಂಧವೂ ಇಲ್ಲ. ಇಂದಿನ ಬ್ರಾಹ್ಮಣರು ನಾಶವಾದರೂ

ಸಂಸ್ಕೃತ ಸಾಹಿತ್ಯ ಭಾಷೆ ಸಂಸ್ಕೃತಿಗೆ ಕುಂದಕವಿಲ್ಲ. ಆದರೆ ಈ ಸಂಸ್ಕೃತಿಯನ್ನು ಉಳಿಸಿಕೊಳ್ಳಬೇಕು. ಈಗ ನೋಡಿ ಇಂಗ್ಲೀಷ್ ಓದೋದಕ್ಕೆ ಆಗಲಿಲ್ಲ. ಹಳ್ಳೀಲಿ ಕೂತಿರಿ, ಸಂಸ್ಕೃತ ಕನ್ನಡ ಓದೋದಕ್ಕೆ ಸುಲಭವಾಗಿ ಅವಕಾಶವಿತ್ತು. ನಾನು ಬೇಕಾದರೂ ಹೇಳ್ತಾಇದ್ದೆ. ಸಂಪತ್ಕುಮಾರನ್ ಹೇಳಿಕೊಡುತ್ತಿದ್ದರು. ನಾವೇನೂ ಶುಲ್ಕ ಕೇಳ್ತಾ ಇರಲಿಲ್ಲ. ನೀವು ಶುಲ್ಕಕೊಡದಿದ್ದ ಮಾತ್ರಕ್ಕೆ ನನಗೆ ಬರುತ್ತಾ ಇರುವ ಹತ್ತು ಹೇರು ಭತ್ತ ಕಡಿಮೆಯಾಗುತ್ತಾ ಇರಲಿಲ್ಲ. ನಿನಗೆ ಹೇಳಿಕೊಟ್ಟುದರಿಂದ ನನ್ನ ವಿದ್ಯೆಯೂ ಕಡಿಮೆಆಗುತ್ತಿರಲಿಲ್ಲ. ಆದರೆ ನನ್ನ ತೃಪ್ತಿ ಧೈರ್ಯ ನಿಮಗೂ ಏರ್ಪಡುತ್ತಾ ಇತ್ತು. ಈಗ ನಿಮ್ಮ ಮಕ್ಕಳು ಇದ್ದಾರೆಲ್ಲ. ಏನು ಮಾಡುತ್ತೀರಿ. ಅವರಿಗಾದರೂ ಕಲಿಸಿ. ಹೇಗೂ ಮನೆಯಲ್ಲಿ ಕೂತಿದ್ದು ಕಷ್ಟದಿಂದ ದುಡಿದು ಜಮೀನು ತೋಟದಲ್ಲಿ ಜೀವನಮಾಡಬೇಕು. ವಿದ್ಯೆಯನ್ನು ಕತ್ತಿಗೆ ನೇತುಹಾಕಿಕೊಂಡು ಮಾಡಲಿ ".

ಯಜಮಾನರು ಸಾಯುವುದಕ್ಕೆ ಮುಂಚೆ ಮಠಾಧಿಪತಿಗಳಿಗೆಲ್ಲಾ " ಈ ವಿಷಯದಲ್ಲಿ ನೀವು ಪ್ರವರ್ತಿಸಬೇಕು. ಇನ್ನೇನೂ ಬೇಡ. ಹಳ್ಳಿ ಹಳ್ಳಿಗಳಲ್ಲಿಯೂ ಈ ಸಂಸ್ಕೃತಿಯನ್ನು ಪುನರುದ್ಧಾರಮಾಡುವ ಪ್ರಚಾರ ನಿಮ್ಮಿಂದ ನಡೆದರೆ ಸಾಕು. ನೀವು ಹೋದ ಕಡೆ ನಿಮ್ಮಲ್ಲಿಗೆ ಬಂದವರಿಗೆ ಹೀಗೆ ಮಾಡದೆಇದ್ದರೆ ನಮ್ಮ ಜನ ಇನ್ನು ಇಪ್ಪತ್ತು ವರುಷಗಳಲ್ಲಿ ನಿರಕ್ಷರಸ್ತರಾಗುವರೆಂಬುದನ್ನು ತಿಳಿಸಿ. ಹೀಗೆ ವಿದ್ಯೆ ಹೋದ ಮೇಲೆ ಅವರು ಒಂದು ಗಳಿಗೆಯೂ ಲೋಕದಲ್ಲಿ ನಿಲ್ಲಲಾರರು. ಊರು ಊರಿನಲ್ಲಿಯೂ ಸಂಸ್ಕೃತ ವಿದ್ಯೆಯಲ್ಲಿ ನುರಿತ ಒಬ್ಬೊಬ್ಬರು ಇಬ್ಬಿಬ್ಬರೂ ಇನ್ನೂ ಇದ್ದಾರೆ. ಅವರನ್ನು ನಿಯಮಿಸಿ, ಇದರ ಆವಶ್ಯಕತೆಯನ್ನು ಚೆನ್ನಾಗಿ ಪ್ರಚಾರ ಮಾಡಿಸಿ; ಬೇಕಾದ ಕಡೆಗೆ ನಿಮ್ಮ ಮಠದಿಂದ ತಯಾರಾದ ಕೆಲವರನ್ನು ಉಪಾಧ್ಯಾಯರನ್ನಾಗಿ ಕಳುಹಿಸಿ. ಈಗ ನೀವು ಒಂದು ಸಲ ಪ್ರಯತ್ನಪಟ್ಟು ಈ ಸಂಸ್ಕೃತಿಯನ್ನು ಮತ್ತೆ ಉಳಿಸಿದರೆ ಮುಂದೆ ಸಾವಿರ ವರುಷ ಇದು ನಿಲ್ಲುವುದು. ನೀವು ಮಾಡಬೇಕಾದುದು ಏನೂ ಹೆಚ್ಚು ಇಲ್ಲ. ಚೆನ್ನಾಗಿ ಪ್ರಚಾರ ಮಾಡಿ " ಎಂದರು. ಆದರೆ ಮಠಾಧಿಪತಿಗಳು ಪಾಪ ಈ ಹಳ್ಳಿಯ ಬಡಬ್ರಾಹ್ಮಣನ ಮಾತು ಕೇಳುತ್ತಾರೆಯೋ ? ಅಲ್ಲದೆ ಅವರ ಮಠಗಳು ಸಾಧಾರಣವಾಗಿ ಪಟ್ಟಣ

ಗಳಲ್ಲಿ ಇರುತ್ತವೆ. ಅವರಿಗೆ ಹಳ್ಳಿಯ ಸಂಪರ್ಕವೇ ಕಡಿಮೆಯಾಗುತ್ತಿದೆ. ಯಜಮಾನರ ಮಾತು ಅವರ ಕಿವಿಗೆ ಬೀಳಲೇ ಇಲ್ಲ. ಭಗವಂತನ ಮುಂದೆ ಆ ರೀತಿ ಆ ಮಠಾಧಿಪತಿಗಳು ಹಗಲೂ ರಾತ್ರಿ ಗಂಟೆ ಹೊಡೆಯುತ್ತಾ ನಿಂತಿರುವಾಗ ಈ ಬಡಪಾಯಿಯ ಆರ್ತಧ್ವನಿ ಅವರಿಗೆ ಹೇಗೆ ಕೇಳುತ್ತದೆ. ಮಲ್ಲಿಗೆಹಳ್ಳಿ ಜನ ಮಡ್ಡಿಗಳಾದರು; ಯಜಮಾನರ ಮಗ ವೇದಾಂತ ಒಬ್ಬ ಒಳ್ಳೆಯ ಪಾರಂಗತನಾದನು. ಅವನು ಆ ವಂಶದ ಗೌರವ ರಂಗಣ್ಣನವರಿಂದ ಪ್ರಾರಂಭವಾಗಿ ಯಜಮಾನರಲ್ಲಿ ಬೆಳೆದು ತನ್ನಲ್ಲಿ ಬಂದು ಸೇರಿಕೊಂಡುದರ ಜವಾಬ್ದಾರಿಯನ್ನು ಅರಿತು ಊರಿನಲ್ಲಿಯೇ ಯಜಮಾನರಲ್ಲಿಯೇ ಸಾಹಿತ್ಯ ತರ್ಕ ವೇದಾಂತವನ್ನು ಚೆನ್ನಾಗಿ ಅಭ್ಯಾಸ ಮಾಡಿದನು. ಯಜಮಾನರು ಬನ್ನಿ ಬನ್ನಿ ಎಂದು ಇತರರನ್ನು ಕರೆದರೂ ಗ್ರಾಮಸ್ಥರೊಬ್ಬರೂ ಅವನ ಜತೆ ಸೇರಿ ವ್ಯಾಸಂಗ ಮಾಡಲಿಲ್ಲ.

---

## ೨೧. ಗುರುವಿಗೆ ತಿರುಮಂತ್ರ

ಈ ವಿದ್ಯದ ಅಭಾವ ತಮಗೆ ಲೋಕ ವ್ಯವಹಾರದಲ್ಲಿ ಇಷ್ಟು ತೊಂದರೆ ಕೊಟ್ಟೀತು ಎಂದು ಮಲ್ಲಿಗೆಹಳ್ಳಿಯ ದಡ್ಡರಿಗೆ ಆಗ ತಿಳಿಯಲಿಲ್ಲ. ಇಂಗ್ಲೀಷು ಓದಿದವನು ಸರ್ಕಾರಿ ಹುದ್ದೆಗೆ ಹೋಗುತ್ತಾನೆ. ಓದದವನು ಮನೆಯಲ್ಲಿ ಕುಳಿತಿರುತ್ತಾನೆ. ಇಷ್ಟು ಮಾತ್ರ ಅವರು ತಿಳಿದರು. ಆದರೆ ಯಾವುದಾದರೂ ಒಂದು ವಿದ್ಯೆ ಬರದಿದ್ದರೆ ಲೋಕವೆಲ್ಲ ತನ್ನ ಮೇಲೆ ಸವಾರಿ ಮಾಡುವುದು ಎಂಬುದು ಅವರಿಗೆ ತಿಳಿಯಲಿಲ್ಲ. ತಮ್ಮ ತಂದೆ ಅಜ್ಜಂದಿರ ದಕ್ಷತ್ತನ್ನು ಅರಿತಿದ್ದ ಮಲ್ಲಿಗೆಹಳ್ಳಿಯವರು ಅವರ ದಕ್ಷತ್ತಿಗೆ ಕಾರಣ ಅವರು ಪುಣ್ಯಾತ್ಮರಾಗಿದ್ದುದೇ ಎಂದು ತಿಳಿದರು. ಅವರ ಪುಣ್ಯ ಅವರ ವಿದ್ಯವೇ ಎಂಬುದು ಇವರಿಗೆ ಹೇಗೂ ತಿಳಿಯಲೇ ಇಲ್ಲ. ಯಾವ ಮನೆಯಲ್ಲಿ ಸಂಸ್ಕೃತವನ್ನು ಸ್ತ್ರೀಯರೂ ಸುಲಭವಾಗಿ ಮಾತನಾಡುತ್ತಿದ್ದರೋ, ಸಂಸ್ಕೃತ ಶ್ಲೋಕಗಳನ್ನು ಹೇಳುತ್ತಿದ್ದರೋ ರಾಮಾಯಣ

ಭಾರತದ ಕತೆಗಳನ್ನು ಉದಾಹರಣೆ ಹೇಳುತ್ತಿದ್ದರೋ ಆ ಮನೆಗಳಿಗೆ ಈಗ ಸರ್ಕಾರದ ಒಂದು ಕಾಗದ ಬಂದರೆ ಪೇಟೆಯ ಮೇಷ್ಟರ ಬಳಿ ತೆಗೆದುಕೊಂಡು ಹೋಗಿ ಓದಿಸಿ ಸುಮ್ಮನೆ ಮಾತುಗಳನ್ನೋ ಅವುಗಳ ಅರ್ಥವನ್ನೋ ಕೇಳಿದರೆ ತಿಳಿಯಬೇಕಾದುದು ತಿಳಿಯುವುದೆ? ಅದರ ಹಿಂದೆ ಅನುಭವವೂ ಸಂಸ್ಕೃತಿಯೂ ಇರಬೇಡವೆ? ಸ್ವಾಮಿ! ಮಲ್ಲಿಗೆಹಳ್ಳಿಯ ಪಂಡಿತನ ಮಗ ಹೆಬ್ಬೆಟ್ಟು ಹಾಕುತ್ತಿದ್ದಾನೆ. ಪಂಡಿತನನ್ನು "ಇನ್ನೊಬ್ಬ ಮಗನಿಗಾದರೂ ಸ್ವಲ್ಪ ವಿದ್ಯೆಕಲಿಸೋ" ಎಂದರೆ ಯಾವ ಸರ್ಕಾರಿ ಹುದ್ದೆಗೆ? ಎನ್ನುತ್ತಾನೆ. ವಸಿಷ್ಟ ವಿಶ್ವಾಮಿತ್ರರ ಕುಲದವರ ಬಾಯಿನಲ್ಲಿ ಈ ಮಾತುಗಳು ಹೊರಡುವುದನ್ನು ಕೇಳಿ ಯಾರಿಗೆ ತಾನೆ ಕಣ್ಣಿನಲ್ಲಿ ನೀರು ಬರುವುದಿಲ್ಲ?

ದಡ್ಡರ ಮೇಲೆ ಬುದ್ಧಿವಂತರು ಸವಾರಿ ಮಾಡುತ್ತಾರೆ. ವಿದ್ಯಾವಂತರು ಅವಿದ್ಯಾವಂತರನ್ನು ಲೂಟಿ ಮಾಡುತ್ತಾರೆ ವಿಜ್ಞಾನಿಗಳು ಅಜ್ಞಾನಿಗಳ ಕೆಲಸದ ಫಲವನ್ನು ಉಣ್ಣುತ್ತಾರೆ. ಅವರನ್ನು ಮೋಸಪಡಿಸುತ್ತಾರೆ; ಅವರಿಂದ ದುಡಿಸಿಕೊಳ್ಳುತ್ತಾರೆ. ಒಂದೆರಡು ಉದಾಹರಣೆ ಕೇಳಿ.

ಮಲ್ಲಿಗೆಹಳ್ಳಿ ಶ್ಯಾಮುನ ಎರಡನೆಯ ಹೆಂಡತಿ ಸತ್ತಾಗಲೇ ಅವನಿಗೆ ಸುಮಾರು ೪೫ ವಯಸ್ಸು. ಮನೆ ತುಂಬ ಮಕ್ಕಳು. ಮೊದಲನೆಯ ಮಗನಿಗೆ ಆಗಲೇ ವಿವಾಹದ ವಯಸ್ಸು ಬಂದಿದೆ. ಮನೆಯ ತುಂಬ ಶ್ಯಾಮುನ ತಂದೆಯವರ ಕಾಲದ ರಾಮಾಯಣ ಭಾರತ ಸಂಸ್ಕೃತ ಕಾವ್ಯಗಳೂ ತಮಿಳು ಕನ್ನಡ ಕಾವ್ಯಗಳೂ ಕೆಲವು ಓಲೆಗರಿ ಪುಸ್ತಕಗಳೂ ಇವೆ. ಕಾಫಿ ಒಲೆಗೆ ಹಾಕಿ ಹಾಕಿ ಓಲೆಗರಿ ಪುಸ್ತಕದ ಶಾಂದ್ರಿಯನ್ನು (ಕಸವನ್ನು) ಹಾಗೂ ಹೀಗೂ ಕಡಿಮೆ ಮಾಡಿದ್ದಾರೆ. ತಂದೆ ಸ್ವರ್ಗಸ್ಥರಾದಾಗ ಪೇರಿಸಿ ಇಟ್ಟ ಆ ಪುಸ್ತಕಗಳ ಧೂಳನ್ನೂ ಕೊಡವಿಲ್ಲ. ಆದರೆ ಇಸ್ಪಿಟು ಆಟದ ಪ್ಯಾಕುಗಳು ತಿಂಗಳಿಗೆ ನಾಲ್ಕು ಐದು ಆರು ಆಗುವುದರಿಂದ ಆ ಹಳೆಯ ಪ್ಯಾಕುಗಳನ್ನು ಇಡಲು ಅದು ಅನುಕೂಲವಾಗಿದೆ. ಶ್ಯಾಮುನ ಮಗನೂ ಇಸ್ಪಿಟು ಆಟದಲ್ಲಿ ತಕ್ಕಮಟ್ಟಿಗೆ ನುರಿತಿದ್ದಾನೆ. ನೆಶ್ಯವನ್ನೂ ಹಾಕುತ್ತಾನೆ. ತಂದೆಯನ್ನು ಸ್ವಲ್ಪವೂ ಲೆಕ್ಕದಲ್ಲಿ ಇಟ್ಟಿಲ್ಲ. ಶ್ಯಾಮು ಒಂದೊಂದು ಸಲ ಮಗನನ್ನು ದೊಣ್ಣೆ ತೆಗೆದುಕೊಂಡು ಬಾರಿಸಿದ್ದಾನೆ. ಇವತ್ತು ನಾಳೆ

ಮಗನೂ ತಂದೆಗೆ ಬಾರಿಸುವುದರಲ್ಲಿ ಸಂದೇಹವಿಲ್ಲ. ಮಗನ ಮೇಲೆ ಸಿಟ್ಟು ಬಂದಾಗಲೆಲ್ಲಾ ಶ್ಯಾಮು ತಂದೆಯ ಪುಸ್ತಕಗಳ ಮುಂದೆ ನಿಂತು ಕೊಂಡು ಒಂದು ಸಲ ಅವಕ್ಕೆ ನಮಸ್ಕಾರ ಮಾಡಿ "ನಿನಗೆ ಇಂತಹ ಮೊಮ್ಮಗ ಹುಟ್ಟಬಹುದೇ, ಅವನಿಗೆ ಒಳ್ಳೆಯ ಬುದ್ಧಿ ಕೊಡು" ಎಂದು ಪ್ರಾರ್ಥಿಸುತ್ತಾನೆ. ತಂದೆಯ ಮೇಲೆ ಸಿಟ್ಟು ಬಂದಾಗ ಶ್ಯಾಮುನ ಮಗನೂ ಅಜ್ಜನ ಪುಸ್ತಕಗಳ ಮುಂದೆ ನಿಂತುಕೊಂಡು "ಅಜ್ಜಾ ನಿನ್ನ ಮಗ ಹೀಗಾಗಬಹುದೇ" ಎಂದು ಕೊರಗುತ್ತಾನೆ. ಇದು ಹೀಗೆ ೧೦ ವರುಷದಿಂದ ನಡೆಯುತ್ತಿದೆ.

ಸಾಧಾರಣವಾದ ಬುದ್ಧಿವಂತನಿಗೂ ಇಂತಹ ಕಾಲದಲ್ಲಿ ಮತ್ತೆ ಮೂರನೆಯ ಮದುವೆ ಮಾಡಿಕೊಳ್ಳಬಾರದೆಂಬುದು ತಿಳಿಯುತ್ತದೆ. ಆದರೆ ಶ್ಯಾಮಯ್ಯಂಗಾರ್ಯರಿಗೆ ತಿಳಿಯಲಿಲ್ಲ. ತಮ್ಮ ಮಗಳನ್ನು ೭–೮ ಮಕ್ಕಳ ತಂದೆಯಾದ ಮುದುಕನಿಗೆ ಲಗ್ನ ಮಾಡಿಕೊಡುವ ಶಿಶುಘಾತುಕರು (ಕನ್ಯಾಘಾತುಕರು) ನಮ್ಮಲ್ಲಿ ಇಲ್ಲವೆಂದಲ್ಲ. ಆದರೆ ಶ್ಯಾಮಯ್ಯಂಗಾರ್ಯರ ತಂದೆಯವರ ವಿದ್ಯೆ ಯೋಗ್ಯತೆ ಮಗನ ಮಡ್ಡಿತನ ಅವನ ಮೊಮ್ಮಗನ ತೊದವತನ ಇವುಗಳನ್ನೆಲ್ಲಾ ಸೋಡಿ ಜನ ಹೆಣ್ಣು ಕೊಡಲು ಸ್ವಲ್ಪ ಹಿಂದೆಗೆದರು. ಅವರ ಮಗ ಇವರು ಎಂದ ಕೂಡಲೆ ಜನಕ್ಕೆ ತಿರಸ್ಕಾರ ವುಂಟಾಗುತ್ತಿದ್ದಿತು. ಸುಧಾರಕರಾದವರು "ಯಾವುದಾದರೂ ವಿಧವೆಯನ್ನು ಮದುವೆಯಾಗಿ. ಇದ್ದಕ್ಕಿದ್ದಂತೆ ಸುಧಾರಣೆ ಪ್ರಾರಂಭವಾಗಿ ಬಿಡಲಿ" ಎಂದರು. ಆದರೆ ಶ್ಯಾಮಯ್ಯಂಗಾರ್ಯರಿಗೆ ವಿಧವೆಯನ್ನು ಮದುವೆಯಾಗುವ ಧೈರ್ಯವೇ ಇರಲಿಲ್ಲ. ಇಂತಹ ಹೊಸದಾರಿ ಹಿಡಿಯ ಬೇಕಾದರೆ ವಿದ್ಯೆ ಇರಬೇಕು. ಲೋಕಾನುಭವ ಇರಬೇಕು. ಶ್ಯಾಮಯ್ಯಂಗಾರ್ರು "ವಿಧವೆಯನ್ನು ಖಂಡಿತ ಒಲ್ಲೆ" ಎಂದರು. ಸರಿ ಶ್ಯಾಮಯ್ಯಂಗಾರ್ರು ಎಲ್ಲೆಲ್ಲಿಯೂ ಹೆಣ್ಣು ಬೇಕು ಎಂದು ಹೇಳ ತೊಡಗಿದರು. ಅವರ ಮಿತ್ರರೂ ನೆಂಟರೂ ಅವರನ್ನು ಬಯ್ಯ ತೊಡಗಿದರು. ಹೀಗೆ ಒಂದೆರಡು ತಿಂಗಳು ನಡೆದುಹೋಯಿತು.

ಇದ್ದಕ್ಕಿದ್ದಂತೆ ಶಾಮಯ್ಯಗಾರ್ಯರ ತಂದೆಯವರ ಶಿಷ್ಯನಾಗಿದ್ದ ಅವರಷ್ಟೆ ವಯಸ್ಸಿನವನಾಗಿದ್ದ ಜವನಪ್ಪ, ಶಾಮಯ್ಯಂಗಾರ್ರ ಮನೆಗೆ ಬರುವುದು ಹೋಗುವುದು ಹೆಚ್ಚಾಯಿತು. ಯಾರಾದರೂ

ಶ್ಯಾಮಯ್ಯಂಗಾರ್ರ ಮನೆಗೆ ಬಂದರೆ ಊರಿನ ಬುದ್ಧಿವಂತರಾದವರು "ಇವನು ಯಾಕೆ ಶ್ಯಾಮನ ಮನೆಗೆ ಬಂದ? ಶ್ಯಾಮನನ್ನು ಕೆಡಗುವುದಕ್ಕೆ ಬಂದಿದ್ದಾನೆ" ಎನ್ನುತ್ತಿದ್ದರು. ಶ್ಯಾಮನ ಬುದ್ಧಿ ಚುರುಕು ಅಂತಹು ದಾಗಿದ್ದಿತು! ಶ್ಯಾಮು ಮಾತ್ರ ಜವನಪ್ಪ ಬರುತ್ತಿರುವುದರ ಕಾರಣವನ್ನು ಯಾರಿಗೂ ಹೇಳಲಿಲ್ಲ. "ಏನೋ ತಂದೆಯ ಕಾಲದ ಅಭಿಮಾನ, ಬರ್‍ತಾ ಹೋಗುತ್ತಾ ಇದಾನೆ" ಎನ್ನುತ್ತಿದ್ದನು. ಶ್ಯಾಮನ ಮಗನಿಗೂ ಜವನಪ್ಪನ ಮೇಲೆ ಅನುಮಾನವಿದ್ದಿತು. ಹೀಗೆ ೧೫-೨೦ ದಿನ ಕಳೆದು ಹೋಯಿತು. ಒಂದು ಹುಣ್ಣಿಮೆಯ ರಾತ್ರಿ ಶ್ಯಾಮು ಮನೆಬಿಟ್ಟವನು ರಾತ್ರಿ ೧೧-೧೨ ಗಂಟೆಯಾದರೂ ಮನೆಗೆ ಬರಲಿಲ್ಲ. ಹನ್ನೆರಡು ಗಂಟೆಯ ವರೆಗೆ ಅವನ ಮಗನು ನೋಡಿ, ತಂದೆ ಬಾರದುದರಿಂದ ಅವನನ್ನು ಹುಡುಕುತ್ತಾ ಹೊಳೆಯ ಹತ್ತಿರದ ತೋಪಿಗೆ ಬಂದನು. ಅವನ ಜತೆಯಲ್ಲಿ ಇನ್ನೂ ಐದು ಆರು ಮಿತ್ರರು ಬಂದಿದ್ದರು. ಶ್ಯಾಮು ನದಿ ತೀರದಲ್ಲಿ ಪೂರ್ವದ ಕಡೆ ನೋಡುತ್ತಾ ಕುಳಿತಿದ್ದ. ಅವನನ್ನು ನೋಡಿದರೆ ಅದೇ ತಾನೇ ಸ್ನಾನ ಮಾಡಿದ್ದಂತೆ ತೋರುತ್ತಿದ್ದಿತು. ಬಟ್ಟೆಗಳೆಲ್ಲಾ ನೆನೆದಿದ್ದವು. ಹೋದವರೆಲ್ಲಾ ಅವನ ಸುತ್ತಾ ನಿಂತುಕೊಂಡು "ಎಲ್ಲಿ ಹೊರಡು ಮನೆಗೆ ಹೋಗೋಣ" ಎಂದರು.

ಶ್ಯಾಮು ಮಾತನಾಡಲಿಲ್ಲ. ಬರಿಯ ಕೈಸನ್ನೆಯಿಂದ ಮಾತನಾಡ ಬೇಡಿ ಎಂದು ಸೂಚಿಸಿದನು. ಬಂದಿದ್ದವರು ೨-೩ ನಿಮಿಷ ಸುಮ್ಮನಿದ್ದು ಅನಂತರ "ಇವನಿಗೆ ಹುಚ್ಚು ಹತ್ತಿದೆ, ಖಂಡಿತ. ಸ್ವಲ್ಪ ದಿನದಿಂದ ಹುಚ್ಚನಂತೆಯೇ ಆಡುತ್ತಿದ್ದನು. ಇಲ್ಲದಿದ್ದರೆ ಈ ವಯಸ್ಸಿನಲ್ಲಿ ಹೆಣ್ಣನ್ನು ಹುಡುಕಿಕೊಂಡು ಹೋಗುತ್ತಿದ್ದನೇ. ಹೀಗೆ ಒಳಗೊಳಗೆ ಹೊಗೆಯಾಡು ತ್ತಿದ್ದ ಹುಚ್ಚು—ಇವತ್ತು ಪೂರ್ಣಿಮಾ ನೋಡಿ, ಇಂಥವುಗಳಿಗೆಲ್ಲಾ ಬಹಳ ಪ್ರೋತ್ಸಾಹಕರವಾದದ್ದು, ಇವನಿಗೆ ಹುಚ್ಚು ಹತ್ತಿದೆ ಎಂಬುದಕ್ಕೆ ಈ ಅರ್ಧ ರಾತ್ರಿಯಲ್ಲಿ ಇವನು ಮುಳುಗಿರುವುದೇ ಗೊತ್ತು. ಇಲ್ಲೇನು ಇವನನ್ನು ಸಾಗಿಸುವುದಕ್ಕೆ ಹುಚ್ಚಾಸ್ಪತ್ರೆ ಇದೆಯೇ? ಎರಡು ಕುತ್ತಿಗೆ ಮೇಲೆ ಇಡಿದು ಮನೆಗೆ ಎಳದುಕೊಂಡು ಹೋಗಿ ಒಂದು ಕೊಠಡಿಯಲ್ಲಿ ಕೂಡಿ ಬೀಗ ಹಾಕಿ" ಎಂದರು. ಬನೀನಿನ ತೋಳನ್ನು ಮುದುರಿ ಕೊಂಡು ೨-೩ ಜನ ಮುಂದುವರಿದರು. ಶ್ಯಾಮನಿಗೆ "ಇನ್ನು ಮೌನ

ವಾಗಿದ್ದರೆ ನನ್ನನ್ನು ಹಿಡಿದು ಪುಡಿಮಾಡುತ್ತಾರೆ'' ಎಂಬ ನಂಬಿಕೆ ಯಾಯಿತು. ಅವನು "ನೀವು ತಿಳಿದಿರುವುದು ಇಷ್ಟೇ'' ಎಂದನು.

ಮುಷ್ಟಿಯನ್ನು ಗಟ್ಟಿಮಾಡಿಕೊಂಡು ಮುಂದುವರಿಯುತ್ತಿದ್ದವರು ಸ್ವಲ್ಪ ತಡೆದು "ಹಾಗಾದರೆ ಇದೇನು ನಿನ್ನ ವೇಷ'' ಎಂದರು. ಶ್ಯಾಮನು "ಇಲ್ಲಿ ಕಾಯುತ್ತಾ ಕುಳಿತಿದ್ದೇನೆ. ಇಷ್ಟುಹೊತ್ತಿಗೆ ಅವಳು ಬರಬೇಕಾಗಿದ್ದಿತು. ಈಗ ಗಂಟೆ ಆಗಿ ಹೋಯಿತೆಲ್ಲ. ಇನ್ನೂ ಯಾಕೆ ಬರಲಿಲ್ಲ. ಇನ್ನೇನು ಬರುವ ಹೊತ್ತಾಗಿರಬಹುದು'' ಎಂದನು. ಊರಿನವರಿಗೆ ಇವನಿಗೆ ಹುಚ್ಚು ಎಂಬ ನಂಬಿಕೆ ಮತ್ತೆ ದೃಢವಾಗತೊಡಗಿತು. ಶ್ಯಾಮನ ಮಗನು "ಯಾರು ಬರುವವಳು'' ಎಂದನು. ಅದಕ್ಕೆ ಸರಿಯಾದ ಉತ್ತರ ಬರುವುದಿಲ್ಲವೆಂದು ಅವನಿಗೆ ಚೆನ್ನಾಗಿ ಗೊತ್ತಿದ್ದಿತು. ಶ್ಯಾಮಯ್ಯಂಗಾರ್ರು ಉತ್ಸಾಹದಿಂದ "ಮತ್ತಾರು ಸತಿಸಾವಿತ್ರಿ, ವರಮಹಾಲಕ್ಷ್ಮಿ ಸರ್ವಮಂಗಳೆ ಸರಸ್ವತಿ ನನ್ನನ್ನು ಮದುವೆಯಾಗುವ ನನ್ನ ಮನೆಯ ರಾಣಿ'' ಎಂದರು. ಶ್ಯಾಮನ ಮಾತುಗಳನ್ನು ಕೇಳಿದ ಕೂಡಲೆ ನೆರೆದಿದ್ದವರೆಲ್ಲಾ ಗೊಳ್ಳೆಂದು ನಕ್ಕರು. ಶ್ಯಾಮನ ಮಗ ಮಾತ್ರ "ನಡಿಯಿರಿ. ಮನೆಗೆ ಹೋಗೋಣ ಅರ್ಧರಾತ್ರಿಯಲ್ಲಿ ಇಲ್ಲಿ ಯಾಕೆ ಪಿಶಾಚಿಗಳಂತೆ'' ಎಂದನು. ಶ್ಯಾಮಯ್ಯಂಗಾರ್ರು "ಹೇಗೆ ಹೋಗೋಕೆ ಆಗುತ್ತೆ. ಅವಳು ಬಂದಾಗ ನಾವು ಇಲ್ಲದೆ ಇದ್ದರೆ ಅವಳು ಕೋಪಿಸಿಕೊಂಡು ಬಂದ ದಾರಿ ಹಿಡಿದುಕೊಂಡು ಹೋಗಿಬಿಡುತ್ತಾಳೆ. ಇಷ್ಟೆಲ್ಲ ಮಾಡಿ ಎಣ್ಣೆ ಬಂದಾಗ ಕಣ್ಣು ಮುಚ್ಚಿಕೊಂಡರು ಅಂತ ಈ ವೇಳೆಗೆ ಹೋಗಿಬಿಡೋದೆ? ಈಗಲೇ ಒಂದು ಮಾತು ಮೀರಿದುದಾಯಿತು. ಮಾತನಾಡಬೇಡ ಅಂತ ಹೇಳಿದ್ದ. ಮಾತನಾಡಿಬಿಟ್ಟೆ. ಅವಳು ಬಂದರೆ ಕಾಲಿಗೆಬಿದ್ದು ತಪ್ಪು ಒಪ್ಪಿಕೊಳ್ಳುತ್ತೇನೆ. ನೀವು ಎಲ್ಲಿಯ ಪಿಶಾಚಿಗಳು. ಬಂದು ಎಲ್ಲಾ ಕೆಡಿಸಿಬಿಟ್ಟಿರಿ. ನೀವು ಬರದೇ ಇದ್ದಿದ್ದರೆ ಇಷ್ಟುಹೊತ್ತಿಗೆ ಇಲ್ಲಿಗೆ ಬಂದಿರುತ್ತಿದ್ದಳು'' ಎಂದನು. ಶ್ಯಾಮನ ಮಗ "ಮಾತನಾಡಕೂಡದು ಅಂತ ಹೇಳಿದ್ದವರು ಯಾರು'' ಎಂದನು. ಶ್ಯಾಮನು "ಯಾರಾದರೇನು ಅದನ್ನು ಕಟ್ಟಿಕೊಂಡು ನಿನಗೇನು'' ಎಂದನು. ಬಂದಿದ್ದವರು "ಎಲೋ ಇವನಿಗೆ ಹುಚ್ಚು ನಿಜ ಕಣರೋ. ಒಂದುಸಲ ಅವನು ಎನ್ನುತ್ತಾನೆ. ಒಂದು ಸಲ ಅವಳು ಎನ್ನುತ್ತಾನೆ. ಸುಮ್ಮನೆ

ಕುತ್ತಿಗೆ ಮೇಲೆ ನಾಲ್ಕು ಏಟು ಇಡಿಯಿರೊ'' ಎಂದರು. ಶ್ಯಾಮು "ನೀವು ಕಂಡಿರೋದು ಅದೊಂದೆ. ನನಗೆ ಹುಚ್ಚೂ ಇಲ್ಲ. ಪಿಪ್ಪೂ ಇಲ್ಲ. ಜವನಪ್ಪ ಹೇಳಿದ್ದೇ ಹೀಗೆ. ಅವಳು ಬಂದು ಮಾತನಾಡಿಸುವವರೆಗೆ, ನೀನು ಸ್ನಾನ ಮಾಡಿ ಒದ್ದೆಯಲ್ಲಿ ನಿಂತಮೇಲೆ ಯಾರೊಂದಿಗೂ ಮಾತನಾಡಕೂಡದು ಎಂದು'' ಎಂದನು.

ಜವನಪ್ಪನ ಹೆಸರನ್ನು ಕೇಳಿದ ಕೂಡಲೆ ನೆರೆದಿದ್ದವರೆಲ್ಲಾ ಬೆಚ್ಚಿ ಬಿದ್ದರು. ಜವನಪ್ಪ ಆ ವೇಳೆಗೆ ಅನೇಕ ಪ್ರಾಣಿಗಳನ್ನು ಹೀಗೆ ತನ್ನ ಬಲೆಗೆ ಕೆಡವಿದ್ದನು. ಒಂದು ಸಲ ಅವನ ಸಹವಾಸಕ್ಕೆ ಜನ ಹೋದರೆ ಸಾಕು. ಲಾಯರುಗಳು ಹೇಗೆ ತಮ್ಮ ಗಿರಾಕಿ ಕಕ್ಷಿಗಾರರನ್ನು ಬಿಡದೆ ಒಂದು ವ್ಯಾಜ್ಯದಿಂದ ಮತ್ತೊಂದು ವ್ಯಾಜ್ಯಕ್ಕೆ ಎಳೆದುಕೊಂಡು ಹೋಗುತ್ತಾರೆಯೋ, ಹೇಗೆ ಒಂದು ವ್ಯಾಜ್ಯದ ಗರ್ಭದಲ್ಲಿಯೇ ಮತ್ತೊಂದನ್ನು ಮಡಗಿರುತ್ತಾರೋ ಹಾಗೇ ಜವನಪ್ಪನೂ ತನ್ನ ಬಲೆಗೆ ಬಂದವರಿಗೆ ಒಂದಾದ ಮೇಲೆ ಒಂದರಂತೆ ಮಂಕುಬೂದಿ ಹಾಕುತ್ತಲೇ ಇರುತ್ತಿದ್ದನು. ಆದರೆ ಅವನು ಮಲ್ಲಿಗೆಹಳ್ಳಿಯ ವರಾದ ವಿದ್ವಾನ್, ಪಂಡಿತ್, ಪುಥಾರಿ, ಬ್ರಾಹ್ಮಣ ಪುರೋಹಿತರ ಎದುರಿಗೆ ಈ ಮಾಟವನ್ನು ಇನ್ನೂ ಪ್ರಯೋಗಿಸಿರಲಿಲ್ಲ. ಹಿಂದಲ ತಲೆಯವರಲ್ಲಿ ಅದನ್ನು ಪ್ರಯೋಗಿಸುವ ಧೈರ್ಯವೂ ಅವನಿಗೆ ಇರಲಿಲ್ಲ. ಆಗ ಅವನು ಹಾಗೆ ಪ್ರಯತ್ನಿಸಿದ್ದರೆ ಈಶ್ವರನು ಮನ್ಮಥನನ್ನು ಸುಟ್ಟು ಬೂದಿ ಮಾಡುವಂತೆ ಯಜಮಾನರೂ, ಸಂಪತ್ಕುಮಾರನ್‌ರೂ ಕೊನೆಗೆ ಮಲ್ಲಿಗೆಹಳ್ಳಿಯ ಯಾರೊಬ್ಬರೂ ಸಹ ಅವನನ್ನು ಬೂದಿಮಾಡಿ ನೆತ್ತಿಗೆ ಹಚ್ಚಿಕೊಳ್ಳುತ್ತಿದ್ದರು. ರಾಮನ ಎದುರಿಗೆ ಬಂದ ಕಾಕಾಸುರನ ಅವಸ್ಥೆ ಆಗ ಜವನಪ್ಪನಿಗೆ ಉಂಟಾಗುತ್ತಿದ್ದಿತು. ಬೆಂಕಿಗೆ ದೂರದಿಂದಲೇ ಕೈಮುಗಿಯುವಂತೆ ಜವನಪ್ಪ ಮಲ್ಲಿಗೆಹಳ್ಳಿಯ ಜಮದಗ್ನಿಗಳಿಗೆ ಆಗ ಕೈಮುಗಿಯುತ್ತಿದ್ದನು.

ಹೀಗೆ ಜವನಪ್ಪ, ಶಿಷ್ಯನಾಗಿ ಶ್ಯಾಮಯ್ಯಂಗಾರ‍್ಯರ ತಂದೆಯವರಿಂದ ಕೆಲವು ವಿಷಯಗಳನ್ನು ಕಲಿತುಕೊಂಡನು; ಕೆಲವು ವಿಷಯಗಳನ್ನು ಓದಿಕೊಂಡನು. ಕೆಲವು ವಿಷಯಗಳನ್ನು ಅವರಿವರನ್ನು ಕೇಳಿ ತಿಳಿದುಕೊಂಡನು. ಯಾವ ಆ ಜಮದಗ್ನಿಗಳು ಅನೇಕ ವಿಷಯಗಳನ್ನು ತಿಳಿದಿದ್ದುದರ ಸಾತ್ವಿಕ ಜ್ಞಾನದಿಂದ ಯಂತ್ರ ಮಂತ್ರ ಮಾಟ ತಂತ್ರಗಳನ್ನು

ಉಪಯೋಗಿಸದೆ ಬಂದವರಿಗೆ ವಿವೇಕ ಬುದ್ಧಿಯನ್ನು ಹೇಳಿಕಳುಹಿಸುತ್ತಿದ್ದರೋ ಆ ಪ್ರಾಜ್ಞರ ವಿವೇಕ ಜ್ಞಾನ ಹೊರತು ಉಳಿದ ಸ್ವಭಾವಗಳೆಲ್ಲಾ ಜವನಪ್ಪನಿಗೆ ಒಂದಿದ್ದವು. ಯಾವುದಕ್ಕೂ ಅವನಲ್ಲಿ ಕಟ್ಟು ಕವಣೆ ಇರುತ್ತಿದ್ದಿತು; ಯಾವವನ ಹೊಲದಲ್ಲಿ ಪೈರು ಕಡಿಮೆ ಬೆಳೆಯಬೇಕಾದರೂ ಜವನಪ್ಪನಿಗೆ ಅವನ ವಿರೋಧಿ ಸರಿಯಾದ ಕಾಣಿಕೆ ಕೊಟ್ಟರೆ ಜವನಪ್ಪ ಒಂದು ದೇವತೆಯನ್ನು ಹೊಲದಲ್ಲಿ ಮಣ್ಣಿನಲ್ಲಿ ಅಡಗಿಸುತ್ತಿದ್ದನು. ಅದರ ಪ್ರಭಾವದಿಂದ ಆ ಒಂದು ಹೊಲದಲ್ಲಿಯೇ ಯಾಕೆ? ಸುತ್ತಲ ಎರಡು ಮೂರು ಮೈಲಿಗಳಲ್ಲಿಯೇ ಬೆಳೆ ಕಡಿಮೆಯಾಗಿಬಿಡುತ್ತಿದ್ದಿತು! ಯಾವುದಾದರೂ ಮನೆಯನ್ನು ಕೆಡವಬೇಕೆಂದು ಜವನಪ್ಪನಿಗೆ ಗಿರಾಕಿ ಹೇಳಿ ಕಾಣಿಕೆ ತಂದುಕೊಟ್ಟರೆ, ಜವನಪ್ಪ ಅತಿಯಾದ ಮಳೆ ಸುರಿಸಿ ಯಾರ ಮನೆ ಬೀಳಬೇಕೋ ಆ ಮನೆಯ ಗೋಡೆ ಕೆಡವಿಬಿಡುತ್ತಿದ್ದನು! ಒಂದೊಂದು ಸಲ ಅವನ ದೆಯ್ಯಗಳು ಅತಿ ಜೋರಾಗಿ ತಟ್ಟುತಡೆಯಿಲ್ಲದೆ ಶತ್ರುವಿನ ಗೋಡೆ ಬೀಳುವಂತಲ್ಲದೆ, ಕಾಣಿಕೆ ಕೊಟ್ಟವನ ಗೋಡೆಯೂ ಬೀಳುವಂತೆ ಮಳೆ ಸುರಿಸಿಬಿಡುತ್ತಿದ್ದುವು! ಇಂತಹ ನಿರ್ಜೀವ ವಸ್ತುಗಳನ್ನು ಆಳುವುದು ಮಾತ್ರವಲ್ಲದೆ ಜವನಪ್ಪ ಜೀವದ ಪ್ರಾಣಿಗಳನ್ನೂ ಆಳುವುದರಲ್ಲಿ ಹೆಸರು ಹೊಂದಿದವನಾದನು. ಜವನಪ್ಪನ ಶಕ್ತಿಯನ್ನೂ ಪ್ರಕಟಿಸುವ ಸಂಗತಿ ಒಂದು ನಡೆಯಿತು.

ಮಲ್ಲಿಗೆಹಳ್ಳಿಯ ಪೇಟೆಯ ತಮ್ಮಯ್ಯ ಎರಡನೆಯ ಹೆಂಡತಿಯನ್ನ ಮದುವೆಯಾಗುವಾಗ ಅವನ ಬಂಧುಗಳೆಲ್ಲ "ಬೇಡ. ನೀನು ವಯಸ್ಸಾದ ವಿಧವೆಯನ್ನು ಮಾಡಿಕೊ; ಇಂತಹ ಎಳೆಯ ಹುಡುಗಿ ಬೇಡ ಎಂದು ಹೇಳಿದರೂ ಕೇಳದೆ ನೂರು ರುಪಾಯಿ ತೆರ ಕೊಡುವ ಜಾಗದಲ್ಲಿ ೩೦೦ ರುಪಾಯಿ ಕೊಟ್ಟು ಒಳ್ಳೆ ಕುದುರೆಯಂತಿರುವ ೧೮ ವರುಷದ ಹುಡುಗಿ ಮಲ್ಲಿಯನ್ನು ಮದುವೆಯಾದನು. ಮದುವೆಯಾದ ಕೂಡಲೇ ಮಲ್ಲಿ ತಮ್ಮಯ್ಯನಿಗೆ ಸರಿಯಾದ ಮೂಗುದಾರ ಪೋಣಿಸಿ ಬೆನ್ನಿಗೆ ಜೀನು ಹಾಕಿ ಇಷ್ಟಬಂದಂತೆ ಅವನನ್ನು ಆಡಿಸಲು ಪ್ರಾರಂಭಿಸಿದಳು. ಕಿವಿ ಹರಕಿಯಾದರೂ ಕಿರಿಯ ಹೆಂಡತಿ" ಎಂಬ ಗಾದೆ ಕೇಳಿದ್ದೀರಿ. ಇನ್ನು ಸುಮಾರು ಚೆಲುವೆಯಾಗಿದ್ದ ಮಲ್ಲಿಯ ಪ್ರಭಾವ ಕೇಳಬೇಕಾದುದೇ ಇಲ್ಲ. ಸ್ವಲ್ಪ ದಿನಗಳೊಳಗಾಗಿ ಅವಳು ಮನೆಯಲ್ಲಿ ಸರ್ವಾಧಿಕಾರಿಣಿಯಾಗಿ "ನನಗೆ

ಇಷ್ಟ ಬಂದಂತೆ ಇರುತ್ತೇನೆ. ನೀವು ಉಸಿರಾಡದೆ ನಾನು ಹೇಳಿದಂತೆ ಕೇಳಿಕೊಂಡಿರುವುದಾದರೆ ಸರಿ. ಇಲ್ಲದಿದ್ದರೆ ನಿಮ್ಮ ದಾರಿ ನಿಮಗೆ; ನನ್ನ ದಾರಿ ನನಗೆ'' ಎಂದಳು. ಮಲ್ಲಿಯನ್ನು ತಾನು ಮದುವೆಯಾದುದು ತಪ್ಪು ಎಂದು ತಮ್ಮಯ್ಯನಿಗೆ ಚೆನ್ನಾಗಿ ಗೊತ್ತಾಗಿದ್ದಿತು. ಸದ್ಯ ಇವಳು ನನ್ನನ್ನು ಮಾನವಾಗಿ ಬಾಳಿಸಿಬಿಟ್ಟರೆ ಸಾಕು. ಈ ವಯಸ್ಸಿನಲ್ಲಿ ಈ ಹುಡುಗಿಯನ್ನು ಕಟ್ಟಿಕೊಂಡು ಇನ್ನೂ ಏನೇನು ಅನುಭವಿಸಬೇಕೋ ಎಂದು ಅವನಿಗೆ ಭಯವಾಗಿದ್ದಿತು. ಅವನು ಕೈಮುಗಿದು ''ಪುಣ್ಯಾತ್ಗಿತ್ತಿ ನೀನು ಹೇಳಿದ ಹಾಗೆ ಕೇಳ್ತೀನಿ. ನಿನಗೆ ಇಷ್ಟ ಬಂದಂಗೆ ಇರು. ನಿನ್ನ ಪಾದ ಹೊತ್ತೇನು. ಆದರೆ ನಾಲ್ಕುಜನ ಸರೀಕರ ಮುಂದೆ ನನ್ನ ಮಾನ ಹೋಗೊ ಹಾಗೆ ಇರಬೇಡ'' ಎಂದು ಅಂಗಲಾಚಿದನು. ಮಲ್ಲಿ ''ಹುಡುಗೀರನ್ನ ಮದುವೆಯಾಗುವ ಮುದುಕರ ಬಾಳೆಲ್ಲ ಇಷ್ಟೆ. ಕುಣಿಸಿದ ಹಾಗೆ ಕುಣಿಯಬೇಕು'' ಎಂದು ತಿರಸ್ಕಾರದಿಂದ ಸುಮ್ಮನಾದಳು.

ಅಲ್ಲಿಂದ ಮುಂದೆ ತಮ್ಮಯ್ಯನ ಮನೆಯಲ್ಲಿ ಬಂದು ಹೋಗುವ ಯುವಕರ ಸಂಖೆ ಹೆಚ್ಚಾಯಿತು. ಬರುತ್ತಿದ್ದವರು ಊರಿನ, ಸುತ್ತ ಮುತ್ತಲ ಮನೆಯ ಹುಡುಗರೇ. ಅವರೆಲ್ಲ ಬಹಳ ನೀತಿವಂತರಾಗಿದ್ದರು. ಅವರು ಸರಸವಾಗಿ ಮಾತುಕಥೆ ಆಡುತ್ತಾ ಸಮಯಾನುಸಾರ ಯಕ್ಷ ಗಾನದ ಹಾಡುಗಳನ್ನು ಹಾಡುತ್ತಾ ಅನೇಕವೇಳೆ ರಾತ್ರಿ ೧೧-೧೨ ಗಂಟೆಗಳ ವರೆಗೆ ಲಲ್ಟೆ ಹೊಡೆಯುತ್ತಾ ತಮ್ಮಯ್ಯನ ಮನೆಯಲ್ಲಿ ಕುಳಿತಿರುತ್ತಿದ್ದರು. ಅವರು ಯಾರಮೇಲೂ ತಮ್ಮಯ್ಯನಿಗೆ ಅಸಮಾಧಾನವುಂಟಾಗಲಿಲ್ಲ. ''ಇವರೆಲ್ಲ ನನ್ನ ಹುಡುಗರು ಕುಣಿದಾಡಲಿ'' ಎಂದುಕೊಂಡು ನೆಮ್ಮದಿ ಯಿಂದ ಇದ್ದನು. ಆದರೆ ಅವನು ನಿರೀಕ್ಷಿಸದ ಕಡೆಯಿಂದ ಅಪಾಯಬಂತು. ಒಂದು ದಿನ ಮಲ್ಲಿ, ಮಲ್ಲಿಗೆಹಳ್ಳಿಯ ತುರುಕರ ಹುಡುಗ ಫೀರ್‌ಖಾನನ ಜತೆಯಲ್ಲಿ ಊರುಬಿಟ್ಟು ಎಲ್ಲಿಗೋ ಹೊರಟುಹೋದಳು. ಅವರು ಎಲ್ಲಿ ಹೋದರು ಎಂಬುದು ಯಾರಿಗೂ ಗೊತ್ತಾಗಲಿಲ್ಲ.

ಆಗ ತಮ್ಮಯ್ಯನಿಗೆ ಜವನಪ್ಪ ಗಂಟುಬಿದ್ದ. ಜವನಪ್ಪ ತಮ್ಮಯ್ಯ ನಿಂದ ನೂರು ರುಪಾಯಿ ತೆಗೆದುಕೊಂಡು ''ನಿನ್ನ ಹೆಂಡತಿ ನಿನ್ನ ಊರಿಗೆ ಬರುತ್ತಾಳೆ. ಅದಕ್ಕೆ ಬೇಕಾದ ವ್ರತಗಳನ್ನು ನಡೆಸುತ್ತೇನೆ. ನಿನ್ನ ಹಿತ್ತಲಲ್ಲಿ ದೆಯ್ಯವನ್ನು ಹೂಳುತ್ತೇನೆ. ನಿನ್ನ ಹೆಂಡ್ತಿ ಬಂದು ನಿನ್ನಕಾಲಿಗೆ

ಬೀಳುತ್ತಾಳೆ; ಮಾತ್ರ ಹೆಚ್ಚಾಗಿ ಸಿಟ್ಟುಮಾಡಿಕೊಳ್ಳಬೇಡ. ಈ ಸಲಕ್ಕೆ ಕ್ಷಮಿಸಿಬಿಡು" ಎಂದು ಹೇಳಿದನು. ತಮ್ಮಯ್ಯನು "ಸದ್ಯ ನಿನ್ನ ವ್ರತ ದಿಂದ ಅವಳು ಬಂದರೆ ಸಾಕು. ನಾನೇ ಬೇಕಾದರೂ ಅವಳ ಕಾಲಿಗೆ ಬೀಳುತ್ತೇನೆ. ನನ್ನ ಮನೆಯಲ್ಲಿ ಬಂದು ಲಕ್ಷ್ಮಿಯಹಾಗೆ ಓಡಾಡಿಕೊಂಡು ಇರಲಿ. ಹೆಂಡತಿ ಓಡಿಹೋದಳು ಎಂದು ಜನ ಆಡಿಕೊಳ್ಳದೆ ಇದ್ರೆ ಸಾಕು" ಎಂದನು. ಜವನಪ್ಪ "ಅದೇನು ಅಂತಹ ದೊಡ್ಡ ಮಾತಲ್ಲ. ಈ ಕಾಲ ದಲ್ಲಿ ಎಲ್ಲಾ ಸಾಮಾನ್ಯ; ರಾಜ ಮಹಾರಾಜರ ಹೆಂಡತಿಯರೇ ಅವರನ್ನು ಬಿಟ್ಟು ಹೊರಟು ಹೋಗುತ್ತಾರೆ. ರಾಜರು ಇತರರ ಹೆಂಡತಿಯರಿಗಾಗಿ ರಾಜ್ಯವನ್ನೇ ಬಿಟ್ಟುಹೋಗುತ್ತಾರೆ. ಆದರೆ ಅವರಿಗೆ ಜವನಪ್ಪನ ಮಂತ್ರ ದೊರಕಿಲ್ಲ. ನಿನ್ನ ಪಾಡಿಗೆ ನೀನು ಹೋಗು. ನಿನ್ನ ಹೆಂಡತಿ ನಿನ್ನಮನೆಗೆ ಬರುತ್ತಾಳೆ" ಎಂದನು. ತಮ್ಮಯ್ಯ ಮನೆಗೆ ಹೋದನು.

ತಮ್ಮಯ್ಯನ ನೂರು ರುಪಾಯಿ ಜವನಪ್ಪನ ಹತ್ತಿರ ಉಳಿಯಿತು. ಜವನಪ್ಪನ ಮಂತ್ರದ ಪ್ರಭಾವವೇ ಇರಬಹುದು, ಕೈಯಲ್ಲಿದ್ದ ಹಣ ಮುಗಿದಮೇಲೆ ಮಲ್ಲಿಯೂ ಫೀರ್‌ಸಾಬಿಯೂ ಊರಿಗೆ ಮತ್ತೆ ಬಂದರು. ಆದರೆ ಜವನಪ್ಪನ ಮಂತ್ರ ಎಲ್ಲಿಯೋ ಸ್ವಲ್ಪ ದಾರಿ ಕೆಟ್ಟದ್ದಿರಬೇಕು! ಮಲ್ಲಿಯು ಊರಿಗೆ ಬಂದರೂ ತಮ್ಮಯ್ಯನ ಮನೆಗೆ ಹೋಗದೆ ಫೀರ್ ಸಾಬಿಯ ಮನೆಗೆ ಹೋಗಿ ಅಲ್ಲಿಯೇ ಇರತೊಡಗಿದಳು. ಹೀಗೆ ಅವಳನ್ನು ಅಲ್ಲಿ ಬಿಡುವುದು ಸರಿಯಲ್ಲ ಎಂದು ಊರಿನ ಕೆಲವು ಮುಂದಾಳುಗಳು ಸೇರಿ ಒಂದು ದಿನ ಫೀರ್‌ಸಾಬಿಯ ಮನೆ ನುಗ್ಗಿ ಮಲ್ಲಿಯನ್ನು ಈಚೆಗೆ ಎಳೆದುಕೊಂಡು ಬಂದರು. ಅಲ್ಲಿಯವರೆಗೆ ಮಲ್ಲಿಗೆಹಳ್ಳಿಯಲ್ಲಿ ಪೀರ್ ಸಾಬಿಯನ್ನು—ಯಾಕೆ ಯಾವ ಸಾಬಿಯನ್ನು ಯಾರೂ ಹೊಡೆದಿರಲಿಲ್ಲ. ಅಕಸ್ಮಾತ್ತು ಹಿಂದುಗಳಿಗೂ ತುರುಕರಿಗೂ ವ್ಯತ್ಯಾಸವುಂಟಾದರೆ, ಹಿಂದುಗಳೆಲ್ಲ ಸಾಬಯ್ಯನವರ ಪಕ್ಷವನ್ನೇ ವಹಿಸಿ ಬಿಟ್ಟು ಯಾವ ಒಬ್ಬ ಹಿಂದುವಿಗೂ ಸಾಹೇಬನಿಗೂ ವ್ಯಾಜ್ಯವುಂಟಾಗಿ ದಿತೋ ಆ ಹಿಂದುವಿಗೆ ನಾಲ್ಕು ಬಿದ್ದರೂ ಸುಮ್ಮನೆಯೇ ಇದ್ದುಬಿಡುತ್ತಿದ್ದರು. ಆದರೆ ಪೀರ್ ಸಾಬಿ ಹೀಗೆ ಮಾಡಿದ್ದು ನೋಡಿ ಪೇಟೆಯವರಿಗೆಲ್ಲಾ ಬಹಳ ಅಸಮಾಧಾನವಾಯಿತು. ಅವರಲ್ಲಿ ಹಿರಿಯವರಾದ ಗಫೂರ್ ಸಾಹೇಬರಿಗೆ ವಿಚಾರ ತಿಳಿದಾಗ ಅವರು ಸುಮ್ಮನೆ ನಕ್ಕರು. ತಮ್ಮಯ್ಯ

ನಿಗೆ ಆಗಿದ್ದಷ್ಟು ನಾಚಿಕೆ ಪೀರ್ ಸಾಬಿಗೆ ಆಗಲಿಲ್ಲ. ಅವನು ಧಾರಾಳ ವಾಗಿ ಬೀದಿಯಲ್ಲಿ ತಿರುಗುತ್ತಾ ಸುಲಭವಾಗಿ ಮೊದಲಿನಂತೆ ತನ್ನ ಮಿತ್ರರು ಬಂಧುಗಳೊಡನೆ ಮಾತನಾಡುತ್ತಿದ್ದ. ಪೇಟೆಯವರಲ್ಲಿ ಮಲ್ಲಿಗೆ ಬಹಿಷ್ಕಾರ ಹಾಕಬೇಕು ಅದು ಇದು ಎಂದು ಆರ್ಭಟ ನಡೆಯುತ್ತಿದ್ದರೂ ಸಾಬರುಗಳು ಮಾತ್ರ ಪೀರ್ ಸಾಬಿಯಿಂದ ಏನೂ ನಡೆದಿಲ್ಲ ಎಂಬಂತೆ ಸ್ವಾಭಾವಿಕವಾಗಿದ್ದರು.

ಆಗ ಹಿಂದುಗಳಲ್ಲಿ ಯುವಕರಾಗಿದ್ದವರು "ನೀವು ಬಹಿಷ್ಕಾರವನ್ನಾದರೂ ಹಾಕಿ, ಯಾವ ಖಾರವನ್ನು ಬೇಕಾದರೂ ಹಾಕಿ, ಮೊದಲು ಪೀರನ ಮನೆಯಿಂದ ಮಲ್ಲಿಯನ್ನು ಎಳೆದುಕೊಂಡು ಬನ್ನಿ"ರಿ ಎಂದು ಹೇಳತೊಡಗಿದರು. ಪೀರನಿಗೂ ಮಲ್ಲಿಯ ಗಂಡನ ಕಡೆಯವರು ತನ್ನ ಮೇಲೆ ಬಂದು ಬೀಳುತ್ತಾರೆ ಎಂದು ಗೊತ್ತಾಗಿದ್ದಿತು. ಅವನು ಕೈಯಲ್ಲಿ ಹಣೆಮಟ್ಟದ ದೊಣ್ಣೆಯನ್ನು ಹಿಡಿದುಕೊಂಡು ಮನೆಯ ಬಾಗಿನಲ್ಲಿ ಕಾಯುತ್ತಾ ಕುಳಿತಿರುತ್ತಿದ್ದನು. ಅವನು ಕಂಡ ಕಂಡವರೊಂದಿಗೆ "ಮಲ್ಲಿನ ಹೊಡ್ಕೊಂಡು ಹೋಗೋಕೆ ಬರ್‍ತಾರಂತೆ. ಬರಲಿ. ಮೊದಲು ಬಂದವರ ತಲೆಯನ್ನು ಈ ದೊಣ್ಣೆಯಿಂದ ಚೂರು ಚೂರು ಮಾಡುತ್ತೇನೆ" ಎನ್ನುತ್ತಿದ್ದನು. ಮೊದಲು ಏಟು ಎಲ್ಲಿ ತಮಗೆ ಬೀಳುತ್ತದೆಯೋ ಎಂದು ಪ್ರತಿಯೊಬ್ಬರೂ ಹೆದರುತ್ತಿದ್ದರು. ಕೊನೆಗೆ ರಾಚಪ್ಪನು "ಎಲೊ ಹೇಡಿಗಳಿರಾ ಬನ್ನಿ. ನನಗೇ ಮೊದಲು ಏಟು ಬೀಳಲಿ; ಈ ಅವಮಾನ ಸಹಿಸುವುದಕ್ಕಿಂತ ಸಾಯುವುದು ಮೇಲು" ಎಂದು ಹೊರಟ. ಆಗ ಅವನ ಜತೆಯಲ್ಲಿ ಪೇಟೆಯವರೂ ಹೊರಟರು. ಮೊದಲನೆಯ ಪೀರನ ದೊಣ್ಣೆ ಏಟು ರಾಚಪ್ಪನಿಗೇ ಬಿತ್ತು. ಅವನ ತಲೆ ಒಡೆದು ರಕ್ತ ಬಂತು. ಮುಂದಲ ಗಳಿಗೆಯಲ್ಲಿ ಪೇಟೆಯವರು ಒಳಕ್ಕೆ ನುಗ್ಗಿ ಮಲ್ಲಿಯನ್ನು ಎಳೆದುಕೊಂಡು ಬಂದರು. ಆವತ್ತು ಮೈಯಲ್ಲಿ ಉಂಟಾದ ಜಜ್ಜು ಗಾಯದಿಂದ ಪೀರ ಒಂದು ತಿಂಗಳು ಹಾಸಿಗೆ ಬಿಟ್ಟು ಏಳಲಿಲ್ಲ. ಜವನಪ್ಪ ಮಾತ್ರ ತಮ್ಮಯ್ಯನೊಂದಿಗೆ "ನೋಡಿದೆಯೋ ನಾನು ಮಾಡಿದ ಮಾಟ. ಹೇಗೆ ಮನೆಗೇ ಬಂದಳು" ಎಂದ.

ಪೇಟೆಯಲ್ಲಿ ಚರ್ಚೆ ಪ್ರಾರಂಭವಾಗಿಬಿಟ್ಟಿತು. ಹಿಂದೆ ಇಂತಹುದು ಬಹಳ ಅಪರೂಪವಾಗಿ ನಡೆಯುತ್ತಿದ್ದಿತು. ಇಬ್ಬರೂ ಎಲ್ಲಿ ಹೋದರೋ

ಎಂಬುದೇ ಗೊತ್ತಾಗದಂತೆ ಮಾಯವಾಗಿ ಬಿಡುತ್ತಿದ್ದರು. ಅವರನ್ನು ಜನ ಪೂರ್ಣವಾಗಿ ಬಹಿಷ್ಕರಿಸಿ ಬಿಡುತ್ತಿದ್ದರು. ಆದರೆ ಈಗ ಹಾಗೆ ಸುಮ್ಮನಿರುವುದು ಸಾಧ್ಯವಿಲ್ಲ. ಒಂದು ಪಕ್ಷದವರು ಇದನ್ನೇ ಪ್ರೋತ್ಸಾಹಿಸುವಂತೆ ಸಹ ತೋರುತ್ತಿದೆ. "ಸ್ವಲ್ಪ ಹೆಚ್ಚು ಕಡಿಮೆ ನಿತ್ಯಾ ನಿತ್ಯಾ ನಡಿಯುತ್ತಿದೆ. ಉಗ್ರವಾದ ಕಾರ್ಯಕ್ರಮವನ್ನು ಕೈಕೊಳ್ಳಬೇಕು" ಎಂದು ಪೇಟೆಯುವರೆಲ್ಲಾ ಸೇರಿ ತೀರ್ಮಾನಿಸಿಕೊಂಡರು. ವಯಸ್ಸಾದವರು ಹುಡುಗಿಯರನ್ನು ಮದುವೆಯಾಗ ಕೂಡದೆಂದೂ ಹಾಗೆ ಯಾರಾದರೂ ಪ್ರಾರಂಭಿಸಿದರೆ ಬಾಕಿಯುವರು ಅದನ್ನು ಸಾಧ್ಯವಾದಷ್ಟು ತಡೆಗಟ್ಟಬೇಕೆಂದೂ ಹೆಂಡತಿಯರಿಗೆ ಮನೆಯಲ್ಲಿ ಪೂರ್ಣ ಸ್ವಾತಂತ್ರಕೊಟ್ಟು ಅವರ ಜೀವನವನ್ನು ಇನ್ನೂ ಹೆಚ್ಚು ಸುಖವಾಗಿ ಮಾಡಬೇಕೆಂದೂ ತೀರ್ಮಾನಿಸಿಕೊಂಡರು. ಆದರೆ ಮರುದಿವಸವೇ ಮತ್ತೆ ಮಲ್ಲಿಯನ್ನು ಪೀರ್ ಸಾಬಿ ಯಾವ ಮಾಯದಲ್ಲಿಯೋ ಬಂದು ಕರೆದುಕೊಂಡು ಹೋದನು. ಮತ್ತೆ ಅವರಿಬ್ಬರೂ ಊರು ಬಿಟ್ಟುಹೋದರು. ಪೀರ್ ಸಾಬಿ ತಾಯಿಯ ಒಂದು ಒಡವೆಯನ್ನು ಕದ್ದು ಕೊಂಡು ಹೋದನೆಂದೂ ಹೇಳಿದರು. ಗಫೂರ್ ಸಾಹೇಬರ ಹತ್ತಿರ ಸುಳ್ಳು ಹೇಳಿ ನೂರು ರುಪಾಯಿ ಸಾಲಮಾಡಿ ಕೊಂಡುಹೋದ ಎಂದೂ ಕೆಲವರು ಹೇಳಿದರು. ಅಂತೂ ಮಲ್ಲಿಗೆಹಳ್ಳಿಬಿಟ್ಟು ಹೋದ ಮೂರು ತಿಂಗಳಿನಲ್ಲಿ ಅವನು ಸತ್ತ ಸುದ್ದಿ ಬಂತು. ಇದೇ ಸಂದರ್ಭದಲ್ಲಿ ಅವನ ತಮ್ಮನೂ ಮಲ್ಲಿಗೆಹಳ್ಳಿಬಿಟ್ಟು ಎಲ್ಲಿಯೋ ಮಾಯವಾದನು. ಕೆಲವರು ಅವನೂ ಹೋಗಿ ಅಣ್ಣನ ನಂತರ ಮಲ್ಲಿಯನ್ನು ಸೇರಿಕೊಂಡಿದ್ದಾನೆ! ಎಂದರು. ಮುಂದೆ ಎರಡು ತಿಂಗಳಿನೊಳಗೆ ಅವನೂ ಮಲ್ಲಿಯೂ ಒಬ್ಬೊಬ್ಬರಾಗಿ ಸತ್ತರು. ಪಾಪ ಪೀರನ ತಾಯಿ ವಯಸ್ಸಾದ ಹೆಂಗಸು ಮಲ್ಲಿಗೆಹಳ್ಳಿಯಲ್ಲಿ ಕೂಲಿ ಮಾಡಿಕೊಂಡು ಜೀವಿಸುತ್ತಿದ್ದಾಳೆ.

ಜವನಪ್ಪ ಇದೆಲ್ಲಾ ತನ್ನಿಂದಲೇ ಆದುದೆಂದು ಹೇಳುತ್ತಿದ್ದಾನೆ. "ತಮ್ಮಯ್ಯ ನನಗೆ ನೂರು ರುಪಾಯಿಕೊಟ್ಟ. ಪೀರನ ಇಬ್ಬರನ್ನು ತಕೊಂಡೆ. ದೇವತೆಗೆ ಮಲ್ಲಿ ಮೇಲೆ ಕೋಪಬಂತು. ಅವಳು ಮಲ್ಲೀನೂ ತಕೊಂಡಳು" ಎಂಬ ಜವನಪ್ಪನ ಮಾತಿನಲ್ಲಿ ಅವನು ಹೇಳಿರುವ ಸಂಗತಿಗಳು ಸಂಭವಿಸಿರುವುದರಿಂದ ಜನರಿಗೆ ನಂಬಿಕೆ ಬಂದುಬಿಟ್ಟಿದೆ. ಹೇಳಿ ಹೇಳಿ, ಈ ಮಾತು ನಿಜವಿದ್ದರೂ ಇರಬಹುದೇನೋ ಎಂದು

ಜವನಪ್ಪನಿಗೂ ಸಹ ತನ್ನ ಶಕ್ತಿಯಲ್ಲಿ ನಂಬಿಕೆ ಬಂದಿದೆ. ಹೀಗೆ ಜವನಪ್ಪನ ಬಲೆಗೆ ಶಾಮಯ್ಯಂಗಾರ್‍ರು ಬಿದ್ದಿರುವುದು ತಿಳಿದಕೂಡಲೆ ಶಾಮನ ಮಗನೂ ಹಳ್ಳಿಯವರೂ ಪದೇ ಪದೇ ಜವನಪ್ಪ ಶಾಮನನ್ನು ನೋಡಲು ಬರುತ್ತಿರುವುದರ ಕಾರಣವನ್ನು ತಿಳಿದರು. ಅವರು ಕೋಪದಿಂದ "ಮೊದಲು ನೀನು ಹುಚ್ಚ ಎಂದು ಮಾಡಿದ್ದೆವು. ಈಗ ನೀನು ಹುಚ್ಚ ಮಾತ್ರವಲ್ಲ, ಬೆಪ್ಪನೂ ಸಹ ಎಂದು ತಿಳಿಯಿತು; ಹೋಗಲಿ. ಜವನಪ್ಪ ನಿಗೆ ಏನೇನು ಕೊಟ್ಟೆ ಹೇಳು. ನಿಮ್ಮ ತಂದೆ ಅವನಿಗೆ ಗುರುವಾಗಿದ್ದರು. ನಿನ್ನಂತಹ ಮಡ್ಡಿ ಲೋಕದಲ್ಲಿಯೇ ಇಲ್ಲ" ಎಂದರು. ಶಾಮನು "ಕೊಡು ವುದು ಕೊಟ್ಟೆ ಅದನ್ನ ಕಟ್ಟಿಕೊಂಡು ನಿಮಗೇನು. ನನ್ನ ಇಷ್ಟ. ಅಲ್ಲದೆ ಅದನ್ನು ಇತರರಿಗೆ ಹೇಳಿದರೆ ವ್ರತ ಫಲಿಸುವುದಿಲ್ಲವೆಂದು ಜವನಪ್ಪ ಹೇಳಿದ್ದಾನೆ" ಎಂದನು. ನೆರೆದವರು "ಜವನಪ್ಪ ಹೇಳುವವನು. ನೀನು ಕೇಳುವವನು; ಒಳ್ಳೆ ಮಾತಿನಿಂದ ನಡೆದ ಸಂಗತಿ ಹೇಳುತ್ತೀಯೋ ಇಲ್ಲವೋ" ಎಂದರು. ಶಾಮನು "ಸ್ವಲ್ಪ ಸುಮ್ಮನೆ ಇರಿ, ಇನ್ನೇನು ಅವಳು ಬರುವ ಹೊತ್ತಾಯಿತು. ನಿಮ್ಮಂತಹ ನಾಸ್ತಿಕರನ್ನು ನೋಡಿ ಅವಳು ಹೋಗಿಬಿಟ್ಟಾಳು" ಎಂದನು. ಶಾಮನ ಗೆಳೆಯರು "ಇನ್ನು ನಿನಗೆ ಬರುವವನು ಆ ಜವರಾಯನೊಬ್ಬನೇ. ಜವರಾಯನ್ಯಾಕೆ! ಜವನಪ್ಪನೇ ಜವರಾಯ. ಇವನು ಯಾಕೋ ಉಸಿರು ತೆರೆಯುವಂತೆ ಇಲ್ಲ. ಎಲ್ಲಿ ಆ ಆಲದ ಬಿಳಲುಗಳನ್ನು ಕಿತ್ತುಕೊ; ಕೈಕಾಲು ಕಟ್ಟಿ ಮೊಸಳೆ ಹೊಂಡಕ್ಕೆ ಎಸೆದು ಬಿಟ್ಟು ತಲೆ ತೊಳೆದುಕೊಂಡು ಹೋಗೋಣ. ಅಲ್ಲಿ ಇವನಿಗಾಗಿ ಇವನ ಮಹಾಲಕ್ಷ್ಮಿ ಕಾಯುತ್ತಿದ್ದಾಳೆ" ಎಂದರು. ಇಬ್ಬರು ಆಲದ ಬಿಳಲುಗಳನ್ನು ಕಿತ್ತರು. ಶಾಮ ಮಗನ ಮುಖವನ್ನು ನೋಡಿದನು. ಅವನೂ ಏನೂ ಗೊತ್ತಿಲ್ಲದವನಂತೆ ಸುಮ್ಮನೆ ನಿಂತಿದ್ದನು. "ಈ ಪಿಶಾಚಿಗಳು, ಇದೋ ನಿರ್ಜನವಾದ ರಾತ್ರಿ; ಅವರು ಇರುವುದು ೮-೧೦ ಜನ. ನಾನು ಒಬ್ಬ; ಆಮೇಲೆ ಮಾಡುವುದು ತಾನೆ ಏನು? ಈ ವ್ರತಭಂಗಕ್ಕೆ ಜವನಪ್ಪನಿಂದ ಏನಾದರೂ ಶಾಂತಿ ಮಾಡಿಸೋಣ" ಎಂದು ಕೊಂಡು ಶಾಮನು, ಅವರು ಬಿಳಲು ತೆಗೆದುಕೊಂಡು ಬಂದು ಕೈ ಹಿಡಿದು ಕೊಂಡ ಕೂಡಲೆ "ನಿಮ್ಮ ಮನೆ ಕಾಯ್ವಾಗ ಘಾತುಕರಾ ನೀವು, ಯಾವು ದಕ್ಕೂ ಹೇಸೋದಿಲ್ಲ. ಕುಕ್ಕರ ಬಡೀರಿ, ಜವನಪ್ಪನಿಗೆ ತಿಳಿದರೆ ನಿಮ್ಮ

ಒಬ್ಬೊಬ್ಬರ ಮೇಲೂ ಒಂದೊಂದು ದೇವತೆ ಬಿಡ್ತಾನೆ. ಅವು ನಿಮ್ಮನ್ನು ಕಬ್ಬತ್ತಿ ಬೆಟ್ಟದ ತುದಿಗೆ ಎತ್ತಿಕೊಂಡು ಹೋಗಿ ಕಮರಿಗೆ ಎಸೆಯುತ್ತವೆ. ತಲೆ ಚೂರು ಚೂರಾದಾಗ ನಿಮ್ಮ ಒಂದೊಂದು ಹನಿ ರಕ್ತವೂ ಇನ್ನು ಜವನಪ್ಪನ ತಂಟೆಗೆ ಹೋಗೋದಿಲ್ಲ ಹೋಗೋದಿಲ್ಲ ಅಂತ ಒರಲ್ತಾ ಇರ್ತವೆ. ಅವನ ಶಕ್ತಿ........"

ದೇಶಿಕಾಚಾರಿ ಮುಂದೆ ಅವನನ್ನು ಮಾತನಾಡಗೊಡದೆ "ಇರಲಿ, ಈಗ ಮಾತು ಒರಲು: ಎಷ್ಟು ರುಪಾಯಿ ಕೊಟ್ಟೆ ಜವನಪ್ಪನಿಗೆ" ಎಂದನು.

ಶಾಮಯ್ಯಂಗಾರ್ರು ನೂರು ರುಪಾಯಿ ಎಂದರು. ಈಚೆಗೆ ಜವನಪ್ಪ ನೂರು ರುಪಾಯಿಗಳಿಗೆ ಕಡಿಮೆ ಯಾರ ಮೇಲೂ ಯಾವ ದೇವತೆಗಳನ್ನೂ ಬಿಡುವಂತೆ ತೋರುತ್ತಿರಲಿಲ್ಲ. ಅದು ಅವನ ಕನಿಷ್ಠ ಶುಲ್ಕ ಆಗಿದ್ದಿತು. ಆ ಮಾತನ್ನು ಕೇಳಿ ಅವನ ಮಗ ಒಂದು ಸಲ ತಲೆ ಹೊಡೆದುಕೊಂಡನು. ಕೊನೆಯಲ್ಲಿ ಇಷ್ಟು ವಿಚಾರ ತಿಳಿಯಿತು.

"ಒಂದು ದಿನ ಶಾಮು ಪದ್ಧತಿಯಂತೆ ತನಗೆ ಹೆಣ್ಣು ಕೊಡುವವರು ಯಾರೂ ಇಲ್ಲವಲ್ಲ. ಹೆಂಡತಿ ಇರುವವರಿಗೆ ಎರಡನೆ ಹೆಂಡತಿಯಾಗಲು ಹೆಣ್ಣು ಕೊಟ್ಟಿದ್ದಾರೆ; ನನ್ನ ಮೊದಲನೆ ಹೆಂಡತಿ ಸತ್ತ ದಿನ ನನಗೂ ಬಂಡಿಗಾಲಿ ಕೃಷ್ಣನಿಗೂ ಅನೇಕ ವರುಷಗಳ ದ್ವೇಷವಿದ್ದರೂ ಕೃಷ್ಣನ ಮಗಳಿಗೆ ಮದುವೆ ಯಾಗದೆ ಬೆಳೆದು ನಿಂತಿದ್ದುದರಿಂದ ಕೃಷ್ಣ ಶ್ಮಶಾನಕ್ಕೆ ಬಂದ. ನನ್ನ ಮೊದಲನೆ ಹೆಂಡತಿ ಶವಕ್ಕೆ ಬೆಂಕಿ ಮುಟ್ಟಿಸುವ ವರೆಗೆ ಸುಮ್ಮನೆ ಇದ್ದ. ಅನಂತರ ಶ್ಮಶಾನದಲ್ಲಿಯೇ, "ತನ್ನ ಮಗಳು ಬೆಳೆದು ನಿಂತಿದೆ. ಹಳೆಯ ಕಾಲದಿಂದ ಬಂದ ದ್ವೇಷ ಇನ್ನು ಮುಂದೆ ಬೇಡ" ಎಂದ. ಪುರೋಹಿತರೂ ಶವಕ್ಕೆ ಅಗ್ನಿ ಸಂಸ್ಕಾರ ಮಾಡಿದ್ದ ಬಾಯಿನಲ್ಲಿಯೇ "ಆಗಲಿ ಅದಕ್ಕೇನು ಶುಭಸ್ಯ ಶೀಘ್ರಂ; ಲಗ್ನ ಗೊತ್ತು ಮಾಡಿ ಬಿಡುತ್ತೇನೆ. ಆಲದ ಎಲೆಯ ಮೇಲಿನ ನೀರಿನಂತೆ ಇರಬೇಕು, ಯಾವುದನ್ನೂ ಯಾವಾಗಲೂ ಹಚ್ಚಿಕೊಂಡು ಹೋಗಬಾರದು; ಎಂದಾಗ ಹಿಂದೆ ಕೂತಿದ್ದ ಹಾಳು ರಾಮು "ನಿಮ್ಮಂತಹ ಕಟುಕರಿಗೆ ಹೆಂಡತಿ ಯಾಕೆ? ಹೆಂಡತಿ! ನಿಮಗೆ ನಾಚಿಕೆ ಬೇಡವೆ. ನೀವು ಚಂಡಾಲರು. ಎಲೋ ಕೃಷ್ಣ; ನಿನ್ನ ಮಗಳನ್ನು ತಂದು ಈ ಮೊಸಳೆ ಹೊಂಡಕ್ಕೆ ತಳ್ಳು; ಶ್ಮಶಾನದಲ್ಲಿ

ಸುಮಂಗಲಿಯಾಗಿ ಚಿತೆಯ ಮೇಲೆ ಮಲಗಿರುವ ಆ ಪುಣ್ಯಾತ್ಗಿತ್ತಿಯ ಎದುರಿಗೇ ನಿಮ್ಮ ಈ ವಿಕಟ ನರ್ತನ!'' ಎಂದನು. ಆದರೆ ರಾಮನ ಮಾತನ್ನು ಯಾರೂ ಲಕ್ಷ್ಯದಲ್ಲಿಟ್ಟಿಲ್ಲ ಎನ್ನಿ. ಇಟ್ಟಿದ್ದರೆ ನರಸಿಂಹಯ್ಯನಿಗೆ ಮೂರನೆಯ ಮದುವೆ ಎಲ್ಲಿ ಆಗ್ತಾ ಇತ್ತು. ನರಸಿಂಹಯ್ಯ ಮೂರನೆ ಮದುವೇನೆ ಮಾಡ್ಕೊ ಬಹುದಂತೆ; ನಾನು ಎರಡನೆ ಮದುವೆ ಮಾಡ್ಕೊಳೊಕಾಗದೆ? ಅವನಿಗೆ ೮ ಮಕ್ಕಳು ನನಗೆ ಐದು ಮಕ್ಕಳು ಎಂದು ನಾನು ಆಗ ಯೋಚಿಸಿದೆ. ಅಲ್ಲದೆ ರಾಮು ಒಂದು ಬಗೆಯ ಅರೆ ಹುಚ್ಚ. ಎಲ್ಲರೂ ತನ್ನ ಹಾಗೆಯೇ ಇರಬೇಕೆಂದು ಅವನ ಬಯಕೆ. ಇಲ್ಲದೆ ಇದ್ದಿದ್ದರೆ, ತನ್ನ ಹೆಂಡತಿ ಸತ್ತಮೇಲೆ ಅಂತಂತಹ ಒಳ್ಳೆಯ ಹೆಣ್ಣುಗಳು ಬಂದರೂ ''ದೇವರು ನನಗೆ ಒಬ್ಬಳು ಲಕ್ಷ್ಮಿಯನ್ನು ಕೊಟ್ಟ; ಅವಳನ್ನು ಇನ್ನು ಹೆಚ್ಚು ಕಾಲ ನಾನು ಇಟ್ಟುಕೊಳ್ಳಲಾರದೆ ಹೋದೆ. ಅಷ್ಟು ಸಾಕು ಇನ್ನು ಬೇಡ'' ಎನ್ನುತ್ತಿದ್ದನೇ. ಹೀಗೆ ಎರಡನೆಯ ಮದುವೆ ನನಗೆ ಸುಲಭವಾಯಿತು. ಈಗ ಅವಳೂ ಹೋದಳು. ಮೂರನೆಯ ಮದುವೆಗೆ ಯಾಕೆ ಇಷ್ಟು ಕಷ್ಟವಾಗಬೇಕು? ಲೋಕದಲ್ಲಿ ಎಲ್ಲಿ ನೋಡಿದರೂ ಹೆಣ್ಣುಗಳೇ ಕಣ್ಣಿಗೆ ಬೀಳುತ್ತಿವೆ. ಆದರೆ ನನಗೆ ಮಟ್ಟಿಗೆ ಒಂದು ಹೆಣ್ಣು ಇಲ್ಲವೆ? ಈ ಹಾಳು ರಾಮು ಬೇರೆ ''ವಿಧವೆಯನ್ನು ಮದುವೆಯಾಗು ಅಂತ ಹೇಳ್ತಾನೆ. ಅವ ಕಂಡಿರೋದು ಅದೊಂದೇ.''

''ಹೀಗೆ ನಾನು ನನ್ನ ಹಣೆಯಲ್ಲಿ ಮೂರನೆಯ ಲಗ್ನದ ಯೋಗವೇ ಇಲ್ಲವೇನೋ? ಈ ಐವತ್ತನೆಯ ವಯಸ್ಸಿನಲ್ಲಿ ಇನ್ನು ಹ್ಯಾಗೆ ಒಬ್ಬಂಟಿಗನಾಗಿ ಕಳೆಯಲಿ ಎಂದು ಯೋಚಿಸುತ್ತಾ ಹೋಗುತ್ತಿರುವಾಗ ಎದುರಿಗೆ ಜವನಪ್ಪ ಬರುತ್ತಾ ಇದ್ದ. ''ಏನಯ್ಯ ಜವನಪ್ಪ ಶೀಮೆಯೋರಿಗೆಲ್ಲ ಹೇಳ್ತಿಯ, ನನಗೂ ಸ್ವಲ್ಪ ಶಾಸ್ತ್ರ ಹೇಳಯ್ಯ'' ಎಂದೆ. ಮೊದಲು ಜವನಪ್ಪನಿಗೆ ಸ್ವಲ್ಪ ಆಶ್ಚರ್ಯವಾಯಿತು; ನಮ್ಮ ತಂದೆ ಬಳಿ ಶಿಷ್ಯನಾಗಿದ್ದವನು. ಅದುವರೆಗೆ ಜವನಪ್ಪ ಯಾವ ಬ್ರಾಹ್ಮಣರಿಗೂ ಶಾಸ್ತ್ರ ಹೇಳಿರಲಿಲ್ಲ. ಅವನೇನೂ ಶಾಸ್ತ್ರ ಹೇಳ್ತೀನಿ ಅಂತ ಮೇಲೆಬಿದ್ದು ಬರಲೇ ಇಲ್ಲ. ನಾನೇ ಅವನನ್ನ ಬಲಾತ್ಕರಿಸಿದೆ; ಅವನು ಹಿಂದೆಗೆಯುತ್ತಲೇ ಇದ್ದ. ಅನಂತರ ''ನನಗೆ ಮೂರನೆಯ ಹೆಂಡತಿಯ ಯೋಗವಿದೆಯೇನಯ್ಯ''

ಎಂದೆ. ಜವನಪ್ಪ "ನಡಿಯಿರಿ. ನಮ್ಮ ಮನೆಗೆ ಹೋಗೋಣ. ನೋಡಿ ಹೇಳು ತ್ತೇನೆ" ಎಂದ. ಮನೆಗೆ ಹೋದೆವು. ಅವನು ತಾನು ಶಾಸ್ತ್ರಹೇಳುವ ಮಣೆಯಮೇಲೆ ಕುಳಿತುಕೊಂಡು ಯಾವುದೋ ಪುಸ್ತಕ ಬಿಚ್ಚಿದ. ನಾನು ನೆಲದಮೇಲೆ ಕೂತೆ. ನಗುತ್ತಾ "ಸೊಂಟದಲ್ಲಿ ಏನಾದರೂ ದಕ್ಷಿಣೆ ಇದೆಯೋ" ಎಂದ. ನಾನು ಕೈಹಾಕಿನೋಡಿದೆ. ಒಂದಾಣೆ ಇತ್ತು. ಕೊಟ್ಟೆ. ಜವನಪ್ಪ "ಕೈತೋರಿಸಿ" ಎಂದ. ನೋಡಿ "ಮೂರನೆ ಹೆಂಡತಿಯ ಯೋಗವಿದೆ; ಆದರೆ ಒಂದು ವ್ರತಮಾಡಬೇಕು. ಹುಡುಗಿ ಒಳ್ಳೆ ಹದಿನೆಂಟುವರುಷದ ರತಿ. (ನಿಮಗಾಗಿಯೇ ಬೆಳೆದು ನಿಂತಿದ್ದಾಳೆ) ನಿಮ್ಮನ್ನು ನೀವು ಇರುವ ಜಾಗಕ್ಕೆ ಹುಡುಕಿಕೊಂಡು ಬರುತ್ತಾಳೆ" ಎಂದು ಹೇಳಿದ. ನಾನು ವ್ರತಮಾಡುವುದಕ್ಕೆ ನೂರು ರುಪಾಯಿ ಕೊಟ್ಟೆ."

ಶಾಮು ಹೇಳಿದ ಮಾತನ್ನು ಕೇಳುತ್ತಾ ಕೇಳುತ್ತಾ ನೆರೆದಿದ್ದವರಿಗೆ ಮೈ ಉರಿಯಿತು. ಬೈದು ಮನೆಗೆ ಕರೆದುಕೊಂಡು ಬಂದರು. ನಡೆದ ಸಂಗತಿ ಕೇಳಿ ರಾಮು ಶ್ಯಾಮುನ ಸತ್ತ ತಂದೆಯನ್ನು ಕುರಿತು "ಶೀನಣ್ಣ ನವರೇ ನಿಮ್ಮ ಮಕ್ಕಳ ಜ್ಞಾನ ಭಂಡಾರ ನೋಡಿ; ಭಗವಂತ ನಮ್ಮನ್ನು ನೀನೇ ಕಾಪಾಡಬೇಕು" ಎಂದನು.

ಇದರಲ್ಲಿ ಜವನಪ್ಪನದೇನೂ ತಪ್ಪು ಇಲ್ಲ. ತುಳಿಸಿಕ್ಕೊಳ್ಳುವವರು ಸಿದ್ಧರಾಗಿದ್ದರೆ ತುಳಿಯುವವರು ತುಳಿದೇ ತುಳಿಯುತ್ತಾರೆ. ನಿನ್ನ ಕಾಲನ್ನು ನನ್ನ ಹೆಗಲಿನಮೇಲೆ ಇಡು ಎಂದು ಹೇಳುವವರು ಇದ್ದರೆ ಕಾಲು ಇಡು ವವರ ಸಂಖೆಗೆ ಕಡಿಮೆಯಿಲ್ಲ. ಯಾರು ಸುತ್ತಮುತ್ತಲ ಪ್ರಾಂತಗಳಿಗೆಲ್ಲಾ ಪ್ರಾಜ್ಞರೆಂದೂ ಪಂಡಿತರೆಂದೂ ಸಾತ್ವಿಕರೆಂದೂ ತ್ಯಾಗಿಗಳೆಂದೂ ಪರಿಗಣಿ ತರಾಗಿದ್ದರೋ, ಅವರ ಮಕ್ಕಳನ್ನು (ತಂದೆಗಳಷ್ಟೇ ಅನುಕೂಲವಿದ್ದರೂ) ಸ್ವಲ್ಪ ಓದು ಬರಹ ಕಲಿತವರೂ ಸುಮಾರು ಅಕ್ಷರ ಕಲಿತವರೂ ಗುಂಡಿಗೆ ಕೆಡಗುತ್ತಿದ್ದಾರೆ. ಒಂದೇ ಕಣ್ಣು ಎರಡನ್ನೂ ನೋಡುತ್ತಿದೆ. ಊರಿಗೆ ಬಂದ ಡೆಪುಟಿ ಕಮಿಶನರು ತಂದೆಯ ಹತ್ತಿರ ಬಂದು ನಮಸ್ಕಾರ ಮಾಡಿ ಫಲಮಂತ್ರಾಕ್ಷತೆ ಆಶೀರ್ವಾದ ಪಡೆದು ಹೋಗುತ್ತಿದ್ದರು. ಈಗ ಶೇಕ ದಾರ, ಮಗನನ್ನು ಕರೆಸಿ ದಿಕ್ಕಾಪಾಲಾಗಿ ಬೈದು ಕಳುಹಿಸುತ್ತಿದ್ದಾನೆ. ಇಬ್ಬರಿಗೂ ಇದ್ದ ಶ್ಯಾನುಭೋಗತನ ಒಂದೇ. ಇಬ್ಬರ ಸಂಪಾದನೆಯೂ ಒಂದೇ. ತಂದೆಗೆ ವಿದ್ಯೆ ಇತ್ತು. ಅದರಿಂದ ತೃಪ್ತಿ ಧೈರ್ಯ ಉಂಟಾಗಿ

ದ್ದಿತು. ಮಗನಿಗೆ ವಿದ್ಯೆ ಇಲ್ಲ. ತೃಪ್ತಿಯೂ ಇಲ್ಲ. ಧೈರ್ಯವೂ ಇಲ್ಲ. ವಿವೇಕವೂ ಇಲ್ಲ. ಇದರ ಜತೆಗೆ ತಂದೆಯ ಕಾಲದಲ್ಲಿದ್ದ ಮತ್ತೊಂದೂ ಕಡಿಮೆಯಾಗುತ್ತಿದೆ. ಗ್ರಂಥಗಳ ರಾಶಿ.

ಇಂತಹ ಒಬ್ಬ ಶ್ಯಾನುಭೋಗರ ಮಗ ವರದ, ಹಾಸನಕ್ಕೆ ! ಹೀರೆ ಹಳ್ಳಿ ಮೇಷ್ಟರ ಜತೆಯಲ್ಲಿ ಹೋಗುತ್ತಿರುವಾಗ ಸುಮ್ಮನಿರಲಾರದೆ " ನನ್ನ ಹಳ್ಳಿ ಪಟೇಲನು ಅಮಲ್ದಾರರಿಗೆ ಕಂದಾಯದ ರೆಮಿಶನ್‌ಗೆ ಒಂದು ಅರ್ಜಿ ಹಾಕಬೇಕೆಂದು ಹೇಳಿದ್ದ. ಅದು ಏನಾಗಿದೆಯೋ ನೋಡಬೇಕು" ಎಂದ. ಮೇಷ್ಟರು "ತಾಲ್ಲೂಕು ಕಛೇರಿ ಕಾಗೆಗಳು ಸುಲಭವಾಗಿ ತೋರಿಸುವುದಿಲ್ಲ. ಎಂಟಾಣೆ ನಾಲ್ಕಾಣೆ ಬಿಚ್ಚಬೇಕು. ಕೊನೆಯ ಪಕ್ಷ ಒಂದು ಅರ್ಧ ಕಾಫಿನಾದರೂ ಕೊಡಿಸಬೇಕಾಗುತ್ತೆ" ಎಂದ. ಶ್ಯಾನು ಭೋಗ " ಅದೆಲ್ಲಾ ಬೇಕಿಲ್ಲ. ಗುಮಾಸ್ತರು ನನಗೆ ಚೆನ್ನಾಗಿ ಗೊತ್ತು" ಎಂದ. ಮೇಷ್ಟರು "ಆದರೆ ಅದು ನಿಮ್ಮ ಅರ್ಜಿಯಲ್ಲ ನೋಡಿ. ಬೇರೆ ಯವರ ಅರ್ಜಿ, ಗುಮಾಸ್ತರು ಅಷ್ಟು ಸುಲಭವಾಗಿ ಕೊಡುತ್ತಾರೆಯೇ" ಎಂದ. ಶ್ಯಾನುಭೋಗನು ಬೇರೆಯವರದೇನು ; ಪಟೇಲನದು ತಾನೆ. ಪಟೇಲನೇನು ನಾನೇನು ? ಅರ್ಜಿ, ಬರೆದೋನೂ ನಾನೇ; ಅವನ ರುಜು ಹಾಕಿದೋನೂ ನಾನೇ" ಎಂದನು. ಮೇಷ್ಟರು ಇದ್ದಕ್ಕಿದ್ದಂತೆ ಪಾದರಸ ದಂತೆ " ಪಟೇಲನ ರುಜು ನೀವು ಹಾಕಿದಿರಾ ? ಹಾಗಾದರೆ ನೀವು ಸತ್ತಿರಿ. ಈ ಅಮಲ್ದಾರನ ವಿಷಯ ನಿಮಗೆ ಗೊತ್ತಿಲ್ಲ. ಜನಗಳನ್ನು ಮಟ್ಟ ಹಾಕು ವುದಕ್ಕೆ ಇಂತಹ 'ಕೇಸು' ಸಿಕ್ಕುತ್ತೈ ಅಂತ ಕಾಯ್ಕೊಂಡಿದಾರೆ. ಸರಿ ಫೋರ್ಜರಿಗೆ ನಿಮಗೆ ನಾಲ್ಕು ವರುಷ ಬೀಳುತ್ತೆ" ಎಂದರು. ಶ್ಯಾನು ಭೋಗನಿಗೆ ಕಾಲು ನಡುಗಲು ಪ್ರಾರಂಭವಾಯಿತು. ಅವನ ಮೈಯೆಲ್ಲಾ ಬೆವತಿತು. ಅವನು ಸ್ವಲ್ಪ ಹೆದರಿದುದನ್ನು ನೋಡಿ ಮೇಷ್ಟರು ತಮ್ಮ ಮಾತನ್ನೇ ಬಲಪಡಿಸುತ್ತಾ ಹೋದನು. "ಆಗಲೇ ಇಷ್ಟು ಹೊತ್ತಿಗೇ ತಾಲ್ಲೂಕು ಕಛೇರಿಯಲ್ಲಿ ಏನೇನು ಆಗಿದೆಯೋ" ಎಂದನು. ಶ್ಯಾನು ಭೋಗನಿಗೆ ತನ್ನ ಕೈಗೆ ಆಗಲೇ ಬೇಡಿ ಬಿದ್ದಂತೆ ಭಾಸವಾಯಿತು. ಅವನು ಮೇಷ್ಟರಿಗೆ ಉಪಚಾರದ ಮಾತುಗಳನ್ನು ಹೇಳಲು ಪ್ರಾರಂಭಿಸಿದನು. ಹಾಸನದ ಊರುಬಾಗಿಲಿಗೆ ಹೋಗುವ ವೇಳೆಗೆ ಅವನು ಮೇಷ್ಟರ ಕಾಲಿಗೆ ಬೀಳುವುದೊಂದು ಮಾತ್ರ ಬಾಕಿ ಇತ್ತು.

ಹಾಸನದ ಊರು ಬಾಗಿಲಿನಲ್ಲಿ ಮೇಷ್ಟರು "ಆಗುವುದು ಆಗಿ ಹೋಯಿತು. ಅಮಲ್ದಾರರ ಗುಮಾಸ್ತ ನನಗೆ ಚೆನ್ನಾಗಿ ಸ್ನೇಹ. ಹೋಗಿ ಸಾಧ್ಯವಾದುದನ್ನು ಮಾಡಿ ಬರುತ್ತೇನೆ. ಎಲ್ಲಿ? ಇಲ್ಲಿ ಇಪ್ಪತ್ತೈದು ರುಪಾಯಿ ಕೊಡಿ. ಸ್ವಲ್ಪ ಚೆನ್ನಾಗಿ ಅಡಿಗೆ ಮಾಡಿ ; ಕಛೇರಿಗೆ ಹೋಗಿ ಬರುತ್ತೇನೆ. ನೀವು ಇವತ್ತು ಎಲ್ಲೂ ಹೆಚ್ಚಾಗಿ ಹೊರಗೆ ಕಾಣಿಸಿಕೊಳ್ಳ ಬೇಡಿ. ಅಂಗಡಿಯಿಂದ ಸಾಮಾನುಗಳನ್ನು ಈ ಮುಸಾಫರ್ ಖಾನೆ ಆಳಿನ ಹತ್ತಿರ ತರಿಸಿಕೊಳ್ಳಿ" ಎಂದು ಹೇಳಿದರು. ಶ್ಯಾನುಭೋಗರು "ಅಪ್ಪಾ ಪಂಚಭಕ್ಷ ಪರಮಾನ್ನ ಮಾಡಿ ಇಟ್ಟಿರ್ತೇನೆ. ನೀನು ಹಾಕಿದ ಗೆರೆ ಮೀರೋ ದಿಲ್ಲ. ಸದ್ಯ ಇದೊಂದು ಸಲ ಈ ಹಾವಿನ ಕೈಯಿಂದ ತಪ್ಪಿಸಿಕೊಂಡರೆ ಸಾಕಾಗಿದೆ" ಎಂದರು. ಮೇಷ್ಟರು ಹೋಗಿ ಅಂಗಡಿಯಲ್ಲಿ ತಮ್ಮ ಮನೆಗೆ ಬೇಕಾದ ಸಾಮಾನುಗಳನ್ನೂ ಎರಡು ಸೀರೆ ಪಂಚೆ ಬಟ್ಟೆ ಎಲ್ಲ ವನ್ನೂ ಕಟ್ಟಿಸಿಟ್ಟು ರಾತ್ರಿ ಊಟದ ಹೊತ್ತಿಗೆ ಮುಸಾಫರ್ ಖಾನೆಗೆ ಬಂದು ಶ್ಯಾನುಭೋಗ ಮಾಡಿಟ್ಟಿದ್ದ ಪಾಯಸದ ಊಟವನ್ನು ಚೆನ್ನಾಗಿ ಗಿಟ್ಟಿಸಿ ದರು. ಅನಂತರ "ಸ್ವಾಮಿ ಮೋಚಿಸಿ ಬಂದೆ. ಈ ಸಲಕ್ಕೆ ಆಯಿತು. ಕಛೇರಿ ಗುಮಾಸ್ತರು ಯಾರ ಕೈಲಾದರೂ ಈ ಮಾತು ತೆಗೆದೀರಿ. ಮಾತ ನಾಡಿದರೆ ಭುಸನಾಗಪ್ಪ ಹೊರಕ್ಕೆ ಬಂದಾತು" ಎಂದರು. ಶ್ಯಾನು ಭೋಗನು "ಸದ್ಯ ಬದುಕಿದೆ. ನಾಲಿಗೆ ಕುಯ್ದರೂ ಮಾತನಾಡುವು ದಿಲ್ಲ" ಎಂದನು.

ಇವರ ತಂದೆಯವರನ್ನು ಪರಕಾಲ ಸ್ವಾಮಿಗಳು, ಮಠಕ್ಕೆ ಕರೆಸಿ ಕೊಂಡು ಭಗವದ್ಗೀತೆಯಲ್ಲಿ ಅವರು ಬಹು ವಿಷಯ ಸಂಗ್ರಹಮಾಡಿರುವು ದನ್ನು ಅರಿತವರಾದುದರಿಂದ, ಮಠದ ವಾಸಿಗಳಿಗೆಲ್ಲಾ ಅವರಿಂದ ಕೆಲವು ತಿಂಗಳು ಬೋಧನೆ ಕೊಡಿಸಿದರು. ಅದನ್ನೂ ಇದನ್ನೂ ಒಂದೇ ಕಣ್ಣು ನೋಡುತ್ತಿದೆ.

ಈ ಪ್ರಾಜ್ಞರ ವಿಚಾರ ಇನ್ನೊಂದು ಸಂಗತಿ ಹೇಳಿ ಮುಂದುವರಿಸು ತ್ತೇವೆ. ವಾಚಸ್ಪತಿ ಶೋಭೆರಾಯ—ಇವರ ತಂದೆಯವರಿಗೆ ವಾಚಸ್ಪತಿ ಎಂದು ಜನರು ಕರೆಯುತ್ತಿದ್ದರು—ಈ ಬಿರುದು ಅವರಿಗೆ ಯಾರೂ ಕೊಟ್ಟಿ ದಲ್ಲ. ಜನರು ಅವರ ಹತ್ತಿರ ಮಾತನಾಡುತ್ತಾ ಮಾತನಾಡುತ್ತಾ ಆ ಹೆಸರನ್ನೇ ಖಾಯಂ ಮಾಡಿದ್ದರು—ಮಗನ ಹೆಸರು ಶೋಭೆರಾಯ ; ಮಗ

ಅರ್ಕಲಗೂಡಿನಿಂದ ಮಲ್ಲಿಗೆಹಳ್ಳಿಗೆ ಟಪಾಲು ಚೀಲ ತರುವವನಾಗಿದ್ದ. ಚೀಲತಂದು ಪೋಸ್ಟಾಪಿಸಿಗೆ ಹಾಕಲು ಅವನಿಗೆ ಪೋಸ್ಟಲ್ ಇಲಾಖೆಯ ವರು ತಿಂಗಳಿಗೆ ಎರಡು ರುಪಾಯಿ ಸಂಬಳ ಗೊತ್ತುಮಾಡಿದ್ದರು. ಶೋಭೆ ರಾಯನ ಎದುರು ಮನೆಯ ಅಪ್ಪಣ್ಣ ; ಈ ಕೆಲಸವನ್ನು ಒಂದುವರೆ ರುಪಾ ಯಿಗೆ ಮಾಡುತ್ತೇನೆಂದು ಪೋಸ್ಟಾಫೀಸಿಗೆ ಪದೇ ಪದೇ ಅರ್ಜಿ ಹಾಕು ತ್ತಿದ್ದ. ಈ ಅಪ್ಪಣ್ಣನ ತಂದೆ ಬದುಕಿರುವ ಕಾಲದಲ್ಲಿ ಬಾಯಿನಲ್ಲಿ ಹರಿ ಕಥೆ ಪುರಾಣ ಹೇಳುತ್ತಿದ್ದರು. ಅವರಿಗೆ ಯಾವ ಪಕ್ಕವಾದ್ಯಗಳ ಆವಶ್ಯ ಕತೆಯೂ ಇರಲಿಲ್ಲ. ಎರಡು ಮೂರು ನಾಲ್ಕು ದಿನಗಳಿಗೊಂದು ಸಲ ವಿಶೇಷ ದಿನಗಳಲ್ಲಿ ಹಬ್ಬಗಳಲ್ಲಿ ಯುಗಾದಿ ದೀವಳಿಗೆಯಲ್ಲಿ ಒಂದೊಂದು ಪುರಾಣ ಸರಾಗವಾಗಿ ನಿಂತುಕೊಂಡು ಹೇಳುತ್ತಿದ್ದರು. ಮಧ್ಯೆ ಮಧ್ಯೆ ಅದನ್ನೇ ಸ್ವಲ್ಪ ರಾಗವಾಗಿ ಹಾಡುತ್ತಿದ್ದರು. ಸುಗ್ಗಿಯ ಕಾಲದಲ್ಲಿ ಪ್ರತಿ ನಿತ್ಯಾ ಒಂದು ಕಣದಲ್ಲಿ—ಒಂದೊಂದು ಸಮಯದಲ್ಲಿ ಪ್ರ ತಿ ನಿ ತ್ಯ ಒಂದೊಂದು ಊರಿನಲ್ಲಿ—ಕತೆ ಮಾಡುತ್ತಿದ್ದರು. ಈ ರಾಜ್ಯವನ್ನೆಲ್ಲಾ ನಡೆಸಲು ದುಡಿಯುವ ರೈತ ಅವರೊಬ್ಬರನ್ನು ಸಾಕಲಾರದವನಾದನೆ? ಅ ವರ ಮನೆಯಲ್ಲಿ ಯಾವಾಗಲೂ ಸಮೃದ್ಧಿಗೆ ಕೊರೆಯಿರಲಿಲ್ಲ. ಇಷ್ಟರ ಮೇಲೆ ಅವರಿಗೆ ಬೇಕಾಗಿದ್ದುದಿು ತಾನೆ ಏನು? ಅವರು ಯಾವಾಗಲೂ, ಒಂದುವರೆ ರುಪಾಯಿಗೆ ಟಪಾಲು ಚೀಲ ಹೊರುತ್ತೇನೆಂದು ಅರ್ಜಿ ಹಾಕ ಲಿಲ್ಲ. ಅವರು ಯಾವ ಹುದ್ದೆಗೂ ಅರ್ಜಿ ಹಾಕಿದವರೇ ಅಲ್ಲ.

ಅಪ್ಪಣ್ಣ ವಾಚಸ್ಪತಿ ಶೋಭೆರಾಯನ ಮೇಲೆ ನಾರಾಯಣಿ—(ಮೂಗರ್ಜಿ)ಗಳನ್ನೂ ಬಿಟ್ಟ. ಒಂದು ದಿನ ಟಪಾಲು ಚೀಲ ತೆಗೆದು ಕೊಂಡು ಶೋಭೆರಾಯ ಬರುತ್ತಿರುವಾಗ ದಾರಿಯಲ್ಲಿ ಅಪ್ಪಣ್ಣ ಹಸು ಮೇಯಿಸುತ್ತಾ ನಿಂತಿದ್ದ. ಶೋಭೆರಾಯ "ಏನಯ್ಯಾ ನಿತ್ಯಾ ನನ್ನ ಮೇಲೆ ನಾರಾಯಣಿ ಬಿಡ್ತಾ ಇದ್ದೀಯೆಲ್ಲಾ, ಈ ದೊಡ್ಡ ಹುದ್ದೆಗೆ" ಎಂದ. ನಾರಾಯಣಿ ಬಿಟ್ಟವನು ನಾರಾಯಣಿ ಬಿಟ್ಟುದನ್ನ ಒಪ್ಪಿಕೊಳ್ಳು ತ್ತಾನೆಯೇ? ಎಂದೂ ಇಲ್ಲ. ಇಬ್ಬರಿಗೂ ಸ್ವಲ್ಪ ಬಿರುಸಾಗಿ ಮಾತುಕತೆ ನಡೆಯಿತು. ಶೋಭೆರಾಯ ಮನೆಗೆ ಹೋಗಿ "ಅಪ್ಪಣ್ಣ ಟಪಾಲುಚೀಲ ಕಿತ್ತುಕೊಳ್ಳುವುದಕ್ಕೆ ಬಂದಿದ್ದ. ಸರಿಯಾದ ಬಂದೋಬಸ್ತು ಆಗಬೇಕು" ಎಂದು ಟಪಾಲ್ ಹೆಡ್ ಆಫೀಸಿಗೆ ಒಂದು ಅರ್ಜಿ ಬರೆದ. ಟಪಾಲು

ಹೆಡ್ ಆಫೀಸಿಗೆ ಅರ್ಜಿ ಬರೆದರೆ ಅದನ್ನು ಹಳ್ಳಿಯ ಪೋಸ್ಟು ಮಾಸ್ಟರು ನೋಡದೆ ಇರುತ್ತಾನೆಯೇ. ನೋಡಿ ತಮಗೆ ವಿರೋಧವಾಗಿದ್ದರೆ ಅದನ್ನು ಹರಿದು ಹಾಕದೆ ಇರುತ್ತಾನೆಯೆ? ಹಳ್ಳಿಗಳಲ್ಲಿ ಬಂದ ಕಾಗದಗಳನ್ನು ಬಿಚ್ಚಿ ಓದದೆ, ರಿಜಸ್ಟರ್ ಆಗದೆ ಬಂದ ಕ್ಯಾಲೆಂಡರ್ ಡೈರಿ ಪತ್ರಿಕೆಗಳನ್ನು ಯಾರ ವಿಳಾಸಕ್ಕೆ ಅವು ಬಂದಿವೆಯೋ ಅವರು ಎದುರಿಗೆ ಇಲ್ಲದಿದ್ದರೆ ಅವರಿಗೆ ಕೊಡುವಂತಹ ಮುಟ್ಠಾಳ ಪೋಸ್ಟುಮಾಸ್ಟರು ಎಲ್ಲೂ ಇಲ್ಲ. ಪೋಸ್ಟು ಮಾಸ್ಟರು ಶೋಭೆರಾಯ ಬರೆದಿದ್ದ ಅರ್ಜಿನೋಡಿ "ಇದು ಬರಿಯ ಸುಳ್ಳು" ಎಂದು ತಿಳಿದು ಹರಿದುಹಾಕಿದ. ಹೀಗೆ "ಶೋಭೆರಾಯ ಒಂದು ಅರ್ಜಿ ಕೊಟ್ಟಿದ್ದ. ಹರಿದು ಹಾಕಿದೆ" ಎಂದು ಅವನು ಪೇಟೆ ಚೆನ್ನಾರಾಯಿಗೆ ಒಂದು ದಿನ ಹೇಳಿದ.

ಇದು ನಡೆದ ಸುಮಾರು ಎರಡು ತಿಂಗಳಿನ ನಂತರ ಒಂದು ದಿನ ಒಬ್ಬ ಪೋಲೀಸ್ ಜವಾನ, ಮಲ್ಲಿಗೆಹಳ್ಳಿಯ ಸಂತೆಯಲ್ಲಿ ಇನಿಸ್ಪೆಕ್ಟರಿಗೆ ಬೆಣ್ಣೆ ತೆಗೆದುಕೊಂಡು ಹೋಗಬೇಕೆಂದು ಬಂದು, ಸಂತೆ ಕೂಡುವವರೆಗೆ ಸ್ಕೂಲು ಬಾಗಿಲಿನಲ್ಲಿ ಕುಳಿತ. ಸ್ಕೂಲಿನ ಹತ್ತಿರದ ಮನೆಯುವನಾದ ಚನ್ನಾರಾಯಿ ಅವನ ಜತೆಯಲ್ಲಿ ಬಂದು ಕುಳಿತ. ಇಬ್ಬರೂ ಎಲೆ ಅಡಿಕೆ ಹಾಕಿಕೊಳ್ಳುತ್ತಾ ಅದು ಇದು ಮಾತನಾಡುತ್ತಾ ಕುಳಿತಿದ್ದರು. ಶೋಭೆರಾಯ ಟಪಾಲುಚೀಲ ಹೆಗಲ ಮೇಲೆ ಹಾಕಿಕೊಂಡು ಆ ದಾರಿಯಲ್ಲಿ ಬಂದ. ಪೋಲಿಸಿನವನನ್ನು ಕಂಡ ಕೂಡಲೆ ಅವನಿಗೆ ಸ್ವಲ್ಪ ಗಾಬರಿಯಾಯಿತು. ಅವನು ಚೆನ್ನಾರಾಯಿಯನ್ನು ಇಲ್ಲಿ ಬಾ ಎಂದು ಕರೆದು ಪೋಲೀಸಿನವನು ಯಾಕೆ ಬಂದಿಧ್ದಾನೆ ಎಂದು ಕೇಳಿದ. ಚೆನ್ನಾರಾಯಿ "ನೀವು ಸುಳ್ಳು ದೂರು ಕೊಟ್ಟಿದ್ದೀರಂತೆ, ವಿಚಾರಿಸುವುದಕ್ಕೆ ಬಂದಿದ್ದಾನೆ. ಪೋಸ್ಟ್ ಸಮಾಚಾರ ಗೊತ್ತಿಲ್ಲ" ಎಂದ. ಶೋಭೆರಾಯ ಯಾವ ಅಪಾಯ ಎಲ್ಲಿ ಬರುತ್ತದೆಯೋ ಎಂದು ಹೆದರಿದ್ದನೋ ಆ ಅಪಾಯ ಬಂತೇ ಬಂತು. ಅವನು "ಮತ್ತೆ ಇಲ್ಲಿ ಯಾಕೆ ಕೂತಿದ್ದಾನೆ ಪೋಲಿಸಿನವನು" ಎಂದ. ಚನ್ನಾರಾಯಿ "ಇವನು ನನ್ನ ನೆಂಟ. ವಿಚಾರ ತಿಳಿದು ನಾನೇ ನೀವು ನನಗೆ ಬೇಕಾದವರಾದುದರಿಂದ ನಿಲ್ಲಿಸಿದೆ. ನಿಮ್ಮ ತಲೆಗೆ ಬಂದಿದೆ" ಎಂದ. ಶೋಭೆರಾಯನಿಗೆ ಎಲ್ಲಾ ಭಯಕ್ಕಿಂತ ಹೆಚ್ಚಾಗಿ ಈ ವಿಷಯ ಅಪ್ಪಣ್ಣನಿಗೆ ತಿಳಿದು ಅವನ ಜಂಬ ಹೆಚ್ಚಿಬಿಡುತ್ತೆಲ್ಲ

ಎಂಬ ಹೊಟ್ಟೆಕಿಚ್ಚು ಬಲವಾಗಿದ್ದಿತು. ಅವನು "ಏ ಚೆನ್ರಾಯಿ. ಹೇಗಾದರೂ ಮಾಡಿ ಸರಿಮಾಡಿ ಕಳುಹಿಸು. ಅರ್ಜಿಕೊಡುವಾಗ ಕೊಟ್ಟು ಬಿಟ್ಟೆ. ಸಾಕ್ಷಿ ಇಲ್ಲದ ದೂರು ಕೊಡಬಾರದಾಗಿತ್ತು ಅನ್ನೋದು ಆಮೇಲೆ ಗೊತ್ತಾಯಿತು. ಕೈ ಮಿಂಚಿಹೋಯಿತು. ನಿಮ್ಮ ನೆಂಟ ಅನ್ನತೀಯ. ಈ ಉಪಕಾರ ಮಾಡು" ಎಂದ. ಚೆನ್ನರಾಯಿ "ಅದಕ್ಕೇ ಮತ್ತೆ ನಿಲ್ಲಿ ಸಿದ್ದು. ಆದರೆ ಪೋಲೀಸಿನವರು ಸುಮ್ಮನೆ ಹೋಗ್ತಾರ್ಯೆ. ಅವರಿಗೆ ಸರಿ ಯಾದ ಮರ್ಯಾದೆ ಮಾಡಬೇಕಲ್ಲ. ಹದಿನೈದು ರುಪಾಯಿ ತೆಗೆದುಕೊಂಡು ಬನ್ನಿ. ನೆಂಟಸ್ತನದ ಹೆಸರು ಹೇಳಿ ಕಾಲು ಹಿಡಕೊತೀನಿ; ಇಲ್ಲದೆ ಹೋದರೆ ನಿಮಗೆ ಒಂದು ವರುಷ ಬೆಂಗಳೂರು ಅರಮನೆ" ಎಂದ. ಶೋಭೆರಾಯ ಮನೆಗೆ ಹೋಗಿ ಹದಿನೈದು ರುಪಾಯಿ ಹೊಂಚಿ ಚೆನ್ರಾಯಿ ಕೈಗೆ ತಂದು ಕೊಟ್ಟ. ಚೆನ್ನ್ರಾಯಿ ಆವತ್ತು ಮಧ್ಯಾಹ್ನದ ವರೆಗೆ ಪೋಲೀಸ್ ಜವಾ ನನ ಜತೆ ಬಿಡಲಿಲ್ಲ. ಅನಂತರ ಅವನ ಜತೆಯಲ್ಲಿಯೇ ಸಂತೆಗೆ ಹೋಗಿ ಅವನು ಎಲ್ಲಿ ಅಕಸ್ಮಾತ್ತು ಊರ ಕಡೆಗೆ ತಿರುಗಿಬಿಡುತ್ತಾನೋ ಎಂಬ ಭಯದಿಂದ ಅವನ ಜತೆಯಲ್ಲಿ ಒಂದು ಮೈಲಿ ದೂರ ಮಾತನಾಡುತ್ತಾ ಅವನನ್ನು ಹಾಸನದ ದಾರಿಯಲ್ಲಿ ಸಾಗಹಾಕಿ ಬಂದನು.

---

## ೨೨. ಮಂತ್ರಗಳು ಪುರೋಹಿತನ ಹೆಗಲ ಮೇಲೆಯೇ

---

ಯಜಮಾನರು ಸ್ವರ್ಗಸ್ಥರಾದ ಇಪ್ಪತ್ತು ವರುಷಗಳಲ್ಲಿ ಮಲ್ಲಿಗೆ ಹಳ್ಳಿಗೆ ಈ ಅವಸ್ಥೆ ಬಂದಿತ್ತು. ಸಾಯುವುದಕ್ಕೆ ಹತ್ತು ವರುಷಗಳ ಮುಂಚೆ ಯಜಮಾನರು ಹಳ್ಳಿಯವರನ್ನೆಲ್ಲಾ ಕರೆಸಿ "ಅಪ್ಪಾ ತರ್ಕ ವ್ಯಾಕರಣ ಸಾಹಿತ್ಯ ಎಲ್ಲಾ ನನ್ನೊಂದಿಗೇ ಸಮಾಧಿಯಾಗುವಂತೆ ಕಾಣು ತ್ತದೆ. ನನ್ನ ಹಿರಿಯ ಮಗ ವೇದಾಂತ ಎಲ್ಲವನ್ನೂ ಕಲಿತಿದ್ದಾನೆ. ಆದರೆ ಜನರೊಂದಿಗೆ ಹೊಂದಿಕೊಂಡು ಅವುಗಳನ್ನೆಲ್ಲಾ ಜನೋಪಕಾರಕ್ಕೆ ಉಪ ಯೋಗಿಸುವ ಸಹನೆ ಅವನಿಗೆ ಇಲ್ಲ. ಹಿಂದೂಗಳಲ್ಲಿ ಇನ್ನೂ ಮದುವೆ, ಮುಂಜಿ, ತಿಥಿ, ಸತ್ತವನ ಕರ್ಮಗಳು, ಇಷ್ಟು ಇವೆ. ಇವುಗಳನ್ನಾದರೂ ಸ್ವಲ್ಪ ತಿಳಿದುಕೊಳ್ಳಿ"ಎಂದು ಬಲಾತ್ಕರಿಸಿದರು. ಯಜಮಾನರ ಮಾತಿನಂತೆ ಕೆಲವರು ಅವರ ಹತ್ತಿರ ಕಲಿಯಲು ಪ್ರಾರಂಭಿಸಿದರು. ಹೀಗೆ ವೈದಿಕ ವಿದ್ಯೆ

ಯನ್ನು ಪ್ರಾರಂಭಿಸಿದ ಕೂಡಲೆ ಮಲ್ಲಿಗೆಹಳ್ಳಿಯಲ್ಲಿ ಅಸಾಧ್ಯವಾದ ನಾಮದ ಗದ್ದಲವಾಯಿತು. ರಾಮುವು "ನಾಮದ ಬಲವೊಂದಿದ್ದರೆ ಸಾಕು" ಎಂದು ಹೇಳುತ್ತಲೇ ಇದ್ದನು. ಮುಖ್ಯವಾಗಿ ಮುತ್ತಣ್ಣ ವಾಧ್ಯಾರು ಮತ್ತು ಘಂಟಾವತಾರ, ಇವರಿಗೆ ನಾಮಕ್ಕಾಗಿಯೇ ಒಂದು ಇಲಾಖೆ ಏರ್ಪಡಿಸಬೇಕಾಯಿತು. ಘಂಟಾವತಾರರು (ವಿಶಿಷ್ಟಾದ್ವೈತದ ಮುಖ್ಯ ಆಚಾರ್ಯರಾದ ವೇದಾಂತ ದೇಶಿಕರು ಘಂಟೆಯ ಅವತಾರವೆಂದು ಪ್ರಸಿದ್ಧಿ) ಪ್ರತಿ ನಿತ್ಯವೂ ಹನ್ನೆರಡು ನಾಮಗಳನ್ನು ಹಾಕಲು ಪ್ರಾರಂಭಿಸಿದರು. ಒಂದೊಂದು ಸಲ ಅವರಿಗೆ "ಮೈಯ್ಯಲ್ಲಿ ಇನ್ನೂ ಜಾಗ ಇದೆ. ಹನ್ನೆರಡೇ ಯಾಕೆ ಹಾಕಬೇಕು. ಹದಿನಾಲ್ಕು ಹದಿನಾರು ಯಾಕೆ ಹಾಕಬಾರದು" ಎಂದು ತೋರುತ್ತಿತ್ತು. ಒಂದು ದಿನ ರಾಮು "ಸ್ವಾಮಿ ತಮಿಳು ನಾಡಿನಲ್ಲಿ ಈ ವಿಚಾರದಲ್ಲಿ ಚರ್ಚೆಯೇ ನಡೆಯುತ್ತಿದೆ" ಎಂದು ಹಾಸ್ಯಮಾಡಿದನು. ಇದ್ದಕ್ಕಿದ್ದಂತೆ ಮೇಲುಕೋಟೆಗೆ, ಹೀಗೆ ನಾಮದ ಗಿರಾಕಿ ಹೆಚ್ಚಾದ ಕೂಡಲೆ ಅಲ್ಲಿಯ ಒಬ್ಬ ನಾಮವಾದಿ—ನಾಮ ವ್ಯಾಪಾರಿಗಳು ಮಲ್ಲಿಗೆಹಳ್ಳಿಗೆ ಬಂದು ಘಂಟಾವತಾರರ ಹತ್ತಿರ ಮಾತುಕಥೆ ಆಡಿಕೊಂಡು "ನಾಮವನ್ನು ಇಷ್ಟೇ ಹಾಕಬೇಕು ಎಂಬ ನಿಯಮವಿಲ್ಲ. "ಅಧಿಕಸ್ಯ ಅಧಿಕಂ ಫಲು" ಸ್ಮಾರ್ತರು ನೋಡಿ, ಸ್ವಲ್ಪ ಹೆಚ್ಚು ಕಡಿಮೆ ನೂರು ವಿಭೂತಿ ಹಚ್ಚುತ್ತಾರೆ. ಮಾಧ್ವರು ನಿಮಿಷಕ್ಕೆ ನೂರರಂತೆ ಹತ್ತು ನಿಮಿಷ ಮೈಗೆ ಮುದ್ರೆ ತಾಡಿಸುತ್ತಾರೆ. ನಮ್ಮ ನಾಮಧಾರಿಗಳಿಗೆ ಯಾಕೆ ಮನಸ್ಸು ಸಂಕುಚಿತ? ಧಾರಾಳವಾಗಿ ಉಪಯೋಗಿಸಿ. ನಮ್ಮ ಯಾದವಗಿರಿ (ಮೇಲುಕೋಟೆ)ಗೆ, ಪರಮಾತ್ಮನ ವಾಹನವಾದ ಗರುಡ ಕೃತಯುಗದಲ್ಲಿ ಈ ಶ್ವೇತ ಮೃತ್ತಿಕೆಯನ್ನು ದಯಪಾಲಿಸಿದ. ಪ್ರತಿ ಯುಗದಲ್ಲಿ ಮತ್ತೆ ಮತ್ತೆ ದಯಪಾಲಿಸಬೇಕೆಂದು ಮಾಡಿದ್ದ. ಹೀಗೆಯೇ ತ್ರೇತದ್ವಾಪರದಲ್ಲಿಯೂ ನಡೆಯಿತು. ಆದರೆ ಕಲಿಯುಗದಲ್ಲಿ ಜನಕ್ಕೆ ಇದರಲ್ಲಿ ಶ್ರದ್ಧೆ ಕಡಿಮೆಯಾಯಿತು. ಇನ್ನೂ ಶ್ವೇತ ಮೃತ್ತಿಕೆ ನಮ್ಮಲ್ಲಿದ್ದದ್ದು ಕರಗಿಯೇ ಇಲ್ಲ. ವ್ರಾತ್ಯರು ಊರ್ಧ್ವಪುಂಡಕ್ಕೆ (ನಾಮ) ಮಾತ್ರವಲ್ಲದೆ ಇದನ್ನು ಇನ್ನೂ ಯಾವುದಾವುದಕ್ಕೊ ಉಪಯೋಗಿಸುತ್ತಾರೆಂದು ಕೇಳಿದೆ. ನಮ್ಮ ಸ್ವಕ್ಷೇತ್ರದಲ್ಲಿಯೇ ಕೆಲವು ಅಧಮರು ಈ ಪವಿತ್ರವಾದ ಶ್ವೇತ ಮೃತ್ತಿಕೆಯಿಂದ "ಬೂಟ್ಸು ಪಾಲಿಷ್, ಸೀಮೆಸುಣ್ಣ

ಮುಂತಾದ ನರಕ ಭಾಜಕಗಳಿಂದ ಕಸಬುಗಳನ್ನು ಯಾಕೆ ಪ್ರಾರಂಭಿಸ ಬಾರದು?'' ಎಂದು ಕೇಳುತ್ತಿದ್ದಾರೆ. ಪರಮಾತ್ಮನ ಕ್ರೋಧದ ಸಿಡಿಲು ಅವರ ಮೇಲೆ ಬೀಳುವುದರಲ್ಲಿ ಸಂದೇಹವಿಲ್ಲ. ಆಗ ಲೋಕದಲ್ಲಿ ಒಂದು ಬೂಡುಸೂ ಇಲ್ಲದಂತೆ ಆಗುವುದು. ನಮ್ಮಲ್ಲಿ ಈ ಶ್ವೇತ ಮೃತ್ತಿಕೆ ಬೇಕಾದ ಹಾಗೆ ಇದೆ. ನಿಮ್ಮಲ್ಲಿ ಹೇಮಾವತಿಯ ನೀರು ಬೇಕಾದ ಹಾಗೆ ಇದೆ. ಭಗವಂತನ ಕೈಂಕರ್ಯ ನಡೆಯಲಿ'' ಎಂದರು.

ಆಗ ವಿಶಿಷ್ಟಾದ್ವೈತ ಧ್ವಜವೆಂದು ಈಚೆಗೆ ವಿನೋದದ ಹೆಸರನ್ನು ಹೊಂದಿರುವ ಮುತ್ತಣ್ಣ ಪಾಧ್ಯಾರ್ರು "ಸ್ವಾಮಿಗಳು ಅಪಣೆ ಕೊಡಿಸು ವುದು ಸರಿ. ಆದರೆ ಪ್ರತಿದಿನವೂ ದ್ವಾದಶೋರ್ಧ್ವ ಪುಂಡರ ಧರಿಸುವು ದಕ್ಕೆ ಬಹಳ ಹೊತ್ತು ಹಿಡಿಯುತ್ತೆ. ಶ್ವೇತ ಮೃತ್ತಿಕೆಯೇನೋ ಗುರುಡ ಪೆರುಮಾಳ್ (ಪರಮಾತ್ಮ) ಕೃಪೆಯಿಂದ ಅಗ್ಗವಾಗಿಯೇ ದೊರೆಯುತ್ತಿದೆ. ಆದರೆ ಶ್ರೀಚೂರ್ಣ (ಕೆಂಪು ನಾಮ) ದಿನದಿನಕ್ಕೆ ಬೆಲೆ ಏರುತ್ತಿದೆ. ವೈದಿ ಕರಿಗೆ ಇದನ್ನು ಮಾರುವ ಶುರಕರು ಇದರ ಬೆಲೆ ಏರಿಸುತ್ತಿದ್ದಾರೆ. ಅದನ್ನು ಭಗವಂತ ಯಾವ ಸ್ಥಳದಲ್ಲಿಯೂ ತನ್ನ ವಾಹನವಾದ ಗರುಡ ಅಥವ ಶಯ್ಯೆಯಾದ ಸರ್ಪದ ಮೂಲಕ ಕಳುಹಿಸಲಿಲ್ಲವೇ'' ಎಂದರು. ಆವೇ ಳೆಗೆ ಅಲ್ಲಿಗೆ ಬಂದ ರಾಮು "ಸ್ವಾಮಿ, ನೀವು ಹೇಳಿದ ಎರಡು ತೊಂದರೆ ಗಳನ್ನು ತಪ್ಪಿಸಿಕೊಳ್ಳಲು ಮಾರ್ಗವಿದೆ. ನಮ್ಮ ಮಠಾಧಿಪತಿಗಳು ನಾಮಗಳನ್ನು ಟಿನ್‌ಗಳಲ್ಲಿ ಸರಿಯಾಗಿ ಕತ್ತರಿಸಿ ಅವುಗಳಿಗೆ ನಂಬರು ಗಳನ್ನು ಹಾಕಿ, ಇಂತಿಂತಹ ನಂಬರಿನ ನಾಮ ಇಂತಿಂತಹ ಕಡೆ ಹಾಕಿ ಕೊಳ್ಳಬೇಕೆಂಬ ಚೀಟಿಯೊಂದಿಗೆ ಅವುಗಳನ್ನು ಹುಡುಗರ ಇನಿಸ್ಟ್ರುಮೆಂಟ್ ಬಾಕ್ಸ್‌ನಂತಹ ಪೆಟ್ಟಿಗೆಗಳಲ್ಲಿ ಹಾಕಿ ಅವಕ್ಕೆ ಬೇಕಾದಷ್ಟು—ಕೊನೆಯ ಪಕ್ಷ ಒಂದು ತಿಂಗಳಾದರೂ ಬರುವಷ್ಟು—ನಾಮ ಶ್ರೀಚೂರ್ಣದೊಂದಿಗೆ ಭಕ್ತರಿಗೆ ಒದಗಿಸಬೇಕು. ಕೆಂಪು ಬಿಳುಪು ಎರಡು ನಾಮುಗಳೂ ಬೇಕಾಗಿ ರುವುದರಿಂದ ಮೆಚ್ಚಿಗೆಯ ಶಿಷ್ಯರಿಗೆ ಡಬಲ್ ಕಲರ್ ಪ್ರಿಂಟಿಂಗ್ ಬ್ಲಾಕ್ ನಂತೆ ಎರಡು ಸೆಟ್ ಕೊಡಬಹುದು. ಸಾಮಾನ್ಯರಿಗೆ ಒಂದೇ ಸಾಕು. ಆ ಬ್ಲಾಕ್‌ಗಳನ್ನೇ ಮೈ ಮೇಲೆ ಇಟ್ಟು ಕೆಂಪು ಬಿಳುಪು ಬಳಿದುಕೊಳ್ಳ ಬಹುದು. ಸ್ವಾಮಿ ಇದನ್ನು ನೀವು ದಯವಿಟ್ಟು ಮಠಾಧಿಪತಿಗಳಿಗೆ ಅರಿಕೆಮಾಡಿ'' ಎಂದನು. ರಾಮು ಹೋದ ಮೇಲೆ ಯಾದವಗಿರಿಯಿಂದ

ಬಂದಿದ್ದ ನಾಮವಾದಿ ನಾಮಧಾರಿ ಸಾಮಿಗಳು "ಇವನೂ ಒಬ್ಬ ವ್ರಾತ್ಯ ; ಇವನಿಗೆ ಏನೂ ತಿಳಿಯದು ; ಅದಕ್ಕಾಗಿಯೇ ಹೀಗೆ ನಾಮ ದ್ವೇಷಿಯಾಗಿದ್ದಾನೆ" ಎಂದರು. ಘಂಟಾವತಾರರೂ ವಿಶಿಷ್ಟಾದ್ವೈತ ಧ್ವಜರೂ ಒಬ್ಬರನ್ನೊಬ್ಬರು ನೋಡುತ್ತಾ "ವ್ರಾತ್ಯ ಎಂಬುದೇನೋ ನಿಜ. ಆದರೆ ಏನೂ ತಿಳಿಯದು ಅಂತ ಹೇಳಬೇಡಿ ಸ್ವಾಮಿ. ಅವನ ಹತ್ತಿರ ಮಾತನಾಡಿ ನಿಮಗೆ ಜಯಿಸುವುದಕ್ಕೆ ಆಗುವುದಿಲ್ಲ. ಸಂಸ್ಕೃತ ಕನ್ನಡ ಎರಡರಲ್ಲೂ ಒಳ್ಳೆಯ ಪಾಂಡಿತ್ಯ ಸಂಪಾದಿಸಿದ್ದಾನೆ. ವ್ಯವಹಾರ ಜ್ಞಾನ ಚೆನ್ನಾಗಿ ಗೊತ್ತು" ಎಂದರು. ಸ್ವಾಮಿಗಳು "ನಾನು ಹೇಳೋದೂ ಅದೇ. ಬರಿಯ ಜ್ಞಾನದಿಂದ ಏನು ಪ್ರಯೋಜನ? ಭಕ್ತಿಯೂ ಇರ ಬೇಕು" ಎಂದರು.

ವಿಶಿಷ್ಟಾದ್ವೈತ ಧ್ವಜ ಮತ್ತು ಘಂಟಾವತಾರರು ಇದ್ದಕ್ಕಿದ್ದಂತೆ ಮಲ್ಲಿಗೆಹಳ್ಳಿಯಲ್ಲಿ ಹುಟ್ಟಿಕೊಂಡ ಶ್ರೀವೈಷ್ಣವ ಮತ ಪುನರುದ್ಧಾರ ಕರು. ಒಬ್ಬರ ಸಾಧನ ದರ್ಭೆ. ಮತ್ತೊಬ್ಬರ ಸಾಧನ ನಾಮ. ಈ ಪುನರುದ್ಧಾರಕರಣ ಪಿತ್ಥ ಅವರ ತಲೆ ಏರುವವರೆಗೆ ಅವರೂ ಮಲ್ಲಿಗೆ ಹಳ್ಳಿಯ ಇತರರಂತೆ ಆರೋಗ್ಯವಂತರಾಗಿಯೇ ಇದ್ದರು. ಇವರು ಹೊಸ ದಾಗಿ ಈ ವೇಷವನ್ನು ಧರಿಸಿದವರಾದುದರಿಂದ ಹುಡುಗರಿಗೆ ಇವರನು ಕಂಡರೆ ಹಾಸ್ಯವಾಗಿದ್ದಿತು. ಹಿಂದೆ ಒಂದು ದಿನ ಅನಂತುವಿನ ಮನೆ ಯಲ್ಲಿ 'ತದಿಯಾರಾಧನೆ' ಯಾದಾಗ ವಿಶಿಷ್ಟಾದ್ವೈತ ಧ್ವಜನ ಮಗ್ಗುಲಿ ನಲ್ಲಿ ಕೃಷ್ಣ ಊಟಕ್ಕೆ ಕುಳಿತಿದ್ದನು. ಕೃಷ್ಣ ವಿಶಿಷ್ಟಾದ್ವೈತ ಧ್ವಜನ ಚಿಕ್ಕ ಪ್ಪನ ಮಗ; ಇಂಟರ್‌ಮಿಡಿಯೇಟ್‌ನಲ್ಲಿ ಓದುತ್ತಿದ್ದ. ಕ್ರಾಪು ಬಿಟ್ಟಿದ್ದ. ಸ್ವತಂತ್ರವಾದ ಮನೋಭಾವವುಳ್ಳ ಆಧುನಿಕ ಯುವಕ. ವಿಶಿಷ್ಟಾದ್ವೈತ ಧ್ವಜನಿಗೆ ಹಿಂದೆ ಕೃಷ್ಣನಲ್ಲಿ ಬಹಳ ಪ್ರೇಮವಿತ್ತು. ಆದರೆ ಧ್ವಜನು ಇದ್ದಕ್ಕಿದ್ದಂತೆ ವೈದಿಕ ವೇಷವನ್ನು ಪ್ರಾರಂಭಿಸಿ ನಾಮದ ಸಂಸ್ಕೃತಿಯ ಪೋಷಕನಾದ ಕೂಡಲೇ ಧ್ವಜನಿಗೆ ನಾಮವನ್ನು ಅಷ್ಟೇ ಜೋರಾಗಿ ಹಾಕದವರ ಮೇಲೆ ಕನಿಕರವುಂಟಾಯಿತು. ಮಡಿ ಮೈಲಿಗೆಗಳ ಗೊಂದಲ ಅವನಿಗೆ ಹೆಚ್ಚಾಯಿತು. ಊಟಕ್ಕೆ ಕುಳಿತಾಗಲಂತೂ ಅವನ ಸುತ್ತ ಒಂದು ಮಾರಿನಲ್ಲಿ ಹುಡುಗರಾರೂ ಕೂರಲು ಅವಕಾಶ ಕೊಡುತ್ತಿರಲಿಲ್ಲ. ಒಂದು ವೇಳೆ ಯಾರಾದರೂ ಕುಳಿತರೆ ಅವರು ಬೆಕ್ಕಿನ ಮುಂದಲ ಇಲಿ

ಯಂತೆ ಗಡಗಡನೆ ನಡುಗುತ್ತಾ ಮೆತ್ತಗೆ ಊಟಮಾಡಬೇಕಾಗಿದ್ದಿತು. ಅವರೇನಾದರೂ ಸ್ವಲ್ಪ ಸರಾಗವಾಗಿ ಊಟ ಪ್ರಾರಂಭಿಸಿದ ಕೂಡಲೇ ವಿಶಿಷ್ಟಾದ್ವೈತ ಧ್ವಜ "ಮೆತ್ತಗೆ ಹಾರಿಸೀಯ" ಎಂದು ಗರ್ಜಿಸುತ್ತಿದ್ದರು. ಇವರಿಗೆ ಏನಾದರೂ ಒಂದು ಮಾಡಬೇಕೆಲ್ಲ ಎಂದು ಹುಡುಗರು ಹಲ್ಲು ಕಡಿಯುತ್ತಿದ್ದರು.

ವಿಶಿಷ್ಟಾದ್ವೈತ ಧ್ವಜನ ಮಗ್ಗುಲಲ್ಲಿ ಕೃಷ್ಣ ಊಟಕ್ಕೆ ಕುಳಿತ ದಿನ ಊಟಮಾಡಿದವರ ಸಂಖ್ಯೆ ಹೆಚ್ಚು. ವಿಶಾಲವಾಗಿ ಕುಳಿತುಕೊಳ್ಳಲು ಸ್ಥಳವಿರಲಿಲ್ಲ. ವಿಶಿಷ್ಟಾದ್ವೈತ ಧ್ವಜ ಸಹ ಕೃಷ್ಣನಿಗೆ "ಸ್ಪೃಶ್ಯ" ನಾಗುವಷ್ಟು ಹತ್ತಿರದಲ್ಲಿ ಕುಳಿತುಕೊಳ್ಳಬೇಕಾಯಿತು. ಅವರು ಕೃಷ್ಣನಿಗೆ ಅಪಾಯಕರವಾದ ಕೆಲಸವನ್ನು ಮಾಡಲು ಹೊರಡುವವನಿಗೆ ಹೇಳುವಂತೆ "ಜೋಪಾನ" ಎಂದು ಎಚ್ಚರಿಸಿ ಊಟಕ್ಕೆ ಕುಳಿತರು. ಅನ್ನ ಹುಳಿ ಸಾರು ಎಲ್ಲಾ ಬಡಿಸಿದರು. ವಿಶಿಷ್ಟಾದ್ವೈತ ಧ್ವಜ ತಮ್ಮ ಪದ್ಧತಿಗನುಸಾರವಾಗಿ ಎಲೆಯಲ್ಲಿ ಏನನ್ನೂ ಬಿಡದೆ ಪೂರ್ಣವಾಗಿ ಮುಗಿಸಿ ಮುಂದಲ ಠವಣೆ ಪಾಯಸಭಕ್ಷ್ಯಗಳಿಗೆ ಸಿದ್ಧರಾಗಿದ್ದರು. ಕೃಷ್ಣನ ಎಲೆಯಲ್ಲಿ ಹುಳಿಯ ಹೋಳು ಹಾಗೆಯೇ ಮಿಕ್ಕಿತ್ತು. ಅದಾವ ಪಿಶಾಚಿ, ಆ ಪಿಶಾಚಿಯ ತಲೆ ಹೊಕ್ಕಿತೊ? ವಿಶಿಷ್ಟಾದ್ವೈತ ಧ್ವಜ ಸೂರನ್ನು ನೋಡುತ್ತಾ ಹುಳಿ ಪಾಯಸಕ್ಕಾಗಿ ಕಾಯುತ್ತಿರುವಾಗ ಕೃಷ್ಣ ತನ್ನ ಎಲೆಯಿಂದ ಮೆಲ್ಲಗೆ ಅವರ ಎಲೆಗೆ ನಾಲ್ಕು ಹೋಳುಗಳನ್ನು ಹಾಕಿದನು. ಧ್ವಜನ ಅರ್ಭಟವನ್ನು ಅರಿತಿದ್ದವರು "ಇವತ್ತು ಖಂಡಿತ ಒಂದು ಖೂನಿ ಆಗುತ್ತೆ" ಎಂದುಕೊಂಡರು. ಮಾತನಾಡಲು ಯಾರಿಗೂ ಧೈರ್ಯವಿರಲಿಲ್ಲ. ತನ್ನನ್ನು ಕೊಲ್ಲಲು ತನ್ನ ಕಡೆ ಬರುತ್ತಿರುವ ಗರುಡನ ಕಣ್ಣನ್ನು ಹಾವು ನೋಡುತ್ತಿರುವಂತೆ ಕೃಷ್ಣ, ಧ್ವಜನ ಎಲೆಯನ್ನೇ ನೋಡುತ್ತಿದ್ದ. ಒಂದು ಸಲ ಧ್ವಜ ತನ್ನ ಎಲೆ ಕಡೆ ತಿರುಗಿ ನೋಡಿದ. ಒಂದು ಕ್ಷಣ ಮಾತ್ರ ಆತನಿಗೆ "ಇಲ್ಲಿ ಹೋಳುಗಳು ಇರಲಿಲ್ಲವೆಲ್ಲಾ ಎಂದು ಹೊಳೆದಿರಬೇಕು. ಅಥವ ಹೊಳೆಯಲೇ ಇಲ್ಲವೊ? ಅವನು ಹೋಳುಗಳನ್ನು ತಿಂದು ಎಲೆಯನ್ನು ಮೊದಲಿನಂತೆ ಖಾಲಿ ಮಾಡಿದನು. ಕೃಷ್ಣ ಮತ್ತೊಂದು ಸಲ ತನ್ನ ಎಲೆಯ ಹೋಳುಗಳನ್ನು ಧ್ವಜನ ಎಲೆಗೆ ಸಾಗಿಸಿದ. ಧ್ವಜ ಅದನ್ನೂ ಸ್ವಾಭಾವಿಕವಾಗಿ ಮುಗಿಸಿದ. ಕೃಷ್ಣ

ಒಳಗಿನಿಂದ ಕೂಗಿ ಹೋಳು ತರಿಸಿ ತನ್ನ ಎಲೆಗೆ ಹಾಕಿಸಿಕೊಳ್ಳುವುದು; ಅದನ್ನು ಮೆತ್ತಗೆ ಮಗ್ಗುಲ ಎಲೆಗೆ ಸಾಗಿಸುವುದು. ಧ್ವಜ ಅದು ತನ್ನ ಎಲೆಯದೇ ಎಂದು ತಿಳಿದು ತಿನ್ನುವುದು, ಹೀಗೆ ಆಗಿಹೋಯಿತು.

ಧ್ವಜನ ಎಲೆಯಲ್ಲಿ ಹೋಳು ಮುಗಿದುದನ್ನು ಕಂಡು ಕೃಷ್ಣ ಮತ್ತೆ ಹೋಳಿಗಾಗಿ ಕೂಗಿದ. ಧ್ವಜ ತಿರಸ್ಕಾರದಿಂದ "ಏನಪ್ಪಾ ಇರೋ ಹೋಳೆಲ್ಲ ನಿನಗೇಯೆ. ಸ್ವಲ್ಪ ಹೆಂಗಸರಿಗೆ ಬಿಡಪ್ಪ" ಎಂದರು. ಕೃಷ್ಣ ನನಗಿಂತ ನಾಲ್ಕರಷ್ಟು ತಿಂದೋರಿದಾರೆಲ್ಲಾ ಸ್ವಾಮಿ" ಎಂದ. ಧ್ವಜನು "ಇತರರ ಎಲೆ ಕಟ್ಟಿಕೊಂಡು ನಿನಗೇನು ? ನಿನ್ನ ಎಲೆ ನೋಡಿಕೊಂಡು ನೀನು ಊಟ ಮಾಡು. ನಾನು ಊಟ ಮಾಡುವಾಗ ಆಚೆ ಈಚೆ ತಿರಗ ತೇನ್ಯೆ" ಎಂದ. ಊಟಕ್ಕೆ ಕುಳಿತಿದ್ದವರೆಲ್ಲಾ ಒಂದೇಏಟಿಗೆ ಘೊಳ್ಳೆಂದು ನಕ್ಕರು. ಊಟ ಮುಗಿಯುವವರೆಗೆ ಧ್ವಜನಿಗೆ ಗೊತ್ತಾಗಲೇ ಇಲ್ಲ. ಮರುದಿನ ಧ್ವಜ ಪ್ರಾಯಶ್ಚಿತ್ತಕ್ಕಾಗಿ ಪಂಚಗವ್ಯದ ಜತೆಯಲ್ಲಿ ಒಂದು ಉಂಡೆ ನಾಮವನ್ನೂ ಕದರಿ ಕುಡಿದಿರಬೇಕು.

ಒಂದು ಸಲ ಘಂಟಾವತಾರರ ವಿಷಯದಲ್ಲಿ ಮಾಡಿದ ಈ ಹಾಸ್ಯ ಸ್ವಲ್ಪ ಮಿತಿಮೀರಿತು. ಘಂಟಾವತಾರರಿಗೆ ಈ ವೈದಿಕ ಪಿತ್ಥ ಇಷ್ಟು ತೀಕ್ಷ್ಣವಾಗಿ ವಕ್ರಿಸುವುದಕ್ಕೆ ಮುಂಚೆ ಅವರೂ ಆರೋಗ್ಯವಾಗಿಯೇ ಇದ್ದರು. ಆದರೆ ಇದ್ದಕ್ಕಿದ್ದಂತೆ ಅವರಿಗೆ ವೈದಿಕ ಜಾಡ್ಯ ಆವರಿಸಿದ ಕೂಡಲೇ ಅವರಲ್ಲಿ ಅಸಹನೆ ಹೆಚ್ಚಾಗಿ ಹೋಯಿತು. ಅವರು ಯಾರನ್ನೂ ತನ್ನ ಸುತ್ತ 3-4 ಮಾರು ಹತ್ತಿರದವರೆಗೆ ಪ್ರವೇಶಿಸಗೊಡುತ್ತಿರಲಿಲ್ಲ. ಕೊನೆಕೊನೆಗೆ ತಮ್ಮ ಜತೆಯಲ್ಲಿ ನಲವತ್ತು ವರುಷದಿಂದ ಸಂಸಾರ ಮಾಡಿದ ಹೆಂಡತಿ ಸಹ ಅವರಿಗೆ ಮೈಲಿಗೆಯಾಗಿ ತೋರಿದಳು. ಮಕ್ಕಳು ಮರಿಗಳಂತೂ ಹತ್ತಿರಕ್ಕೆ ಸೇರುವಂತೆಯೇ ಇರಲಿಲ್ಲ. ಘಂಟಾವತಾರ ರಿಗೆ ಮನೆಯಲ್ಲಿ ತನ್ನ ಅಸ್ಪೃಶ್ಯತೆಯನ್ನು ಉಳಿಸಿಕೊಳ್ಳುವುದೇ ಯೋಚನೆ ಯಾಯಿತು. ಮನೆಯೊಳಕ್ಕೆ ಒಬ್ಬರು ಬರುವಂತೆ ಹೋಗುವಂತೆ ಇರಲಿಲ್ಲ. ಕೊನೆಯಲ್ಲಿ ಘಂಟಾವತಾರರಿಗೆ ತನ್ನ ಹೆಂಡತಿಯ ಮಡಿಯೂ ಸಾಲದೆ ಹೋದುದರಿಂದ ಅವರು ಮನೆಯಲ್ಲಿ ತಾವೇ ಅಡಿಗೆ ಮಾಡಿಕೊಳ್ಳ ತೊಡಗಿದರು.

ಘಂಟಾವತಾರರು ಪ್ರತಿದಿನವೂ ಬೆಳಗಾದ ಮೇಲೆ ತಮ್ಮ ತಾಮ್ರದ

ಬಿಂದಿಗೆಯನ್ನು ಹೆಗಲಿನ ಮೇಲೆ ಇಟ್ಟುಕೊಂಡು, ಅದನ್ನು ಹೊಳೆಗೆ ತೆಗೆದುಕೊಂಡು ಹೋಗಿ ಮರಳಿನ ಮೇಲೆ ಇಟ್ಟು ತಮ್ಮ ನಿತ್ಯ ಕರ್ಮ ಸ್ನಾನ ಆಹ್ನೀಕಗಳನ್ನು ಮುಗಿಸಿಕೊಂಡು, ಬಿಂದಿಗೆಯನ್ನು ಕೆಂಪಗೆ ಹೊಳಪಾಗುವವರೆಗೆ „ಬೆಳಗುತ್ತಿದ್ದರು. ಅನಂತರ ಬಿಂದಿಗೆಯಲ್ಲಿ ಕಾವೇರಿ ತೀರ್ಥವನ್ನು ತುಂಬಿಕೊಂಡು ತಮ್ಮ ನಾಮದ ಜತೆಯಲ್ಲಿ ಬಿಂದಿಗೆಗೂ ನಾಮವನ್ನಿಟ್ಟು ಮನೆಗೆ ತೆಗೆದುಕೊಂಡು ಬಂದು ಆ ನೀರಿನಿಂದಲೇ ಅಡಿಗೆ ಊಟ ಎಲ್ಲವನ್ನೂ ಮಾಡಿಕೊಳ್ಳುತ್ತಿದ್ದರು. ಮತ್ತೊಬ್ಬರು ನೀರನ್ನು ಕೇಳಿದರೂ ಕೊಡುತ್ತಿರಲಿಲ್ಲ. ಮತ್ತೊಬ್ಬರ ನೀರನ್ನೂ ತೆಗೆದುಕೊಳ್ಳುತ್ತಿರಲಿಲ್ಲ.

ಒಂದು ದಿನ ಹೀಗೆ ಘಂಟಾವತಾರರು, ಬಿಂದಿಗೆಯನ್ನು ಹೊಳೆಯ ದಡದಲ್ಲಿಟ್ಟು ಮೇಲಿನ ತೋಪಿನ ಕಡೆ ಮಾವಿನ ಎಲೆ ಆಯ್ದುಕೊಂಡು ಬರಲು ಹೋಗಿದ್ದರು. ಆ ವೇಳೆಗೆ ಮಲ್ಲಿಗೆಹಳ್ಳಿ ಗಾಣಿಗ ಹನುಮ ಸೆಟ್ಟಿಯೂ ತನ್ನ ಬಿಂದಿಗೆಯನ್ನು ತಂದು ದೂರದಲ್ಲಿ ಮರಳಿನ ಮೇಲೆ ಇಟ್ಟು ಎಲ್ಲೋ ಹೋಗಿದ್ದ. ನಾದಿರ್ ಷಾ ಶ್ಯಾನುಭೋಗರು ಹೊಳೆಯ ತೀರಕ್ಕೆ ಬಂದರು. ಎರಡು ಬಿಂದಿಗೆಗಳೂ ಅವರ ಕಣ್ಣಿಗೆ ಬಿದ್ದವು. ಸ್ವಲ್ಪ ಹೆಚ್ಚು ಕಡಿಮೆ ಎರಡೂ ಒಂದೇ ಸಮನಾಗಿ ತೋರುತ್ತಿದ್ದವು. ಶ್ಯಾನುಭೋಗರು ಹನುಮಸೆಟ್ಟಿಯ ಬಿಂದಿಗೆಯನ್ನು ಘಂಟಾವತಾರರ ಬಿಂದಿಗೆಯಿದ್ದ ಸ್ಥಳದಲ್ಲಿ ಇಟ್ಟು ಘಂಟಾವತಾರರ ಬಿಂದಿಗೆಯನ್ನು ಹನುಮ ಸೆಟ್ಟಿಯ ಬಿಂದಿಗೆಯಿದ್ದ ಜಾಗದಲ್ಲಿ ಇಟ್ಟುಬಿಟ್ಟರು. ಘಂಟಾವತಾರರೇ ಮೊದಲು ಬಂದು ತಮ್ಮ ಬಿಂದಿಗೆಯಿದ್ದ ಜಾಗದಲ್ಲಿದ್ದ ಹನುಮಸೆಟ್ಟಿಯ ಬಿಂದಿಗೆಯನ್ನು ತೆಗೆದುಕೊಂಡು ಬೆಳಗಿ, ಸ್ನಾನ ಆಹ್ನೀಕಗಳನ್ನು ತೀರಿಸಿಕೊಂಡು ಬಿಂದಿಗೆಗೂ ನಾಮವಿಟ್ಟು ಅದರಲ್ಲಿ ನೀರನ್ನು ಮನೆಗೆ ತಂದರು. ಅವರಿಗೆ ತಮ್ಮ ಬಿಂದಿಗೆ ಬದಲಾಯಿಸಿರಬಹುದು ಎಂದು ತೋರಲೇ ಇಲ್ಲ. ಆದರೆ ಹನುಮಸೆಟ್ಟಿಗೆ ಮಾತ್ರ ಇದು ತನ್ನ "ಬಿಂದಿಗೆಯೇ ? ಎಂದು ಸ್ವಲ್ಪ ಅನುಮಾನ ಬಂದಿತು. ಅವನು ಶ್ಯಾನುಭೋಗರೊಂದಿಗೆ ಇದು ನನ್ನ ಬಿಂದಿಕೆ ಹಾಗೆ ಕಾಣೋದಿಲ್ಲವಲ್ಲ ಎಂದು ಗೊಣಗುಟ್ಟಿದನು.

ಹೀಗೆ 4-5 ದಿನ ಕಳೆಯುವುದರೊಳಗಾಗಿ ಘಂಟಾವತಾರರು

ಹನುಮಸೆಟ್ಟಿಯು ಬೀದಿಗೆಯಲ್ಲಿ ನೀರು ಕುಡಿಯುತ್ತಿದ್ದಾರೆ ಎಂದು ಒಂದು "ಗುಲ್ಲು" ಊರಿನಲ್ಲಿ ಪ್ರಾರಂಭವಾಯಿತು. ವಿಷಯ ಘಂಟಾವತಾರರಿಗೆ ತಿಳಿದಾಗ ಅವರು ಗಂಗಾ ಸ್ನಾನದಿಂದಲೇ ಈ ಪಾಪ ಪರಿಹಾರ ಎಂದು ಸುಮ್ಮನಾದರು.

ವೈದೇಹಿ, ಮಂಗಳೆಯರ ವಿವಾಹದಲ್ಲಿ ಎಲ್ಲಾದಕ್ಕಿಂತ ಹೆಚ್ಚಾದ ಕಷ್ಟ ಬೆಳಗಾದ ಮೇಲೆ ಪ್ರಾರಂಭವಾಯಿತು. ಇಂಜನೀಯರ್ ಸಾಹೇಬರು ಒಬ್ಬ ಪುರೋಹಿತನನ್ನು ಬೆಂಗಳೂರಿನಿಂದ ಕರೆದುಕೊಂಡು ಬಂದಿದ್ದರು. ಆದರೆ ಅವನು ಬರುವಾಗ ಪೌರೋಹಿತ್ಯದ ಪುಸ್ತಕ ಮರೆತೇ ಬಂದಿದ್ದನು. ಓಲಗದವನು ಓಲಗವನ್ನೇ ಮರೆತುಬಂದಂತೆ ಆಯಿತು. ಹಿಂದಲಕಾಲದ ಪುರೋಹಿತರಾಗಿದ್ದರೆ ಪುಸ್ತಕವಿಲ್ಲದಿದ್ದರೂ ಬಾರಿಸಿಕೊಂಡು ಹೋಗುತ್ತಿದ್ದರು. ಈಗಿನ ಪುರೋಹಿತರ ವಿದ್ಯೆ, ಜನರು ಅವರಿಗೆ ಕೊಡುವ ಗೌರವಕ್ಕೆ ಅನುಸಾರವಾಗಿದೆ. ಈಗಿನ ವೈದಿಕರ ಪಂಡಿತರ ಪರಿಸ್ಥಿತಿಯೂ ಹಾಗೆಯೇ ಇದೆ. ಸರ್ವ ಶಕ್ತಿಯುತವಾದ ಅರಮನೆಯಿಂದ ಹಿಡಿದು ಸರ್ವಸಂಗ ಪರಿತ್ಯಾಗಿಯಾದ ಗುರುಮನೆಯವರೆಗೆ ದಾಸ್ಯ ಮನೋಭಾವ ತಾಂಡವವಾಡುತ್ತಿರುವಾಗ ಜನ, ನಮ್ಮ ದೇವರುಗಳನ್ನು ಬೀದಿಗೆ ಎಸೆದು ಪರಕೀಯರ ಬೂಟ್ಸುಗಳನ್ನು ಅವುಗಳ ಜಾಗದಲ್ಲಿ ಇಡುವುದು ಆಶ್ಚರ್ಯವಲ್ಲ. ಆಯಾ ಜನರ ಯೋಗ್ಯತೆಗಳಿಗೆ ಅನುಸಾರವಾದ ಸರ್ಕಾರ, ರಾಜ ದೊರೆಯುವಂತೆ, ನಾವು ಕೊಡುವ ಗೌರವಕ್ಕೆ ಅನುಸಾರವಾದ ಪುರೋಹಿತ ನಮಗೆ ದೊರೆಯುತ್ತಾನೆ. ಅವನ ವಿದ್ಯೆಯೂ ಅದಕ್ಕೆ ಅನುಸಾರವಾಗಿರುತ್ತದೆ. ಎಕ್ಸಿಕುಟಿವ್ ಇಂಜನಿಯರ್ ಸಾಹೇಬರು ತಮ್ಮ ಪುರೋಹಿತನನ್ನು ಯಾವಾಗಲೂ ತಮ್ಮ ಅಡಿಗೆಯವನನ್ನೂ ದರ್ಜಿಯನ್ನೂ ಡ್ರೈವರನನ್ನೂ ಗೌರವಿಸುವಷ್ಟು ಗೌರವಿಸುತ್ತಿರಲಿಲ್ಲ. ಅದು ಪುರೋಹಿತನಿಗೂ ಗೊತ್ತಿತ್ತು. ಹೀಗೆ ಪುರೋಹಿತ ಪುಸ್ತಕ ಮರೆತು ಬಂದುದರಿಂದ ಮಲ್ಲಿಗೆಹಳ್ಳಿಯಲ್ಲಿ ಪುಸ್ತಕ ಇದೆಯೇ ಎಂದು ಹುಡುಕಬೇಕಾಯಿತು. ಆದರೆ ಮಲ್ಲಿಗೆಹಳ್ಳಿಯ "ವಿಶಿಷ್ಟಾದ್ವೈತ ಧ್ವಜ" ತಾನು ಬರೆದುಕೊಂಡಿದ್ದ ಪುಸ್ತಕವನ್ನೂ ಅದರ ಸ್ಟಾಂಡನ್ನೂ ತೆಗೆದುಕೊಂಡು ಬೇರೆ ಊರು ಮದುವೆಮಾಡಿಸುವುದಕ್ಕೆ ಹೋಗಿದ್ದ. ವಿಶಿಷ್ಟಾದ್ವೈತ ಧ್ವಜನಿಗೆ ಮಂತ್ರಗಳು ಬಾಯಿಗೆ ಬರುತ್ತಿರಲಿಲ್ಲ. ಕೈಕರಣದ ಅರ್ಥ

ತಿಳಿದಿರಲಿಲ್ಲ. ಆದುದರಿಂದ ಅವರು ಅವುಗಳನ್ನೆಲ್ಲಾ ಪುಸ್ತಕದಲ್ಲಿ ಬರೆದು ಕೊಂಡು ಅದನ್ನು ಫೋಟೋಗ್ರಾಫಿನ ಸ್ಟ್ಯಾಂಡಿನಂತಹ ತ್ರಿಪಾದದ ಒಂದು ಸ್ಟ್ಯಾಂಡಿನ ಮೇಲೆ ಇಟ್ಟುಕೊಂಡು ತಾವು ಅದರ ಮುಂದೆ ನಿಂತುಕೊಂಡು ನೋಡಿಕೊಂಡು ಹೇಳುತ್ತಿದ್ದರು. ಆ ಸ್ಟ್ಯಾಂಡನ್ನು ಒಳ್ಳೆಯ ಒನಿಕೆ ಯಂತಹ ಮರದ ತುಂಡುಗಳಿಂದ ಮಾಡಿದ್ದುದರಿಂದ ಅದೇ ಒಂದು ಆಳು ಹೊರೆಯಾಗುತ್ತಿದ್ದಿತು. ವಿಶಿಷ್ಟಾದ್ವೈತ ಧ್ವಜ ತಾನು ಹೋದ ಕಡೆಗಳಿ ಗೆಲ್ಲಾ ಆ ಸ್ಟ್ಯಾಂಡನ್ನು ಒಬ್ಬ ಆಳಿನಮೇಲೆ ಹೊರಸಿಕೊಂಡು ಹೋಗು ತ್ತಿದ್ದರು. ಆ ಆಳನ್ನು ನೋಡಿದ ಕೂಡಲೆ ವಿನೋದಿಗಳು "ವಿಶಿಷ್ಟಾದ್ವೈತ ಧ್ವಜನ ಮಂತ್ರಗಳೆಲ್ಲಾ ಅವನ ಹೆಗಲಿನಮೇಲೆ ಹೋಗುತ್ತಿವೆ ನೋಡಿ" ಎಂದು ಹೇಳುತ್ತಿದ್ದರು..

ಬೆಂಗಳೂರಿನಿಂದ ಒಬ್ಬ ಪುರೋಹಿತ ಬರುತ್ತಾನೆ ಎಂದು ತಿಳಿದಾಗ ಅನಂತು "ಸದ್ಯ ನಮ್ಮ ಹಳ್ಳಿಯ ಪುರೋಹಿತರ ಮೌಢ್ಯ ಈ ಪಟ್ಟಣದವರ ಎದುರಿಗೆ ಪ್ರಕಟವಾಗದೆ ಇರಲಿ. ಯಜಮಾನರು ಹೇಳುತ್ತಿದ್ದ ಕಾಲ ಬರುತ್ತಿದೆ. ಮಂತ್ರಗಳೇ ಇಲ್ಲದೆ ಜನ ಮದುವೆ ಮಾಡಿಕೊಳ್ಳುವ ಕಾಲ ಬರುತ್ತಿದೆ" ಎಂದು ಸುಮ್ಮನಾದನು. ಬೆಂಗಳೂರಿನ ಪುರೋಹಿತ ಪುಸ್ತಕ ವಿಲ್ಲ ಎಂದಾಗ ಎಲ್ಲರಿಗೂ ಗಾಬರಿಯಾಯಿತು. ವಿಶಿಷ್ಟಾದ್ವೈತ ಧ್ವಜನ ಜತೆಯಲ್ಲಿ ಘಂಟಾವತಾರನೂ ಪುಸ್ತಕ ಬರೆದುಕೊಂಡಿದ್ದನು. ಯಜ ಮಾನರು "ಇವರು ಮಂತ್ರ ವೇದ ಕಲಿಯುತ್ತಾರೆಯೇ ? ಅರ್ಥ ತಿಳಿಯು ತ್ತದೆಯೇ" ಎಂಬುದನ್ನೊಂದನ್ನೂ ಬಲಾತ್ಕರಿಸದೆ "ಇವತ್ತಲ್ಲ ನಾಳೆ ಯಾದರೂ ಇದರ ಆವಶ್ಯಕತೆ ಇವರಿಗೆ ತಿಳಿಯುತ್ತೆ. ಆಗ ಚೆನ್ನಾಗಿ ವ್ಯಾಸಂಗಮಾಡಿಕೊಳ್ಳುತ್ತಾರೆ. ಸದ್ಯಕ್ಕೆ ಪುಸ್ತಕದಲ್ಲಿರಲಿ" ಎಂಬುದಾಗಿ ಹೇಳಿ ವಿವಾಹ ಮುಂಜಿ ಮೃತ ಸಂಸ್ಕಾರ ಎಲ್ಲವನ್ನೂ ಬರೆಸಿದ್ದರು. ವಿಶಿಷ್ಟಾದ್ವೈತ ಧ್ವಜ ಅವುಗಳನ್ನು ಸುಮಾರಾಗಿ ಸ್ವಾಧೀನಕ್ಕೆ ತೆಗೆದು ಕೊಳ್ಳುತ್ತಿದ್ದರು. ಆದರೆ ಘಂಟಾವತಾರ ತಾವು ಬರೆದುಕೊಂಡಿದ್ದ ಪುಸ್ತಕ ಹಾಗೆಯೇ ಹಾಕಿದ್ದರು. ಅವರಿಗೆ ತಮ್ಮ ಸಂಸ್ಕೃತಿಯನ್ನು ಊರ್ಧ್ವಪುಂಡ್ರದ ಮೂಲಕವೇ ಸಾಧಿಸುವುದು ಸುಲಭವಾಗಿ ಕಾಣು ತ್ತಿದ್ದಿತು. ಆದುದರಿಂದ ಅವರು ಆ ಯೋಗವನ್ನೇ ಅನುಸರಿಸಿದರು. ಬರೆದುಕೊಂಡಿದ್ದ ಪುಸ್ತಕಗಳು ಎಲ್ಲಿಯೋ ಬಿದ್ದಿದ್ದವು.

ಹಾಗೂ ಹೀಗೂ ಘಂಟಾವತಾರ ಪುಸ್ತಕಗಳನ್ನೆಲ್ಲಾ ತೆಗೆದು ಈಚೆಗೆ ಹಾಕಿದರು. “ಪುರಕ್ಕೆ ಹಿತಮಾಡುವುದೇ ಪುರೋಹಿತನ ಕೆಲಸ. ತೆಗೆದು ಕೊಳ್ಳಿ” ಎಂದರು. ಬೆಂಗಳೂರು ಪುರೋಹಿತ ಪುಸ್ತಕಗಳನ್ನು ಬಿಚ್ಚಿ ತಿರುಗಿಸಿ ನೋಡಿದುದೂ ನೋಡಿದುದೇ. ಅವನಿಗೆ ಅದು ಪೂರ್ವಕರ್ಮದ ಪುಸ್ತಕವೇ ಅಪರ ಕರ್ಮದ ಪುಸ್ತಕವೇ ? (ಪೂರ್ವ ಕರ್ಮ ಎಂದರೆ ಮದುವೆ ಮುಂಜಿ. ಅವರ ಕರ್ಮ ಎಂದರೆ ಸಾವಿನ ಮಂತ್ರ, ತಿಥಿ ವಗೈರೆ) ಎಂಬುದೇ ತಿಳಿಯಲಿಲ್ಲ. ಹೀಗೆ ಬೆಂಗಳೂರು ಪುರೋಹಿತ ದಿಕ್ಕುತೋರದೆ ಪುಸ್ತಕ ತಿರುಗಿಸುತ್ತಿದ್ದುದನ್ನು ಇಂಜನಿಯರ್ ಸಾಹೇಬರು ನೋಡಿ “ವಿಚಾರ ಏನು” ಎಂದು ಕೇಳಿದರು. ಸಂಗತಿ ತಿಳಿದಕೂಡಲೇ ಅವರು “ಪರಮಾತ್ಮ ಸರಿಯಾದ ಪುಸ್ತಕ ತೆಗೆದುಕೋಯ್ಯ. ಒಂದರ ಜಾಗದಲ್ಲಿ ಒಂದು ತೆಗೆದುಕೊಂಡು ತಲೆಗೆ ತಂದೀಯೆ” ಎಂದರು. ಬರಿಯ ಪುಸ್ತಕ ದಲ್ಲಿ ಇದ್ದಂತೆ ನೋಡಿಕ್ಕೊಂಡು ಕರ್ಮಗಳನ್ನು ಮಾಡಿಸುವ ಅಭ್ಯಾಸ ವಿದ್ದ ಬೆಂಗಳೂರು ವಾಧ್ಯಾರಿಗೆ, ಒಂದು ಸಲವೂ ಸ್ವಬುದ್ಧಿಯನ್ನು ಉಪಯೋಗಿಸಬೇಕಾದ ಪ್ರಮೇಯವೇ ಬಂದಿರಲಿಲ್ಲವಾದುದರಿಂದ ಅವರು ಯಾವಾಗಲೂ ಇದು ಇಂಥಾದ್ದು ಎಂದು ಖಚಿತವಾಗಿ ತಿಳಿಯುವ ಶ್ರಮ ವನ್ನೇ ತೆಗೆದುಕೊಂಡಿರಲಿಲ್ಲ. ಹೀಗೆ ತಮ್ಮ ಕೈಯಿಂದ ಇದು ಖಂಡಿತ ಆಗುವುದಿಲ್ಲವೆಂದು ವಾಧ್ಯಾರಿಗೆ ತಿಳಿದಕೂಡಲೇ ಅವರು “ಪುಸ್ತಕಕೊಟ್ಟರೆ ಮಾಡಿಸುತ್ತೇನೆ. ಇಲ್ಲದಿದ್ದರೆ ಇಲ್ಲ” ಎಂದುಬಿಟ್ಟರು. ಆಗ ಅನಂತು “ಯಜಮಾನರ ಮಗ ವೇದಾಂತನಿಗೆ ತಿಳಿಯದ ವಿಚಾರವೇ ಇಲ್ಲ. ಎಲ್ಲಿ ಪುಸ್ತಕಗಳನೆಲ್ಲಾ ಕೊಡಿ. ಅವರ ಹತ್ತಿರ ಹೋಗಿ ತೋರಿಸಿ ತೆಗೆದು ಕೊಂಡು ಬರುತ್ತೇನೆ” ಎಂದನು. ಇಂಜನಿಯರ್ ಸಾಹೇಬರು “ಇಲ್ಲಿಗೇ ಕರೆಸೋಣ ತಾಳಿ” ಎಂದರು. ಅನಂತು “ಇಲ್ಲ ನೀವು ಕರೆಸಿದರೆ ಅವರು ಬರುವುದಿಲ್ಲ” ಎಂದನು. ಇಂಜನೀಯರ್ ಸಾಹೇಬರು “ನೀವು ತಿಳಿದುಕೊಂಡಿರುವುದು ಹಾಗೆ. ಈಗ ನೋಡುವಿರಂತೆ” ಎಂದು ತಮ್ಮ ಪರಿವಾರದವರಲ್ಲಿ ಒಬ್ಬರನ್ನು ಕರೆದು ತಮ್ಮ ಚೀಲದಿಂದ ತಮ್ಮ ವಿಸಿಟಿಂಗ್ ಕಾರ್ಡು (ಪರಿಚಯ ಕಾಗದ) ತೆಗೆದುಕೊಟ್ಟು ಅದರ ಮೇಲೆ ಇಂಗ್ಲೀಷಿನಲ್ಲಿ with the best compliments of ನಮಸ್ಕಾರ ಗಳೊಡನೆ ಎಂದು ಬರೆದು “ಇದನ್ನು ಕೊಟ್ಟು ಅವರನ್ನು ಬರಹೇಳಿದೆ

ಎಂದು ಹೇಳಿ'' ಎಂದರು. ಮಿತ್ರರು ಊರ ಹೊರಗಿನ ತೋಟದಲ್ಲಿ ಮನೆಮಾಡಿಕೊಂಡಿದ್ದ ವೇದಾಂತನಲ್ಲಿಗೆ ಹೋದರು. ಒಂದು ಗಳಿಗೆಯ ನಂತರ ಬಂದು ಅವರು "ಮಧ್ಯಾಹ್ನದ ಮೇಲೆ ಬರುತ್ತೇನೆ ಎನ್ನುತ್ತಾರೆ'' ಎಂದರು. ಇಂಜನಿಯರ್ ಸಾಹೇಬರೇ ಮತ್ತೊಂದು ವಿಸಿಟಿಂಗ್ ಕಾರ್ಡು ಕೈಯಲ್ಲಿ ಹಿಡಿದುಕೊಂಡು ಪುಸ್ತಕಗಳನ್ನು ಪುರೋಹಿತನ ಕೈಲಿ ತೆಗೆಸಿಕೊಂಡು ಅನಂತುವನ್ನೂ ಜತೆಯಲ್ಲಿ ಕರೆದುಕೊಂಡು ತೋಟಕ್ಕೆ ಹೋದರು.

ತೋಟದಲ್ಲಿ ವೇದಾಂತನಿದ್ದ ಮನೆ ಬಹಳ ಸಾಧಾರಣವಾಗಿದ್ದಿತು. ಆ ಮನೆಯ ಒಂದು ಭಾಗಕ್ಕೆ ಮಾತ್ರ ಹಂಚು ಹೊದ್ದಿಸಿದ್ದಿತು. ಮತ್ತೊಂದು ಭಾಗಕ್ಕೆ ಹುಲ್ಲು ತರಗು ಹೊದಿಸಿದ್ದಿತು. ಬಾಗಿಲು ಮುಂತಾದುವೆಲ್ಲ ಶಿಥಿಲವಾಗಿದ್ದುವು. ತೋಟ ಸುಮಾರಾಗಿ ಫಲವತ್ತಾದ ಸ್ಥಿತಿಯಲ್ಲಿಯೇ ಇದ್ದಿತು. ಇಂಜನಿಯರ್ ಸಾಹೇಬರೂ ಅನಂತುವೂ ಬೆಂಗಳೂರು ಪುರೋಹಿತರೂ ಅಲ್ಲಿಗೆ ಹೋಗುವಹೊತ್ತಿಗೆ ವೇದಾಂತ ಮನೆಯಲ್ಲಿರಲಿಲ್ಲ. ಅಂಗಳದಲ್ಲಿ ವೇದಾಂತನ ಹೆಂಡತಿ ಒಬ್ಬ ಶಿಷ್ಯ-ಹುಡುಗನಿಗೆ ಯಾವುದೋ ಸಂಸ್ಕೃತ ಶ್ಲೋಕಗಳನ್ನು ಹೇಳಿ ಕೊಡುತ್ತಿದ್ದಳು. ಇಂಜನಿಯರ್ ಸಾಹೇಬರಿಗೆ ಆ ಮನೆ, ಅಲ್ಲಿಯ ವಾತಾವರಣವೆಲ್ಲಾ ಋಷ್ಯಾಶ್ರಮದಂತೆ ತೋರುತ್ತಿದ್ದಿತು. ವೇದಾಂತನ ಹೆಂಡತಿ ಅವರನ್ನು ಕರೆದು ತೆಂಗಿನ ಗರಿಗಳಿಂದ ನೆಯ್ದಿದ್ದ ಚಾಪೆಗಳನ್ನು ಹಾಕಿ ಕೂರಿಸಿದಳು. ಅನಂತರ ಸರಳವಾಗಿ ಸ್ವಾಭಾವಿಕವಾಗಿ ಆದರೂ ಗಂಭೀರವಾಗಿ ಬಂದವರೊಂದಿಗೆ ಮಾತುಕಥೆ ಆಡಲು ಪ್ರಾರಂಭಿಸಿದಳು. ಅನಂತರ "ಅವರು ಸ್ನಾನಕ್ಕೆ ಹೊಳೆಗೆ ಹೋಗಿದ್ದಾರೆ ಇನ್ನೇನು ಬರುವ ಹೊತ್ತೇ ಆಯಿತು'' ಎಂದು ಹೇಳಿ ಬೆಂಗಳೂರು ಪುರೋಹಿತ ಮಣೆಯ ಮೇಲೆ ಹಾಕಿದ್ದ ಕೈಬರಹದ ತಲೆಬಾಲವಿಲ್ಲದ ಪುಸ್ತಕಗಳನ್ನು ಏನೂ ತಿಳಿಯದಂತೆ ತಿರುವಿಹಾಕುತ್ತಾ ಒಂದು ಪುಸ್ತಕವನ್ನು ಬೇರೆಕಡೆ ಇಟ್ಟಳು. ಆ ವೇಳೆಗೆ ವೇದಾಂತನೂ ಬಂದನು.

ವೇದಾಂತನನ್ನು ನೋಡಿದ ಕೂಡಲೆ ಇಂಜನಿಯರ್ ಸಾಹೇಬರಿಗೆ ನಿಜವಾಗಿಯೂ ಪೂರ್ವಕಾಲದ ಋಷಿಗಳನ್ನು ನೋಡಿದ ಜ್ಞಾಪಕವುಂಟಾಯಿತು. ಅವರು, ಈ ಹಳ್ಳಿಯ ಬಾಕಿಯವರದೇ ಒಂದು ಜಾತಿ,

ಇವನೊಬ್ಬನದೇ ಒಂದು ಜಾತಿ'' ಎಂದುಕೊಂಡರು. ಮಲ್ಲಿಗೆಹಳ್ಳಿಯಲ್ಲಿ ಯಾವ ಯಾವ ಮಹನೀಯರು ಹಿಂದಲ ತಲೆಯಲ್ಲಿ ಇದ್ದರೆಂದು ಅವರು ತಿಳಿದಿದ್ದರೋ ಅವರಿಗೆ ವೇದಾಂತನು ಅರ್ಹನಾದವನಾಗಿ ತೋರಿದನು. ಅವನು ನಿಜವಾದ ವಿದ್ಯೆ ಸಂಸ್ಕೃತಿ ವಿನಯ ವೈರಾಗ್ಯದ ಮೂರ್ತಿಯಾಗಿ ತೋರಿದನು. ಇಂಜನೀಯರ್ ಸಾಹೇಬರು "ಇಂತಹವರು ಹಳ್ಳಿಗಳಲ್ಲಿ ಯಾಕೆ ಪಟ್ಟಣಗಳಲ್ಲಿಯೂ ಸಿಗುವುದು ಅಪರೂಪ'' ಎಂದುಕೊಂಡರು. ವೇದಾಂತ ಬಂದಕೂಡಲೆ ಆ ಜಾಗವೆಲ್ಲ ಸುಗಂಧಯುಕ್ತವಾದ ಹೂವು ಬಂದಂತೆ ಒಂದು ಪವಿತ್ರ ವಾತಾವರಣವುಳ್ಳದುದಾಯಿತು. ಬಂದಿದ್ದವರು ಯಾಕೆ ಬಂದಿದ್ದರು ಎಂಬುದು ಗೊತ್ತಾದಕೂಡಲೇ ವೇದಾಂತ ಅವರು ಮಣೆಯಮೇಲೆ ಇಟ್ಟಿದ್ದ ಪುಸ್ತಕಗಳನ್ನು ನೋಡಿ ಯಾವ ಪುಸ್ತಕ ಅವನ ಹೆಂಡತಿ ಬೇರೆಕಡೆ ಇಟ್ಟಿದ್ದಳೋ ಅದನ್ನೇ ತೆಗೆದುಕೊಟ್ಟನು. ಬಂದವರು ಒಂದುಗಳಿಗೆ ಮಾತನಾಡುತ್ತಿದ್ದು ಅನಂತರ ಮನೆಯ ದಾರಿ ಹಿಡಿದರು ಇಂಜನಿಯರ್ ಸಾಹೇಬರು "ಒಂದು ಊರಿಗೆ ಇಂಥಾ ಗಂಡ ಹೆಂಡತಿ ಒಂದು ಸಂಸಾರ ಇದ್ದರೆ ಸಾಕು. ವೈದ್ಯರಂತೆ; ಆ ಗಂಡನಿಗೆ ತಕ್ಕ ಹೆಂಡತಿ ಅವಳು. "ಆಕಡೆ ಪುಸ್ತಕ ಇಟ್ಟಾಗಲೇ ನನಗೆ ಇವಳೂ ಒಳ್ಳೆ ವಿದ್ಯಾವಂತೆ ಎಂದು ತಿಳಿಯಿತು''ಎಂದರು. ಅನಂತು "ಅವರ ತಂದೆ ಮಠದ ಶಿಷ್ಯರಾಗಿ ಮೈಸೂರಿನಲ್ಲಿಯೇ ಇದ್ದರು. ಮಗಳಿಗೆ ಚೆನ್ನಾಗಿ ವಿದ್ಯಾಭ್ಯಾಸಮಾಡಿ ಸಿದ್ದಾರೆ ಎಂದು ಹೇಳುತ್ತಿದ್ದರು. ಆದರೆ ನಾವು ಬರಿಯ ಸ್ತೋತ್ರಪಾಠ ಗಳು ಪುರಾಣ ಮುಂತಾದುವನ್ನು ಮಾತ್ರ ಕಲಿತಿರಬಹುದೆಂದು ಮಾಡಿದ್ದೆವು. ಆದರೆ ಅವಳಿಗೆ ಶಾಸ್ತ್ರಭಾಗಗಳೂ ತಿಳಿದಿರುವಂತೆ ಕಾಣುತ್ತದೆ'' ಎಂದನು.

ಆ ಬೆಳಿಗ್ಗೆ ಗೋಪಾಲ ಮನೆಯಲ್ಲಿ ಪಠಗಳ ಹಿಂದೆ ಧೂಳು ಹೊಡೆಯುತ್ತಿರುವಾಗ ಅಲ್ಲಿ ಒಂದು ಸಣ್ಣ ಹೊಳ್ಳೆ ಹಾವಿನಮರಿ ಸೇರಿಕೊಂಡಿದ್ದುದು ಅವನ ಕಣ್ಣಿಗೆ ಬಿದ್ದಿತು. ಅದನ್ನು ಕೂಡಲೆ ಗೋಪಾಲ ಒಂದು ದೊಣ್ಣೆಯಿಂದ ಹೊಡೆದುಹಾಕಿದನು. ಊರಿನವರು "ಗೋಪಾಲ ಇವತ್ತು ನಾರಾಯಣನನ್ನು ಕೊಲ್ಲುತ್ತೇನೆ'' ಅಂತ ಪ್ರತಿಜ್ಞೆಮಾಡಿದ್ದ. ಅವನ ಪ್ರತಿಜ್ಞೆ ವ್ಯರ್ಥವಾಗಲಿಲ್ಲ. ನಾರಾಯಣನ ಮೇಲೆ ಹೋಗಬೇಕಾಗಿದ್ದುದು ಹಾವಿನ ಮೇಲೆ ಹೋಯಿತು. ಅಂತು ಗೋಪಾಲನ ಪ್ರತಿಜ್ಞೆ ನೆರವೇರಿತು''

ಎಂದು ಹಾಸ್ಯಮಾಡಿದರು. ಎರಡು ವಿವಾಹಗಳೂ ಬಹಳ ಜಬರ್ದಾಗಿ ನಡೆದುವು. ಕೆಲವು ಪುರೋಹಿತರು ಮಂತ್ರ ಭಕ್ಷಕರಾಗಿಯೂ, ಕೆಲವರು ಮಂತ್ರ ಹಿಂಸಕರಾಗಿಯೂ ಕೆಲವರು ಮಂತ್ರಘಾತಕರಾಗಿಯೂ ಮತ್ತೆ ಕೆಲವರು ಸರ್ವ ಘಾತುಕರಾಗಿಯೂ ಇರುತ್ತಾರೆ. ಇವರಲ್ಲಿ ಬೆಂಗಳೂರಿನಿಂದ ಬಂದ ಪುರೋಹಿತರನ್ನು ಯಾವ ತರಗತಿಗೆ ಸೇರಿಸಬೇಕೊ ಇನ್ನೂ ಮಲ್ಲಿಗೆಹಳ್ಳಿಯವರಿಗೆ ತಿಳಿದಿಲ್ಲ. ಪೂಜಾಕಾಲ ಎಂದು "ಓದಿಸುವುದು" ಬಂದಾಗ ರಾಮು ಹೇಳಿದಂತೆ ಕೆಲವರು "ಪಲಾಯನ ಸೂಕ್ತ" ಕೆಲವರು "ದೈನ್ಯಮುಖ."

ಈ ವಿವಾಹದಲ್ಲಿ ತೊಂದರೆಯಾದದ್ದು ಒಬ್ಬರಿಗೆ ಮಾತ್ರ. ವಾಚಸ್ಪತಿ ಅಯ್ಯನ ಕರಿಯ ಹಸುವಿಗೆ ಬ್ಯಾಂಡಿನ ಧ್ವನಿ ಕೇಳಿದರೆ ಆಗುವುದಿಲ್ಲ. ಬ್ಯಾಂಡಿನ ಡೋಲು ಒಂದು ಸಲ ಬಾರಿಸುವುದೇ ತಡ. ಎಂತಹ ಸರಪಣಿಯಲ್ಲಿ ತನ್ನನ್ನು ಕಟ್ಟಿದ್ದರೂ ಅದು ಕಿತ್ತುಕೊಂಡು ಹೋಗಿ ಬಿಡುತ್ತಿದ್ದಿತು. ವಾಚಸ್ಪತಿ ಅಯ್ಯ ಅದನ್ನು ಕೊಟ್ಟಿಗೆಯಲ್ಲಿ ಕೂಡಿ ಬೀಗ ಹಾಕಿದ್ದನು. ಅದು ಗೊಂತಿನಿಂದ ಕಿತ್ತುಕೊಂಡು ಎರಡು ಕಾಲುಗಳನ್ನೂ ಬಾಗಿಲಿಗೆ ಇಟ್ಟು ಮುಂದಕ್ಕೆ ಹಾರುವ ನಾಗಾಲೋಟದ ಭಾವದಲ್ಲಿಯೇ ನಿಂತಿರುತ್ತಿದ್ದಿತು. ಈ ವಿನೋದವನ್ನು ಬಾಗಿಲಿನ ಕಿಂಡಿಯಿಂದಲೇ ಹುಡುಗರೆಲ್ಲಾ ನೋಡುತ್ತಿದ್ದರು. ಹೀಗೆ ೫-೬ ದಿನ ಒಂದೇ ಸಮವಾಗಿ ಬ್ಯಾಂಡಿನ ಹೊಡೆತ ನಡೆದರೂ ಹಸು ಆ ಧ್ವನಿಗೆ ಪಳಗಲಿಲ್ಲ. ಆದರೆ ವಾಚಸ್ಪತಿ ಮಾತ್ರ ಬಹಳ ಪಳಗಿದನು. ಬ್ಯಾಂಡ್ ಡೋಲನ್ನು ಬಾರಿಸುತ್ತೇನೆ ಎಂದು ಹೆದರಿಸಿ ಅವನಿಂದ ಆಗ ಬೇಕಾದ ಕೆಲಸವನ್ನು ಸುಲಭವಾಗಿ ಮಾಡಿಕೊಳ್ಳಬಹುದಾಗಿದ್ದಿತು.

## ೨೩. ನಾಟ್ಯ ವಿಕಾರಿ

ಮಲ್ಲಿಗೆಹಳ್ಳಿಯ ನಾಟ್ಯ ವಿಲಾಸಿಗಳ ಸಂಘ ಸ್ಥಾಪನೆಯಾಗಿ ಆ ವೇಳೆಗೆ ಆಗಲೆ 6—7 ತಿಂಗಳಾಗಿದ್ದಿತು. ಆಟ ಕಲಿಸುವವನು ಬಣ್ಣ ಹಾಕುವವನು ಎಲ್ಲಾ ಸುದರ್ಶನನೇ. ನಾಟಕ ಅಂದರೆ ಅಭಿನಯಿಸುವುದಕ್ಕೂ ನೋಡುವುದಕ್ಕೂ ಜನರಿಗೆ ಅದು ಏನು ಉತ್ಸಾಹವೋ? ಪ್ರತಿಯೊಬ್ಬರೂ

ತಾವೂ ಅಭಿನಯಿಸುತ್ತೇವೆಂದು ಮುಂದೆ ಬರುತ್ತಿದ್ದರು. ಒಂದು ಅರ್ಧ ಗಂಟೆ, ಕಾಲು ಗಂಟೆ, ಹತ್ತು ನಿಮಿಷ, ಬಣ್ಣಹಾಕಿಕೊಂಡು ರಂಗಸ್ಥಳದ ಮೇಲೆ ಇರಲು ಮಾತ್ರ ಸಾಧ್ಯವಾದರೆ ಸಾಕು. ಅದಕ್ಕಾಗಿ ಯಾವ ಕಷ್ಟವನ್ನು ಪಡಲೂ ಬೆಳಗಿನಿಂದ ರಾತ್ರಿಯವರೆಗೆ ದುಡಿಯಲೂ ಅವರು ಹಿಂದೆಗೆಯುತ್ತಿರಲಿಲ್ಲ. ಇಷ್ಟಾದರೂ ಅಭಿನಯಿಸುವೆವೆಂದು ಕಾತರ ರಾಗಿದ್ದವರಿಗೆ ಇನ್ನೂ ಒಂದೊಂದು ಅವಕಾಶವೂ ಸಿಕ್ಕಿಯೇ ಇರಲಿಲ್ಲ. ಬಣ್ಣದ ಖರ್ಚಿಗಾಗಿ ಪ್ರತಿ ಆಟದ ದಿನವೂ ಪ್ರತಿಯೊಬ್ಬ ಅಭಿನಯಕಾರನೂ ನಾಲ್ಕು ಆಣೆ ಕೊಡಬೇಕೆಂದು ಸುದರ್ಶನ ಗೊತ್ತುಮಾಡಿದ್ದನು. ವೇಷ ಹಾಕುವವರು ಅದನ್ನು ಕೊಡುವುದಕ್ಕೂ ಸಿದ್ಧವಾಗಿದ್ದರು.

ಈ ನಾಟಕದ ಸಂದರ್ಭದಲ್ಲಿ ಜನ ಅನೇಕ ವಿನೋದಗಳನ್ನು ನೋಡಿತು. ಹುಚ್ಚು ಎದ್ದು ಕುಣಿಯಿತು. ನಾಟಕವಾಗುವಾಗ ಮಾತ್ರವೇ ಅಲ್ಲ; ಬಾಕಿ ಕಾಲದಲ್ಲಿಯೂ ಯಾವಾಗಲೂ ಜನರಿಗೆ ಈ ನಾಟಕದ ಸುಖ, ಹೂವಿನ ಪರಿಮಳದಂತೆ ಅವರ ಎಲ್ಲಾ ಕೆಲಸಗಳಲ್ಲಿಯೂ ಸಂತೋಷವನ್ನು ಕೊಡುತ್ತಿದ್ದಿತು. ಮೊದಲು ನಾಟಕ ಸಂಪೂರ್ಣ ರಾಮಾಯಣ ಹಾಕಿದ್ದಾಗ ಆಂಜನೇಯ ಬೆಳಗಿನಿಂದ ಕಣದಲ್ಲಿ ರಾಗಿ ಬಡಿದು ಸುಸ್ತಾಗಿ ತೂಕಡಿಸುತ್ತಿದ್ದುದರಿಂದ "ಪರಮಾತ್ಮ ಇವತ್ತು ಯಾಕೆ ರಾಮಾಯಣ ಒಪ್ಪಿದೆ" ಎಂದು ಅವನಿಗೆ ಕೊರಗು ಹೆಚ್ಚಾಗಿದ್ದಿತು. ಅವನು ಅರ್ಧ ಅಭಿನಯ ನಿದ್ರೆಯಲ್ಲಿಯೇ ಮಾಡಿದನು. ಸೀತೆಯ ಕೈಯಿಂದ ಅಶೋಕ ವನದಲ್ಲಿ ಉಂಗುರವನ್ನು ತೆಗೆದುಕೊಂಡು ರಾಮನಲ್ಲಿಗೆ ಬಂದಾಗ ರಾಮನು ರಂಗಸ್ಥಳದಲ್ಲಿ ಸಿಂಹಾಸನದ ಮೇಲೆ ಸಡಿಲವಾಗುತ್ತಿದ್ದ ಜಟೆ ಯನ್ನು ಎಡಗೈಯಲ್ಲಿ ಹಿಡಿದುಕೊಂಡು ಕುಳಿತುಕೊಂಡು "ಭಕ್ತ ಆಂಜ ನೇಯ ಸೀತೆ ಮತ್ತೂ ಏನು ಹೇಳಿದಳು" ಎಂದು ಕೇಳಿದನು. ಮಲ್ಲಿಗೆ ಹಳ್ಳಿಯವರು ಆಡುತ್ತಿದ್ದ ರಾಮಾಯಣ ಮೂರು ಭಾಗ ಮಾಡಿದ್ದರು. ಅರ್ಧ ರಾಮಾಯಣ, ಮುಕ್ಕಾಲು ರಾಮಾಯಣ, ಪೂರ್ತಾ ರಾಮಾಯಣ ಎಂದು. ಸೀತೆಯ ಉಂಗುರವನ್ನು ರಾಮನಿಗೆ ತಂದು ಕೊಡುವವರೆಗೆ ಅರ್ಧ ರಾಮಾಯಣ; ಸಮುದ್ರವನ್ನು ದಾಟಿ ಲಂಕೆಯ ಎದುರಿಗೆ ಸೈನ್ಯ ಬೀಡು ಬಿಡುವುದು ಮುಕ್ಕಾಲು ರಾಮಾಯಣ; ಶ್ರೀರಾಮ ಪಟ್ಟಾ ಭಿಷೇಕ ಪೂರ್ತಾ ರಾಮಾಯಣ. ಆ ದಿವಸ ಪೂರ್ತಾ ರಾಮಾಯಣವನ್ನೇ

ಇಟ್ಟಿದ್ದರು. ಅಂಗುಳಿಕ ಬಂದ ಕೂಡಲೆ ಇನ್ನು ರಾಮನು ಸೀತೆಯನ್ನೂ ಅವಳ ಮಾತನ್ನೂ ನೆನಸಿಕೊಂಡು ಖಂಡಿತ ಒಂದು ಒಂದುವರೆ ಗಂಟೆ ಯಾದರೂ ಪ್ರಲಾಪಿಸುವನೆಂಬುದು ಆಂಜನೇಯನಿಗೆ ಗೊತ್ತು. ಆಗ ಸ್ವಲ್ಪ ಹೆಚ್ಚು ಕಡಿಮೆ ಪ್ರೇಕ್ಷಕರಿಗೆ ಸಹ ನಿದ್ರೆ ಬರುತ್ತಿದ್ದಿತು. ಇನ್ನು ಮೊದಲೇ ನಿದ್ರೆಗೆ ತುತ್ತಾದ ಆಂಜನೇಯನಿಗೆ ಕೇಳಬೇಕೆ? ಆವತ್ತಿನ ಆಟಕ್ಕೆ ರಾಮನ ವೇಷ ಹಾಕಿದ್ದವನೇ ಸ್ಟೇಜ್ ಮ್ಯಾನೇಜರ್ ಆಗಿದ್ದನು. ಅವನಿಗೆ ಹೇಳಿದ ಹೊರತು ಆಟ ಮುಗಿಸುವಂತೆ ಇಲ್ಲ. ಅವನಿಗೆ ಹೇಳ ಬೇಕಾದರೆ ರಾಮನ ಪ್ರಲಾಪವೇ ಒಂದು ಗಂಟೆ ಆದ ಮೇಲೆ ಹೇಳಬೇಕಾ ಗಿತ್ತು. ಆ ವೇಳೆಗೆ ಆಂಜನೇಯ ಯಾವ ನಿದ್ರೆಯ ಲೋಕದಲ್ಲಿರುತ್ತಿ ದ್ದನೋ? ಆದುದರಿಂದ ರಾಮನು "ಸೀತೆ ಮತ್ತೂ ಏನು ಹೇಳಿದಳು" ಎಂದು ಕೇಳಿದ ಕೂಡಲೇ ಆಂಜನೇಯ "ಅರ್ಧ ರಾಮಾಯಣಕ್ಕೇ ಇವತ್ತು ಮಂಗಳ ಮಾಡಬೇಕೆಂದು ಹೇಳಿದಳು" ಎಂದನು. ರಾಮನಿಗೆ ಈ ಹೊಸ ಪರಿಸ್ಥಿತಿಗೆ ಜವಾಬ್ ಕೊಡಲು ತೋಚಲೇ ಇಲ್ಲ. ಪ್ರೇಕ್ಷಕರೂ ಇದೆಲ್ಲಿಯ ಕಥಾ ಭಾಗ, ಇದು ಯಾವ ರಾಮಾಯಣದಲ್ಲಿ ಎಲ್ಲಿದೆ ಎಂದು ಯೋಚಿಸುತ್ತಿದ್ದರು. ಆಂಜನೇಯ ಅವರಿಗೆ ಹೆಚ್ಚು ಹೊತ್ತು ಯೋಚಿ ಸಲು ಅವಕಾಶ ಕೊಡಲಿಲ್ಲ. ಪ್ರೇಕ್ಷಕರ ಕಡೆಗೆ ಕೈಮುಗಿದುಕೊಂಡು ಮಂಗಳವನ್ನು ಪ್ರಾರಂಭಿಸಿಯೇ ಬಿಟ್ಟನು. ರಾಮ ಲಕ್ಷ್ಮಣ ಸುಗ್ರೀವ ಮುಂತಾದವರೆಲ್ಲ ಎದ್ದು ಮಂಗಳ ಗಾನದಲ್ಲಿ ಸೇರಿದರು. ಫರದೆ ಎಳೆ ಯುತ್ತಿದ್ದ ದಾಸ ಪದ್ಧತಿಯಂತೆ ಮಂಗಳವಾದ ಮೇಲೆ ಫರದೆ ಕೆಳಕ್ಕೆ ಬಿಟ್ಟ. ಪ್ರೇಕ್ಷಕರು ಮನೆಗಳಿಗೆ ಹೊರಟರು. ಆಗ ಫರದೆಯ ಹಿಂದೆ ಧಬ ಧಬ ಎಂದು ಸದ್ದಾಯಿತು. ರಾಮ ಆಂಜನೇಯನನ್ನು ಬಡಿದುದು ರಾಮಾಯಣದಲ್ಲಿಯೇನೋ ಹೇಳಿಲ್ಲ. ಆಂಜನೇಯನ ನಿದ್ರೆಯ ಜಡರು ಸ್ವಲ್ಪ ಮಾತ್ರ ಕಡಿಮೆಯಾಯಿತು.

ಒಂದು, ಅರ್ಧ ರಾಮಾಯಣವನ್ನು ಹಾಕಿದ ದಿನ, ತಾರೆಯ ವೇಷಧಾರಿ ಚೆನ್ನಯ್ಯನಿಗೆ ಪ್ರೇಕ್ಷಕರ ಮಧ್ಯದಿಂದ ಒಬ್ಬ ಸ್ತ್ರೀ ಹೋಗಿ ಸರಿಯಾಗಿ ಸೀರೆ ಉಡುಸಿ ಬಂದಳು. ಅವನಿಗೆ ಮೊದಲು ರಾಮ ಉಡಿ ಸಿದ ಸೀರೆ ರಂಗ ಸ್ಥಳಕ್ಕೆ ಬಂದ ಕೂಡಲೆ ಸಡಿಲವಾದುದರಿಂದ ತಾರೆ ರಾಮನನ್ನು ಮರೆಯಲ್ಲಿ ನಿಂತು ಗಂಡನನ್ನು ಕೊಂದೆ ಎಂದು ಬೈಯುತ್ತಿ

ದ್ದವಳು ಹಾಗೆಯೇ ಒಳಕ್ಕೆ ಹೋಗಿಬಿಟ್ಟಳು. ಸೀರೆ ಸರಿಯಾಗಿ ಉಟ್ಟು ಕೊಂಡು ಬಂದನಂತರ ರಾಮನನ್ನು ಅನೇಕವಾಗಿ ಹೇಡಿ ಎಂದು ಬಯ್ಯುತ್ತಿದ್ದ ತಾರೆಗೆ ಹೀಗೆ ಸೀರೆ ಬಿಚ್ಚಿಹೋಗುವಂತೆ ಉಡಿಸಿದನಲ್ಲಾ ಎಂದು ರಾಮನ ಮೇಲೆ ನಿಜವಾದ ಕೋಪವೇ ಇತ್ತು. ಅವಳು "ಮರದ ಮರೆಯಲ್ಲಿ ನಿಂತು ನನ್ನ ಗಂಡನನ್ನು ಹೊಡೆದ ನೀನು ಹೇಡಿ. ಹೆಂಗಸಿಗೆ ಸೀರೆ ಕೂಡ ಉಡಿಸುವುದಕ್ಕೆ ಬರದ ನೀನು ಆ ಹೆಂಗಸಿಗಿಂತ ಕಡೆ" ಎಂದಳು. ಪ್ರೇಕ್ಷಕರಲ್ಲಿ ಅನೇಕರಿಗೆ ಈ ಮಾತು ಕೇಳಿಸಲಿಲ್ಲ. ಕೇಳಿಸಿ ದವರು ಸ್ವಲ್ಪ ಆಶ್ಚರ್ಯದಿಂದ ರಂಗಸ್ಥಳದ ಕಡೆ ನೋಡತೊಡಗಿದರು. ಅಂತೂ ಸೀರೆ ಸರಿಯಾಗಿ ಉಟ್ಟುಕೊಂಡು ಬರಲಿಲ್ಲ ಎಂಬುದಾಗಿ ತಾರೆಯ ಮೇಲಿದ್ದ ಪ್ರೇಕ್ಷಕರ ಕೋಪ ಅದನ್ನು ಉಡಿಸಿದವನು ರಾಮ ಎಂದು ತಿಳಿದು ಅವನ ಮೇಲೆ ಹೋಯಿತು. ನಿಜವಾದ ರಾಮನಿಗೇ ತಾರೆಯ ಎದುರಿಗೆ ತಾನು ತಪ್ಪಿತಸ್ಥ ಅಪರಾಧಿ ಎಂದು ತಿಳಿದಿರುವಾಗ ಈ ವೇಷ ಧಾರಿ ರಾಮ ಏನು ತಾನೆ ಮಾಡಿಯಾನು ? ಅವನು ಸುಮ್ಮನೇ ಇದ್ದನು.

ಒಂದು ಆಟದಲ್ಲಿ ರಾಮ ಬಿಟ್ಟ ಬಾಣ ನಿಜವಾಗಿಯೂ ರಾವಣನ ನೆತ್ತಿಗೇ ಬಡಿದು ರಕ್ತ ಬಂತು. ಎಲ್ಲಾದಕ್ಕಿಂತ ಹೆಚ್ಚಾಗಿ ಸುದರ್ಶನ ನಾಟಕ ಸಂಘದಲ್ಲಿ ವಿನೋದವಾದದ್ದು ಲಕ್ಷ್ಮಯ್ಯನಿಗೆ ನಿಜವಾಗಿಯೂ ಅರ್ಧ ಕ್ಷೌರವಾದ ದಿನ. ಈ ಲಕ್ಷ್ಮಯ್ಯನಿಗೆ ಯಾವ ಪಾತ್ರವನ್ನು ಅಭಿ ನಯಿಸುವುದರಲ್ಲಿಯೂ ಪರಿಶ್ರಮವಿರಲಿಲ್ಲ. ಪರಿಶ್ರಮವಿರುವುದಿರಲಿ. ಯಾವ ಪಾತ್ರವೂ ಅವನಿಗೆ ಏನು ಮಾಡಿದರೂ ಹತ್ತುವಂತೆಯೇ ಇರ ಲಿಲ್ಲ. ಜತೆಗೆ ಅವನಿಗೆ ಉಗ್ಗು ಬೇರೆ ಸ್ವಲ್ಪ ಇತ್ತು. ಬಾಯಿನಿಂದ ಮಾತು ಹೊರಡುತ್ತಿರಲಿಲ್ಲ. ಆದರೆ ನಾಟಕ ಹಾಕಿದ ದಿನವೆಲ್ಲಾ ಅವನು "ನನಗೆ ಒಂದು ಪಾತ್ರವನ್ನೂ ಕೊಡಲಿಲ್ಲ" ಎಂದು ಆಕ್ಷೇಪಿಸುತ್ತಿದ್ದನು. ಗ್ಯಾಸ್‌ಲೈಟ್ ಮುಂತಾದುವುಗಳು ದೊರೆಯುದಂತೆ ಪಂಚಾಯಿತಿ ಛೇರ್ಮ ನ್ನರಲ್ಲಿ ಪಿತೂರಿ ಮಾಡುತ್ತಿದ್ದನು. ಇರಲಿ; ಇವನ ಜೋರು ಅಡಗಿಸ ಬೇಕು ಎಂದು ಒಂದು ದಿನ ಸುದರ್ಶನ ಅವನಿಗೆ "ಅಯ್ಯಾ ಇವತ್ತು ನಾನು ನಾಟಕದ ಮಧ್ಯದಲ್ಲಿ ಹಜಾಮನ ವೇಷ ಹಾಕುತ್ತೇನೆ. ನೀನು ಕ್ಷೌರಮಾಡಿಸಿಕೊಳ್ಳುವ ಗಿರಾಕಿಯಾಗು. ಹೀಗೆ ಒಂದು ನಕಲಿ ಮಾಡೋಣ. ಆದರೆ ಇಬ್ಬರೂ ಮಾತನಾಡಕೂಡದು. ಇದಕ್ಕೆ ಮೂಕ

ನಕಲಿ ಎಂದು ಹೆಸರು. ನೀನು ನನ್ನನ್ನು ಚಪ್ಪಾಳೆ ತಟ್ಟಿ ಕರಿ. ನಾನು ಬರುತ್ತೇನೆ. ನಿನ್ನ ಮುಂದೆ ಕೂತು ಕ್ಷೌರಮಾಡುತ್ತೇನೆ ಎಂದು ನಟಿಸುತ್ತೇನೆ" ಎಂದನು. ಲಕ್ಷ್ಮಯ್ಯ, ಆ ಬೆಳಿಗ್ಗೆ "ಗ್ಯಾಸ್‌ಲೈಟ್ ಪಂಚಾಯ್ತಿದು; ಇವರ ಆಟಕ್ಕೆ ಕೊಡೊಕಾಗದು" ಅಂತ ಕೂಗಾಡಿದ್ದ. ಪಂಚಾಯ್ತಿ ಛೇರ್ಮನರು ಆಟಗಾರರಿಗೆ "ಈ ಕಾಗೆಗೂ ಒಂದು ಪಾತ್ರ ಕೊಟ್ಟು ಇವನ ಗಲಾಟೆ ಕಡಿಮೆ ಮಾಡಿ" ಎಂದು ಹೇಳಿದ್ದರು.

ಆವತ್ತಿನ ನಾಟಕ ಪಾಂಡವ ವಿಜಯ. ಆ ಬೆಳಿಗ್ಗೆಯೇ ಲಕ್ಷ್ಮಯ್ಯ ನಿಗೆ ಗಡ್ಡ ಮೀಸೆ ಚೆನ್ನಾಗಿ ಬೆಳೆದಿತ್ತು. ಕ್ಷೌರಮಾಡಿಸಿಕೊಳ್ಳಬೇಕೆಂದು ಮಾಡಿದ್ದನು. ಸುದರ್ಶನ "ಇವತ್ತು ಮಾಡಿಸಿಕೊಳ್ಳಬೇಡ. ಗಡ್ಡ ಮೀಸೆ ಬೋಳಿಸಿಕೊಂಡವನು ರಂಗಸ್ಥಳದಲ್ಲಿ ಹಜಾಮನನ್ನು ಕರೆದರೆ ಜನ ಒಪ್ಪುತ್ತಾರೆಯೆ ? ಎಂದನು. ಲಕ್ಷ್ಮಯ್ಯ ಮಾಡಿಸಲಿಲ್ಲ. ರಾತ್ರಿ ಅರ್ಧ ನಾಟಕ ಆದ ಮೇಲೆ ಫರದೆಯ ಹಿಂದೆ ಸಿಂಹಾಸನಕ್ಕಾಗಿ ಜಾಯಿ ಕಾಯಿ ಪೆಟ್ಟಿಗೆಗಳನ್ನು ಇಡಲು ಫರದೆ ಕೆಳಕ್ಕೆ ಬಿಟ್ಟರು. ಆಗ ಸುದರ್ಶನ ಹಜಾಮನ ವೇಷ ಹಾಕಿಕೊಂಡು ಮಲ್ಲಿಗೆಹಳ್ಳಿ ಬೆಟ್ಟಯ್ಯನ ಹಡಪವನ್ನು ಸಾಲವಾಗಿ ತೆಗೆದುಕೊಂಡು, ಕೈಯ್ಯಲ್ಲಿ ಒಂದು ದೊಡ್ಡ ಮಡಕೆಯಲ್ಲಿ ನೀರನ್ನು ಹಿಡಿದುಕೊಂಡು ರಂಗಸ್ಥಳಕ್ಕೆ ಬಂದನು. ಆ ಕಡೆಯಿಂದ ಲಕ್ಷ್ಮಯ್ಯನೂ ಬಂದು ಚಪ್ಪಾಳೆ ಹೊಡೆದನು. ಸುದರ್ಶನ ಅವನ ಕಡೆ ತಿರುಗಿ ನೋಡಿದನು. ಲಕ್ಷ್ಮಯ್ಯ ತನ್ನ ಗಡ್ಡದ ಕಡೆ ಕೈತೋರಿಸಿದ. ಸುದರ್ಶನ ಸನ್ನೆ ಮಾಡಿ ಅವನನ್ನು ಕೂರಿಸಿ ತಾನೂ ಅವನ ಮುಂದೆ ಮಡಕೆಯಲ್ಲಿ ನೀರನ್ನು ಇಟ್ಟುಕೊಂಡು ಕುಳಿತುಕೊಂಡ. ಅನಂತರ ಸುದ ರ್ಶನ ಸ್ಟೇಜಿನ ಮಗ್ಗಲಲ್ಲಿ ಬಿದ್ದಿದ್ದ ಒಂದು ಹಳೆಯ ಪರಕೆಯನ್ನು ತೆಗೆದು ಕೊಂಡು ಒಂದು ಮರದ ತುಂಡಿನ ಮೇಲೆ ಅದನ್ನು ಇಟ್ಟುಕೊಂಡು ಅಲ್ಲೇ ಅದಕ್ಕಾಗಿಯೇ ಇಟ್ಟಿದ್ದ ಕಡ ಕತ್ತಿಯಿಂದ ಅದರ ತುದಿಯನ್ನೆಲ್ಲಾ ಕತ್ತರಿಸಿ ಅದನ್ನು ಒಂದು ಮೋಟು ಬರಲು ಮಾಡಿದ. ಅನಂತರ ಆ ಮೋಟು ಬರಲನ್ನು ಮಡಕೆಯ ನೀರಿನಲ್ಲಿ ಅದ್ದಿ, ಲಕ್ಷ್ಮಯ್ಯನ ಮುಖದ ಮೇಲೆ ಆಚೆ ಈಚೆ ಕೆನ್ನೆಗೆ ಚೆನ್ನಾಗಿ ಬಾರಿಸಿದ. ಲಕ್ಷ್ಮಯ್ಯನಿಗೆ ಯಮ ಹಿಂಸೆಯಾಯಿತು. ಆದರೆ ಮೌನವಾದ ನಕಲಿಯಾದುದರಿಂದ ಅವ ನೇನೂ ಮಾತನಾಡುವಂತೆ ಇರಲಿಲ್ಲ. ಸುದರ್ಶನ ಎರಡು ಮೂರು ಸಲ

ಷೋಟು ಬರಲು ಬ್ರಶ್‌ನಲ್ಲಿ ಬಾರಿಸಿ ಅನಂತರ ಸಾಬೂನು ಹಾಕಿ ಲಕ್ಷ್ಮ ಯ್ಯನ ಗಡ್ಡವನ್ನೆಲ್ಲಾ ತಿಕ್ಕಿ ನೊರೆ ಒರಸಿದ. ಲಕ್ಷ್ಮಯ್ಯ ಮನಸ್ಸಿನಲ್ಲಿ ಇನ್ನು ಸಾಕು ಎಂದುಕೊಂಡ. ಆದರೆ ಸುದರ್ಶನ ಬಿಡಲಿಲ್ಲ. ಹಡಪ ದಿಂದ ಕತ್ತಿ ತೆಗೆದುಕೊಂಡು ಬಲಗಡೆಗೆ ಉದ್ದಕ್ಕೂ ಒಂದು ಸಲ ಎಳೆದು ಒಂದು ಪಟ್ಟೆ ಬೋಳಿಸಿಯೇ ಬಿಟ್ಟ. ಲಕ್ಷ್ಮಯ್ಯ ಒಂದು ಸಲ ಕಣ್ಣು ಗುಡ್ಡೆಯೇ ಕೆಳಕ್ಕೆ ಬೀಳುವಂತೆ ಕಣ್ಣನ್ನು ಹಿಂಡಿದ. ಪ್ರೇಕ್ಷಕರು ನಿಜ ವಾಗಿಯೂ ಹೋ ಎಂದು ಬಿದ್ದು ನಗಲು ಪ್ರಾರಂಭಿಸಿದರು. ಸುದರ್ಶನ ಲಕ್ಷ್ಮಯ್ಯನನ್ನು ಇಲ್ಲಿಯೇ ಕುಳಿತಿರು ಎಂದು ಸನ್ನೆಮಾಡಿ ಸ್ಟೇಜಿನ ಒಳಕ್ಕೆ ಹೊರಟುಹೋದ. ಲಕ್ಷ್ಮಯ್ಯ ಉರಿಯುತ್ತಿದ್ದ ಗಡ್ಡವನ್ನು ಎಡ ಗೈಯಲ್ಲಿ ಮುಟ್ಟಿ ನೋಡಿಕೊಳ್ಳುತ್ತಾ ಮತ್ತೆ ಸುದರ್ಶನ ಬರಬಹುದೆಂದು ನಿರೀಕ್ಷಿಸುತ್ತಾ ಕುಳಿತ. ಸುದರ್ಶನ ಬರಲೇ ಇಲ್ಲ. ಹಿಂದುಗಡೆ ಸಿಂಹಾ ಸನಾರೋಹಣಕ್ಕೆ/ಎಲ್ಲಾ ಸಿದ್ಧವಾಗಿ ಫರದೆ ಮೇಲಕ್ಕೆ ಎದ್ದಿತು. ಪ್ರೇಕ್ಷ ಕರು "ಏ ಎದ್ದು ಹೋಗು" ಎಂದು ಕೂಗ ತೊಡಗಿದರು. ಲಕ್ಷ್ಮಯ್ಯ ಎದ್ದು ಸ್ಟೇಜಿನೊಳಕ್ಕೆ ಹೋದನು. ಅಲ್ಲಿಂದ ಈಚೆಗೆ ಲಕ್ಷ್ಮಯ್ಯನಿಗೆ ಮತ್ತೆ ನಾಟಕದಲ್ಲಿ ಅಭಿನಯಿಸುವ ಆಶೆ ಉಂಟಾಗಿಲ್ಲ.

ಈ ಅಭಿನಯಕಾರರಿಗೂ ಮಲ್ಲಿಗೆಹಳ್ಳಿಯಲ್ಲಿ ಬಿರದು ಬಹುಮಾನ ಗಳು ಬರದೇ ಇಲ್ಲ—ಆಂಜನೇಯನ ಪಾತ್ರವನ್ನು ವಹಿಸುವವನಿಗೆ ನಾಟ್ಯ ಬಿಂಗಿ ಎಂದೇ ಹೆಸರು. ರಾಮನ ಪಾತ್ರಧಾರಿಗೆ ನಾಟ್ಯವಿಕಾರಿ ಎಂದೇ ಹೆಸರು. ತಾರೆಗೆ ನಾಟ್ಯ ಕುರೂಪಿ ಎಂದು ಹೆಸರು. ಅವರನ್ನು ಜನ ಉಳಿದ ಕಾಲಗಳಲ್ಲಿಯೂ ಈ ಹೆಸರಿನಿಂದಲೇ ಕರೆಯುತ್ತಾರೆ. ಈ ಪಾತ್ರ ದಾರರು ನಿತ್ಯ ಜೀವನದಲ್ಲಿ ಯಾವುದಾದರೂ ಕಾರಣದಿಂದ ಸಿಟ್ಟುಮಾಡಿ ಕೊಂಡಿರುವಾಗ ಒಬ್ಬರೊಂದಿಗೆ ಒಬ್ಬರು ಜಗಳವಾಡುತ್ತಿರುವಾಗ ಮೂರನೆ ಮನುಷ್ಯರು "ಏ ನಾಟ್ಯ ಬಿಂಗಿ ಸಾಕು ನಡಿ" ಎಂದರೆ ವಾತಾ ವರಣ ಶುದ್ಧಿಯಾಗುತ್ತದೆ. ಒಬ್ಬರಿಗೊಬ್ಬರಿಗೆ ಕೈ ಕೈ ಮಿಲಾಯಿಸುವ ಪರಿಸ್ಥಿತಿ ಬಂದಾಗ ಸುತ್ತಾ ಇರುವವರು ಬಿಡಿಸುವುದಕ್ಕೆ ಇನ್ನಾವ ಮಾರ್ಗವೂ ತೋರದಿದ್ದರೆ ನಾಟ್ಯ ಬಿಂಗಿ ನಾಟ್ಯವಿಕಾರಿ, ನಾಟ್ಯ ಕಪೋರಿ ಎಂದು ಕರೆದು ಎಂಥಾ ಕೋಪದಲ್ಲಿರುವವರಿಗೂ ನಗು ಉಂಟುಮಾಡು ತ್ತಾರೆ. ಅಂತಹ ನಗು ಬಂದ ಮೇಲೆ ಇನ್ನು ವ್ಯಾಜ್ಯವೆಲ್ಲಿ ಬಂತು !

## ದೇವರ ಉತ್ಸವಕ್ಕೆ ಕ್ರೇನ್

" ಇಷ್ಟೊಂದು ಜನ ಪಟ್ಟಣವಾಸದವರು ಬಂದಿದ್ದಾರೆ. ಒಬ್ಬೊಬ್ಬರಿಗೂ ಐನೂರು ಆರುನೂರು ಸಂಬಳ ಬರುತ್ತಿದೆ. ಅವರು ಒಬ್ಬರು ತಿಂಗಳಿಗೆ ಕ್ಲಬ್‌ಗೆ ಕುಡಿಯುವುದಕ್ಕೇ ಮುನ್ನೂರು ರೂಪಾಯಿ ಖರ್ಚು ಮಾಡುತ್ತಾರಂತೆ. ದೇವಸ್ಥಾನದ ಭಾವಿ ಸರಿಪಡಿಸಲು ಇವರಿಂದ ಏನಾದರೂ ವಸೂಲ್ಮಾಡಬೇಕು" ಎಂದು ಮಲ್ಲಿಗೆಹಳ್ಳಿಯವರು ಪಿತೂರಿಮಾಡಿ ದೇವಸ್ಥಾನದಲ್ಲಿ ಒಂದು ಸಭೆ ನಡೆಸಿದರು. ಆಗ ಊರಿನಲ್ಲಿ ಉತ್ಸವಾದಿಗಳು ನಡೆಯುವ ಕಾಲವಾಗಿತ್ತು. ಪ್ರಭಾವಳಿ ಉತ್ಸವ—ಬಿದಿರಿನಲ್ಲಿ ಪ್ರಭಾವಳಿಯನ್ನು ತ್ರಿಕೋಣದ ಆಕಾರದಲ್ಲಿ ಕಟ್ಟಿ ಅದರ ಮೇಲೆ ತರ ತರಹದ ಬಣ್ಣದ ಬಟ್ಟೆಗಳನ್ನು ಹೊದಿಸಿ ಅದರ ಮೇಲೆ ದೇವರನ್ನು ಬಿಜಯ ಮಾಡಿಸುವುದು—ಪ್ರಭಾವಳಿ ಗರುಡ—ಈ ಪ್ರಭಾವಳಿಯ ಮುಂದೆ ಗರುಡನನ್ನು ಇಟ್ಟು ಅದರ ಮೇಲೆ ದೇವರನ್ನು ಬಿಜಮಾಡಿಸುವುದು, ಪ್ರಭಾವಳಿ ಆದಿಶೇಷ—ಪ್ರಭಾವಳಿಯ ಮೇಲೆ ಮರದಲ್ಲಿ ಮಾಡಿರುವ ಆದಿಶೇಷನನ್ನು ಏರಿಸಿ ಅದರ ಮೇಲೆ ದೇವರನ್ನು ಬಿಜಯ ಮಾಡಿಸುವುದು; ಹೂವಿನ ತೇರು; ಏಳು ಅಂತಸ್ತಿನ ತೇರನ್ನು ಗಳುವಿನಲ್ಲಿ ಕಟ್ಟಿ ಅದರ ಮೇಲೆ ದೇವರನ್ನು ಬಿಜಯ ಮಾಡುವುದು, ಆನೆಯ ಉತ್ಸವ, ಕುದುರೆಯ ಉತ್ಸವ, ಪ್ರಭಾವಳಿ ಚಂದ್ರಮಂಡಲ, ಸೂರ್ಯಮಂಡಲ, ದವನಮಂಟಪ, ಆಳುಪಲ್ಲಕ್ಕಿ, ಈ ಎಲ್ಲಾ ಉತ್ಸವಗಳಿಗೂ ದೇವರನ್ನು ಅತಿ ಕಷ್ಟದಿಂದ ಆಯಾ ವಾಹನಗಳ ಮೇಲೆ ಏರಿಸಬೇಕಾಗಿದ್ದಿತು. ಬೆಂಗಳೂರಿನ ಮಿತ್ರರಿಗೆ ಗ್ರಾಮಸ್ಥರು ದೇವಸ್ಥಾನದಲ್ಲಿ ಸ್ವಾಗತವನ್ನು ಬಯಸಿ. " ನೀವೆಲ್ಲಾ ಪಟ್ಟಣದಲ್ಲಿರುವವರು. ಒಳ್ಳೆ ಅನುಕೂಲವಾಗಿರುವವರು. ನಾವು ಹಳ್ಳಿಯಲ್ಲಿ ದುಡ್ಡಿನ ಮುಖ ಕಾಣುವುದೇ ಅಪರೂಪವಾಗಿದೆ. ನಿಮ್ಮ ಜ್ಞಾಪಕಾರ್ಥವಾಗಿ ಈ ದೇವಸ್ಥಾನದ ಭಾವಿಯನ್ನು ಸರಿಪಡಿಸಿ" ಎಂದು ಕೇಳಿಕೊಂಡರು.

ಬೆಂಗಳೂರಿನಿಂದ ಬಂದಿದ್ದ ಮಹನೀಯರು, ತಮ್ಮ ಪರವಾಗಿ ಹಳ್ಳಿಯವರು ಹೇಳಿದ ಮಾತುಗಳನ್ನೆಲ್ಲಾ ಬಹಳ ಸಂತೋಷದಿಂದ ನಗುತ್ತಾ ಕೇಳಿ ಕೊನೆಗೆ " ನೀವು ಒಂದು ಭಾವಿ ಸರಿಪಡಿಸುವುದಕ್ಕೆ ಸಹಾಯ ಕೇಳಿ

ದಿರಿ. ಅದು ಬಹು ಸಣ್ಣ ವಿಚಾರ. ಅದನ್ನು ನೀವು ಯಾರಿಂದ ಬೇಕಾದರೂ ಪಡೆಯಬಹುದು. ಆದರೆ ನಿಮಗೆ ನಿಜವಾಗಿಯೂ ಅತ್ಯಂತ ಬೆಲೆಯಾದ ಒಂದು ಸಲಹೆಯನ್ನು ಹೇಳುತ್ತೇನೆ. ಕೇಳಿ. ನಿಮಗೆ ಇಂತಹ ಸಲಹೆ ಯಾರೂ ಇದುವರೆಗೆ ಕೊಡದೆ ಇರುವುದರಿಂದಲೇ ನೀವು ಸುಧಾರಣೆ ಮಾಡಿಕೊಳ್ಳಲಿಲ್ಲ. ನಿಮ್ಮ ಊರು ಉತ್ಸವಗಳು ಬಹು ಚೆನ್ನಾಗಿ ನಡೆಯುತ್ತಿವೆ. ಆದರೆ ದೇವರನ್ನು ವಿಧ ವಿಧವಾಗಿ ವಾಹನಗಳ ಮೇಲೆ ಕೂರಿಸುವುದು ನಿಮಗೆ ಕಷ್ಟ. ಅದರಲ್ಲಿಯೂ ಪ್ರಭಾವಳಿ ಗರುಡ, ಪ್ರಭಾವಳಿ ಸರ್ಪ, ಪ್ರಭಾವಳಿ ಚಂದ್ರ ಮಂಡಲ, ಇವುಗಳನ್ನು ಕೈ ತೇರಿನ ಮೇಲೆ ಏರಿಸಬೇಕಾದರೆ ನಿಮಗೆ ಬಹಳ ಕಷ್ಟವಾಗುತ್ತಿದೆ. ಇದಕ್ಕಾಗಿ ನೀವು ಒಂದು ಸಣ್ಣ ಕ್ರೇನ್ ತರಿಸಿಬಿಡಿ. ಇದರಿಂದ ನಿಮ್ಮ ಉತ್ಸವಾದಿಗಳ ಕೆಲಸ ಬಹಳ ಸುಲಭವಾಗಿ ಆಗುವುದು. ನಿತ್ಯಾ ಬೇಕಾದರೂ ಪ್ರಭಾವಳಿ ಗರುಡನನ್ನು ಏರಿಸಬಹುದು. ಸಾರ್ವೆಯನ್ನು ಈಗಿನಂತಲ್ಲದೆ ಕೆಳಗೇ ಅಚ್ಚುಕಟ್ಟಾಗಿ ಕಟ್ಟಿ ಕ್ರೇನ್ ಮೂಲಕ ಮೇಲಕ್ಕೆ ಸಾಗಿಸಬಹುದು'' ಮಾತನಾಡುತ್ತಾ ಮಾತನಾಡುತ್ತಾ ಸಾಹೇಬರಿಗೆ ಸ್ಫೂರ್ತಿ ಬಂದು ಬಿಟ್ಟಿತು. '' ಅವರು ರಥೋತ್ಸವದ ದಿನ ದೇವರನ್ನು ಕ್ರೇನ್‌ನಲ್ಲಿ ರಥದಮೇಲೆ ಏರಿಸಿ ಕೆಳಕ್ಕೆ ಇಳಿಸಬಹುದು; ತೆಪ್ಪೋತ್ಸವದಲ್ಲಿ ಸಾಗದದ ಮೇಲೆ ಕ್ರೇನ್‌ನಲ್ಲಿ ಏರಿಸಬಹುದು; ಭಗವಂತನ ಉತ್ಸವಕ್ಕೆ ಕ್ರೇನ್‌ನಂತಹ ಉತ್ತಮವಾದ ಸಾಧನೆ ಬೇರೆ ಇಲ್ಲ. ನನಗೆ ಈ ಸ್ಫೂರ್ತಿ ದೇವರೇ ಕೊಟ್ಟ; ನನ್ನ ಬಾಯಿಂದ ಇದನ್ನು ಹೇಳಿಸುತ್ತಿದ್ದಾನೆ. ಇಲ್ಲದೆ ಇದ್ದಿದ್ದರೆ ನಾನು ಇಲ್ಲಿ ಬಂದ ಮೇಲೆಯೇ ಇದು ನನಗೆ ಹೊಳೆಯಬೇಕಾಗಿದ್ದಿತೇ. ನನ್ನ ಬಾಯಿಂದಲೇ ನಿಮಗೆ ಇದು ತಿಳಿಯಬೇಕಾಗಿದ್ದಿತೆ ?

ನಾವು ಮುಂದಲಸಲ ಇಲ್ಲಿಗೆ ಬರುವ ವೇಳೆಗೆ ಭಗವಂತ ಕ್ರೇನಿನ ಮೇಲೆ ಲೀಲೆಯಾಡುವುದನ್ನು ನೋಡುತ್ತೇವೆಂದು ಭಾವಿಸುತ್ತೇವೆ. ಅಷ್ಟೇ ಅಲ್ಲ; ದೇವರ ಉತ್ಸವಾದಿಗಳಿಗೆ ಆಳು ಅಡ್ಡೆಕಾರರು ಸಿಕ್ಕುವುದು ಕಷ್ಟ. ಈ ಗಜಾರೋಹಣೋತ್ಸವ, ಈ ಗರುಡೋತ್ಸವ, ಪ್ರಭಾವಳಿ ಉತ್ಸವ ಇವುಗಳನ್ನೆಲ್ಲಾ ನಡೆಸುವುದಕ್ಕೆ ಒಂದು ಲಾರಿ ಸಹ ಇಟ್ಟುಬಿಡಬೇಕು. ವಾಹನಗಳನ್ನೂ ದೇವರುಗಳನ್ನೂ ಲಾರಿಗೆ ಎತ್ತಿಹಾಕಲು ನಾನು ಹೇಳಿದ ಕ್ರೇನು. ಇನ್ನೊಂದು ವಿಚಾರ. ಈಗಿನ ಪೂಜಾರಿಗಳಿಗೆ ತಲೆಹರಟೆ ಹೆಚ್ಚಾಯಿತು.

ದೇವರಿಗೆ ಸಕಾಲದಲ್ಲಿ ಶ್ರದ್ಧೆಯಿಂದ ಪೂಜೆ ನಡೆಸುವುದಿಲ್ಲ. ತನ್ನ ಪಾಡಿಗೆ ತಾನು ಕೆಲಸ ಮಾಡಿಕೊಳ್ಳುವ "ಆಟೊಮಾಟಿಕ್" ಆದ ಒಂದು ಏರ್ಪಾಡು ಇಡಬೇಕು. ಆಯಾ ಕಾಲಕ್ಕೆ ಅದು ದೇವರಿಗೆ ಮಂಗಳಾರತಿ ನೈವೇದ್ಯ ಮಾಡಬೇಕು. ಆದೇ ಗಂಟೆ ಬಾರಿಸಬೇಕು. ಅಂದರೆ ದೇವರು ತನ್ನ ಉಪಚಾರಕ್ಕೆ ಯಾರ ಕೈಯ್ಯನ್ನೂ ಕಾಯಬೇಕಾಗುವುದಿಲ್ಲ. ನಾನು ನಿಮ್ಮ ಭಾವಿ ಸರಿಮಾಡಲು ನೂರು ರುಪಾಯಿ ಕೊಟ್ಟಿದ್ದರೆ ಅದು ನಿಮಗೆ ಉಪಕಾರವಾಗುತ್ತಿರಲಿಲ್ಲ. ಅದನ್ನು ಯಾರು ಬೇಕಾದರೂ ಮಾಡಬಹುದು. ಆದರೆ ಈಗ ನಾನು ಕೊಟ್ಟಿರುವ ಸಲಹೆ ಎಲ್ಲರಿಂದಲೂ ನಿಮಗೆ ದೊರಕುವುದಿಲ್ಲ" ಹೀಗೆ ಹೇಳಿ ಸಾಹೇಬರು ಕುಳಿತುಕೊಂಡರು. ಸಭೆ ಮುಕ್ತಾಯವಾದ ಆದ ಮೇಲೆ ಗ್ರಾಮಸ್ಥರು "ಯಾವುದೋ ಕ್ಲಬ್ ಅಂತೆಲ್ಲ ಅದಕ್ಕೆ ಇವರು ತಿಂಗಳಿಗೆ ೩೦೦ ರುಪಾಯಿ ಕೊಡುತ್ತಿರುವುದು ಸುಳ್ಳಲ್ಲ" ಎಂದುಕೊಂಡು ಮನೆಗಳಿಗೆ ಹೋದರು.

---

## ೨೪. ಹಳ್ಳಿಯವರಿಗೂ ಹಿಂದಿ

---

ಈ ವಿವಾಹದ ಸಂದರ್ಭದಲ್ಲಿಯೇ ಬೆಂಗಳೂರಿನಿಂದ ಬಂದಿದ್ದ ರಿಟೈರ್ಡ್ ಮಂತ್ರಿಗಳ ಮಗಳು ಕನಕಲತೆ, "ಮಲ್ಲಿಗೆಹಳ್ಳಿಯ ಸ್ತ್ರೀಯರಿಗೆ ಸಂಸಾರ ಧರ್ಮಕ್ಕೆ ಸಂಬಂಧಪಟ್ಟ ಒಂದು ಉಪನ್ಯಾಸ ಮಾಡುತ್ತೇನೆ. ಪಟ್ಟಣದಿಂದ ಬರುವ ವಿದ್ಯಾವಂತರಾದ ನಾವು ಹಳ್ಳಿಗಳಲ್ಲಿರುವ ನಮ್ಮ ನಿರ್ಭಾಗ್ಯ ಸೋದರಿಯರಿಗೆ ಸಾಧ್ಯವಾದಷ್ಟು ಸೇವೆ ಮಾಡಬೇಕೆಂದು ಮಾಡಿದ್ದೇವೆ. ನಾವು ಹಳ್ಳಿಗಳಿಗೆ ಹೋದಾಗಲೆಲ್ಲಾ ಹೀಗೆ ಗ್ರಾಮೋದ್ಧಾರದ ಕೆಲಸಗಳನ್ನು ಮಾಡುತ್ತೇವೆ" ಎಂದು ಹೇಳಿದಳು. ಇಂಜನಿಯರ್ ಸಾಹೇಬರ ಉಪನ್ಯಾಸ ಕೇಳಿದ್ದ ಜನರಿಗೆ ಈ ರಿಟೈರ್ಡ್ ಮಂತ್ರಿಗಳ ಮಗಳ ಉಪನ್ಯಾಸ ಕೇಳಲು ಉತ್ಸಾಹವೇನೂ ಇರಲಿಲ್ಲ. ಆದರೆ ಅನಂತುವಿನ ಹೆಂಡತಿ ಜಾನಕಿಯು ಕನಕಲತೆಯು ಬೀಗಿತ್ತಿಯು ಆಗುವವರಾದುದರಿಂದ ಅವರ ಮನಸ್ಸನ್ನು ಸಂತೋಷಪಡಿಸಬೇಕೆಂದು ಹಳ್ಳಿಯ ಸ್ತ್ರೀಯರನ್ನೆಲ್ಲಾ ಊರೊಳಗಿನ ದೇವಸ್ಥಾನದ ಕೈಸಾಲೆಗೆ ಬರಬೇಕೆಂದು

ಕೇಳಿಕೊಂಡಿದ್ದಳು. ಜಾನಕಮ್ಮನ ಮಾತನ್ನು ಊರಿನಲ್ಲಿ ಯಾವ ಹೆಂಗಸರೂ ಮೀರುವವರಾಗಿರಲಿಲ್ಲ. ಆಕೆಯ ಗುಣ ಅಂಥಾದ್ದಾಗಿತ್ತು. ಅಲ್ಲದೆ ಈ ಬಂದಿದ್ದವರ ಸ್ವಭಾವ ಅವರ "ಆಶಡು" ಜಂಭ ಒಣ ಥಳಕು ಇವುಗಳನ್ನು ನೋಡಿ ಹಳ್ಳಿಯವರಿಗೆ "ಹೇಗಾದರೂ ಜಾನಕಮ್ಮನಂಥವರು ಇವರಲ್ಲಿ ನೂರಕ್ಕೆ ಒಬ್ಬರೂ ಇಲ್ಲ" ಎಂದು ನಂಬಿಕೆ ದೃಢವಾಗಿತ್ತು.

ಹಳ್ಳಿಯ ಸ್ತ್ರೀಯರು ಅವಿದ್ಯಾವಂತರಾದರೂ-ಈ ವಿಚಾರದಲ್ಲಿ ನಮ್ಮ ಸರ್ಕಾರಕ್ಕೂ ನಮ್ಮ ಪುರುಷರಿಗೂ ವ್ಯತ್ಯಾಸವಿಲ್ಲ. ಪ್ರಜೆಗಳು ವಿದ್ಯಾವಂತರಾಗುವುದನ್ನು ಸರ್ಕಾರ ಸಹಿಸುವುದಿಲ್ಲ. ಹೆಂಗಸರು ವಿದ್ಯಾವತಿಯರಾಗುವುದನ್ನು ಗಂಡಸರು ಸಹಿಸುವುದಿಲ್ಲ. ಇಬ್ಬರಿಗೂ ಇರುವ ಭಯ ಒಂದೇ —ತಮ್ಮ ದಬ್ಬಾಳಿಕೆಗೆ ಧಕ್ಕೆ ಬರುವುದೆಂದು—ನಿಜವಾಗಿ ಗೌರವ ಕೊಡುವವರಿಗೆ ಕೊಟ್ಟೇಕೊಡುತ್ತಾರೆ. ಪಟ್ಟಣಗಳಿಂದ ನಿಜವಾದ ಸುಂದರಿಯರು ಬಂದರೆ ಸ್ವಾಭಾವಿಕವಾಗಿ ಗೌರವಿಸುತ್ತಾರೆ. ಸೌಂದರ್ಯ ತಮ್ಮ ಆಯುಧ ಎಂದು ಮಹಿಳೆಯರಿಗೆ ಗೊತ್ತು. ಅದು ಯಾರಲ್ಲಿ ಇದೆಯೋ ಅವರನ್ನು ಅವರು ಮನ್ನಿಸಿಯೇ ಮನ್ನಿಸುತ್ತಾರೆ. ಸರಸ್ವತಿ ದೇವಿಯು ಒಬ್ಬ ರಾಜಕುಮಾರಿಗೆ ಪ್ರತ್ಯಕ್ಷವಾಗಿ "ನಿನಗೆ ಜಗತ್ತಿನಲ್ಲಿರುವ ಸಮಸ್ತ ಕಲೆಗಳನ್ನೂ ಸಂಗೀತ ಸಾಹಿತ್ಯವನ್ನೂ ಕೊಡಲೋ ಅಥವಾ ಒಳ್ಳೆ ರೂಪವನ್ನು ಕೊಡಲೋ" ಎಂದು ಕೇಳಿದುದಕ್ಕೆ ರಾಜಕುಮಾರಿ ರೂಪವೇ ಸಾಕು ಎಂದ ಕತೆ ಜ್ಞಾಪಕವಿರಬಹುದು. ಇದು ಸ್ವಾಭಾವಿಕವಾಗಿ ಸ್ತ್ರೀಯರ ಸ್ವಭಾವ. ಆ ಸ್ವಭಾವ ಹಾಗಲ್ಲದೆ ಬೇರೆಯಾಗಿರಬೇಕೆಂದು ಯಾವ ಪುರುಷನೂ ಬಯಸುವುದಿಲ್ಲ. ಬೆಂಗಳೂರಿನಿಂದ ಬಂದ ಸ್ತ್ರೀಯರು ಸುಂದರಿಯರಾಗಿದ್ದರೆ ನಿಜವಾಗಿಯೂ ಮಲ್ಲಿಗೆಹಳ್ಳಿಯ ಸ್ತ್ರೀಯರು ಅವರನ್ನು ಮನ್ನಿಸಿಯೇ ಮನ್ನಿಸುತ್ತಿದ್ದರು. ಆದರೆ ಬೆಂಗಳೂರಿನಿಂದ ಬಂದವರಲ್ಲಿ ಅಂತಹವರು ಯಾರೂ ಇರಲಿಲ್ಲ. ಅವರ ಮೈಗಳೂ ಅವರ ಜಂಭಗಳಂತೆಯೇ ಒಣಗಿದ್ದುವು. ಅವರಲ್ಲಿ ಯಾರೊಬ್ಬರೂ ಸೌಂದರ್ಯದಲ್ಲಿ ವೈದೇಹಿಗೆ ಸಮಾನರಾಗಿರಲಿಲ್ಲ. ಚಟುವಟಿಕೆಯಲ್ಲಿ ಮಂಗಳೆಗೆ ಸಮಾನರಾಗಿರಲಿಲ್ಲ. ಗಾಂಭೀರ್ಯದಲ್ಲಿ ಜಾನಕಿಗೆ ಸಮಾನರಾಗಿರಲಿಲ್ಲ. ಇನ್ನು ಅವರ ವಿದ್ಯೆ ? ಇಂತಹವರಿಗೆ ಇನ್ನು ವಿದ್ಯೆ ಏನಿದ್ದೀತು? ಬೆಂಗಳೂರಿನಿಂದ ಈ "ಥಳಕಿಗಳು" ಬಂದ ದಿನವೇ ಮಲ್ಲಿಗೆಹಳ್ಳಿಯ, ನೋಡುವುದಕ್ಕೆ

ಏನೂ ತಿಳಿಯದೆ ಮಂಕರಂತಿದ್ದ ಮಹಿಳೆಯರು, ಅವರಲ್ಲಿ ಒಬ್ಬೊಬ್ಬ ರನ್ನೂ ನೋಡಿ "ಇವಳ ಯೋಗ್ಯತೆ ಇಷ್ಟು ; ಇವಳ ಯೋಗ್ಯತೆ ಇಷ್ಟು" ಎಂದು ತೂಕ ಅಳತೆ ಮಾಡಿ ಇಟ್ಟುಬಿಟ್ಟರು. "ಇವಳದು ಬರಿಯ ಮಾತಿನ ಆಡಂಬರ. ಬುದ್ಧಿ ಟೊಳ್ಳು; ಇವಳಿಗೆ ಬುದ್ಧಿಗಿಂತ ದುಡ್ಡು ಹೆಚ್ಚಾಗಿದೆ. ಆದುದರಿಂದ ಮನಸ್ಸಿಗೆ ಬಂದಂತೆ ವಡವೆ ವಸ್ತು ಮಾಡಿಸು ತ್ತಾಳೆ. ಆದರೆ ಅದರಲ್ಲಿ ಸ್ವಲ್ಪವೂ ನಾಜೂಕು ಇಲ್ಲದಿದುದರಿಂದ ಹೊಸ ಹೊಸದು ಧರಿಸಿದಷ್ಟೂ ಇವಳ ಕುರೂಪವೇ ಹೆಚ್ಚಾಗುತ್ತಿದೆ; ಮತ್ತೊ ಬ್ಬಳು, ಇವಳು ಎಂತಹ ಬಟ್ಟೆ ಹಾಕಿಕೊಂಡರೂ ಕೈಕಾಲು ಬೇರೆ ದಪ್ಪ ವಾಗಿ ಕಾಣುವುದಿಲ್ಲ; ಇವಳಿಗೆ ಗಂಡನನ್ನು ಸ್ವಾಧೀನದಲ್ಲಿಟ್ಟುಕೊಳ್ಳುವ ಬುದ್ಧಿ ಇಲ್ಲ. ಈ ಮತ್ತೊಬ್ಬಳು, ಇವಳು ಧರಿಸುವ ಉಡುಪು ತನ್ನ ಅಥವ ತನ್ನ ಗಂಡನ ಆನಂದಕ್ಕಾಗಿ ಅಲ್ಲ. ಇತರರಿಗೆ ತನ್ನ ಬಳಿ ಎಷ್ಟು ಬೆಲೆ ಯಾದ ಸೀರೆಗಳಿವೆ ಎಂಬುದನ್ನು ತೋರಿಸುವುದಕ್ಕಾಗಿ. ಒಬ್ಬಳು ಫೇಸ್ ಪೌಡರನ್ನು ಹಿಟ್ಟಿನಂತೆ ಬಳಿದುಕೊಳ್ಳುತ್ತಾಳೆ" ಹೀಗೆ ಮಲ್ಲಿಗೆಹಳ್ಳಿ ಸ್ತ್ರೀಯರು ಆ ಬಂದಿದ್ದವರನ್ನೆಲ್ಲಾ ಒರೆಗೆ ಹಚ್ಚಿ ಬೆಲೆ ಕಟ್ಟಿ ಇಟ್ಟಿದ್ದರು.

"ಮಂತ್ರಿಗಳ ಮಗಳು ಉಪನ್ಯಾಸ ಮಾಡುತ್ತಾಳಂತೆ. ಸಂಸಾರಕ್ಕೆ ಸಂಬಂಧಪಟ್ಟ ಧರ್ಮಕ್ಕೆ ಸಂಬಂಧಪಟ್ಟ ಸಂಗತಿಗಳನ್ನು ಹೇಳುತ್ತಾ ಳಂತೆ" ಎಂಬುದು ತಿಳಿದಾಗ ಕೆಲವರು "ಇವಳಿಗೆ ಮಕ್ಕಳೆಷ್ಟು" ಎಂದು ಕೇಳಿದರು. ಮಕ್ಕಳು ಇಲ್ಲ ಎಂದು ತಿಳಿದಾಗ "ಓ ಸಂಸಾರದ ಮೇಲೆ ಉಪನ್ಯಾಸ ಮಾಡುತ್ತಾಳೋ" ಎಂದುಕೊಂಡು ಒಂದು ತರಹವಾಗಿ ನಕ್ಕರು. ಆ ನಗುವನ್ನು ಮಾತ್ರ ನೋಡಿದ್ದರೆ ಮಂತ್ರಿಗಳ ಮಗಳು ಉಪನ್ಯಾಸಮಾಡುವುದಕ್ಕೆ ಬರುತ್ತಿರಲಿಲ್ಲವೆಂಬುದು ಮಾತ್ರವೇ ಅಲ್ಲ. ಮಲ್ಲಿಗೆಹಳ್ಳಿಯಲ್ಲಿರುವವರೆಗೆ ಮುಂದೆ ಮಾತನ್ನೂ ಸಹ ಆಡುತ್ತಿರಲಿಲ್ಲ. ಮಲ್ಲಿಗೆಹಳ್ಳಿಯ ಸ್ತ್ರೀಯರು ಬಂದುದು ಮಂತ್ರಿಯ ಮಗಳು ಸಂಸಾರದ ಮೇಲೂ ಧರ್ಮದ ಮೇಲೂ ಮಾಡುವ ಉಪನ್ಯಾಸ ಕೇಳುವುದಕ್ಕಲ್ಲ. ಯಾವ ಯಾವ ಸ್ತ್ರೀ, ಹೇಗೆ ಹೇಗೆ ಅಲಂಕಾರ ಮಾಡಿಕೊಂಡಿರುತ್ತಾಳೆ ಎಂಬುದನ್ನು ನೋಡಲು ಎಲ್ಲರೂ, ತಮ್ಮ ಅಲಂಕಾರಗಳನ್ನು ತೋರಿ ಸಲೂ ಕೆಲವರೂ ಬಂದಿದ್ದರು. ವೇದಾಂತನ ಹೆಂಡತಿ ಬರುತ್ತಾಳೆ ಎಂದು ತಿಳಿದಾಗ ಮಲ್ಲಿಗೆಹಳ್ಳಿ ಸ್ತ್ರೀಯರು ಅವಳ ಎದುರಿಗೆ ಈ ಉಪನ್ಯಾಸ

ಮಾಡುವ ಕನಕಲತೆ ಪ್ರಾಣಿ ಗರುಡನ ಎದುರಿನ ಹಾವಿನಂತೆ ಆಗುತ್ತೆ ಎಂದುಕೊಂಡರು.

ಸ್ಕೂಲಿನ ಹುಡುಗಿಯರು ಮೊದಲು ಒಂದು ಪ್ರಾರ್ಥನೆ ಮಾಡಿದರು. ಒಂದು ಹುಡುಗಿ "ವನಸುಮದೊಲೆನ್ನ" ಎಂಬುದನ್ನೂ ಮತ್ತೊಂದು ಹುಡುಗಿ "ಭಾರತಿಗೆ" ಎಂಬ ಹಾಡನ್ನೂ ಹಾಡಿದಳು. ಉಪನ್ಯಾಸಕಳಾದ ಕನಕಲತೆಯು "ಯಾವುದಾದರೂ ಹಿಂದಿ ಹಾಡಿ" ಎಂದರು. ನೆರೆದಿದ್ದ ಹಳ್ಳಿಯವರು ಒಬ್ಬರ ಮುಖವನ್ನೊಬ್ಬರು ನೋಡಿದರು. ರಾಮುವಿನ ಹೆಂಡತಿ ರಾಮು ಮನೆಯಲ್ಲಿ ಹೇಳುತ್ತಿದ್ದ "ಇದುವರೆಗೆ ಇಂಗ್ಲಿಷು ಜಾತಿಯ ಪ್ರಾಣಿ ನಮ್ಮಲ್ಲಿ ಇತ್ತು. ಈಗ ಹಿಂದೀ ಜಾತಿಯ ಪ್ರಾಣಿ ಹೆಚ್ಚಾಗಿದೆ. ಮುಖ್ಯವಾಗಿ ಸ್ತ್ರೀಯರು ಈ ಜಾತಿಗೆ ಸೇರಿದವರು" ಎಂಬ ಮಾತು ಜ್ಞಾಪಕಕ್ಕೆ ಬಂದಿತು. ಹುಡುಗಿಯರು ಹಿಂದಿ ಹಾಡು ತಮಗೆ ಬರುವುದಿಲ್ಲವೆಂದ ಕೂಡಲೆ ಉಪನ್ಯಾಸಕಳಾದ ಕನಕಲತೆಯು "ಹಿಂದಿ ರಾಷ್ಟ್ರಭಾಷೆ ಅದನ್ನು ನೀವು ಖಂಡಿತ ಕಲಿಯಬೇಕು" ಎಂದಳು. ಆಗ ಘಂಟಾವತಾರನ ಮಗಳು "ಈ ಹುಡುಗಿಯರು ಏನೋ ಹಾಡಿಬಿಟ್ಟವು. ನಮಗಂತೂ ತಿಳಿಯುವಂತೆ ಇಲ್ಲ. ಈಗ ಮಾಡಿದ ಪ್ರಾರ್ಥನೆಗಳಿಗೆ ದಯವಿಟ್ಟು ಸ್ವಲ್ಪ ಅರ್ಥ ಹೇಳಿ" ಎಂದಳು. ಜಾನಕಿಯು ದುರದುರನೆ ಘಂಟಾವತಾರನ ಮಗಳ ಕಡೆ ನೋಡಿದಳು. ರಘುರಾಮನ ಹೆಂಡತಿಯೂ ರಾಮುವಿನ ಹೆಂಡತಿಯೂ ವಿನೋದದ ಮುಖಭಾವವುಳ್ಳವರಾದರು. ಬೆಂಗಳೂರಿನಿಂದ ಬಂದಿದ್ದ ಉಳಿದ ಸ್ತ್ರೀಯರು ಇದೇನು ಮಧ್ಯೆ ಇವರ ಕಿರುಕುಳ ಎಂಬಂತೆ ಘಂಟಾವತಾರನ ಮಗಳನ್ನು ನೋಡಿದರು. ಕನಕಲತೆಗೆ ಬೆಂಗಳೂರಿನಲ್ಲಿ ಪದೇ ಪದೇ ಆ ಪ್ರಾರ್ಥನೆಗಳು ಕಿವಿಗೆ ಬಿದ್ದಿದ್ದವು. ಅದರಲ್ಲಿಯೂ ವನಸುಮ ಎಂಬ ಗೀತವನ್ನು ಕೇಳದ ಕನ್ನಡಿಗನೂ ಉಂಟೆ? ಭಾರತಿಗೆ ಎಂಬ ಗೀತವೂ ಕನಕಲತೆಯ ಕಿವಿಗೆ ಅನೇಕ ಬಾರಿ ಬಿದ್ದಿತ್ತು. ಆದರೆ "ಇದು ಕನ್ನಡ ನಾವು ಆಡುವ ಭಾಷೆ. ಇದು ನಮ್ಮ ಭಾಷೆ. ಇದರಲ್ಲಿ ಕಲಿಯತಕ್ಕುದ್ದು ಏನು" ಎಂದು ಅವಳು ಅದರ ಅರ್ಥದ ಕಡೆಗೆ ಲಕ್ಷ್ಯ ಕೊಟ್ಟಿರಲಿಲ್ಲ. ನಾವು ಹುಟ್ಟಿದಾಗಿನಿಂದ ಮಾತನಾಡುವ ಕನ್ನಡ ಭಾಷೆಯ ಪದ್ಯಕ್ಕೆ ಅರ್ಥ ಬೇರೆ ಇದೆ ಎಂಬುದೂ ಅವಳಿಗೆ ಹೊಳೆದಿರಲಿಲ್ಲ. ಪಾಪ ಈಗ ಈ

ಹಳ್ಳಿಯವರು ಅರ್ಥ ಕೇಳಿದ ಕೂಡಲೆ ಅವಳು "ಎಲ್ಲಿ ಮತ್ತೆ ಆ ಪದ್ಯ ಹೇಳು" ಎಂದು ಆ ಹುಡುಗಿಯ ಕೈಯ್ಯಲ್ಲಿ ಹಾಡಿಸಿದಳು. ಅರ್ಥ ಕಠಿಣ ವಲ್ಲ. ಪದ್ಯ ಸರಳ. ಆದರೂ ಕಾವ್ಯಗಳನ್ನು ಓದಿ ಅಭ್ಯಾಸವಿಲ್ಲದ ಮನ ಸ್ಸಿಗೆ ಹಿಡಿಯುವುದಿಲ್ಲ. ಕನಕಲತೆ ಏನೋ ಒಂದು ಅರ್ಥವನ್ನು ಹೇಳಿ ದಳು. ಭಾರತಿ ಎಂಬ ಪದ್ಯಕ್ಕೆ ಅರ್ಥ ಅವಳಿಗೆ ಹೊಳೆಯಲೇ ಇಲ್ಲ. "ಕನ್ನಡ ಪದ್ಯ, ಇದರ ಅರ್ಥವೇನು ಕಷ್ಟ ನಿಮಗೇ ಗೊತ್ತಾಗುತ್ತದೆ" ಎಂದು ಅದೂ ಇದೂ ಹೇಳಿದಳು. ಅನಂತರ ಬರೆದುಕೊಂಡು ಬಂದಿದ್ದ ತನ್ನ ಭಾಷಣವನ್ನು ಪ್ರಾರಂಭಿಸಿದಳು.

ಕನಕಲತೆಯ ಭಾಷಣ ಹಿಂದಿಯಲ್ಲ ಇತ್ತು. ದೇವಿಯೋಂ ಎಂದು ಪ್ರಾರಂಭಿಸಿ ಸುಮಾರು ಅರ್ಥ ಗಂಟೆಗಳ ಕಾಲ ಒಂದೇ ಸಮನಾಗಿ ಓದಿ ದಳು. ಭಾಷಣ ಮುಗಿದ ಮೇಲೆ ರಾಮುವಿನ ಹೆಂಡತಿ ಎದ್ದು "ನಾವೆಲ್ಲ ಕನ್ನಡ ದೇಶದವರು. ನಮಗೆ ಕನ್ನಡ ಭಾಷೆಯೇ ಬರುವುದಿಲ್ಲ. ನಮ್ಮ ಗಂಡಸರಿಗೇ ಕನ್ನಡಭಾಷೆ-ಸರಿಯಾಗಿ ಬರುವುದಿಲ್ಲ. ಆದುದರಿಂದ ಶ್ರೀಮತಿ ಕನಕಲತೆಯವರು ತಮ್ಮ ಭಾಷಣವನ್ನು ಹಿಂದಿಯಿಂದ ಕನ್ನಡಕ್ಕೆ ತರ್ಜುಮೆಮಾಡಿ ಹೇಳಬೇಕು. ಇಲ್ಲದಿದ್ದರೆ ನಮಗೊಬ್ಬರಿಗೂ ತಿಳಿಯು ವಂತೆ ಇಲ್ಲ. ಏನೋ ಒಂದು ಅರ್ಥ ಗಂಟೆ ಧ್ವನಿ ಮಾತ್ರ ಕೇಳಿಸಿದಂತೆ ಆಗುತ್ತೆ" ಎಂದಳು. ಕನಕಲತೆಗೆ ಒಳ್ಳೆಯ ಪೀಕಲಾಟಕ್ಕೆ ಬಂತು. ಅವಳು ತನ್ನ ಹಿಂದಿ ವಿದ್ಯೆಯನ್ನು ತೋರಿಸುವುದಕ್ಕಾಗಿಯೇ ಈ ಸಭೆ ಯನ್ನು ಏರ್ಪಡಿಸಿದ್ದಳು. ಅವಳಿಗೆ ತನ್ನ ಹಿಂದಿ ಗರ್ವವೂ ಹೆಚ್ಚಾಗಿ ದ್ದಿತು. ಆ ಹಿಂದಿಯಲ್ಲಿಯೂ ಅವಳಿಗೆ ಚೆನ್ನಾದ ಪರಿಶ್ರಮವಿರಲಿಲ್ಲ. ಪಟ್ಟಣಗಳಲ್ಲಿ ಸ್ತ್ರೀಯರಿಗೆ ಹಿಂದಿ ಕಲಿಯುವುದು ಒಂದು ಫ್ಯಾಶನ್. ಆದುದರಿಂದ ಅವಳೂ ಅದನ್ನು ಕಲಿತಿದ್ದಳು. ಮಲ್ಲಿಗೆಹಳ್ಳಿಗೆ ಬಂದ ದಿನ ಇಲ್ಲಿಯ ಮಂಕರನ್ನು ನೋಡಿ "ಇವರ ಎದುರಿಗೆ ಒಂದು ಉಪನ್ಯಾಸ ಬಿಡೋಣ. ಬೆಂಗಳೂರಿಗೆ ಹೋದನಂತರ ಹಿಂದಿ ಪ್ರೇಮಿಗಳು ಪ್ರಶಂಶಿ ಸುತ್ತಾರೆ" ಎಂದುಕೊಂಡಳು. ಮಲ್ಲಿಗೆಹಳ್ಳಿಯವರು ಅವಳನ್ನು ತಿಳಿ ದಂತೆ, ಹಳ್ಳಿಯವರನ್ನು ತಿಳಿಯಲು ಅವಳಿಗೆ ಸಾಧ್ಯವಾಗಲಿಲ್ಲ. ಅವಳು ತನ್ನಲ್ಲಿ ಇದ್ದ ಯಾವುದೋ ಪತ್ರಿಕೆ ನೋಡಿಕೊಂಡು ಒಂದು ಭಾಷಣ ಬರೆದುಕೊಂಡು ಬಂದಿದ್ದಳು. ಈಗ ಅದನ್ನು ಅಲ್ಲಿಯೇ ಕನ್ನಡಕ್ಕೆ ಮಾಡುವುದೆಂದರೆ ಸಾಮಾನ್ಯವೇ. ತನಗೆ ಮೊದಲೇ ಕನ್ನಡ ಬರುವುದಿಲ್ಲ.

ಕನಕಲತೆ "ನನಗೆ ಕನ್ನಡದಲ್ಲಿ ಮಾತನಾಡಿ ಅಭ್ಯಾಸವೇ ಇಲ್ಲ" ಎಂದಳು. ವಿಶಿಷ್ಟಾದ್ವೈತಧ್ವಜನ ತಂಗಿಯು "ನಿಮ್ಮ ಊರು ಯಾವುದು" ಎಂದಳು. ಕನಕಲತೆ "ಮೈಸೂರು ಡಿಸ್ಟ್ರಿಕ್ಟ್ ಒಂದು ಊರು" ಎಂದಳು. ನೆರೆದಿದ್ದವರಲ್ಲಿ ಅನೇಕರು "ಹೋ ಹಾಗಾದರೆ ನಮ್ಮ ಕನ್ನಡ ಮಾತನಾಡೋ ಜಾಗವೇಯು" ಎಂದರು. ಅನಂತರ "ನಿಮ್ಮ ಯಜಮಾನರ ಊರು ಯಾವುದು" ಎಂದು ಕೇಳಿ ತಿಳಿದು ಕೊಂಡು, "ಓ ನಿಮ್ಮದೂ ಕನ್ನಡ ಊರು. ನಿಮ್ಮ ಯಜಮಾನರದೂ ಕನ್ನಡ ಊರು. ನೀವಿರುವುದು ಕನ್ನಡ ಊರು. ಹಾಗಾದ ಮೇಲೆ ನಿಮಗೆ ಯಾಕೆ ಕನ್ನಡ ಬರೋದಿಲ್ಲ" ಎಂದರು. ಕನಕಲತೆ "ಬರೋ ದಕ್ಕೆ ಕನ್ನಡದಲ್ಲಿ ಏನಿದೆ. ಮಾತನಾಡೋದು ತಾನೇ. ನಮ್ಮ ಮನೆ ಮುಸುರೆ ತಿಕ್ಕುವವಳೂ ಕನ್ನಡಾನೆ ಮಾತನಾಡ್ತಾಳೆ" ಎಂದಳು. ರಾಮುವಿನ ಹೆಂಡತಿಯು "ನಿಮ್ಮ ಯಜಮಾನರಿಗೆ ಹಿಂದಿ ಬರುತ್ತ ದೆಯೇ" ಎಂದು ಕೇಳಿದಳು. ಕನಕಲತೆಯು ಇಲ್ಲ ಎಂದಳು. ಕನಕ ಲತೆ ಬಹಳ ಕಷ್ಟಪಟ್ಟು ಭಾಷಣವನ್ನು ಕನ್ನಡಕ್ಕೆ ತರ್ಜುಮೆಮಾಡತೊಡ ಗಿದಳು." ಅದರಲ್ಲಿ ಅವಳು ಮೊದಲು ಪ್ರಕಟಿಸಿದ್ದಂತೆ ಸಂಸಾರ, ಧರ್ಮ ಇವುಗಳ ವಿಚಾರ ಅಷ್ಟೇನೂ ಇರಲಿಲ್ಲ. ಭಾರತದ ನಲವತ್ತು ಕೋಟಿಯ ಪೈಕಿ ಇಪ್ಪತ್ತುಮೂರು ಕೋಟಿ ಈಗಾಗಲೇ ಹಿಂದಿ ಮಾತನಾಡುತ್ತಿ ದ್ದಾರೆ. ಇದು ಅವಶ್ಯಕವಾದ ರಾಷ್ಟ್ರಭಾಷೆ. ಇದನ್ನು ಕಲಿಯದವನು ಭಾರತೀಯನಾಗಲಾರ. ಮುಖ್ಯವಾಗಿ ಸ್ತ್ರೀಯರು ಇದನ್ನು ಕಲಿಯ ಬೇಕು" ಅಲ್ಲಿಂದ ಮುಂದೆ ಕನಕಲತೆಗೆ ಪ್ರಶ್ನೆಗಳ ಸುರಿಮಳೆ ಪ್ರಾರಂಭ ವಾಯಿತು. ಒಬ್ಬಳು "ನಮ್ಮಲ್ಲಿ ಒಂದೊಂದು ಊರಿನಲ್ಲಿರುವ ಮಹಿಳೆ ಯರಿಗೆ ಪೂರ್ತಾ ಒಬ್ಬರಿಗೂ ಕನ್ನಡ ಓದುವುದಕ್ಕೆ ಬರೆಯುವುದಕ್ಕೆ ಬರು ವುದಿಲ್ಲವಲ್ಲ. ಮೊದಲು ಅದನ್ನು ಕಲಿಸಬೇಡವೆ?" ಎಂದಳು. ಮತ್ತೊ ಬ್ಬಳು "ಹಿಂದಿ ನಮಗೆ ಯಾಕೆ ಬೇಕು?" ಎಂದಳು. ಕನಕಲತೆಯು "ಭಾರತದ ವಿಚಾರ ತಿಳಿಯುವುದಕ್ಕೆ" ಎಂದಳು. ಪ್ರಶ್ನೆ ಹಾಕಿದವಳು "ಭಾರತದ ವಿಚಾರ ತಿಳಿಯುವುದಕ್ಕೆ ಎಲ್ಲರೂ ಹಿಂದಿ ಯಾಕೆ ಕಲಿಯ ಬೇಕು. ಇಂಗ್ಲೆಂಡಿನ ವಿಚಾರ ತಿಳಿಯುವುದಕ್ಕೆ ಎಲ್ಲರೂ ಇಂಗ್ಲಿಷ್ ಕಲಿತೇ ತೀರಬೇಕೆ. ಅವಶ್ಯಕವಾದ ನಾಲ್ಕಾರು ಜನ ಕಲಿತು ನಮ್ಮ

ಭಾಷೆಯ ಮೂಲಕ ಹೇಳಿಬಿಟ್ಟರೆ ಸಾಕು. ಇದಕ್ಕಾಗಿ ದೇಶವೆಲ್ಲಾ ಇನ್ನೊಂದು ಹೊಸಭಾಷೆ ಕಲಿಯಲು ದುಡಿಯಬೇಕೆ" ಎಂದಳು. ಕನಕ ಲತೆಯು ಬೆಂಗಳೂರು ಹಿಂದಿ ಪ್ರಚಾರಕರು ಹೇಳಿದ್ದ "ಉತ್ತರ ದೇಶಕ್ಕೆ ಹೋದರೆ ನಮಗೆ ಈ ಭಾಷೆ ಬೇಡವೆ? ಉತ್ತರ ದೇಶದೊಂದಿಗೆ ವ್ಯಾಪಾರ ಸಂಬಂಧ ಬೆಳೆಸಬೇಕಾದರೆ ಈ ಭಾಷೆ ಬೇಡವೆ?" ಎಂದಳು. ರಾಮುವಿನ ಹೆಂಡತಿಯು "ಬೇಡವೆ? ನಮ್ಮಲ್ಲಿ ಉತ್ತರದೇಶಕ್ಕೆ ನಿತ್ಯಾ ಸಾವಿರಾರು ಜನ ಹೋಗುತ್ತಾರೆ! ಅಲ್ಲ ಅಮ್ಮಾ ನಮ್ಮ ಊರಿನಿಂದ ಆಚೆ ಹೋಗದ ೫೦-೬೦ ವರುಷದ ಮುದುಕಿಯರು ಇಲ್ಲಿ ಇದ್ದಾರೆ. ಬರಿ ಹೆಂಗಸರೇ ಅಲ್ಲ. ಗಂಡಸರೂ ಇದ್ದಾರೆ. ನಮ್ಮ ಹೋಬಳಿಯಿಂದ ಆಚೆಗೆ ಅವರಿಗೆ ಸಮಾಚಾರ ತಿಳಿಯದು. ಇವರೆಲ್ಲ ಉತ್ತರ ದೇಶಕ್ಕೆ ಹೋಗುತ್ತಾರೆ ಅಲ್ಲವೆ? ಇನ್ನು ವ್ಯಾಪಾರ. ಸದ್ಯ ನಮ್ಮಲ್ಲಿ ಸಂತೆಯಲ್ಲಿ ಹೋಗಿ ವ್ಯಾಪಾರ ಮಾಡೋದಕ್ಕೆ ೩ ಆಣೆ ಒದಗಿಸಿಕೊಳ್ಳುವುದು ಕಷ್ಟವಾಗಿದೆ. ಉಪ್ಪು ಮೆಣಸಿನಕಾಯಿನ ಒಂದಾಣೆ ಅರ್ಧಾಣೆ ವ್ಯಾಪಾರ ಕಲಿತುಕೊಂಡರೆ ಸಾಕು. ಅದೇ ಬರೋದಿಲ್ಲ. ಹಿಂದಿಯವರೊಂದಿಗೆ ವ್ಯಾಪಾರ ಸಂಬಂಧ ಇಟ್ಟುಕೊಂಡಿರುವ ಪಟ್ಟಣವಾಸದ ನಾಲ್ಕು ಜನ ಕಲಿಯಲಿ. ಈಗ ನೀವೇ ಹಿಂದಿಯಲ್ಲಿ ದೇವಿಯೋಂ, ಚಾಯೀಯೆ ಎಂದೆಲ್ಲಾ ಹೇಳುತ್ತಿದ್ದೀರಿ. ನೀವು ಯಾವಾಗಲಾದರೂ ಉತ್ತರ ದೇಶಕ್ಕೆ ಹೋದಿರಾ? ಕೈಯ್ಯಲ್ಲಿ ಸಾವಿರಾರು ರುಪಾಯಿ ಓಡಿಯಾಡಿಸುತ್ತಿರುವ ನೀವೇ ಉತ್ತರ ದೇಶಕ್ಕೆ ಯಾವಾಗಲೂ ಹೋಗದ ಮೇಲೆ, ಇನ್ನು ಒಡೆದ ಪಾತ್ರೆಗೆ ಬೆಸಗೆ ಹಾಕಿಸಲು ಕೈಲಿ ಕಾಸಿಲ್ಲದ ನಾವು ಹೋಗುತ್ತೇವೆಯೆ? ನಮ್ಮ ಗಂಡಸರಿಗೇ ಇದು ಬೇಕಿಲ್ಲ. ಅವರಲ್ಲಿತಾನೇ ಎಷ್ಟು ಜನ ನಮ್ಮ ದೇಶಬಿಟ್ಟು ಹೋಗುತ್ತಾರೆ. ಲಕ್ಷಕ್ಕೆ ಒಬ್ಬರೂ ಇಲ್ಲವೆಲ್ಲ. ಅಂತಹವರು ಕಲಿತುಕೊಳ್ಳಲಿ. ಈಗ ನೋಡಿ, ನೀವು ಆ ಭಾಷೆ ಕಲಿತರೂ ನಮ್ಮವರ ಸೇವೆಗೇ ಇಲ್ಲಿ ಅದನ್ನು ಉಪಯೋಗಿಸಬೇಕಾಯಿತು. ಅದರ ಬದಲು ನೀವು ಕನ್ನಡಾನೇ ಚೆನ್ನಾಗಿ ಕಲಿತಿದ್ದರೆ ನಮಗೆ ಇನ್ನೂ ಎಷ್ಟು ಹೆಚ್ಚು ಸೇವೆ ಆಗುತ್ತಿದ್ದಿತು."

ಕನಕಲತೆ ದಿಗ್ಭ್ರಾಂತಳಾಗುವುದು ಇರಲಿ. ಬೆಂಗಳೂರಿನಿಂದ ಬಂದಿದ್ದ ಉಳಿದ ಸ್ತ್ರೀಯರೂ ದಿಗ್ಭ್ರಾಂತರಾದರು. ಅವರಲ್ಲಿ ಕೆಲವರಿಗೆ

ಸಂತೋಷವೂ ಆಯಿತು. ಕನಕಲತೆ ತನ್ನ ಹಿಂದಿ ಮಹಿಮೆ ಅವರ ಎದು ರಿಗೆ ಬಹಳ ಮೆರೆಯಿಸುತ್ತಿದ್ದಳು. ಒಂದು ಸಲ "ಹಿಂದಿಯಲ್ಲಿ ಗಂಡನಿಗೆ ಕಾಗದ ಬರೆದೆ. ಅವರಿಗೆ ಸಿಟ್ಟು ಬಂತು. ಅವರು ಓದದೆ ಕಾಗದ ಹರಿದುಹಾಕಿದರು. ನಿನಗೆ ಕನ್ನಡ ಬರದುದರಿಂದ ಹಿಂದಿಯಲ್ಲಿ ಬರೆಯು ತ್ತಿಯ ಎಂದು ರೇಗಿದರು. ಅವರಿಗೂ ಹಿಂದಿ ಕಲಿಸುತ್ತೇನೆ. ಬಿಡುವು ದಿಲ್ಲ" ಎಂದು ಜಂಭ ಹೊಡೆಯುತ್ತಿದ್ದ ಇವಳ ಉಸಿರನ್ನು ಈ ಹಳ್ಳಿಯ ಜನ ಹೀಗೆ ಏನೂ ತಿಳಿಯದವರಂತೆ ನಿಲ್ಲಿಸಿಬಿಟ್ಟುದು ಅವರಿಗೆ ಬಹು ಆಶ್ಚರ್ಯವಾಯಿತು. ಕನಕಲತೆ ಸ್ವಲ್ಪ ಮೆತ್ತಗಾದುದನ್ನು ನೋಡಿ ರಾಮು ವಿನ ಹೆಂಡತಿ ಮುಂದುವರಿಸಿದಳು. "ಅಮ್ಮಾ ಈಗ ನಿಮ್ಮ ಬೆಂಗಳೂರಿ ನಲ್ಲಿ ಬಹಳ ಸ್ತ್ರೀಯರು ಹಿಂದಿ ಕಲಿಯುತ್ತಿದ್ದಾರೆಯಲ್ಲವೆ?" ಎಂದಳು. ಕನಕಲತೆಯು ಹೂ ಎಂದಳು. "ಅನಂತರ ಏನು ಮಾಡುತ್ತಾರೆ" ಎಂದಳು, ರಾಮುವಿನ ಹೆಂಡತಿ. ಬೆಂಗಳೂರಿನ ಮತ್ತೊಬ್ಬ ಸ್ವಲ್ಪ ವಯ ಸ್ಕಳಾದ ಸ್ತ್ರೀಯು "ಮಾಡುವುದೇನು ಮರೆಯುತ್ತಾರೆ" ಎಂದರು. ರಾಮುವಿನ ಹೆಂಡತಿಯು ಮತ್ತೆ ಕನಕಲತೆಗೆ "ಅವರಿಗೆಲ್ಲಾ ಕನ್ನಡ ಚೆನ್ನಾಗಿ ಬರುತ್ತದೆಯೇ" ಎಂದಳು. ಕನಕಲತೆ "ಕನ್ನಡ ಭಾಷೆ. ಬರುವುದಕ್ಕೆ ಅದರಲ್ಲಿ ಇರುವುದೇನು. ಹೂ ಅವರಿಗೂ ಕನ್ನಡದಲ್ಲಿ ಮಾತ ನಾಡುವುದಕ್ಕೆ ಬರುತ್ತೆ" ಎಂದಳು. ರಾಮುವಿನ ಹೆಂಡತಿ ನಿಷ್ಕರುಣೆ ಯಿಂದ "ನಿಮ್ಮ ಜತೆಯಲ್ಲಿ ಹಿಂದಿ ಓದುವವರು ಕನ್ನಡ ಪುಸ್ತಕಗಳನ್ನು ಓದುತ್ತಾರೆಯೇ" ಎಂದಳು. ಕನಕಲತೆಯು ಇಲ್ಲ ಎಂದಳು. ರಾಮು ವಿನ ಹೆಂಡತಿ "ಕನ್ನಡ ಭಾಷೆಯ ಸಭೆಗಳು ಪರಿಷತ್ತು ಇಂಥವುಗಳಿಗೆ ಹೋಗುತ್ತಾರೆಯೇ" ಎಂದಳು. ಕನಕಲತೆಯು ಇಲ್ಲ ಎಂದಳು. ರಾಮುವಿನ ಹೆಂಡತಿ ಹಿಂದಿ ಸಭೆಗಳಿಗೆ ಹೋಗುತ್ತಾರೆಯೋ ಎಂದಳು. ಕನಕಲತೆ ಸಂತೋಷದಿಂದ "ಹೊ, ಅಲ್ಲೆಲ್ಲಾ ನಮ್ಮ ಮಹಿಳೆಯರದೇ ಜೋರು" ಎಂದಳು.

ವೇದಾಂತನ ಹೆಂಡತಿಯು ಕನಕಲತೆಗೆ "ಅಮ್ಮಾ ಸಿಟ್ಟುಮಾಡಿ ಕೊಳ್ಳಬೇಡಿ. ನಿಮ್ಮ ಈ ಗರಡಿಯಿಂದ. ನಿಮಗೂ ಪ್ರಯೋಜನವಿಲ್ಲ. ನಮಗೂ ಪ್ರಯೋಜನವಿಲ್ಲ. ಈಗ ನೋಡಿ ನೀವು ಇಲ್ಲಿ ಬಂದಿದ್ದೀರಿ. ನಮಗೆ ಒಂದು ನಾಲ್ಕು ಅಕ್ಷರ ಕನ್ನಡ ನೀವು ಕಲಿಸುವುದಾದರೆ ನಿಮ್ಮ

ಕಾಲಿಗೆಬಿದ್ದು ಪೂಜಿಸುತ್ತೇವೆ. ಆದರೆ ನೀವು ಅದು ಬಿಟ್ಟು "ವಳ್ಳಿಕ್ಕಾರ" ಹೆಂಗಸರಂತೆ ಆಯಿಯೆ ಜಾಯಿಯೆ ಬೈಠೀಯೆ ಎಂದುಕೊಂಡು ಬರುತ್ತೀರಿ. ಹುಟ್ಟು ಕನ್ನಡಿಗರಾಗಿರುವವರಿಗೇ ಕನ್ನಡ ಕಲಿಯುವುದು ಕಷ್ಟವಾಗಿರುವಾಗ, ಬೇರೆ ಭಾಷೆ ಎಷ್ಟು ವರುಷ ಕಲಿತರೆ ತಾನೆ ನಿಮಗೆ ಹತ್ತುತ್ತೆ. ಏನೋ ನೀವೂ ಶಖೆಗೆ ಬೀಸಣಿಗೆ ಹಿಡಿದುಕೊಳ್ಳುವಂತೆ ಹಿಂದಿ ಪುಸ್ತಕ ಹಿಡಿದುಕೊಂಡು ಓಡಾಡಬಹುದು. ಗಂಡಸರ ಮಾತು ಇರಲಿ. ಅವರಿಗೆ ಹತ್ತಿರುವ ಈ ಹುಚ್ಚು ಬಿಡುಗಡೆಯಾಗುತ್ತೆ. ಸಂಸಾರದಲ್ಲಿದ್ದುಕೊಂಡು ಕನ್ನಡನಾಡಿನ ಪ್ರಜೆಯಾಗಿ ಇಲ್ಲಿ ಸರ್ಕಾರಿ ನೌಕರನೋ ಮೇಷ್ಟರೋ ಜಮೀನ್‌ದಾರನೋ ಕಂಟ್ರಾಕ್ಟರೋ ಆಗಿ ನಮ್ಮ ಜನಗಳೊಂದಿಗೆ ವ್ಯವಹರಿಸುವವನಿಗೆ ವಿದ್ಯಾರ್ಥಿ ದೆಸೆಯಿಂದ ಈ ಹೊಸಭಾಷೆ ಯಾಕೆ? ಆ ಭಾಷೆಯಲ್ಲಿರುವ ರತ್ನಗಳನ್ನು ನಮಗೆ ಕೊಡಲು ೧೦-೨೦ ಜನ ಸಿದ್ಧವಾದರೆ ಸಾಕು. ಲೋಕಕ್ಕೆಲ್ಲಾ ಈ ಗೆರಡಿ ಯಾಕೆ? ನಮ್ಮ ಮಹಿಳೆಯರು ಚೆನ್ನಾಗಿ ಕನ್ನಡ ಕಲಿತು ನಿಮ್ಮಷ್ಟು ಅದೃಷ್ಟಶಾಲಿಗಳಲ್ಲದವರಿಗೆ ಕನ್ನಡಭಾಷೆ ಕಲಿಸಲಿ. ಬೆಂಗಳೂರು ಮೈಸೂರುಗಳಲ್ಲಿ ಸಾವಿರಾರು ಹೆಂಗಸರು ಆಪ್ ಜಾಯಿಯೆ, ದೇವಿಯೋಂ ಕಲಿಯುತ್ತಾ ಕಾಲ ಹಾಕುತ್ತಾರೆ. ನಾಲ್ಕು ವರುಷ ಸಂಸಾರದಲ್ಲಿ ಇದ್ದ ಮೇಲೆ ಇವೊಂದೂ ಉಳಿಯುವುದಿಲ್ಲ. ಉಳಿಯುವುದು ಕನ್ನಡ ಒಂದೇ ಎಂದು ಎಲ್ಲರಿಗೂ ಗೊತ್ತಾಗುತ್ತದೆ. ಹೀಗಿರುವಾಗ ಒಬ್ಬೊಬ್ಬ ಮಹಿಳೆಯೂ ಒಬ್ಬೊಬ್ಬರು ಇಬ್ಬಿಬ್ಬರು ನಾಲ್ಕು ನಾಲ್ಕು ಜನ ಮಹಿಳೆಯರಿಗಾದರೂ ಕನ್ನಡ ಕಲಿಸಿದರೆ ಆ ಮಹಿಳೆಯ ಸಂಸಾರಕ್ಕೆ ಎಂತಹ ಬೆಳಕು ಬರುವುದು. ಇವತ್ತು ನೀವು "ದೇವಿಯೋಂ" ಎಂದುಕೊಂಡು ಯಾರಿಗೂ ತಿಳಿಯದೆ ಇರುವ ಏನೋ ಒಂದು ಉಪನ್ಯಾಸ ಮಾಡುವ ಬದಲು ಕನ್ನಡದಲ್ಲಿ ಯಾವುದಾದರೂ ವಿಚಾರವನ್ನು ತಿಳಿಯಾಗಿ ತಿಳಿಸಿದ್ದರೆ ಎಷ್ಟು ಉಪಕಾರವಾಗುತ್ತಿದ್ದಿತು" ಎಂದಳು. ಅನಂತರ "ನಮ್ಮ ಅಖಿಲ ಭಾರತಕ್ಕೆ ಒಂದು ಭಾಷೆ ಬೇಕು. ಅದು ಎಂದಿದ್ದರೂ ಹಿಂದಿಯೇ. ಆದರೆ ಅದು ಬೇಕಾದುದು ಜನಕ್ಕೇ ಹೊರತು ದನಗಳಿಗಲ್ಲ. ನಮ್ಮ ಜನ ತಮ್ಮ ತಾಯಿನುಡಿಯನ್ನೇ ಕಲಿಯದ ದನಗಳಾಗಿದ್ದಾರೆ. ಅವರನ್ನು ಮೊದಲು ಜನರನ್ನು ಮಾಡಿದ ನಂತರ ಅವರಿಗೆ ಬೇಕಾದ ಭಾಷೆ ಯಾವುದು ಎಂಬುದನ್ನು ಯೋಚಿಸಬಹುದು" ಎಂದಳು.

ಕನಕಲತೆ ಸುಸ್ತಾದಳು. ಮನಸ್ಸಿನಲ್ಲಿ "ಸಾಕು. ಬಿಡಿ ಬಿಡಿ. ದಮ್ಮಯ್ಯ, ಅಳುಬರುವಂತೆ ಆಗುತ್ತೆ" ಎಂದುಕೊಂಡಳು. ಒಂದೆರಡು ಜವಾಬು ಕೊಡಬೇಕೆಂದು ಯೋಚಿಸಿದಾಗ ಬಾಯಿನಲ್ಲಿ ಮಾತೇ ಹೊರಡ ಲಿಲ್ಲ. "ಈ ಎದುರಿಗೆ ಮಾತನಾಡುತ್ತಿರುವ ಹುಡುಗಿಯರು ನಿಜವಾ ಗಿಯೂ ವಿದ್ಯಾವತಿಯರೇ ಇರಬಹುದೇ. ಏನು ಗಂಡಸರಿಗಿಂತ ಜೋರಾಗಿ ಮಾತನಾಡುತ್ತಾರೆಲ್ಲ. ನನ್ನ ಸಮಾನ ಯಾರೂ ಇಲ್ಲ ಎನ್ನುತ್ತಿದ್ದೆ. ಹಿಂದಿಯ ಬದಲು ಚೆನ್ನಾಗಿ ಕನ್ನಡ ಕಲಿತಿದ್ದರೆ ಇವರನ್ನೆಲ್ಲಾ ಬಡಿಯು ತ್ತಿದ್ದೆ. ಆದರೆ ಹಾಳು ಬಾಯಿಂದ ಮಾತೇ ಹೊರಡುವುದಿಲ್ಲ" ಎಂದು ಕೊಂಡಳು. ಸಭೆಯು ಮುಕ್ತಾಯವಾಗುವಾಗ ವೇದಾಂತನ ಹೆಂಡತಿ ಕನಕಲತೆಯನ್ನು ಕುರಿತು ಬಹಳ ಮೃದುವಾದ ಪ್ರೀತಿಯ ಮಾತುಗಳನ್ನು ಆಡಿದಳು. "ಇಂತಹ ವಿದ್ಯಾವಂತ ಸ್ತ್ರೀಯರು ನಮ್ಮ ಮುಂದೆ ಬಂದುದು ನಮ್ಮ ಪುಣ್ಯ" ವೆಂದಳು. ತಟ್ಟೆಯಿಂದ ಹೂವನ್ನು ತೆಗೆದು ಕೊಂಡು ಕನಕಲತೆಯ ತಲೆಗೆ ಬಹಳ ಅಲಂಕಾರವಾಗಿ ಮುಡಿಸಿದಳು. ನೆತ್ತಿಗೆ ಗುಲಾಬಿ ಕುಂಕುಮ ಇಟ್ಟಳು. ಅವಳ ಪ್ರತಿಯೊಂದು ಕಾರ್ಯ ದಲ್ಲಿಯೂ ಪ್ರೇಮ, ಆದರ ಪೂರ್ಣವಾಗಿತ್ತು. ಕನಕಲತೆಗೆ ಕಣ್ಣಲ್ಲಿ ನೀರು ತುಂಬಿತು. ಅವಳು ತನ್ನ ದೊಡ್ಡಸ್ತಿಕೆಯನ್ನು ಮರೆತು ವೇದಾಂ ತನ ಹೆಂಡತಿಯ ಕಾಲುಗಳಲ್ಲಿ ಕುಸಿದು ಬಿದ್ದಳು. ಉಪನ್ಯಾಸ; ಹಿಂದಿ; ಬೆಂಗಳೂರಿನಿಂದ ಬಂದವರ ಭಾಷಣ ಎಂಬ ಕೃತಕಭಾವಗಳೆಲ್ಲಾ ಒಂದೇ ಏಟಿಗೆ ಮರೆಯಾಗಿ ವಾತಾವರಣದಲ್ಲಿದ್ದ ಒಂದು ಬಿಸಿಯೂ ಬಿಗಿತವೂ ಕಡಿಮೆಯಾಗಿ ಸ್ತ್ರೀಯರು ಸ್ತ್ರೀಯರನ್ನು ನೋಡುವಂತೆ ಒಬ್ಬರನ್ನು ಒಬ್ಬರು ಸ್ವಾಭಾವಿಕ ರೀತಿಯಲ್ಲಿ ಪರಿಗಣಿಸಿದರು. ಸಂಸಾರ ಧರ್ಮದ ಮೇಲೆ ಕನಕಲತೆ ಪ್ರಾರಂಭಿಸಿದ್ದ ಉಪನ್ಯಾಸ ವೇದಾಂತನ ಹೆಂಡತಿಗೆ ಅವಳು ಹೇಳಿದ ಮತ್ತೆ ನಿಮ್ಮಲ್ಲಿ ಬರುತ್ತೇನೆ ಎಂಬ ಮಾತಿನೊಂದಿಗೆ ಮುಕ್ತಾಯವಾಯಿತು.

ಕನಕಲತೆ ಬೆಂಗಳೂರಿನಿಂದ ಬರುವಾಗಲೇ ಹಳ್ಳಿಯಲ್ಲಿ ಹಿಂದಿ ಪ್ರಚಾರ ಆಗಲಿ ಎಂದು ಹದಿನೈದು ಇಪ್ಪತ್ತು ರುಪಾಯಿ ಕೊಟ್ಟು, ಮಲ್ಲಿಗೆಹಳ್ಳಿ ಗ್ರಾಮದ ಮಹಿಳೆಯರಿಗೆ ಓದುವುದಕ್ಕೆ ಸಹ ತಿಳಿಯದ ಕೆಲವು ಹಿಂದೀ ಗ್ರಂಥಗಳನ್ನು ತಂದಿದ್ದಳು. ಸಭೆ ಮುಗಿದ ಮೇಲೆ

ಮೊದಲೇ ಅವಳು ಹೇಳಿದ್ದಂತೆ ಅನಂತುವಿನ ಮನೆ ಆಳು ಪುಸ್ತಕಗಳ ಹೊರೆ ತಂದು ದೇವಸ್ಥಾನದ ಮುಂದೆ ಇಟ್ಟ. ಮನೆಗೆ ಹೊರಡುವುದಕ್ಕೆ ಮುಂಚೆ ಕನಕಲತೆ ಸಭೆಯನ್ನು ಕುರಿತು “ ಅಮ್ಮಾ ಹೇಗಾದರೂ ಆಗಲಿ. ನಿಮ್ಮ ಜ್ಞಾನ ಭಂಡಾರಕ್ಕೆ ಸಹಾಯಕವಾಗಲಿ ಎಂದು ಈ ಇಪ್ಪತ್ತು ಹಿಂದಿ ಪುಸ್ತಕಗಳನ್ನು ತಂದಿದ್ದೇನೆ. ಯಾರಾದರೂ ಒಬ್ಬರು ಇಟ್ಟು ಕೊಂಡು ಎಲ್ಲರಿಗೂ ಕೊಟ್ಟು ಓದಿಸಿ” ಎಂದಳು.

ಪುಸ್ತಕ ಎಂದಕೂಡಲೇ ಮಹಿಳೆಯರಿಗೆಲ್ಲಾ ಉತ್ಸಾಹವಾಯಿತು. ಅವರು ಒಂದೊಂದು ಗಂಟೆಗೇ ಒಂದೊಂದು ಪುಸ್ತಕ ಓದಿಬಿಡುತ್ತಾರೆ. ಅವರು ಓದುವಷ್ಟು ಪುಸ್ತಕ ಕೊಟ್ಟು ಪೂರೈಸುವುದು ಕಷ್ಟ. ಆದರೆ ಪುಸ್ತಕಗಳು ಯಾವಾಗ ಹಿಂದಿ ಎಂದು ತಿಳಿಯಿತೋ ಅವರಿಗೆ ನಿರುತ್ಸಾಹ ವುಂಟಾಯಿತು. ಕೆಲವರಿಗಂತೂ ಕೋಪವೇ ಬಂತು. ಮಾಂಸಾಹಾರಿ ಗಳಲ್ಲದವರ ಮುಂದೆ ಮಾಂಸಾಹಾರವನ್ನು ಇಟ್ಟಂತೆ ಆಯಿತು. ಅವರಲ್ಲಿ ಪ್ರತಿಯೊಬ್ಬರೂ ತಲಾತಟ್ಟಿಗೆ ಸಣ್ಣ ಕತೆಗಳು, ಪಂಪಾಯಾತ್ರೆ ಅಂತರಂಗ, ರಾಮಾಚಾರಿ ನೆನಪು, ನಿರಾಭರಣ ಸುಂದರಿ,, ಸುಬ್ಬಮ್ಮ ಹೆಗ್ಗಡಿತಿ, ಕೋಟಿ ಚೆನ್ನಯ್ಯ ಸುಳವು ಹೊಳವು ಇಜ್ಜೋಡು, ಮುರಳಿಮುಣ್ಣಿಗೆ, ಸುಬ್ಬಣ್ಣ, ಮಂಕುತಿಮ್ಮ ವೈಯ್ಯಾರಿ, ಕಂಬಳಿ ಸೇವೆ, ಸುಂದರಿ ಸಂಧ್ಯಾರಾಗ ಅಯ್ಯೋ ಒಂದೂ ಕನ್ನಡ ಪುಸ್ತಕ ನಿಮಗೆ ಸಿಕ್ಕಲಿಲ್ಲವೆ? ಈ ಹಿಂದಿ ಓದು ವವರು 'ಯಾರು? ನಮ್ಮ ಮನೆಯಲ್ಲಿ ಹಳೆಯ ಕಾಲದ ಇಂಗ್ಲಿಷ್ ಪುಸ್ತಕ ಬಿದ್ದಿರುವಂತೆ ಇದೂ ಬಿದ್ದಿರುತ್ತದೆ. ಸುಮ್ಮನೆ ಯಾಕೆ. ನೀವೇ ವಾಪಸು ತೆಗೆದುಕೊಂಡು ಹೋಗಿ ಎಂದರು. ಕನಕಲತೆ ಪುಸ್ತಕಗಳನ್ನು ಮತ್ತೆ ಮನೆಗೆ ಕಳುಹಿಸಿದಳು.

---

## ೨೫. ಸೀತಾರಾಮು ಬಾವಿ ಆಳ ನೋಡಿದುದು

---

ನಾರಾಯಣನ ಸ್ನೇಹಿತ ಹೇಳಿದ್ದಂತೆ ಬ್ರಹ್ಮಚಾರಿಗಳನ್ನು ಗುಂಡಿಗೆ ಕೆಡಗಲು ಗೃಹಸ್ತರೆಲ್ಲಾ ಸೇರಿ ಒಟ್ಟಾಗಿ ಪಿತೂರಿ ನಡೆಸುತ್ತಾರೆ. ಇದು ಒಂದುಸಲ ಗುಂಡಿಗೆ ಬಿದ್ದಮೇಲೆ ತನ್ನ ಸಂಕೋಲೆಯನ್ನೇ ಸಂತೋಷ ದಿಂದ ಅಪ್ಪಿಕೊಳ್ಳುವುದೆಂದು ಅವರಿಗೆಲ್ಲಾ ಅನುಭವದಿಂದ ಗೊತ್ತು.

ನಾರಾಯಣ ಮದುವೆಯಾದಾಗ ಹೆಂಡತಿಯಮೇಲೆ ಹಾರಾಡಿದುದು ಎಷ್ಟೋ ಅಷ್ಟೇ ಹೊರತು ಅಲ್ಲಿಂದ ಈಚೆಗೆ ನಾರಾಯಿಣನೇ ಗಂಡನೋ ಅಥವ ಅವನೇ ಹೆಂಡತಿಯೋ ಎಂದು ಅನುಮಾನವಾಗುವ ರೀತಿಯಲ್ಲಿ ನಡೆದುಕೊಳ್ಳುತ್ತಿದ್ದಾನೆ. ಆ ವರುಷ ದೀಪಾವಳಿಗೆ ಸೀತಾರಾಮು ನಾರಾಯಣ ಇಬ್ಬರೂ ಬೆಂಗಳೂರಿನಿಂದ ಬಂದರು. ನಾರಾಯಣ ತನ್ನ ಮನೆಯಲ್ಲಿಯೇ ಉಳಿದುಕೊಂಡ. ಸೀತಾರಾಮು ಅನಂತುವಿನ ಮನೆಯಲ್ಲಿ ಉಳಿದುಕೊಂಡ. ಬಂದ ಮಾರನೆಯ ದಿನ ಸೀತಾರಾಮು ಅನಂತುವಿನ ಮನೆಯ ಹಿತ್ತಲನ್ನು ಪರೀಕ್ಷಿಸುತ್ತಾ ಬಾವಿಯ ಕಟ್ಟೆಯ ಬಳಿ ಬಂದಾಗ ಅವನು ಅಲ್ಲಿ ಇರುವುದು ತಿಳಿದೋ ತಿಳಿಯದೆಯೋ ವೈದೇಹಿ ಅಲ್ಲಿಗೆ ಬಂದು ಭಾವಿಗೆ ಬೆಳ್ಳಿಯ ಚೊಂಬನ್ನು ಕಟ್ಟಿ ನೀರನ್ನು ಮೇಲಕ್ಕೆ ಎಳೆದಳು. ಸೀತಾರಾಮು ಭಾವಿಯ ಮತ್ತೊಂದು ಕಡೆ ನಿಂತಿದ್ದವನು ಆ ಚೊಂಬಿಗೆ ಕೈಹಾಕಿದ; ಈ ಗದ್ದಲದಲ್ಲಿ ಚೊಂಬು ಇಬ್ಬರ ಕೈಯಿಂದಲೂ ಜಾರಿ ಭಾವಿಗೆ ಬಿದ್ದುಹೋಯಿತು. ಆ ವೇಳೆಗೆ, ವೈದೇಹಿಯ ಹತ್ತಿರ ಇರುವ ಬೆಳ್ಳಿಯ ಚೊಂಬನ್ನು ತೆಗೆದುಕೊಂಡು ಭಾವಿಯ ನೀರು ಸೇದಿಕೊಂಡು ಕೈಕಾಲು ತೊಳೆದುಕೊಳ್ಳಬೇಕೆಂದು ಅಲ್ಲಿಗೆ ಅನಂತು ಬಂದ. ಕರುಗಳನ್ನು ಕಟ್ಟಿಹಾಕಲು ಮತ್ತೊಂದು ಕಡೆಯಿಂದ ಸುದರ್ಶನನೂ ಬಂದ. ಬೆಳ್ಳಿಯ ಚೊಂಬು ಬಾವಿಯೊಳಕ್ಕೆ ಬಿದ್ದುಹೋಗಿದೆ ಎಂದು ಅನಂತುವಿಗೆ ತಿಳಿದಾಗ ಅವನು "ಅದಕ್ಕೇನು ಮಹಾ; ಮಧ್ಯಾಹ್ನದ ಮೇಲೆ ಸುದರ್ಶನ ತೆಗೀತಾನೆ. ಇವ ಯಾವ ಭಾವಿಬೇಕಾದ್ರು ಮುಳಗ್ತಾನೆ. ನಾರಾಯಣ ಬೇಕಾದರೂ ತೆಗೀತಾನೆ. ಇದೂ ಆಳವೂ ಇಲ್ಲ. ಈಗ ಇದರಲ್ಲಿ ನೀರು ಸೊಂಟದ ಉದ್ದಕ್ಕಿಂತ ಜಾಸ್ತಿ ಇಲ್ಲ" ಎಂದ. ಸೀತಾರಾಮು "ಸೊಂಟದುದ್ದ ಮಾತ್ರ ನೀರು ಇರುವುದಾದರೆ ನಾನೇ ಇಳಿಯುತ್ತೀನೆ" ಎಂದ. ಅನಂತು "ಯಾಕೆ. ಈಗ ಅಂತಹ ಮೀರಿ ಹೋಗಿರುವುದೇನು ಬೇಡ" ಎಂದ. ಸುದರ್ಶನಮಾತ್ರ "ನೀವು ಈ ಭಾವಿ ಇಳೀತೀರಾ ಪಾಪ ಪಾಪ" ಎಂದುಕೊಂಡು ಕರುಗಳಿಗೆ ಹುಲ್ಲು ಹಾಕಲು ಹೊರಟುಹೋದ. ಅನಂತು ಒಳಕ್ಕೆ ಹೋದಮೇಲೆ ಸೀತಾರಾಮು ಸ್ವಲ್ಪ ಕೋಪದಿಂದ ಸುದರ್ಶನನನ್ನು ಕರೆದು "ಏ ನನಗೆ ಆಗೋದಿಲ್ಲ ನಾರಾಯನಿಗೆ ಆಗುತ್ತೆ ಅಂತ ಹೇಗೆ ಹೇಳ್ತೀಯೊ" ಎಂದ. ಸುದರ್ಶನನು

"ಅವರ್ಗೇನು ಎಂತ ಮಡೂನು ಈಜತಾರೆ. ಈ ಊರಲ್ಲಿ ಅವರು ಇಳಿದೆ ಇರೋ ಭಾವಿಯಾವುದು ಭಾವ. ಕೆಸರಿನಬಾವಿಗೆ ಬೆಳ್ಳಿ ಎರಡಾಣೆ ಹಾಕಿ ತುಳಿದರೂ ಹೋಗಿ ಮೇಲಕ್ಕೆ ಎತ್ತಿಕೊಂಡು ಬರ್ತಾರೆ. ಅವರಿಗೆ ನಿಮ್ಗೆ ಎಲ್ಲಿ ಸಂಬಂಧ, ನಿಮ್ಮದೆಲ್ಲಿ ಹೋದರೂ ನಲ್ಲಿ ನೀರಿನಲ್ಲಿ ಸಾಹಸ" ಎಂದ. ವೈದೇಹಿ ಭಾವೀನೇ ನೋಡ್ತಾ ನಿಂತಿದ್ದಳು. ಮಂಗಳೆಯೂ ಬಂದಳು. ಎಲ್ಲರೂ ಒಳಕ್ಕೆ ಹೋದರು.

ಮರುದಿವಸ ಬೆಳಿಗ್ಗೆ ವೈದೇಹಿಯ ತಾಯಿ ಪದ್ಧತಿಯಂತೆ ಐದು ಗಂಟೆಗೆ ಎದ್ದು ಸ್ನಾನಮಾಡಿ ಕಾಫಿ ಕಾಯಿಸಿ ಇಟ್ಟು ಅಳಿಮಯ್ಯ ಎದ್ದು ಹೋಗಿದ್ದುದರಿಂದ ಅವನಿಗಾಗಿ ನಿರೀಕ್ಷಿಸುತ್ತಾ "ಅಯ್ಯೋ ಕಾಫಿ ಆರಿ ಹೋಗುತ್ತದೆಲ್ಲ" ಎಂದು ಯೋಚಿಸುತ್ತಿದ್ದರು. ಸ್ವಲ್ಪ ಹೊತ್ತಿನೊಳಗಾಗಿ ವೈದೇಹಿಯೂ ಎದ್ದು, ಹಂಡೆಯಲ್ಲಿ ಬಿಸಿನೀರು ಬಹಳ ಕಾದಿದ್ದುದರಿಂದ ಬಿಂದಿಗೆಯನ್ನು ತೆಗೆದುಕೊಂಡು ಹಗ್ಗಕ್ಕೆ ಕಟ್ಟಿ ಬಾವಿಗೆ ಬಿಟ್ಟಳು. ಬಿಂದಿಗೆ ಯನ್ನು ಮುಳುಗಿಸಲು ಅದನ್ನು ಅಲ್ಲಾಡಿಸುತ್ತಾ ಆಕಾಶದ ಕಡೆ ನೋಡು ತ್ತಿದ್ದ ವೈದೇಹಿಗೆ ಇದ್ದಕ್ಕಿದ್ದಂತೆ, ಹಗುರವಾಗಿದ್ದ ಹಗ್ಗವನ್ನು ಬಾವಿಯಲ್ಲಿ ಯಾರೋ ಜಗ್ಗಿದಂತೆ ಆಯಿತು. ಆಗ ವೈದೇಹಿ ಭಾವಿಯನ್ನು ಬಗ್ಗಿ ನೋಡಿದಳು. ಭಾವಿಯಲ್ಲಿ ಕೈಯಲ್ಲಿ ಬೆಳ್ಳಿಯ ಚೊಂಬನ್ನು ಹಿಡಿದು ಕೊಂಡು ಸೀತಾರಾಮನು ನಿಂತಿದ್ದನು. ಸೊಂಟದವರೆಗೆ ಮಾತ್ರ ನೀರಿತ್ತು. ಅದನ್ನು ನೋಡಿದ ಕೂಡಲೇ ವೈದೇಹಿಗೆ ಬಹಳ ಗಾಬರಿಯಾಯಿತು. ಅವಳು ಅಯ್ಯೊ ಎಂದಳು. ಸೀತಾರಾಮು "ಕೂಗಬೇಡ. ಸ್ವಲ್ಪ ತಡಿ" ಎಂದ. ವೈದೇಹಿಯಲ್ಲದೆ ಬೇರೆ ಯಾರಾದರೂ ಆಗಿದ್ದರೆ ಕೂಗಿ ಗದ್ದಲ ಮಾಡಿಬಿಡುತ್ತಿದ್ದರು. ಸೀತಾರಾಮು ಬಾವಿಯಿಂದಲೇ ಉಪನ್ಯಾಸ ಮಾಡಿದ. "ಕೂಗಬೇಡ. ನಿಮ್ಮ ತಾಯಿ ಎಲ್ಲಿಯಾದರೂ ಬಂದಾಳು? ಮಂಗಳೆ ಎಲ್ಲಿಯಾದರೂ ಬಂದಾಳು. ಜಾನಕಮ್ಮನವರಿಗೂ ಅನಂತು ವಿಗೂ ಸುದ್ದಿ ತಿಳಿಯಬಾರದು. ಯಾರಿಗೆ ತಿಳಿದರೂ ಚಿಂತೆಯಿಲ್ಲ. ಆ ನಾರಾಯಣನಿಗೆ ತಿಳಿದೀತು. ಆಮೇಲೆ ಅವ ಬೆಂಗಳೂರಿನಲ್ಲಿ ತಲೆ ಎತ್ತಿ ಕೊಂಡು ತಿರಗದ ಹಾಗೆ ಮಾಡಿಬಿಡ್ತಾನೆ" ಎಂದ. ವೈದೇಹಿಯು "ಹೌದು ಮೇಲಕ್ಕೆ ಬನ್ನಿ" ಎಂದಳು. ಸೀತಾರಾಮು "ಅದೇ ತೊಂದರೆ" ಎಂದ. ವೈದೇಹಿ "ಯಾಕೆ" ಎಂದಳು. ಸೀತಾರಾಮು "ಬಾವಿ ಒಳ್ಳೆ

ಅಗಲವಾಗಿದೆ. ಆಳವೂ ಇಲ್ಲ. ಮೇಲಿನಿಂದ ಒಂದೇ ಏಟಿಗೆ ದುಮುಕಿ ಬಿಟ್ಟೆ. ಎಲ್ಲೋ ಒಂದು ಜಾಗ ಬೆನ್ನು, ತುರಿಯುವ ಮಣೆಯಲ್ಲಿ ಕೊಪ್ಪರಿ ತುರಿದಂತೆ ಸ್ವಲ್ಪ ತುರದಿದೆ. ಅದೇನೂ ಹೆಚ್ಚಲ್ಲ. ಆದರೆ ಮೇಲಕ್ಕೆ ಬರೋಕೆ ದಾರಿ ಇಲ್ಲ. ಆಚೆ ಈಚೆ ಕಾಲಿಟ್ಟುಕೊಂಡು ಬರೋಣ ಅಂದರೆ ಬಾವಿ ಅಗಲ ಜಾಸ್ತಿ. ಎಟಕೊಲ್ಲ. ಹಗ್ಗದ ಮೇಲೆ ಬರೋಕೆ ಅಭ್ಯಾಸವಿಲ್ಲ ಏನು ಮಾಡಲಿ" ಎಂದ. ವೈದೇಹಿಯು "ಗಟ್ಟಿಯಾಗಿ ಹಗ್ಗ ಹಿಡಿದು ಕೊಳ್ಳಿ. ನಾನು ಮೇಲಕ್ಕೆ ಎಳೆಯುತ್ತೇನೆ" ಎಂದಳು. ಸೀತಾರಾಮನು ಅವಳ ಕಡೆ ನೋಡುತ್ತಾ "ಇದು ಸಣ್ಣ ಕೊಡವಲ್ಲ ಅಮ್ಮಾ. ೧೬೦ ಪೌಂಡು ಇದೆ. ಹಗ್ಗ ಮಧ್ಯೆ ಕಿತ್ತುಹೋದರೂ ಕಿತ್ತು ಹೋಗಬಹುದು. ನೀನೂ ಅದರ ಜತೆಯಲ್ಲಿ ಭಾವಿಗೆ ಬೀಳಬಹುದು" ಎಂದ. ವೈದೇಹಿಯು "ಮತ್ತೆ ಏನುಮಾಡತೀರಿ" ಶೀತ ಎಷ್ಟು ಹೊತ್ತು ನೀರಿನಲ್ಲಿ ಹೀಗೆ ನಿಂತಿರತೀರಿ. ಇದೇನು ಅಂದ್ರೆ, ದೊಡ್ಡಪ್ಪನ ಕೂಗ್ತೀನಿ" ಎಂದಳು.

ಸೀತಾರಾಮು ಅವಳು ಹೆಂಡತಿ ಎಂಬುದನ್ನು ಮರೆತುಬಿಟ್ಟ. 'ನಿನಗೆ ಕೈ ಮುಗೀತೀನಿ ಕೂಗಬೇಡ. ಹಗ್ಗ ಹಿಡಕೊಂಡು ನಾನೇ ಮೇಲೆ ಬರ್ತೇನೆ' ಎಂದ. ಅವನು ಹಾಗೆ ಹೇಳುವುದಕ್ಕೂ ವೈದೇಹಿಯ ಮಗ್ಗುಲಲ್ಲಿ ಮತ್ತೊಂದು ಮುಖ ಕಾಣುವುದಕ್ಕೂ ಸರಿಹೋಯಿತು. ಹೆಂಡತಿಗೆ ಕೈ ಮುಗಿಯುತ್ತೇನೆ ಎಂದು ಹೆಂಡತಿಯೊಬ್ಬಳಿಗೆ ಹೇಳಬಹುದು. ಮಾನವಂತನಾದ ಗಂಡಸು ಬಹದ್ದೂರು ಮತ್ತೊಬ್ಬರ ಎದುರಿಗೆ ಆ ಮಾತನ್ನು ಹೇಳುವುದಕ್ಕಾಗುತ್ತದೆಯೇ. ಅದರಲ್ಲಿಯೂ ಅತ್ತೆಯ ಎದುರಿಗೆ ಹೇಳಿದ ಮೇಲೆ ಅಳಿಯನ ಜರ್ಬು ಎಲ್ಲಿ ಉಳಿಯಿತು. ಸೀತಾರಾಮುವಿಗೆ ಬಹಳ ನಾಚಿಕೆಯಾಯಿತು. ಅವನು ಇಂತಹ ಮಾನಕೆಟ್ಟ ಗಂಡಸನ್ನು ಪೂರ್ವ ಕಾಲದಲ್ಲಿ ಭೂಮಿ ಬಾಯಿ ತೆರೆದು ನುಂಗುತ್ತಿದ್ದಿತು. ಈಗ ಬಾಯಿ ತೆರೆದಿದೆ ಆದರೆ ಅದು ಬಾವಿಯಾಗಿದೆ ಎಂದುಕೊಂಡನು. ಅಷ್ಟರಲ್ಲಿಯೇ ಅಡಿಗೆ ಮನೆಗೆ ಒಂದು ಬಿಂದಿಗೆ ನೀರು ತೆಗೆದುಕೊಂಡು ಹೋಗಲು ಜಾನಕಮ್ಮ ಬಂದರು. ಕೂಡಲೆ ಓಡಿಹೋಗಿ ಅನಂತುವಿಗೆ ಹೇಳಿದರು. ಅನಂತು ಭಾವಿಯ ಹತ್ತಿರಕ್ಕೆ ಬಂದ. ನಾರಾಯಣನಿಗೂ ತಿಳಿಯಿತು. ಅವನೂ ಬಂದು ನಿಂತ. ನಾರಾಯಣನ ಮುಖವನ್ನು ಭಾವಿಯ ಮೇಲೆ

ನೋಡಿ ಸೀತಾರಾಮು "ಇನ್ನು ಸತ್ತೆ. ಈ ಪಿಶಾಚಿಯೂ ಬಂದು ಬಿಟ್ಟಿತು" ಎಂದುಕೊಂಡ.

ಅನಂತುವಿನ ಮನೆ ಮಹಡಿಯ ಮೇಲೆ ಬಿದ್ದಿದ್ದ ಒಂದು ಹಳೆಯ ಮರದ ತೊಟ್ಟಿಲನ್ನು ತಂದು ಅದರ ನಾಲ್ಕುಕಡೆಗೂ ಬಲವಾಗಿ ಹಗ್ಗ ಬಿಗಿದು ಭಾವಿಯೊಳಕ್ಕೆ ಬಿಟ್ಟರು. ನಾರಾಯಣನು "ಎಲ್ಲಿ ಆ ದೋಲಿಯಲ್ಲಿ ಏರೋಣವಾಗಲಿ" ಎಂದ. ಸೀತಾರಾಮು "ಪಿಶಾಚಿ" ಎಂದ್ಕೊಂಡು ದೋಲಿಯಲ್ಲಿ ಕುಳಿತ. ನಾರಾಯಣ "ಯಾವ ರತ್ನವನ್ನು ತರಲು ತಾವು ಇಷ್ಟು ಸಾಹಸಮಾಡಿದಿರೋ ಆ ರತ್ನವೂ ಆ ದೋಲಿಯಲಿ ಬರಲಿ" ಎಂದ. ಸೀತಾರಾಮು ಚೊಂಬನ್ನೂ ದೋಲಿಯಲ್ಲಿ ಇಟ್ಟ. ನಿಧಾನವಾಗಿ ತೊಟ್ಟಿಲು ಮೇಲಕ್ಕೆ ಬರಲು ಪ್ರಾರಂಭವಾಯಿತು. ಸ್ವಲ್ಪ ಹೆಚ್ಚುಕಡಿಮೆ ಊರಿನವರೆಲ್ಲಾ ಸೇರಿಬಿಟ್ಟಿದ್ದರು. ನಾರಾಯಣನಿಗೆ ಮಾಯಾ ಮಚ್ಛೇಂದ್ರ ಸಿನಿಮಾದಲ್ಲಿ ಸ್ವಾಮಿಯು ಮೇಲಿನಿಂದ ಕೆಳಕ್ಕೆ ಝು ಎಂದು ಬರುವುದು ಜ್ಞಾಪಕ ಬಂತು. ಅಳಿಯ ಭಾವಿಗೆ ಹೇಗೆ ಬಿದ್ದ ಎಂಬುದು ಯಾರಿಗೂ ಸರಿಯಾಗಿ ತಿಳಿಯಲಿಲ್ಲ. ಆದರೆ ಹೆಂಗಸರು ಮಾತ್ರ "ಬಾವಿಯಿಂದ ಮೇಲಕ್ಕೆ ಎತ್ತಿಕೊ ಕೈಮುಗೀತೇನೆ ಎಂತ ಅಳಿಯ ಹೆಂಡತಿಗೆ ಕೂತ್ತಾ ಇದ್ನಂತೆ. ಆಗ ಅವಳ ತಾಯಿ ಹೋಗಿ ಎಲ್ಲಾ ಸೇರಿ ಮೇಲಕ್ಕೆ ಎಳೆದು ಹಾಕಿದರಂತೆ; ದೀಪಾವಳಿಗೆ ಬಂದ ಅಳಿಯ ಹೆಂಡತಿಗೆ ಹೀಗೆ ಹೇಳೋದೆ. ನಾಚಿಕೆ ಕೇಡು. ಅದಕ್ಕೇ ಈ ಕಾಲದ ಹುಡುಗೀರು ಗಂಡನ್ನ ಕಾಸಿಗೆ ಕಡೆಮಾಡಿ ತಲೇಲಿ ನಡಿತಾರೆ" ಎಂದು ಮಾತನಾಡಿಕೊಳ್ಳುತ್ತಿದ್ದರು. ಈ ವಿಚಾರ, ತನ್ನ ತಾಯಿಯ ಬಾಯಿಂದ ನಾರಾಯಣನಿಗೆ ತಿಳಿದು ಅವನು ಬಂದು ಸೀತಾರಾಮುವಿಗೆ "ಏನು ಅಳಿಯ ದೇವರೇ! ನಡು ನೀರಿನಲ್ಲಿ ನಿಂತುಕೊಂಡು ಹೆಂಡತೀಗೆ ಕೈಮುಗಿದುಕೊಂಡು ತಪಸ್ಸುಮಾಡ್ತ ಇದ್ದರಂತಲ್ಲಾ"ಎಂದ. ಸೀತಾರಾಮುವಿಗೆ ಸಿಟ್ಟು ಹತ್ತಿತ್ತು. ಅವನು ನಾರಾಯಣನನ್ನು ಬೈಯ್ಯುತ್ತಿದ್ದೇನೆ ಎಂದುಕೊಂಡು "ಕೈನಾದರೂ ಮುಗೀತೀನಿ. ಕಾಲನಾದರೂ ಕಟ್ಟತೇನೆ. ಈ ಮಾತು ನೀನು ಮತ್ತೆ ಎತ್ತಿದರೆ ತಲೆ ಒಡೀತೀನಿ" ಎಂದ. ತಲೆ ಎತ್ತಿ ನೋಡಿದಾಗ ವೈದೇಹಿಯ ತಾಯಿಯು ಲೋಟದಲ್ಲಿ ಕಾಫಿ ಹಿಡಿದುಕೊಂಡು ಬಂದು ನಿಂತಿದ್ದರು. ನಾರಾಯಣನು ಅಳಿಯ ದೇವರು

ಹೇಳುವ ಯಾವ ಮಾತಿಗೂ ಸಾಕ್ಷಿ ಒದಗಿಯೇ ಒದಗುತ್ತೆ ಎಂದು ಹೇಳುತ್ತಾ ಮನೆಗೆ ಹೋದ. ಹೀಗೆ ನಾರಾಯಣ ಸೀತಾರಾಮುವಿನ ಮೇಲೆ ಇದ್ದ ಕೋಪ ಸ್ವಲ್ಪ ತೀರಿಸಿಕೊಂಡ.

## ೨೬. ಆಂಜನೇಯನ ಸಮಾಜ

ಆಗ ಮಲ್ಲಿಗೆಹಳ್ಳಿಯಲ್ಲಿ ಆಂಜನೇಯ ಸಮಾಜ ಹುಟ್ಟಿಕೊಂಡಿತ್ತು. ಈ ಸಮಾಜ ಮೊದಲು ಆಂಜನೇಯರ ಗುಡಿಯಲ್ಲಿ ಸ್ಥಾಪಿತವಾದುದರಿಂದ ಅದಕ್ಕೆ ಅಂಜನೇಯ ಸಮಾಜವೆಂದು ಹೆಸರಾಯಿತು. ಹಿರಿಯರಾದ ಕೆಲವರು, "ಇದರ ಸದಸ್ಯರು ಆಂಜನೇಯರಾದುದರಿಂದ ಇವರಿಗೆ ಈ ಹೆಸರು ಬಂದಿದೆ" ಎನ್ನುತ್ತಿದ್ದರು. ಮಲ್ಲಿಗೆಹಳ್ಳಿಯ ಹುಡುಗರು ಕೆಲವರು ವಾರಕ್ಕೆ ೨ ಕಾಸು ಹಾಕಿ ಆಂಜನೇಯನ ದೇವಸ್ಥಾನದಲ್ಲಿ ಪ್ರತಿ ಶನಿವಾರವೂ ಸಾಯಂಕಾಲ ಕಡ್ಲೆ ಪುರಿ ತಿನ್ನುತ್ತಿದ್ದರು. ಆಗ ಇದ್ದದ್ದರಲ್ಲಿ ಒಬ್ಬ ಬುದ್ಧಿವಂತನಾದ ಹುಡುಗ "ಹೀಗೆ ಪ್ರತಿ ವಾರವೂ ದುಡ್ಡನ್ನು ಕಡಲೆಪುರಿಗೆ ಯಾಕೆ ಖರ್ಚು ಮಾಡಬೇಕು. ಹೀಗೆಯೇ ಕೆಲವುಕಾಲ ಕೂಡಿಸೋಣ" ಎಂದ. ಕೆಲವು ಹುಡುಗರು ತಿಂಗಳಿಗೆ ೧ ಆಣೆ ೨ ಆಣೆ ಚಂದಾ ಕೊಡಲು ಪ್ರಾರಂಭಿಸಿದರು. ಪ್ರತಿ ಮನೆಗೂ ಒಬ್ಬ ಹುಡುಗನಾದರೂ ಸದಸ್ಯನಾದ. ವರುಷಕ್ಕೆ ಒಂದು ಸಲ ಮಲ್ಲಿಗೆಹಳ್ಳಿಯಲ್ಲಿ ಈ ಸಭೆಯ ವಾರ್ಷಿಕ ಸಭೆ. ಆ ಸಭೆಗೆ ಪ್ರತಿ ವರುಷವೂ ಒಬ್ಬೊಬ್ಬ ಪೋಷಕರು, ಅಧ್ಯಕ್ಷರು, ಪ್ರತಿ ವರುಷವೂ ಒಬ್ಬೊಬ್ಬ ಹೊಸ ಕಾರ್ಯದರ್ಶಿ ನೇಮಕ, ಸಾಯಂಕಾಲ ದೇವಸ್ಥಾನದಲ್ಲಿ ಉತ್ಸವ ಹೀಗೆ ನಡೆಯುತ್ತಿತ್ತು. ಸ್ವಲ್ಪಕಾಲದ ಮೇಲೆ ಸಮಾಜದ ವಾರ್ಷಿಕ ಸಭೆಯ ದಿವಸ, ಊರವರೆಲ್ಲಾ ಆ ದಿನವನ್ನು ಹಬ್ಬವಾಗಿ ಪರಿಗಣಿಸಬೇಕೆಂದೂ ಹಬ್ಬದ ದಿನ ಮಾಡುವಂತೆ ಮನೆಯಲ್ಲಿ ವಿಶೇಷವಾದ ಪಾಯಸ ಮುಂತಾದ ಅಡಿಗೆಗಳನ್ನೂ ಮಾಡಬೇಕೆಂದೂ ಗೊತ್ತಾಯಿತು. ಆಂಜನೇಯ ಸಮಾಜದ ಹುಡುಗರು ಪ್ರತಿ ಮನೆಯ ಬಾಗಿಲಿನಲ್ಲಿಯೂ ಮಾವಿನಸೊಪ್ಪಿನ ರಾಶಿ ಹಾಕುತ್ತಿದ್ದರು. ಹಾಗೂ ಸೊಪ್ಪನ್ನು ಕಟ್ಟಿಕೊಳ್ಳದವರ ಬಾಗಿಲಿಗೆ ತಾವೇ ಹೋಗಿ ಕಟ್ಟುತ್ತಿದ್ದರು. ಇದು ಊರು ಒಟ್ಟಿನ ಹಬ್ಬವಾದುದರಿಂದ ಇದರಲ್ಲಿ ಹಿಂದು ಮುಸಲ್ಮಾನ್ ಬ್ರಾಹ್ಮಣ ಬ್ರಾಹ್ಮಣೇತರ ಎಂಬ

ವ್ಯತ್ಯಾಸಗಳು ಇರಲಿಲ್ಲ. ಎಲ್ಲರೂ ಇದರಲ್ಲಿ ಭಾಗವಹಿಸುತ್ತಿದ್ದರು. ಸಾಯಂಕಾಲದ ಸಭೆಯಲ್ಲಿ ಉಪನ್ಯಾಸಗಳೂ ಅನಂತರ ಹುಡುಗರೇ ಅಭಿನಯಿಸುತ್ತಿದ್ದ ಒಂದು ನಾಟಕವೂ ನಡೆಯುತ್ತಿದ್ದಿತು. "ಹತ್ತು ಹನ್ನೆರಡು ಹದಿನಾಲ್ಕು ವಯಸ್ಸಿನ ಹುಡುಗರು ಯಾವ ತರಹ ಉಪನ್ಯಾಸ ಮಾಡಬಹುದು? ಯಾವ ರೀತಿ ನಾಟಕ ಅಭಿನಯಿಸಬಹುದು. ಊಹಿಸಿ. ಉಪನ್ಯಾಸ ಹುಡುಗರು ಕೈಗೆ ಸಿಕ್ಕಿದ ಪುಸ್ತಕಗಳಿಂದ ಬರೆದುಕೊಂಡು ಬಂದು ಓದುತ್ತಿದ್ದರು. ಆದರೂ ಆ ವಯಸ್ಸಿನಲ್ಲಿ ಅವರು ಹೀಗೆ ಸಾರ್ವಜನಿಕರ ಎದುರಿನಲ್ಲಿ ಬಂದು ಓದುವುದೇ ಜನರಿಗೆ ಆಶ್ಚರ್ಯವಾಗಿದ್ದಿತು. ಆದರೆ ನಾಟಕ ಹುಡುಗರು ಚೆನ್ನಾಗಿಯೇ ಅಭಿನಯಿಸುತ್ತಿದ್ದರು. ಪರಸ್ಥಳದಿಂದ ಯಾರಾದರೂ ಮಲ್ಲಿಗೆಹಳ್ಳಿಗೆ ಬಂದರೆ ಅವರಿಂದ ಉಪನ್ಯಾಸಾದಿಗಳನ್ನು ಮಾಡಿಸುತ್ತಿದ್ದರು.

ದೀಪಾವಳಿಯ ಕಾಲಕ್ಕೆ ಈ ಆಂಜನೇಯ ಸಮಾಜದ ಒಂದು ವಾರ್ಷಿಕೋತ್ಸವ ಬಂತು. ಆ ವೇಳೆಗಾಗಲೇ ಸಮಾಜದ ಮೂಲಸ್ಥಾಪಕ ಸುದರ್ಶನ ಹಾಸನದ ಹೈಸ್ಕೂಲಿಗೆ ವಿದ್ಯಾರ್ಥಿಯಾಗಿ ಹೋಗಿ ಸೇರಿದ್ದ. ಆದರೂ ಸಮಾಜದ ವ್ಯವಸ್ಥೆ ಅವನ ಕೈಯ್ಯಲ್ಲಿ ಇದ್ದಿತು. ಯಾವುದನ್ನೂ ವ್ಯವಸ್ಥೆ ಮಾಡುವುದರಲ್ಲಿ ಅವನು ಬಹಳ ಗಟ್ಟಿಗ. ಹಾಸನದಲ್ಲಿದ್ದುಕೊಂಡೇ ಸಮಾಜದ ಲೆಕ್ಕಗಳನ್ನೆಲ್ಲಾ ಸರಿಯಾಗಿ ಇಟ್ಟ. ಇದ್ದಕ್ಕಿದ್ದಂತೆ ಬರಿಯ ಹುಡುಗರ ಪಳ್ಳುಕೂಟವಾಗಿದ್ದ ಈ ಸಂಘಕ್ಕೆ ಅಚ್ಚಿನ "ಲೆಟರ್ ಹೆಡ್" ಮುಂತಾದುವೆಲ್ಲಾ ಬಂದು ಅದಕ್ಕೆ ಒಂದು ಗಾಂಭೀರ್ಯ ಬಂತು. ಇನ್ನೊಬ್ಬ ಮುಖ್ಯ ಕೆಲಸಗಾರ ರಂಗಪತಿ ಮದರಾಸಿಗೆ ಓದುವುದಕ್ಕೆ ಹೋದ—ಆದರೆ ಬಾಲ್ಯದ ಎಳೆ ವಯಸ್ಸಿನ ಕಾವು ಅಭಿಮಾನ ಹುಡುಗರಿಗೆ ಜಾಸ್ತಿ. ಹುಡುಗರೆಲ್ಲ ಎಲ್ಲಿದ್ದರೂ ವಾರ್ಷಿಕೋತ್ಸವದ ದಿನ ಸೇರಿಬಿಡುತ್ತಿದ್ದರು. ಮಲ್ಲಿಗೆಹಳ್ಳಿ ಹುಡುಗರಿಗೆ ಸಮಾಜದ ವಾರ್ಷಿಕೋತ್ಸವ ಒಂದು ರಥೋತ್ಸವವೇ ಆಯಿತು. ಆ ವಾರ್ಷಿಕ ಸಭೆಯಲ್ಲಿ ಆಯವ್ಯಯವೇನು? ಲೆಕ್ಕಗಳ ತನಿಖೆಯೇನು? ಒಂದಾಣೆ ಕೊಡುವ ಸದಸ್ಯರನ್ನು ಎರಡು ಆಣೆ ಕೊಡುವಂತೆ ಮಾಡುವ ಪ್ರಯತ್ನಗಳೇನು ಕಾರ್ಯದರ್ಶಿಯ ಸ್ಥಾನದ ಸ್ಪರ್ಧೆಯೇನು? ಪ್ರತಿಯೊಂದೂ ಒಂದೊಂದು ದೊಡ್ಡ ರಾಜ್ಯದ ಆಡಳಿತದಂತೆ ನಡೆಯುತ್ತಿದ್ದಿತು. ಅದರ ಆಯವ್ಯಯ

ವೆಲ್ಲಾ ಹನ್ನೆರಡು ತಿಂಗಳು ಶೇಖರಿಸಿದ ೧೨-೧೫ ರುಪಾಯಿ ಮಾತ್ರವೇ ಆಗುತ್ತಿದ್ದರೂ ಮಲ್ಲಿಗೆಹಳ್ಳಿಯಲ್ಲಿ ಆಂಜನೇಯ ಸಮಾಜದ ಪ್ರಾಬಲ್ಯ ಬಹಳ ಹೆಚ್ಚಾಯಿತು. ಅದಕ್ಕೆ ಸೇರುವುದೇ ಹುಡುಗರಿಗೆ ಒಂದು ಹೆಮ್ಮೆಯ ವಿಚಾರವಾಯಿತು. ಆ ಕಾಲದಲ್ಲಿ ಮಲ್ಲಿಗೆಹಳ್ಳಿಯಲ್ಲಿ ಆ ಸಮಾಜದ ಹೊರತು ಬೇರೆ ಯಾವ ಸಾರ್ವಜನಿಕ ಜೀವನವೂ ಇರಲೇ ಇಲ್ಲ. ಅನೇಕ ಹಳ್ಳಿಗಳಲ್ಲಿ ಇವತ್ತೂ ಯಾವ ಸಾರ್ವಜನಿಕ ಜೀವನವೂ ಇಲ್ಲ.

ಬೆಂಗಳೂರಿನಿಂದ ಸೀತಾರಾಮು ಬಂದಾಗ ಆಂಜನೇಯ ಸಮಾಜದ ಒಂದು ವಾರ್ಷಿಕೋತ್ಸವ ಸಂಭವಿಸಿತು. ಮೊದಲ ದಿವಸ ಸಾಯಂ ಕಾಲವೇ ಹಾಸನದಲ್ಲಿ ಓದುತ್ತಿದ್ದ ಸುದರ್ಶನ ಬೈಸಿಕಲ್ ಮೇಲೆ ಬಂದ. ಆ ವರುಷ ಮಲ್ಲಿಗೆಹಳ್ಳಿ ಪೋಸ್ಟ್‌ಮಾಸ್ಟರನ್ನು ಅಧ್ಯಕ್ಷರನ್ನಾಗಿ ಮಾಡ ಬೇಕೆಂದು ತೀರ್ಮಾನವಾಗಿದ್ದಿತು. ಹುಡುಗರ ಸಂಘವಾದರೂ ಪ್ರತಿ ಯೊಂದು ವರುಷವೂ ಬೇರೆ ಬೇರೆ ಒಬ್ಬೊಬ್ಬರನ್ನೇ ಅಧ್ಯಕ್ಷರನ್ನಾಗಿ ಮಾಡ ಬೇಕೆಂಬ ಪ್ರಜಾಪ್ರಭುತ್ವ ದೃಷ್ಟಿ ಆ ಹುಡುಗರಲ್ಲಿ ಸ್ವಾಭಾವಿಕವಾಗಿ ಬಂದಿದ್ದಿತು. ಅದರಲ್ಲಿಯೂ ಪೋಸ್ಟು ಮೇಸ್ಟರು ಅಂದರೆ ಅವರು ಮಲ್ಲಿಗೆಹಳ್ಳಿಗೆ ಕಣ್ಣಾಗಿದ್ದರು. ಅವರ ಗಾಂಭೀರ್ಯ, ಅವರ ಸಹನೆ, ಎಲ್ಲಾ ದಕ್ಕಿಂತ ಹೆಚ್ಚಾಗಿ, ಅವನ ನಿಜವಾದ ವಿದ್ವತ್ತು, ಅವರ ಔದಾರ್ಯ, ವಿವೇಕ ಗುಣಗಳು, ಅವರನ್ನು ಎಲ್ಲರಿಗೂ ಪ್ರಿಯರನ್ನಾಗಿ ಮಾಡಿದ್ದುವು. "ಪೋಸ್ಟು ಮೇಷ್ಟರು ಅಧ್ಯಕ್ಷರಾಗುತ್ತಾರೆ" ಎಂದ ಕೂಡಲೆ ಹುಡುಗರ ಮೈ ಉಬ್ಬಿತು. ಹುಡುಗರಿಗೂ, ದೊಡ್ಡವರಿಗೂ ಆಗ ವಿವೇಕವನ್ನು ಹೇಳಲು ಶಕ್ತರಾಗಿದ್ದವರು ಅವರೊಬ್ಬರೇ. ಪೋಸ್ಟುಮಾಸ್ಟರು ಬರಿಯ ಪೋಸ್ಟುಮಾಸ್ಟರು ಮಾತ್ರವೇ ಆಗಿರಲಿಲ್ಲ. ಅವರು ಸ್ಕೂಲು ಮಾಸ್ಟರೂ ಆಗಿದ್ದರು. ಮಲ್ಲಿಗೆಹಳ್ಳಿಯ ಜನ ಅವರನ್ನು ಯಾವ ಕಾಲಕ್ಕೂ ಮರೆಯು ವಂತೆ ಇಲ್ಲ. ಈಗ ಮಲ್ಲಿಗೆಹಳ್ಳಿಯವರು ಎಲ್ಲೆಲ್ಲಿ ಉಪಾಧ್ಯಾಯರಾಗಿ, ಇಪ್ಪತ್ತು ರುಪಾಯಿ ಸಂಬಳದಿಂದ ಎರಡು ಸಾವಿರ ರುಪಾಯಿನವರೆಗೆ ದುಡಿಯುವವರಾಗಿ, ವ್ಯಾಪಾರಿಗಳಾಗಿ ಗ್ರಂಥಕರ್ತರಾಗಿ ವಕೀಲರಾಗಿ ಇರುತ್ತಾರೋ, ಅವರಾರೂ ಪೋಸ್ಟ್‌ಮಾಸ್ಟರನ್ನು ಮರೆಯುವಂತೆ ಇಲ್ಲ. ಪೋಸ್ಟುಮಾಸ್ಟರು "ಅಪ್ಪಾ ಸೀತಾರಾಮು ಪರಸ್ಥಳದಿಂದ ಬಂದಿದ್ದಾರೆ. ಉತ್ಸಾಹಿ ಯುವಕರು. ಬಿ. ಎ. ಪ್ಯಾಸ್ ಮಾಡಿದ್ದಾರೆ. ಅಲ್ಲದೆ ನಮ್ಮ

ಊರಿನ ಅಳಿಯ. ಅಷ್ಟೆ ಅಲ್ಲ. ಇವತ್ತು ಎಲ್ಲರ ಬಾಯಲ್ಲೂ ಅವರ ಹೆಸರೇ ಇದೆ (ಬಾವಿಗೆ ಬಿದ್ದ ಕಾರಣದಿಂದ) ನಮ್ಮ ಊರು ಅಳಿಯನನ್ನು ನಾವು ಗೌರವಿಸಬೇಕು. ಅವರಿಗೇ ಈ ವರುಷ ಅಧ್ಯಕ್ಷ ಪಟ್ಟ ಕಟ್ಬೋಣ" ಎಂದರು. ಹುಡುಗರಿಗೆ ಆ ಬಾಲ್ಯದಲ್ಲಿ ಸಹ ಪೋಸ್ಟುಮಾಸ್ಟರು ಒಬ್ಬರು ಮಾತ್ರ ಮಲ್ಲಿಗೆಹಳ್ಳಿಯಲ್ಲಿ ಮನಸ್ಸಿಗೆ ಬೇಜಾರಾಗದಂತೆ ಉಪನ್ಯಾಸಮಾಡ ಬಲ್ಲವರು ಎಂಬುದು ಚೆನ್ನಾಗಿ ಮಂದಟ್ಟಾಗಿದ್ದಿತು. ಆದರೂ ಅವರು ಪೋಸ್ಟುಮೇಸ್ಟರ ಮಾತನ್ನು ಮೀರಲಿಲ್ಲ. ಸೀತಾರಾಮುವನ್ನು ಸಭೆಗೆ ಆಹ್ವಾನಿಸಿ ಅಧ್ಯಕ್ಷನಾಗಲು ಅವನನ್ನು ಒಪ್ಪಿಸಿದರು. ಸೀತಾರಾಮುವು ಈ ರೂಪದಲ್ಲಾದರೂ ಸರಿಯೆ. ನಾರಾಯಣನ ಮೇಲೆ ಒಂದು ಜಯ ವನ್ನು ಸಂಪಾದಿಸಬೇಕೆಂದು ಒಪ್ಪಿದ.

ಕರ್ಮ ಧರ್ಮ ಸಂಯೋಗದಿಂದ ಮಲ್ಲಿಗೆಹಳ್ಳಿಯ ನಾಗರೀಕತೆ, ಅದರ ಒಳ್ಳೆಯ ಅಭ್ಯಾಸಗಳು ಎಲ್ಲವೂ ಆಂಜನೇಯ ಸಮಾಜದಿಂದಲೇ ಪ್ರಾರಂಭವಾದುದು, ಆ ಸಮಾಜವನ್ನು ಸ್ಥಾಪಿಸಿದವರ ಹೃದಯ ಪಾರಿ ಶುದ್ಧತೆಯನ್ನು ಸೂಚಿಸುತ್ತದೆ. ಕೇವಲ ೧೦-೧೨ ವಯಸ್ಸಿನ ಮಕ್ಕಳು ಆಂಜನೇಯನ ಎದುರಿಗೆ ತಿಂಡಿ ತಿನ್ನಲು ಸ್ಥಾಪಿಸಿದ ಒಂದು ಸಂಸ್ಥೆಯಲ್ಲಿ ಏನುತಾನೆ ಸ್ವಾರ್ಥವಿದ್ದೀತು? ಬಾಲ್ಯದಲ್ಲಿ ತಾಯಿ ಹಾಕಿದ ಹಾಲು, ವಯಸ್ಸಾದ ಮೇಲೆ ಕೂಡ ಅನೇಕರ ದೇಹದ ಸತ್ವವನ್ನು ಬೆಳೆಸಿ ಉಳಿಸು ವಂತೆ, ಆ ಬಾಲ್ಯದ ಸಾತ್ವಿಕಭಾವದಿಂದ ಪ್ರೇರಿತವಾದ ಮಲ್ಲಿಗೆಹಳ್ಳಿಯ ಸಮಸ್ತ ಚಟುವಟಿಕೆಗಳೂ ಗ್ರಾಮದ ಉದ್ಧಾರಕ್ಕೆ ಸಾಧಕವಾಗಿವೆ. ಆ ಸಂಸ್ಥೆಗೆ ಯಾವ ಒಂದು ಸ್ವಾರ್ಥವೂ ಇರಲಿಲ್ಲ. ಜನರಿಗೆ ಉಪಕಾರವಾಗ ಬೇಕೆಂಬುದು ಮಾತ್ರ ಅದರ ಧ್ಯೇಯವಾಗಿದ್ದಿತು. ಯಾವ ರಾಜಕೀಯ ಸ್ವಾರ್ಥವನ್ನು ಸಾಧಿಸಲು ಯಾರೂ ರಚಿಸಿದ ಪಿತೂರಿಯಲ್ಲ ಅದು. ಆದು ದರಿಂದಲೇ ಮಲ್ಲಿಗೆಹಳ್ಳಿಯವರ ಎಲ್ಲಾ ಶುಭಗಳೂ ಅದರಿಂದಲೇ ಪ್ರಾರಂ ಭವಾದುವು. ಈ ಆಂಜನೇಯ ಸಂಘದ ವಾರ್ಷಿಕ ಸಭೆಗಳಲ್ಲಿ ವೈದಿಕ ಜಾಡ್ಯದ ಊರಾಗಿದ್ದ ಮಲ್ಲಿಗೆಹಳ್ಳಿಯ ಸ್ತ್ರೀಯರು ಪುರುಷರೊಂದಿಗೆ ಬಂದು ಕೂರಲು ಪ್ರಾರಂಭಿಸಿದರು. ಬ್ರಾಹ್ಮಣರು ಬ್ರಾಹ್ಮಣೇತರು ಹರಿ ಜನರು ತುರುಕರು ಒಂದೇ ಬಯಲಿನಲ್ಲಿ ಸಭೆ ಸೇರತೊಡಗಿದರು. ಅದು ವರೆಗೆ ಬ್ರಾಹ್ಮಣ ಬ್ರಾಹ್ಮಣೇತರರು ಒಟ್ಟಿಗೆ ಕೂರುವುದೇ ಅಪರೂಪ

ವಾಗಿತ್ತು. ಬ್ರಾಹ್ಮಣೇತರರೂ ಸರ್ಕಾರಿ ನೌಕರರಲ್ಲದವರು ಸಭೆಯ ಅಧ್ಯಕ್ಷ ರಾಗಿ ಅವರ ಸುತ್ತ ಬ್ರಾಹ್ಮಣರು ಕುಳಿತುದೂ ಅದೇ ಮೊದಲು. ಎಲ್ಲಾದಕ್ಕಿಂತ ಹೆಚ್ಚಾಗಿ ಸ್ವಾಮಿಯು ಪ್ರತಿ ವರುಷದ ವಾರ್ಷಿಕ ಸಭೆಯನ್ನೂ ಫೋಟೋ ತೆಗೆಯುತ್ತಿದ್ದನು. ಮಲ್ಲಿಗೆಹಳ್ಳಿಗೆ ಫೋಟೋ ಎಂದರೇನೆಂಬುದೇ ಹೊಸ ವಿಚಾರವಾಗಿದ್ದಿತು. ಪ್ರತಿಮನೆಯಲ್ಲಿಯೂ ಒಂದೊಂದು ಫೋಟೋ ವರ್ಷೇ ವರ್ಷೇ ಬರಲು ಪ್ರಾರಂಭವಾಯಿತು. ಆ ಭಟ್ಟನು ದೇವರ ಉತ್ಸವ, ಅದೇನು ಚೆನ್ನಾಗಿ ಅಲಂಕಾರಮಾಡುತ್ತಿದ್ದ ! ಅದರಲ್ಲಿಯೂ "ಆಂಜನೇಯ ಸಮಾಜದವರು ಫೋಟೋ ತೆಗೀತಾರೆ ಒಂದೊಂದು ಮನೇಲೂ ಒಂದೊಂದು ಫೋಟೊ ನಿಲ್ಲುತ್ತೆ" ಎಂದ ಕೂಡಲೇ ಅವನ ಕಲಾಶಕ್ತಿಯೆಲ್ಲಾ ಪ್ರಕಾಶಿತವಾಗಿ ಎಷ್ಟು ಸುಂದರವಾಗಿ ದೇವರನ್ನು ಅಲಂಕರಿಸುತ್ತಿದ್ದ ! ಜನರಿಗೆ ವಿಗ್ರಹ ಅಲಂಕಾರ ಚೆನ್ನಾದಷ್ಟೂ ಪ್ರೀತಿ ಭಕ್ತಿ ಎಷ್ಟು ಹೆಚ್ಚುತ್ತೆ ! ಸಾಮಾನ್ಯವಾದ ಒಂದು ಅಲಂಕಾರ ನೋಡಿದರೇ ಅದು ನಡೆದ ಜಾಗಕ್ಕೆ ಮುತ್ತಿಕ್ಕುತ್ತಾ ಜನ ತಿರುಗುವಾಗ ಸ್ವತಃ ಭಗವಂತನ ರೂಪ ಜನರನ್ನು ಆಕರ್ಶಿಸುವುದು ಹೆಚ್ಚೇ ? ಹಳ್ಳಿಯ ಜನಕ್ಕೆ ತಾನೇ, ತಿಳಿದೂ ತಿಳಿದೂ, ಆ ವಿಗ್ರಹ ಎಂದರೆ ಎಷ್ಟು ಅಭಿಮಾನ, ರಾಮಕೃಷ್ಣ ಪರಮಹಂಸರು ಹೇಳಿದ "ಹಸುವಿನಲ್ಲಿ ಮೈಯಲ್ಲಿ ಎಲ್ಲಾ ಕಡೆಯೂ ಹಾಲಿದೆ. ಆದರೆ ಯಾಕೆ ಮೊಲೆಯಲ್ಲಿ ಕರೆದರೆ ಮಾತ್ರವೇ ಹಾಲು ಬರುತ್ತೆ" ಎಂಬ ತತ್ವ ಜನರಿಗೆ ಅಜ್ಞಾತವಾಗಿ ತಿಳಿದು ಎಲ್ಲರೂ ಆ ವಿಶ್ವವ್ಯಾಪಿಯಾದ ಭಗವಂತನನ್ನು ಈ ಸುಂದರ ರೂಪದಲ್ಲಿ ಪೂಜಿಸುತ್ತಾರೊ ಬಲ್ಲವರಾರು! ಇನ್ನು ಆ ಫೋಟೊಗಳನ್ನು ಹಾಕಬೇಕಾದರೆ ಮನೆಯ ಗೋಡೆಗಳು ಶುದ್ಧವಾಗಿ ಸುಣ್ಣ ಹೊಡೆದುವಾಗಿರಬೇಕು. ಮನೆ ಇರುವುದದರಲ್ಲಿ ಚೆನ್ನಾಗಿ ಇಟ್ಟುಕೊಳ್ಳಬೇಕು. ಪ್ರತಿಯೊಂದು ಮನೆಯಲ್ಲಿಯೂ ಸಮಾಜದ ಒಬ್ಬ ಹುಡುಗ ಇದ್ದೇ ಇರುತ್ತಾನೆ.

ಇವಕ್ಕೆಲ್ಲಾ ಏನೂ ಖರ್ಚಾಗುತ್ತಿರಲಿಲ್ಲ. ಸಾವಿರ ರುಪಾಯಿ ಖರ್ಚು ಮಾಡಿದರೂ ಈ ಫಲ ಉಂಟಾಗುವುದಿಲ್ಲ. ಇದರಲ್ಲಿ ಸ್ವಾರ್ಥವಿಲ್ಲದುದರಿಂದ ನಡೆಯಿತು.

ಪೇಟೆಯ ಆಚಾರಿ ಬರೆದಿದ್ದ ಆಂಜನೇಯ ಬೊಂಬೆಯನ್ನು ಒಂದು

ಹುಡುಗ ಹುಡುಕಿ ಹಿಡಿದುಕೊಂಡು ಹೊರಟಿತು. ಸಮಾಜದ ಸದಸ್ಯರು ಊರಿನವರೆಲ್ಲಾ ಅದರ ಜತೆಯಲ್ಲಿ ಹೊರಟು ಕೈಸಾಲೆಯಲ್ಲಿ ಸೇರಿದರು. ಆ ಹಳ್ಳಿಯಲ್ಲಿ ಮಾವಿನಸೊಪ್ಪಿಗೂ ಬಾಳೆಮರಕ್ಕೂ ದರಿದ್ರವೇ. ಕೈಸಾಲೆಯ ಮುಂಭಾಗವೆಲ್ಲಾ ಲತಾಗೃಹವಾಗಿದ್ದಿತು. ಭಜನೆಯವರು, ಓಲೆಗದವರು, ಆದಿಕರ್ನಾಟಕ ಓಲಗದವರು ಸುತ್ತಲ ಕೆಲವು ಹಳ್ಳಿಯ ಜನ ಎಲ್ಲಾ ಸೇರಿದ್ದರು. ಕೆಲವು ಮನೆಯ ಮುಂದೆ ಅಧ್ಯಕ್ಷನಿಗೆ ಆರತಿ ಸಹ ಎತ್ತಿದರು. ಪ್ರತಿಯೊಬ್ಬರಿಗೂ ಅಂದಿನ ಅಧ್ಯಕ್ಷನನ್ನು ಕಂಡರೆ ಒಂದು ಬಗೆಯ ನಗು; ಒಂದು ಬಗೆಯ ಅಭಿಮಾನ. ಅವನನ್ನು ನೋಡಿದ ಕೂಡಲೇ ಭಾವಿಯಿಂದ ಅವನನ್ನು ಊರಿನವರೆಲ್ಲಾ ಸೇರಿ ಮೇಲಕ್ಕೆ ಎತ್ತಿದುದು ಅವರ ಜ್ಞಾಪಕಕ್ಕೆ ಬರುತ್ತಿದ್ದಿತು. ಕೆಲವು ಹುಡುಗಿಯರಂತೂ ಆರತಿ ಮುಕ್ಕಾಲುಪಾಲು ಎತ್ತುವಾಗ ಪೂರಾ ನಗುಬಂದು ತಡಿಯಲಾರದೆ ಓಡಿಯೇ ಬಿಟ್ಟರು. ಸೀತಾರಾಮುವಿನ ಇರುವಿಕೆಯೇ ನಗುವನ್ನು ಲಹರಿಲಹರಿಯಾಗಿ ಎಬ್ಬಿಸಲು ಸಾಕಾಯಿತು. ಅವನು ಏನನ್ನೂ ಮಾಡಬೇಕಾಗಿ ಉಳಿಯಲಿಲ್ಲ.

ಆವತ್ತು ಪ್ರತಿ ವರುಷಕ್ಕಿಂತ ಜನ ಹೆಚ್ಚಾಗಿ ಸೇರಲು ಒಂದು ಕಾರಣವಿತ್ತು. ಪ್ರತಿವರುಷ ಸಾರ್ವಜನಿಕ ವಾರ್ಷಿಕ ಸಭೆಯನ್ನು ಸರ್ಕಾರದವರು ನಾಲೆ ಕಾವಲಿಗಾಗಿ ಕಟ್ಟಿರುವ ಇನಿಸ್ಪೆಕ್ಷನ್ ಲಾಡ್ಜ್ ಎಂಬ ಗೃಹದಲ್ಲಿ ಮಾಡುತ್ತಿದ್ದರು. ಅದರಲ್ಲಿ ೧೫-೨೦ ಜನ ಮಾತ್ರ ಕುಳಿತು ಕೊಳ್ಳಲು ಸ್ಥಳವಾಗುತ್ತಿತ್ತು. ಆದರೆ ಸಭೆ ಮಾಡಲು ಬೇರೆ ಸಾರ್ವಜನಿಕ ಸ್ಥಳ ಯಾವುದೂ ಇರಲಿಲ್ಲ. ಆದರೆ ಈ ವರುಷ ದೇವಸ್ಥಾನದಲ್ಲಿ ವಿಶಾಲವಾದ ಮಂಗಳೂರು ಹಂಚಿನ ಕೈಸಾಲೆ ಸಿದ್ಧವಾಯಿತು. ಊರಿನ ಸಾರ್ವಜನಿಕ ಕಟ್ಟಡಗಳನ್ನೂ ದೇವಸ್ಥಾನವನ್ನೂ ಮಂಟಪ ಕೈಸಾಲೆಗಳನ್ನೂ ಒಂದು ಕಡೆಯಿಂದ, ಅಚ್ಚುಕಟ್ಟು ಮಾಡುತ್ತಿರುವ ರಿಟೈರ್ಡ್ ಓವರ್‌ಸಿಯರ್ ಆದ ಗ್ರಾಮದ ಛೇರ್ಮನ್ನರು ಒಬ್ಬ ಭಕ್ತನನ್ನು ಹಿಡಿದು ಕೈಸಾಲೆಯ ನೆಲಕ್ಕೆ ಉತ್ತಮವಾಗಿ ಬಣ್ಣದ ಸಿಮೆಂಟ್ ಕಾಂಕ್ರೀಟ್ ಹಾಕಿದರು. ಅರ್ಚಕ ಮನೋಮೋಹಕವಾಗಿ ದೇವರನ್ನು ಮೋಹಿನಿ ಅವತಾರ ಅಲಂಕರಿಸಿದ್ದ. ಸಾರ್ವಜನಿಕ ಸಭೆಯಾದ ಕೂಡಲೇ ದೇವರಿಗೆ ಮಂಗಳಾರತಿ. ಅನಂತರ ಪುಳಿಯೋಹರೆ ವಿನಿಯೋಗ. ಇನ್ನು ಯಾವ

ವಿವಿಧ ವಿನೋದಾವಳಿ ತಾನೇ ಇದಕ್ಕಿಂತ ಹೆಚ್ಚು ಮನೋರಂಜಕವಾಗಿ ದ್ದೀತು? ಮನೆಯಲ್ಲಿ ಮುದುಕರು ಹೆಳವರು ಕಾವಲುಗಾರರು ಇವರ ಹೊರತು ಯಾರೂ ಉಳಿಯಲಿಲ್ಲ. ಮಹಿಳೆಯರೆಲ್ಲಾ ತಮ್ಮ ಅತ್ಯಂತ ಮನೋಮೋಹಕವಾದ ಉಡುಪುಗಳನ್ನು ಧರಿಸಿ ವಾಸನೆಯ ಹೂವು ಗಂಧಗಳನ್ನು ತೊಡೆದುಕೊಂಡು ಭಗವಂತನ ಮೋಹಿನಿ ಅವತಾರದೊಂ ದಿಗೆ ಪ್ರತಿಸ್ಪರ್ಧಿಸುವರೋ ಎಂಬಂತೆ ನಲಿಯುತ್ತಿದ್ದರು. ಭಗವಂತನೇ ಒಬ್ಬೊಬ್ಬರ ಮುಂದೆ ಸೋಲನ್ನು ಒಪ್ಪಿಕೊಳ್ಳಬೇಕಾಗುತ್ತದೆ ಎಂದು ತೀರ್ಮಾನಿಸಿದ ಯುವಕರೂ ಉಂಟು. ಆದರೆ ಅದನ್ನು ಆ ಆಸ್ತಿಕರ ಮುಂದೆ ಬಾಯಲ್ಲಿ ಹೇಳುವ "ಪಾಷಂಡಿ" ಯಾರೂ ಇರಲಿಲ್ಲ.

ಸಂಘದ ಕಾರ್ಯದರ್ಶಿ ಸುದರ್ಶನ ಎಲ್ಲಾ ಏರ್ಪಾಡುಗಳನ್ನೂ ಬಹು ವಿಚಕ್ಷಣೆಯಿಂದ ಮಾಡಿದ್ದ. ಇದಕ್ಕೆಲ್ಲಾ ಮುಖ್ಯ ಸಹಾಯಕ ರಂಗ ಪತಿಯೆ. ಮಲ್ಲಿಗೆಹಳ್ಳಿಯವರು ರಂಗಪತಿ "ಈ ಹಳ್ಳಿಯ ಕೆಲಸಗಳಿ ಗೆಲ್ಲಾ ಜಾರಿ ಇಲಾಖೆ" ಎನ್ನುತ್ತಾರೆ. ಅಂದರೆ ಗ್ರಾಮದ ಯಾವ ಸಾರ್ವಜನಿಕ ಕೆಲಸವನ್ನು "ಪ್ಲಾನು" ಮಾಡಿಕೊಟ್ಟು ಇದು ಹೀಗೆ ಆಗಬೇಕು ಎಂದು ರಂಗಪತಿಗೆ ಹೇಳಿದರು. ರಂಗಪತಿ ಬೇಕಾದ ಜನ ಗಳನ್ನು ಸೇರಿಸಿ ಅದನ್ನು ತತ್‌ಕ್ಷಣ ಮಾಡಿಬಿಡುತ್ತಾನೆ. ಮಲ್ಲಿಗೆಹಳ್ಳಿಯ ಜನರಿಗೆ ಮೊದಲು ಮೊದಲು ಒಂದು ಸಾರ್ವಜನಿಕ ಸಭೆ ಹೇಗೆ ನಡೆಸ ಬೇಕು; ಒಂದು ವಿವಿಧ ವಿನೋದಾವಳಿ ಹೇಗೆ ಮಾಡಬೇಕು ಎಂಬು ದನ್ನು ಹೇಳಿಕೊಟ್ಟುದು ಆಂಜನೇಯ ಸಮಾಜವೇ. ಇರ''. ರಂಗಪತಿ ಎಲ್ಲರನ್ನೂ ಸರಿಯಾಗಿ ಕೂರಿಸಿದ. ನಾರಾಯಣ ಪೋಸ್ಟುಮಾಸ್ಟರರ ಹತ್ತಿರ ಏನೋ ಹೇಳಿದ. ಪೋಸ್ಟುಮಾಸ್ಟರರು ತಲೆಯಲ್ಲಾಡಿಸಿದರು. ಸುದರ್ಶನ "ಮಾನ್ಯ ಅತಿಥಿ ಸೀತಾರಾಮ್‌ರವರ ಪರಿಚಯ ವಿಚಾರ ಎಲ್ಲಾನೂ ಅವರ ಮಿತ್ರರೇ ಆದ ನಾರಾಯಣರವರು ಹೇಳುತ್ತಾರೆ. ಅನಂತರ ಸಂಘದ ಪರವಾಗಿ ಅವರಿಗೆ ವಂದನೆ ಅರ್ಪಿಸುತ್ತೇವೆ" ಎಂದ. ಸೀತಾರಾಮನ ಹೆಸರು ಹೇಳುವಾಗ ಖಂಡಿತವಾಗಿ ನಗಬಾರದೆಂದು ಅವನು ಮಾಡಿಕ್ಕೊಂಡಿದ್ದರೂ ಅವನಿಗೆ ನಗು ಬಂದೇಬಂತು. ಜನರೆಲ್ಲಾ ನಕ್ಕೇಬಿಟ್ಟರು. ಎಲ್ಲರಿಗಿಂತ ಹೆಚ್ಚಾಗಿ ಸೀತಾರಾಮುವಿಗೇ ನೆನಸಿಕೊಂಡು ನೆನಸಿಕೊಂಡು ನಗು ಬರುತ್ತಿದ್ದಿತು. ಜನ ತಮ್ಮ ನಗುವನ್ನು ಚಪ್ಪಾಳೆ

ಹೊಡೆದು ಮುಚ್ಚಿಕೊಂಡಿತು. ಅಂತು ಅಂದಿನ ವಾತಾವರಣ ಬಹಳ ಹಾಸ್ಯವಾಗಿ ಸರಸವಾಗಿ ಗಾಳಿಯಂತೆ ಹಗುರವಾಗಿದ್ದಿತು.

ನಾರಾಯಣ ಪರಿಚಯ ಭಾಷಣ ಮಾಡುತ್ತಾನೆ ಎಂದು ಸೀತಾ ರಾಮುವಿಗೆ ತಿಳಿದಕೂಡಲೇ ಅವನು ಸುದರ್ಶನನಿಗೆ ಗಟ್ಟಿಯಾಗಿಯೇ "ಪರಿಚಯ ಭಾಷಣ ಯಾಕೆ. ನನ್ನ ಪರಿಚಯ ಇಲ್ಲಿ ಯಾರಿಗೆ ಗೊತ್ತಿಲ್ಲ. ಬೇಕಾದರೆ ನಾನೇ ನನ್ನ ಪರಿಚಯ ಹೇಳುತ್ತೇನೆ" ಎಂದ. ಪೋಸ್ಟು ಮೇಷ್ಟರು "ಉಂಟೆ. ನಿಮಗೆ ಸಂಕೋಚ ಅಂದರೆ ನಮ್ಮ ಕರ್ತವ್ಯ ನಮಗೆ ತಿಳಿಯದೆ? ಮತ್ತೂ ಇದು ನಮ್ಮ ಸಂತೋಷ" ಎಂದರು. ಲಲಿತಮ್ಮ ಅತ್ಯಂತ ಕೋಮಲವಾದ ಕಂಠದಲ್ಲಿ "ಪ್ರಾರ್ಥನೆ" ಮಾಡಿ ದಳು. ಅನಂತರ ನಾರಾಯಣ ಸೀತಾರಾಮುವನ್ನು ಕುರಿತು ಭಾಷಣ ಮಾಡಿದ. ಸೀತಾರಾಮುವಿನ ಯೋಗ್ಯತೆ 'ವಿದ್ವತ್ತು' ಅವನು ಪ್ರತಿ ಯೊಂದು ಪರೀಕ್ಷೆಯನ್ನೂ ಒಂದೇ ಸಲಕ್ಕೆ ಪ್ಯಾಸು ಮಾಡಿದುದು, ಈಗ ಅವನಿಗೆ ಉದ್ಯೋಗ ಸಿಕ್ಕದೆ ಇರುವುದಕ್ಕೆ ಕಾರಣ ಲೋಕದ ನಿರುದ್ಯೋ ಗದ ಪರಿಸ್ಥಿತಿಯೇ ಹೊರತು ಅವನ ಕಡಿಮೆ ಶಕ್ತಿಯಲ್ಲದುದು, ಇವುಗಳ ನ್ನೆಲ್ಲಾ ಹೇಳಿ "ಮಹಿಳೆಯರೇ ಮಹನೀಯರೆ, ಬರಿಯ ಇಷ್ಟೇ ಸೀತಾ ರಾಮುವಿನ ಮಹಿಮೆಯಾಗಿದ್ದರೆ—ಅದು ಹೆಚ್ಚೇಆದರೂ—ನಾವು ಅವರು ನಮಗೆ ಅಧ್ಯಕ್ಷರಾಗಿ ದೊರೆತುದಕ್ಕೆ ಅಷ್ಟೊಂದು ಹೆಮ್ಮೆ ಪಡುತ್ತಿರಲಿಲ್ಲ. ಇದು ಸಾಧಾರಣವಾಗಿ ವಿದ್ಯಾವಂತರಾದ ಎಲ್ಲರಲ್ಲಿಯೂ ಇದೆ. ಆದರೆ ಯಾವ ವಿದ್ಯಾವಂತರಲ್ಲಿಯೂ ಇಲ್ಲದ ಎರಡು ಹೆಚ್ಚು ಗುಣಗಳು ಇವತ್ತಿನ ಅಧ್ಯಕ್ಷರಲ್ಲಿ ಇವೆ. ಅವುಗಳಲ್ಲಿ ಮೊದಲನೆಯದು ಇವರು ಎಂತಹ ಆಳವಾದ ಭಾವಿಯನ್ನು ಬೇಕಾದರೂ ಇಳಿದು ಆಳ ನೋಡುವ ಶಕ್ತಿಯುಳ್ಳವರಾಗಿ ರುವುದು. ಎರಡನೆಯದು ಸ್ತ್ರೀ ಜಾತಿಯನ್ನೂ ಹೆಂಡತಿಯನ್ನೂ ಕಂಡರೆ ಇವರಿಗೆ ಇರುವ ಅಸಾಧಾರಣವಾದ ಗೌರವ. ಇವರು ಪಟ್ಟಣವಾಸದವ ರಾದರೂ ಹಳ್ಳಿಯ ಬೆಸ್ತರಿಗಿಂತ ಹೆಚ್ಚು ಸ್ವಾಭಾವಿಕವಾದ ಚಾಕಚಕ್ಯ ದಿಂದ ನೆನ್ನೆ ಅನಂತುವಿನ ಬಾವಿಯನ್ನು ಇಳಿದರೆಂಬುದು ನಿಮಗೆ ತಿಳಿ ಯದೆ ಇರಬಹುದು. ಎರಡನೆಯ ದೊಡ್ಡ ಗುಣವೆಂದರೆ ಇವರಿಗೆ ಸ್ತ್ರೀಯ ರಲ್ಲಿರುವ ಗೌರವ. ನಮ್ಮ ಶತ್ರುಗಳು ನಾವು ಸ್ತ್ರೀಯರಿಗೆ ಸರಿಯಾದ ಸ್ಥಾನವನ್ನು ಕೊಟ್ಟಿಲ್ಲವೆಂದೂ ಅವರನ್ನು ನಮಗಿಂತ ಕೀಳಾಗಿ ನೋಡು

ತ್ತಿದ್ದೇವೆಂದೂ ನಮ್ಮ ಮೇಲೆ ಆಪಾದನೆಮಾಡುತ್ತಿದ್ದಾರೆ. ಇದು ನಿಜ ವಾದುದಲ್ಲವೆಂಬುದಕ್ಕೆ ನಮ್ಮ ಇವತ್ತಿನ ಅಧ್ಯಕ್ಷರಂತಹವರೇ ಸಾಕ್ಷಿ. ಈವತ್ತಿನ ಅಧ್ಯಕ್ಷರು ಭಾವಿಯಲ್ಲಿ ಇಳಿದು ಏನು ಮಾಡುತ್ತಿದ್ದರು ಗೊತ್ತೇ? ಹೆಂಡತಿಯನ್ನು ಕುರಿತು ತಪಸ್ಸು ಮಾಡುತ್ತಿದ್ದರು. ಅವರ ಹೆಂಡತಿ ಯವರು ಮೇಲೆ ಬಗ್ಗಿ ನೋಡುತ್ತಿರುವಾಗ ಇವರು ನಡುನೀರಿನಲ್ಲಿ ನಿಂತು ಕೊಂಡು ಅವರಿಗೆ ಕೈಮುಗಿದು ತಪಸ್ಸು ಮಾಡುತ್ತಿದ್ದರು. ಇಂತಹ ಭಾರತ ಇತಿಹಾಸ ಭೂಷಣರು ಸಿಕ್ಕುವುದು ಕಷ್ಟ. ಈ ವಿಚಾರ ನಾನು ಕೇಳಿದಾಗ ಸೀತಾರಾಮ್‌ರವರು "ಕೈ ಮುಗಿಯೋದೊಂದೇ ಅಲ್ಲ. ಕಾಲನೂ ಕಟ್ಟುತೀನಿ" ಅಂದರು. ಸ್ವಾಮಿಗಳೇ, ಸಮಾಜದ ಸುಧಾರ ಕರು ಒಬ್ಬೊಬ್ಬರು ಆಗಾಗ್ಗೆ ಜನಿಸುತ್ತಾರೆ. ಅದು ಕಾಲದ ಮಹಿಮೆ. "ಯತ್ರನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ" ಎಂಬ ಸತ್ಯ ವನ್ನು ಹಾಡಿದ ಈ ದೇಶದಲ್ಲಿ ಇಂತಹ ಸತ್ಯ ಪ್ರತಿಪಾದಕರು ಜನಿಸುವುದು ಸ್ವಾಭಾವಿಕವೇ ಆಗಿದೆ. ಭಾರತದಲ್ಲಿ ಸ್ತ್ರೀಯರಿಗೆ ಸರಿಯಾದ ಗೌರವ ದೊರೆಯುತ್ತಿಲ್ಲ ಎನ್ನುವವರು ಇನ್ನು ಬಾಯಿ ಗುಂಡಿ ಹಾಕಿಕೊಳ್ಳಲಿ. ಮುಂದೆ ಅಳಿಯರಾಗುವವರೆಲ್ಲಾ ಸೀತಾರಾಮ್‌ರವರ ಮೇಲುಪಂಗ್ತಿ ಅನುಸರಿಸಲಿ".

ಸಭೆಯಲ್ಲಿ ಎಲ್ಲರ ಮುಖಗಳೂ, ಸ್ತ್ರೀಯರ ಮಧ್ಯದಲ್ಲಿ ಕಮಲದ ಸಂದಿಯಲ್ಲಿ ದುಂಬಿಯಂತೆ ಅವಿತುಕೊಂಡಿದ್ದ ವೈದೇಹಿಯ ಕಡೆ ಹೋದುವು. ನಾರಾಯಣನ ಭಾಷಣದ ನಂತರ ಕರತಾಡನ ಮಹತ್ತರ ವಾಯಿತು. ಸಂಪಿಗೆಯ ಮುಸುಕಿನಿಂದ ಆಗತಾನೆ ಹೊರಕ್ಕೆ ಅರಳುತ್ತಿ ರುವ ಮೊಗ್ಗಿನಂತೆ ಸ್ತ್ರೀಯರ ಸಂದಣಿಯಲ್ಲಿ ಸ್ವಲ್ಪ ಮಾತ್ರ ತಲೆ ಎತ್ತಿ ಕೊಂಡು ಕುಳಿತಿದ್ದ ವೈದೇಹಿಯನ್ನು ನೋಡಿ, ಸೀತಾರಾಮುವಿಗೆ ನಾರಾ ಯಣನ ಮಾತಿನಿಂದ ಸ್ವಲ್ಪವೂ ಸಿಟ್ಟು ಬರಲಿಲ್ಲ. ವಾತಾವರಣವು ಪೂರ್ಣವಾಗಿ ವಿನೋದಮಯವಾಯಿತು. ಆದರೆ ಯಾರೊಬ್ಬರಿಗೂ ನಗು ತಡೆಯುವುದು ಸಾಧ್ಯವಾಗಲಿಲ್ಲ. ಸೀತಾರಾಮುವಿನಲ್ಲಿಯೂ ವೈದೇಹಿಯಲ್ಲಿಯೂ ಜನರ ವಿಶ್ವಾಸ ಅತ್ಯಂತ ಹೆಚ್ಚಾಯಿತು. ಸೀತಾ ರಾಮು ನಿಜವಾದ ಸುಧಾರಕ. "ನಮ್ಮ ದೇಶದ ಸ್ತ್ರೀಯರಿಗೆ ಇರುವ ಸ್ವಾತಂತ್ರ್ಯ ಸಾಲದು; ಅವರಿಗೆ ವಿದ್ಯೆ ಇನ್ನೂ ಹೆಚ್ಚಾಗಿ ಕೊಡಬೇಕು.

ಆಸ್ತಿಯಲ್ಲಿ ಭಾಗ ಕೊಟ್ಟು ಅವರನ್ನು ಎಲ್ಲಾ ವಿಧದಲ್ಲಿಯೂ ಪುರುಷರಿಗೆ ಸಮಾನರಾಗಿ ಮಾಡಬೇಕು'' ಎಂಬುದು ಅವನ ಅಭಿಪ್ರಾಯವಾಗಿದ್ದಿತು. ಆದರೆ ಇಷ್ಟೊಂದು ಚರ್ಚೆ ನಡೆದ ಮೇಲೆ ಸ್ತ್ರೀ ಸ್ವಾತಂತ್ರ್ಯಕ್ಕೆ ಸಂಬಂಧಪಟ್ಟ ಮಾತು ಒಂದೂ ಅವನ ಬಾಯಿಂದ ಹೊರಡಲೇ ಇಲ್ಲ. ಎದುರಿಗೆ ಕುಳಿತಿದ್ದ ನಾರಾಯಣನನ್ನು ನೋಡಿದ ಕೂಡಲೇ ಅವನ ಮಾತು ಅವನಲ್ಲಿಯೇ ಉಳಿದು ನಗು ಬಂದುಬಿಡುತ್ತಿದ್ದಿತು. ಕೂಡಲೇ ಪ್ರೇಕ್ಷಕರಲ್ಲಿಯೂ ನಗು ಬಂದುಬಿಡುತ್ತಿದ್ದಿತು.

ಆ ವರುಷ ಆಂಜನೇಯ ಸಮಾಜದ ಸಭೆ ಮೂರನೆ ದಿನವೂ ನಡೆಯಿತು. ಇದಕ್ಕೆ ಕಾರಣ ಸಮಾಜದ ಇಬ್ಬರು ಸದಸ್ಯರು ಆ ವರುಷ ಮೃತರಾಗಿದ್ದರು. ಸುದರ್ಶನ ಆಗ ಒಂದು ಹೊಸ ಏರ್ಪಾಡುಮಾಡಿದ್ದ. ಯಾರು ಆಂಜನೇಯ ಸಮಾಜದ ಸದಸ್ಯರಾಗಿದ್ದು ಮೃತರಾಗುತ್ತಾರೋ ಅವರ ಜೀವನ ಚರಿತ್ರೆಯನ್ನು ಊರಿನವರು ಯಾರಾದರೂ ಬರೆಯಬೇಕು. ಎರಡು ಮೂರು ಜೀವನ ಚರಿತ್ರೆ ಬಂದರೆ ಆಗ ಯಾವುದು ಚೆನ್ನಾಗಿದೆ ಎಂಬುದನ್ನು ಪರಿಗಣಿಸಲು ಒಂದು ಸಮಿತಿಮಾಡಿ, ಆ ಸಮಿತಿಯಲ್ಲಿ ಉತ್ತಮವೆಂದು ತೀರ್ಮಾನವಾದುದಕ್ಕೆ ಒಂದು ಬಹುಮಾನವನ್ನು ಕೊಡಬೇಕು. ಆ ಜೀವನ ಚರಿತ್ರೆಯನ್ನು ಊರಿನಲ್ಲಿ ಸಾರ್ವಜನಿಕ ಸಭೆಯ ಎದುರಿಗೆ ಓದಿ ಆ ಸಭೆಯಲ್ಲಿಯೇ ಅಧ್ಯಕ್ಷರಿಂದ ಬಹುಮಾನ ಪಡೆಯಬೇಕು. ಬಹುಮಾನದ ಮೂಲ್ಯ ಎಂಟಾಣೆ. ಆ ವರುಷ ಸಂಘದ ಇಬ್ಬರು ಸದಸ್ಯರು ಮೃತರಾಗಿದ್ದರು. ಒಬ್ಬ ಪೆಮ್ಮಾಳು. ಲೋವರ್ ಸೆಕಂಡರಿ ತರಗತಿಯ ವಿದ್ಯಾರ್ಥಿ. ಇನ್ನೊಬ್ಬ ಗುಂಡ. ಮೂರನೆ ತರಗತಿಯ ವಿದ್ಯಾರ್ಥಿ. ಅವರ ಇತಿಹಾಸ ಬರೆದಿದ್ದವರು ಮೂರು ಮೂರು ಮಂದಿ. ಊರಿನಲ್ಲಿ ಇದೇ ದೊಡ್ಡ ವಿಚಾರವಾಗಿದ್ದಿತು. ಮೂರು ಜನ ಚರಿತ್ರೆ ಬರೆದಿದ್ದಾರಂತೆ, ಬಹುಮಾನ ಯಾರಿಗೆ ಬರುತ್ತೋ ನೋಡಬೇಕು ಎಂದು ಎಲ್ಲರೂ ಹೇಳಿಕೊಳ್ಳುತ್ತಿದ್ದರು. ಆ ಬರೆಯುತ್ತಿದ್ದವರಿಗೆ ತಾನೆ ಏನು ಉತ್ಸಾಹ! ನಿಜವಾದ ನೋಬೆಲ್ ಪಾರಿತೋಷಕ ಬರುತ್ತೆ ಎಂದು ತಿಳಿದರೂ ಹುಡುಗರು ಅಷ್ಟು ಉತ್ಸಾಹದಿಂದ ಜೀವನ ಚರಿತ್ರೆ ಬರೆಯುವುದಿಲ್ಲ. ಬರೆಯಿಸಿಕೊಳ್ಳುವ ಗೌರವವೂ ಆ ವಯಸ್ಸಿನ ಹುಡುಗರಿಗೆ ಮತ್ತೆ ಎಲ್ಲೂ ದೊರೆಯಲಾರದು; ಮಲ್ಲಿಗೆಹಳ್ಳಿಯಲ್ಲಿಯೂ ಈ ಸನ್ಮಾನ ದೊರೆತುದೂ ಪೆಮ್ಮಾಳು, ಗುಂಡ ಇವರಿಬ್ಬರಿಗೆಯೇ.

ಆ ವರುಷ ವಾರ್ಷಿಕೋತ್ಸವವಾದ ಮಾರನೆ ದಿನ ಮತ್ತೆ ಅದೇ ದೇವಸ್ಥಾನದ ಕೈಸಾಕಿಯಲ್ಲಿ ಸಭೆಯನ್ನು ಏರ್ಪಡಿಸಿದರು. ನಾರಾಯಣ ಅಧ್ಯಕ್ಷನಾದ. ಎರಡು ಜೀವನ ಚರಿತ್ರೆಗಳು ವಿದ್ಯಾರ್ಥಿಗಳೇ ಬರೆದುವು ಒಪ್ಪಿಗೆಯಾಗಿ ಬಹುಮಾನಕ್ಕೆ ಅರ್ಹತೆಯನ್ನು ಪಡೆದಿದ್ದವು. ಯಾವ ರಾಮನೂ ಇಷ್ಟು ಶ್ರದ್ಧಾ ಭಕ್ತಿಯಿಂದ ಆದರ ಉತ್ಸಾಹದಿಂದ ತನ್ನ ಚರಿತ್ರೆಯನ್ನು ಒರೆದ ವಾಲ್ಮೀಕಿಯನ್ನು ಪಡೆಯಲಿಲ್ಲ. ಊರಿನ ಇಬ್ಬರು ಹುಡುಗರ ಶ್ರಾದ್ಧದಿನವನ್ನು ಊರಿಗೆ ಊರೇ ಜಾತಿ ಮತವ್ಯತ್ಯಾಸವಿಲ್ಲದೆ ಆಚರಿಸುತ್ತಿರುವಂತೆ ತೋರಿತು. ಮೊದಲು ಸುದರ್ಶನನು ಬರೆದಿದ್ದ ಪೆಮ್ಮಾಳು ಚರಿತ್ರೆ ಪಠನವಾಯಿತು. ಪೆಮ್ಮಾಳುವೇನೋ ಆ ವಯಸ್ಸಿಗೇ ಪ್ರಚಂಡನಾಗಿದ್ದನು. ಸ್ವಲ್ಪ ಹೆಚ್ಚು ಕಡಿಮೆ ಅವನೂ ಸುದರ್ಶನನ ಸ್ವಭಾವದವನೇ. ಪೆಮ್ಮಾಳು ಯಾವ ನದಿಯನ್ನು ಬೇಕಾದರೂ ಈಜುತ್ತಿದ್ದ; ಯಾವ ಮರವನ್ನು ಬೇಕಾದರೂ ಹತ್ತುತ್ತಿದ್ದ; ಯಾವ ಪೋಲಿ ಕುದುರೆಯ ಮೇಲೆಯೂ ಸವಾರಿ ಮಾಡುತ್ತಿದ್ದ. ಅವನಿಗೆ ವಯಸ್ಸು ಸಣ್ಣದಾಗಿದ್ದರೂ ಆ ವಯಸ್ಸಿಗೇ ಅವನಿಗೆ ಅನೇಕ ವಿದ್ಯೆಗಳು ಬಂದಿದ್ದುವು. ಹಗ್ಗ ಹೊಸೆಯುವುದರಲ್ಲಿ, ಕುಕ್ಕೆ ಮುಂಕರಿ ಹೆಣೆಯುವುದರಲ್ಲಿ, ನೇಗಿಲು ಕೆತ್ತುವುದರಲ್ಲಿ, ಗೋಡೆ ಹಾಕುವುದರಲ್ಲಿ, ಮನೆ ಕೈಯಾಡುವುದರಲ್ಲಿ, ಯಾವುದರಲ್ಲಿಯೂ ಅವನಿಗೆ ಪರಿಶ್ರಮವಿಲ್ಲದೆ ಇರಲಿಲ್ಲ. ಸನಾತನಗಳಿಗೂ ಹರಿಜನರಿಗೂ ಮಲ್ಲಿಗೆಹಳ್ಳಿಯಲ್ಲಿ ಬಾಂಧವ್ಯ ಮೊದಲು ಉಂಟುಮಾಡಿದವನೇ ಅವನು.

ಇದು ದೊಡ್ಡ ಸಂಸ್ಕಾರಕರಿಗೂ ಕಷ್ಟವಾದ ಕೆಲಸ. ಮಲ್ಲಿಗೆಹಳ್ಳಿಯ ಆಂಜನೇಯ ಸಂಘದ ಉತ್ಸವ, ಸಾರ್ವಜನಿಕಸಭೆಯ ದಿನಗಳಲ್ಲಿ ಪೆಮ್ಮಾಳು ಹರಿಜನರ ಓಲಗ ತಮಟೆ ತರಿಸುತ್ತಿದ್ದ. ಅವರು ದೇವರಮುಂದೆ ನಡುಬೀದಿಯಲ್ಲಿ ಹೋಗುತ್ತಿರುವಾಗ, ಜನರು ಜತೆಯಲ್ಲಿ ನುಗ್ಗಿ ಮುಂದೆ ತಳ್ಳುತ್ತಿರುವಾಗ, ಹಿಂದೆ ವೈದಿಕರು ವೇದಗಳನ್ನು ಹೇಳುತ್ತಿರುವಾಗ, ಬಾಗಿಲು ಬಾಗಿಲುಗಳಲ್ಲಿಯೂ ಸ್ತ್ರೀಯರು ನಿಂತು ಭಗವಂತನ ದರ್ಶನ ಮಾಡುತ್ತಿರುವಾಗ, ಹರಿಜನ ಯಾರು? ಅರಿಜನ ಯಾರು? ಆ ನೂಕುನುಗ್ಗಾಟದಲ್ಲಿ ಸ್ಪೃಶ್ಯರು ಯಾರು ಅಸ್ಪೃಶ್ಯರು ಯಾರು? ಪೆಮ್ಮಾಳು ಸಮಾಜದ ಉತ್ಸವಕ್ಕೆ ಹರಿಜನರನ್ನು ಓಲಗಕ್ಕೆ ಕರೆಯುವವರೆಗೆ ಹರಿಜನರು ಓಲಗಕ್ಕೆ

ಊರೊಳಕ್ಕೆ ಬಂದಿರಲಿಲ್ಲ. ಹಾಗೆಯೇ ಅವರು ದೇವರನ್ನು ನೋಡಲೂ ಬಂದಿರಲಿಲ್ಲ. ಈಗ ತಮಟೆ ಓಲಗದ ಜತೆಯಲ್ಲಿ ಹರಿಜನ ಸ್ತ್ರೀ ಪುರುಷರೂ ಉತ್ಸವಾದಿಗಳಿಗೆ ಬರಲು ಪ್ರಾರಂಭಿಸಿದರು. ಆ ವೇಳೆಯವರೆಗೆ ಎಷ್ಟು ಉತ್ಸವ ಎಲ್ಲಿ ಆದರೂ, ಹರಿಜನರು ತಮಗೆ ಅದು ಸಂಬಂಧವೇ ಇಲ್ಲದಂತೆ ಕ್ರಿಸ್ತರಂತೆ, ಇರುತ್ತಿದ್ದರು.

ಈಗ ಪೆಮ್ಮಾಳು ಯಾವಾಗ ಒಂದು ಸಲ ಸಮಾಜದ ಉತ್ಸವಕ್ಕೆ ಸಾರ್ವಜನಿಕ ಸಭೆಗೆ, ಹರಿಜನರನ್ನು ಕರೆದನೋ ಅಲ್ಲಿಂದ ಜನ ಸ್ವಲ್ಪ ಹಿಂದು ಮುಂದು ನೋಡುತ್ತಾ ಪ್ರತಿ ಉತ್ಸವಕ್ಕೂ ಆ ಒಲಗ ಕರೆಯಲು ಪ್ರಾರಂಭಿಸಿದರು. ಆ ಓಲಗದ ಜಬರ್ು ನಿಮ್ಮ ಡೋಲು ಕಳಾರಟ್ಟು ವಾದ್ಯಗಳಿಗೆ ಎಂದಿಗೂ ಬರುವುದಿಲ್ಲ. ಆದುದರಿಂದ ಆ ಓಲಗ ಎಂದ ಕೂಡಲೇ ಜನರ ಗುಂಪೂ ಏರುತ್ತಿದ್ದಿತು. ಪೆಮ್ಮಾಳು ಈ ಉದ್ದೇಶ ಗಳನ್ನೆಲ್ಲಾ ಇಟ್ಟುಕೊಂಡು ಹರಿಜನರ ಓಲಗ ತರಿಸುತ್ತಿದ್ದನೆಂದಲ್ಲ. ಉತ್ಸವ ಜಬರ್ು ಆಗಲಿ ಎಂಬುದು ಅವನ ಉದ್ದೇಶ. ಅದರಿಂದ ಉಂಟಾದ ಫಲಗಳು ಇವು. ಪೆಮ್ಮಾಳು ಬ್ರಾಹ್ಮಣ ಬ್ರಾಹ್ಮಣೇತರ ಸೌಹಾರ್ದವನ್ನೂ ಹೀಗೆಯೇ ಸ್ಥಾಪಿಸಿದ. ಬ್ರಾಹ್ಮಣೇತರರ ಭಜನೆಗೆ ಸಮಾಜದ ಹುಡುಗ ರನ್ನೆಲ್ಲಾ ಕರೆದುಕೊಂಡು ಹೋಗುತ್ತಿದ್ದ. ಯೌವನದ ಪ್ರಾದುರ್ಭಾವ ಉಂಟಾಗುವುದಕ್ಕೆ ಮುಂಚೆ ಇಷ್ಟೊಂದು ಗಲಾಟೆ ನಡೆಸಿದ ಪೆಮ್ಮಾಳುವಿನ ಜೀವನಚರಿತ್ರೆಯನ್ನು ಸುದರ್ಶನ ಬರೆದು ಪಠಿಸಿದ. ಅದು ಜನರ ಮನಸ್ಸನ್ನು ಆಕರ್ಶಿಸಿತು. ಸುದರ್ಶನ ಸ್ವಭಾವದಿಂದ ಬುದ್ಧಿವಂತ. ಬಾಲ್ಯದಲ್ಲಿಯೂ ಲೇಖನಿ ಅವನು ಹೇಳಿದಂತೆ ಕೇಳುತ್ತಿತ್ತು. ಗುಂಡುರಾಯನ ಚರಿತ್ರೆಯಲ್ಲಿ ಹೆಚ್ಚು ವಿಚಾರಗಳಿರಲಿಲ್ಲ. ಪಾಪ ಹನ್ನೆರಡು ವರುಷದ ಹುಡುಗ ಆ ವಯಸ್ಸಿನಲ್ಲಿ ಸಾರ್ವಜನಿಕರ ಗಮನಕ್ಕೆ ಬರಬಹುದಾದ ಯಾವ ಕೆಲಸ ತಾನೆ ಮಾಡಿರುತ್ತಾನೆ? ಆದರೂ ಗೊರವಯ್ಯ ಅವನ ಬಾಲ್ಯಲೀಲೆ, ಅವನ ಮೃದು ಸ್ವಭಾವ, ತರಗತಿಯಲ್ಲಿಯೂ ಊರಿನಲ್ಲಿಯೂ ಅವನು ಎಲ್ಲರಲ್ಲಿಯೂ ಸಂಪಾದಿಸಿದ್ದ ವಿಶ್ವಾಸ, ಎಲ್ಲಾದಕ್ಕಿಂತ ಹೆಚ್ಚಾಗಿ ಅವನ ಮಾತಾಪಿತೃಗಳಿಗೆ ಅವನಲ್ಲಿದ್ದ ಆಸೆ ನಂಬಿಕೆ, ಇವುಗಳನ್ನೆಲ್ಲಾ ಕಣ್ಣು ಕಟ್ಟುವಂತೆ ವಿವರಿಸಿದ. ಎರಡು ಜೀವನ ಚರಿತ್ರೆಗಳೂ ಜನರ ಮನಸ್ಸನ್ನು ಪೂರ್ಣವಾಗಿ ಆಕರ್ಷಿಸಿದುವು. ನೆರೆದಿದ್ದ ಸ್ತ್ರೀ ಪುರುಷರ ಕಣ್ಣುಗಳಿಂದ

ನೀರು ಘಟಘಟನೆ ಉದುರಿದುವು. ವಾತಾವರಣದಲ್ಲಿ ಒಂದು ಶಾಂತಿಯೂ ಪಾವಿತ್ರ್ಯ ಮನೋಭಾವವೂ ಉಂಟಾಯಿತು.

ಇಂತಹ ಸಣ್ಣ ಬಾಲಕರ ಚರಿತ್ರೆಯನ್ನು ಜೀವನ ಚರಿತ್ರೆಯಾಗಿ ಬಾಲಕರೇ ಬರೆಯಬೇಕಾದಾಗ ತೋರುವ ಒಂದೆರಡು ಕುಂದುಗಳು ಆ ಜೀವನ ಚರಿತ್ರೆಯಲ್ಲಿ ತೋರದೆ ಇರಲಿಲ್ಲ. ರಾಮನು ಬಾಳಿದುದರಿಂದ ಆತನ ಚರಿತ್ರೆಯನ್ನು ವಾಲ್ಮೀಕಿ ಚಿತ್ರಿಸಿದ. ಅರ್ಜುನನು ಭಾರತದಲ್ಲಿ ಬೆಳಗಿದುದರಿಂದ ಅವನ ಚರಿತ್ರೆಯನ್ನು ವ್ಯಾಸ ಬರೆದ. ನಾಯಕರಿಗೆ ಅನುಗುಣರಾದ ಚರಿತ್ರಕಾರರೂ ಚರಿತ್ರಕಾರರಿಗೆ ಅನುಗುಣರಾದ ನಾಯಕರೂ ಜನಿಸುತ್ತಾರೆ. ಗುಂಡುರಾಯನ ಚರಿತ್ರೆಯಲ್ಲಿ ಗೊರವಯ್ಯ ಮೊದಲು ಮಲ್ಲಿಗೆಹಳ್ಳಿಯ ಸನ್ನಿವೇಶ ಅದರ ಪ್ರಕೃತಿ ಸೊಬಗು ಇವುಗಳನ್ನೆಲ್ಲಾ ವಿವರಿಸಿ ಆ ಗ್ರಾಮದ ಜನರ ಲಕ್ಷಣವನ್ನೂ ಸ್ವಭಾವವನ್ನೂ ಸುಮಾರಾಗಿ ವಿವರಿಸಿ ಕೊನೆಯಲ್ಲಿ ಇಂತಹ ಹಳ್ಳಿಯಲ್ಲಿ ಗುಂಡುರಾಯ ಇಂತಹ ಸಂಸಾರದಲ್ಲಿ ಜನಿಸಿದ ಎಂದು ಪ್ರಾರಂಭಿಸಿದ್ದ. ಅಧ್ಯಕ್ಷನಾಗಿದ್ದ ನಾರಾಯಣ ಕೊನೆಯಲ್ಲಿ ಮುಕ್ತಾಯ ಭಾಷಣ ಮಾಡಿ, ಸುದರ್ಶನನಿಗೂ ಗೊರವಯ್ಯನಿಗೂ ಸಮಾಜದ ಬಹುಮಾನವಾದ ಎಂಟು ಎಂಟು ಆಣೆಗಳನ್ನು ಕೊಡುವುದಕ್ಕೆ ಮುಂಚೆ ಒಂದು ಮಾತನ್ನು ಹೇಳಿದ. “ಮಹನೀಯರೆ, ಇವತ್ತು ನೀವು ಎರಡು ಜೀವನ ಚರಿತ್ರೆ ಕೇಳಿದಿರಿ. ಗುಂಡುರಾಯನ ಜೀವನ ಚರಿತ್ರೆಯಲ್ಲಿ ಮುಕ್ಕಾಲು ಪಾಲು ಈ ಊರು ವರ್ಣನೆಯೇ ಆಯಿತು. ಇದನ್ನು ಕೇಳಿ ನನಗೆ ನಮ್ಮ ಮೇಷ್ಟರು ಹೇಳುತ್ತಿದ್ದ ಒಂದು ಸಂಗತಿ ಜ್ಞಾಪಕ ಬಂತು. ಅವರು ಒಬ್ಬ ಹುಡುಗನನ್ನು ಆನೆ ಹೇಗಿದೆ ಎಂಬುದಾಗಿ ಕೇಳಿದುದಕ್ಕೆ ಅವನು ಕುದುರೆಯನ್ನು ಮೊದಲಿನಿಂದ ಕೊನೆಯವರೆಗೆ ವರ್ಣಿಸಿ, “ಇದಕ್ಕೆ ಒಂದು ಸೊಂಡಿಲು ಕೊಟ್ಟರೆ ಆನೆಯಾಗುತ್ತದೆ” ಎಂದನಂತೆ. ಗೊರವಯ್ಯ ಹೇಳಿದುದು ಹಾಗಾಯಿತು ಎಂದ. ಸೀತಾರಾಮುವಿಗೆ ನಾರಾಯಣನ ಮೇಲೆ ಹೇಗೂ ಸ್ವಲ್ಪ ಕೋಪ ಇದ್ದೇ ಇದ್ದಿತು. ಅವನು ಅಧ್ಯಕ್ಷನ ಅಪ್ಪಣೆಯನ್ನೂ ಪಡೆಯದೆ ಎದ್ದು ನಿಂತು ಪ್ರೇಕ್ಷಕರ ಕಡೆನೋಡಿ “ಸ್ವಾಮಿ ಹನ್ನೆರಡು ಹದಿನೈದು ವಯಸ್ಸಿನ ಹುಡುಗರ ಜೀವನದಲ್ಲಿ ಹೆಚ್ಚು ಸಂಗತಿ ಏನು ಇರುತ್ತದೆ. ಹುಟ್ಟಿದ ಸತ್ತ ಎಂದು ಎರಡು ಮಾತಿನಲ್ಲಿ ಮುಗಿಸ

ಬಹುದು. ಅದನ್ನು ಈ ಹುಡುಗ ಕಷ್ಟಪಟ್ಟು ಬುದ್ಧಿ ಓಡಿಸಿ ಇರುವುದರಲ್ಲಿ ಚೆನ್ನಾಗಿ ಬರೆದಿದ್ದಾನೆ.'' ಎಂದ. ನಾರಾಯಣನ ಯೋಗ್ಯತೆ ಆವತ್ತಿನ ಭಾಷಣದಿಂದ ಸ್ವಲ್ಪ ಕಡಿಮೆಯಾಯಿತೆಂದು ಹೇಳದೆ ವಿಧಿಯಿಲ್ಲ. ಮೊದಲ ದಿನ ಸೀತಾರಾಮುವೇ ಅಧ್ಯಕ್ಷತನವನ್ನು ಹೆಚ್ಚು ಗಾಂಭೀರ್ಯದಿಂದ ಮಾಡಿದನೆಂದು ಎಲ್ಲರೂ ಒಪ್ಪಿದರು. ಹಾಸ್ಯ ಹುಡುಗಾಟಗಳನ್ನು ಯಾರು ಬೇಕಾದರೂ ಸಹಿಸುತ್ತಾರೆ. ಆದರೆ ಉದ್ದೇಶ ಪೂರ್ವಕವಾಗಿಯೋ ತಮ್ಮ ಸ್ವಪ್ರತಿಷ್ಠೆ ಜಂಭವನ್ನು ತೋರಿಸುವುದಕ್ಕಾಗಿಯೋ ಮತ್ತೊಬ್ಬರಿಗೆ ನೋವಾಗುವಂತಹ ಮಾತನ್ನು ಯಾರೂ ಸಹಿಸುವುದಿಲ್ಲ. ತಮ್ಮ ಪ್ರೀತಿ ಅಪ್ರೀತಿಗಳನ್ನು ತೋರಿಸುವ ಕ್ರಮಗಳನ್ನು ಸ್ತ್ರೀಯರೂ ಇಟ್ಟುಕೊಂಡಿದ್ದಾರೆ. ಅವರು ಮಂಗಳೆಯನ್ನು ದುರು ದುರನೆ ನೋಡಿದರು. ವೈದೇಹಿಯನ್ನು ಮೃದುವಾದ ಆರ್ದ್ರ ದೃಷ್ಟಿಯಿಂದ ನೋಡಿದರು.

ಈಚೆಗೆ ಕೆಲವು ವರುಷ ಕಳೆದನಂತರ ಒಂದುಸಲ ಮಲ್ಲಿಗೆಹಳ್ಳಿಯ ಪೋಸ್ಟುಮಾಸ್ಟರು ಸುದರ್ಶನನನ್ನು ಕಂಡಾಗ ''ಅಪ್ಪಾ, ಗುಂಡುರಾಯ ಪೆಮ್ಮಾಳುಗಳೇ ಪುಣ್ಯವಂತರೆಂದು ನಾನು ಹೇಳುತ್ತೇನೆ. ಅಂತಹ ಬಾಲ್ಯ ವಯಸ್ಸಿನಲ್ಲಿ ಜೀವನ ಚರಿತ್ರೆಯನ್ನು ಬರೆಸಿಕೊಂಡು ಸಾರ್ವಜನಿಕರ ಎದುರಿಗೆ ಅವುಗಳನ್ನು ಪಠಿಸಿಕೊಳ್ಳುವ ಯೋಗ ಅವರಿಗೆ ದೊರೆತಿತ್ತು. ಇದು ಒಂದು ಯೋಗವೆಂದೇ ಹೇಳುತ್ತೇನೆ. ಯಾಕೆಂದರೆ ಈಚೆಗೆ ಮಲ್ಲಿಗೆಹಳ್ಳಿಯಲ್ಲಿ ಅವರಿಗಿಂತ ಹೆಚ್ಚು ವಯಸ್ಸಾದರೂ ಹೆಚ್ಚು ಪ್ರಬಲವಾದವರೂ ಧನಿಕರೂ ಜನೋಪಕಾರಿಗಳೂ ಆಗಿಹೋಗಲಿಲ್ಲವೇ? ಅವರ ಚರಿತ್ರೆಯಲ್ಲಿ ಬರೆಯುವುದಕ್ಕೆ ವಿಷಯಗಳು ಕಡಿಮೆ ಇವೆಯೆ? ಆದರೆ ಇವರ ಚರಿತ್ರೆ ಬರೆಯಿರಿ. ಎಂಟಾಣೆ ಕೊಡುತ್ತೇನೆ ಎಂದು ಹೇಳುವ ಆಂಜನೇಯ ಸಮಾಜ ಎಲ್ಲಿ? ತಮ್ಮ ಕೆಲಸಗಳನ್ನೆಲ್ಲಾ ಬಿಟ್ಟು ಈ ಜೀವನ ಚರಿತ್ರದಲ್ಲಿ ಏನೂ ಇಲ್ಲ ಎಂದು ತಿಳಿದರೂ ಕೇಳುವುದಕ್ಕಾಗಿ ಬಂದು ಕುಳಿತುಕೊಳ್ಳುತ್ತಿದ್ದ ಸ್ತ್ರೀ ಪುರುಷರು ಎಲ್ಲಿ? ನಾರಾಯಣ ಈಗ ದೊಡ್ಡ ಹುದ್ದೆಯಲ್ಲಿಯೇ ಇದ್ದಾನೆ. ಹೆಂಡತಿ ಮಕ್ಕಳನ್ನು ಸಾಕುತ್ತಿದ್ದಾನೆ. ಆದರೆ ಇವನನ್ನು ಕುರಿತು ಬರೆಯುವ ಇತಿಹಾಸಕಾರನೆಲ್ಲಿ?'' ಎಂದರು.

ಈಚೆಗೆ ಆಗ ಬರೆದು ಓದಿದ್ದ ಗುಂಡೂರಾಯನ ಚರಿತ್ರೆಯೂ ಪೆಮ್ಮಾಳುವಿನ ಚರಿತ್ರೆಯೂ ಸಿಕ್ಕಿಲ್ಲ. ಆಗ ಸಮಾಜದವರು ಪ್ರಾರಂಭಿ

ಸಿದ್ಧ ವಾಚನಾಲಯದಲ್ಲಿ ಅದನ್ನು ಇಡಿಸಿದ್ದರು. ಎಲ್ಲಿಹೋಯಿತೋ? ತಾವು ಬರೆದ ಚರಿತ್ರೆ ತಮಗೆ ಸಿಕ್ಕುವುದೇ ಎಂದು ಗೊರವಯ್ಯನೂ ಸುದರ್ಶನನೂ ಹುಡುಕುತ್ತಿದ್ದಾರೆ. ಆದರೆ ಆ ಚರಿತ್ರೆಗಳು ಅವರಿಗೆ ಸಿಗುವಂತೆ ಇಲ್ಲ. ಹಾಗೆಯೇ ಯಾವ ಅಕೃತ್ರಿಮವಾದ ಸರಳವಾದ ಸಾತ್ವಿಕ ಮನೋಭಾವದಿಂದ, ಪ್ರೇಮಪೂರ್ಣವಾದ ಮನಸ್ಸಿನಿಂದ ಭಕ್ತನು ಇಷ್ಟದೇವತೆಗೆ ಪುಷ್ಪಹಾರವನ್ನು ಅರ್ಪಿಸುವಂತೆ ತಮ್ಮ ಸಮಾಜ ಮಿತ್ರರಿಗೆ ಆ ಚರಿತ್ರಹಾರವನ್ನು ಅರ್ಪಿಸಿದರೋ, ಆ ಬಾಲ್ಯವೂ ಅವರಿಗೆ ಮತ್ತೆ ಬರುವಂತೆ ಇಲ್ಲ. ಸಮಾಜದ ಅಂದಿನ ಸದಸ್ಯರು ಬೇರೆಬೇರೆ ಕಡೆ ಸೇರಿಕೊಂಡಿದ್ದಾರೆ. ಆಗ ಸಮಾಜದ ಸಹಾಯಕ ಕಾರ್ಯದರ್ಶಿ ಯಾಗಿದ್ದ ಸ್ವಾಮಿ ದೇಶ ವಿದೇಶಗಳ ಸಂಚಾರವನ್ನೆಲ್ಲಾ ಮಾಡಿ ಬಂದಿದ್ದಾನೆ. ಸಮಾಜದ ಮೂಲಕ ಮಲ್ಲಿಗೆಹಳ್ಳಿಯನ್ನು ಯಾವ ಆದರ್ಶದ ಮಟ್ಟಕ್ಕೆ ಏರಿಸಬೇಕೆಂದು ಅವನ ಧ್ಯೇಯವಿದ್ದಿತೋ ಅದು ಆಗಾಗ್ಗೆ ಮನಸ್ಸಿನಲ್ಲಿ ಕುದಿಯುತ್ತಿರಬಹುದು. ಗಾನ ನಿಂತರೂ, ಧ್ವನಿಯ ಇಂಪಿನಂತೆ ಆಗಿನ ಕಾಲದ ಆಲೋಚನೆಗಳು ಮತ್ತೆ ಅವನ ಹೃದಯ ವನ್ನು ಪುಲಕಿತ ಮಾಡಬಹುದು. ಸಮಾಜದ ಜಾರಿ ಇಲಾಖೆ ರಂಗಪತಿ ಈಗಲೂ ಸಮಾಜದ ಬೆಳಕು ನಂದಿಹೋಗದಂತೆ ವರುಷಕ್ಕೆ ಒಂದು ದಿನ ದೇವರ ಉತ್ಸವ ಮಾಡಿಸುತ್ತಾನೆ. ಅಂದಿನ ಸಮಾಜದ ಕಾರ್ಯಕ್ರಮ ಕೇವಲ ನೆನಪಾಗಿ ಮಾತ್ರ ಉಳಿದಿದೆ.

ಈಗಲೂ ಜೀವನದ ಬೇರೆಬೇರೆ ಭಾಗಗಳಲ್ಲಿ ಕೆಲಸಮಾಡುವಾಗ, ಸಮಾಜದ ಬಾಲ್ಯ ಸದಸ್ಯರಿಗೆ ಒಬ್ಬರಿಗೊಬ್ಬರಿಗೆ "ಸ್ವಾರ್ಥಸ್ವಾರ್ಥದ ತುಮುಲಯುದ್ಧ" ಪ್ರಾರಂಭವಾಗುತ್ತದೆ. ಆಗ ಅವರಲ್ಲಿ ಒಬ್ಬರು "ಅಪ್ಪಾ ನಾವು ಆಂಜನೇಯ ಸಮಾಜದ ಬಾಲ್ಯ ಸ್ನೇಹಿತರಲ್ಲವೆ?" ಎಂದಕೂಡಲೇ ಅವರ ಮನಸ್ಸು ಮೃದುವಾಗಿ, ಸಮಾಜದ ಅಂದಿನ ಧ್ಯೇಯ ಹೀಗೆ ಹೊಡೆದಾಡುವುದಲ್ಲವೆಂದು ಸುಮ್ಮನಾಗುತ್ತಾರೆ. ಸಮಾಜದ ಸದಸ್ಯರು ಯೌವನದ ಮನೆಯನ್ನು ದಾಟಿ ಮುಪ್ಪಿನ ಕಡೆಗೆ ಹೋಗುತ್ತಿದ್ದಾರೆ ಅವರೆಲ್ಲ ಮತ್ತೆ ತಮ್ಮ ಬಾಲ್ಯದ ರಂಗಸ್ಥಳದಲ್ಲಿ ಸೇರುತ್ತಾರೆಯೇ. ಬಾಲ್ಯದ ಉತ್ಸಾಹ ಸರಳತೆಯಿಂದ ನೆಟ್ಟ ಸೊಸಿಯನ್ನು, ಈ ಮುಪ್ಪಿನ ಅನುಭವ ದಿಂದ ಬೆಳಸಿ ಮುಂದಲ ಜನಾಂಗಕ್ಕೆ ಮತ್ತೊಂದು ಆಂಜನೇಯ ಸಮಾಜ

ವನ್ನು ಕೊಡುತ್ತಾರೆಯೆ? ರಂಗಪತಿಯೇನೊ ಮಲ್ಲಿಗೆಹಳ್ಳಿಯಲ್ಲಿ ಕಾಯ್ದು ಕೊಂಡು ಕೂತಿದ್ದಾನೆ. ಆದರೆ ಸ್ವಾಮಿ ಬರುತ್ತಾನೆಯೇ? ಬಾಲ್ಯದ ಊರು ಅವನನ್ನು ಮತ್ತೆ ಆಕರ್ಷಿಸುವುದೆ? ಅದೇ ಆಂಜನೇಯ ಮೊದಲಿಗಿಂತ ಹೆಚ್ಚು ಸುಂದರನಾಗಿ ಪಶ್ಚಿಮಕ್ಕೆ ಮುಖಮಾಡಿಕೊಂಡು ನಿರೀಕ್ಷಿಸುತ್ತಾ ನಿಂತಿದ್ದಾನೆ.

ಅಂಕುರಾರ್ಪಣ ಎಂಬುದು ರಥೋತ್ಸವಕ್ಕೆ ೮ ದಿನ ಮುಂಚೆ ನಡೆಯುತ್ತದೆ. ಆಗ ಅಷ್ಟದಿಕ್ಪಾಲಕರನ್ನೂ ಆವಾಹನೆ ಮಾಡಿ ದೇವರ ಕಾವಲಿಗೆ ಅವರನ್ನು ನಿಯಮಿಸಬೇಕಾಗುತ್ತದೆ. ಈ ದಿಕ್ಪಾಲಕರನ್ನು ಕರೆದು ಒಂದೊಂದು ದಿಕ್ಕಿನಲ್ಲಿ ಒಬ್ಬೊಬ್ಬರಂತೆ ಊರಿನ ಬೀದಿಗಳಲ್ಲಿಯೇ ಎಂಟು ಕಡೆಗಳಲ್ಲಿ ಆವಾಹನೆ ಮಾಡುತ್ತಾರೆ. ಪ್ರತಿ ದಿನ ಬೆಳಿಗ್ಗೆ ಸಾಯಂಕಾಲ ಆ ಸ್ಥಳಕ್ಕೆ ಅರ್ಚಕ ಪರಿಚಾರಕರು ಓಲಗದೊಡನೆ ಬಂದು ಆವಾಹಿತ ದೇವತೆಗಳಿಗೆ ಹಳದಿ ಅನ್ನದ ಬಲಿ, ಮಂತ್ರಪೂತ ಜಲ ಇವುಗಳನ್ನು ಅರ್ಪಿಸಿ ಹೋಗುತ್ತಾರೆ. ಈ ಕಾಲದಲ್ಲಿ ಇದ್ದಕ್ಕಿದ್ದಂತೆ ಅರ್ಚಕ ಪರಿಚಾರಕರಿಗೆ ಒಂದು ಮಹಿಮೆಯೂ ಪ್ರಾಮುಖ್ಯತೆಯೂ ಪ್ರಾರಂಭವಾಗುತ್ತದೆ. ಈ ಮಹಿಮೆ ಸ್ವಲ್ಪ ಹೆಚ್ಚು ಕಡಿಮೆ ಎಲೆಕ್ಷನ್‌ನಲ್ಲಿ 2—3 ಸಲ ಸೋತವನಿಗೆ "ಸಾರ್ವಜನಿಕರ ಪರವಾಗಿ ಎಂದು ಮಂತ್ರಿಪದವಿ" ದೊರೆತಂತೆಯೇ. ಅಥವ ಎಲೆಕ್ಷನ್‌ನಲ್ಲಿ ಸೋತವನಿಗೆ ನಾಮಕರಣದಿಂದ ಹಿಂದಲ ಮಹಿಮೆದೊರೆತಂತೆ. ಯಾಕೆಂದರೆ ಈ ಅಷ್ಟದಿಕ್ಪಾಲಕರಲ್ಲಿ ಕುಬೇರ ಇಂದ್ರ ಇವರನ್ನು ತಮ್ಮ ಮನೆಗಳ ಮುಂದೆ ಆವಾಹನೆ ಮಾಡಬೇಕು—ಯಮನನ್ನು ಖಂಡಿತ ಆವಾಹನೆ ಮಾಡಕೂಡದು—ಎಂದು ಕೆಲವರ ಆಶೆ ಇರುತ್ತದೆ. ಅರ್ಚಕ ಪರಿಚಾರಕರು ಉಪಾಯದಿಂದ ತಮಗೆ ಬೇಕಾದ ಮನೆ ಬಳಿ ಕುಬೇರ, ಇಂದ್ರ, ಯಮ ಬರುವಂತೆ ಮಾಡಬಹುದು. ಬಲಿಗಳು ಅಂತೂ ಊರಿನ ಎಂಟು ಕಡೆ ಬಿದ್ದರೆ ಆಯಿತು. ಸ್ವಲ್ಪ ದೂರದೂರವಾಗಿ ಅಥವ ಸ್ವಲ್ಪ ಹತ್ತಿರ ಹತ್ತಿರವಾಗಿ ಬಲಿಗಳನ್ನು ಹಾಕುವುದರಿಂದ ಅವರು ತಮಗೆ ಇಷ್ಟ ಬಂದ ಮನೆಯ ಮುಂದೆ ಇಷ್ಟ ಬಂದ ಅಷ್ಟದಿಕ್ಪಾಲಕರು ಬರುವಂತೆ ಮಾಡಬಹುದು. ಸಾಧಾರಣವಾಗಿ ಯಮನನ್ನು ತಮ್ಮ ಮನೆ ಮುಂದೆ ಆವಾಹನೆ ಮಾಡಲು ಯಾರೂ ಒಪ್ಪುತ್ತಿರಲಿಲ್ಲ. ಎಲ್ಲರೂ "ಇಂದ್ರ ಕುಬೇರರೇ ಬೇಕು" ಎನ್ನುತ್ತಿದ್ದರು.

ಆದರೆ ಯಮುನಿಗೂ ಒಂದು ಜಾಗ ಕೊಟ್ಟೇತೀರಬೇಕಲ್ಲ. ಆಗ ಆಂಜ ನೇಯ ಸಮಾಜದ ವಾಚನಾಲಯದ ಮುಂದೆ ಯಮುನನ್ನು ಆವಾಹನೆ ಮಾಡಲು ಅವಕಾಶಮಾಡಿದರು. ಅದೇನು ಕಾಕತಾಳನ್ಯಾಯವೋ. ಹಿಂದಲ ವರುಷಗಳಲ್ಲಿ ಯಾವಯಾವುದೋ ಮನೆಯ ಮುಂದೆ ಯಮು ನನ್ನು ಆವಾಹನೆ ಮಾಡಿದಾಗ ಆ ಮನೆಗಳಲ್ಲಿ ಸಾವು ನೋವುಗಳೂ, ಮನೆ ಗಳಿಗೇ ಧಕ್ಕೆಯೂ ಉಂಟಾಗಿದ್ದಿತು. ಆದರೆ ಆಂಜನೇಯನ ವಾಚನಾಲ ಯದ ಮುಂದೆ ಯಮುನನ್ನು ಆವಾಹನೆ ಮಾಡಿದ ಕೂಡಲೇ ಯಮುನ ಸದ್ದೇ ಅಡಗಿಹೋಯಿತು. ಅಲ್ಲಿಂದ ಮುಂದೆ ರಥೋತ್ಸವಕ್ಕೆ ಮುಂಚೆ ಎಲ್ಲಿ ತಮ್ಮ ಮನೆಯ ಮುಂದೆ ಯಮುನನ್ನು ಆವಾಹನೆ ಮಾಡುತ್ತಾರೆಯೋ ಎಂದು ಎದೆ ಡವಡವನೆ ಜನಗಳಿಗೆ ಅವಲಕ್ಕಿ ಕುಟ್ಟುತ್ತಿದ್ದುದು ನಿಂತು ಹೋಯಿತು. ಮಲ್ಲಿಗೆಹಳ್ಳಿ ಆಂಜನೇಯ ಬಹು ಸತ್ಯವುಳ್ಳ ದೇವರು. ಅದಕ್ಕೆ ಮಾಡಿಕೊಂಡ ಯಾವ ಹರಕೆಯೂ ವ್ಯರ್ಥವಾಗಿಲ್ಲ.

---

## ೨೮. ಭಗವಂತನ ವಿಜಯಯಾತ್ರೆ

---

ಮಲ್ಲಿಗೆಹಳ್ಳಿಯ ದೇವರ ವಾಹನವಾದ ಮರದ ಕುದುರೆಯ ಕೈಕಾಲು ಒಡೆದು ಹೋಗಿದೆ. ಸಾಧಾರಣವಾಗಿ ಕುದುರೆ ಉತ್ಸವ ಅನಂತು ಮಾಡಿಸ ಬೇಕಾಗಿದ್ದಿತು. ಯಾರೋ ವಿನೋದವಾಗಿ "ಅನಂತು ಎಷ್ಟುದಿವಸ ಗಳಾದರೂ ಕುದುರೆ ಬೇರೆ ಮಾಡಿಸಲಿಲ್ಲ. ಇವತ್ತು ಜೀವದ ಕುದುರೆಯ ಮೇಲೆಯೇ ಉತ್ಸವಮಾಡಿಸಿ ಬಿಡೋಣ" ಎಂದರು. ಇದು ಹೇಳು ವಾಗ ವಿನೋದಕ್ಕಾಗಿ ಹೇಳಿದಮಾತೇ ಆದರೂ ಒಂದೆರಡು ಗಂಟೆಗಳೊಳ ಗಾಗಿ ಯಾಕೆ ಮಾಡಬಾರದು. ಭಗವಂತ ಗರುಡವಾಹನನಾಗಿ ಹೋಗು ವುದಿಲ್ಲವೆ? ಮಾದೇಶ್ವರ ಬೆಟ್ಟದ ಮಹದೇವ ಈಗ ಹುಲಿಯಮೇಲೆ ಸವಾರಿ ಹೊರಡುವುದಿಲ್ಲವೇ" ಎಂದು ಒಬ್ಬರಿಗೊಬ್ಬರಿಗೆ ಚರ್ಚೆಯಾಗಿ ಕೊನೆಗೆ ಯಾರೂ ಹೇಳುವುದಕ್ಕೆ ಕೇಳುವುದಕ್ಕೆ ಮುಂಚೆಯೇ, ಸುದರ್ಶನ ಥೇರ್ಮ್ನ್ನರ ಕುಂಟ ಕುದುರೆ ಮೈತೊಳೆದುಕೊಂಡು ಬಂದು ನಿಲ್ಲಿಸಿಯೇ ಬಿಟ್ಟ. ಅದರ ಕತ್ತಿಗೆ ಮಾಲೆ ಮಾಲೆಯಾಗಿ ಚಂಡು ಹೂವುಗಳು ಬಿದ್ದೇ ಬಿಟ್ಟವು.

ವಾಚನಾಲಯದ ಮೇಜಿನ ಮೇಲೆ ಹಾಕಿದ್ದ ಬಣ್ಣ ಬಣ್ಣದ ಬಟ್ಟೆಯನ್ನು ಸುದರ್ಶನ ತಂದು ಕುದುರೆಯ ಬೆನ್ನಿನ ಮೇಲೆ ಹಾಕಿದ. ಅರ್ಚಕ ಹಾಹೂ ಎನ್ನುವುದಕ್ಕೆಮುಂಚಿತವಾಗಿಯೇ ದೇವರನ್ನು ಬಿಜಯಮಾಡಿಸಿ ಕೊಂಡು ಬಂದು ಕುದುರೆಯ ಮೇಲೆ ಏರಿಸಿಬಿಟ್ಟರು. ಕುದುರೆಯ ಲಗಾಮನ್ನು ಆಕಡೆ ಸುದರ್ಶನನೂ ಮತ್ತೊಂದುಕಡೆ ಬೆಸ್ತರ ಕರಿಯನೂ ಹಿಡಿದುಕೊಂಡರು. ಅರ್ಚಕ ಬಂದು ನಿಂತುಕೊಂಡ. ಯಾರು ಅಡ್ಡೆ ಹೊರಬೇಕಾಗಿದ್ದಿತೋ ಆ ನಾಲ್ಕು ಜನವೂ ಉತ್ಸವವನ್ನು ರಕ್ಷಿಸುತ್ತಾ ಕುದುರೆಯ ಸುತ್ತ ಬರುತ್ತಿದ್ದರು. ಈ ಕುದುರೆಯ ಉತ್ಸವ ಬರಿಯ ಗಂಡು ದೇವರಿಗೆ ಮಾತ್ರ. ಆಗ ದೇವರ ಜತೆಯಲ್ಲಿ ಆಚೆ ಈಚೆ ಶ್ರೀ ಭೂನೀಳಾ ದೇವಿಯರು (ಎರಡೇ ದೇವಿಯರು) ಇರುವುದಿಲ್ಲ. ಇದು ಒಂದು ತರಹದಿಂದ ದೇವರು ಬೇಟೆಗೆ ಹೋಗುವ ವೇಷ. ಆಗ ದೇವರು ಸಾಮಾನ್ಯವಾದ, ಮನುಷ್ಯರು ಹೆಗಲಿನಮೇಲೆ ಹೊರುವ ಉತ್ಸವದಲ್ಲಿಯೂ ಸ್ವಲ್ಪ ವೇಗವಾಗಿಯೇ ಹೋಗುತ್ತಾರೆ. ದೇವರನ್ನು ಬಿಜಯಮಾಡಿಸು ವವರಿಗೆ ಅವರು ಒಬ್ಬರೇ ದೇವರಾಗಿರುವುದರಿಂದ ತೂಕ ಕಡಿಮೆಯಾಗಿ ರುವುದೂ ಒಂದು ಕಾರಣ. ಸುದರ್ಶನನಿಗೆ ಭಾರತ ರಾಮಾಯಣದ ಕತೆಗಳನ್ನು ಕೇಳಿದಾಗಿನಿಂದ "ದೇವರು ನಿಜವಾದ ಜಬರ್ದ ಗರುಡನ ಮೇಲೆ, ಹಾರಿಹೋಗುತ್ತಾನೆ. ಪುಷ್ಟವಾಗಿ ಬೆಳೆದ ದೊಡ್ಡ ಕುದುರೆಯ ಮೇಲೆ ನಾಗಾಲೋಟದಲ್ಲಿ ಗಾಳಿಯಂತೆ ಭರ್ರೆಂದು ಹೋಗುತ್ತಿರುತ್ತಾನೆ" ಎಂಬುದೇ ಭಾವವಾಗಿದ್ದಿತು. ಈವತ್ತೂ ಕುದುರೆಯನ್ನು ತಂದಾಗ ಸುದರ್ಶನನ ಮನಸ್ಸಿನಲ್ಲಿ "ದೇವರ ಹಿಂದೆ ಒಬ್ಬ ಕುಳಿತುಕೊಂಡು ಸರಿ ಯಾಗಿ ಲಗಾಮು ಹಿಡಿದುಕೊಂಡು ಊರಸುತ್ತಾ ಭರ್ರೆಂದು ಓಡಿಸಿ ಕೊಂಡು ಬರಬೇಕು. ಅದೇ ಸರಿಯಾದ ಕುದುರೆವಾಹನ. ಆದರೆ ಈ ಓಲಗ ತಮಟೆ ಪಂಜು ಅರ್ಚಕರು ಇವರು ವೇಗವಾಗಿ ಬರಲಾರರಲ್ಲ. ಹೌದು ಅವರೂ ಯಾಕೆ ಕುದುರೆಗಳ ಮೇಲೆಯೇ ಕೂರುವುದಕ್ಕಾಗದು? ಆದರೆ ವಾಧ್ಯಾರ್ ದಂಡಪಾಣಿ ಅಯ್ಯನವರು "ಕುದುರೆ ಮೇಲೆ ದೇವ ಜತೆಯಲ್ಲಿ ಮತ್ತಾರಾದರೂ ಕೂರುವುದುಂಟೇನಯ್ಯ. ಪಾಪ. ಲಗಾ ಮನ್ನು ಹಿಡಿದುಕೊಳ್ಳಿ" ಎಂದರು. ಜನ "ಇದೇನಪ್ಪ ತುರುಕ ಉರಸ್ಸು. "ಹಿಂದೂ ಮುಸ್ಲಿಂ ಏಕ್ ಹೊ" ಆಗಲಿ ಎಂದು ನೋಡುತ್ತಾ

ನಿಂತರು. ಅರ್ಚಕ ಹಿಂದೆ ದೇವರಿಗೆ ಬಂದ ಎಲೆ ಅಡಿಕೆ ಸಂಗ್ರಹಿಸಲು ಒಂದು ಚೀಲವನ್ನು ದೇವರ ಅಡ್ಡೆಯ ಕಾಲಿಗೆ ತಗಲುಹಾಕುತ್ತಿದ್ದವನು ಈಗ ಕುದುರೆಯ ಕತ್ತಿಗೇ ನೇತುಹಾಕಿದ. ದೇಶಿಕಾಚಾರ್ರು "ಹೊರಡಲಿ ಉತ್ಸವ ಮುಂದೆ" ಎಂದರು. ಬ್ಯಾಂಡು ಪಂಜು ಅಸಾಧ್ಯವಾದ ಗಮ್ಮತ್ತಿನಿಂದ ಪ್ರಾರಂಭವಾದವು. ಮೊದಲನೆಯ ಮನೆಯ ಮುಂದೆ ಉತ್ಸವ ಬರುವ ವೇಳೆಗಾಗಲೇ ಕುದುರೆ ತನ್ನ ಮೇಲೆ ಹಿಡಿದಿದ್ದ ದೇವರ ಶ್ವೇತಛತ್ರಿಯ ಕುಚ್ಚನ್ನೂ ಅದರ ನೆರಳನ್ನೂ ಕಂಡು ಹೆದರಿದ್ದಿತು. ಅರ್ಚಕ ತಟ್ಟೆಯಲ್ಲಿದ್ದ ಕರ್ಪೂರ ಹತ್ತಿಸಿಕೊಳ್ಳಲು ಪಂಜಿನವನನ್ನು ಸಮೀಪಕ್ಕೆ ಕರೆದ. ಪಂಜಿನವನು ಉರಿಯುತ್ತಿರುವ ಪಂಜನ್ನು ನೆಟ್ಟಗೆ ಕುದುರೆಯ ಮುಂದಕ್ಕೆ ನೀಡಿದ. ಕುದುರೆ ಹೆದರಿ, ಕುಂಟು ಕುದುರೆಯಾದರೂ ಒಂದೇ ಏಟಿಗೆ ಮುಂದಲ ಎರಡು ಕಾಲುಗಳನ್ನೂ ಎತ್ತಿ ಹಾರಿಬಿಟ್ಟಿತು. ಅರ್ಚಕನೂ, ಓಲಿಗದವರೂ, ಬ್ಯಾಂಡಿನವರೂ, ಆತ್ಮರಕ್ಷಣೆಯ ಸ್ವಾಭಾವಿಕವಾದ ಚಟುವಟಿಕೆಯಿಂದ ಆಚೆ ಈಚೆ ಅರಗಾಗಿ ದಾರಿಬಿಟ್ಟರು. ದೇವರನ್ನು ಹಿಡಿದುಕೊಂಡಿದ್ದ ನಾಲ್ವರ ಕೈಯಿನಲ್ಲಿಯೇ ದೇವರು ಉಳಿಯಿತು. ಅರ್ಚಕ ದೇವರಿಗೆ ಬಂದ ಎಲೆ ಅಡಿಕೆಗಳನ್ನು ತೆಗೆದುಗೊಳ್ಳಲು ನೇತುಹಾಕಿದ್ದ ಚೀಲ ಕುದುರೆಯ ಕತ್ತಿನಲ್ಲಿಯೇ ಉಳಿಯಿತು. ಹೋ ಎಂದು ಗದ್ದಲವಾಯಿತು. ಅನಂತುವೂ ಊರಿನ ಹಿರಿಯರೂ ಬಂದು ದಂಡಪಾಣಿ ಅಯ್ಯನವರನ್ನೂ ಅರ್ಚಕರನ್ನೂ ಚೆನ್ನಾಗಿ ಬೈದರು. ಇದಕ್ಕೆ ಮೂಲಕಾರಣ ಸುದರ್ಶನ ಎಂದು ತಿಳಿದಾಗ ಅನಂತು ಅವನಿಗೆ ಚೆನ್ನಾಗಿ ಬಿಗಿಯಬೇಕೆಂದು ಅವನನ್ನು ಹುಡುಕಿದ ಆದರೆ ಸುದರ್ಶನ ಎಲ್ಲಿಯೂ ಅವರ ಕಣ್ಣಿಗೆ ಬೀಳಲಿಲ್ಲ. ಅನಂತು ಆವತ್ತೆಲ್ಲಾ ಸುದರ್ಶನನನ್ನು ನೋಡಲೇ ಇಲ್ಲ.

ಮಲ್ಲಿಗೆಹಳ್ಳಿಯಲ್ಲಿ ದೇವರುಗಳಿಗೂ ಕೂಡ ಒಂದೊಂದು ಸಲ ಸ್ಥಾನ ಪಲ್ಲಟವಾಗುತ್ತದೆ. ಅವರುಗಳಿಗೂ ಉಚ್ಛ್ರಾಯ ಅನುಚ್ಛ್ರಾಯಗಳು ಉಂಟು. ರಥೋತ್ಸವದ ದಿವಸ ನರಸಿಂಹ ಸ್ವಾಮಿಯವರ ಕೈತೇರನ್ನು ಪರವಾಸುದೇವರು ಆಕ್ರಮಿಸುತ್ತಾರೆ. ಪರವಾಸುದೇವರ ತೂಕ ಜಾಸ್ತಿ. ಅವರನ್ನು ಹೆಗಲಿನ ಮೇಲೆ ಹೊರುವುದು ಕಷ್ಟ. ಅವರ ಮೆರವಣಿಗೆ ವರುಷಕ್ಕೆ ಎರಡೇ ದಿವಸ. ಒಂದು ರಥೋತ್ಸವದ ದಿವಸ.

ಮತ್ತೊಂದು ವಿಜಯದಶಮಿಯ ದಿವಸ. ವಿಜಯದಶಮಿಯ ದಿವಸ ದೇವರುಗಳು ಇಬ್ಬರೂ—ನರಸಿಂಹಸ್ವಾಮಿ ಮತ್ತು ಪರವಾಸು ದೇವರು ಬನ್ನಿಯ ಮಂಟಪಕ್ಕೆ ವಿಜಯ ಯಾತ್ರೆ ಹೊರಡುತ್ತಾರೆ. ಹಿಂದೆ ರಾಜರು ಈ ದಿನ ವಿಜಯ ಯಾತ್ರೆ ಹೊರಡುತ್ತಿದ್ದರಂತೆ. ಒಂದು ತೇರಿನಲ್ಲಿ ಪರ ವಾಸು ದೇವರು. ಕೈಯ್ಯಡ್ಡೆಯಲ್ಲಿ ನರಸಿಂಹಸ್ವಾಮಿ. ಆವತ್ತು ಉತ್ಸವ ಆಗ ಮಾಡಿಸಲು ಮನೆಗೆ ಒಂದು ಆಳು ಬರಬೇಕು. ಆವತ್ತು ದೇವರಿಗೆ ಮನೆಗೆ ಎರಡು ಕಾಯಿ; ಕೋಟಿ ಪೇಟೆಯಲ್ಲಿ ಸಾವಿರಾರು ಕಾಯಿ ಇಡ ಗಾಯಿ ಬಿಳುತ್ತೆ. ಬನ್ನಿ ಮಂಟಪ ಸುಮಾರು ಎರಡು ಮೈಲಿ ದೂರವಿದೆ. ಅಲ್ಲಿಗೆ ಎರಡು ದೇವರನ್ನೂ ಬಿಜಯ ಮಾಡಿಸಿಕೊಂಡು ಅಲ್ಲಿಯ ಕೆಲಸ ಗಳನ್ನೆಲ್ಲಾ ಆ ಅರ್ಧ ರಾತ್ರಿಯಲ್ಲಿ ಆಗಮಾಡಿಕೊಂಡು ಬರಬೇಕಾದರೆ ಜನ ಸಹಾಯ ಚೆನ್ನಾಗಿರಬೇಕು. ಇದಕ್ಕಾಗಿ ಮಲ್ಲಿಗೆಹಳ್ಳಿಯವರು ಒಂದು ಉಪಾಯ ಮಾಡಿದ್ದಾರೆ. ಮನೆಗೆ ಒಂದು ಆಳು ಉತ್ಸವ ನಡೆಸುವುದ ಕ್ಕಾಗಿ ಬರದಿದ್ದರೆ ಆ ಮನೆಯವರಿಂದ ದೇವರಿಗೆ ಎಲೆ ಅಡಿಕೆ ತೆಗೆದು ಕೊಳ್ಳುವುದಿಲ್ಲ. ಉತ್ಸವ ಬಾಗಿಲ ಮುಂದೆ ಹೋಗುತ್ತಾ ನೆರೆ ಹೊರೆಯ ಮನೆಯವರೆಲ್ಲಾ ಎರಡೆರಡು ತೆಂಗಿನಕಾಯಿ ತಂದು ಧಡ ಧಡನೆ ಇಡಿ ಗಾಯಿ ಹಾಕುತ್ತಿರುವಾಗ, ತನ್ನ ಮನೆಯ ಕಾಯಿ ತೆಗೆದುಕೊಳ್ಳದೆ ಹೋದರೆ ಯಾವ ಮನುಷ್ಯನಿಗೆ ತಾನೇ ಮನಸ್ಸು ಸಮಾಧಾನವಾಗುತ್ತೆ. ಆದುದರಿಂದ ಮನೆಗೆ ಒಂದು ಆಳು ತಪ್ಪದೇ ಬಂದೇ ಬರುತ್ತಾರೆ. ರಾತ್ರಿ ದಶಮಿ ಚಂದ್ರ, ಎಲ್ಲೋ ಹುದುಗಿರುತ್ತಾನೆ ಅನೇಕ ವೇಳೆ ಗಾಢಾಂಧ ಕಾರವಾಗಿರುತ್ತದೆ. ಆಕಾಶ ಕಪ್ಪಾಗಿಯೇ ಇರುತ್ತದೆ. ಕತ್ತಲೆಯಲ್ಲಿ ಗ್ಯಾಸ್ ಲೈಟನ್ನೂ ಪಂಜನ್ನೂ ಹಿಡಿದುಕೊಂಡು ಹೋಗುತ್ತಿರುವ ಮೆರ ವಣಿಗೆ ಊರಿನ ಬೆಳಕನ್ನೇ ತೆಗೆದುಕೊಂಡು ಹೋಗುವಂತೆ ಕಾಣುತ್ತದೆ.

ಬನ್ನಿಮಂಟಪ ಇರುವುದು ವಿಶಾಲವಾದ ಬಯಲಿನಲ್ಲಿ. ಸಾಧಾ ರಣವಾಗಿ ಆಗ ಮಳೆ ಗಾಳಿ ಮಿಂಚು ಆರ್ಭಟ ಹೆಚ್ಚು. ಆ ಮಂಟಪದ ಮುಂದಲ ಬಯಲಿನಲ್ಲಿ ದೇವರನ್ನು ತೆಗೆದುಕೊಂಡು ಕೂರಿಸಿದಾಗ ಅದೇ ಒಂದು ಅದ್ಭುತವಾದ ದೃಶ್ಯವಾಗಿ ಕಾಣುತ್ತದೆ. ಭಗವಂತ ನಿಜವಾಗಿಯೂ ದೇವಸ್ಥಾನದಿಂದ ಅಂದು ಹೊರಗೆ ಬಂದು ತನ್ನ ಪರಿವಾರದವಾದ ಗುಡುಗು ಮಿಂಚು ಗಾಳಿ ಮಳೆಗಳೊಂದಿಗೆ ಸಂಭಾಷಣೆ ನಡೆಸುತ್ತಿರುವಂತೆ

ತೋರುತ್ತದೆ. ಆ ದಿವಸ ರಾತ್ರಿ ಸುಮಾರು ಹನ್ನೊಂದು ಗಂಟೆ ವೇಳೆಗೆ ಸುತ್ತಲ ನೂರಾರು ಹಳ್ಳಿಗಳಲ್ಲಿಯೂ ಬನ್ನಿಮಂಟಪಕ್ಕೆ ದೇವರು ಹೊರಡುವುದು ಮಲ್ಲಿಗೆಹಳ್ಳಿಯವರಿಗೆ ಗೊತ್ತು. ಆ ದಿವಸ ಸಾಧಾರಣವಾಗಿ ಊರಿನ ಸಮೀಪದ ಬೆಟ್ಟದ ಮೇಲೆ ದೇವರನ್ನು ಬಿಜಯ ಮಾಡಿಸಿಕೊಂಡು ಹೋಗಿ ದೊಡ್ಡ ಪಂಜನ್ನು ಹಚ್ಚಿ ಇಡುತ್ತಾರೆ. ಗೊರವೆ ಕಡ್ಡಿ ಹೆಚ್ಚಾಗಿ ಇಡುವುದರಿಂದ ಈ ಪಂಜು ಗಾಳಿ ಬಂದಷ್ಟೂ ಬಲವಾಗುತ್ತಲೇ ಇರುತ್ತದೆ. ಪ್ರತಿಯೊಂದು ಗ್ರಾಮದವರಿಗೂ ತಮ್ಮ ಸುತ್ತಲ ಇಂತಿಂತಹ ಗ್ರಾಮದ ಬೆಳಕು ಕಾಣುವುದು ಪದ್ಧತಿ. ಬೆಳಕು ಬರುವುದು ಸ್ವಲ್ಪ ಸಾವಕಾಶವಾದರೆ ಆ ಗ್ರಾಮದ ದೇವರು ಯಾಕೆ ಇನ್ನೂ ಹೊರಡಲಿಲ್ಲ. ಹೊತ್ತಾಯಿತಲ್ಲಾ ಎಂದು ಯೋಚಿಸುತ್ತಾ ಇರುವ ಹೊತ್ತಿಗೆ ದೀಪ ಕಾಣುತ್ತದೆ. ಆ ದೀಪವನ್ನು ನೋಡಿದ ಕೂಡಲೇ ಆ ಅಂಧಕಾರದಲ್ಲಿಯೂ ಒಬ್ಬರೊಂದಿಗೆ ಒಬ್ಬರು ಸೇರಿ ಮಾತನಾಡಿದಂತೆಯೇ ಜನ ಸಂತುಷ್ಟರಾಗುತ್ತಾರೆ. ಮಲ್ಲಿಗೆಹಳ್ಳಿಯ ಬನ್ನಿಮಂಟಪದ ಬಳಿ ನಿಂತರೆ ಸುತ್ತಾ ನೂರಾರು ಗುಡ್ಡಗಳ ಮೇಲೆ ದೀಪಗಳು ಎಲ್ಲವೂ "ಮಲ್ಲಿಗೆಹಳ್ಳಿಯ ಭಗವಂತನಿಗಾಗಿಯೇ" ಹಚ್ಚಿದುವೋ ಎಂಬಂತೆ ಕಾಣುತ್ತವೆ.

ಪ್ರಕೃತಿಯ ಆ ಆರ್ಭಟದಲ್ಲಿ ಮನುಷ್ಯನ ಆರ್ಭಟವೂ ಹೆಚ್ಚು. ನಮಗೇನೋ ಹಳ್ಳಿಗಳ, ಮನೆಗಳ, ಪಟ್ಟಣಗಳ, ಬಾಳು ಅಭ್ಯಾಸವಾಗಿದೆ. ಜೀವವು, ಮನೆ ಮಠ ಆಸ್ತಿ ಬ್ಯಾಂಕು ಬಿರುದು ಬಾವಲಿಗಳಿಗೆ ಹೊಂದಿಕೊಂಡು ಬೇಡಿಯಾಗಿದೆ. ಆದರೆ ವಾಸ್ತವವಾಗಿ ಜೀವಕ್ಕೂ ಹಕ್ಕಿಯಂತೆ ಪ್ರಕೃತಿಯಲ್ಲಿ ಕಾಡು ಮೇಡುಗಳಲ್ಲಿ ಬೆಟ್ಟ ಗುಡ್ಡಗಳಲ್ಲಿ ಮಳೆ ಮಿಂಚುಗಳಲ್ಲಿ ಇರುವುದೇ ಹೆಚ್ಚು ಹಿತವಾದುದೆಂದು ತೋರುತ್ತದೆ. ಇದನ್ನು ನಾವು ಅನುಭವಿಸಿಲ್ಲ. ಸೆರೆಯಲ್ಲಿರುವ ಪಕ್ಷಿ ಸ್ವಾತಂತ್ರವೆಂದರೆ ಹೆದರುತ್ತದೆ. ಗುಲಾಮಗಿರಿಯಲ್ಲಿರುವ ಮನುಷ್ಯ, ರಾಜನಾದರೂ ಸರಿಯೆ ಪ್ರಜೆಯಾದರೂ ಸರಿಯೆ, ಸ್ವಾತಂತ್ರ್ಯವೆಂದರೆ ಹೆದರುತ್ತಾನೆ. ಅವನಿಗೆ ಆ ಅಭ್ಯಾಸವೇ ತಪ್ಪಿಹೋಗಿದೆ. ಹಾಗೆಯೇ ಮನುಷ್ಯನಿಗೂ ಪ್ರಕೃತಿಯಲ್ಲಿರುವ ಅಭ್ಯಾಸ ತಪ್ಪಿಹೋಗಿ ಸಂಕುಚಿತವಾಗಿ, ತನ್ನಿಂದಲೇ ನಿರ್ಮಿತವಾದ ಸಂಕೋಲೆಯಂತಿರುವ ಸಣ್ಣ ಮನೆ ಗ್ರಾಮಗಳಲ್ಲಿರುವುದು ವಾಡಿಕೆಯಾಗಿ ನಮ್ಮ ನಿಜವಾದ ಹಕ್ಕು ದಾರಿಯನ್ನೇ ನಾವು ಮರೆತಿದ್ದೇವೆ. ಭಗವಂತ

ನಮಗಾಗಿ ಕೊಟ್ಟಿರುವ ವಿಶಾಲವಾದ ಬಯಲು, ಪರ್ವತಗಳು, ನದಿಗಳು, ಮಿಂಚು ಗುಡುಗು ಇವುಗಳಾವುದನ್ನೂ ಅನುಭವಿಸದೆ, ಆತ್ಮಕ್ಕೆ ಮೇಲೆ ಹಾರಾಡಲು ಅವಕಾಶಕೊಡದೆ, ರಶಿಮೆ ಹುಳ ತನ್ನ ಸುತ್ತ ತಾನೇ ಸಂಕೋಲೆ ಬೆಳೆಸಿಕೊಳ್ಳುವಂತೆ ನಮ್ಮ ಸೆರೆಮನೆಯನ್ನು ನಾವೇ ಕಟ್ಟಿಕೊಂಡು, ನರಿ ಮರದ ಪೊಟ್ರೆಯಲ್ಲಿ ಹುದುಗಿಕೊಳ್ಳುವಂತೆ ಹುದುಗಿಕೊಳ್ಳುತ್ತೇವೆ. ನಮ್ಮ ಹಳ್ಳಿಯಲ್ಲಿ ಯಜಮಾನರು ಹೇಳುತ್ತಿದ್ದುದು ಜ್ಞಾಪಕಕ್ಕೆ ಬರುತ್ತದೆ. ಅವರು ರವೀಂದ್ರನಾಥ ಟಾಗೂರರು ಹೇಳಿದ

"ಹೇ ನನ್ನ ಬಾಳಿನ ಮಾರ್ಗದರ್ಶಕನೇ ಈ ನಿಶ್ಶಕ್ತವಾದ ದೋಣಿ ಪಟಗಳನ್ನೆಲ್ಲಾ ಸಡಿಲು ಮಾಡು. ಯಾಕೆಂದರೆ ನನ್ನ ಎದುರಿಗೆ ಶಾಂತಿಯ ವಿಸ್ತಾರವಾದ ಸಮುದ್ರ ಹರಡಿದೆ.

"ಹೇ ನನ್ನ ಶಾಶ್ವತನಾದ ಗೆಳೆಯನೇ ನನ್ನನ್ನು ಸ್ವೀಕರಿಸು ; ಅಪ್ಪಿ ಹಿಡಿದುಕೊ.

"ಹೇ ಪ್ರಭು ನನ್ನ ಕೊನೆಯ ಪ್ರಯಾಣಕ್ಕೆ ನಿನ್ನ ದಯೆ ಮತ್ತು ಕ್ಷಮೆಯ ಅಪಾರ ನಿಧಿಯಿಂದ ತೆಗೆದುಕೊಳ್ಳುತ್ತೇನೆ. ಮರ್ತ್ಯದ ಬಂಧನಗಳು ಕರಗಲಿ; ವಿಶಾಲವಾದ ಬ್ರಹ್ಮಾಂಡ ನನ್ನನ್ನು ತನ್ನ ಬಾಹುಗಳಲ್ಲಿ ಅಪ್ಪಿಕೊಳ್ಳಲಿ. ಆ ಮಹತ್ತರವಾದ ತಿಳಿಯದಿರುವ ಶಕ್ತಿಯ ಎದುರಿಗೆ ನಿರ್ಭಯವಾಗಿ ನಿಂತುಕೊಳ್ಳುವ ಯೋಗ ನನಗೆ ಉಂಟಾಗಲಿ."

ಮೇಲಿನ ಪದ್ಯವನ್ನು ಕೇಳಿದ "ಅಪ್ಪಾ ಭಗವಂತನನ್ನು ಹೀಗೆ ಎದುರುಗೊಳ್ಳಬೇಕಾದರೆ ಮನೆಯಲ್ಲಿ ಹಾಸಿಗೆ ಮೇಲೆ ಬಿದ್ದುಕೊಂಡು ಎದುರುಗೊಳ್ಳುವುದಕ್ಕಿಂತ ಯಾವುದಾದರೂ ನಿರ್ಜನವಾದ ಭಯಂಕರವಾದ ಪರ್ವತದ ಶಿಖರದ ಮೇಲೋ, ಬಿರುಗಾಳಿ ಬೀಸುತ್ತಿರುವ ನಡುಸಮುದ್ರದ ಮೇಲೆಯೋ ಎದುರುಗೊಳ್ಳುವುದು ಉತ್ತಮ. ಅವನ ರೂಪವು ಅದ್ಭುತವಾಗಿದ್ದರೂ ಆಗ ನಾವು ಸುಲಭವಾಗಿ ಅದನ್ನು ಎದುರುಗೊಳ್ಳಬಹುದು" ಎನ್ನುತ್ತಿದ್ದರು.

ವಿಜಯದಶಮಿಯ ದಿನ ಆಯುಧ ಪೂಜೆಯಷ್ಟೆ. ಥೇರ್ಮನ್ನರ ಕುಂಟ ಕುದುರೆ, ಬೈಸಿಕಲ್ಲು ಟಪಾಲು ಚೀಲ ವಿಶಿಷ್ಟಾದ್ವೈತ ಧ್ವಜನ ತಿರುಪ ಕೂಡೆ ನಾಮದ ಪೆಟ್ಟಿಗೆ ಘಂಟಾವತಾರನ ಮಡಿದೊಣ್ಣೆ, ಪೌರೋಹಿತ್ಯದ ಸ್ಟಾಂಡು ಮತ್ತು ಪುಸ್ತಕಗಳು ಎಲ್ಲಾ ಮೆರವಣಿಗೆ ಹೊರಟವು. ಆ ದಿನ

ಬನ್ನಿ ಮಂಟಪದ ಬಯಲಿನಲ್ಲಿ ಆದಿಕರ್ನಾಟಕರು ಅದ್ಭುತವಾದ ನರ್ತನ ವನ್ನು ಮಾಡಿದರು. ನಿಜವಾಗಿಯೂ ಭಗವಂತನೇ ಅಧ್ಯಕ್ಷತೆ ವಹಿಸಿ ದಂತೆ ತೋರುತ್ತಿದ್ದಿತು. ಅದಾದನಂತರ ಅಳ್ಳಿಕಟ್ಟೆ ಸಮೇರಾಯ, ಒಳ್ಳೆಯ ನಾಗರ ಹಾವಿನಂತೆ ಕುಣಿದ. ಆದರೆ ಸಮೇರಾಯ ಭಾಂಕಿಯಿಲ್ಲದೆ ಬಂದಿದ್ದ. ಅದಕ್ಕೆ ಕಾರಣ ಹೀಗೆ ಇತ್ತು. ಈ ಅಳ್ಳಿಕಟ್ಟೆ ಸಮೇರಾಯ ಗಳದು ಬಹಳ ಹಿಂದಿನ ವಂಶ. ಸಮೇರಾಯ ದಾಯಾದಿಗಳು ಈಗ ಕೆಲವು ಕಾಲದ ಕೆಳಗೆ ತಮ್ಮಲ್ಲಿದ್ದ ಭಾಂಕಿ (ತುತ್ತೂರಿ) ಬನವಾಸಿ (ತಾಮ್ರದ ಜೋಳಿಗೆ) ಬಸವ ಇವುಗಳನ್ನು ಹಂಚಿಕೊಂಡು ಬೇರೆ ಬೇರೆ ಯಾದರು. ಈಚೆಗೆ ಅರಳಿಕಟ್ಟೆ ಸಮೇರಾಯನ ಹತ್ತಿರ ೯ ಬಸವ ಸೇರಿತು. ಕಾರ್ಲೆ ಗ್ರಾಮದ ಅವನ ದಾಯಾದಿಯಲ್ಲಿ ಒಂದೂ ಸೇರಲಿಲ್ಲ. ಒಂದು ದಿನ ಕಾರ್ಲೆಯವನು ಬಂದು ಆಳ್ಳಿಕಟ್ಟೆಯವನನ್ನು ಒಂದು ಬಸವನನ್ನ ಕೇಳಿದ. ಪರಸ್ಥಳವಾದುದರಿಂದ ದಾಯಾದಿಯಾದರೂ ಅಳ್ಳಿಕಟ್ಟೆ ಯವನು ಕೊಡಲು ಹಿಂದೆಗೆದ. ಕಾರ್ಲೆಯವನು ಕೂಡಲೇ "ಅಳ್ಳಿ ಕಟ್ಟೆಯವನು ನನ್ನ ಒಂದು ಬಸವ ಭಾಂಕಿ ಶಂಖ ಜಾಗಟೆ ಕಡಾಸು ಆಂಜನೇಯ ವಿಗ್ರಹ ನಾಮದ ಪೆಟ್ಟಿಗೆ ಇವುಗಳನ್ನು ಕದಿದ್ದಾನೆಂದು ಕೋರ್ಟಿನಲ್ಲಿ ಅರ್ಜಿಕೊಟ್ಟ.. ಅಳ್ಳಿಕಟ್ಟೆಯವನು ಭಾಂಕಿ ಮುಂತಾದ ಸಾಮಾನುಗಳನ್ನೆಲ್ಲಾ ನೆಲದಲ್ಲಿ ಹೂಳಿಟ್ಟ. ಆದರೆ ಬಸವನನ್ನು ಹೂಳಿ ಮುಚ್ಚಿಡಲು ಆಗಲಿಲ್ಲ. ಬಸವನಿಗೆ ವಾರಂಟು ಬಂತು. ಕೋರ್ಟಿಗೆ ಕರೆದುಕೊಂಡು ಹೋಗಿ ವಿಚಾರಣೆ ಆಯಿತು. ಈ ನಡುವೆ ಕೋರ್ಟಿನ ವಿಚಾರಣೆ ನಡೆಯುವವರೆಗೆ ಕೆಲವು ವರುಷ ಸಮೇರಾಯ ಭಾಂಕಿ ಜಾಗಟೆ ಶಂಖವಿಲ್ಲದೆಯೇ ತಿರುಗುತ್ತಿದ್ದ. ಈ ಕಾರಣದಿಂದ ಜಾಗಟೆ ತುತ್ತೂರಿ ಶಂಖದೊಂದಿಗೆ ಪ್ರಕಟವಾಗಬೇಕಾಗಿದ್ದ ಸಮೇರಾಯ ಬರಿಯ ಎತ್ತಿ ನೊಂದಿಗೆ ಮಾತ್ರ ಸದ್ಯಕ್ಕೆ ತಿರುಗುತ್ತಿದ್ದ.

ವಿಜಯದಶಮಿಯ ರಾತ್ರಿ ಇದ್ದಕ್ಕಿದ್ದಂತೆ ಅಂತರಿಕ್ಷವನ್ನು ಒಂದು ಮಿಂಚು ಫಳಾರನೆ ಒಡೆದು ಚೂರುಮಾಡಿತು. ಗ್ಯಾಸ್ ದೀಪಗಳೆಲ್ಲಾ ಹೋಗಿಯೇ ಬಿಟ್ಟವು. ಪಂಜೂ ಹೋಯಿತು. ಗೊರವೆ ಕಡ್ಡಿ ಮಾತ್ರ ಸ್ವಲ್ಪ ಕೆಂಪಗೆ ಕಾಣುತ್ತಿದ್ದಿತು. ಎಲ್ಲೆಡೆಯೂ ಗಾಢಾಂಧಕಾರವೇ ವ್ಯಾಪಿಸಿತು. ಅರ್ಚಕ ಬನ್ನಿ ಚಿಗರುಗಳನ್ನು ಕುಯ್ಯುತ್ತಿದ್ದ. ಮಧ್ಯೆ

ಮಧ್ಯೆ ಒಂದೊಂದು ಮಿಂಚು ಅತ್ಯಂತ ಹೊಳಪಾಗಿ ಜಗತ್ತಿನ ಮೇಲೆ ಬೀಳುತ್ತಿದ್ದಿತು. ಇದು ದೇವಲೋಕದಲ್ಲಿ ಊರ್ವಶಿ ಅಪ್ಸರೆಯರು ನರ್ತನ ಮಾಡುತ್ತಿರುವಾಗ ಅವರ ದಂತದ, ನಖದ, ನೇತ್ರದ ಹೊಳಪೋ ಎಂಬಂತೆ ಒಂದು ಗಳಿಗೆ ಬೆಳಗಿ ದೇವರನ್ನೂ ಜನರನ್ನೂ ತೋರಿಸಿ ಮತ್ತೆ ಜಗತ್ತನ್ನು ಅಂಧಕಾರದಲ್ಲಿ ಅದ್ದಿಬಿಡುತ್ತಿದ್ದಿತು. ಅಂದಿನ ಸಿಡಿಲೂ ಗುಡುಗೂ ಅತ್ಯದ್ಭುತವಾಗಿ ದೇವರಾಜನು ದಿಗ್ವಿಜಯಕ್ಕೆ ಹೊರಟಿರುವನೋ, ಇದು ಅದರ ರಣಕಹಳೆಯೋ ಎಂಬಂತೆ ತೋರುತ್ತಿದ್ದಿತು.

ಅರ್ಚಕನು ಬೇಗ ಬೇಗ "ಬನ್ನಿಮರ ಪಾಪವನ್ನು ಪರಿಹರಿಸುತ್ತದೆ, ಬನ್ನಿ ಶತ್ರುಗಳನ್ನು ನಾಶಮಾಡುತ್ತದೆ. ಪಾಂಡವರು ಅಜ್ಞಾತವಾಸದಲ್ಲಿದ್ದಾಗ ಅವರ ಆಯುಧಗಳನ್ನೆಲ್ಲಾ ಸಂರಕ್ಷಿಸಿ ಇಟ್ಟುಕೊಂಡಿತ್ತು. ಶ್ರೀ ರಾಮಚಂದ್ರನಿಗೆ ಇದರ ದರ್ಶನದಿಂದ ಪ್ರಿಯವಾಯಿತು" ಎಂದು ಹೇಳಿ ಎಲ್ಲರಿಗೂ ಪ್ರಸಾದವನ್ನು ಹಂಚಿದ. ಮಳೆಯ ಭಯದಿಂದ, ಉತ್ಸವ ಬೇಗ ಬೇಗ ಊರನ್ನು ಹಿಂದಿರುಗಿ ತಲಪಿತು. ಉತ್ಸವ ಮನೆ ಸೇರುವ ವೇಳೆಗೆ ಸರಿಯಾಗಿ ಮಳೆ ಅಸಾಧ್ಯವಾದ ಬಿರಿಸಿನಿಂದ ಪ್ರಾರಂಭವಾಯಿತು. ಅಂತರಿಕ್ಷದಲ್ಲಿ ಎರಡು ಮಹಾಸೇನೆಗಳಿಗೆ ಭಾರಿ ಹೋರಾಟವೇ ಪ್ರಾರಂಭವಾದಂತೆ ತೋರಿತು. ಮೇಘದ ಆನೆಗಳು, ಮಿಂಚಿನ ಅಸ್ತ್ರಗಳು, ಸಿಡಿಲಿನ ಸಿಂಹನಾದಗಳು, ಗುಡುಗುಗಳ ಆರ್ಭಟ, ಮಳೆಯ ಹನಿಗಳ ರಪರಪ ರಪರಪ ಬಾಣ ವರ್ಷ ಇವು ಪ್ರಳಯಕಾಲದ ಕಾಳಗವಾಗಿ ತೋರಿದುವು. ಬೆಳಗಿನ ಜಾವ ಯಾವಾಗ ಮಳೆನಿಂತಿತೋ ಗೊತ್ತಿಲ್ಲ. ಬೆಳಗಾದ ಮೇಲೆ, ಮಳೆಯ ಅಮೃತಸೇಚನೆಗೆ ಒಳಗಾದ ಇಳೆ, ಹಿತವಾದ ಸೂರ್ಯನ ಕರಗಳಿಂದ ಆಲಿಂಗನ ಹೊಂದಿ ಜನರ ಕಣ್ಮನಗಳಿಗೆ ಶಾಂತಿಯನ್ನುಂಟು ಮಾಡಿತು. ಬರಿಯ ಹೊಗಳುಬಟ್ಟ ವಂಧಿ ಮಾಗಧರ ಪ್ರಶಂಸೆಗೆ ಮಾತ್ರವಲ್ಲದೆ ಪ್ರಜಾವರ್ಗದವರೆಲ್ಲರ ಪ್ರೇಮಕ್ಕೂ ಪಾತ್ರವಾದ ಸರ್ಕಾರದಂತೆ, ಪ್ರಕೃತಿ ಜಗತ್ತಿಗೆ ಆನಂದವನ್ನುಂಟುಮಾಡಿತು.

---

# ೨೯. ಸ್ವಾತಂತ್ರ್ಯದ ಕರೆ

ಸುದರ್ಶನ ಹೈಸ್ಕೂಲನ್ನು ದಾಟಿ ಕಲ್ಯಾಣನಗರಿಯ ಕೇಂದ್ರ ಕಾಲೇಜನ್ನು ಸೇರಿದನು. ಕಾಲೇಜಿನಲ್ಲಿಯೂ ಮೂರು ವರುಷ ಮುಗಿದು ಅದೇ ವರುಷ ಡಿಗ್ರಿ ಪಡೆಯುವುದರಲ್ಲಿದ್ದನು. ಸುದರ್ಶನನ ಕಾಲೇಜಿನ ವೆಚ್ಚವನ್ನೆಲ್ಲಾ ಈವರೆಗೆ ಅನಂತುವೇ ವಹಿಸಿದ್ದನು. ಸುದರ್ಶನನ ತಾಯಿ ಸುಭದ್ರೆಗೂ ಅನಂತುವಿಗೂ "ಸುದರ್ಶನ ವಿದ್ಯೆ ಮುಗಿದ ಕೂಡಲೇ ಯಾವುದಾದರೂ ಉದ್ಯೋಗವನ್ನು ಕೈಕೊಂಡು ಸಂಪಾದನೆ ಮಾಡುತ್ತಾನೆ. ಸುದರ್ಶನನ ಅಪ್ಪ, ಡಾಕ್ಟರ್ ಅಪ್ಪಣ್ಣ ಬಿಟ್ಟಿದ್ದ ಸಾಲ ತೀರಿಸುತ್ತಾನೆ. ತಂಗಿ ಸೀತೆಯ ಮದುವೆ ವಿದ್ಯಾಭ್ಯಾಸದ ಏರ್ಪಾಡುಗಳನ್ನು ಮಾಡುತ್ತಾನೆ" ಎಂಬ ಆಸೆ ಇತ್ತು. ಸುದರ್ಶನನೂ ಮಾವನ ಮನೆಯಿಂದ ತಾಯಿಯನ್ನು ಬಿಡಿಸಿ ಬೇರೆ ಸಂಸಾರ ಹೂಡುವ ಸುಖಸ್ವಪ್ನದಲ್ಲಿ ತಲ್ಲೀನನಾಗಿದ್ದನು. ಅವನ ಜತೆಗಾರರಾಗಿ ಅವನ ಜತೆಯಲ್ಲಿಯೇ ಉದ್ದಕ್ಕೂ ಅವನಂತೆಯೇ ಪರೀಕ್ಷೆಗಳಲ್ಲಿ ತೇರ್ಗಡೆಯಾಗುತ್ತಾ ಬರುತ್ತಿದ್ದ ರಂಗಪ್ಪ ಸುಬ್ಬು, ಅಜಿಜ್ ಸಾಬ್ ಎಲ್ಲರೂ ಇದೇ ಬಗೆಯ ಆಸೆಯಲ್ಲಿದ್ದರು. ಪರೀಕ್ಷೆಯಲ್ಲಿ ತೇರ್ಗಡೆಯಾಗಬೇಕು. ಗ್ರ್ಯಾಜುಯೇಟ್ ಆಗಬೇಕು. ಹುದ್ದೆಯಿಂದ ಹುದ್ದೆಗೆ ದೊಡ್ಡ ದೊಡ್ಡ ಹುದ್ದೆಗೆ ಏರಬೇಕು. ಒಳ್ಳೆಯ ಹೆಣ್ಣನ್ನು ಮದುವೆ ಆಗಬೇಕು. ಅಂತೂ ಸುಖವಾಗಿರಬೇಕು. ಇದೇ ಎಲ್ಲರ ಆಸೆಯೂ ಆಗಿದ್ದಿತು. ಜತೆಗೆ ಸುದರ್ಶನನಿಗೆ ತಂದೆಯ ಸಾಲವನ್ನು ತೀರಿಸಿ ತಂಗಿ ಸೀತೆಯ ಮದುವೆಯನ್ನೂ ಮಾಡುವ ಭಾರ ಬಿದ್ದಿತ್ತು. ಒಟ್ಟಿನಲ್ಲಿ ನೋಡಿದರೆ ಸುದರ್ಶನನಷ್ಟು ಹೆಚ್ಚು ಜವಾಬ್ದಾರಿ ಯಾರ ಮೇಲೆಯೂ ಬಿದ್ದಿರಲಿಲ್ಲ. ಆದರೆ ಅವನು ಯುವಕನಾಗಿದ್ದುದರಿಂದ ಯಾವುದಕ್ಕೂ ಧೈರ್ಯವಾಗಿಯೇ ಇದ್ದನು.

ಅದು ಸಾವಿರದ ಒಂಬೈನೂರ ಇಪ್ಪತ್ತನೆಯ ಇಸವಿ. ಜಗತ್ತಿನ ಆ ಪ್ರಥಮ ಯುದ್ಧದಲ್ಲಿ ಭಾರತೀಯರು ಹತ್ತುಲಕ್ಷ ಪ್ರಜೆಗಳನ್ನೂ ನೂರ ಐವತ್ತು ಕೋಟಿ ರುಪಾಯಿಗಳನ್ನೂ ಕೊಟ್ಟಿದ್ದರು. ಯುದ್ಧದಲ್ಲಿ ಇಂಗ್ಲಿಷರಿಗೆ ಜಯವಾಯಿತು. ಯುದ್ಧದ ಕಾಲದಲ್ಲಿ ಇಂಗ್ಲಿಷರು ಪದ್ಧತಿಯಂತೆ

ಭಾರತಕ್ಕೆ ಯುದ್ಧ ಮುಗಿದನಂತರ ಸ್ವಾತಂತ್ರ್ಯವನ್ನು ಕೊಡುತ್ತೇವೆಂದು ಹೇಳುತ್ತಾ ಬಂದರು. ಯುದ್ಧ ಮುಗಿದ ಕೂಡಲೇ ಆ ಮಾತುಗಳೆಲ್ಲಾ ಅವರಿಗೆ ಪೂರ್ಣವಾಗಿ ಮರೆತೇ ಹೋದುವು. ಅವರ ವಾಗ್ದಾನವನ್ನು ಅವರಿಗೆ ಜ್ಞಾಪಿಸಿದಾಗ ಸ್ವಾಭಾವಿಕವಾಗಿ ಇಂಗ್ಲಿಷರಿಗೆ ಸಿಟ್ಟು ಹತ್ತಿತು. ಆಗ ಅವರು ರೌಲಟ್‌ಬಿಲ್ ಎಂಬ ಒಂದು ಕಾನೂನನ್ನು ಅನುಮೋದಿಸಿದರು. ಇದರಿಂದ ಜನಗಳ ಸಾಮಾನ್ಯ ಸ್ವಾತಂತ್ರ್ಯಕ್ಕೆ ಸಹ ಬಾಧಕವುಂಟಾಯಿತು. ಅನಂತರ ಜಲಿಯನ್‌ವಾಲಾ ಬಾಗಿನಲ್ಲಿ ಡೈಯರ್, ನಿರಾಯುಧರಾದ ಪ್ರಜೆಗಳ ಮೇಲೆ ಗುಂಡು ಹಾರಿಸಿ "ಮದ್ದು ಗುಂಡುಗಳು ಮುಗಿದುಹೋದುವು. ಇಲ್ಲದೆ ಇದ್ದಿದ್ದರೆ ಇನ್ನೂ ಹೆಚ್ಚಾಗಿ ಕೊಲೆ ಮಾಡುತ್ತಿದ್ದೆ" ಎಂದನು. ಇವನಿಗೆ ಆಂಗ್ಲೇಯರು ಭಾರತದಲ್ಲಿ ೨೦ ಸಾವಿರ ಪೌಂಡು ನಿಧಿ ಕೊಟ್ಟರು. ಇಂಗ್ಲೆಂಡಿನಲ್ಲಿ ಸಾರ್ವಜನಿಕರು ಬಹಿರಂಗವಾಗಿ ಬಹುಮಾನ ಮಾಡಿದರು. ಆಂಗ್ಲೇಯರು, ತಮ್ಮ ಅನುನಾಯಿಗಳು ಭಾರತದಲ್ಲಿ ಏನು ಮಾಡಿದರೂ ಒಪ್ಪಿಯೇ ಒಪ್ಪುತ್ತಾರೆಂಬುದು ಭಾರತೀಯರಿಗೆ ಚೆನ್ನಾಗಿ ಮಂದಟ್ಟಾಯಿತು. ಅದುವರೆಗೆ ಬ್ರಿಟಿಷ್ ಧರ್ಮ ಬ್ರಿಟಿಷ್ ನೀತಿ ಎನ್ನುತ್ತಿದ್ದ ಭಾರತೀಯರಿಗೆ ಈ ಧರ್ಮ ಬರಿಯ ರಕ್ತವನ್ನು ಹೀರುವ ವನವ್ಯಾಘ್ರದ ಧರ್ಮ ಎಂಬುದು ಚೆನ್ನಾಗಿ ಗೊತ್ತಾಯಿತು. ಈ ಹೊಸ ಚೈತನ್ಯದಿಂದ ಭಾರತ ಅಲ್ಲೋಲಕಲ್ಲೋಲವಾಯಿತು. ಸ್ವತಂತ್ರ ಸ್ವರಾಜ್ಯ ಎಂಬ ಮಾತುಗಳು ಎಲ್ಲೆಲ್ಲೂ ಕೇಳತೊಡಗಿದುವು.

1920 ರಲ್ಲಿ ಲೋಕಮಾನ್ಯ ಬಾಲ ಗಂಗಾಧರ ತಿಳಕರು ಸ್ವರ್ಗಸ್ಥರಾದರು. ಗಾಂಧಿ ಗಾಂಧಿ ಎಂಬ ಹೆಸರು 2-3 ವರುಷಗಳಿಂದ ಸುಮಾರಾಗಿ ಕೇಳುತ್ತಿದ್ದದ್ದು ನಿತ್ಯಾ ಎಲ್ಲೆಲ್ಲೂ ಮಂತ್ರದಂತೆ ಉಚ್ಚಾರವಾಗತೊಡಗಿತು. ಹಳ್ಳಿ ಹಳ್ಳಿಗಳಲ್ಲಿಯೂ "ಅದ್ಯಾರೋ ಗಾಂಧಿಯಂತೆ. ಕಂಪನಿ ಸರ್ಕಾರ ಅಲ್ಲಾಡಿಸುತ್ತಿದ್ದಾನಂತೆ. ಹೊಡೆದರೆ ಎದುರಾಗಿ ಹೊಡೆಯುವುದಿಲ್ಲವಂತೆ. ಸರ್ಕಾರ ಒಂದು ಕಡೆಯಿಂದ ಸೋಲು ಒಪ್ಪಿಕೊಳ್ಳುತ್ತಾ ಇದೆ" ಎಂಬ ಕೂಗು ಕೇಳುತ್ತಿದ್ದಿತು. ವಿದ್ಯಾರ್ಥಿಗಳ ಉತ್ಸಾಹ ಅಸಾಧ್ಯವಾಗಿದ್ದಿತು. ಅದುವರೆಗೆ ಗಾಂಧಿಜಿಯವರ ಮುಖವನ್ನು ಕೂಡ ನೋಡದಿದ್ದವರೆಲ್ಲಾ ಗಾಂಧಿಜಿಯವರು ಅವತಾರ ಪುರುಷರು ಎಂಬುದ

ರಲ್ಲಿ ಸಂದೇಹವಿಲ್ಲವೆಂದುಕೊಂಡು ಅವರ ಕೊಂಡಾಟದಲ್ಲಿ ತೊಡಗಿದರು. ವಿದ್ಯಾರ್ಥಿಗಳಲ್ಲಿ ಎಲ್ಲಿ ನೋಡಿದರೂ ಗಾಂಧಿಜಿ ಆಫ್ರಿಕಾದಲ್ಲಿ ಹಾಗೇ ಮಾಡಿದರು, ವೈಕೋಂನಲ್ಲಿ ಹೀಗೆ ಮಾಡಿದರು. ಚಂಪಾರಣ್ಯದಲ್ಲಿ ನಡೆದುದು ಹೀಗೆ; ನಿರಾಯುಧರಾಗಿಯೇ ದಕ್ಷಿಣ ಆಫ್ರಿಕಾದ ಸರ್ಕಾರ ವನ್ನು ಬಗ್ಗಿಸಿದರು. ಎಂದೂ ಮುಂತಾಗಿ ಅತ್ಯಂತ ಆದರದೊಡನೆ ಭಗ ವಂತನ ನಾನಾ ಅವತಾರದ ಲೀಲೆಗಳನ್ನು ಕುರಿತು ಮಾತನಾಡುವಂತೆ ಮಾತನಾಡುತ್ತಿದ್ದರು.

ಆ ವರುಷವೇ ಕಲ್ಯಾಣ ನಗರಿಯಲ್ಲಿ ಮೊದಲು ಗಾಂಧಿ ಜಯಂತಿ ಯನ್ನು ವಿದ್ಯಾರ್ಥಿಗಳು ಆಚರಿಸಿದುದು. ಆ ದಿನ ಹುಡುಗರು ಸ್ಕೂಲಿಗೆ ಹೋಗಲಿಲ್ಲ. ಸ್ಕೂಲಿನ ಬಾಗಿಲಿನಲ್ಲಿ ಗಾಂಧಿಜಿಯವರ ಪಠದೊಂದಿಗೆ ಮೆರ ವಣಿಗೆಗೆ ಸಿದ್ಧರಾಗಿ ನಿಂತುಬಿಟ್ಟರು. ಇಂತಹ ಪರಿಸ್ಥಿತಿ ಬರಬಹುದೆಂದು ಯಾವ ಉಪಾಧ್ಯಾಯರೂ ಯೋಚಿಸಿರಲಿಲ್ಲ. ಅಲ್ಲಿಂದ ಮುಂದೆ ಅದೇ, ಭಾರತದಲ್ಲಿ ಆಗಾಗ ಮಾಮೂಲಾಗುತ್ತದೆ ಎಂಬುದು ಅವರಿಗೆ ಅನು ಭವಕ್ಕೆ ಬಂದಿರಲಿಲ್ಲ. ವಿದ್ಯಾರ್ಥಿಗಳು ಅತ್ಯಂತ ಉತ್ಸಾಹದಿಂದ ಪತ್ರಿಕೆ ಗಳನ್ನು ಓದತೊಡಗಿದ್ದರು. ನಾಗಪುರ ಕಾಂಗ್ರೆಸ್ ನಡೆದುದು: ಸೇಠ್ ಜಮನಾಲಾಲ್ ಬಜಾಜ್ ತಿಳಕ್ ಸ್ವರಾಜ್ಯನಿಧಿಗೆ ಒಂದುಲಕ್ಷ ರುಪಾಯಿ ಕೊಟ್ಟುದು; ಜಮನಾಲಾಲ್ ಬಜಾಜರು ತಮ್ಮ ರಾಯ್ ಬಹದ್ದೂರ್ ಪ್ರಶಸ್ತಿಯನ್ನು ತಿರಸ್ಕರಿಸಿದುದು; ಪರದೇಶಿ ವಸ್ತ್ರಗಳನ್ನು ತರಿಸುವುದಿಲ್ಲ ವೆಂದು ಬೊಂಬಾಯಿನ ವರ್ತಕರು ಆಶ್ವಾಸನ ಕೊಟ್ಟುದು, ನಾಗಪುರ ಕಾಂಗ್ರೆಸ್ಸಿಗೆ ಸಿ ಆರ್. ದಾಸರು ಕೈಯಿಂದ 36 ಸಾವಿರ ರುಪಾಯಿ ಖರ್ಚುಮಾಡಿ ಬಂಗಾಳದಿಂದ 250 ಪ್ರತಿನಿಧಿಗಳನ್ನು ಕರೆದುಕೊಂಡು ಬಂದು ಅಸಹಕಾರದ ಠರಾವನ್ನು ಪುಷ್ಟೀಕರಿಸಿದುದು, ಬೆಜವಾಡದಲ್ಲಿ ಕೂಡಿದ ಅಖಿಲಭಾರತ ಕಾಂಗ್ರೆಸ್ ಸಮಿತಿಯಲ್ಲಿ ಇಪ್ಪತ್ತು ಲಕ್ಷ ರಾಟೆ ಗಳನ್ನು ದೇಶದಲ್ಲಿ ಪ್ರಚಾರಪಡಿಸಬೇಕೆಂದು ನಿರ್ಣಯಿಸಿದುದು; ಐವತ್ತು ಲಕ್ಷಕ್ಕಿಂತ ಹೆಚ್ಚಾಗಿ ಕಾಂಗ್ರೆಸ್ಸಿಗೆ ಸದಸ್ಯರು ಸೇರಿದುದು; ತಿಳಕ್ ಸ್ವರಾಜ್ಯ ನಿಧಿಗೆ ಒಂದು ಕೋಟಿ ಹದಿನೈದು ಲಕ್ಷ ರುಪಾಯಿ ಶೇಖರ ವಾದುದು; ಧಾರವಾಡದಲ್ಲಿ ನಡೆದ ಗುಂಡಿನ ಏಟಿನ ಪ್ರಕರಣ, ಯಾಕುಬ್ ಹುಸೇನರನ್ನು ಕಲ್ಕತ್ತಾಕ್ಕೆ ಹೋಗದಂತೆ ಸರ್ಕಾರ ಪ್ರತಿ

ಬಂಧಿಸಿದುದು; ಕರಾಚಿಯಲ್ಲಿ ಮೌಲಾನಾ ಮಹಮ್ಮದಾಲಿ ಶೌಕತಾಲಿ
ಗಳು. "ಆಂಗ್ಲೇಯರ ರಾಜ್ಯದ ಆಡಳಿತಕ್ಕೆ ಸಿಪಾಯಿಯಾಗುವುದೂ
ಸಿಪಾಯಿಗಳನ್ನು ಸೇರಿಸುವುದೂ, ಮುಸ್ಲಿಂ ಧರ್ಮಕ್ಕೆ ವಿರೋಧವೆಂದು"
ಪ್ರಚಾರಿಸಿದುದು ಇವೆಲ್ಲಾ ಪ್ರತಿದಿನ ವಿದ್ಯುತ್ ಪ್ರವಾಹದಂತೆ ವಿದ್ಯಾರ್ಥಿ
ಗಳ ಮನಸ್ಸನ್ನು ಚಲಿಸುತ್ತಿದ್ದುವು. ಪಧವೀಧರರು ಪ್ರತಿದಿನವೂ ರಾಜೀ
ನಾಮೆಗಳನ್ನು ಕೊಡುತ್ತಿದ್ದರು. ಇದ್ದಕ್ಕಿದ್ದಂತೆ ವಿದ್ಯಾರ್ಥಿಗಳು ಕಾಲೇಜ್
ಸ್ಕೂಲುಗಳನ್ನು ಬಹಿಷ್ಕರಿಸಿ ಎಂಬ ಸಂದೇಶ ಮಹಾತ್ಮಾ ಗಾಂಧಿಯವ
ರಿಂದ ಬಂದಿತು. ಅಖಿಲ ಭಾರತದಲ್ಲಿ ಎಲ್ಲಿ ನೋಡಿದರೂ ವಿದ್ಯಾರ್ಥಿಗಳು
ಸ್ಕೂಲುಗಳನ್ನು ಬಹಿಷ್ಕರಿಸಿ ರಾಷ್ಟ್ರೀಯ ಶಾಲೆಗಳಲ್ಲಿ ಸೇರುತ್ತಿದ್ದರು.

ಗುಜರಾತ್ ವಿದ್ಯಾಪೀಠ ಗಾಂಧಿಯವರ ಅಧ್ಯಕ್ಷತೆಯಲ್ಲಿಯೇ
ಪ್ರಾರಂಭವಾಯಿತು. ಬಂಗಾಳದಲ್ಲಿ ಅನೇಕ ಲಕ್ಷ ವಿದ್ಯಾರ್ಥಿಗಳು ಶಾಲೆ
ಕಾಲೇಜುಗಳನ್ನು ಬಿಟ್ಟರು. ಜನರು ಕಲ್ಕತ್ತಾದಲ್ಲಿ ನ್ಯಾಶನಲ್ ಕಾಲೇ
ಜನ್ನೂ, ಬಿಹಾರ್‌ನಲ್ಲಿ ವಿದ್ಯಾಪೀಠವನ್ನೂ ಅಲಿಗರ್‌ನಲ್ಲಿ ನ್ಯಾಶನಲ್
ಮುಸ್ಲಿಂ ಯೂನಿವರ್ಸಿಟಿಯನ್ನೂ, ಮಹಾರಾಷ್ಟ್ರದಲ್ಲಿ ತಿಳಕ ಮಹಾರಾಷ್ಟ್ರ
ವಿದ್ಯಾಪೀಠವನ್ನೂ ಸ್ಥಾಪಿಸಿದರು. ರಾಷ್ಟ್ರೀಯ ವಿದ್ಯಾಶಾಲೆಗಳು ಎಲ್ಲೆ
ಲ್ಲಿಯೂ ದೊಡ್ಡ ಸಂಖೆಯಲ್ಲಿ ಬೆಳೆಯತೊಡಗಿದವು. ಸುದರ್ಶನನ
ಕಾಲೇಜು ವ್ಯಾಸಂಗ ಈ ವೇಳೆಗೆ ಮುಗಿದಿದ್ದಿತು. ಕಾಲೇಜನ್ನು
ಬಿಡುವಾಗ ಅವನಿಗೆ ಅನಂತರ ಮುಂದೆ ಏನು ಮಾಡಬೇಕು ಎಂಬುವು
ದೊಂದೂ ತಿಳಿದಿರಲಿಲ್ಲ. ಭಾರತಭಾಗ್ಯ ವಿಧಾತಾ; ಭಾರತದ ಮಂಗಳ
ಕರ್ತ ಮಹಾತ್ಮಾ ಗಾಂಧಿ, ಈ ದೇಶದ ಅನೇಕ ಶತಮಾನಗಳ ನಿದ್ರೆ
ಯನ್ನು ಪರಿಹರಿಸಿ ಇದಕ್ಕೆ ಚೈತನ್ಯವನ್ನು ಕೊಟ್ಟಿದ್ದಾನೆ. ಈ ಸತ್ತ ದೇಶಕ್ಕೆ
ಜೀವವನ್ನು ತುಂಬಿದ್ದಾನೆ. ಇಂತಹ ಮಹಾತ್ಮಾ ಈಗ "ಸ್ಕೂಲುಗಳನ್ನು
ಬಿಟ್ಟು ವಿದ್ಯಾರ್ಥಿಗಳು ಬನ್ನಿ" ಎನ್ನುತ್ತಾನೆ. ಆದುದರಿಂದ ನಾವು
ಕಾಲೇಜು ಬಿಡಬೇಕು. "ಹೀಗೆ ಯೋಚಿಸಿಕೊಂಡು ವಿದ್ಯಾರ್ಥಿಗಳು
ಕಾಲೇಜನ್ನು ಬಿಟ್ಟರು. ಆಗ ಮಹಾತ್ಮಾ ಗಾಂಧಿಯವರು ಅಹಮ್ಮದಾ
ಬಾದಿನ ಸತ್ಯಾಗ್ರಹ ಆಶ್ರಮದಲ್ಲಿದ್ದರು. ಕಾಲೇಜನ್ನು ಬಿಟ್ಟ ಸುದರ್ಶನ,
ವಿಭೀಷಣ ರಾಮನ ಹತ್ತಿರಕ್ಕೆ ಹೋಗುವಂತೆ ಮಹಾತ್ಮರ ಬಳಿಗೆ
ಹೊರಟನು.

ಅದು ನವಂಬರ್ ಹದಿನೇಳನೆ ತಾರೀಖು. ಆ ದಿವಸ ಭಾರತಕ್ಕೆ,— ಈಚೆಗೆ ಎಂಟನೆಯ ಎಡ್ವರ್ಡರಾಗಿ ಸಿಂಹಾಸನ ತ್ಯಾಗಮಾಡಿದ ರಾಜ ಕುಮಾರರು—ಆಗ ಪ್ರಿನ್ಸ್ ಆಫ್ ವೆಲ್ಸ್ ಎಂಬ ಹೆಸರಿನವರು ಬರುವವ ರಾಗಿದ್ದರು. ಮೊದಲನೆಯ ಮಹಾ ಯುದ್ಧದಲ್ಲಿ ಭಾರತ ನೀಡಿದ ಸಹಾಯ; ಅದರ ವಿಷಯದಲ್ಲಿ ಆಂಗ್ಲೇಯರು ಪದ್ಧತಿಯಂತೆ ಹೇಳಿದ ಮಾತಿಗೆ ತಪ್ಪಿ ನಡೆದುದು, ನೀತಿಯ ಬಲವೂ ಪ್ರಜಾ ಬೆಂಬಲವೂ ಸ್ವಲ್ಪವೂ ಇಲ್ಲದೆ ಕೇವಲ ಪಶುಶಕ್ತಿಯಿಂದ ಮಾತ್ರವೇ ನಡೆಸುತ್ತಿದ್ದ ಸರ್ಕಾರವನ್ನೂ ಅದರ ಪರವಾಗಿ ಭಾರತಕ್ಕೆ ಬರುವ ಪ್ರಿನ್ಸ್ ಆಫ್ ವೇಲ್ಸ್ ರಾಜಕುಮಾರನನ್ನೂ ಪ್ರತಿಭಟಿಸಲು ಅಖಿಲ ಭಾರತದಲ್ಲಿಯೂ ಆ ದಿನ ಹರತಾಳ ಏರ್ಪಾಡಾಗಿದ್ದಿತು. ಗಾಂಧಿಯವರ ಹತ್ತಿರಕ್ಕೆ ಹೊರಟಿದ್ದ ಸುದರ್ಶನ ದಾರಿಯಲ್ಲಿ ಹದಿನೇಳನೇ ತಾರೀಖು ಧಾರವಾಡದಲ್ಲಿ ಇಳಿದನು.

ಆಗಿನ ಹರತಾಳಗಳ ಪ್ರಭಾವ ಅವನ್ನು ನೋಡಿದವರಿಗೆ ಮಾತ್ರವೇ ಗೊತ್ತು. ಆ ಅದ್ಭುತಗಳನ್ನು ಬಾಯಿಂದ ವಿವರಿಸುವುದು ಸಾಧ್ಯವಿಲ್ಲ. ಅಂದು ಧಾರವಾಡ ಸ್ಮಶಾನದಂತೆ ಇತ್ತು. ಆಗ ಮುಸ ಲ್ಮಾನರು ಈಗಿನಂತೆ ಎದ್ದೆತ್ತಿನ ಬಾಲ ಹಿಡಿಯುವವರಾಗಿರಲಿಲ್ಲ. ಅವರೂ ಪೂರ್ಣವಾಗಿ ಹರತಾಳವನ್ನು ಆಚರಿಸುತ್ತಿದ್ದರು. ಟಿಪ್ಪುಸುಲ್ತಾನ, ನಡುಹಗಲಿನಲ್ಲಿ ಊಟ ಮಾಡುವುದನ್ನು ಬಿಟ್ಟು ಎದ್ದು, ಸ್ವಾತಂತ್ರ್ಯ ಕ್ಕಾಗಿ ಆಂಗ್ಲೇಯರೊಂದಿಗೆ ಕಾದಾಡಿದವನೆಂಬುದು ಅವರಿಗೆ ಇನ್ನೂ ಜ್ಞಾಪಕವಿದ್ದಿತು. ಪಾಪ. ಸುದರ್ಶನನಿಗೆ ಧಾರವಾಡ ಹೀಗೆ ಸ್ಮಶಾನ ವಾಗಿ ಹರತಾಳ ಎಂದರೆ ಇಷ್ಟರಮಟ್ಟಿಗೆ ಆಗುತ್ತೆ ಎಂಬುದೂ ತಿಳಿ ದಿರಲಿಲ್ಲ. ಹರತಾಳ ಎಂಬ ಮಾತು ಕಿವಿಗೆ ಬಿದ್ದಿದ್ದಿತೇ ಹೊರತು ಅದರ ರೂಪ ಇಷ್ಟು ಕ್ರೂರ ಎಂಬುದು ಅವನಿಗೆ ಗೊತ್ತಾಗಿರಲಿಲ್ಲ. ಯಾವ ಹೋಟಲೂ ಯಾವ ಅಂಗಡಿಯೂ ತೆರೆದಿರಲಿಲ್ಲ. ಬೀಡಿ ಅಂಗಡಿಯಾಗಲಿ ಕಡೆಗೆ ಕಡಲೆಪುರಿ ಅಂಗಡಿಯಾಗಲಿ ತೆರೆದಿರಲಿಲ್ಲ. ನೋಡಿದಲ್ಲೆಲ್ಲಾ ಜನರು ಗುಂಪು ಗುಂಪಾಗಿ ನಿಂತಿರುತ್ತಿದ್ದರು. ಸುದರ್ಶನ ಕೊನೆಗೆ ನೆಟ್ಟಗೆ ಧಾರವಾಡದ ಡಿಸ್ಟ್ರಿಕ್ಟ ಕಾಂಗ್ರೆಸ್ ಸಮಿತಿಯ ಕಛೇರಿಯಲ್ಲಿ ಹೋಗಿ ಇಳಿದುಕೊಂಡ. ಆ ಕಾಲದ ಪ್ರಭಾವ. ಗಾಂಧಿಜಿಯವರ ಹೆಸರಿನ ಮಹಿಮೆ ಎಂದು ಕಾಣುತ್ತದೆ. ಆ ದಿನ ಸುದರ್ಶನ ಧಾರವಾಡದ ಸಾರ್ವ

ಜನಿಕ ಸಭೆಯಲ್ಲಿ ಒಂದು ಭಾಷಣವನ್ನು ಸಹ ಮಾಡಿಬಿಟ್ಟನು. ಅಲ್ಲಿ ಅವನು ಏನು ಹೇಳಿದನೋ ಅವನಿಗೇ ಗೊತ್ತಿಲ್ಲ. ಬೇರೆ ಊರಿಗೆ ಹೋಗಿ ಅಂತಹ ಸಾರ್ವಜನಿಕ ಸಭೆಯಲ್ಲಿ ತನ್ನ ಮೊದಲನೆಯ ಭಾಷಣ ಮಾಡು ವುದೆಂದರೆ, ಇವತ್ತಿಗೂ ತನಗೆ ಆ ಧೈರ್ಯ ಹೇಗೆ ಬಂದಿತೋ ಸುದರ್ಶನನಿಗೇ ಗೊತ್ತಿಲ್ಲ. ಆದರೆ ಎಲ್ಲವೂ ಸ್ವಾತಂತ್ರ್ಯದ ಚಳುವಳಿ, ಅದರ ನಾಯಕನ ಪ್ರಭಾವ.

ಮೂಕಂ ಕರೋತಿ ವಾಚಾಲಂ ಪಂಗುಂ ಲಂಘಯತೆ ಗಿರಿಂ. ಮೂಗನನ್ನು ವಾಚಾಳಿಯಾಗಿ ಮಾಡುತ್ತದೆ. ಕುಂಟ ಬೆಟ್ಟವನ್ನು ಹಾರು ತ್ತಾನೆ.

ಸುದರ್ಶನ ಹತ್ತೊಂಭತ್ತನೆಯ ತಾರೀಖು ಬೊಂಬಾಯಿ ಸೇರುವ ವೇಳೆಗೆ ವೇಲ್ಸ್ ರಾಜಕುಮಾರರು ಅಲ್ಲಿ ಇಳಿದು ಆಗಿತ್ತು. ಭಾರತದಲ್ಲಿ ಯಾವ ಕಲಹ ಪ್ರಾರಂಭವಾದರೂ ಅದು 2-3 ಗಂಟೆಗಳೊಳಗಾಗಿಯೇ ಹಿಂದೂ ಮುಸ್ಲಿಂ ಕಲಹವಾಗುತ್ತದೆ. ಬೊಂಬಾಯಿನಲ್ಲಿ ಆಗ ಹಿಂದು ಮುಸ್ಲಿಂ ದಂಗೆ ಎಂದು ಪ್ರಾರಂಭವಾಯಿತು. ಮಹಾತ್ಮಾ ಗಾಂಧಿ ಯವರೂ ಶ್ರೀಮತಿ ಸರೋಜಿನಿದೇವಿಯವರೂ ಪ್ರಾಣದ ಮೇಲಿನ ಆಸೆ ಯನ್ನು ಬಿಟ್ಟು ದಂಗೆ ನಡೆದ ಸ್ಥಳಗಳಿಗೇ ಹೋಗಿ ಜನರಿಗೆ ಸಮಾಧಾನ ಮಾಡಿದರು. ಗಾಂಧಿಯವರು ಐದು ದಿನ ಉಪವಾಸವನ್ನು ಸಹ ಆಚರಿ ಸಿದರು. ಬೊಂಬಾಯಿ ಪಟ್ಟಣದಲ್ಲಿ ಆಗ ಎಲ್ಲಿ ನೋಡಿದರೂ ಪರದೇಶೀ ಬಟ್ಟೆಗಳ ಲಂಕಾದಹನವೇ ಆಗುತ್ತಿದ್ದಿತು. ಭಾರತದಲ್ಲಿ ಯಾವಾಗ ದಂಗೆ ನಡೆದರೂ ಆಗುವಂತೆ ಆಗಲೂ ಸರ್ಕಾರ ಭಾರತದಲ್ಲಿ ಇದೆಯೋ ಇಲ್ಲವೋ ಎಂಬುದು ಗೊತ್ತಾಗಲಿಲ್ಲ. ಗಾಂಧಿಯವರು ಆಗ ಐದು ದಿನ ಉಪವಾಸಮಾಡಿದರು. ಸುದರ್ಶನ ಅಹಮ್ಮದಾಬಾದಿಗೆ ಹೋಗಿ ಸಬರ ಮತಿ ಆಶ್ರಮಕ್ಕೆ ಸೇರಿದನು.

ಹೀಗೆ ಗಾಂಧಿಯವರ ಸೇವೆಮಾಡುವ ಪುಣ್ಯ, ಆ ಕಾಲದಲ್ಲಿ ಸ್ಕೂಲು ಕಾಲೇಜುಗಳನ್ನು ಬಿಟ್ಟವರಿಗೆಲ್ಲಾ ದೊರೆಯಲಿಲ್ಲ. ಆಗ ಯಾವಾ ಗಲೂ ಗಾಂಧಿಜಿಯುವರನ್ನು ಕಂಡು "ಎಲ್ಲಿ ನಿಮ್ಮ ಅಪ್ಪಣೆಯಂತೆ ಸ್ಕೂಲು ಬಿಟ್ಟೆ. ಕಾಲೇಜು ಬಿಟ್ಟೆ. ಏನು ಮಾಡಲಿ" ಎಂದ್ಮು ಕೇಳುವ ವಿದ್ಯಾರ್ಥಿ ಗಳ ಸಂಖ್ಯೆ ಅನೇಕ ಲಕ್ಷಕ್ಕೆ ಏರಿತ್ತು. ಅವರಲ್ಲಿ ಬಹುಮಂದಿ ಸುದ

ರ್ಶನನಂತೆಯೇ ಮೊದಲು ಗಾಂಧಿಯವರ ಅನುಮತಿ ತೆಗೆದುಕೊಳ್ಳದೆ ಹೇಳದೆ ಕೇಳದೆ ಅಹಮ್ಮದಾಬಾದ್ ಸತ್ಯಾಗ್ರಹ ಆಶ್ರಮಕ್ಕೆ ಬಂದು ಸೇರುತ್ತಿದ್ದರು. ಗಾಂಧಿಯವರ ಅನುಯಾಯಿ, ಆಶ್ರಮದ ವ್ಯವಸ್ಥಾಪಕರು ಅವರಿಗೆಲ್ಲಾ "ಇಲ್ಲಿಗೆ ನೀವು ಬರಬೇಕೆಂದು ಗಾಂಧಿಯವರು ಬಯಸಲಿಲ್ಲ. ನಿಮ್ಮ ನಿಮ್ಮ ಊರುಗಳಿಗೆ ಹೊರಟುಹೋಗಿ. ಅಲ್ಲಿ ರಚನಾತ್ಮಕ ಕಾರ್ಯಕ್ರಮದಲ್ಲಿ ತೊಡಗಿರಿ. ಖಾದಿಯ ತಯಾರಿಕೆ, ಅಸ್ಪೃಶ್ಯತೆ ನಿವಾರಣೆ, ಹಿಂದು ಮುಸ್ಲಿಂ ಐಕ್ಯ, ಪಾನನಿರೋಧ, ಗ್ರಾಮ ನಿರ್ಮಲೀಕರಣ ವಯಸ್ಕರ ವಿದ್ಯಾಭ್ಯಾಸ" ಇವುಗಳಲ್ಲಿ ತೊಡಗಿ ಎಂದು ಹೇಳುತ್ತಿದ್ದರು. ಸ್ಕೂಲು ಕಾಲೇಜುಗಳನ್ನು ಬಿಟ್ಟು ಬರುತ್ತಿದ್ದ ವಿದ್ಯಾರ್ಥಿಗಳಿಗೆ ಈ ಸಂದೇಶ ಬಹು ಸಣ್ಣದಾಗಿ ತೋರಿತು. ಹಾಗೆ ರಚನಾತ್ಮಕ ಕಾರ್ಯಕ್ರಮದಲ್ಲಿ ತೊಡಗಿ ಕೆಲಸಮಾಡುವ ಶಕ್ತಿ ಅನೇಕ ವಿದ್ಯಾರ್ಥಿಗಳಿಗೆ ಇರಲಿಲ್ಲ. ನೆಟ್ಟಗೆ ಯುದ್ಧಭೂಮಿಗೆ ಹೋಗಿ ಸಿಪಾಯಿಯಾಗುವುದೂ, ಎದುರಾಳಿಯ ಗುಂಡಿಗೆ, ಗುಂಡಿಗೆ ಒಡ್ಡುವುದೂ ಸುಲಭ. ಆದರೆ ರಚನಾತ್ಮಕ ಕಾರ್ಯಕ್ರಮದಲ್ಲಿ ತೊಡಗುವುದು ಬಹಳ ಸಾಹಸದ ಕೆಲಸ. ಅದಕ್ಕೆ ಬಹಳ ಸಹನೆಯೂ ಅನಾಸಕ್ತಿಯೂ, ಎಲೆಯ ಮರೆಯ ಹೂವಿನಂತೆ ಇದ್ದುಕೊಂಡು ಕೆಲಸಮಾಡುವ ನಮ್ರಭಾವವೂ ಬೇಕಾಗುತ್ತದೆ. ಪಾಪ ಉತ್ಸಾಹದಿಂದ, ಆಕಾಶಕ್ಕೆ ಹಾರಿಹೋಗುವ ಸುರುಬತ್ತಿಯಂತೆ ವಿದ್ಯುತ್ ಚೈತನ್ಯವುಳ್ಳವರಾಗಿ ಗಾಂಧಿಯವರ ಬಳಿಗೆ ಬಂದ ವಿದ್ಯಾರ್ಥಿಗಳು ಅವರಿಂದ ರಚನಾತ್ಮಕದ 'ಸಾಧುವಾದ' ಸಂದೇಶಗಳನ್ನು ತೆಗೆದುಕೊಂಡು ತಮ್ಮ ತಮ್ಮ ಸ್ಥಳಗಳಿಗೆ ಹಿಂದಿರುಗಿದರು.

ಕೆಲವರು ತಾವು ಮೊದಲು ಬಿಟ್ಟಿದ್ದ ಸಂಸ್ಥೆಗಳನ್ನು ಸೇರಿದರು. ಕೆಲವರು ರಾಷ್ಟ್ರೀಯ ವಿದ್ಯಾಶಾಲೆಗಳನ್ನು ಸೇರಿದರು ಕೆಲವರು ರಚನಾತ್ಮಕ ಕಾರ್ಯದಲ್ಲಿ ತೊಡಗುವ ಉದ್ದೇಶಗಳಿಂದ ತಮ್ಮ ಊರುಗಳಲ್ಲಿಯೂ ಬೇರೆ ಬೇರೆ ಊರುಗಳಲ್ಲಿಯೂ ನೆಲಸಿದರು. ಆದರೆ ಮೊದಲೇ ತಿಳಿಸಿದಂತೆ ಸುದರ್ಶನ ಅನೇಕ ಪೂರ್ವ ಜನ್ಮದ ಸುಕೃತದಿಂದ ಗಾಂಧಿಯವರ ಆಶ್ರಮದಲ್ಲಿ ನೆಲಸಲು ಅವನಿಗೆ ಅವಕಾಶ ದೊರಕಿತು. ಗುಂಟೂರಿನಿಂದ ಕಾಲೇಜು ಬಿಟ್ಟು ಬಂದಿದ್ದ ಒಬ್ಬ ಮುಸಲ್ಮಾನ ವಿದ್ಯಾರ್ಥಿಯೂ ಧಾರವಾಡದ ಒಬ್ಬ ಬ್ರಾಹ್ಮಣ ವಿದ್ಯಾರ್ಥಿಯೂ ಸುದರ್ಶನನೂ ಮೂರು

ಜನರೂ ಒಟ್ಟಿಗೆ ಆಶ್ರಮದ ಒಂದು ಕೊಠಡಿಯಲ್ಲಿ ಇದ್ದುಕೊಂಡು ಅಲ್ಲಿಯ ಶಿಸ್ತಿಗೆ ಅನುಸಾರವಾದ ಜೀವನವನ್ನು ನಡೆಸತೊಡಗಿದ್ದರು. ಆಗಿನ ಆಶ್ರಮದ ಪದ್ಧತಿಗೆ ಅನುಸಾರವಾಗಿ ಅವರೇ ತಮ್ಮ ಆಹಾರವನ್ನು ತಾವು ಅಡಿಗೆ ಮಾಡಿಕೊಳ್ಳುತ್ತಿದ್ದರು.

ಅಹಮ್ಮದಾಬಾದ್ ಆಶ್ರಮವನ್ನು ನೋಡದೆ ಇರುವ ಗಾಂಧಿ ಭಕ್ತರ ಸಂಖ್ಯೆ ಬಹಳ ಕಡಿಮೆ. ಕಾಶಿ ರಾಮೇಶ್ವರ ಕ್ಷೇತ್ರಗಳಂತೆ ಭಾರತಕ್ಕೆ ಅದೂ ಒಂದು ಪುಣ್ಯ ಕ್ಷೇತ್ರ. ಆಶ್ರಮದ ಸಮೀಪದಲ್ಲಿ ಹರಿಯುತ್ತಿರುವ ಸಬರಮತಿ ನದಿ ಆಶ್ರಮಕ್ಕೆ ವಿಚಿತ್ರವಾದ ಶೋಭೆಯನ್ನು ಕೊಟ್ಟಿದೆ. ಇರುಳಿನ ಕಣ್ಣುಗಳೋಪಾದಿಯಲ್ಲಿ, ಸಬರಮತಿಯ ಸ್ವಚ್ಛವಾದ ಆಕಾಶದಲ್ಲಿ ಪ್ರಕಾಶಿಸುತ್ತಿರುವ ನಕ್ಷತ್ರಗಳ ಕಾಂತಿ, ಬೇರೆ ಕಡೆಯ ನಕ್ಷತ್ರಗಳಿಗೆ ನಿಜವಾಗಿಯೂ ಇಲ್ಲ. ಆಶ್ರಮದಲ್ಲಿ ಎಲ್ಲಿ ನೋಡಿದರೂ ಬೇರೆ ಬೇರೆಯ ಹತ್ತಿಯ ಗಿಡಗಳು, ಕೆಲವು ಪಪಾಯದ ಗಿಡಗಳು ಎಲ್ಲಾದಕ್ಕಿಂತ ಮುಖ್ಯವಾಗಿ ನೂಲುವ ನೆಯ್ಯುವ ವಿಧ ವಿಧಗಳಾದ ಉಪಕರಣಗಳು. ಹೊಸದಾಗಿ ಆಶ್ರಮವನ್ನು ಹೋಗಿ ನೋಡುವವರಿಗೆ ಮೊದಲು ಅಲ್ಲಿ ಕಾಣುತ್ತಿದ್ದುದು ಹತ್ತಿ, ನೂಲು ನೆಯ್ಗೆ ಅವುಗಳ ಹೊರತು ಮತ್ತೇನೂ ಇಲ್ಲ. ಅದೊಂದು ನೆಯ್ಗೆಯ ಕೈ ಕೆಲಸದ ಸಣ್ಣ ಕಾರ್ಖಾನೆ ಖಾದಿಯ ದೇವಸ್ಥಾನ; ಅದರ ದೇವರು ಗಾಂಧಿ. ಅಲ್ಲಿ ಕೆಲವು ಗಂಟೆಗಳ ಕಾಲ ಇರುವುದರೊಳಗಾಗಿ "ಭಾರತದ ಭಾಗ್ಯವಿಧಾತಾ ಇಲ್ಲಿ ಇದ್ದಾನೆ. ಇದು ಭಾರತದ ಸಾಮಾಜಿಕ ರಾಜಕೀಯ ಆರ್ಥಿಕ. ಒಟ್ಟಿನಲ್ಲಿ ಸಮಸ್ತ ಭಾರತದ ಹೃದಯವೂ ಆತ್ಮವೂ ಪ್ರಾಣವೂ ಉಸಿರೂ ಇರುವ ತಾಣ" ಈ ಹೊರಗೆ ಕಾಣುವ ಖಾದಿಯ ಆಶ್ರಮ, ಅದರ ನಿಶಾನೆ ಮಾತ್ರ ಎಂಬುದು ಗೊತ್ತಾಗುತ್ತದೆ.

ಆಗ, ಬ್ರಹ್ಮನ ಬಾಯಿನಿಂದ ವೇದಗಳು ಹೊರಡುವಂತೆ ಅಹಮ್ಮದಾಬಾದಿನ ಋಷಿಯ ವಾಣಿ ಯಂಗ್ ಇಂಡಿಯಾ ಪತ್ರಿಕೆಯ ಮೂಲಕ ಪ್ರಕಟವಾಗತೊಡಗಿದ್ದಿತು. ಯಂಗ್ ಇಂಡಿಯಾ ಎಂಬ ಹೆಸರನ್ನು ಕೇಳಿದರೇನೇ ಜನರು ಪುಳಕಿತರಾಗುತ್ತಿದ್ದರು. ಅದು ಎಂಟು ಪುಟದ ಪತ್ರಿಕೆ. ಅವರಲ್ಲಿ ಜಾಹಿರಾತುಗಳು ಇರುತ್ತಿರಲಿಲ್ಲ. ಅದು ಬರಿಯ ವರ್ತಮಾನ ಪತ್ರಿಕೆಯೇ ಅಲ್ಲ. ಅದು ಗಾಂಧಿಯವರ ಸಂದೇಶವಾಗಿದ್ದಿತು.

ಪ್ರಾಚೀನ ಋಷಿಗಳ ಸಂದೇಶದಂತೆ, ಅಹಿಂಸೆಯ ಮಹಾಸ್ತ್ರದ ಪ್ರಯೋಗ ವನ್ನು ಗಾಂಧಿಯವರು ಆ ಎಂಟು ಪುಟದ ಪತ್ರಿಕೆಯ ಮೂಲಕ ಜಗತ್ತಿಗೆ ಹರಡತೊಡಗಿದ್ದರು. ಸ್ವಾತಂತ್ರ ದೇವಿಯ ರಥ ಜಯ ಜಯಕಾರ ದೊಂದಿಗೆ ಹೋಗುತ್ತಿರುವಾಗ ದೂರದಿಂದ ಆ ದೇವಿಯನ್ನು ದರ್ಶನ ಮಾತ್ರವೇ ಪುಣ್ಯ ಮಾತ್ರ ಕೆಲವರಿಗೆ ಲಭಿಸುತ್ತದೆ. ಇನ್ನು ಕೆಲವರು ರಥದ ಹಗ್ಗವನ್ನು ಎಳೆದುಕೊಂಡು ಹೋಗುವಷ್ಟು ಧನ್ಯರಾಗುತ್ತಾರೆ. ಕೆಲವರು ದೇವಿಗೆ ಸಮೀಪದಲ್ಲಿ ಅವಳ ಮೈಯಿಂದ ಉದುರುವ ಹೂವು ಗಳನ್ನು ಆತುಕೊಳ್ಳುವಷ್ಟು ಹತ್ತಿರದಲ್ಲಿರುವ ಪುಣ್ಯಾತ್ಮರಾಗಿರುತ್ತಾರೆ. ಇಂತಹ ಚಳುವಳಿಯಲ್ಲಿ ರಥದ ಹಗ್ಗದ ತುದಿಯಲ್ಲಿ ಅನಾಮಧೇಯನಾದ ಸ್ವಯಂಸೇವಕನಾಗಿ ಸಮಾರಂಭದಲ್ಲಿ ಸೇರುವವನೂ ಪುಣ್ಯಶಾಲಿಯೇ ಎಂಬುದು ಸುದರ್ಶನನಿಗೆ ಚೆನ್ನಾಗಿ ಮಂದಟ್ಟಾಯಿತು. ಅವನ ಭಕ್ತಿಯ ಮಹಿಮೆಯೋ ಎಂಬಂತೆ ಯಂಗ್ ಇಂಡಿಯಾದಲ್ಲಿ ಪ್ರೂಫಗಳನ್ನು ತಿದ್ದುವ ಸುಯೋಗವನ್ನು ಅವನು ಹೊಂದಿದನು. ಧಾರವಾಡದ ಅವನ ಮಿತ್ರರು ಯಂಗ್ ಇಂಡಿಯಾ ಪತ್ರಿಕೆಯ ಪುಟಗಳನ್ನು ಕಂಪೋಸ್ ಮಾಡುವುದರಲ್ಲಿ ನಿಪುಣರಾಗಿದ್ದರು. ಆಗ ಯಂಗ್ ಇಂಡಿಯಾ ಆಫೀ ಸಿಗೆ ಸ್ವಾಮಿ ಆನಂದರು ವ್ಯವಸ್ಥಾಪಕರಾಗಿದ್ದರು. ಯಂಗ್ ಇಂಡಿಯ, ದೇಶಕ್ಕೆ ಬೆಳಕನ್ನು ಹರಡುವ ಜ್ಯೋತಿಯಾಗಿದ್ದಿತು.

ಆ ವರುಷ ಡಿಸೆಂಬರಿನಲ್ಲಿ ಕಾಂಗ್ರೆಸ್ ಮಹಾಸಭೆ ಅಹಮ್ಮದಾ ಬಾದಿನಲ್ಲಿ ಸೇರಿತು. ಗಾಂಧಿಯವರು "ಒಂದು ವರುಷದೊಳಗೆ ಸ್ವರಾ ಜ್ಯ ಬರುತ್ತೆ. ನನ್ನ ಕಾರ್ಯಕ್ರಮವನ್ನು ಅನುಸರಿಸಿ" ಎಂದು ಹೇಳಿದ್ದ ರು. ಆ ವರುಷ ಇನ್ನೇನು ಪೂರ್ತಿಯಾಗುವುದರಲ್ಲಿದ್ದಿತು. ಜನರಿಗೆ ಅತ್ಯಂತ ಹೆಚ್ಚಾದ ಉತ್ಸಾಹವುಂಟಾಗಿದ್ದಿತು. ದೇಶಕ್ಕಾಗಿ ಯಾವ ಕೆಲಸವನ್ನು ಮಾಡುವುದಕ್ಕೂ ಅವರು ಸಿದ್ಧರಾಗಿದ್ದರು. ರಾಜಕೀಯದಲ್ಲಿ ಏನೋ ಒಂದು ಅದ್ಭುತ ನಡೆಯುತ್ತದೆ; ಗಾಂಧಿಯವರು ಹೇಳಿರುವಂತೆ ಒಂದು ವರುಷದಲ್ಲಿ ಸ್ವರಾಜ್ಯ ಬರುತ್ತದೆ ಎಂದೂ ಅವರು ನಿರೀಕ್ಷಿಸುತ್ತಿದ್ದರು. ಕಾನೂನುಭಂಗದ ಚಳುವಳಿಗೆ ಜನರು ಬಹಳ ಉತ್ಸಾಹಿಗಳಾಗಿದ್ದರು. ಅಹಮ್ಮದಾಬಾದ್ ಕಾಂಗ್ರೆಸಿನಲ್ಲಿ ಸುದರ್ಶನನೂ ಅವರ ಜತೆಯ ಧಾರ ವಾಡದ ಮಿತ್ರರೂ ಸ್ವಯಂಸೇವಕರಾದರು. ಆಗ ಸ್ವಯಂಸೇವಕ ದಳವು

ಇನ್ನೂ ಈಚೆಗೆ ಆದಷ್ಟು ವ್ಯವಸ್ಥಿತವಾಗಿರಲಿಲ್ಲ. ಆದರೆ ಸ್ವಾಗತ ಸಮಿತಿಯ ಅಧ್ಯಕ್ಷರಾದ ವಲ್ಲಭಭಾಯಿ ಪಟೇಲರೂ, ಸ್ವಯಂ ಸೇವಕ ದಳದ ಅಧ್ಯಕ್ಷರಾದ ದಿವಾಣಜಿಯವರು ಸ್ವಯಂ ಸೇವಕರಿಗೆ ಆವಶ್ಯಕವಾದ ಸ್ಫೂರ್ತಿಯನ್ನೂ ಶಿಸ್ತನ್ನೂ ಬೋಧಿಸುತ್ತಿದ್ದರು. ಸುದರ್ಶನನಿಗೆ ಅಖಿಲ ಭಾರತದ ಕಾಂಗ್ರೆಸ್ ಸಭೆಯನ್ನು ಹೀಗೆ ಸೇವೆಮಾಡುವ ಪುಣ್ಯ ಪ್ರಾರಂಭದಲ್ಲಿಯೇ ಲಭಿಸಿತು. ಸ್ವಯಂ ಸೇವಕನಾಗಿ ಸೇರಿದುದರಿಂದ ಆ ಮಹಾ ಸಭೆಯ ಸಮಸ್ತ ಕಾರ್ಯ ಕಲಾಪಗಳಲ್ಲಿಯೂ ಹೊಂದಿಕೊಂಡು ಅವುಗಳನ್ನು ನೋಡುವ ಯೋಗ ಅವನಿಗೆ ಉಂಟಾಯಿತು.

ದೇಶಬಂಧು ಸಿ. ಆರ್. ದಾಸ್‌ರವರು ಅಹಮ್ಮದಾಬಾದಿನ ಮಹಾ ಸಭೆಗೆ ಅಧ್ಯಕ್ಷರಾಗಿ ಚುನಾಯಿತರಾಗಿದ್ದರು. ಆದರೆ ಸರ್ಕಾರದವರು ಅವರನ್ನು ಬಂಧಿಸಿದುದರಿಂದ, ಕೊನೆಯ ಗಳಿಗೆಯಲ್ಲಿ ಹಕೀಂ ಅಜಮಲ್ ಖಾನರು ಅಧ್ಯಕ್ಷರಾದರು. ಅಹಮ್ಮದಾಬಾದ್ ಕಾಂಗ್ರೆಸ್‌ನಲ್ಲಿ ಮುಸ್ಲಿಂ ಉಲೇಮಾಗಳು ಬಹಳ ಮುಖ್ಯ ಪಾತ್ರ ವಹಿಸಿದರು. ಅದುವರೆಗೆ ಕಾಂಗ್ರೆಸ್‌ನಲ್ಲಿ ಕುಳಿತುಕೊಳ್ಳಲು ಕುರ್ಚಿಗಳನ್ನು ಏರ್ಪಡಿಸುತ್ತಿದ್ದರು. ಇದರಿಂದ ಹಿಂದಲ ವರುಷದ ನಾಗಪುರ್ ಕಾಂಗ್ರೆಸ್‌ನಲ್ಲಿ ಕುರ್ಚಿಗಳಿಗೇ ಎಪ್ಪತ್ತು ಸಾವಿರ ರುಪಾಯಿ ಖರ್ಚಾಗಿದ್ದಿತು. ಅಹಮ್ಮದಾಬಾದಿನಲ್ಲಿ ಮೊದಲನೆಯ ಸಲವಾಗಿ ಕಾಂಗ್ರೆಸ್ ಸದಸ್ಯರು ನೆಲದ ಮೇಲೆ ಕೂರುವ ಹೊಸ ಪದ್ಧತಿ ಪ್ರಾರಂಭವಾಯಿತು. ಅಲ್ಲಿಂದ ಈಚೆಗೆ ಹಾಗೆಯೇ ನಡೆದುಕೊಂಡು ಬರುತ್ತಿದೆ. ಅಹಮ್ಮದಾಬಾದ್ ಕಾಂಗ್ರೆಸ್ಸಿನಲ್ಲಿಯೇ ಮಹಾ ಸಭೆಯ ಎಲ್ಲಾ ಭಾಗಗಳನ್ನೂ ಖಾದಿಯಿಂದ ಕಟ್ಟಿದ್ದರು. ಆ ಸಭೆಯ ಕಟ್ಟಡಕ್ಕಾಗಿಯೇ ೨ ಲಕ್ಷ ರುಪಾಯಿನ ಖಾದಿ ವಿನಿಯೋಗವಾಯಿತು. ಈ ಸಭೆಯ ಸ್ವಾಗತಾಧ್ಯಕ್ಷರಾದ ಪಟೇಲರ ಭಾಷಣ ಅತಿ ಚಿಕ್ಕದು. ಆ ಸಭೆಯಲ್ಲಿ ತೀರ್ಮಾನವಾದ ಠರಾವುಗಳೂ ಅತಿ ಕಡಮೆ ಸಂಖ್ಯೆಯವು. ಒಂಭತ್ತು ಮಾತ್ರ. ಸಿ. ಆರ್. ದಾಸ್‌ರವರ ಸ್ಥಾನದಲ್ಲಿ ಚುನಾಯಿತರಾದ ಅಜಮಲ್‌ಖಾನರು ಒಳ್ಳೆ ಸುಸಂಸ್ಕೃತರು; ವಿದ್ಯಾವಂತರು; ನಿಷ್ಪಕ್ಷಪಾತವಾದ ಬುದ್ಧಿಯುಳ್ಳವರು. ಅವರ ಸೌಜನ್ಯ ಜನರಿಗೆ ಅವರನ್ನು ಬಹು ಪ್ರಿಯರನ್ನಾಗಿಮಾಡಿದ್ದುವು. ಅವರ ಬುದ್ಧಿಯ ತೀಕ್ಷ್ಣತೆ ಅವರ ನಡತೆಯ ಅಕ್ಷತ್ರಮತೆಗೆ ಸಮಾನವಾಗಿದ್ದಿತು. ಡಿಲ್ಲಿಯಲ್ಲಿ ನಡೆದ ಹಿಂದು ಮಹಾ

ಸಭೆಗೆ ಅವರು ಅಧ್ಯಕ್ಷರಾಗಿದ್ದರು. ರೌಲೆಟ್ ಬಿಲ್‌ನ್ನು ಪ್ರತಿಭಟಿಸುವ ದಿನ ಸ್ವಾಮಿ ಶ್ರದ್ಧಾನಂದರು ಮೆರವಣಿಗೆಯೊಂದಿಗೆ ಹೋಗಿ ಡೆಲ್ಲಿಯಲ್ಲಿ ಜುಮ್ಮಾ ಮಸೀದಿಯಲ್ಲಿ ಮಾತನಾಡಿದರು. ಆಗಿನ ಕಾಲದಲ್ಲಿ ಹಾಗೆ ಪರಸ್ಪರ ಗೌರವಿಸುವುದು ಸ್ವಾಭಾವಿಕವಾಗಿದ್ದಿತು. ಮೆರವಣಿಗೆ ಹೋಗುತ್ತಿರುವಾಗ ಯುರೋಪಿಯನ್ ಸಿಪಾಯಿಗಳು ಬಂದೂಕದ ಸಮೇತರಾಗಿ ಬಂದು "ಮುಂದೆ ಹೋಗಬೇಡಿ. ಹೋದರೆ ಬಂದೂಕ ಹಾರಿಸುತ್ತೇವೆ" ಎಂದರು. ಆದರೆ ಸ್ವಾಮಿ ಶ್ರದ್ಧಾನಂದರು ಹೆದರದೆ ಹಾರಿಸಿ ಎಂದು ಎದೆ ತೆರೆದರು. ಆ ಧೈರ್ಯವನ್ನು ನೋಡಿ ಸಿಪಾಯಿಗಳು ಬೆರಗಾಗಿ ಹೊರಟು ಹೋದರು. ಅಹಮ್ಮದಾಬಾದ್ ಕಾಂಗ್ರೆಸ್‌ನಲ್ಲಿ ಅಜಮಲ್ ಖಾನರು ಒಂದು ಸಣ್ಣ ಭಾಷಣವನ್ನು ಮಾಡಿದರು. ಸಿ. ಆರ್. ದಾಸರ ಭಾಷಣವೂ ಬಂದಿದ್ದಿತು. ಅದನ್ನು ಶ್ರೀಮತಿ ಸರೋಜಿನಿ ದೇವಿಯವರು ತಮ್ಮ ಸ್ವಾಭಾವಿಕವಾದ ಮನೋಹರವಾದ ಧ್ವನಿಯಲ್ಲಿ ಓದಿದರು. ದಾಸರು ಭಾಷಣದಲ್ಲಿ "ನಮ್ಮ ಸ್ವಾತಂತ್ರವನ್ನು ಬ್ರಿಟಿಷರು ಒಪ್ಪಬೇಕು ಈ ನಮ್ಮ ಆತ್ಮ ಗೌರವವನ್ನು ಹಾಳುಮಾಡುವ ಶಾಂತಿ ನಮಗೆ ಬೇಡವೇ ಬೇಡ. ಸ್ವಾತಂತ್ರ್ಯವನ್ನು ಒಪ್ಪದಿರುವ ಸರ್ಕಾರದೊಂದಿಗೆ ನಮಗೆ ಯಾವ ರೀತಿಯ ಸಂಬಂಧವೂ ಬೇಡ" ಎಂದು ಹೇಳಿದರು. ಭಾಷಣವನ್ನು ಕೇಳಿ ಮಹಾ ಸಭೆ ಅತ್ಯಂತ ಉತ್ಸಾಹಗೊಂಡಿತು. ಸ್ವಾತಂತ್ರ್ಯವನ್ನು ಹೊಂದುತ್ತೇವೆ. ಇಲ್ಲದಿದ್ದರೆ ಸಾಯುತ್ತೇವೆ ಎಂಬ ಜಯಘೋಷ ಎಲ್ಲಾ ಕಡೆಗಳಲ್ಲಿಯೂ ಕೇಳಿಸಿತು.

ಅಹಮ್ಮದಾಬಾದ್ ಕಾಂಗ್ರೆಸ್‌ನಲ್ಲಿ, ಮಹಾತ್ಮಾ ಗಾಂಧಿಯವರು, ಆಂಡ್ರೂಸ್‌ರವರನ್ನು ಒಂದು ಧಾರ್ಮಿಕ ಉಪನ್ಯಾಸವನ್ನು ಮಾಡುವಂತೆ ಕೇಳಿದರು. ಆಂಡ್ರೂಸ್‌ರವರು ಪರದೇಶಿ ಬಟ್ಟೆಗಳನ್ನು ಸುಡುವುದನ್ನು ಒಪ್ಪಿರಲಿಲ್ಲ. ಅವರು ಯಾವಾಗಲೂ ಖಾದಿ ಧರಿಸುವವರೇ ಆದರೂ ತಮ್ಮ ಮನೋಭಿಪ್ರಾಯ ಜನರಿಗೆ ಚೆನ್ನಾಗಿ ತಿಳಿಯಲಿ ಎಂಬ ಉದ್ದೇಶದಿಂದ ಅಂದು ಪೂರ್ಣವಾಗಿ ಪರದೇಶದ ಯುರೋಪಿಯನ್ ಉಡಿಗೆಗಳನ್ನು ತೊಟ್ಟುಕೊಂಡೇ ಮಹಾ ಸಭೆಗೆ ಬಂದು ಧಾರ್ಮಿಕವಾಗಿ ಒಂದು ಉಪನ್ಯಾಸ ಮಾಡಿದರು. ಸಾಮಾನ್ಯವಾಗಿ ಪರದೇಶಿ ಅರಿವೆ ತೊಟ್ಟವರನ್ನು ಒಪ್ಪದಿದ್ದ ಸಭೆ, ಆಂಡ್ರೂಸ್‌ರವರ ಭಾಷಣವನ್ನು ಬಹಳ

ಶಾಂತಿಯಿಂದಲೇ ಕೇಳಿತು. ಆಂಡ್ರೂಸ್‌ರವರು ತಾವು ಖಾದಿಯನ್ನು ಧರಿಸದೆ ಇರುವುದರ ಕಾರಣವನ್ನೂ ವಿವರಿಸಿದರು. ಗಾಂಧಿಯವರ ಸೂಚನೆಯಂತೆ ದೀನಬಂಧು ಆಂಡ್ರೂಸ್‌ರವರು, ಆ ಸಭೆಯನಂತರ ಮಾಪಿಲ್ಲಾ ದಂಗೆ ನಡೆದ ಮಲಬಾರಿಗೆ ಹೊರಡುವವರಾಗಿದ್ದರು. ಹೊರಡುವುದಕ್ಕೆ ಮುಂಚೆ ಅವರು ರಂಗಸ್ಥಳದ ಮೇಲಿದ್ದ ಶ್ರೀಮತಿ ಸರೋಜನಿದೇವಿಯವರಿಗೆ ಕಾಲು ಮುಟ್ಟಿ ಸಾಷ್ಟಾಂಗವಾಗಿ ನಮಸ್ಕರಿಸಿದರು. ಸರೋಜಿನಿ ನಾಯಿಡುರವರು ಬೇಡ ಬೇಡ ಎಂದು ಎದ್ದು ನಿಂತರು. ಮಹಾಸಭೆಯ ರಂಗಸ್ಥಳದಲ್ಲಿ ಕಲ ಕಲವುಂಟಾಯಿತು. ಆಂಡ್ರೂಸ್‌ರವರು ಖಾದಿ ಧರಿಸಲಿಲ್ಲ ಎಂಬ ಕಾರಣದಿಂದ ಅವರ ಮೇಲೆ ಜನರಿಗೆ ಉಂಟಾಗಿದ್ದ ಸ್ವಲ್ಪಮಟ್ಟಿನ ಅತೃಪ್ತಿ ಇದರಿಂದ ಪೂರ್ಣವಾಗಿ ಪರಿಹಾರವಾಯಿತು.

ಮರುದಿವಸ ಸಾಯಂಕಾಲ ಶ್ರೀಮತಿ ಸರೋಜಿನಿ ದೇವಿಯವರು ಯುವಕರನ್ನು ಕುರಿತು ಒಂದು ಭಾಷಣ ಮಾಡಿದರು. ಅದನ್ನು ಕೇಳಿದ ಎಲ್ಲಾ ವಿದ್ಯಾರ್ಥಿಗಳೂ ಯುವಕರೂ ದೇಶಕ್ಕಾಗಿ ಅಗ್ನಿಕುಂಡಕ್ಕೆ ಸಹ ಬೀಳಲು ಸಿದ್ಧರಾಗಿದ್ದರು. ಸರೋಜಿನಿಯವರು "ಯುರೋಪಿನಲ್ಲಿ ಯುದ್ಧ ಪ್ರಾರಂಭವಾಗಿ ಆಗಸ್ಟ್ ಆಕಾಶವು ಯುವಕರ ರಕ್ತದಿಂದ ಕೆಂಪಾಗಿದ್ದಾಗ, ಅನೇಕ ಲಕ್ಷ ವಿದ್ಯಾರ್ಥಿಗಳು ಸ್ಕೂಲು ಕಾಲೇಜುಗಳಿಂದ ಹೊರಕ್ಕೆ ಬಂದು ದೇಶಕ್ಕಾಗಿ ಪ್ರಾಣ ಕೊಡುತ್ತಿದ್ದುದನ್ನು ನಾನು ನೋಡಲಿಲ್ಲವೆ? ನಮ್ಮ ವಿದ್ಯಾರ್ಥಿಗಳು ಅವರಿಗಿಂತ ಏನು ಕಡಿಮೆ? ಎಲ್ಲಿ ಬನ್ನಿ! ನೂರರ ಸಂಖೆಯಲ್ಲಿ ಸಾವಿರದ ಸಂಖೆಯಲ್ಲಿ ಲಕ್ಷದ ಸಂಖೆಯಲ್ಲಿ ಕೋಟಿಯ ಸಂಖೆಯಲ್ಲಿ ಬನ್ನಿ. ವೀರ ಭೂಮಿಯಾದ ಭಾರತದಲ್ಲಿ ವೀರರಿಗೆ ಏನು ಕಡಿಮೆ?" ಎಂದು ಘರ್ಜಿಸಿದರು. ಇಂತಹ ವೀರತೆಯ ಸಂದೇಶಗಳನ್ನು ಕೊಡುತ್ತಿದ್ದ ಸರೋಜಿನಿ ದೇವಿಯವರು ಕೃಷ್ಣ ಪರಮಾತ್ಮನಿಗೆ ದೇವಲೋಕದಲ್ಲಿ ಪಾರಿಜಾತ ಪುಷ್ಪವನ್ನು ತರುವ ಕಾಲದಲ್ಲಿ ಯುದ್ಧಭೂಮಿಯಲ್ಲಿ ಸಹಾಯಮಾಡಿದ ಸತ್ಯಭಾಮಾ ದೇವಿಯಂತೆ; ಝಾನ್ಸಿ ಲಕ್ಷ್ಮಿಬಾಯಿಯಂತೆ, ಚಾಂದಬೀಬಿಯಂತೆ, ಕಂಡರು. ಇಂತಹ ಸಂದೇಶಗಳನ್ನು ಕೇಳುವ ಯೋಗ ದೊರೆಯುವುದು ಪುಣ್ಯವಂತರಿಗೂ ಬಹಳ ಅಪರೂಪವಾಗಿ. ಸುದರ್ಶನನಿಗೆ ಗಂಗಾಸ್ನಾನವನ್ನು ಮಾಡಿ

ದಂತಹ ಮನೋಲ್ಲಾಸವೂ ಪುನೀತನಾದೆನೆಂಬ ಭಾವನೆಯೂ ಉಂಟಾಯಿತು. ಆ ಸಾಯಂಕಾಲ ಗಾಂಧಿಯವರು ಪ್ರತಿನಿಧಿಗಳ ಬಿಡಾರಗಳಿಗೆಲ್ಲಾ ಬಂದು ಕಾಯಿದೆ ಭಂಗದ ಚಳುವಳಿಯ ಶಾಸ್ತ್ರದ ಮೇಲೆ ಅವರಿಗೆಲ್ಲಾ ಸರಿಯಾದ ತಿಳುವಳಿಕೆ ಕೊಟ್ಟರು.

ಸುದರ್ಶನ ಸಬರಮತಿ ಆಶ್ರಮದಲ್ಲಿ ಕಾಂಗ್ರೆಸ್ ಮುಗಿದ ನಂತರವೂ ಇದ್ದನು. ಆದರೆ ಆ ವೇಳೆಗಾಗಲೇ ಸರ್ಕಾರಕ್ಕೆ ಸಬರಮತಿ ಆಶ್ರಮದ ಮೇಲೆಯೂ ಯಂಗ್ ಇಂಡಿಯಾ ಪತ್ರಿಕೆಯ ಮೇಲೆಯೂ ಕಣ್ಣು ಬಿದ್ದಿದ್ದಿತು. ಆದರೆ ಮಹಾತ್ಮಾ ಗಾಂಧಿಯವರು ಸ್ವತಂತ್ರವಾಗಿ ಇರುವವರೆಗೆ ಆ ಸಂಸ್ಥೆಗಳಿಗೆ ಯಾವ ವಿಧವಾದ ಅಪಾಯವೂ ಉಂಟಾಗಲಾರದೆಂದು ಎಲ್ಲರೂ ನಂಬಿದ್ದರು. ಸರ್ಕಾರದವರು ಮಹಾತ್ಮಾ ಗಾಂಧಿಯವರನ್ನು ಅಹಮ್ಮದಾಬಾದಿನಲ್ಲಿ 1922ನೇ ಇಸವಿ ಮಾರ್ಚಿ ತಿಂಗಳು 13ನೇ ತಾರೀಖು ದಸ್ತಗಿರಿಮಾಡಿದರು. ಶಂಕರಲಾಲ್ ಬ್ಯಾಂಕರ್‌ರವರನ್ನೂ ಅವರ ಜತೆಯಲ್ಲಿಯೇ ದಸ್ತಗಿರಿ ಮಾಡಿದರು. ಆ ವಿಚಾರಣೆಯನ್ನು ಎರಡು ಸಾವಿರ ವರುಷಗಳ ಕೆಳಗೆ ನಡೆದ ಏಸುಕ್ರಿಸ್ತನ ವಿಚಾರಣೆಗೆ ಹೋಲಿಸಬಹುದಾಗಿದ್ದಿತು. ವಿಚಾರಣೆಯನ್ನು ನೋಡಲು ನೆರೆದಿದ್ದವರಲ್ಲಿ ಕೆಲವರು "ಏಸುವನ್ನು ಶಿಕ್ಷಿಸಿದ ಸರ್ಕಾರಕ್ಕೂ ಈ ಸರ್ಕಾರಕ್ಕೂ ಏನೂ ವ್ಯತ್ಯಾಸವಿಲ್ಲ. ಗಾಂಧಿಯವರಿಗೂ ಏಸುವಿಗೂ ಏನೂ ವ್ಯತ್ಯಾಸವಿಲ್ಲ" ಎಂದು ತಮ್ಮ ತಮ್ಮಲ್ಲಿ ಗಟ್ಟಿಯಾಗಿಯೇ ಹೇಳಿಕೊಳ್ಳುತ್ತಿದ್ದರು. ಜಡ್ಜಿಯ ಮುಖದಲ್ಲಿ ಪಶ್ಚಾತ್ತಾಪ ಒಡೆದು ಕಾಣುತ್ತಿದ್ದಿತು. ನಮ್ಮ ದೇಶವನ್ನು ಆಳುವ ಕಾನೂನಿನ ದೃಷ್ಟಿಯಲ್ಲಿ ಖೈದಿ; ಆದರೆ ದುರ್ಬಲ ದೇಹದ ಶಾಂತಿಯುತವಾದ ಧೀರ ವ್ಯಕ್ತಿ—ಒರಟಾದ ಖಾದಿ ಬಟ್ಟೆಯನ್ನು ಧರಿಸಿಕೊಂಡು ಶಂಕರ್‌ಲಾಲ್ ಬ್ಯಾಂಕರ್‌ರವರ ಜತೆಯಲ್ಲಿ ಮುಂದೆ ಬಂದಾಗ, ನ್ಯಾಯಸ್ಥಾನದಲ್ಲಿದ್ದವರೆಲ್ಲಾ ಅತ್ಯಂತ ಗೌರವ ನಮ್ರತೆಯಿಂದ ಎದ್ದು ನಿಂತರು. ಕೋರ್ಟಿಗೆ ಬಂದ ಕೂಡಲೆ ಗಾಂಧಿಯವರು ತಮ್ಮ ತಪ್ಪಿತವನ್ನು ಒಪ್ಪಿಕೊಂಡರು.

"ನಾನು ಭಾರತೀಯರಿಗೆ ಮುಂದಲ ಮಾತುಗಳನ್ನು ಹೇಳಬೇಕಾಗಿದೆ. ಇಂಗ್ಲೆಂಡಿನ ಸಾರ್ವಜನಿಕರಿಗಾಗಿಯೂ ಈ ಮಾತುಗಳನ್ನು ಹೇಳಬೇಕಾಗಿದೆ. ಬಹುಶಃ ಅವರ ಮನಸ್ಸನು ಸಮಾಧಾನಪಡಿಸುವುದ

ಕ್ಕಾಗಿಯೇ ಈ ಖಟ್ಲೆ ನಡೆಯುತ್ತಿರುವುದು. ಸರ್ಕಾರದ ಸಹಾಯಕನೂ ಯಾವಾಗಲೂ ಅವರಿಗೆ ಸಹಾಯಮಾಡುವ ರಾಜಭಕ್ತನೂ ಆದ ನಾನು, ಹೇಗೆ ರಾಜದ್ರೋಹವನ್ನು ಪ್ರಚಾರಮಾಡುವ, ಖಂಡಿತವಾದ ಅಸಹಕಾರಿ ಯಾದೆ ಎಂಬುದನ್ನು ನಾನು ತಿಳಿಸಬೇಕಾಗಿದೆ. ಭಾರತದಲ್ಲಿ ಸ್ಥಾಪಿತ ವಾಗಿರುವ ಸರ್ಕಾರಕ್ಕೆ ವಿರೋಧವಾಗಿ ದ್ವೇಷವನ್ನು ಉಂಟುಮಾಡುವ ತಪ್ಪಿತಸ್ತ ನಾನು ಎಂದು ಹೇಳುತ್ತೇನೆ.

"ದಕ್ಷಿಣ ಆಫ್ರಿಕಾದಲ್ಲಿ 1893ನೇ ವರುಷದಲ್ಲಿ ಬಹಳ ಅಶಾಂತಿ ಗದ್ದಲದ ಕಾಲದಲ್ಲಿ ನನ್ನ ಸಾರ್ವಜನಿಕ ಜೀವನ ಪ್ರಾರಂಭವಾಯಿತು. ಆ ದೇಶದಲ್ಲಿ ಮೊದಲು ನನಗೆ ಬ್ರಿಟಿಷ್ ಅಧಿಕಾರಿಗಳೊಡನೆ ಉಂಟಾದ ಸಂಬಂಧ ಅಷ್ಟು ಹಿತವಾದ ಸಂಬಂಧವಾಗಲಿಲ್ಲ. ನಾನು ಮನುಷ್ಯ, ನಾನು ಭಾರತೀಯ ಎಂಬ ದೃಷ್ಟಿಯಿಂದ ನನಗೆ ಏನೂ ಹಕ್ಕುಬಾಧ್ಯತೆ ಗಳು ಇಲ್ಲವೆಂಬುದು ನನಗೆ ಗೊತ್ತಾಯಿತು. ಅದಕ್ಕೆ ಪ್ರತಿಯಾಗಿ ನಾನು ಭಾರತೀಯನಾಗಿದ್ದುದರಿಂದಲೇ ನನಗೆ ಯಾವ ಹಕ್ಕುಗಳೂ ಇಲ್ಲವೆಂದು ನನಗೆ ಗೊತ್ತಾಯಿತು.

"ಆದರೆ ನಾನು ಹೆದರಲಿಲ್ಲ. ಸ್ವಭಾವದಿಂದ ಒಳ್ಳೆಯದಾಗಿದ್ದ ಪದ್ಧತಿಯಲ್ಲಿ, ಭಾರತೀಯರನ್ನು ಕುರಿತ ಈ ತಿರಸ್ಕಾರ ಒಂದು ಕಳಂಕ, ರೋಗ ಎಂದುಕೊಂಡೆ. ನಾನು ಸರ್ಕಾರಕ್ಕೆ ಪೂರ್ಣವಾದ ಮನಃ ಪೂರ್ವಕವಾದ ಸಹಕಾರವನ್ನು ಕೊಟ್ಟೆ. ಅದರಲ್ಲಿ ತಪ್ಪು ಕಂಡಾಗ ಅದನ್ನು ಬೇಕಾದಂತೆ ಟೀಕೆ ಮಾಡಿದೆ. ಆದರೆ ಅದರ ನಾಶವನ್ನು ನಾನು ಎಂದಿಗೂ ಬಯಸಲಿಲ್ಲ.

"ಆದುದರಿಂದ, ಬೋರ್ ಯುದ್ಧದಿಂದ ಸಾಮ್ರಾಜ್ಯಕ್ಕೆ ಕಷ್ಟ ಬಂದಾಗ ನಾನು ಅದಕ್ಕೆ ನನ್ನ ಸೇವೆ ಅರ್ಪಿಸಿದೆ. ಸ್ವಯಂಸೇವಕ ದಳ ವನ್ನು ನಿಯಮಿಸಿ ಬ್ರಿಟಿಷ್ ಸಾಮ್ರಾಜ್ಯದ ಸೇವೆ ಮಾಡಿದೆ ಹಾಗೆಯೇ 1906 ರಲ್ಲಿ ಜುಲು 'ದಂಗೆ'ಯ ಕಾಲದಲ್ಲಿಯೂ ನಾನು ರೋಗಿಗಳ ಸೇವೆ ಗಾಗಿ ಒಂದು ಸ್ವಯಂಸೇವಕ ದಳವನ್ನು ನಿಯಮಿಸಿ 'ದಂಗೆ' ಮುಗಿಯು ವವರೆಗೆ ಸೇವೆ ಮಾಡಿದೆ. ಆ ಎರಡು ಸಂದರ್ಭಗಳಲ್ಲಿಯೂ ನನಗೆ ಪ್ರಶಸ್ತಿ ಗಳು ದೊರೆತವು. ಅಧಿಕಾರಿ ವರ್ಗದ ಕಾಗದಗಳಲ್ಲಿಯೂ ನನ್ನ ಹೆಸರು ನಮೂದಾಗಿದ್ದಿತು. ದಕ್ಷಿಣ ಆಫ್ರಿಕಾದಲ್ಲಿ ನಾನು ಮಾಡಿದ ಕೆಲಸಗಳಿ

ಗಾಗಿ ಲಾರ್ಡ್ ಹಾರ್ಡಿಂಜರು, ನನಗೆ ಒಂದು ಚಿನ್ನದ ಕೇಸರಿ ಇಹಿಂದ್ ಪದಕವನ್ನೂ ಕೊಟ್ಟರು. 1914 ನೆಯ ಇಸವಿಯಲ್ಲಿ ಇಂಗ್ಲೆಂಡಿಗೂ ಜರ್ಮನಿಗೂ ಯುದ್ಧ ಪ್ರಾರಂಭವಾಯಿತಷ್ಟೆ. ಆಗ ನಾನು ಲಂಡನ್ನಿನಲ್ಲಿದ್ದ ವಿದ್ಯಾರ್ಥಿ ಸ್ವಯಂಸೇವಕ ದಳವೊಂದನ್ನು ಏರ್ಪಡಿಸಿದೆ. ಅದರ ಕೆಲಸಕ್ಕೆ ಒಳ್ಳೆಯ ಕೀರ್ತಿ ಬಂದಿತು. ಕೊನೆಯದಾಗಿ ಭಾರತದಲ್ಲಿ, 1917 ನೆಯ ಇಸವಿಯಲ್ಲಿ ಸೈನಿಕರು ಬೇಕೆಂದು, ಲಾರ್ಡ್ ಚೆಲ್ಮ್ಸಫರ್ಡರು ಪ್ರಾರ್ಥಿಸಿದಾಗ, ನನ್ನ ದೇಹಾರೋಗ್ಯ ಸರಿಯಾಗಿಲ್ಲದೆ ಇದ್ದರೂ ನಾನು ಸಾಹಸಮಾಡಿ, ಖೇಡದಲ್ಲಿ ಒಂದು ಸೈನ್ಯವನ್ನು ಎಬ್ಬಿಸಲು ಪ್ರಯತ್ನಿಸಿದೆ. ನನ್ನ ಪ್ರಯತ್ನ ಫಲಕಾರಿಯಾಗುವುದರಲ್ಲಿದ್ದಿತು. ಅಷ್ಟರಲ್ಲಿಯೇ ಯುದ್ಧ ನಿಂತಿತು. ಹೆಚ್ಚಿಗೆ ಸೈನಿಕರು ಬೇಡವೆಂದು ಸರ್ಕಾರದವರು ಪ್ರಕಟಿಸಿದರು. ಇಂತಹ ಸೇವೆಗಳನ್ನು ಮಾಡುವಾಗಲೆಲ್ಲಾ, ಇವುಗಳ ಮೂಲಕ ನಮ್ಮ ದೇಶದವರಿಗೆ ಬ್ರಿಟಿಷ್ ಸಾಮ್ರಾಜ್ಯದಲ್ಲಿ ಸಮಾನವಾದ ಸ್ಥಾನವನ್ನು ದೊರಕಿಸಿಕೊಳ್ಳಬಹುದೆಂಬುದೇ ನನ್ನ ಆಸೆಯಾಗಿದ್ದಿತು.

"ಮೊದಲನೆಯ ಹೊಡೆತ ರೌಲೆಟ್ ಕಾನೂನಿನ ಮೂಲಕ ಬಂದಿತು. ಅದು ಜನರ ಸ್ವಾತಂತ್ರ್ಯವನ್ನು ಪೂರ್ಣವಾಗಿ ಅಪಹರಿಸುವ ಕಾನೂನಾಗಿದ್ದಿತು. ಅದಕ್ಕೆ ವಿರೋಧವಾಗಿ ದೊಡ್ಡ ಚಳುವಳಿಯನ್ನು ಎಬ್ಬಿಸುವುದು ನನ್ನ ಕರ್ತವ್ಯವೆಂದು ನನಗೆ ಭಾಸವಾಯಿತು. ಅನಂತರ ಪಂಜಾಬಿನ ಅತ್ಯಾಚಾರಗಳು ನಡೆದವು. ಜಲಿಯನ್‌ವಾಲಾ ಬಾಗ್ ನರಮೇಧ, ಭಾರತೀಯರು ಹೊಟ್ಟೆಯ ಮೇಲೆ ತೆವಳಿಕೊಂಡು ಹೋಗುವ ಅಪ್ಪಣೆ, ಸಾರ್ವಜನಿಕವಾಗಿ ಬಹಿರಂಗವಾಗಿ ಛಡಿಏಟು, ಇನ್ನೂ ಸಾರ್ವಜನಿಕರಿಗೆ ಊಹನಾತೀತವಾದ ಅವಮಾನಗಳೆಲ್ಲಾ ನಡೆದುವು. ಬ್ರಿಟಿಷ್ ಮುಖ್ಯ ಮಂತ್ರಿಗಳು, ತುರ್ಕಿ ಒಟ್ಟಾಗಿರುವುದೆಂದೂ ಮುಸಲ್ಮಾನರ ಪವಿತ್ರಕ್ಷೇತ್ರಗಳಿಗೆ ಯಾವಕುಂದಕವೂ ಇಲ್ಲವೆಂದೂ ಕೊಟ್ಟಿದ್ದ ವಾಗ್ದಾನಕೂಡ ನಡೆಯುವಂತೆ ಇರಲಿಲ್ಲವೆಂಬುದು ನನಗೆ ಚನ್ನಾಗಿ ಗೊತ್ತಾಯಿತು.

"ಆದರೆ ಸ್ನೇಹಿತರು ಅಮೃತಸರ್ ಕಾಂಗ್ರೆಸ್‌ನಲ್ಲಿ 1919ರಲ್ಲಿ ಹೆಚ್ಚಾದ ಎಚ್ಚರಿಕೆಯನ್ನು ಕೊಟ್ಟರೂ ನಾನು ಅವುಗಳನ್ನು ಉದಾಸೀನಮಾಡಿ ಮಾಂಟೆಗೂ ಛೆಲಮ್ಸ್‌ಫರ್ಡ್ ಸುಧಾರಣೆಗಳನ್ನು ಸ್ವೀಕರಿಸಬೇಕೆಂದು ಹೊಡೆದಾಡಿದೆ. "ಇಂಗ್ಲೆಂಡಿನ ಮುಖ್ಯ ಮಂತ್ರಿ ಭಾರತದ ಮುಸಲ್ಮಾನರಿಗೆ

ಕೊಟ್ಟಿದ್ದ ತಮ್ಮ ವಾಗ್ದಾನದಂತೆ ನಡೆಯಬಹುದು; ಪಂಜಾಬಿನ ಅತ್ಯಾಚಾರಕ್ಕೆ ಪರಿಹಾರ ದೊರೆಯಬಹುದು; ಸುಧಾರಣೆಗಳು ಅಲ್ಪಗಳೇ ಆದರೂ ಭಾರತದಲ್ಲಿ ಅವುಗಳಿಂದ ಹೊಸ ಯುಗ ಪ್ರಾರಂಭವಾಗಬಹುದು ಎಂಬ ಆಸೆಯಿಂದ ಹಾಗೆ ಮಾಡಿದೆ."

"ಆದರೆ ಆ ಆಶೆಗಳೆಲ್ಲಾ ನಿರಾಶೆಗಳಾದವು. ಪಂಜಾಬು ಅತ್ಯಾಚಾರದಲ್ಲಿ ಸರ್ಕಾರದವರು ತಿಪ್ಪೆ ಸಾರಿಸಿದರು. ಅರಹೊಟ್ಟೆ ತಿಂದು ಜೀವಿಸುತ್ತಿರುವ ಭಾರತದ ರೈತರು ನಿಧಾನವಾಗಿ ನಿರ್ಜೀವಿಗಳಾಗುತ್ತಿದ್ದಾರೆ. ಭಾರತದಲ್ಲಿ ಸ್ಥಾಪಿಸಿರುವ ಸರ್ಕಾರ ಜನರ ರಕ್ತವನ್ನು ಹೀರುವುದಕ್ಕಾಗಿ ಎಂಬುದು ಅವರಿಗೆ ಗೊತ್ತಾಗಿಲ್ಲ. ಹಳ್ಳಿಗಳಲ್ಲಿ ಕಣ್ಣಾರೆ ಕಾಣುವ ಚರ್ಮ ಮೂಳೆಗಳ ಜನರ ಸ್ಥಿತಿಯನ್ನು ಯಾವ ದೊಡ್ಡ ಮಾತುಗಳಿಂದಲೂ ಅಂಕಿ ಅಂಶಗಳಿಂದಲೂ ಮರೆಯಿಸುವುದು ಸಾಧ್ಯವಿಲ್ಲ. ಇಂಗ್ಲೆಂಡಿನವರೂ ಭಾರತದ ಪಟ್ಟಣವಾಸಿಗಳೂ, ಯಾವ ಚರಿತ್ರೆಯಲ್ಲಿಯೂ ನಡೆಯದೆ ಇರುವಂತಹ ಇಂತಹ ಅನ್ಯಾಯಕ್ಕೆ ದೇವರ ಮುಂದೆ ಜವಾಬ್ದಾರರಾಗಬೇಕೆಂಬುದರಲ್ಲಿ ನನಗೆ ಅನುಮಾನವಿಲ್ಲ. ಈ ದೇಶದಲ್ಲಿ, ಕಾನೂನೇ, ಪರದೇಶದ ಲೂಟಿಗಾರರ ಸಹಾಯಕ್ಕಾಗಿ ಉಪಯೋಗವಾಗುತ್ತಿದೆ. ನಾನು ಪಂಜಾಬಿನ ಮಾರ್ಷಿಯಲ್ ಕಾನೂನಿಗೆ ಸಂಬಂಧಪಟ್ಟ ಖಟ್ಲೆಗಳನ್ನು ನಿಷ್ಪಕ್ಷಪಾತವಾಗಿ ನೋಡಿದುದರಲ್ಲಿ ಶೇಕಡ 95 ಶಿಕ್ಷೆಗಳು ನಿರಾಧಾರವಾದುವೆಂದು ನನಗೆ ತಿಳಿದುಬಂದಿದೆ. ರಾಜಕೀಯ ಖಟ್ಲೆಗಳಲ್ಲಿ ನನ್ನ ಅನುಭವದಿಂದ, ಶಿಕ್ಷಿತರಾದ ಪ್ರತಿ ಹತ್ತು ಮಂದಿಯ ಪೈಕಿ 9 ಜನ ನಿರಪರಾಧಿಗಳೆಂದು ನನಗೆ ಚೆನ್ನಾಗಿ ಗೊತ್ತು. ಅವರ ತಪ್ಪಿತ ತಮ್ಮ ದೇಶವನ್ನು ಅವರು ಪ್ರೀತಿಸಿದುದೇ. ನೂರು ಖಟ್ಲೆಗಳಲ್ಲಿ 99 ರಲ್ಲಿ ಭಾರತೀಯರಿಗೂ ಆಂಗ್ಲೇಯರಿಗೂ ವ್ಯಾಜ್ಯವುಂಟಾದಾಗ ಭಾರತೀಯರಿಗೆ ನ್ಯಾಯ ದೊರೆತಿಲ್ಲ. ಇದು ಅತಿಶಯೋಕ್ತಿಯಲ್ಲ. ಇಂತಹ ಖಟ್ಲೆಗಳಲ್ಲಿ ಸಂಬಂಧವುಳ್ಳ ಎಲ್ಲಾ ಭಾರತೀಯರ ಅನುಭವವೂ ಇದೆಯೆ. ಹೀಗೆ ಕಾನೂನನ್ನು ಉದ್ದೇಶಪೂರ್ವಕವಾಗಿಯೋ ಉದ್ದೇಶರಹಿತವಾಗಿಯೋ, ಪರದೇಶದ ಲೂಟಿಕಾರರ ಹಿತಕ್ಕಾಗಿ ದುರುಪಯೋಗಪಡಿಸುತ್ತಿದ್ದಾರೆ.

ಭಾರತದ ಆಳ್ವಿಕೆಯಲ್ಲಿ ತೊಡಗಿರುವ ಅವರ ಅನುಯಾಯಿಗಳೂ, ನಾನು ಹೇಳಲು ಪ್ರಯತ್ನಪಟ್ಟಿರುವ ಈ ಕ್ರೂರ ಕರ್ಮಗಳಲ್ಲಿ ತೊಡಗಿ

ದ್ದಾರೆಂದೂ ಇಂಗ್ಲಿಷ್ ಜನರೂ ಅರಿಯದಿರುವುದು ದೊಡ್ಡ ದುರದೃಷ್ಟ. ಅನೇಕ ಇಂಗ್ಲಿಷ್ ಅಧಿಕಾರಿಗಳು ತಾವು ಪ್ರಪಂಚದಲ್ಲಿ ಉತ್ತಮವಾದ ಒಂದು ಪದ್ಧತಿಯಿಂದಲೇ ಇಲ್ಲಿ ರಾಜ್ಯವಾಳುತ್ತಿರುವೆವೆಂದೂ ಭಾರತವು ನಿಧಾನವಾಗಿಯಾದರೂ ಪ್ರಗತಿಯ ಮಾರ್ಗವನ್ನು ಹಿಡಿದಿದೆಯೆಂದೂ ನಿಜವಾಗಿಯೂ ನಂಬಿದ್ದಾರೆ ಎಂಬುದು ನನಗೆ ಗೊತ್ತಿದೆ. ಒಂದು ಕಡೆ ಯಲ್ಲಿ ಸರ್ಕಾರದವರು ಬಿತ್ತಿರುವ ಭಯ; ತೋರಿಸುತ್ತಿರುವ ಪಶುಶಕ್ತಿ; ಮತ್ತೊಂದು ಕಡೆ ಭಾರತೀಯರ ಆತ್ಮಸಂರಕ್ಷಣೆ ಶಕ್ತಿಕೂಡ ನಾಶವಾಗಿ ಅವರು ನಿರ್ವೀರ್ಯರಾಗಿರುವುದು. ಈ ಎರಡರಿಂದ ಅಧಿಕಾರಿಗಳಿಗೆ ತಮ್ಮ ತಪ್ಪು ತಮಗೇ ತಿಳಿಯದಂತಹ ತೃಪ್ತಿಯುಂಟಾಗಿದೆ. ನನ್ನ ಮೇಲೆ ಛಾರ್ಜುಮಾಡಿರುವ ಇಂಡಿಯನ್ ಪೀನಲ್‌ಕೋಡಿನ 124-A ಸೆಕ್ಷನ್, ಕಾನೂನುಗಳ ರಾಜ. ಇದರಿಂದ ದೇಶದ ಪ್ರಜೆಗಳ ಸ್ವಾತಂತ್ರ್ಯವನ್ನು ಪೂರ್ಣವಾಗಿ ಅಪಹರಿಸಬಹುದು. ಪ್ರೀತಿಯನ್ನು ತಯಾರುಮಾಡುವುದು ಸಾಧ್ಯವಿಲ್ಲ. ಕಾನೂನಿನಿಂದಲೂ ಸರಿಪಡಿಸುವುದು ಸಾಧ್ಯವಿಲ್ಲ. ಒಬ್ಬ ಮನುಷ್ಯನಿಗೆ ಯಾರಲ್ಲಾದರೂ, ಯಾವುದರಲ್ಲಾದರೂ ಪ್ರೀತಿ ಇಲ್ಲದಿದ್ದರೆ, ಅದನ್ನು ಅವನು ಪೂರ್ಣವಾಗಿ ವ್ಯಕ್ತಪಡಿಸಲು ಅವಕಾಶ ಕೊಡಬೇಕು. ಅವನು ಹಿಂಸಾಕೃತ್ಯಗಳನ್ನು ಮಾಡದಿದ್ದರೆ ಪ್ರೋತ್ಸಾಹಿಸದಿದ್ದರೆ ಸಾಕು. ಆದರೆ ಶ್ರೀ ಬ್ಯಾಂಕರರ ಮೇಲೂ ನನ್ನ ಮೇಲೂ ಹಾಕಿರುವ ಕಾನೂನಿ ನಲ್ಲಿ, ಅಪ್ರೀತಿಯನ್ನು ವ್ಯಕ್ತಪಡಿಸುವುದೂ ಸಹ ತಪ್ಪೇ ಆಗಿದೆ. ಆ ಕಾನೂನಿನ ಆಶ್ರಯದಿಂದ ಶಿಕ್ಷಿಸಲ್ಪಟ್ಟ ಖಟ್ಲೆಗಳನ್ನೆಲ್ಲಾ ನಾನು ವ್ಯಾಸಂಗ ಮಾಡಿದ್ದೇನೆ. ಭಾರತದ ಅನೇಕ ದೇಶಭಕ್ತರು ಆ ಕಾನೂನಿನ ಮೂಲಕ ಶಿಕ್ಷೆಗೆ ಒಳಗಾಗಿದ್ದಾರೆ. ಆದುದರಿಂದ ಆ ಕಾನೂನಿನಿಂದ ಶಿಕ್ಷಿತನಾಗು ವುದು ಒಂದು ಹೆಮ್ಮೆಯೆಂದೇ ನಾನು ಭಾವಿಸುತ್ತೇನೆ.

"ನನ್ನ ಅಪ್ರೀತಿಯ ಕಾರಣವನ್ನು ಸೂಕ್ಷ್ಮವಾಗಿ ತಿಳಿಸಲು ಪ್ರಯ ತ್ನಿಸಿದ್ದೇನೆ. ಯಾವ ಒಬ್ಬ ಅಧಿಕಾರಿಯ ಮೇಲೂ ನನಗೆ ಅಪ್ರೀತಿ ಇಲ್ಲ. ವ್ಯಕ್ತಿದೃಷ್ಟಿಯಿಂದ ಧೊರೆಯಲ್ಲಿಯಂತೂ ನನಗೆ ಅಪ್ರೀತಿಯಿಲ್ಲ. ಆದರೆ ಯಾವ ಸರ್ಕಾರ, ಒಟ್ಟಿನಲ್ಲಿ ಹಿಂದೆ ಯಾವ ಸರ್ಕಾರವೂ ಮಾಡದಷ್ಟು ಕೆಡ ಕನ್ನು ಭಾರತಕ್ಕೆ ಮಾಡಿದೆಯೋ, ಆ ಸರ್ಕಾರವನ್ನು ಪ್ರೀತಿಸದೆ ಇರುವುದು ಒಂದು ಸದ್ಗುಣವೆಂದೇ ನಾನು ಭಾವಿಸುತ್ತೇನೆ. ಭಾರತ, ಬ್ರಿಟಿಷ್ ಆಡ

ಕಿತದಲ್ಲಿ ಹಿಂದೆ ಯಾವಾಗಲೂ ಇಲ್ಲದಿದ್ದಷ್ಟು—ಪೌರುಷ ಹೀನವಾಗಿದೆ. ನನ್ನ ನಂಬಿಕೆ ಹೀಗೆ ಇರುವುದರಿಂದ, ಈ ಸರ್ಕಾರವನ್ನು ಪ್ರೀತಿಸುವುದು ಪಾಪವೆಂದು ನನ್ನ ಭಾವನೆ. ನನ್ನನ್ನು ಶಿಕ್ಷಿಸಲು ಸಾಕ್ಷಿಯಾದ ಈ ಲೇಖನಗಳನ್ನು ಬರೆಯುವ ಸುಯೋಗವುಂಟಾದುದಕ್ಕೆ ನಾನು ಬಹು ಹೆಮ್ಮೆಪಡುತ್ತೇನೆ.

"ನಿಜವಾಗಿಯೂ, ಈ ಅಸಹಕಾರದ ಮೂಲಕ ಭಾರತವೂ ಇಂಗ್ಲೆಂಡೂ ಇರುವ ಅಸ್ವಾಭಾವಿಕ ಪರಿಸ್ಥಿತಿಯನ್ನೂ, ಅದರ ಪರಿಹಾರ ಮಾರ್ಗವನ್ನೂ ನಾನು ತೋರಿಸಿದ್ದೇನೆಂದೇ ನಾನು ಭಾವಿಸುತ್ತೇನೆ. ನನ್ನ ನಮ್ರವಾದ ಅಭಿಪ್ರಾಯದಲ್ಲಿ, ಕೆಟ್ಟದ್ದರೊಂದಿಗೆ ಅಸಹಕಾರ ಮಾಡುವುದು, ಒಳ್ಳೆಯದರೊಂದಿಗೆ ಸಹಕಾರಮಾಡುವಷ್ಟೇ ನಮ್ಮ ಕರ್ತವ್ಯ. ಆದರೆ ಪ್ರಾಚೀನ ಕಾಲದಲ್ಲಿ ಈ ಅಸಹಕಾರವನ್ನು ಹಿಂಸೆಯ ಮೂಲಕವೇ ಪ್ರಕಟಿಸುತ್ತಿದ್ದರು. ಹಿಂಸಾಮಾರ್ಗದ ಅಸಹಕಾರದಿಂದ ಕೆಡಕುಗಳು ಹೆಚ್ಚುತ್ತಾ ಹೋಗುತ್ತವೆ. ಸರ್ಕಾರ ಹಿಂಸೆಯ ಮೇಲೆ ಅವಲಂಬಿಸಿದೆ. ಅದನ್ನು ಎದುರಿಸಬೇಕಾದರೆ ಅಹಿಂಸೆ ಬೇಕು, ಎಂಬುದನ್ನು ನಮ್ಮ ದೇಶದವರಿಗೆ ತಿಳಿಸಲು ನಾನು ಪ್ರಯತ್ನಿಸುತ್ತಿದ್ದೇನೆ. ಕೆಟ್ಟದ್ದರೊಂದಿಗೆ ಅಸಹಕಾರಮಾಡುವುದರಿಂದ ಉಂಟಾಗುವ ಶಿಕ್ಷೆಯನ್ನು ಸಂತೋಷದಿಂದ ಅನುಭವಿಸುವುದೂ, ಅಹಿಂಸೆಯಲ್ಲಿ ಅಡಗಿದೆ. ಆದುದರಿಂದ ಕಾನೂನಿನಲ್ಲಿ ಯಾವುದು ತಪ್ಪು ಎಂದು ಪರಿಗಣಿತವಾಗಿದೆಯೋ, ಆದರೆ ನಾನು ಯಾವುದನ್ನು ದೇಶದ ಪ್ರಜೆಯು ಅತ್ಯಂತ ಉಚ್ಚವಾದ ಧರ್ಮ ಎಂದು ತಿಳಿದಿದ್ದೇನೆಯೋ, ಆ ಕರ್ತವ್ಯವನ್ನು ಮಾಡಿದುದಕ್ಕಾಗಿ ಉಂಟಾಗುವ ಶಿಕ್ಷೆಯನ್ನು ಸಂತೋಷದಿಂದ ಅನುಭವಿಸಲು ನಾನು ಇಲ್ಲಿ ನಿಂತಿದ್ದೇನೆ. ನಿಮಗೆ ಉಳಿದಿರುವುದು ಒಂದೇ ಮಾರ್ಗ. ಯಾವ ನ್ಯಾಯ ತೀರ್ಮಾನವನ್ನು ನೀವು ಕೊಡಲು ಇಲ್ಲಿ ಕುಳಿತಿದ್ದೀರೋ ಈ ಸರ್ಕಾರ ನೀತಿರಹಿತವಾದುದು, ಎಂದು ನಿಮಗೆ ನಂಬಿಕೆಯಾದರೆ ನಿಮ್ಮ ಕೆಲಸಕ್ಕೆ ರಾಜೀನಾಮೆ ಕೊಟ್ಟು, ಈ ಅನೀತಿಯೊಂದಿಗೆ ಸಂಬಂಧವನ್ನು ತ್ಯಜಿಸುವುದು ; ಆದರೆ ನೀವು ಕೊಡುತ್ತಿರುವ ನ್ಯಾಯವೂ ಈ ಸರ್ಕಾರವೂ ಈ ದೇಶದ ಒಳ್ಳೆಯದಕ್ಕೇ ಎಂದು ನಿಮಗೆ ನಂಬಿಕೆಯಾದರೆ, ಆ ದೃಷ್ಟಿಯಿಂದ ನನ್ನ ಕೆಲಸ ಸಾರ್ವಜನಿಕರ ಹಿತಕ್ಕೆ ವಿರೋಧವಾದುದರಿಂದ ಕಾನೂನಿನಲ್ಲಿರುವ ಉಗ್ರವಾದ ಶಿಕ್ಷೆಯನ್ನು ನನಗೆ ವಿಧಿಸುವುದು."

ಮಹಾತ್ಮರಿಗೆ ಆಗ ಆರು ವರುಷ ಶಿಕ್ಷೆ ವಿಧಿಸಿದುದು ದೇಶಕ್ಕೆಲ್ಲ ಗೊತ್ತಾದ ವಿಚಾರ. ಮಹಾತ್ಮರ ದಸ್ತಗಿರಿಯಾದ ಮೇಲೆ ಆಶ್ರಮದ ವ್ಯವಸ್ಥಾಪಕರು ಅನೇಕ ಕೆಲಸಗಾರರನ್ನು ಅವರವರ ಸ್ಥಳಗಳಲ್ಲಿ ಹೋಗಿ ಕೆಲಸಮಾಡುವಂತೆ ಕಳುಹಿಸಿದರು. ಸುದರ್ಶನ ತನ್ನ ಊರಿಗೆ ಹೊರಟು ಬರುವ ಕಾಲದಲ್ಲಿ ಧಾರವಾಡದಲ್ಲಿ ಇಳಿದ. ಧಾರವಾಡದಲ್ಲಿ ಸುದರ್ಶನನನ್ನು ದಸ್ತಗಿರಿಮಾಡಿ ಆಗ ತಾನೆ ಹೊಸದಾಗಿ ಬಂದಿದ್ದ ಐ. ಸಿ. ಎಸ್. ಅಧಿಕಾರಿಯ ಮುಂದೆ ವಿಚಾರಣೆಗೆ ನಿಲ್ಲಿಸಿದರು. ಆ ಹುಡುಗನಾದ ಐ. ಸಿ. ಎಸ್. ಅಧಿಕಾರಿಗೆ ಇನ್ನೂ, ಮೊದಲನೆಯ ದರ್ಜೆಯ ಮ್ಯಾಜಿಸ್ಟ್ರೇಟಿನ ಅಧಿಕಾರಗಳು ಬಂದಿರಲಿಲ್ಲ. ಈ ಕಾರಣದಿಂದ ಪೋಲೀಸಿನವರು ಸುದರ್ಶನನನ್ನು ಬೇರೆ ಜಿಲ್ಲೆಯ ಡೆಪುಟಿ ಕಲೆಕ್ಟರ ಮುಂದೆ ವಿಚಾರಣೆಗೆ ನಿಲ್ಲಿಸಿದರು.

ಕೋರ್ಟಿಗೆ ಸುದರ್ಶನನನ್ನು ಕರೆದುಕೊಂಡು ಹೋದ ಮೊದಲನೆಯ ದಿನವೇ ಡೆಪುಟಿ ಕಲೆಕ್ಟರು ಪೋಲೀಸಿನವರೊಡನೆ "ಈ ಹುಡುಗ ಬ್ರಿಟಿಷ್ ಸರ್ಕಾರವನ್ನು ಬುಡಮೇಲು ಮಾಡುತ್ತಾನೆ" ಎಂದು ಹಿಡಿದುಕೊಂಡು ಬಂದಿರೊ ಎಂದು ಹೇಳಿದರು. ಡೆಪುಟಿ ಕಲೆಕ್ಟರ ಧ್ವನಿ ಕೇಳಿ ಪೋಲೀಸಿನವರಿಗೆ ಗಾಬರಿಯಾಯಿತು. ಈ ಧ್ವನಿಯಿಂದ ಮಾತನಾಡುವವರು ಸುಲಭವಾಗಿ ಶಿಕ್ಷೆ ವಿಧಿಸುವುದಿಲ್ಲವೆಂದು ಅವರಿಗೆ ಚೆನ್ನಾಗಿ ಗೊತ್ತಾಗಿದ್ದಿತು. ಆದುದರಿಂದ ಅವರು ಸುದರ್ಶನನನ್ನು ಡೆಪುಟಿ ಕಲೆಕ್ಟರ ಎದುರಿಗೆ ಕರೆದುಕೊಂಡು ಹೋಗಲಿಲ್ಲ. ಒಂದಿಲ್ಲ ಒಂದು ಸಬೂಬು ಹೇಳುತ್ತಾ, ಸುಮಾರು 40 ದಿವಸ ಆ ಬೇರೆ ಡಿಸ್ಟ್ರಿಕ್ಟಿನ ಸಬ್ ಜೈಲಿನಲ್ಲಿ ಇವನನ್ನು ಇಟ್ಟುಕೊಂಡಿದ್ದು ಕೊನೆಗೆ ಮತ್ತೆ ಧಾರವಾಡಕ್ಕೇ ಕರೆತಂದರು. ಆ ವೇಳೆಗೆ ಆ ಐ. ಸಿ. ಎಸ್. ಅಧಿಕಾರಿಗೆ ಮೊದಲನೆಯ ದರ್ಜೆಯ ಮ್ಯಾಜಿಸ್ಟ್ರೇಟನ ಅಧಿಕಾರಗಳು ಬಂದಿದ್ದವು. ಸುದರ್ಶನನನ್ನು ಅವರ ಎದುರಿಗೆ ವಿಚಾರಣೆಗೆ ನಿಲ್ಲಿಸಿದರು. ವಿಚಾರಣೆ ನಡೆದುದು ಸಬ್ ಜೈಲಿಗೆ ಸೇರಿದ ಒಂದು ಕೊಠಡಿಯಲ್ಲಿ. ಅಲ್ಲಿ ಕುರ್ಚಿ ಮೇಜು ಅಪರಾಧಿಗಳ ಕಟಾಂಜನ ಇವೆಲ್ಲಾ ಇರಲಿಲ್ಲ. ಮ್ಯಾಜಿಸ್ಟ್ರೇಟರು ಒಂದು ಹಳೆಯ ಕುರ್ಚಿಯ ಮೇಲೆ ಕುಳಿತ್ತಿದ್ದರು. ಮುಂದುಗಡೆ ಒಂದು ಕಾಲು ಚಿಕ್ಕದಾಗಿ ಪಟಪಟನೆ ಅಲ್ಲಾಡುತ್ತಿದ್ದ ಒಂದು ಹಳೆಯ ಮೇಜು ಇತ್ತು.

ಅದರ ಮೇಲೆ ಮ್ಯಾಜಿಸ್ಟ್ರೇಟು ಕೈಯಿಟ್ಟಾಗ ಅದು ಮೊದಲು ಕಟ್ ಎಂದೂ ಅನಂತರ, ರೋಗಿ ನರಳುವಂತೆ ಗೊಯ್ ಎಂದೂ ಸದ್ದು ಮಾಡಿತು. ಸುದರ್ಶನ ನೆಲದ ಮೇಲೆಯೇ ನಿಂತಿದ್ದನು.

ಪೋಲೀಸಿನವರು ಏನೋ ಹೇಳುತ್ತಿದ್ದರು. ಮ್ಯಾಜಿಸ್ಟ್ರೇಟರು ಬರೆದುಕೊಳ್ಳುತ್ತಿದ್ದರು. ಸುದರ್ಶನನಿಗೆ ಅಲ್ಲಿ ನಿಂತಿದ್ದಂತೆಯೇ ಸಬ್ ಜೈಲಿನ ಜ್ಞಾಪಕ, ಆ ಹಿಂದಲ ನಲವತ್ತು ದಿನಗಳ ಅನುಭವಗಳೆಲ್ಲಾ ಕಣ್ಣು ಮುಂದೆ ಸುಳಿದುವು. ಸಬ್ ಜೈಲಿನಲ್ಲಿ ಅನೇಕ ಕೊಠಡಿಗಳಿದ್ದುವು. ಒಂದೊಂದು ಕೊಠಡಿಯಲ್ಲಿಯೂ ಕಳವು, ಹೊಡೆದಾಟ ಮುಂತಾದವುಗಳಿಗಾಗಿ ವಿಚಾರಣೆಯಾಗಬೇಕಾದವರನ್ನೂ, ಸೆಂಟ್ರಲ್ ಜೈಲಿಗೆ ಅಥವ ಡಿಸ್ಟ್ರಿಕ್ಟ್ ಜೈಲಿಗೆ ಕಳುಹಿಸಬೇಕಾದವರನ್ನೂ ಎರಡು ಮೂರು ಜನರನ್ನು ಇಟ್ಟಿದ್ದರು. ತನ್ನನ್ನು ಅವರ ಜತೆಯಲ್ಲಿಯೇ ಸೇರಿಸುತ್ತಾರೋ ಎಂದು ಸುದರ್ಶನ ಯೋಚಿಸುತ್ತಿದ್ದನು. ಆದರೆ ಖಾಲಿಯಾಗಿದ್ದ ಒಂದು ಕೊಠಡಿಯಲ್ಲಿ ಅವನನ್ನು ಸೇರಿಸಿ ಬೀಗ ಹಾಕಿದರು. ಆ ಕೊಠಡಿ ಒಂಭತ್ತು ಹತ್ತು ಅಡಿ ಉದ್ದ ಅಗಲವುಳ್ಳದುದಾಗಿದ್ದಿತು. ಅದರ ಮೂಲೆಯಲ್ಲಿ ಒಂದು ಮಡಕೆ ಇಟ್ಟಿದ್ದರು.

ಸಬ್ ಜೈಲಿನ ವಾಸನೆ, ಅದರಲ್ಲಿದ್ದು ಅನುಭವಿಸಿದವರಿಗೇ ಗೊತ್ತು. ಈ ವಾಸನೆ ಪ್ರಕೃತಿಯಂತೆಯೇ ಶಾಶ್ವತ. ಭಾರತದ ಒಂದು ಮೂಲೆಯಿಂದ ಒಂದು ಮೂಲೆಯವರಿಗೆ ಈ ಹದಿನಾರು ಲಕ್ಷ ಚದರ ಮೈಲಿಯ ಎಲ್ಲಾ ಸಬ್ ಜೈಲುಗಳ ವಾಸನೆಯೂ ಒಂದೇ ತರಹ. 1922 ರ ಸಬ್ ಜೈಲು ಎಲ್ಲಿ 1942 ರ ಸಬ್ ಜೈಲು ಎಲ್ಲಿ? ಆದರೆ ಎರಡರ ವಾಸನೆಯೂ ಒಂದೇ ತರಹವಾಗಿರುವುದು ಏನಾಶ್ಚರ್ಯ! ಟಾರಿನ ವಾಸನೆ, ಲೋಶನ್ ವಾಸನೆ, ಹಳೆಯ ಕಂಬಳಿಗಳ ವಾಸನೆ, ಅಸಂಖ್ಯಾತವಾದ ತಿಗಣೆಗಳ ವಾಸನೆ, ಅಡಿಗೆ ಮನೆಯಲ್ಲಿ ಬೇಯಿಸಿದ ಆಹಾರ ಚೆಲ್ಲಿರುವ ವಾಸನೆ, ಇವೆಲ್ಲವೂ ಸೇರಿದ ಒಂದು ಪ್ರಿಯವಾದ ವಾಸನೆ! ಎಲ್ಲಾ ಕಡೆಯಿಂದಲೂ ಸುದರ್ಶನನನ್ನು ಸುತ್ತಿಕೊಂಡಿತ್ತು. ನೆರೆಯ ಕೊಠಡಿಯಲ್ಲಿದ್ದ ಖೈದಿಗಳು ತಮ್ಮ "ಸ್ವಂತ ಭಾಷೆ" ಯಲ್ಲಿ ಏನೋ ಮಾತನಾಡಿಕೊಳ್ಳುತ್ತಿದ್ದರು. ದೂರದಲ್ಲಿ ಹೊಗೆ ತುಂಬಿದ್ದ ಒಂದು ಲಾಂದ್ರ ಮಿಣುಕು ಮಿಣುಕು ಎನ್ನುತ್ತಿದ್ದಿತು. ಆ ಲಾಂದ್ರದ ಬೆಳಕು ಕೊಠಡಿಯೊಳಕ್ಕೆ ಕಾಣುತ್ತಿರಲಿಲ್ಲ. ಆದರೆ

ಆ ಲಾಂದ್ರ ಕೊಠಡಿಯಲ್ಲಿರುವವರಿಗೆ ಕಾಣುತ್ತಿದ್ದಿತು. ಆಗಾಗ್ಗೆ ಪಹರೆ ಕೊಡುವ ಸೇವಕರು ಬಂದು ಕೊಠಡಿಗಳ ಮುಂದಲ ವರಾಂಡಾದಲ್ಲಿ ಬೀಡಿ ಸೇದುತ್ತಾ ಒಬ್ಬರನ್ನೊಬ್ಬರು ಅತ್ಯಂತ ನೀಚವಾದ ಭಾಷೆಯಲ್ಲಿ ಬೈಯ್ಯುತ್ತಾ, ಕಿವಿಯಲ್ಲಿ ಕೇಳುವುದಕ್ಕೇ ಅಸಹ್ಯವಾದಷ್ಟು ಆಭಾಸವಾದ ಹಾಸ್ಯ ಮಾಡುತ್ತಾ ಒಂದು ಸಲ ತಿರುಗಾಡಿಕ್ಕೊಂಡು ಹೋಗುತ್ತಿದ್ದರು. ಗಾರ್ಡುಗಳು ಬದಲಾವಣೆಯಾಗುವಾಗ ಒಂದು ಧ್ವನಿಯಿಂದ ಭಯಂಕರ ವಾಗಿ ಕೂಗಿ ಒಬ್ಬರಿಗೆ ಒಬ್ಬರು ಅಧಿಕಾರ ವಹಿಸುತ್ತಿದ್ದರು. ಸುದರ್ಶನ ನಿಗೆ ರಾತ್ರಿ ಕಾಲದಲ್ಲಿ ಸ್ವಲ್ಪವೂ ನಿದ್ರೆ ಬರುತ್ತಿರಲಿಲ್ಲ. ಸ್ವಲ್ಪ ಕಣ್ಣು ಮುಚ್ಚಿದರೆ ತಿಗಣೆಗಳು ಅವನನ್ನು ಮುತ್ತುತ್ತಿದ್ದವು. ಕೂಡಲೆ ಅವನು ಬೆಚ್ಚಿ ಏಳುತ್ತಿದ್ದನು. ದೂರದಲ್ಲಿ ನಾಯಿಗಳೂ ಗುಳ್ಳೆ ನರಿಗಳೂ ಕೂಗು ವುದು ಕೇಳುತ್ತಿದ್ದಿತು. ಇದ್ದಕ್ಕಿದ್ದಂತೆ ಮಗ್ಗಲು ಕೊಠಡಿಯಲ್ಲಿದ್ದ ಖೈದಿ ಗಳು ಒಬ್ಬರೊಂದಿಗೊಬ್ಬರು ಹೀನಾಮಾನವಾಗಿ ಬೈಯ್ಯುತ್ತಾ ಜಗಳ ಪ್ರಾರಂಭಿಸುತ್ತಿದ್ದರು. ಆಗ ಕಾವಲುಗಾರರು ಬಂದು ಖೈದಿಗಳನ್ನು ಇನ್ನೂ ಹೀನವಾಗಿ ಬೈದು ಹೋಗುತ್ತಿದ್ದರು. ಸುದರ್ಶನನಿಗೆ ಅದು ಜೈಲು ಆಗಿ ಕಾಣಲಿಲ್ಲ. ಸ್ಮಶಾನದಲ್ಲಿ ಅರ್ಧರಾತ್ರಿಯಲ್ಲಿ ಇದ್ದಕ್ಕಿದ್ದಂತೆ ಬೇತಾಳಗಳೂ ಪಿಶಾಚಿಗಳೂ ವಿಕಟ ನರ್ತನ ಮಾಡುತ್ತಿದ್ದಂತೆ ಕಂಡಿತು. ಅವನಿಗೆ ಭಯವಾಯಿತು. ಮೈ ನಡುಗಿತು. ಪ್ರಿಯವಾದ ಮಲ್ಲಿಗೆಹಳ್ಳಿ, ಜಾನಕಮ್ಮ ವೈದೇಹಿ ಸೀತೆ ಜತೆಗಾರರಾದ ಸುಬ್ಬು ರಂಗ ಇವರ ಜ್ಞಾಪಕ ಬಂತು ಜ್ವರ ಬಂದಂತೆ ಆಯಿತು. ಸರ್ಕಾರವನ್ನು ಎದುರಿಸುವುದು ಅವನಿಗೆ ಅಷ್ಟು ಕಷ್ಟವಾಗಿ ತೋರಿರಲಿಲ್ಲ. ಸಬ್ ಜೈಲಿನ ವಾಸ ಕಷ್ಟ ವಾಯಿತು. ಕ್ರಿಮಿನಲ್ ಪ್ರೊಸೀಜರ್ ಕೋಡು 108 ನೇ ಸೆಕ್ಷನ್ ಮೇಲೆ ಅವನಿಗೆ ಶಿಕ್ಷೆ ಆಗುವದಿದ್ದಿತು. ಆದರೆ ಜೈಲಿನ ಅಧಿಕಾರಿ ಹೇಳಿದ ಕಾಗದಕ್ಕೆ ರುಜು ಹಾಕಿದ್ದರೆ ಬಿಡುಗಡೆ ಹೊಂದಿ ಹೊರಕ್ಕೆ ಹೋಗಬಹು ದಾಗಿದ್ದಿತು. ಸುದರ್ಶನ, ತಿಗಣೆಯು ಮೇಲೇರಿ ಮೈನಡುಕ ಬಂದಾಗಲೆಲ್ಲಾ "ನನ್ನ ಸ್ವಂತ ಇಚ್ಛೆಯಿಂದ ತಾನೇ ಬಂದಿದ್ದೇನೆ" ಎಂದುಕೊಂಡನು.

ಲೋಕಮಾನ್ಯ ತಿಳಕರ ಮೇಲೆ ಈ ಸೆಕ್ಷನ್ ಪ್ರಯೋಗಿಸಿದುದು ಸುದರ್ಶನನ ಜ್ಞಾಪಕಕ್ಕೆ ಬಂದಿತು. ಸುದರ್ಶನನಿಗೆ ಜೈಲಿನಲ್ಲಿ ಯಾವಾಗ ಬೇಜಾರಾದರೂ, ನಿರುತ್ಸಾಹವುಂಟಾದರೂ ಲೋಕಮಾನ್ಯ ತಿಳಕರ

ಮೇಲೆ ಈ ಸೆಕ್ಷನ್‌ನನ್ನು ಪ್ರಯೋಗಿಸಿದ್ದರೆಂಬುದನ್ನು ಜ್ಞಾಪಿಸಿಕೊಂಡ ಕೂಡಲೇ ಅವನಿಗೆ ಹೊಸ ಹುರುಪು ಉಂಟಾಗುತ್ತಿದ್ದಿತು.

ಸಬ್ ಜೈಲಿನಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಇಪ್ಪತ್ತುನಾಲ್ಕು ಗಂಟೆಯೂ ಬೀಗ ಹಾಕಿಯೇ ಇರುತ್ತಿದ್ದರು. ಬೆಳಿಗ್ಗೆ ಸಾಯಂಕಾಲ ಅರ್ಧ ಗಂಟೆಯ ಕಾಲ ದೇಹ ಪ್ರಕೃತಿಯ ಕೆಲಸಗಳಿಗಾಗಿ ಹೊರಗೆ ಬಿಡುತ್ತಿದ್ದರು. ಉಳಿದ ಹೊತ್ತೆಲ್ಲ ಸುದರ್ಶನ ಕೊಠಡಿಯಲ್ಲಿ ಸುಮ್ಮನೇ ಕುಳಿತಿರುತ್ತಿದ್ದನು. ಅವನಿಗೆ ಕೂತು ಕೂತು ಬೇಜಾರಾಗುತ್ತಿದ್ದಿತು; ಮಲಗಿ ಮಲಗಿ ಬೇಜಾರಾಗುತ್ತಿದ್ದಿತು. ಆ ಹತ್ತು ಅಡಿಯ ಕೊಠಡಿಯಲ್ಲಿಯೇ ಒಂದೇ ಸಮನಾಗಿ ಬೆಳಗಿನಿಂದ ರಾತ್ರಿಯವರೆಗೆ ತಿರುಗುತ್ತಿದ್ದನು. ಹೀಗೆ ತಿರುಗಿ ತಿರುಗಿ ಅವನಿಗೆ ತಲೆ ತಿರುಗಲು ಪ್ರಾರಂಭಿಸಿತ್ತು. ಆದರೂ ಹದಿನೈದು ಇಪ್ಪತ್ತು ನಿಮಿಷ ವಿಶ್ರಾಂತಿ ತೆಗೆದುಕೊಂಡು ಕಾಲು ಸೋತಿದ್ದರೂ ಮತ್ತೆ ತಿರುಗಲು ಪ್ರಾರಂಭಿಸುತ್ತಿದ್ದನು. ಒಂದು ನಿಮಿಷ ಕಳೆಯುವುದು ಒಂದು ವರುಷವಾಗುತ್ತಿದ್ದಿತು. ಸಬ್‌ಮ್ಯಾಜಿಸ್ಟ್ರೇಟರು ಜೈಲಿಗೆ ಬಂದಾಗ ಸುದರ್ಶನ "ಯಾವುದಾದರೂ ಒಂದು ಪುಸ್ತಕ ಕಳುಹಿಸಿಕೊಡಿ" ಎಂದನು. ಸಬ್ ಮ್ಯಾಜಿಸ್ಟ್ರೇಟರು ನಿಮಗೆ ಓದುವುದಕ್ಕೆ ಬರುತ್ತದೆಯೋ"ಎಂದು ಹೇಳಿ ಮನೆಗೆ ಹೋದ ನಂತರ ಪ್ರಸಿದ್ಧವಾದ ಖೂನಿಗಳು (Celebrated Murders) ಎಂಬ ಒಂದು ಇಂಗ್ಲೀಷ್ ಪುಸ್ತಕ ಕಳುಹಿಸಿದರು. ಸುದರ್ಶನ ಹಸಿದವನು ಪಾರಣೆ ಮಾಡುವಂತೆ ಅದನ್ನೇ 3–4 ಸಲ ಓದಿದನು.

ಮ್ಯಾಜಿಸ್ಟ್ರೇಟರು ಬರೆಯುತ್ತಿರುವಾಗ ಸುದರ್ಶನನಿಗೆ ಇದೆಲ್ಲಾ ಮನಸ್ಸಿನ ಮುಂದೆ ಬಂತು. ಕೆಲವು ಗಂಟೆಗಳ ನಂತರ ಮ್ಯಾಜಿಸ್ಟ್ರೇಟರು ತಲೆ ಎತ್ತಿ ಪೋಲಿಸ್ ಅಧಿಕಾರಿಯನ್ನು ಕುರಿತು "ಇವನಿಗೆ ರಾಜದ್ರೋಹವೆಂದರೇನು ಗೊತ್ತಿದೆಯೇ" ಎಂದು ಕೇಳಿದರು. ಮ್ಯಾಜಿಸ್ಟ್ರೇಟರು ಇನ್ನೂ ಹುಡುಗರಾಗಿದ್ದರು. ಸುದರ್ಶನ ಅವರಿಗಿಂತ ಹುಡುಗನಾಗಿದ್ದ. ಅವರು ಕೇಳಿದ ಪ್ರಶ್ನೆ ಸ್ವಾಭಾವಿಕವಾಗಿದ್ದಿತು. ಆಗ ಪೋಲಿಸ್ ಅಧಿಕಾರಿ ಇವರು ಮೂರು ತಿಂಗಳಿನ ಹಿಂದೆ ಧಾರವಾಡದಲ್ಲಿ ಈ ಭಾಷಣ ಮಾಡಿದರೆಂದು ಓದಿದನು.

"ಇಂಗ್ಲೆಂಡಿನಲ್ಲಿ ಸರ್ಕಾರ ಬದಲಾವಣೆ ಆಗಬೇಕೆಂದು ಹೇಳಿದರೆ ಅದು ರಾಜದ್ರೋಹವಲ್ಲ. ಇಲ್ಲಿ ಮಾತ್ರ ರಾಜದ್ರೋಹ; ನಮಗೆ ಸ್ವರಾಜ್ಯ

ಬೇಕು ಎಂದು ನಾವು ಕೇಳುತ್ತಿರುವುದರಿಂದಲೇ ಈಗ ಇರುವುದು ಸ್ವರಾಜ್ಯವಲ್ಲವೆಂಬುದು ಗೊತ್ತಾಗುತ್ತದೆ. ಸ್ವ ಅಂದರೆ ನಮ್ಮದು. ನಿಮ್ಮನ್ನು ಆಳುತ್ತಿರುವವರು ಜಾತಿಯಿಂದಲೂ ಧರ್ಮದಿಂದಲೂ ನಿಮ್ಮವರಲ್ಲ; ಅವರು ನಿಮ್ಮ ದೇಶದವರೂ ಅಲ್ಲ. ಇದಕ್ಕೆಲ್ಲಾ ಇರುವುದು ಒಂದೇ ಪ್ರತ್ಯುತ್ತರ; ನಮ್ಮ ಆಲೋಚನೆಗಳೆಲ್ಲಾ ಈಗ ಒಂದೇ ಕಡೆಗೆ ಹೋಗುತ್ತಿವೆ—ಕಾಲೇಜು ಇಲ್ಲ. ಆದುದರಿಂದ ಕಲೆಕ್ಟರಿಗೋ ಗವರ್ನರಿಗೋ ಅರ್ಜಿ ಹಾಕೋಣ. ಅವರ ಕೈನಲ್ಲಿ ಅಧಿಕಾರ ಇದೆ—ಎಂದು. ಈ ಅಧಿಕಾರ ನಿಮ್ಮ ಕೈಲಿ ಇದ್ದಿದ್ದರೆ, ಈ ಅಧಿಕಾರಿಗಳು ತಮ್ಮ ಅಧಿಕಾರಕ್ಕೆ ಪ್ರಜೆಗಳಿಗೆ ಜವಾಬ್ದಾರರಾಗಿದ್ದರೆ ಪರಿಸ್ಥಿತಿಯೇ ಬೇರೆಯಾಗಿರುತ್ತಿದ್ದಿತು. ಯಾರಿಗಾಗಿ ಈ ಸರ್ಕಾರ ನಡೆಯಬೇಕೋ ಅಂತಹ ಪ್ರಜೆಗಳಾದ ನಿಮ್ಮ ಕೈಗೆ ಈ ಅಧಿಕಾರ ಬಂದಿಲ್ಲದುದರಿಂದ ಹೀಗೆಲ್ಲಾ ಆಗುತ್ತಿದೆ. ನಮಗೆ ಈ ಏರ್ಪಾಡು ಬೇಡ. ನಮಗೆ ಬೇಕಾದುದು ಸ್ವರಾಜ್ಯ....ನಿಮ್ಮ ಕಲೆಕ್ಟರನ್ನು ಚುನಾಯಿಸುವ ಅಧಿಕಾರ ನಿಮಗೆ ಬಂದರೆ,—ಈಗಿನ ಕಲೆಕ್ಟರಿಗಿಂತ ಅವನು ಹೆಚ್ಚು ಕೆಲಸ ಮಾಡುತ್ತಾನೆಂದು ಹೇಳುವುದಕ್ಕಾಗುವುದಿಲ್ಲ—ಅವನು ತನ್ನ ಕೆಲಸವನ್ನು ಈ ಕಲೆಕ್ಟರಿಗಿಂತ ಕೆಡಕಾಗಿಯೇ ಮಾಡಬಹುದು. ಆದರೆ ಇವನು ನಮ್ಮವನು. ನಮ್ಮನ್ನು ಹೇಗೆ ತುಷ್ಟಿಪಡಿಸಬೇಕು ಎಂಬುದನ್ನು ಅವನು ನೋಡಿಕೊಳ್ಳುತ್ತಾನೆ.

ಆದರೆ ಈಗಿರುವ ಕಲೆಕ್ಟರು "ನಾನು ಇಷ್ಟು ವಿದ್ಯಾವಂತ. ನನಗೆ ಇಷ್ಟು ಸಂಬಳ. ನನಗೆ ಯಾವುದು ಒಳ್ಳೆಯದೆಂದು ಕಾಣುವುದೋ ಅದೇ ಇತರರಿಗೂ ಒಳ್ಳೆಯದೆಂದು ಕಾಣಬೇಕು? ನಾನು ಮಾಡುವುದು ಯಾಕೆ ಕೆಡಕಾಗಬೇಕು" ಎಂದು ಯೋಚಿಸುತ್ತಾನೆ. ಅದಕ್ಕೆ ಉತ್ತರ ಒಂದೇ; ನಿನ್ನ ದುರಹಂಕಾರ ಅಂಥಾದ್ದು ಎಂದು. ನಿಧಾನವಾಗಿ ನಮ್ಮ ದೇಶದಲ್ಲಿರುವ ಕುಂದಕಗಳನ್ನೆಲ್ಲಾ ನೋಡಿದರೆ —"ಈ ಸರ್ಕಾರ ಕ್ರಮ ನಮಗೆ ಬೇಕಿಲ್ಲ. ಒಂದು ಹೆಂಡದ ಅಂಗಡಿಯನ್ನು ಒಂದು ಹಳ್ಳಿಯಿಂದ ಬೇರೆ ಊರಿಗೆ ವರ್ಗಾಯಿಸಿ ಎಂದು ಕೇಳುತ್ತೇವೆ. ಆಗುವುದಿಲ್ಲ ಎನ್ನುತ್ತಾರೆ. ಉಪ್ಪಿನ ಕಂದಾಯ ವಜಾ ಮಾಡಿ ಎನ್ನುತ್ತೇವೆ. ಆಗುವುದಿಲ್ಲ. ಆಡಳಿತಕ್ಕೆ ದುಡ್ಡು ಸಾಲದು ಎನ್ನುತ್ತಾರೆ. ನಮ್ಮ ಆಡಳಿತ ನಮಗೆ ಕೊಡಿ. ದುಡ್ಡನ್ನೂ

ಹುಟ್ಟಿಸುತ್ತೇವೆ. ಆಳ್ವಿಕೆಯನ್ನೂ ಮಾಡುತ್ತೇವೆ. ನಮ್ಮ ಆಡಳಿತವನ್ನು ನಾವು ಮಾಡಿಕೊಳ್ಳುವುದೇ ಸ್ವರಾಜ್ಯ. ಪ್ರಜೆಗಳಿಗೆ ಅಧಿಕಾರವನ್ನು ವಹಿಸುವುದು ಆಡಳಿತದ ಅತ್ಯಂತ ಶ್ರೇಷ್ಠವಾದ ತತ್ವ. ಇದನ್ನು ಆಳುವವರೂ ಪ್ರತಿಭಟಿಸುವುದಿಲ್ಲ. ಅವರ ದೇಶದಲ್ಲಿ ನಡೆಯುತ್ತಿರುವುದೂ ಇದೇಯೆ. ಅವರು ತಮ್ಮ ದೇಶಕ್ಕೆ ಹೋದ ಮೇಲೆ ಇದೇ ತತ್ವವನ್ನು ಪ್ರಚಾರಮಾಡುತ್ತಾರೆ. ಆದುದರಿಂದ ಈ ತತ್ವ ತಪ್ಪು ಎಂದು ಯಾರೂ ಹೇಳುವುದಿಲ್ಲ. ಹಾಗಾದರೆ ಇರೋ ಕಷ್ಟ ಎಲ್ಲಿ?

"ಭಾರತೀಯರು ಸ್ವರಾಜ್ಯಕ್ಕೆ ಅರ್ಹರಲ್ಲ ಎಂದು ಅವರು ಸ್ಪಷ್ಟವಾಗಿ ಹೇಳುತ್ತಾರೆ. ನಮ್ಮವರಲ್ಲಿಯೂ ಅಂತಹವರು ಇಲ್ಲದೆ ಇಲ್ಲ. ನಾವು ಯಾಕೆ ಅರ್ಹರಲ್ಲ. ನಮ್ಮವರೂ ಕೆಲವರು ಕೌನ್ಸಿಲ್ಲಿನಲ್ಲಿ ಇದ್ದಾರೆ. ಈ ಜನಗಳನ್ನು ಕೌನ್ಸಿಲ್ಲಿಗೆ ಆರಿಸಿದಾಗ ಅವರು ಯಾರಾದರೂ "ನಾವು ಅರ್ಹರಲ್ಲ. ನಮಗೆ ಈ ಜಾಗ ಕೊಡಬೇಡಿ" ಎಂದು ಹೇಳಿದರೆ? ಸರ್ಕಾರವು ಅವರಿಗೆ ನಿಜವಾಗಿಯೂ ದೊಡ್ಡ ಅಧಿಕಾರಗಳನ್ನು ಕೊಟ್ಟಾಗ ಅವರು "ನಮಗೆ ಬೇಡ, ನಾವು ಇದಕ್ಕೆ ಅರ್ಹರಲ್ಲ" ಎಂದು ಹೇಳಿದರೆ ಆಗ ಅವರ ಮಾತುಗಳನ್ನು ನಂಬಬಹುದು. ನಾವು ಯಾಕೆ ಅರ್ಹರಲ್ಲ? ನಮಗೇನು ಮೂಗು, ಕಣ್ಣುಗಳು ಕಿವಿಗಳು ಬುದ್ಧಿ ಇಲ್ಲವೇ? ನಮಗೆ ಬರೆಯುವುದಕ್ಕೆ ಬರುವುದಿಲ್ಲವೆ? ನಾವೇನು ಪುಸ್ತಕಗಳನ್ನು ಓದಿಲ್ಲವೆ? ನಮಗೆ ಕುದುರೆ ಸವಾರಿ ಬರುವುದಿಲ್ಲವೆ? ನಮಗೆ ಕೆಲಸ ಕೊಡದೆ ಇದ್ದರೆ ನಾವು ಮಾಡುವುದು ತಾನೇ ಹೇಗೆ? ನಮಗೆ ಕೆಲಸಕೊಟ್ಟು ನಾವು ಎಂದಾದರೂ ಮಾಡದೆ ಇದ್ದುದು ಉಂಟೆ? ನೀವು ಸೀಮೆಯಿಂದ 21 ವರುಷದ ಹುಡುಗನನ್ನು ಕರೆದುಕೊಂಡು ಬರುತ್ತೀರಿ. ಅವನು ಬಂದ ಕೂಡಲೆ 60 ವರುಷದ ಮಾಮಲತ್‌ದಾರನ ಮೇಲೆ ಅಸಿಸ್ಟೆಂಟ್ ಕಲೆಕ್ಟರ್ ಆಗುತ್ತಾನೆ. 60 ವರುಷದ ಅನುಭವಕ್ಕೆ ಅರ್ಥವೇ ಇಲ್ಲವೆ? 21 ವರುಷದವನು 60 ವರುಷದವನಿಗೆ ಕಲಿಸುತ್ತಾನೆಯೆ? ಆ ಹುಡುಗನ ಎದುರಿಗೆ ಈ ಮುದುಕ ಕೈ ಕಟ್ಟಿಕೊಂಡು ನಿಂತುಕೊಳ್ಳಬೇಕು. ಯಾಕೆ? ಇವನಿಗೆ ಬರುವುದು 150-200-400 ರುಪಾಯಿಗಳಾದುದರಿಂದ. 60 ವರುಷ ಕಾಲ ಇವನಿಗೆ ಅನುಭವ ಬರದ ಮೇಲೆ 21 ವರುಷಕ್ಕೆ ಅವನಿಗೆ ಬರುತ್ತದೆಯೆ? ಇವನಿಗೆ ಇನ್ನು ಬರುವುದೆಂತು?

" ಭಾರತೀಯರು ಸ್ವರಾಜ್ಯಕ್ಕೆ ಅರ್ಹರಲ್ಲ. ದೇಶವನ್ನು ಶಾಂತಿಯಿಂದ ಆಳಲು ಅವರಿಗೆ ಶಕ್ತಿಯಿಲ್ಲ" ಎಂಬುದೇ ನಿಜವಾಗಿದ್ದಿದ್ದರೆ, ಹಿಂದೂಗಳೂ ಮುಸಲ್ಮಾನರೂ ಈ ರಾಜ್ಯವನ್ನು ಹಿಂದೆ ಆಳಿದುದು ಸುಳ್ಳಾಗಬೇಕು. ಹಿಂದೆ ನಮ್ಮ ರಾಜ್ಯಗಳೂ ರಾಜ್ಯರೂ ಇಲ್ಲಿ ಇದ್ದರು. ಬ್ರಿಟಿಷರು ಭಾರತಕ್ಕೆ ಬಂದಾಗ ಇಲ್ಲಿ ವ್ಯವಸ್ಥಿತವಾದ ಸರ್ಕಾರ ಇತ್ತು. ಜನರು ಒಬ್ಬರನ್ನೊಬ್ಬರು ಕೊಲ್ಲುತ್ತಿರಲಿಲ್ಲ. ಈಚೆಗೆ ವಿಜ್ಞಾನ ಶಾಸ್ತ್ರಗಳು ಜನಗಳ ಜ್ಞಾನವನ್ನು ಹೆಚ್ಚಿಸಿವೆ. ಆದರೂ ನಾವು ಹೆಚ್ಚು ಅರ್ಹರಾಗಿರಬೇಕು. "ನಾವು ಆಳ್ವಿಕೆಗೆ ಅರ್ಹರಲ್ಲ" ವೆನ್ನುತ್ತಾರೆ. ಇದು ಸುಳ್ಳು. ಅದರ ಬದಲು " ಕೊಡುವುದಿಲ್ಲ" ಅಂತ ಹೇಳಿ. ಅರ್ಹರಲ್ಲ ಎಂಬ ಮಾತು ನಮಗೆ ಅನ್ವಯಿಸುವುದಿಲ್ಲ. ಕೊಡುವುದಿಲ್ಲ ಅಂದರೆ ತಿಳಿಯುತ್ತೆ. " ನಾವು ನಿಮಗೆ ಕಲಿಸುವುದಕ್ಕೆ ಬಂದಿದ್ದೇವೆ" ಎನ್ನುತ್ತಾರೆ. ಆಗಲಿ. ಆಗಲಿ. ನಮಗೆ ಎಷ್ಟು ವರ್ಷ ಕಲಿಸುತ್ತೀರಿ. ಒಂದು ತಲೆಮಾರು, ಎರಡು, ಮೂರು ತಲೆಮಾರು! ಇದಕ್ಕೆ ಕೊನೆ ಏನಾದರೂ ಉಂಟೆ? ನೀವು ನಮಗೆ ಕಲಿಸಲು ಬಂದಿರಿ. ನಾವು ನಮ್ಮ ಹುಡುಗನಿಗೆ ಕಲಿಸಲು ಒಬ್ಬ ಉಪಾಧ್ಯಾಯನನ್ನು ಗೊತ್ತುಮಾಡುತ್ತೇವೆ. ಅವನು ಕಲಿಸಲು ಎಷ್ಟು ಕಾಲ ತೆಗೆದುಕೊಳ್ಳುತ್ತಾನೆ. 10 ವರುಷವೇ ಇಪ್ಪತ್ತೆ, ಇಪ್ಪತ್ತೈದೇ ಹುಡುಗನಿಗೆ ಆರು ತಿಂಗಳಿನಲ್ಲಿ ಬರಬೇಕಾದ ವಿದ್ಯಕ್ಕೆ ಒಂದು ವರುಷ ಬೇಕೆಂದು ಉಪಾಧ್ಯಾಯ ಹೇಳಿದರೆ, ನಾವು ಆ ಉಪಾಧ್ಯಾಯನನ್ನು ತೆಗೆದುಹಾಕಿ ಬೇರೆ ಒಬ್ಬನನ್ನು ನೇಮಿಸುತ್ತೇವೆ....

" ದಾಧಾಭಾಯಿಯುವರು ಇದನ್ನು ಕುರಿತು ಮೊದಲು ಪ್ರಸ್ತಾಪಿಸಿದರು. ಅನಂತರ ಲೆಜಿಸ್ಲೇಟಿವ್ ಕೌನ್ಸಿಲ್ ಬಂತು. ಆದರೆ ಬೀಗದ ಕೈ ಇರುವುದು ಸರ್ಕಾರದ ಕೈಯಲ್ಲಿಯೇ. ಕೌನ್ಸಿಲ್ಲಿನಲ್ಲಿ ಬೇಕಾದರೆ ಚರ್ಚೆ ಮಾಡಿ. ಚರ್ಚೆಮಾಡಲು ನಿಮಗೆ ಪೂರ್ಣ ಸ್ವಾತಂತ್ರವುಂಟು. ಈ ದೇಶದ ಹಣ ಹೇಗೆ ಖರ್ಚುಮಾಡಬೇಕು ಎಂಬ ವಿಚಾರದಲ್ಲಿ ನೀವು ಚರ್ಚಿಸಬಹುದು. ಹಾಗೆ ಖರ್ಚು ಮಾಡಬಹುದೇ ಬೇಡವೇ ಎಂಬುದನ್ನು ನಾವು ನಿರ್ಣಯಿಸುತ್ತೇವೆ. ನಿಮ್ಮ ಮನಸ್ಸಿಗೂ ನಿಮ್ಮ ನಾಲಿಗೆಗೂ ಬೇಕಾದಷ್ಟು ವ್ಯಾಯಾಮ ಕೊಡಿ. ರಾತ್ರಿಯೆಲ್ಲಾ ಎಚ್ಚರವಾಗಿದ್ದು ಭಾಷಣಗಳನ್ನು ಸಿದ್ಧಪಡಿಸಿಕೊಳ್ಳಿ. ಪತ್ರಿಕೆಗಳಲ್ಲಿ ಭಾಷಣ ಅಚ್ಚಾಗುವುದರ

ಬದಲು ಸರ್ಕಾರಿ ಗೆಜೆಟ್ಟಿನಲ್ಲಿ ಅಚ್ಚು ಹಾಕುತ್ತೇವೆ. ಇಷ್ಟೆ. ನೀವು ಅರ್ಹರಾದಾಗ ನಿಮಗೆ ಜವಾಬ್ದಾರಿ ಕೊಡುತ್ತೇವೆ. ಅರ್ಹರಾದ ಕೂಡಲೇ ಗಂಟನ್ನು ನಿಮ್ಮ ಕೈಯಲ್ಲಿ ಕೊಟ್ಟು ಇಂಗ್ಲಿಷ್ ಹಡಗನ್ನು ಹತ್ತಿ ನಾವು ಹೊರಟು ಹೋಗುತ್ತೇವೆ. ಎನ್ನುತ್ತಾರೆ, '' ಆದರೆ ಒಂದು ಕಾಲದ ಪರಿಮಾಣ ನಿಯಮಿಸಿ. ಎರಡು ವರುಷವೇ ನಾಲ್ಕು ವರುಷವೇ'' ಎಂದೆವು. ಅನಂತರ ಕಾಲದ ಪರಿಮಾಣ ಬಂತು. ಹತ್ತು ವರುಷ ಎಂದರು. ಆ ಮೇಲೆ ಅದನ್ನೇ ಹದಿನೈದು ಮಾಡಿದರು. ಆಗ ಏನೋ ತಡೆ ಬಂತು. 'ಅದನ್ನೂ ನೀವೇ ತಂದುಕೊಂಡಿರಿ' ಎಂದರು. ಕೊಡಲು ಇಷ್ಟವಿಲ್ಲದವರು ಮಾತನಾಡುವ ಕ್ರಮ ನಿಮಗೆ ಗೊತ್ತೇ ಇದೆ.

"ಇದು ಯಾವ ರಾಜಕೀಯ ಅಥವ ಯುದ್ಧದ ಗ್ರಂಥದಲ್ಲಿಯೂ ಹೀಗೆ ಮಾಡಬೇಕೆಂದು ಬರೆದಿಲ್ಲ. ಇದು ಅವರಿಗೆ ಪೂರ್ವದಿಂದ ಬಂದ ಅಭ್ಯಾಸ. ಸರ್ಕಾರ ಹೀಗೆ ನಮ್ಮನ್ನು ಪುಸಲಾಯಿಸುತ್ತಾ ಬಂದಿದೆ. ಕಳೆದ 50 ವರುಷಗಳಿಂದಲೂ ಗವರ್ನರ್ ಜನರಲ್‌ರವರೂ ಸೆಕ್ರೆಟರಿ ಆಫ್ ಸ್ಟೇಟ್‌ರವರೂ ಹೀಗೇ ಪುಸಲಾಯಿಸುತ್ತಿದ್ದಾರೆ. ನೀವು ಸ್ವಲ್ಪ ಗದ್ದಲ–ಸದ್ದು ಮಾಡಿದಿರಿ ಎಂದು ಇಟ್ಟುಕೊಳ್ಳೋಣ. "ಐದು ಸದಸ್ಯರು ಇರುವ ಜಾಗದಲ್ಲಿ ನಾಳೆ ಆರು ಮಾಡುತ್ತೇವೆ'' ಎನ್ನುತ್ತಾರೆ. ಐದನ್ನು ಆರು ಮಾಡುವುದರಿಂದ ಪ್ರಯೋಜನವೇನು? ನಮ್ಮವರೊಬ್ಬರು ಏನೂ ಕೆಲಸವಿಲ್ಲದೆ ಸುಮ್ಮನೆ ಆಫೀಸಿನಲ್ಲಿ ಕುಳಿತಿರುತ್ತಾರೆ. ಇದಕ್ಕಿಂತ ಏನೂ ಹೆಚ್ಚು ಲಾಭವಿಲ್ಲ. "ಆರು ಸಾಲದೋ. ಹಾಗಾದರೆ ಎಂಟು ಮಾಡುತ್ತೇವೆ'' ಎನ್ನುತ್ತಾರೆ. ಬೇಕಾದರೆ 10-12 ಆಗಲಿ ಎನ್ನುತ್ತಾರೆ. ಆದರೆ ಸ್ವರಾಜ್ಯದ ಪ್ರಶ್ನೆ ಹೀಗೆ ತೀರ್ಮಾನವಾಗುವುದಿಲ್ಲವೆಂಬುದು ಜವರಿಗೆ ಚೆನ್ನಾಗಿ ನಂಬಿಕೆಯಾಗಿದೆ. ಸ್ವರಾಜ್ಯ ನಮ್ಮ ಜನ್ಮಸಿದ್ಧವಾದ ಹಕ್ಕು''

ಮ್ಯಾಜಿಸ್ಟ್ರೇಟರು ಪೋಲೀಸಿನವನ ಓದನ್ನು ಕೇಳಿ, ಸುದರ್ಶನನ ಕಡೆಗೆ ತಿರುಗಿ "ನೀನು ಹುಡುಗ, ನಿನಗೆ ಏನೂ ತಿಳಿಯದು ಎಂದು ಮಾಡಿದ್ದೆ. ಆದರೆ ನೀನು ಬಹು ದ್ವೇಷಪೂರ್ಣವಾದ ಭಾಷಣ ಮಾಡಿದ್ದೀಯೆ. ನೀನು ಪ್ರಚಾರ ಮಾಡುತ್ತಿರುವುದು ರಾಜದ್ರೋಹದ ಪರಮಾವಧಿ. ನಿನ್ನನ್ನು ಶಿಕ್ಷಿಸುತ್ತೇನೆ'' ಎಂದರು. ಅನಂತರ ಸ್ವಲ್ಪ ಮೃದುವಾಗಿ "ನೀನು ಹುಡುಗನಾದರೂ ಚೆನ್ನಾಗಿ ಭಾಷಣ ಮಾಡಿದೆ'' ಎಂದರು.

ಸುದರ್ಶನನು "ಸ್ವಾಮಿ. ಅದು ನನ್ನ ಭಾಷಣವಲ್ಲ. ಲೋಕಮಾನ್ಯ ಬಾಲ ಗಂಗಾಧರ ತಿಳಕರ ಮೇಲೆ ಇದೇ 108 ನೇ ಸೆಕ್ಷನ್ನನ್ನು ಈ ಭಾಷಣಕ್ಕಾಗಿ ಪ್ರಯೋಗಿಸಿದ್ದರು. ಆ ಭಾಷಣ ಬರೆದು ಇಟ್ಟುಕೊಂಡಿದ್ದೆ. ನನ್ನನ್ನು ಭಾಷಣಮಾಡಿ ಎಂದು ಕೇಳಿದಾಗ ಅದನ್ನೇ ಓದಿದೆ" ಎಂದನು.

ಮ್ಯಾಜಿಸ್ಟ್ರೇಟರು ಈ ತಿಳಕ್ ಎಂಬುವರು ಯಾರು ಎಂದು ಪೋಲೀಸಿನವನನ್ನು ಕೇಳಿದರು. ಪೋಲೀಸ್ ಅಧಿಕಾರಿ ತಿಳಕ್‌ಗೆ ಎರಡು ಸಲ ಸಜ ಆಗಿದೆ ಎಂದನು. ಮ್ಯಾಜಿಸ್ಟ್ರೇಟ್ "ತಿಳಕ್ ಎಂಬ ಹೆಸರನ್ನು ಕೇಳಿದ್ದೆ ಆತ ಜರ್ಮನಿ ರಷ್ಯಾಗಳಿಂದ ಹಣ ತರಿಸಿ ಭಾರತದ ಸರ್ಕಾರವನ್ನು ಬುಡಮೇಲು ಮಾಡಲು ಪ್ರಯತ್ನಿಸುತ್ತಿದ್ದ" ಎಂದು ಹೇಳಿ "ಈ ಭಾಷಣಕ್ಕೆ ತಿಳಕ್‌ಗೆ ಏನು ಶಿಕ್ಷೆ ಕೊಟ್ಟರು" ಎಂದರು. ಪೋಲೀಸಿನವನು "ಜ್ಞಾಪಕವಿಲ್ಲ" ಎಂದ. ಮ್ಯಾಜಿಸ್ಟ್ರೇಟ್ ಕೋಪದಿಂದ "ಏನು ಜ್ಞಾಪಕವಿಲ್ಲ. ನಿನಗೆ ಇನ್ನೇನು ತಾನೇ ಜ್ಞಾಪಕವಿದೆ? ನೀನು ಗ್ರಾಜುಯೇಟೇ" ಎಂದರು. ಪೋಲೀಸಿನವನು "ಇಲ್ಲ" ಎಂದ. ಮಾಜಿಸ್ಟ್ರೇಟು "ಹಾಗಾದರೆ ಸ್ಕೂಲ್ ಫೈನಲ್ ಮಾಡಿದ್ದೀಯೋ" ಎಂದರು. ಪೋಲಿಸ್ ಅಧಿಕಾರಿ ಇಲ್ಲ ಎಂದ. ಮ್ಯಾಜಿಸ್ಟ್ರೇಟಿಗೆ ಇನ್ನೂ ಕೋಪ ಬಂತು. "ನಿನಗೆ ಇಂಗ್ಲೀಷು ಬರುತ್ತದೆಯೋ" ಎಂದರು. ಪೋಲೀಸ್ ಅಧಿಕಾರಿ ಸ್ವಲ್ಪ ಸ್ವಲ್ಪ ಬರುತ್ತೆ ಎಂದ. ಮ್ಯಾಜಿಸ್ಟ್ರೇಟು "ನೀನು ಕೇಸು ತರುವವನು, ನಾನು ತೀರ್ಮಾನ ಕೊಡುವವನು. (The whole system is stinking) (ಹೊಲಸು ನಾತ)" ಎಂದರು. ಸುದರ್ಶನನು "ಸ್ವಾಮಿ ಈ ಭಾಷಣ ತಪ್ಪು ಅಲ್ಲವೆಂದು ಹೈಕೋರ್ಟಿನಲ್ಲಿ ತೀರ್ಮಾನವಾಯಿತು. ಆದುದರಿಂದಲೇ ನಾನು ಆ ಭಾಷಣ ಸಭೆಯಲ್ಲಿ ಓದಿದೆ" ಎಂದನು. ಮ್ಯಾಜಿಸ್ಟ್ರೇಟರಿಗೆ ಒಳ್ಳೆ ಕಿರುಕುಳಕ್ಕೆ ಬಂತು. ಅವರು "ಹೈಕೋರ್ಟಿಗೂ ನನಗೂ ಸಂಬಂಧವಿಲ್ಲ. ನೀನೂ ಬೇಕಾದರೆ ಹೈಕೋರ್ಟಿಗೆ ಹೋಗಿ ಅಪೀಲು ಮಾಡಿಕೊ. ನಿನಗೆ ಒಂದು ವರುಷ ಶಿಕ್ಷೆ ವಿಧಿಸಿದ್ದೇನೆ" ಎಂದರು.

---

# ೩೦. ರಾಟೆ, ನೂಲು, ಮಗ್ಗ, ಗಾಣ, ಕಾಗದ, ಖಾದಿ

ಆ ಒಂದು ವರುಷ ಹೇಗೆ ಕಳೆಯಿತೆಂಬುದು, ಆ ವರುಷ ಭಾರತದ ಚಳುವಳಿಯಲ್ಲಿ ಭಾಗವಹಿಸಿದ್ದ ಅನೇಕ ಸಾವಿರ ವಿದ್ಯಾರ್ಥಿಗಳಿಗೂ ದೇಶ ಭಕ್ತರಿಗೂ ಗೊತ್ತು. ಅದನ್ನು ಕುರಿತು ಇಲ್ಲಿ ನಾವು ಹೆಚ್ಚಾಗಿ ಹೇಳುವು ದಿಲ್ಲ. ಆ ಒಂದು ವರುಷದನಂತರ ಸುದರ್ಶನ ಮಲ್ಲಿಗೆಹಳ್ಳಿಗೆ ಹಿಂದಿರು ಗಿದನು. ಸುದರ್ಶನ ಜೈಲಿನಿಂದ ಹೊರಕ್ಕೆ ಬರುವಾಗ, ಅದು ಇನ್ನೂ ಖಾದಿಯ ಪ್ರಚಾರದ ಮೊದಲನೆಯ ಕಾಲವಾಗಿದ್ದುದರಿಂದ, ಒಳ್ಳೆಯ ಗೋಣಿ ಚೀಲದಂತೆ ಸ್ವಲ್ಪ ಒರಟಾದ ಅಗಲ ಕಡಿಮೆಯಾದ ಪಂಚೆ ಯನ್ನು ಮೇಲಕ್ಕಾಗಿ ಉಟ್ಟುಕೊಂಡಿದ್ದ. ಇಂತಹ ಕೆಲಸವನ್ನು ಹಳ್ಳಿ ಯಲ್ಲಿ ಮಾಡಿದಾಗ ಮೊದಲನೆಯ ಮನುಷ್ಯನಿಗೆ ಸ್ವಾಭಾವಿಕವಾಗಿ ನಮ್ಮ ವರಿಂದ ದೊರೆಯುವ ಸತ್ಕಾರ ಸುದರ್ಶನನಿಗೂ ದೊರೆಯಿತು! ಸ್ವಲ್ಪ ಹೆಚ್ಚು ಕಡಿಮೆ ಗ್ರಾಮಸ್ಥರೆಲ್ಲಾ ಅವನನ್ನು ಮುಟ್ಠಾಳನೆಂದು ಕರೆದರು. "ಜನತೆಯವನಾದ ಸುಬ್ಬು ಅಮಲ್ದಾರನಾಗುತ್ತಾನೆ. ನೀನು ಮೂರ್ಖ. ಗಾಂಧಿಯಂತೆ ಗಾಂಧಿ! ಲೋಕಕ್ಕೆಲ್ಲಾ ಬೇಡವಾದ ಸ್ವರಾಜ್ಯ ನಿನಗೊ ಬ್ಬನಿಗೆ ಬೇಕಲ್ಲವೆ? ನಿನ್ನಿಂದಲೇ ಸ್ವರಾಜ್ಯ ಬರುವುದು? ಈಗ ನೋಡು. ಸ್ವರಾಜ್ಯದ ಪ್ರಶ್ನೆ ಇದ್ದಂತೆಯೇ ಇದೆ. ನಿನ್ನ ಯೋಗ್ಯತೆ ಮಾತ್ರ ಇದ್ದಂತೆ ಇಲ್ಲ. ಕಡಿಮೆಯಾಗಿ ಹೋಯಿತು. ಈ ಖಾದಿ ಬಟ್ಟೆ ಇದು ಎಷ್ಟು ದಿವಸವಯ್ಯ. ಈ ಆಧುನಿಕ ಕಾಲದಲ್ಲಿ ಇದೆಲ್ಲಾ ಆಗುತ್ತದೆಯೇ ಗಾಂಧಿಯಿಂದ ನಮ್ಮ ದೇಶ ಕೆಟ್ಟುಹೋಯಿತು." ಎಂದ ಅನಂತು.

ಸಾವಿರಾರು ಜನರ ತಲೆ ಒಡೆದು ಪುಬೇರಪ್ಪನಾಗಿದ್ದ ಧನಿಕರ ಮಗ ಅನಂತು ಹೀಗೆ ಹೇಳಿದುದು ಆಶ್ಚರ್ಯವಿಲ್ಲ, ಆದರೆ ಒಟ್ಟಿನಲ್ಲಿ ಸುದ ರ್ಶನನಿಗೆ "ಜನ ನನ್ನನ್ನು ಕಂಡರೆ ಮೈಲಿಗೆಯವನನ್ನು ಕಂಡಂತೆ ಸ್ವಲ್ಪ ದೂರ ಸರಿಯುತ್ತಾರೆ" ಎಂಬುದು ತಿಳಿಯದೇ ಹೋಗಲಿಲ್ಲ. "ಸ್ವಾತಂ ತ್ರ್ಯವೆಂದರೇ ಹೆದರುವ ದೇಶದ ಜನ, ಸ್ವಾತಂತ್ರ್ಯಕ್ಕಾಗಿ ಜೈಲಿಗೆ ಹೋದವನನ್ನು ಮೂಲೆಗೆ ಸ್ವಲ್ಪಕಾಲ ಒತ್ತರಿಸಬಹುದು. ಆದರೆ ಮುಂದೆ ಸರಿಹೋಗುತ್ತೆ" ಎಂದುಕೊಂಡ ಸುದರ್ಶನ.

ಸುಮಾರು ಐದು ಆರು ವರುಷಗಳ ಕೆಳಗೆ ತನ್ನ ಊರಿನಲ್ಲಿಯೇ
ನಡೆದ ಊರವರೆಲ್ಲಾ ತಲೆತಗ್ಗಿಸಬೇಕಾದ ಒಂದು ಸಂಗತಿ ಸುದರ್ಶನನಿಗೆ
ಜ್ಞಾಪಕ ಬಂತು. ಆಗ ಮಲ್ಲಿಗೆಹಳ್ಳಿಯ ಹರಿಜನರು ಮಲ್ಲಿಗೆಹಳ್ಳಿಯ
ಸ್ಕೂಲಿಗೆ ಬರಬೇಕೆಂದು ಆಸೆಪಟ್ಟರು. ಆ ಕೂಡಲೇ ಗ್ರಾಮದ ಬ್ರಾಹ್ಮ
ಣರೂ ಒಕ್ಕಲಿಗರೂ ತುರುಕರ ಸಹಾಯವನ್ನೂ ತೆಗೆದುಕೊಂಡು ಹರಿ
ಜನ ಬಾಲಕರು ಸ್ಕೂಲಿಗೆ ಬರದಂತೆ ತಡೆಯಬೇಕೆಂದು ಸ್ಕೂಲಿನ ಬಾಗಿಲಿ
ನಲ್ಲಿ ನಿಂತರು. ತುರುಕರು "ಉತ್ತಮರ" ಪಕ್ಷ ಸೇರಿದುದರಿಂದ ಹೊಡೆ
ದಾಟವಾಗುವ ಸೂಚನೆ ಸಹ ಇತ್ತು. ಆದರೆ ಸ್ವಭಾವದಿಂದ ಅಹಿಂಸಾ
ಪರರಾದ ಹರಿಜನರು " ಇಷ್ಟು ಶತಮಾನಗಳು ಅನುಭವಿಸಿದ್ದೇವೆ. ಈಗ
ಯಾಕೆ ಮೇಲೆ ಬಿದ್ದುಹೋಗಬೇಕು. ದೇವರು ಕಣ್ಣುಬಿಟ್ಟಾಗ
ನೋಡೋಣ" ಎಂದುಕೊಂಡು ವಾಪಸು ಹೊರಟೇಹೋದರು.
ಮಹಾತ್ಮಾ ಗಾಂಧಿಯವರು ಭಾರತದಲ್ಲಿ ಕಾಲಿಟ್ಟ ಒಂದು ತಿಂಗಳಿನೊ
ಳಗಾಗಿ ದೇಶದಲ್ಲಿ ಅಸ್ಪೃಶ್ಯತಾ ನಿವಾರಣೆ ಎಂಬ ಕೂಗು ಎದ್ದು ಗಗನ
ವನ್ನು ಮುಟ್ಟಿತು. ಅದು ಯಾವ ಮಾಟದಿಂದಲೋ, ಅಸ್ಪೃಶ್ಯತೆ
ಹಿಂದೂ ಧರ್ಮದ ಕಳಂಕ ಎಂಬುದು ಎಲ್ಲರಿಗೂ ಮಂದಟ್ಟಾಗಿ
ಹೋಯಿತು. ಗಾಂಧಿಯವರು ಹೇಳಿದರು ಎಂಬುದೇ ಸಾಕಾಯಿತು.
ಯಾವ ಮಲ್ಲಿಗೆಹಳ್ಳಿಯುವರು, ಹರಿಜನರು ಸ್ಕೂಲು ಪ್ರವೇಶಿಸಬಾರದೆಂದು
ದೊಣ್ಣೆ ಹಿಡಿದುಕೊಂಡು ನಿಂತಿದ್ದರೋ ಅವರೇ ಮೆರವಣಿಗೆ ವಾದ್ಯಗ
ಳೊಂದಿಗೆ ಹೋಗಿ ಹರಿಜನ ಬಾಲಕರನ್ನು ಕರೆದುಕೊಂಡು ಬಂದು
ಸ್ಕೂಲಿಗೆ ಸೇರಿಸಿದರು. ಸುದರ್ಶನನಿಗೆ ಇಂದಿಗೂ " ಈ ಮನೋಭಾವ
ವ್ಯತ್ಯಾಸ ಜನರಲ್ಲಿ ಇಷ್ಟು ಬೇಗ ಹೇಗೆ ಬಂದಿತು" ಎಂಬುದು ಗೊತ್ತಾ
ಗಿಲ್ಲ. ಅದೊಂದು ಅದ್ಭುತ ಎಂದು ಮಾತ್ರ ಅವನು ತಿಳಿದನು.

ಆದರೆ ಮಲ್ಲಿಗೆಹಳ್ಳಿಯವರಿಗೆ ಇವತ್ತು ನೆನೆಸಿಕೊಂಡರೆ ಹಿಂದಲದಕ್ಕೆ
ನಾಚಿಕೆಯಾಗುತ್ತದೆ. ನಾವು "ಹೇಗೆ ತಾನೆ ಇಂತಹ ಮನೋಭಾಪವನ್ನು
ಇಟ್ಟುಕೊಂಡಿದ್ದೆವು? ಯಾವ ಮಂಕುಭೂತ ನಮ್ಮ ತಲೆ ಮೇಲೆ ಸವಾರಿ
ಮಾಡುತ್ತಿದ್ದಿತು" ಎಂದು ಅವರು ಈಗಲೂ ತಲೆತಗ್ಗಿಸುತ್ತಾರೆ. ಹೀಗೆಯೇ
ಸುದರ್ಶನ "ಇವತ್ತೇನೋ ಇವರು ನನ್ನನ್ನು ಕ್ಷಯರೋಗ ಹತ್ತಿದವನನ್ನು
ಒತ್ತರಿಸುವಂತೆ ಒತ್ತರಿಸುತ್ತಾರೆ. ಆದರೆ ಸ್ವಲ್ಪ ದಿನಗಳೊಳಗಾಗಿಯೇ

ಇವರಿಗೆ ಗೊತ್ತಾಗುತ್ತೆ ; ಆಗ ವಿಶ್ವಾಸವಾಗುತ್ತಾರೆ " ಎಂದುಕೊಂಡು ಧೈರ್ಯವನ್ನು ತಂದುಕೊಂಡನು.

ಗಾಂಧಿಯವರು ಜೈಲಿನಲ್ಲಿ ಉಳಿದರು. ಸುದರ್ಶನ ಅವರ ಮುಖ್ಯ ಮಂತ್ರವಾದ ಖಾದಿಯ ಕಡೆ ತಿರುಗಿದ. ನಮ್ಮ ದೇಶದ ಜನ ಅದರಲ್ಲಿಯೂ ಹಳ್ಳಿಯವರು ಖಾದಿಯ ಕೈಗಾರಿಕೆಯನ್ನು ಸುಲಭವಾಗಿ ಸ್ವೀಕರಿಸುತ್ತಾರೆಯೇ? ಸ್ವಲ್ಪ ಒಳ್ಳೆಯ ಬೇಸಾಯದ ಜಮೀನು ಇರುವ ಮಲ್ಲಿಗೆ ಹಳ್ಳಿಯಲ್ಲಿ ಜನ ಈ ಕೈಗಾರಿಕೆಯನ್ನು ತೆಗೆದುಕೊಳ್ಳಲು ಮನಸ್ಸು ಮಾಡಲೇ ಇಲ್ಲ. ರಾಟೆಯನ್ನು ಮೊದಲು ಹುಡುಕಲು ಗಾಂಧಿಯವರಿಗೆ ಎಷ್ಟು ಕಷ್ಟವಾಯಿತೋ, ಸುದರ್ಶನನಿಗೆ ಖಾದಿ ಮಲ್ಲಿಗೆಹಳ್ಳಿಯಲ್ಲಿ ಪ್ರಾರಂಭಿಸುವುದೂ ಅಷ್ಟೇ ಕಷ್ಟವಾಯಿತು. ಖಾದಿಯಲ್ಲಿ ಏನು ಉತ್ಪತ್ತಿ ಬರುತ್ತೆ ಎಂಬುದು ಯಾರಿಗೂ ಆಗ ಸರಿಯಾಗಿ ಗೊತ್ತಿರಲಿಲ್ಲ. ಸುದರ್ಶನ ಅಷ್ಟು ಜವಾಬ್ದಾರಿಯಿಂದ ಇದರ ವಿಚಾರದಲ್ಲಿ ಮಾತನಾಡುತ್ತಿರಲಿಲ್ಲ. ಅವನಿಗೆ ಇದ್ದುದು ಮುಖ್ಯವಾಗಿ "ಖಾದಿ ಪ್ರಚಾರವಾಗಬೇಕು; ಊರಿನಲ್ಲಿ ಚರಕಗಳು ತಿರುಗಬೇಕು; ಊರಿಗೆ ಬೇಕಾಗುವ ಖಾದಿಯೆಲ್ಲಾ ಆ ಚರಕಗಳಿಂದಲೇ ತಯಾರಾಗಬೇಕು." ಸುದರ್ಶನ ಪ್ರಚಾರದ ಭರದಲ್ಲಿ ನೂಲುವುದರಿಂದಲೇ ಒಬ್ಬನ ಜೀವನಕ್ಕೆ ಬೇಕಾದಷ್ಟು ಉತ್ಪತ್ತಿ ಯಾಗುತ್ತದೆ ಎಂದು ಹೇಳತೊಡಗಿದನು. ಅವನು ತನ್ನ ಮನೆಯ ಬಾಗಿಲಿನಲ್ಲಿ ಚರಕದಲ್ಲಿ ನೂಲುತ್ತಾ ಕುಳಿತಿದ್ದರೆ ಮೊದಲು ಜನರಿಗೆ ಅದೇ ಒಂದು ಏನೋ ವಿನೋದ, ತಮಾಷೆಯಾಗಿ ತೋರಿತು. ಅನಂತರ ಅದರಲ್ಲಿ ಅವರಿಗೆ ಒಂದು ವಿಧವಾದ ಹಾಸ್ಯ ಮಾತ್ರ ಉಂಟಾಯಿತು.

ಸುದರ್ಶನ ಯಾರಿಗೆ ಚರಕ ನೂಲಿ ಎಂದು ಹೇಳಿದರೂ ಅವರು ಕೂಡಲೇ " ದುಡ್ಡು ಎಷ್ಟು ಒರುತ್ತೆ " ಎಂದು ಕೇಳುತ್ತಿದ್ದರು. ಅದು ಇನ್ನೂ ಖಾದಿಯ ಪ್ರಾರಂಭದ ಕಾಲವೇ ಆಗಿದ್ದಿತು. ಕೆಲವರು " ತಿಂಗಳಿಗೆ ೩೦ ರೂಪಾಯಿ ಕೊಟ್ಟು ಬಿಡಿ " ಎಂದರು. ಇದು ಏನೋ ಸುದರ್ಶನನ ಸ್ವಂತ ಕೆಲಸ ಎಂದು ಅವರಿಗೆ ಭಾಸವಾದಂತೆ ತೋರಿತು. ದೇಶಿಕಾಚಾರಿಯ ಅಳಿಯ ಆಗ ತಾನೇ ಬಿ. ಎ. ಪ್ಯಾಸು ಮಾಡಿಕೊಂಡು ಬಂದಿದ್ದ. ಜಾಗ್ರತೆ ಕೆಲಸ ಸಿಕ್ಕುವ ಸೂಚನೆ ಏನೂ ಇರಲಿಲ್ಲ. ಅವನು ಸುದರ್ಶನನನ್ನು " ಒಂದು ಚರಕದಲ್ಲಿ ದಿವಸಕ್ಕೆ ಎಷ್ಟು ಸಂಪಾದನೆ

ಯಾಗುತ್ತೆ" ಎಂದು ಕೇಳಿದ. ಸುದರ್ಶನ "ಶಕ್ತ್ಯಾನುಸಾರ ಹೋಗುತ್ತೆ. ಒಂದು ರೂಪಾಯಿನವರೆಗೆ ಸಂಪಾದಿಸಬಹುದು" ಎಂದ. ಸುದರ್ಶನ ಊರಿಗೆ ಬಂದವನೇ ಸೊಸೈಟಿಯಲ್ಲಿ ಸಾಲ ಮಾಡಿ ಕೆಲವು ಚರಕಗಳನ್ನು ಮಾಡಲು ಬಡಗಿಗೆ|ಅ ರೂಪಾಯಿಗಳನ್ನು ಕೊಟ್ಟ. ಹಳ್ಳಿಯ ಬಡಗಿಯ ವಿಚಾರ ಗೊತ್ತೆ ಇದೆ. ಒಂದು ಮೊಳೆ ಹೊಡಿ ಎಂದರೆ ಒಂದು ರೂಪಾಯಿ ಕೇಳುತ್ತಾನೆ. ಇಲ್ಲದೆ ಇದ್ದರೆ ಸುಮ್ಮನೇ ಕುಳಿತಿರುತ್ತಾನೆ. ಒಂದು ಒನಕೆ ಮಾಡಿಕೊಡು ಎಂದು ಒಂದು ಬೀಟೆ ಮರದ ತುಂಡನ್ನು ತಂದು ಹಾಕಿದವನು, ಬಡಗಿ ಕೆತ್ತುತ್ತಾ ಕೆತ್ತುತ್ತಾ ಮರವನ್ನೆಲ್ಲಾ ಸಣ್ಣ ಮಾಡಿದುದನ್ನು ಕಂಡು ಕೊನೆಯಲ್ಲಿ "ಹೋಗಲಿ, ಒಂದು ರಾಗಿಯ ಕಲ್ಲಿನ ಗೂಟವನ್ನಾದರೂ ಮಾಡಿಕೊಡು" ಎಂದನಂತೆ. ಹೀಗಿದೆ ಹಳ್ಳಿಯ ಬಡಗಿಯ ಸಮಾಚಾರ. ಅವನನ್ನು ಯಾವುದಕ್ಕಾದರೂ ಕರೆದರೆ ತಲೆ ಬೆಲೆ ಹೇಳುತ್ತಾನೆ. ಬಡಗಿ, ಸುದರ್ಶನ ಕೊಟ್ಟ ದುಡ್ಡನ್ನು ತಿಂದು ಬಿಟ್ಟ. ಸುದರ್ಶನ ಅವನ ಮೇಲೆ ಕೂಗಾಡಿದಾಗ "ಬಡಗಿ ಈಗ ಕೊಟ್ಟದ್ದು ಕೂಲಿಗೆ ಆಯಿತು. ಮುಂದೆ ನೀವೇ ಮರ ತಂದು ಹಾಕಿ, ಮಾಡಿ ಬಿಡುತ್ತೇನೆ" ಎಂದ. ಸುದರ್ಶನನ ಹತ್ತಿರ ಬೇರೆ ದುಡ್ಡು ಇರಲಿಲ್ಲ. ಆದರೆ ಬೇರೆ ಎಲ್ಲಿಂದಲಾದರೂ ದುಡ್ಡು ಹೊಂಚದೆ ಇದ್ದಿದ್ದರೆ ಬಡಗಿಗೆ ಹಿಂದೆ ಕೊಟ್ಟ ದುಡ್ಡೂ ಹೋಗುತ್ತಿದ್ದಿತು.

ಸುದರ್ಶನ ಸೊಸೈಟಿಯಿಂದ ಮತ್ತೊಂದು ಸಾಲ ಮಾಡಿದ. ಪ್ರತಿ ದಿನವೂ ಬಾಕಿ ಕೆಲಸಗಳನ್ನೆಲ್ಲಾ ಬಿಟ್ಟು ಬಡಗಿಯ ಬೆನ್ನ ಮೇಲೆ ಕುಳಿತು ಚರಕಗಳನ್ನು ಮಾಡಿಸಿದ. ಚಿತ್ರದುರ್ಗದಿಂದ ಹತ್ತಿತರಿಸಿ ಅದನ್ನು ಪಿಂಜಾರರ ಹತ್ತಿರ ಎಕ್ಕಿಸಿ ಹಿಂಜಿಮಾಡಿಸಿ ಇಟ್ಟ. ದೇಶಿಕಾಚಾರಿಯ ಅಳಿಯನಿಗೆ ಹೀಗೆ ದಿನಕ್ಕೆ ಒಂದು ರೂಪಾಯಿಯವರೆಗೆ ಸಿಕ್ಕುತ್ತೆ ಎಂದಾಗ ಅವನು ಉತ್ಸಾಹದಿಂದ ಒಂದು ರಾಟೆಯನ್ನೂ ಒಂದು ಪೌಂಡು ಹತ್ತಿಯನ್ನೂ ತೆಗೆದುಕೊಂಡ ಹೋದ. ಆದರೆ ಅದಕ್ಕೆ ಬೇಕಾದ ಸಹನೆ ಇರಬೇಕಲ್ಲ. ರಾಟೆಯ ನೂಲು ಕಿತ್ತುಹೋದರೇ ಅವನಿಗೆ ಬೇಜಾರಾಗುತ್ತಿದ್ದಿತು. ರಾಟೆಯಲ್ಲಿ ಒಂದು ಬೆರಳಿನ ಗಾತ್ರದ ಬತ್ತಿಗಿಂತ ಕಡಿಮೆ ಗಾತ್ರದ ಬತ್ತಿ ಹೊರಡಲೇ ಇಲ್ಲ. ಕದರಿಗೆ ಹಾಕಿದ್ದ ನೂಲು ಪದೇ ಪದೇ ಕಿತ್ತು ಹೋಗುತ್ತಿದ್ದಿತು. ದೇಶಿಕಾಚಾರ್ರ ಅಳಿಯ ಘೂತ್ತೆರಿ ಎಂದುಕೊಂಡು

ಕೈಯಲ್ಲಿದ್ದ ಹಿಂಜಿಯನ್ನು ಎಸೆದು ರಾಟೆಯನ್ನು ಒದ್ದು ಬಿಡುತ್ತಿದ್ದ. ಅವನ ಹೆಂಡತಿ ಸೀತೆ, " ಸುದರ್ಶನ ಹೇಳಿದ ಮಾತು ನಿಜ. ರಾಟೆ ಜನಕ್ಕೆ ಬಹಳ ಸಹನೆ ಕಲಿಸುತ್ತದೆ ಅಂತ ಅವನು ಸ್ಕೂಲಿನ ಮುಂದೆ ಹೇಳುತ್ತಿದ್ದ" ಎಂದಳು. ಅವಳ ಗಂಡ, " ಅವನ ಮಾತೆಲ್ಲಾ ಬರಿಯ ಬುರುಡೆ. ನಿತ್ಯಾ ಒಂದು ರೂಪಾಯಿ ಸಿಕ್ಕುತ್ತೆ ಅಂತ ಹೇಳಿದ. ಇದೆಲ್ಲಾ ಕಾಂಗ್ರೆಸ್ಸಿನವರ ಸುಳ್ಳು ಪ್ರಚಾರ " ಎಂದ. ಅವನು ನೂಲುವುದು ಅಲ್ಲಿಗೇ ನಿಂತಿತು. ಹತ್ತಿಯನ್ನು ಕಟ್ಟಿ ತಲೆದಿಂಬಿಗಾಗಿ ಇಟ್ಟುಕೊಂಡ. ಅವನ ರಾಟೆ ಅವನ ಕಣ್ಣಿಗೆ ಮುಳ್ಳಾಗಿ ಅವನ ಎದುರಿಗೇ ಮನೆಯ ಕಸವಾಗಿ ನಿಂತಿತು. ಅವನಿಗೆ ಅದನ್ನು ನೋಡಿದಾಗಲೆಲ್ಲಾ ಶತ್ರುವೊಬ್ಬನನ್ನು ನೋಡಿದಂತೆ ಕೋಪ ಬರುತ್ತಿದ್ದಿತು. ಮೂರು ತಿಂಗಳಿನ ನಂತರ ಅವನು ಒಂದು ದಿನ ಸುದರ್ಶನನನ್ನು ಮನೆಗೆ ಕರೆದುಕೊಂಡು ಹೋಗಿ ರಾಟೆಯನ್ನೂ ಹತ್ತಿಯನ್ನೂ ಮುಂದೆ ತಂದಿಟ್ಟು ನಿನ್ನ ಸಾಮಾನು ನೀನು ತೆಗೆದುಕೋ ಎಂದ. ಸುದರ್ಶನ ಅವುಗಳನ್ನು ತನ್ನ ಮನೆಗೆ ತಂದ.

ಬಡಗಿ ನಿಧಾನವಾಗಿ ರಾಟೆಗಳನ್ನು ಮಾಡತೊಡಗಿದ. ಸುದರ್ಶನ ಒಂದೊಂದು ಮನೆಗೂ ಒಂದೊಂದು ರಾಟೆ, ಸ್ವಲ್ಪ ಹತ್ತಿ ಕೊಟ್ಟನು. ಸುತ್ತಲ ಹಳ್ಳಿಗಳಲ್ಲಿಯೂ ರಾಟೆಗಳನ್ನೂ ಹಿಂಜಿಮಾಡಿದ ಹತ್ತಿಯನ್ನೂ ಕೊಟ್ಟನು. ರಾಟೆ ಎಲ್ಲರೂ ನೋಡಿದ್ದರು. ಆದರೆ ನೂಲುವುದು ಮರೆತುಹೋಗಿದ್ದಿತು. ಸುದರ್ಶನ ತಾನೇ ನೂಲುವುದನ್ನು ಹೇಳಿಕೊಡುತ್ತಿದ್ದ. ಹಳ್ಳಿಯ ಸ್ತ್ರೀಯರಿಗೆ ಇದು ಬೇಕಿಲ್ಲ. ಆದರೆ ಸುದರ್ಶನ ಬಿಡುವುದಿಲ್ಲ. ಅವರು ಅವನನ್ನು ವಾರಕ್ಕೆ ಎರಡು ದಿವಸ ಬಂದು ನೂಲುವುದನ್ನು ತಮಗೆ ಕಲಿಸಬೇಕೆಂದು ಗೊತ್ತುಮಾಡಿದರು. ಸುದರ್ಶನ ಮಳೆಯಲ್ಲಿ ನೆನೆದುಕೊಂಡು ಮೂರು ಮೈಲಿ ಬಂದಮೇಲೆ ಅವರು " ಇವತ್ತು ಆಗೊಲ್ಲ. ಸಗಣಿ ತಟ್ಟಬೇಕು " ಎಂದು ಹೊರಟುಹೋಗುತ್ತಿದ್ದರು. ಸುದರ್ಶನ ವಾರನೆ ದಿವಸ ಹೋಗಿ ಅವರ ವಿರಾಮವನ್ನು ಕಾಯ್ದುಕೊಂಡು ಅವರಿಗೆ ನೂಲುವುದನ್ನು ಕಲಿಸುತ್ತಿದ್ದನು.

ಹಾಗೂ ಹೀಗೂ ನೂರಾರು ರಾಟೆಗಳು ತಿರುಗಲು ಪ್ರಾರಂಭವಾದವು. ಅವುಗಳಲ್ಲಿ ಸಣ್ಣ ನೂಲಿನಿಂದ ಹಿಡಿದು ಜಮಖಾನಕ್ಕೆ ಆಗುವವರೆಗೆ ನೂಲು ಬರುತ್ತಿದ್ದಿತು. ಸುದರ್ಶನ ವಾರಕ್ಕೆ ಒಂದು ಸಲ

ಹೋಗಿ ಆ ನೂಲನ್ನೆಲ್ಲಾ ಶೇಖರಿಸುತ್ತಿದ್ದನು. ಪ್ರಾರಂಭ ದೆಸೆಯಾದುದರಿಂದಲೂ ಕೂಲಿ ಮುಂತಾದುವುಗಳನ್ನು ಕೊಡುವುದಕ್ಕೆ ಯಾವ ಸಂಸ್ಥೆಯವರೂ ಯಾವ ನಿಯಮವನ್ನೂ ಮಾಡದೆ ಇದ್ದುದರಿಂದಲೂ ಸುದರ್ಶನ ನೂಲುವವರನ್ನೇ "ನಿಮಗೆ ಈ ನೂಲು ತೆಗೆಯಲು ಎಷ್ಟು ದಿನ ಹಿಡಿಯಿತು" ಎಂದು ಕೇಳಿ ಅವರ ಉತ್ತರದ ಮೇಲೆ ಅವರಿಗೆ ದಿವಸಕ್ಕೆ ಇಷ್ಟು ಎಂದು ಕೂಲಿ ಕೊಡುತ್ತಿದ್ದ. ರಾಟೆ ಹತ್ತಿಗಾಗಿ ಅವನು ಕೂಲಿಯಿಂದ ಇನ್ನೂ ಹಣವನ್ನು ಮುರಿದುಕೊಳ್ಳುತ್ತಿರಲಿಲ್ಲ.

ನೂಲು ಸೇರುತ್ತಾ ಬಂದ ಮಾತ್ರಕ್ಕೆ ಅದು ಬಟ್ಟೆಯಾಯಿತೆ? ಊರಿನಲ್ಲಿ ಎಲ್ಲಿ ನೋಡಿದರೂ ನೂಲೂ ಹತ್ತಿಯೂ ಹಾರಾಡುತ್ತಿದ್ದುವು. ದನಗಳ ಮೂಗುದಾರಕ್ಕೆ ನೂಲು ಬೇಕಾದರೆ, ಊರವರೆಲ್ಲಾ ಬಂದು "ಎಲ್ಲಿ ಒಂದು ಬಳೆ ನೂಲು ಕೊಡು. ಈ ದಪ್ಪ ನೂಲು ಯಾತಕ್ಕೆ ಬೇಕಾಗುತ್ತೆ: ಹೊಸೆದು ಒಂದು ಮೂಗುದಾರನಾದರೂ ಮಾಡಿಕೊಳ್ಳೋಣ" ಎನ್ನುತ್ತಿದ್ದರು. ಇನ್ನು ಕೆಲವರು "ನೂಲಿನ ಹಗ್ಗಕ್ಕೆ ಈ ನೂಲು ಬಹಳ ಚೆನ್ನಾಗಿದೆ. ಎಲ್ಲಿ ಎರಡು ಬಳೆ ತಾ" ಎನ್ನುತ್ತಿದ್ದರು. ನಾಲೆಯಲ್ಲಿ ಹರಿಯುತ್ತಿರುವ ನೀರನ್ನು ಮನೆಯ ಉಪಯೋಗಕ್ಕೆ ತೆಗೆದುಕೊಂಡು ಹೋಗುವಂತೆ, ಈ ನೂಲು ಹತ್ತಿ ಇವು ಇಲ್ಲಿ ಈ ರೀತಿ ಇರುವುದು ತಮ್ಮೆಲ್ಲರ ಉಪಯೋಗಕ್ಕೇಯೆ ಎಂದು ಅವರು ತಿಳಿದಂತೆ ಸುದರ್ಶನನಿಗೆ ಕಾಣುತ್ತಿದ್ದಿತು. ಅನಂತು ಒಂದು ದಿನ ಒಂದು ಕುಕ್ಕೆಯಲ್ಲಿದ್ದ ನೂಲಿನ ಬಳೆಗಳನ್ನು ನೋಡಿ ಇವನ್ನು ಇಲ್ಲಿ ಯಾಕೆ ಹೀಗೆ ಕೊರಗಿಸುತ್ತೀಯೇ? ಎಲ್ಲಾ ಕೊಟ್ಟುಬಿಡು. ಕುಂಟನ ಹತ್ತಿರ ಒಂದು ಮಿಣಿ ಹಗ್ಗ (ಭತ್ತ, ಒಕ್ಕುವಾಗ ದನಗಳನ್ನು ಕಟ್ಟುವ ಹಗ್ಗ) ಮಾಡಿಸಿಬಿಡುತ್ತೇನೆ. ಊರಿನವರಿಗೆಲ್ಲಾ ಉಪಯೋಗವಾಗುತ್ತೆ. ನಿನ್ನ ಉದ್ದೇಶವೂ ಸಾರ್ಥಕವಾಗುತ್ತದೆ" ಎಂದನು.

ಹಿಂದೆ ಮಲ್ಲಿಗೆಹಳ್ಳಿಯಲ್ಲಿ ಮೂರು ಜನ ನೇಯ್ಗೆಯವರಿದ್ದರು. ಆದರೆ ಯಂತ್ರದ ಬಟ್ಟೆಗಳ ಸ್ಪರ್ಧೆ ಬಂದಮೇಲೆ ಅವರು ತಮ್ಮ ಕಸಬನ್ನೇ ಬಿಟ್ಟಿದ್ದರು. ಒಬ್ಬ ನೆಯ್ಗೆಯವನು ಸ್ಕೂಲು ಜವಾನನಾದನು. ಇವನು ಸ್ಕೂಲು ಜವಾನನಾದುದೂ ಒಂದು ವಿಚಿತ್ರ ಸನ್ನಿವೇಶದಿಂದಲೇ. ಆಗ ಮಲ್ಲಿಗೆಹಳ್ಳಿ ಸ್ಕೂಲಿನಲ್ಲಿ ನೆಯ್ಗೆಯ ತರಗತಿಯೊಂದನ್ನು ಸರ್ಕಾರದವರು

ತೆರೆದಿದ್ದರು. ಅದು ಆಗ ವಿಶ್ವೇಶ್ವರಯ್ಯನವರು ಸ್ಥಾಪಿಸಿದ ಏರ್ಪಾ
ಡಾಗಿದ್ದಿತು. ಆ ತರಗತಿಯ ನೆಯ್ಗೆ ಉಪಾಧ್ಯಾಯರಿಗೆ ಹತ್ತು ರುಪಾಯಿ
ಸಂಬಳ ಕೊಡುತ್ತಿದ್ದರು. ಬೇರೆ ಊರಿನಿಂದ ಉಪಾಧ್ಯಾಯರನ್ನು
ತರುವುದರ ಬದಲು ಆ ಊರಿನಲ್ಲಿರುವವರನ್ನೇ ನೇಮಿಸುವುದೂ ವಿಶ್ವೇ
ಶ್ವರಯ್ಯನವರ ಸರ್ಕಾರದ ಪದ್ಧತಿಯಾಗಿದ್ದಿತು. ಆಗ ಮಲ್ಲಿಗೆಹಳ್ಳಿ
ಸ್ಕೂಲಿಗೆ ಅದೇ ಊರಿನ ಹನುಮಸೆಟ್ಟಿಯನ್ನು ನೆಯ್ಗೆಯ ಉಪಾಧ್ಯಾಯ
ನನ್ನಾಗಿ ನಿಯಮಿಸಿದರು. ಹೀಗೆ ಕೆಲವು ವರುಷಗಳು ಕಳೆದುಹೋದುವು.
ಆಗ ಸುದರ್ಶನನೂ ಮಲ್ಲಿಗೆಹಳ್ಳಿಯ ಸ್ಕೂಲಿನಲ್ಲಿ ಸ್ವಲ್ಪಮಟ್ಟಿಗೆ ನೇಯು
ವುದನ್ನು ಕಲಿತನು. ಇದ್ದಕ್ಕಿದ್ದಂತೆ ಸರ್ಕಾರದಿಂದ ನೆಯ್ಗೆಯ
ಉಪಾಧ್ಯಾಯರನ್ನು ತೆಗೆದು ಹಾಕಬೇಕೆಂದೂ ಇನ್ನು ಮುಂದೆ ನೆಯ್ಗೆಯ
ಭಾಗವನ್ನು ಇಡಬೇಕಾದುದಿಲ್ಲವೆಂದೂ ಹುಕುಂ ಬಂತು. ಹನುಮ
ಸೆಟ್ಟಿಗೆ ಸ್ವತಂತ್ರವಾಗಿ ನೇಯ್ಗೆಯವನಾಗಿ ಜೀವಿಸುವ ಅಭ್ಯಾಸ ತಪ್ಪಿ
ಹೋಗಿ ಹತ್ತು ವರುಷಗಳಾಗುತ್ತಾ ಬಂದಿತ್ತು. ಅದೇ ಸಮಯದಲ್ಲಿ
ಸರ್ಕಾರದಿಂದ ನೆಯ್ಗೆಯ ಉಪಾಧ್ಯಾಯರ ಸ್ಥಾನದಲ್ಲಿ ಸ್ಕೂಲಿಗೆ ಒಬ್ಬ
ಜವಾನನನ್ನು ನಿಯಮಿಸಿಕೊಳ್ಳಬೇಕೆಂದೂ ಸ್ಕೂಲಿನ ಬಡ್ಜೆಟ್ ಇದ್ದಂತೆ
ಇರುವುದೆಂದೂ ಸೂಚನೆ ಬಂತು. ಹನುಮಸೆಟ್ಟಿ ನೆಯ್ಗೆ ಮೇಷ್ಟರ
ಕೆಲಸವನ್ನು ಬಿಟ್ಟು ತಾನೇ ಸ್ಕೂಲು ಜವಾನನಾದನು. ಅದರ ಜತೆ
ಯಲ್ಲಿಯೇ ಅವನು ನೆಯ್ಗೆಯನ್ನೂ ಪೂರ್ಣವಾಗಿ ಬಿಟ್ಟುಬಿಟ್ಟನು.

ಮಲ್ಲಿಗೆಹಳ್ಳಿಯ ಶಂಕರಸೆಟ್ಟಿ ನೆಯ್ಗೆಯಲ್ಲಿ ಬಹಳ ನಿಪುಣನಾಗಿದ್ದ.
ಅವನು ನೆಯ್ಯುತ್ತಿದ್ದ ಸೀರೆಗಳೂ ಪಂಚೆಗಳೂ ಪಟ್ಟಣದ ಮಾದರಿಗಳಿಗಿಂತ
ಹೆಚ್ಚು ಮನೋಹರವಾಗಿರುತ್ತಿದ್ದವು. ಆದರೆ ನೂಲುವವರು ಇಲ್ಲದುದ
ರಿಂದಲೂ ಜನರಿಗೆ ಅವನ ಆವಶ್ಯಕತೆ ತೋರದುದರಿಂದಲೂ ಅವನು
ನಿಧಾನವಾಗಿ ನೆಯ್ಗೆಯನ್ನು ಬಿಟ್ಟು ಕೊನೆಗೆ ವ್ಯವಸಾಯದ ಮೇಲೆ
ಅವಲಂಬಿಸಿದನು. ಮಲ್ಲಿಗೆಹಳ್ಳಿಯ ಈರಸೆಟ್ಟಿ ನೆಯ್ಗೆಯನ್ನು ಬಿಟ್ಟು
ವಡೆ ಚಕ್ಕುಲಿ ಉಂಡೆಗಳನ್ನು ಅಗಲವಾದ ಕುಕ್ಕೆಗಳಲ್ಲಿ ಹೊತ್ತುಕೊಂಡು
ಸಂತೆ ಸಂತೆ ತಿರುಗುತ್ತಾ ಹೊಟ್ಟೆ ಹೊರೆಯುತ್ತಿದ್ದಾನೆ. ಹೀಗೆಯೇ
ಮಲ್ಲಿಗೆಹಳ್ಳಿಯ ಸುತ್ತಲು ನೂರಾರು ಗ್ರಾಮಗಳ ಇಪ್ಪತ್ತು ಮುವ್ವತ್ತು
ಮಂದಿ ನೆಯ್ಗೆವರು ತಮ್ಮ ಕಸಬನ್ನು ಬಿಟ್ಟಿದ್ದಾರೆ.

ಆದರೆ ಮಗಳನ್ನು ಹೆತ್ತವನು, ಅದರ ಮದುವೆಗೂ ಏರ್ಪಾಡು ಮಾಡಬೇಕು. ಸುದರ್ಶನ, ಹಿಂದೆ ನೆಯ್ಗೆ ಬಿಟ್ಟಿದ್ದವರನ್ನು ಮತ್ತೆ ನೆಯ್ಗೆಯನ್ನು ಪ್ರಾರಂಭಿಸುವಂತೆ ಹೇಳಿದನು. ಒಂದು ಗಜ ಬಟ್ಟೆಗೆ ಒಂದು ರುಪಾಯಿ ಕೊಡುವುದಾಗಿ ಹೇಳಿದನು. ಆದರೆ ಆ ಹಿಂದಲ ನೆಯ್ಗೆಯವರಿಗೆ ಆಗಲೇ ಅಭ್ಯಾಸವೇ ಮರೆಯುತ್ತಾ ಬಂದಿತ್ತು. ಅವರು "ಈಗೇನೋ ನೀವು ಕೊಡುತ್ತೀರಿ. ನಿಮಗೇನೋ ಖುಷಿ ಬಂದಿದೆ. ನಿಮ್ಮ ಖುಷಿಗೆ ನೂಲುವವರೂ ನೂಲುತ್ತಾ ಇದ್ದಾರೆ. ಆದರೆ ಸ್ವಲ್ಪ ದಿವಸ ಕಳೆದ ಮೇಲೆ ನಿಮ್ಮ ದಾರಿ ನಿಮಗೆ ಆಗುತ್ತೆ. ನಮ್ಮ ದಾರಿ ನಮಗೆ" ಎಂದು ನೇಯುವುದನ್ನು ಮತ್ತೆ ಪ್ರಾರಂಭಿಸಲು ಹಿಂದೆಗೆದರು. ಹಿಂದೆ ಮಲ್ಲಿಗೆಹಳ್ಳಿಯ ಸುತ್ತಲ ನೂರು ಹಳ್ಳಿಗಳಿಗೆ ಬಟ್ಟೆ ನೆಯಿದು ಕೊಡುತ್ತಿದ್ದ ಚಂಗರವಳ್ಳಿಯ ಮಗ್ಗದವರು, ಕೈಯಿಂದ ನೂತ ಈ ಬತ್ತಿಗಳನ್ನು ನೋಡಿ ಇದನ್ನು ನೇಯುವುದಕ್ಕೆ ನಮ್ಮಿಂದ ಸಾಧ್ಯವಿಲ್ಲ ಎಂದುಬಿಟ್ಟರು. ಸುದರ್ಶನ ಯಾವ ತರಹದಿಂದ ಪ್ರೋತ್ಸಾಹಿಸಿದರೂ ಅವರು ಒಪ್ಪಲಿಲ್ಲ. ಕೊನೆಗೆ ಸುದರ್ಶನ ತಾನು ಬಾಲ್ಯದಲ್ಲಿ ಕಲಿತಿದ್ದ ತನ್ನ ನೇಯ್ಗೆಯ ವಿದ್ಯೆಯ ಮೇಲೆಯೇ ಅವಲಂಬಿಸಬೇಕಾಯಿತು.

ಸುದರ್ಶನ ಹನುಮಸೆಟ್ಟಿಯ ಹತ್ತಿರ ಹೋಗಿ ಅವನು ಕೇಳಿದುದನ್ನು ಕೊಟ್ಟು ಅವನ ಅಟ್ಟದ ಮೇಲೆ ಎಲ್ಲೋ ಬಿದ್ದಿದ್ದ ಅರ್ಧ ನುಶಿ ಹತ್ತಿದ್ದ ಮಗ್ಗದ ಸಾಮಾನುಗಳನ್ನು ತಂದನು. ಜಾತಿ ಮಗ್ಗದ ಸೆಟ್ಟಿಗಳು ಮಗ್ಗಗಳು ಹಳೆಯವಾದರೂ ಅವನ್ನು ಒಲೆಗೆ ಹಾಕುವುದಿಲ್ಲ. ಅವರಿಗೆ ಅದು ಅಪಶಕುನವಂತೆ. ಸುದರ್ಶನ ಮನೆಯಲ್ಲಿಯೇ ಮಗ್ಗದ ಗುಂಡಿ ತೋಡಲು ಪ್ರಾರಂಭಿಸಿದನು. ಅನಂತು ಮೊದಲು ಮೊದಲು "ಯಾಕೆ ಮನೇನೆಲ್ಲಾ ಗುಂಡಿ ತೋಡ್ತೀಯ" ಎಂದು ಕೂಗಿಕೊಂಡನು. ಆದರೆ ಸುದರ್ಶನ ಏನುಮಾಡಿದರೂ ಮಾಡುವುದನ್ನು ಮಾಡಿಯೇ ಮಾಡುತ್ತಾನೆ ಎಂದು ತಿಳಿದಿದ್ದುದರಿಂದ ಅವನು ಸುಮ್ಮನಾದನು. ಮಲ್ಲಿಗೆಹಳ್ಳಿಯಲ್ಲಿದ್ದ ಹುಟ್ಟು ನೆಯ್ಗೆಯವರಿಗೆಲ್ಲಾ ಇದೊಂದು ವಿನೋದವಾಯಿತು. ಅವರ ಮನಸ್ಸಿನೊಳಗೆ "ನಾವೆಲ್ಲಾ ಮಾಡಿಯಾಯಿತು. ಇನ್ನು ಇವನು ಮಾಡಬೇಕು" ಎಂಬ ಹಾಸ್ಯಭಾವ. ಮಗ್ಗದ ಗುಣಿ ತೋಡಿಕೊಡಲು ಬಂದ ಹನುಮಸೆಟ್ಟಿ ಅಂದು ಅದಕ್ಕೆ ಅಸಾಧ್ಯವಾದ

ಪೂಜೆಗಳನ್ನು ಮಾಡಿದನು. ೨೫ ಸೇರು ಪುರಿ, ಹನ್ನೆರಡು ತೆಂಗಿನಕಾಯಿ ಕರ್ಪೂರ ಸಾಮ್ರಾಣಿ ಎಲ್ಲವನ್ನೂ ಯಥೇಚ್ಛವಾಗಿ ತರಿಸಿದನು. ಪೂಜೆಗೆ ಬೊಗಸೆ ಬೊಗಸೆ ಅರಶಿನ ಕುಂಕುಮಗಳನ್ನೇ ಉಪಯೋಗಿಸಿದನು. ಅಂತೂ ಪೂಜೆಯಲ್ಲಿಯೇ ಮಗ್ಗದ ದೇವರನ್ನು ಹಣ್ಣುಮಾಡಿದನು. ಮಲ್ಲಿಗೆಹಳ್ಳಿ ಜೋಯಿಸ ಏನೋ ಹೇಳುವುದಕ್ಕೆ ಹೋದಾಗ ಹನುಮ ಸೆಟ್ಟಿ "ಸುಮ್ಮನೆ ಇರಿ. ಈ ವಿಚಾರ ನಿಮಗೆ ತಿಳಿಯುವುದಿಲ್ಲ. ಇದೆಲ್ಲಾ ತಿಳಿಯೋಕೆ ನೀವೇನು ಮಗ್ಗದವರೆ" ಎಂದು ಗದ್ದರಿಸಿದನು. ಜೋಯಿಸ "ನೀನು ಮಹಾ ಮಗ್ಗದವನು. ಅದಕ್ಕೆ ಮಗ್ಗ ಅಷ್ಟು ಚೆನ್ನಾಗಿ ನಡೆಸ್ತಿದೀಯ. ಮಗ್ಗ ಬೆಂಕಿಗೆ ಹಾಕಿ ಸ್ಕೂಲು ಜವಾನ್ಕಿಗೆ ಯಾಕೆ ಸೇರಿದೆ ಮತ್ತೆ?" ಎಂದನು. ಭಾರಿ ತೇರನ್ನು ಎಳೆಯಲು ಜನ ಸೇರುವಂತೆ ಸುದರ್ಶನನ ಮನೆ ಬಾಗಿಲಿನಲ್ಲಿ ಜನ ಸೇರಿಬಿಟ್ಟಿತು. ಆವತ್ತು ಎಲ್ಲಿ ನೋಡಿದರೂ "ಸುದರ್ಶನ ಮಗ್ಗ ಸ್ಥಾಪಿಸ್ತಾನೆ; ಮಗ್ಗ ಹೂಡ್ತಾನೆ. ಮಗ್ಗ ಮುಲಗಸ್ತಾನೆ" ಇದೇ ಮಾತಾಗಿದ್ದಿತು; ಸುದರ್ಶನನಿಗೆ ಕೇಳುವಂತೆಯೇ ಎಲ್ಲರೂ ಗಟ್ಟಿಯಾಗಿ ಈ ಮಾತುಗಳನ್ನು ಹೇಳಿಕೊಳ್ಳುತ್ತಿದ್ದರು. ಸುದರ್ಶನನಿಗೆ ನಾಚಿಕೆಯಾಯಿತು. ಅಷ್ಟೊಂದು ಡೋಲು ಬಾರಿಸುವುದು ಅವನಿಗೆ ಬೇಕಾಗಿರಲಿಲ್ಲ. ಆದರೆ ಇಪ್ಪತ್ತೈದು ಸೇರು ಪುರಿ ತಂದುದು, ಮುಖ್ಯವಾಗಿ ಹನುಮಸೆಟ್ಟಿಯ ತಪ್ಪು. ಅದು ಗೊತ್ತಾಗದೆ ಹೋಗಿದ್ದರೆ ಅಷ್ಟೊಂದು ಜನ ಅಲ್ಲಿ ಸೇರುತ್ತಿರಲಿಲ್ಲ.

ಅನಂತುವಿನ ಮನೆಯ ಮಧ್ಯದ ತೊಟ್ಟಿಯಲ್ಲಿ ಸುದರ್ಶನನ ಮಗ್ಗ. ನಾಲ್ಕು ಕಡೆ ಗೂಟ ಗಂಜಿ ವಾಸನೆ. ಸರಿ. "ಇದರಲ್ಲಿ ಎಷ್ಟು ಜತೆ ಚೌಕವಾಗುತ್ತೆ. ಒಂದೊಂದು ಜತೆಗೆ ಬೆಲೆ ಎಷ್ಟು? ನನಗೆ ಒಂದು ಜತೆ ಕೊಡು ಚೌಕ ಪ್ರಯೋಜನವಿಲ್ಲಯ್ಯ. ಮುಖ್ಯವಾಗಿ ಸೀರೆ ಮಾಡಬೇಕು. ಒಂದು ಸಲ ಸೀರೆ, ಗಿರಾಕಿಗೆ ಒಪ್ಪಿಗೆಯಾಗಿ ಬಿಟ್ಟರೆ ಆಮೇಲೆ ಕೂತ ಜಾಗಕ್ಕೆ ವ್ಯಾಪಾರ ಬಂದವರೆಲ್ಲಾ ತಲಾತಟ್ಟಿಗೆ ಹೀಗೆ ಬೋಧಿಸತೊಡಗಿದರು." ಮೊದಲನೆಯ ಮಗ್ಗದ ಊಕೆ ಮಾಡುವುದಕ್ಕೇ ಹನುಮಸೆಟ್ಟಿ ಎರಡು ರುಪಾಯಿ ತೆಗೆದುಕೊಂಡ. ಹೊಸ ಊಕೆಯನ್ನು ಕೆಚ್ಚಿಕೊಡುವುದಕ್ಕೇ ಈರಸೆಟ್ಟಿ ಎರಡು ರುಪಾಯಿ ತೆಗೆದುಕೊಂಡ. ಅಂತೂ ಸುದರ್ಶನನೇ ನಿಧಾನವಾಗಿ ಮಗ್ಗ ತಾಡಿಸತೊಡಗಿದ. ಅನಂತು ಮನೆ

ಬಾಗಿಲಿನಲ್ಲಿ ಕುಳಿತುಕೊಂಡು ವಿನೋದವಾಗಿ "ಇನ್ನೇನು, ನಮ್ಮ ಮನೆಗೂ ಬಟ್ಟೆ ಕೊಳ್ಳಬೇಕಾದುದಿಲ್ಲ. ಊರಿಗೂ ಕೊಳ್ಳಬೇಕಾದುದಿಲ್ಲ. ಎಲ್ಲಾ ಇಲ್ಲಿಯ ಜನರೇ ನೂಲುತ್ತಾರೆ. ಇಲ್ಲಿಯ ಜನರೇ ನೇಯುತ್ತಾರೆ. ಹೊರಗಡೆಯಿಂದ ಬಂದು ಇಲ್ಲಿ ಬಟ್ಟೆ ವ್ಯಾಪಾರಮಾಡುವವರ ಬಾಯಿಗೆ ಮಣ್ಣು ಬಿದ್ದುಹೋಯಿತು!" ಎನ್ನುತ್ತಿದ್ದ. ಸುದರ್ಶನ "ಇವರು ಹೇಳುವ ಮಾತು ಹಾಸ್ಯವಾಗಿದ್ದರೂ ಅದೇ ನನ್ನ ಧ್ಯೇಯ" ಎಂದುಕೊಂಡು ತನ್ನ ಕೆಲಸದಲ್ಲಿ ತಾನು ತೊಡಗಿದ್ದ.

ನಿಧಾನವಾಗಿ ಮೊದಲನೆಯ ಊಕೆ ಮುಗಿಯಿತು. ಏಳು ಎಂಟು ಒರಟು ಒರಟಾದ ಚೌಕಗಳಾದುವು. ಎರಡನೆಯ ಊಕೆಯಲ್ಲಿ ಮತ್ತೆ ಚೌಕಗಳಾದವು. ಏನೋ ಒಂದು ರಾಟೆ, ಹತ್ತಿ ಕೊಟ್ಟಿದ್ದಾನೆ ಎಂದು ವಿನೋದಕ್ಕಾಗಿ ಬತ್ತಿ ಬತ್ತಿ ಎಳೆದಿದ್ದವರ ನೂಲಿಗಾಗಿ ಅವರಿಗೆ ಒಂದೊಂದು ಚೌಕ ಸಿಕ್ಕಿತು. ಚೌಕವನ್ನು ಅವರು ಹೆಗಲಿನ ಮೇಲೆ ಹಾಕಿಕೊಂಡು ಹೊರಟಾಗ ಇತರರಿಗೆ ಹೊಟ್ಟೆಕಿಚ್ಚು ಉಂಟಾಯಿತು. ಅವರೂ ಬತ್ತಿ ಎಳೆಯತೊಡಗಿದರು. ಬರಿಯ ವ್ಯವಸಾಯದ ಮೇಲೆಯೇ ಅವಲಂಬಿಸಿದ್ದ ಶಂಕರಸೆಟ್ಟಿ ಕೈನೂಲನ್ನು ನೆಯಿದುಕೊಡಲು ಒಪ್ಪಿದನು. ಅಂತೂ ಅನಂತುವಿನ ಮನೆಯಿಂದ ಮಗ್ಗ ಕಿತ್ತು ಶಂಕರಸೆಟ್ಟಿಯ ಮನೆಗೆ ಹಾಕಿಯಾಯಿತು.

ನಮ್ಮ ದೇಶದ ರೈತ ಎರಡು ಹೊತ್ತು ಊಟವನ್ನೇ ಕಂಡಿಲ್ಲ. ಅವನ ದಾರಿದ್ರ್ಯ ಊಹನೆಗೆ ಅಸಾಧ್ಯವಾದುದು. ಯಾವುದಾದರೂ ಒಂದು ಕಸಬಿನಲ್ಲಿ ದುಡ್ಡು ಸಿಕ್ಕುವುದು ಅವನಿಗೆ ಕಂಡರೆ ಸಾಕು. ಅದು ಎಷ್ಟು ಕಡಿಮೆ ದುಡ್ಡಾದರೂ ಚಿಂತೆಯಿಲ್ಲ. ಅವನು ಯಾರ ಪ್ರಚಾರವೂ ಇಲ್ಲದೆ ಆ ಕಸಬನ್ನು ತತ್ಕ್ಷಣ ಅವಲಂಬಿಸುತ್ತಾನೆ. ದುಡ್ಡು ಸಿಕ್ಕುವುದಾದರೆ ಪಾತಾಳವನ್ನು ಸೋದಿಸುತ್ತಾನೆ. ಬೇಡ ಎಂದರೂ ಬಿಡುವುದಿಲ್ಲ. ವಿಶ್ವೇಶ್ವರಯ್ಯನವರನ್ನು ಹಿಂದೆ ಖಾದಿಯ ವಿಷಯದಲ್ಲಿ ಅಭಿಪ್ರಾಯ ಕೇಳಿದಾಗ "ಇಲ್ಲಿ ಖಾದಿ ಕೊಳ್ಳುವವರ ಸಂಖ್ಯೆಗೆ ಕಡಿಮ ಇಲ್ಲ. ಆದರೆ ಖಾದಿಗಾಗಿ ನೂಲುವವರಿಗೆ ದಿನಕ್ಕೆ ಒಂದಾಣೆ ಎರಡಾಣೆ ಕೊಡುತ್ತೀರಿ. ಯಾರು ನೂಲುತ್ತಾರೆ ಅಷ್ಟು ಕಡಿಮೆ ಕೂಲಿಗೆ. ಆದುದರಿಂದ ಕೆಲಸ ಮಾಡುವವರಿಲ್ಲದೆ ಈ ಕೈಗಾರಿಕೆ ಬಿದ್ದುಹೋಗುತ್ತದೆ" ಎಂದಿ

ದ್ದರು. ಆದರೆ ಅವರೇ ಅನಂತರ ಮದರಾಸು ಪ್ರದರ್ಶನದಲ್ಲಿ "ನಾನು ಹಾಗೆ ತಿಳಿದುಕೊಂಡಿದ್ದೆ. ಆದರೆ ಈ ದೇಶದ ದಾರಿದ್ರ್ಯ ಎಷ್ಟರಮಟ್ಟಿಗಿದೆ ಎಂದರೆ ಇಲ್ಲಿ ದಿನಕ್ಕೆ ಒಂದಾಣೆ ಸಿಕ್ಕಿದರೂ ಜನ ಕೆಲಸಮಾಡುತ್ತಾರೆ. ಆದುದರಿಂದ ಖಾದಿಯನ್ನು ಪ್ರಚಾರಮಾಡಬೇಕು" ಎಂದರು. ಕಂದಾಯ ಕಡಿಮೆ ಮಾಡಿದರೆ ರೈತನಿಗೆ ಎಷ್ಟು ಮಹಾ ಉಳಿತಾಯವಾಗುತ್ತೆ ಎನ್ನುವವರೂ, ರೈತರ ಹತ್ತಿರ ಎಷ್ಟು ದುಡ್ಡಿದ್ದರೂ ಅದನ್ನು ಅವರು ದಿಕ್ಕಾಪಾಲಾಗಿ ಖರ್ಚುಮಾಡಿಬಿಡುತ್ತಾರೆ. ಅವರು ಹುಟ್ಟು ದುಂದು ವೆಚ್ಚಗಾರರು ಎನ್ನುವವರೂ ಈ ವಿಷಯಗಳನ್ನು ಗಮನಿಸಬೇಕು.

ರೈತನ ಹೆಸರಿನಲ್ಲಿ ಅನೇಕರು ಅನೇಕ ಕೆಲಸಗಳನ್ನು ಮಾಡಿರುವುದರಿಂದ ರೈತರಿಗೆ ಯಾವ ಹೊಸ ಚಳುವಳಿ ತಮ್ಮ ಒಳ್ಳೆಯದಕ್ಕೆ ಎಂದು ಬಂದರೂ ಭಯವಾಗುತ್ತದೆ. ಸರ್ಕಾರ ಪದೇ ಪದೇ ಹಾಕುವ ಕಂದಾಯಗಳೆಲ್ಲಾ ರೈತನ ಒಳ್ಳೆಯದಕ್ಕೇ ಎಂದು ಹೇಳಲಾಗುತ್ತಿದೆ ಮುನಿಸಿಪಾಲಿಟಿ ಡಿಸ್ಟ್ರಿಕ್ಟ್ ಬೋರ್ಡುಗಳು ಹಾಕುವ ಕಂದಾಯಗಳೆಲ್ಲಾ ರೈತನ ಒಳ್ಳೆಯದಕ್ಕೇನೆ. ಕಾಡಿನಿಂದ ಸೌದೆ ತಂದುಕೊಂಡು, ಸಗಣಿಯನ್ನ ಗೊಬ್ಬರ ಮಾಡಿಕೊಳ್ಳೋಣ ಎಂದರೆ ಸರ್ಕಾರ ರೈತನ ಒಳ್ಳೆಯದಕ್ಕಾಗಿಯೇ ಸೌದೆ ಮೇಲೆ ಕಂದಾಯ ಹಾಕಿದೆ. ಅದರಿಂದ ಅವನು ಸಗಣಿಯಿಂದಲೇ ಬೆರಣಿ ಮಾಡಿಕೊಂಡು ಭೂಮಿಗೆ ಅತ್ಯಂತ ಶ್ರೇಷ್ಠವಾದ ಗೊಬ್ಬರವೇ ಇಲ್ಲದಂತೆ ಮಾಡುತ್ತಾನೆ. ಹುಲಿ ಮೇಲೆ ಬೀಳುವುದಕ್ಕೆ ಬಂದರೆ ಅದನ್ನು ಅಲ್ಲಿಯೇ ಹೊಡೆಯಕೂಡದಂತೆ. ಅದಕ್ಕೆ ಒಂದು ಬೇರೆ ಹೊತ್ತಿನಲ್ಲಿ ಬರುವಂತೆ ವಾಯಿದೆ ಮಾಡಿಕೊಟ್ಟು ಅನಂತರ ಇಲ್ಲಿ ಬಂದು ಅಧಿಕಾರಿಗಳಿಗೆ ಹೇಳಿ ಅದನ್ನು ಹೊಡೆಯಲು ಅಪ್ಪಣೆ ತೆಗೆದುಕೊಳ್ಳಬೇಕಂತೆ. ಹೀರಂಗ್ ತಾರೀಖಿಗೆ ಸರಿಯಾಗಿ ಅದನ್ನು ಹೋಗಿ ಹೊಡೆಯಬೇಕೆಂಬ ಕಾನೂನೂ ರೈತನ ಒಳ್ಳೆಯದಕ್ಕಾಗಿಯೇ. ಒಂದು ಜಮೀನು ಒಂದು ಕೈಯಿಂದ ಮತ್ತೊಂದು ಕೈಗೆ ಹೋಗಬೇಕಾದರೆ ಮೊದಲು ಛಾಪಾ ಕಾಗದಕ್ಕೆ ಬೇರೆ ದುಡ್ಡು, ಅನಂತರ ರಿಜಿಸ್ಟ್ರೇಶನ್‌ಗೆ ಬೇರೆ ದುಡ್ಡು, ಅನಂತರ ಒಬ್ಬನ ಹೆಸರಿನಿಂದ ಒಬ್ಬನ ಹೆಸರಿಗೆ ವರ್ಗಮಾಡುವ ಫೀಸು ಹೀಗೆ ಒಂದು ಕೆಲಸಕ್ಕೆ ಮೂರು ವಿಧವಾದ ದಂಡವೂ ರೈತನ ಒಳ್ಳೆಯದಕ್ಕಾಗಿಯೇ; ಹೆಂಡದ ಉತ್ಪತ್ತಿ ವರುಷ ವರುಷಕ್ಕೆ ಏರುತ್ತಿರುವುದೂ ರೈತನ ಉಪಯೋಗಕ್ಕಾ

ಗಿಯೇ. ಕೋರ್ಟು ಕಛೇರಿಗಳಲ್ಲಿ ಕನ್ನಡದ ಬದಲು ಇಂಗ್ಲಿಷ್ ಭಾಷೆ ಇನ್ನೂ ಪ್ರಬಲವಾಗಿರುವುದೂ, ನಮ್ಮ ಕನ್ಯಾ (ಗರ್ಲ್ಸ್) ಸ್ಕೂಲುಗಳಲ್ಲಿ ಸಹ ಇಂಗ್ಲಿಷಿನಲ್ಲಿ ಪಾಠ ಹೇಳುವುದೂ ಎಲ್ಲವೂ ರೈತನ ಒಳ್ಳೆಯದಕ್ಕಾಗಿಯೆ? ಲೇವಾದೇವಿ ರಿಜಸ್ಟ್ರೇಶನ್ ಎಂಬ ಒಂದು, ಯಾವ ಲಾಯರಿಗೂ ಅರ್ಥವಾಗದ ಕುರುಡು ಕಾನೂನುಮಾಡಿ ಪ್ರತಿಯೊಂದು ಹಳ್ಳಿಯಲ್ಲಿಯೂ ಸಣ್ಣ ಕೈಸಾಲ ಕೊಟ್ಟಿರುವ ರೈತರೆಲ್ಲಾ ಆ ರಿಜಿಸ್ಟ್ರೇಶನ್‌ಗಾಗಿ ಐದೈದು ರುಪಾಯಿ ತೆರುವರಂತೆ ಮಾಡಿರುವುದೂ ರೈತರ ಒಳ್ಳೆಯದಕ್ಕಾಗಿಯೇ. ಗ್ರಾಮಪಂಚಾಯ್ತಿಗಳ ಹಣ ಹತ್ತು ಹದಿನೈದು ಲಕ್ಷ ರುಪಾಯಿ ವಸೂಲಾಗಿ ಅದರ ಖರ್ಚಿಗೆ ಯಾವ ವಿಧವಾದ ದಾರಿಯೂ ಇಲ್ಲದೆ ಆ ಹಣ ಗೆದ್ದಲು ತಿನ್ನುತ್ತಿರುವುದೂ ರೈತನ ಏಳಿಗೆಗಾಗಿಯೇ? ತಿಂಗಳಿಗೆ ಸರಾಸರಿ ನಾಲ್ಕು ರುಪಾಯಿ ಉತ್ಪತ್ತಿಯುಳ್ಳ ರೈತರಿರುವ ಈ ದೇಶದಲ್ಲಿ ಸಾವಿರ, 2 ಸಾವಿರ 3 ಸಾವಿರ 6 ಸಾವಿರ ರುಪಾಯಿ ಸಂಬಳ ತೆಗೆದುಕೊಳ್ಳುತ್ತಿರುವ ಅಧಿಕಾರಿಗಳಿರುವುದೂ ರೈತನ ಏಳಿಗೆಗಾಗಿಯೇ. ಹೀಗೆ ರೈತನಿಗೆ ಯಾವುದೂ ತನ್ನ ಏಳಿಗೆಗೆ ಎಂದು ಬಂದು, ರೈತನ ಏಳಿಗೆಗೆ ಎಂದು ಯಾರಾದರೂ ಹೇಳಿದರೆ ರೈತ ಚೇಳನ್ನು ಕಂಡರೆ ಹೇಗೋ ಹಾಗೆ ಅವರಿಂದ ದೂರವಾಗಿರುತ್ತಾನೆ.

ಸುದರ್ಶನ ಮಲ್ಲಿಗೆಹಳ್ಳಿಯಲ್ಲಿ ಮೊದಲು ಮೊದಲು "ನಾನು ರೈತರ ಏಳಿಗೆಗಾಗಿ ಮಾಡುತ್ತೇನೆ" ಎಂದಾಗ ರೈತರಿಗೆ ಹಾಗೆಯೇ ಭಯವಾಯಿತು. ಆದರೆ ಅವರಿಗೆ ಸ್ವಲ್ಪ ಮಟ್ಟಿಗಾದರೂ ಇವನು ನಿಜವಾಗಿಯೂ ನಮ್ಮ ಹಿತೈಷಿ ಎಂದು ನಂಬಿಕೆಯಾದರೆ ಆ ಸಾಧುಪ್ರಾಣಿಗಳು ಅವನನ್ನು ಪೂರ್ಣವಾಗಿ ನಂಬುತ್ತಾರೆ. ಸುದರ್ಶನ ನಾಲ್ಕು ಸಾವಿರ ರುಪಾಯಿ ಕಳೆದು, ಗೋಣಿಚೀಲ ಜಮುಖಾನಗಳಾಗುವ ಖಾದಿ ಬಟ್ಟೆಯನ್ನು ತಯಾರುಮಾಡಿ ನಿಜವಾಗಿಯೂ ಆ ಕೈಗಾರಿಕೆಯನ್ನು ಮಲ್ಲಿಗೆಹಳ್ಳಿಯಲ್ಲಿ ಸ್ಥಾಪಿಸಿದಾಗ ಜನರಿಗೆ ಅವನಲ್ಲಿ ನಂಬಿಕೆಯೂ ಭಕ್ತಿಯೂ ಉಂಟಾಯಿತು. "ಹಳ್ಳಿಗೆ ಹೋಗಿ ಹಳ್ಳಿಗೆ ಹೋಗಿ ಎಂದು ಕೂಗುವ ಗಾಂಧಿ, ಇಲ್ಲಿ ಬಂದು ನೋಡಿದರೆ ನಮ್ಮ ಕಷ್ಟ ಗೊತ್ತಾಗುತ್ತದೆ. ಹಳ್ಳಿಗೆ ಹೋದವನನ್ನು ಹಳ್ಳಿಯವರು ಪೂರ್ಣವಾಗಿ ತಿನ್ನುತ್ತಾರೆ. ಅವನನ್ನು ಜೀವಸಹಿತ ಬಿಡುವುದಿಲ್ಲ. ಅವನ ಹತ್ತಿರ ಇರುವುದನ್ನೆಲ್ಲಾ ಕಿತ್ತುಕೊಂಡು

ಕೊಸಗೆ ಅವನ ಪ್ರಾಣವನ್ನೂ ಹೀರಿ ಕಳುಹಿಸುತ್ತಾರೆ" ಎಂದು ಬೇಜಾರು ಪಟ್ಟುಕೊಳ್ಳುತ್ತಿದ್ದ ಸುದರ್ಶನನಿಗೂ, ರೈತರು ತನ್ನ ಕೆಲಸದಲ್ಲಿ ಸ್ವಲ್ಪ ಉತ್ಸಾಹ ತೋರಿಸಲು ಪ್ರಾರಂಭಿಸಿದುದನ್ನು ಕಂಡು ಹೊಸ ಹುರುಪು ಬಂದಂತೆ ಆಯಿತು. ಸುತ್ತಲ ಇಪ್ಪತ್ತು ಹಳ್ಳಿಯ ರೈತರು ನೂಲುವುದನ್ನು ಬಲವಾಗಿಯೇ ಹಿಡಿದರು.

ಹೀಗೆ ನೂಲುವುದು ಸ್ಥಾಪನೆಯಾದ ಕೂಡಲೇ ಸುದರ್ಶನ ನಿಧಾನವಾಗಿ ಎಲ್ಲಾ ಗ್ರಾಮ ಕೈಗಾರಿಕೆಗಳನ್ನೂ ಪ್ರಾರಂಭಿಸಿದನು. ಗಾಣದ ಎಣ್ಣೆ;—ಮೊದಲು ಮೊದಲು ಪ್ರತಿ ಹಳ್ಳಿಯಲ್ಲಿಯೂ ಒಬ್ಬ ಗಾಣಿಗ ಇರುತ್ತಿದ್ದನು. ರೈತರು ತಾವು ಬೆಳೆದ ಎಳ್ಳನ್ನು ತಮ್ಮಲ್ಲಿ ಇಟ್ಟುಕೊಂಡು ಎಣ್ಣೆ ಬೇಕಾದಾಗ ಆ ಗಾಣಿಗನ ಹತ್ತಿರ ಎಳ್ಳು ತೆಗೆದುಕೊಂಡು ಹೋಗುತ್ತಿದ್ದರು. ಗಾಣಿಗನಿಗೆ ಗಾಣವಾಡಲು ಮೂರು ಸೇರು ರಾಗಿ ಕೊಟ್ಟು ಎಣ್ಣೆಯನ್ನೂ ಹಿಂಡಿಯನ್ನೂ ತೆಗೆದುಕೊಂಡು ಬರುತ್ತಿದ್ದರು. ಜನರಿಗೆ ಎಣ್ಣೆ ಆಗುತ್ತಿದ್ದಿತು. ದನಗಳಿಗೆ ಹಿಂಡಿ ಆಗುತ್ತಿದ್ದಿತು. ಈಚೆಗೆ ಇದೆಲ್ಲಾ ಬದಲಾವಣೆಯಾಯಿತು. ಗಿರಣಿಗಳ ದಳ್ಳಾಳಿಗಳು ಹಳ್ಳಿಗಳ ಮೇಲೆ ಬಂದು ರೈತನ ಬಳಿ ಇದ್ದ ಎಳ್ಳನ್ನೆಲ್ಲಾ ಕೊಂಡುಕೊಂಡು ಹೋಗಿಬಿಡುತ್ತಿದ್ದರು. ರೈತ ಕೊಡಲು ಹಿಂದೆಗೆದರೆ ಎಳ್ಳಿನ ಧಾರಣೆ ಏರಿಸಿ ಅಂತೂ ಕೊಂಡುಕೊಂಡು ಹೋಗುತ್ತಿದ್ದರು. ರೈತನಿಗೆ ದುಡ್ಡಿನ ಆಸೆ; ದರದು; ಅವನು ಮಾರುತ್ತಿದ್ದನು. ಹೀಗೆ ಪ್ರತಿ ಪ್ರಾಂತದಲ್ಲಿಯೂ ಇದ್ದ ಎಳ್ಳಿನ ಬೀಜವೆಲ್ಲಾ ಮಿಲ್ ಮಾಲಿಕರಲ್ಲಿ ಸೇರುತ್ತಿದ್ದಿತು. ಒಂದೊಂದು ಸಮಯದಲ್ಲಿ ಮುಂದಲ ಬಿತ್ತನೆಗೆ ಬೇಕಾದ ಬೀಜದ ಕಾಳನ್ನೂ ಸಹ ಇಟ್ಟುಕೊಳ್ಳದೆ ರೈತರು ಮಾರಿಬಿಟ್ಟು ಬಿತ್ತುವ ಕಾಲದಲ್ಲಿ, ತಾವು ಮಾರಿದ್ದ ಎಳ್ಳನ್ನೇ ಮತ್ತೆ ಅಂಗಡಿಯಿಂದ ಒಂದಕ್ಕೆ ಎರಡು ಕೊಟ್ಟು ತರುತ್ತಿದ್ದರು. ಮಿಲ್ಲುಗಳಿಂದ ಟಿನ್ನು ಟಿನ್ನುಗಳಲ್ಲಿ ದರ್ಜೆವಾರು ಉತ್ತಮ ಮಧ್ಯಮ ಅಧಮ ಎಣ್ಣೆಗಳು ಎಲ್ಲಾ ಬೆರಕೇ ಎಣ್ಣೆಗಳೇ ಬಂದು ಅಂಗಡಿಗಳಲ್ಲಿ ಶೇಖರವಾಗುತ್ತಿದ್ದುವು. ರೈತರಲ್ಲಿ ಎಳ್ಳು ಇಲ್ಲ. ಇನ್ನು ಗಾಣಿಗನಿಗೆ ಕೆಲಸವೇನು? ಅವನೂ ನಿಧಾನವಾಗಿ ಗಾಣವನ್ನು ಮೂಲೆಗೆ ಹಾಕಿ ವ್ಯವಸಾಯ ಕೂಲಿ ಮುಂತಾದುವುಗಳ ಮೇಲೆ ಅವಲಂಬಿಸಿದನು. ಊರಿಗೆಲ್ಲಾ ಎಣ್ಣೆ ಒದಗಿಸುವ ಗಾಣಿಗ, ಕುಡಿಕೆ ಸೀಸೆ ತೆಗೆದುಕೊಂಡು

ಮೂರು ಕಾಸು ಆರು ಕಾಸಿನ ಎಣ್ಣೆಗೆ ಸಹ ಅಂಗಡಿಗೆ ಹೋಗುವ ವಿಚಿತ್ರ ಪರಿಸ್ಥಿತಿ ಬಂತು.

ಸುದರ್ಶನ ಮತ್ತೆ ಗಾಂಧಿ, ವಾರ್ಧಾ, ಗ್ರಾಮೋದ್ಯೋಗ ಸಂಘ; ಉತ್ತಮವಾದ ಎಣ್ಣೆ ತುಪ್ಪಕ್ಕಿಂತ ಉತ್ತಮ—ಎಂದೂ ಮುಂತಾಗಿ ಹೇಳ ತೊಡಗಿದನು. ಮಲ್ಲಿಗೆಹಳ್ಳಿಗೆ ಹೊಸದಾಗಿ ಸೊಸೆಯಾಗಿ ಬಂದ ನಾಗರತ್ನಮ್ಮ ಬೆಂಗಳೂರಿನಲ್ಲಿ ಇಂಗ್ಲಿಷ್ ಓದಿದ ನಾಗರಿಕಳಾದ ಹುಡುಗಿ, ಮೈಮೇಲೆ ಬರಿಯ ಚಿನ್ನ ಬಣ್ಣ ಹೇರಿಕೊಳ್ಳುವುದರ ಬದಲು, ಹಳ್ಳಿಯ ಕೆಲಸಗಳಿಗೆ ಸಹಾಯಕವಾಗಲೆಂದು ಹಣ ಕೊಟ್ಟಳು. ಅವಳ ಗಂಡ ಮಲ್ಲಿಗೆಹಳ್ಳಿಯ ವಾಸು ಕಾಲೇಜಿನಲ್ಲಿ ಓದಿದ ಗ್ರ್ಯಾಜುಯೇಟ್ ಆದರೂ, ತಾನೇ ವಾರ್ಧಾಕ್ಕೆ ಹೋಗಿ, ಗಾಣಿಗನಂತೆ ಗಾಣ ಕಟ್ಟುವುದನ್ನು ಕಲಿತು ಕೊಂಡು ಬಂದನು. ಊರಿನಲ್ಲಿ ಎಲ್ಲಿ ನೋಡಿದರೂ "ನಿಮ್ಮ ಎಣ್ಣೆ ನೀವು ಮಾಡಿಸಿಕೊಳ್ಳಿ. ಎಳ್ಳಿನ ಬೀಜ ಮಾರಬೇಡಿ. ನಿಮ್ಮ ಎಳ್ಳಿನ ಎಣ್ಣೆ ತುಪ್ಪಕ್ಕಿಂತ ಉತ್ತಮವಾದುದು" ಎಂಬ ಮಾತೇ ಮಾತಾಯಿತು. "ವಾರ್ಧಾದಲ್ಲಿ ಹೊಸ ಬಗೆಯ ಗಾಣ ಮಾಡಿದ್ದಾರಂತೆ. ಈ ಗಾಣಕ್ಕಿಂತ ಹೆಚ್ಚು ಸುಲಭವಂತೆ. ಅದರಲ್ಲಿ ಎಣ್ಣೆಯೂ ಜಾಸ್ತಿ ಬರುತ್ತದಂತೆ" ಎಂಬ ಮಾತು ಎಲ್ಲರ ಬಾಯಿನಲ್ಲಿಯೂ ಪ್ರಾರಂಭವಾಯಿತು. ಎಣ್ಣೆ ಮುಖ್ಯವಾಗಿ ಸ್ತ್ರೀಯರ ಪ್ರಪಂಚ. ಅವರ ಬಾಯಿನಲ್ಲಿ ಕೂಡ "ವಾರ್ಧಾ ಎಣ್ಣೆ ಗಾಂಧಿ ಎಣ್ಣೆ" ಎಂಬ ಮಾತುಗಳು ಬರತೊಡಗಿದವು. ಆದರೆ ಯಾರಿಗೂ ಖಂಡಿತವಾಗಿ ವಾರ್ಧಾ ಎಣ್ಣೆ ಯಾವುದು; ಹಾಗೆಂದರೇನು ಎಂಬುದರ ವಿವರ ತಿಳಿದಿರಲಿಲ್ಲ. ಒಂದು ನಾಟಕ, ಸರ್ಕಸ್, ಊರಿಗೆ ಹೊಸ ಸೊಸೆ, ಇವರು ಬರುವುದನ್ನು ಕುತೂಹಲದಿಂದ ನಿರೀಕ್ಷಿಸುವಂತೆ ಜನ ವಾರ್ಧಾ ಎಣ್ಣೆಯನ್ನೂ ನಿರೀಕ್ಷಿಸುತ್ತಿದ್ದರು. ಕೆಲವರು ಪ್ರಾಯಶಃ ಅದೂ ಮಿಲ್ ಎಣ್ಣೆಯಂತೆ ಎಲ್ಲಿಂದಲೋ ಪ್ಯಾಕ್ ಆಗಿ ಬರುತ್ತೆ. ಅದೂ ಒಂದು ಕಾರ್ಖಾನೆಯೇ ಇರಬಹುದೇನೋ ಎಂದು ಕೊಂಡರು. ಹಳ್ಳಿಯವರು "ಗಾಂಧಿ ಕಾರ್ಖಾನೆಯಲ್ಲಿ ಈಗ ಎಣ್ಣೆಯೂ ಸಹ ತಯಾರಾಗುತ್ತದೆಯಂತೆ" ಎಂದುಕೊಳ್ಳುತ್ತಿದ್ದರು.

ವಾಸು ವಾರ್ಧಾದಿಂದ ಬಂದವನೇ "ಹೊಸ ಮಾದರಿಯ ಗಾಣ ಇವತ್ತು ನಾಳೆ ಬರುತ್ತೆ. ಗಾಣದ ಬೆಲೆ ನಲವತ್ತು ಐವತ್ತು ರುಪಾಯಿ

ಆಗಬಹುದು. ಆದರೆ ರೈಲ್ವೆ ಛಾರ್ಜು ಅಷ್ಟೇ ಆಗುತ್ತೆ. ಹೀಗೆ ಗಾಣ ತರಿಸಿದರೆ ಪ್ರಯೋಜನವಿಲ್ಲ. ಎಲ್ಲಾ ಇಲ್ಲೇ ಮಾಡಿಕೊಳ್ಳಬೇಕು. ಮಾದರಿಗೆ ಒಂದು ಇರಲಿ ಅಂತ ತಂದಿದೇನೆ'' ಎಂದ. ಬಿ.ಎಸ್.ಸಿ. ಮಾಡಿದ ಗ್ರಾಜುಏಟು ಆದವನು ಎಣ್ಣೆ ಗಾಣ ಎಂದುಕೊಂಡು ಓಡಾಡು ತ್ತಿರುವುದು ಗ್ರಾಮಸ್ತರಿಗೆ ಅಶ್ಚರ್ಯವಾಯಿತು. ವಾಸುವಿನ ಜತೆಗೆ ಮತ್ತೊಬ್ಬ ಗ್ರಾಜುಯೇಟ್‌ನಾದ ತಿಮ್ಮಪ್ಪನೂ ಸೇರಿದ. ಮಲ್ಲಿಗೆಹಳ್ಳಿಯ ಸಾಹುಕಾರರು, ಶ್ಯಾನುಭೋಗರು, ಜೋಡಿದಾರರು ರೈತರು ಸ್ತ್ರೀಪುರುಷ ರಾದಿಯಾಗಿ ಎಲ್ಲರೂ ಈ ಹೊಸ ಗಾಣದ ಆವಿರ್ಭಾವವನ್ನು ಬಿಳಿಯ ಆನೆ ಯನ್ನು ನಿರೀಕ್ಷಿಸುವಂತೆ ನಿರೀಕ್ಷಿಸುತ್ತಿದ್ದರು. ಯಾವ ಹೊಸ ಉದ್ಯಮ ಎಂದರೂ ಮುಖ ಮುರಿಯುತ್ತಿದ್ದ ಊರಿನ ಜನ, ಹೀಗೆ ಒಮ್ಮುಖವಾಗಿ ಸುದರ್ಶನನ ಪ್ರಯತ್ನಗಳಲ್ಲಿ ಹೊಂದಿಕೊಳ್ಳುತ್ತಿದ್ದುದನ್ನು ನೋಡಿ ಸುದ ರ್ಶನ "ಮಹಾತ್ಮಾ ಗಾಂಧಿಯವರ ಹೆಸರು ಸ್ಪರ್ಶಶಿಲೆ. ಅವರ ಹೆಸ ರನ್ನು ಇಟ್ಟುಕೊಂಡು ಯಾವ ಕೆಲಸ ಪ್ರಾರಂಭಿಸಿದರೂ, ಕಾಡಿನಲ್ಲಿ ಒಬ್ಬಂಟಿಗನಾಗಿದ್ದ ರಾಮುನಿಗೆ ಅಪಾರ ಸೈನ್ಯ ಸಹಾಯ ದೊರೆತಂತೆ ಜನ ಸಹಾಯ ಒದಗುತ್ತೆ'' ಎಂದುಕೊಂಡನು. ಎರಡು ಗ್ರಾಜುಯೇಟು ಗಳೂ, "ಅಖಿಲಭಾರತ ಗ್ರಾಮೋದ್ಯೋಗ ಸಂಘದವರು ಮಾಡಿರು ವುದರ ಮೇಲೆ ನಾವು ಇನ್ನೂ ಅಭಿವೃದ್ಧಿ ಮಾಡಬೇಕು. ಗಾಣವನ್ನು ನಾವು ಇನ್ನೂ ಉತ್ತಮಪಡಿಸಬೇಕು'' ಎಂದು ಕುತೂಹಲವಾಗಿದ್ದರು.

ನಿರೀಕ್ಷಿಸಿದ ದಿನ, ಕುಂತಿದೇವಿಯ ಪೂಜೆಗೆ ಐರಾವತ ಸ್ವರ್ಗದಿಂದ ಇಳಿದಂತೆ ಗಾಣ ವಾರ್ಧಾದಿಂದ ಮಲ್ಲಿಗೆಹಳ್ಳಿಯಲ್ಲಿ ಇಳಿಯಿತು. ಮಹಾ ತ್ಮಾಗಾಂಧಿಯವರ ಯಾವ ಹೊಸ ಕ್ರಮವೂ ಇರುವಂತೆ, ಆ ಗಾಣ ನೋಡುವುದಕ್ಕೆ ಹಳೆಯ ಗಾಣದಂತೆಯೇ ತೋರುತ್ತಿದ್ದಿತು. ಆದರೆ ಅದ ರಲ್ಲಿ ಅಖಿಲ ಭಾರತದಲ್ಲಿಯೂ ಇರುವ ಎಲ್ಲಾ ಗಾಣಗಳ ಒಳ್ಳೆಯ ಅಂಶ ಗಳೂ, ಈಗ ದೇಶದಲ್ಲಿರುವ ಯಾವ ಗಾಣದಲ್ಲಿಯೂ ಇಲ್ಲದ ಕೆಲವು ಹೊಸ ಅಂಶಗಳೂ ಸೇರಿದ್ದುವು. ಗಾಣವನ್ನು, ಸಂಘದ ಕಟ್ಟಡದ ಮುಂದೆ ಕೆಡವಿದ್ದಾಯಿತು. ಅನಂತರ ಸುದರ್ಶನ ವಾಸು ತಿಮ್ಮಪ್ಪ ಇವರಿಗೆ ಗಾಣಿಗನನ್ನು ಹುಡುಕುವ ಕೆಲಸವಾಯಿತು.

ಮಲ್ಲಿಗೆಹಳ್ಳಿಯಲ್ಲಿ ನಾಲ್ಕು ಜನ ಗಾಣಿಗರಿದ್ದರು. ಆದರೆ ಅವರೆಲ್ಲಾ

ಗಾಣವಾಡುವುದನ್ನು ಬಿಟ್ಟು ಎಷ್ಟೋ ದಿನಗಳಾಗಿತ್ತು. ಒಬ್ಬ ಗಾಣಿಗ ಗಾಣವನ್ನು ಮೂಲೆಗೆ ಕೂರಿಸಿ, ಉದ್ಯೋಗಕ್ಕಾಗಿ ಬೆಂಗಳೂರು ಭದ್ರಾ ವತಿ ಮೈಸೂರುಗಳನ್ನು ತಿರುಗಿ, ಕೊನೆಗೆ ಎಲ್ಲಿಯೂ ಕೆಲಸ ದೊರಕದೆ ಮತ್ತೆ ಮಲ್ಲಿಗೆಹಳ್ಳಿಗೆ ಬಂದು ಕೂತಿದ್ದನು. ಉಳಿದ ಮೂವರು ಗಾಣಿ ಗರ ಪೈಕಿ ಇಬ್ಬರು ವ್ಯವಸಾಯದ ಮೇಲೆ ಅವಲಂಬಿಸಿದ್ದರು. ಇನ್ನು ಒಬ್ಬ ಗಾಣಿಗ ಮಾತ್ರ ವರುಷದಲ್ಲಿ ಒಂದು ತಿಂಗಳು ಎರಡು ತಿಂಗಳು ಎಳ್ಳು ಸಿಕ್ಕಿದಾಗ ದಿವಸಕ್ಕೆ ಒಂದು ಗಾಣ ಎರಡು ಗಾಣ ಕಟ್ಟುತ್ತಾ ಉಳಿದ ಕಾಲವನ್ನು ವ್ಯವಸಾಯದಲ್ಲಿ ಕಳೆಯುತ್ತಿದ್ದನು. ಹೊಸದಾಗಿ ವಾರ್ಧಾದಿಂದ ಒಂದು ಗಾಣ ಒಂದಾಗ ಅವರೂ ಏನೋ ಒಂದು ಬಗೆಯ ಕಸಬುದಾರಿ ಕುತೂಹಲದಿಂದ ಆ ಗಾಣದ ಕಡೆಗೆ ನೋಡಿದರು. ಆದರೆ ಆ ನೋಟದಲ್ಲಿ ಬಹು ಕಾಲದಿಂದ ಯುದ್ಧ ಮಾಡುವುದನ್ನು ಬಿಟ್ಟ ವನು ಹರಿತವಾದ ಕತ್ತಿಯ ಕಡೆ ನೋಡುವ ಔದಾಸೀನ್ಯ ಮಾತ್ರ ಇತ್ತು.

ಗಾಣಿಗರ ಪೈಕಿ ಒಬ್ಬರೂ ಗಾಣಕಟ್ಟಲು ಮುಂದೆ ಬರಲಿಲ್ಲ. ಅವ ರಿಗೆ ಹಿಂದಲ ಅನುಭವ ಸಾಕಾಗಿತ್ತು. ಒಂದು ತಿಂಗಳು ಗಾಣ ಹೂಡು ವುದು ; ಅನಂತರ ಎಳ್ಳು ಇಲ್ಲ ; ಆಮೇಲೆ ಮತ್ತೆ ಗಾಣ ನಿಲ್ಲಿಸುವುದು ; ಅಂಗಡಿಯಲ್ಲಿ ಜನ ಹೋಗಿ ಎಣ್ಣೆ ತೆಗೆದುಕೊಳ್ಳುವುದನ್ನು ನೋಡಿ ನಮ್ಮ ಗಿರಾಕಿ ಹೋಯಿತಲ್ಲಾ ಎಂದು ಹೊಟ್ಟೇಕಿಚ್ಚುಪಡುವುದು ; ಆದರೆ ಸಾಯಂಕಾಲ ತನಗೇ ಎಣ್ಣೆ ಬೇಕಾದಾಗ ತಾನೇ ಕುಡಿಕೆ ತೆಗೆದುಕೊಂಡು ಅಂಗಡಿಗೆ ಹೋಗುವುದು ; ಇವೆಲ್ಲಾ ಅನುಭವದಿಂದ ಗಾಣಿಗರು, ನೆಯ್ಗೆ ಯವರು ನೆಯ್ಗೆ ಬಿಟ್ಟಂತೆ ತಾವೂ ಗಾಣದ ಕಸಬು ಬಿಟ್ಟು ಮೊದಲೇ ಜಮೀನಿನ ಮೇಲೆ ಅವಲಂಬಿಸಿದ್ದ ಅನೇಕ ಜನರ ಜತೆಯಲ್ಲಿ ತಾವೂ ವ್ಯವ ಸಾಯಗಾರರಾಗಿ ಅರ್ಧ ಹೊಟ್ಟೆ ಹೊರೆಯತೊಡಗಿದ್ದರು. ಈಚೆಗೆ ಸುದ ರ್ಶನನ ಪ್ರಯತ್ನದ ಫಲವಾಗಿ ನೆಯ್ಗೆಯವರಿಗೆ ಮತ್ತೆ ಕೆಲಸ ದೊರೆ ತಿದ್ದರೂ ಆ ಕೆಲಸ ಎಷ್ಟು ಕಾಲ ನಡೆಯಬಹುದೋ ಎಂಬುದು ಅವರ ಸಂದೇಹವಾಗಿತ್ತು. ಅಲ್ಲದೆ ಹೊಸದು ಯಾವುದನ್ನೂ ಸ್ವಾಭಾವಿಕವಾ ಗಿಯೇ ತಿರಸ್ಕರಿಸುವ ಸ್ವಭಾವವುಳ್ಳ ಹಳ್ಳಿಯ ಕಸಬುದಾರರಾದುದರಿಂದ ಅವರು "ಈ ಬಗೆಯ ಹೊಸ ಗಾಣವನ್ನು ಕಟ್ಟುವುದು ನಮ್ಮ ಸಂಪ್ರ ದಾಯವಲ್ಲ. ಅದರಿಂದ ಒಳ್ಳೆಯದಾಗುವುದಿಲ್ಲ" ಎಂದರು.

ಸರಿ. ಇನ್ನು ಡೋಲು ಬಾರಿಸುವವನೂ ಗಣೆ ಹತ್ತುವವನೂ ವಾಸುವೇ ಆಗಬೇಕಾಯಿತು. ಯಕ್ಷಗಾನದ ಆಟದಲ್ಲಿ ಕೋಡಂಗಿ ವೇಷ ಹಾಕುವ ಒಬ್ಬನು "ರೈಲು ಸ್ಟೇಶನ್ ಮಾಸ್ಟರೂ ನಾನೇ, ಟಿಕೆಟ್ ಕೊಡುವವನೂ ನಾನೇ, ಪ್ರಯಾಣಿಕನೂ ನಾನೇ ರೈಲೂ ನಾನೇ ಇಂಜನ್ನೂ ನಾನೇ" ಎನ್ನುತ್ತಿದ್ದನು. ವಾಸುವಿನ ಸ್ಥಿತಿ ಹಾಗೆ ಆಯಿತು. ಅವನೇ ಗಾಣ ಹೂಡಿದನು. ಗಾಣದಲ್ಲಿ, ಎಣ್ಣೆ ಬರುವುದಕ್ಕೆ ಮುಂಚೆ 2-3 ಸಲ ನೀರು ಹಾಕಬೇಕು. ಇದೇ ಅದರ ವಿದ್ಯೆ. ಈ ನೀರು ಹಾಕುವುದೇ ಗಾಣದ ರಹಸ್ಯ. ಇದನ್ನು ಗಾಣಿಗರು ಸಾಧಾರಣವಾಗಿ ಹೇಳಿಕೊಡುವುದಿಲ್ಲ. ಆದರೆ ವಾಸು ಇದಕ್ಕೆ ಹೆದರಲೇ ಇಲ್ಲ. ಅವನಿಗೆ ವಾರ್ಧಾದಲ್ಲಿ ಎಣ್ಣೆಯಲ್ಲಿ ಶಿಕ್ಷಣ ದೊರೆತಿತ್ತಷ್ಟೆ. ಹಾಗೂ ಹೀಗೂ ಅವನು ಮೊದಲನೆಯ ಗಾಣವನ್ನು ಹೂಡಿದನು. ಆ ದಿನ ಮಲ್ಲಿಗೆಹಳ್ಳಿಯಲ್ಲಿ ರಥೋತ್ಸವ. ಈ ಹಳ್ಳಿಯ ಗ್ರಾಜುಯೇಟ್, ಹೊಸ ಗಾಂಧಿ ಗಾಣ ಹೂಡಿದಾನೆ ಎಂದು ತಿಳಿದು ಜನವೆಲ್ಲಾ ಒಂದು ಗಳಿಗೆ ಅಲ್ಲಿ ಬಂದು ಜಾತ್ರೆ ಸೇರಿಬಿಟ್ಟಿತು.

ಅದುವರೆಗೆ ಬ್ರಾಹ್ಮಣ ಗಾಣ ಹೂಡುವುದು ಎಂದರೇ ಜನಕ್ಕೆ ಆಶ್ಚರ್ಯವಾಗಿತ್ತು—ಪರೀಕ್ಷೆ ಮಾಡಿದ ಕೂಡಲೆ ಅರ್ಜಿ ಹಿಡಿದುಕೊಂಡು ಆಫೀಸು ಬಾಗಿಲಿಗೆ ತಿರುಗಬೇಕಾದ ಈ ಹುಡುಗ ಹೀಗೆ ಗಾಣಿಗನಾಗುತ್ತಿರುವುದು ಜನರಿಗೆ ಆಶ್ಚರ್ಯವಾಗಿತ್ತು. ವಾಸು ಮುರುಕಾದ ಬಿಳಿಯ ಖಾದಿ ಅರಿವೆ ಧರಿಸಿ ಗಾಂಧಿ ಟೋಪಿ ಹಾಕಿಕೊಂಡು ಅಭಿಮನ್ಯುವಿನಂತೆ ಗಾಣದ ಮೇಲೆ ಕುಳಿತ. ರಥೋತ್ಸವಕ್ಕಾಗಿ ನೆರೆದಿದ್ದ ಜನ, "ಗಾಂಧಿ ಎಂಬ ಸ್ಪರ್ಶ ಶಿಲೆ ಏನೇನು ಮಾಡುತ್ತದೋ" ಎಂದುಕೊಂಡರು. ಹದಿನೈದು ರುಪಾಯಿನ ಗುಪ್ತ ಪೋಲೀಸ, "ಸುದರ್ಶನನ ಜತೆಗೆ ಇವನೂ ಒಬ್ಬ ಸೇರಿದ. ಇವನ ಮೇಲೂ ಕಣ್ಣಿರಬೇಕು" ಎಂದುಕೊಂಡ. ಆ ದಿವಸ ಆ ಪ್ರಾಜ್ಞ "ವಾಸು ಎಂಬ ಗ್ರಾಜುಯೇಟು ಗಾಣ ಹೂಡುವ ನೆಪದಲ್ಲಿ ರಾಜನಿಗೆ ವಿರೋಧವಾಗಿ ಪ್ರಚಾರ ಮಾಡುತ್ತಿದ್ದಾನೆ" ಎಂದು ಬರೆದ. ಅದು ಪೋಲೀಸ್ ಐಜಿ ಆಫೀಸಿಗೆ ಹೋಗಿ ಅಲ್ಲಿ ಫೈಲು ಆಯಿತು. ನಮ್ಮ ದೇಶದಲ್ಲಿ ಎಷ್ಟು ದೊಡ್ಡ ಗಂಭೀರಸ್ತರ ಮೇಲೂ ರಿಪೋರ್ಟು ಮಾಡುವವನು ಹದಿನೈದು ರುಪಾಯಿನ ಅರಿವೆಕಾಲಿನವನೇ. ಅದರ

ಮೇಲೆ ಐಜಿ ಆಫ್ ಪೋಲೀಸು ಏನು ಬೇಕಾದರೂ ಮಾಡುತ್ತಾರೆ. ಅನಂತರ ಸರ್ಕಾರದವರು ಅದನ್ನೆಲ್ಲಾ ನಾವೇ ಮಾಡಿದುದು ಎಂದು ಕೊಳ್ಳುತ್ತಾರೆ.

ಹೀಗೆ ವಾಸುವೂ, ರಾಮಾನುಜನೂ ಸುದರ್ಶನನೂ ಗಾಣಗಳನ್ನು ಕಟ್ಟತೊಡಗಿದರು. ನಿತ್ಯ ಮೊದಲುಮೊದಲು ಎರಡು ಗಾಣಕಟ್ಟುತ್ತಿದ್ದುದು. ಆಮೇಲೆ ಮೂರು ನಾಲ್ಕು ಆಯಿತು. ಪ್ರತಿದಿನವೂ ಒಂದು ಮಣ ಎಣ್ಣೆ ತಯಾರಾಗಲು ಪ್ರಾರಂಭವಾಯಿತು. ರಾಮಾನುಜಂ ಮನೆಯಲ್ಲಿ ಎಣ್ಣೆ ತಂದು ಇಡುತ್ತಿದ್ದರು. ರಾಮಾನುಜಂ ತಂದೆಯವರು ವೈದೀಕರು. ವೈದಿಕರಾದವರ ಕಿವಿಗೆ ಗಾಣದ ಸದ್ದು ಬೀಳಕೂಡದಂತೆ. ರಾಮಾನುಜಂ, ಎಣ್ಣೆ ಟಿನ್ನು ನೊಗ, ಎತ್ತಿನ ಕಣ್ಣರೆ (ಕನ್ನಡಕ) ಇವುಗಳನ್ನೆಲ್ಲಾ ಮನೆಯಲ್ಲಿಡುತ್ತಿದ್ದನು. ಅವುಗಳ ಕಿಮುಟದ ವಾಸನೆ ಅವನ ತಂದೆಯವರಿಗೆ ಬಹಳ ಬೇಸರಿಕೆ ಹುಟ್ಟಿಸುತ್ತಿದ್ದಿತು. ಹಗಲು ರಾತ್ರಿ ಮಧ್ಯಾಹ್ನ ಯಾವಾಗ ನೋಡಲಿ ಎಣ್ಣೆ ಕೊಳ್ಳಲು ಬರುವವರ ಸಂತೆ ಅವನ ಮನೆಯಲ್ಲಿ ನಡೆಯುತೊಡಗಿತು. ರಾಮಾನುಜಂರವರ ತಂದೆ—ಇದು ಒಳ್ಳೆಯ ತಿಲಘಾತಕನ ಮನೆಯಾಗಿ ಹೋಯಿತೆಲ್ಲಾ, ಎಂದು ಗೊಣಗುಟ್ಟುತ್ತಿದ್ದರು. ಅವರಿಗೆ ಇವೊಂದೂ ಅರ್ಥವಾಗುತ್ತಿರಲಿಲ್ಲ.

ನಿಧಾನವಾಗಿ ಒಬ್ಬ ಗಾಣಿಗ, "ಈ ಬ್ರಾಹ್ಮಣರು ಒಕ್ಕಲಿಗರೆಲ್ಲಾ ಗಾಣ ಹೂಡುವುದಾದಮೇಲೆ ನಾನು ಯಾಕೆ ಹೂಡಬಾರದು" ಎಂದು ಯೋಚಿಸಿದನು. ಹೀಗೆ ಯೋಚಿಸಿ ಅವನು ಮೊದಲು ದಿನ ಬಂದು, ಗಾಣ ಹೂಡಿದಾಗಲೇ ಆ ಗಾಣದಲ್ಲಿ ಎಣ್ಣೆ ಹೆಚ್ಚಾಗಿ ಬರುತ್ತಿರುವುದೂ, ಎತ್ತಿಗೆ ಅದು ಸುಲಭವಾಗಿರುವುದೂ ಗೊತ್ತಾಯಿತು. ನಮ್ಮ ಜನ ಹಳೆಯದನ್ನು ಬಿಟ್ಟು ಹೊಸದನ್ನು ತೆಗೆದುಕೊಳ್ಳುವುದು ಬಹು ಕಷ್ಟ. ಒಬ್ಬ ಗಾಣಿಗ ಹೊಸಗಾಣ ಪ್ರಾರಂಭಿಸಿದರೂ ಉಳಿದವರು ಅದನ್ನು ಸುಲಭವಾಗಿ ಅನುಸರಿಸಲಿಲ್ಲ. ಕೊನೆಯಲ್ಲಿ ವಾಸುವು ಐದು ಗಾಣಗಳನ್ನು ಮಾಡಿಸಿ ಎಲ್ಲಾ ಗಾಣಿಗರಿಗೂ ಕೊಟ್ಟನು.

ಈ ಬಗೆಯ ಕೆಲಸಗಳಲ್ಲಿ ಪ್ರಾರಂಭದಲ್ಲಿ ಆಗುವ ಕಷ್ಟ ನಷ್ಟಗಳು ಮಲ್ಲಿಗೆಹಳ್ಳಿಯ ಈ ಕೆಲಸಗಾರರಿಗೂ ಉಂಟಾದುವು. ಗಾಣಿಗರು ಸ್ವಲ್ಪ ಹಣ ತಿಂದರು. ಎತ್ತು ಎಳ್ಳಿಗೆ ಹಾಕಿದ ದುಡು ಸ್ವಲ್ಪ ನಷ್ಟವಾಯಿತು.

ಪ್ರಾರಂಭದಲ್ಲಿ ಗ್ರಾಮಸ್ಥರು ವಾರ್ಧಾ ಎಣ್ಣೆ ಎಂದುಕೊಂಡು ನಿತ್ಯಾ ಎಣ್ಣೆ ಸಾಲತೆಗೆದುಕೊಂಡು ಹೋಗಲು ಪ್ರಾರಂಭಿಸಿದರು. ಕೆಲವರು "ಈ ಎಣ್ಣೆ ಬಂದಮೇಲೆ ನಮ್ಮ ಮನೆಯಲ್ಲಿ ಎಣ್ಣೆ ಖರ್ಚೇ ಜಾಸ್ತಿಯಾಯಿತು" ಎಂದರು. ಕೆಲವರು "ಈ ಎಣ್ಣೆ ತುಪ್ಪಕ್ಕಿಂತ ಚೆನ್ನಾಗಿದೆ. ಇದು ಇರುವಾಗ ತುಪ್ಪಯಾಕೆ" ಎಂದು ತೆಗೆದುಕೊಂಡು ಹೋದವರಿಗೆ ತುಪ್ಪ ಎಣ್ಣೆ ಎರಡೂ ಮನೆಯಲ್ಲಿ ಖರ್ಚಾಗಲು ಪ್ರಾರಂಭವಾದುವು. ಪ್ರಾರಂಭದಲ್ಲಿ ಎಣ್ಣೆ ಸಾಲತೆಗೆದುಕೊಂಡವರು ಸಾಲ ಕೊಡುವ ಅಂಗಡಿಗೆ ಮಾಡುವಂತೆ ಸಂಘಕ್ಕೂ ದುಡ್ಡು ಕೊಡಲಿಲ್ಲ. ಆದರೆ ಮಲ್ಲಿಗೆಹಳ್ಳಿ ಕೆಲಸಗಾರರಿಗೆ ಅದೊಂದೂ ದೊಡ್ಡ ನಷ್ಟವಾಗಿ ಕಾಣಲಿಲ್ಲ. ಹೊಸಮಾದರಿ ಗಾಣ ಊರಿನಲ್ಲಿ ಪ್ರವೇಶವಾಯಿತು. ನಿರುದ್ಯೋಗಿಗಳಾಗಿದ್ದ ಗಾಣಿಗರಿಗೆ ಕೈಬಿಟ್ಟು ಹೋಗಿದ್ದ ಉದ್ಯೋಗ ಮತ್ತೆ ದೊರಕಿತು. ಗ್ರಾಮಸ್ಥರಿಗೆ ಒಳ್ಳೆಯ ಎಣ್ಣೆ ದೊರೆಯುವಂತಾಯಿತು.

ಸುದರ್ಶನಿಗೆ ಎಲ್ಲಾವುಗಳಿಗಿಂತ ಹೆಚ್ಚಾಗಿ ಕಿರುಕುಳವುಂಟಾದುದು ಕೈಯಲ್ಲಿ ಮಾಡುವ ಕಾಗದದ ತಯಾರಿಯಲ್ಲಿ ಗಾಂಧಿಯವರು ಹೇಳುವ ಪ್ರತಿಯೊಂದು ಕೆಲಸ ಮಾಡಬೇಕಾದರೂ ಮನುಷ್ಯನಿಗೆ ಬಹಳ ಸಹನೆ ಇರಬೇಕು. ಇಲ್ಲದಿದ್ದರೆ ಆ ಕೆಲಸ ಖಂಡಿತ ಸಾಧಿಸುವುದಿಲ್ಲ. ಆದರೆ ಒಂದೊಂದು ಕೆಲಸದಲ್ಲಿ ಜಯ ಹೊಂದುತ್ತಾ ಹೋದಂತೆಲ್ಲ ಮುಂದಲ ಕೆಲಸ ಹೆಚ್ಚು ಸುಲಭವಾಗುತ್ತದೆ. ಈ ಸೌಲಾಭ್ಯ ದೊರಕಬೇಕಾದರೆ ಜನರಿಗೆ ಕೆಲಸಗಾರನಲ್ಲಿ ಹೆಚ್ಚಾದ ನಂಬಿಕೆ ಇರಬೇಕು. ಅವನ ಯೋಗ್ಯತೆ ತ್ಯಾಗಬುದ್ಧಿ ನಮ್ಮ ಜನಕ್ಕೆ ತಿಳಿಯಬೇಕು. ಹೀಗೆ ಮಲ್ಲಿಗೆಹಳ್ಳಿಯಲ್ಲಿ ಎರಡು ಕೈಗಾರಿಕೆಗಳನ್ನು ತಕ್ಕಮಟ್ಟಿಗೆ ಯಶಸ್ವಿಯಾಗಿ ಸ್ಥಾಪಿಸಿದ ಕೂಡಲೇ, ಅದೇ ಗ್ರಾಮೋದ್ಯೋಗ ಸಂಘದ ಮತ್ತೊಂದು ಕೈಗಾರಿಕೆಯಾದ ಕೈಯ್ಯಲ್ಲಿ ಮಾಡುವ ಕಾಗದದ ಕಡೆಗೆ ಜನರ ದೃಷ್ಟಿಹೋಯಿತು. ಸರಿ. ಸುದರ್ಶನ ವಾಸು ರಾಮಾನುಜ ಸೇರಿ ತೋಟದಲ್ಲಿ ವ್ಯರ್ಥವಾಗಿ ಕರಗಿಹೋಗುತ್ತಿದ್ದ ಬಾಳೆ ನಾರುಗಳನ್ನೆಲ್ಲಾ ಸೇರಿಸಿದರು. ಎಲ್ಲೆಲ್ಲಿಯೂ ಬಿದ್ದಿರುತ್ತಿದ್ದ ಹಳೆಯ ಕಾಗದಗಳನ್ನೆಲ್ಲಾ ಒಟ್ಟುಗೂಡಿಸಿದರು. ಮನೆ ಮನೆಗೂ ಒಂದೊಂದು ಹಳೆ ಬುಟ್ಟಿ ಇಟ್ಟು ಅದರಲ್ಲಿ ಕಾಗದದ ಚೂರುಗಳು ಬಟ್ಟೆ ಚೂರುಗಳು ಇವುಗಳನ್ನು ಹಾಕುವಂತೆ ಹೇಳಿದರು. ಕಾಗದದ

ಕಚ್ಚಾಮಾಲನ್ನು ಕುಟ್ಟುವುದಕ್ಕೆ ಯಾತ ಕರಗಿಸುವುದಕ್ಕೆ ಇಟ್ಟಿಗೆ ತೊಟ್ಟಿ ಬೇಯಿಸುವುದಕ್ಕೆ ಒಂದು ಕೊಳಗದಪ್ಪಲೆ, ಪಲ್ಪ್ ಎತ್ತುವುದಕ್ಕೆ ವಿಶಾಲವಾದ ವ್ಯಾಟ್ ತೊಟ್ಟಿ ಎಲ್ಲಾ ಸಿದ್ಧವಾಯಿತು. ಇವುಗಳಿಗೆಲ್ಲಾ ಹೆಚ್ಚು ಹಣ ಬೇಕಾಗುವುದಿಲ್ಲವಾಗಿ ಎಲ್ಲವೂ ಬೇಗಬೇಗ ಸಿದ್ಧವಾಯಿತು. ಬಾಳೆಯ ನಾರಿನಲ್ಲಿ ಕಾಗದ ಆಗುತ್ತೆ ಎಂದು ತಿಳಿದ ಕೂಡಲೆ ಗ್ರಾಮಸ್ಥರೆಲ್ಲಾ ಒಂದೊಂದು ಹೊರೆ ಎರಡೆರಡು ಹೊರೆ ಬಾಳೆಯ ನಾರನ್ನು ತಂದು ಸುದರ್ಶನನ ಮುಂದೆ ಹಾಕಿ "ಎಲ್ಲಿ ಇದರ ಬಾಬ್ತು ಕಾಗದ ಕೊಡು. ಬೇಕಾದರೆ ಅರ್ಧ ನೀನೆ ಇಟ್ಟುಕೊ. ಇನ್ನು ಅರ್ಧ ಕೊಡು. ಇಲ್ಲಿ ಕೂತಿರೋಣವೋ. ಆಗ ಬೇಕಾದರೆ ಇನ್ನೂ ಎಷ್ಟು ಹೊತ್ತು ಬೇಕು" ಎಂದು ಕೇಳತೊಡಗಿದರು. ಸರಿ, ಬಾಳೆನಾರನ್ನು ಚೆನ್ನಾಗಿ ಆರಿಸಿ ಚೂರು ಚೂರು ಮಾಡಿ ಅದನ್ನು 10–12 ಗಂಟೆ ಕಾಲ ಕುದಿಸಿ ಕಾಸ್ಟಿಕ್ ಸೋಡದ ಜತೆಯಲ್ಲಿ 4–5 ಗಂಟೆ ಕರಗಿಸಿ ಅದಕ್ಕೆ ಹಳೆಯ ಕಾಗದದ ಚೂರನ್ನೂ ಕರಗಿಸಿ ಸೇರಿಸಿದುದಾಯಿತು. ಅದಕ್ಕೆ ಮುಂಚೆ ಬೇಯಿಸಿದ ಕೂಡಲೆ ಯಾತದಲ್ಲಿ ಅದನ್ನು ಚೆನ್ನಾಗಿ ಕುಟ್ಟಿ ದೋಸೆಹಿಟ್ಟಿನಂತೆ ಮಾಡಿದುದಾಯಿತು. ಆಮೇಲೆ ಅದಕ್ಕೆ "ಬ್ಲೀಚಿಂಗ್ ಪೌಡರ್" ಉಬ್ಬೆಮಾಡುವ ಪುಡಿಯನ್ನು ಸೇರಿಸಿ ನೀರಿನಲ್ಲಿ ಚೆನ್ನಾಗಿ ತೊಳೆದು ಬೆಳ್ಳಗಿರುವ ಆ ದೋಸೆ ಹಿಟ್ಟನ್ನು "ವ್ಯಾಟ್" ತೊಟ್ಟಿಯಲ್ಲಿ ಹಾಕಲಾಯಿತು. ಮಾನಿ ಹುಲ್ಲಿನಲ್ಲಿ ಮಾಡಿದ್ದ ಚಾಪೆಯನ್ನು ಒಂದು ಚೌಕಟ್ಟಿನ ಮೇಲೆ ಇಟ್ಟು ಅದನ್ನು ಆ ಪಲ್ಪ್ ನೀರಿನಲ್ಲಿ ಅದ್ದಿ ಒಂದೊಂದಾಗಿ ಮೇಲಕ್ಕೆ ಎತ್ತಿದರೆ ಕಾಗದದ ಹಳೆ ಹಸಿಹಸಿಯಾಗಿ ಬರುತ್ತಿದ್ದಿತು. ಆ ಹಳೆಗಳನ್ನು ಗಳುಗಳ ಮೇಲೂ ಗೋಡೆಗಳ ಮೇಲೂ ನಡುಬೀದಿಯಲ್ಲಿಯೂ ಒಣಗಿಸಿ ಅನಂತರ ಅದಕ್ಕೆ ಮೈದಾ ಹಿಟ್ಟನ್ನು ಸವರಿ ಮತ್ತೆ ಒಣಗಿಸಿ ಅದನ್ನು ಕವಡೆಯಿಂದ ಉಜ್ಜಿ ನಯ ಮಾಡಿದರೆ ಕಾಗದವಾಗುತ್ತಿದ್ದಿತು.

ವಾಸುವಿಗೂ ರಾಮಾನುಜನಿಗೂ ಕಾಗದದ ತಯಾರಿಯಲ್ಲಿ ಪರಿಶ್ರಮವಿದ್ದಿತು. ಆದರೂ ಮೊದಲನೆಯ ದಿನದ ಕಾಗದ ಒಳ್ಳೆಯ ಹಪ್ಪಳದಂತೆ ಮುಂದವಾಗಿ ಬಂದುಬಿಟ್ಟಿತು ಅದು ಗೋಡೆಯ ಮೇಲೆ ಒಣಗದುದರಿಂದ ನಡುಬೀದಿಯಲ್ಲಿ ಅವುಗಳನ್ನೆಲ್ಲಾ ಹರಡಿ ಕೆಲಸಗಾರರು ಕಾಯುತ್ತಿದ್ದರು ಗ್ರಾಮಸ್ಥರಲ್ಲಿ ಅನೇಕರು "ಏನಪ್ಪಾ ಹಪ್ಪಳ ಒಣಗಿಸು

ತ್ತಿದ್ದೀರೋ" ಎಂದುಕೊಂಡು ನಗುತ್ತಾ ಹೋಗುತ್ತಿದ್ದರು. ಕಾಗದಗಳು ಆಚೆ ಈಚೆ ಮುದಿಚಿಕೊಂಡು ಗೂನು ಬೆನ್ನುಗಳಾಗಿದ್ದುವು, ಗಾಳಿ ಬಂದರೆ ಭರನೆ ಬೀದಿಯ ತುದಿಯುವರೆಗೆ ಹಾರಿಹೋಗುತ್ತಿದ್ದುವು. ಮಲ್ಲಿಗೆಹಳ್ಳಿ ಮಲೆನಾಡಾದುದರಿಂದ ಅಲ್ಲಿ ಬಿರುಗಾಳಿಯೂ ಹೆಚ್ಚು. ಕಾಗದಗಳು ಗಾಳಿಪಟದಂತೆ ಬೀದಿಯ ಸುತ್ತಾ ಹಾರಾಡುತ್ತಿದ್ದುವು. ಸುದರ್ಶನ ಅದರ ಹಿಂದೆ ಓಡುತ್ತಿದ್ದನು. ಕೈಗೆ ಸಿಕ್ಕಿದ ಕಾಗದವನ್ನು ಹುಡುಗರೂ ಸ್ತ್ರೀಯರೂ ತೆಗೆದುಕೊಂಡು ಓಡಿಬಿಡುತ್ತಿದ್ದರು. ಆದರೆ ಸುದರ್ಶನ ವಾಸು ರಾಮಾನುಜರು ಎದೆಗೆಡಲಿಲ್ಲ. ಸ್ವಲ್ಪಕಾಲ ದೊಳಗೆ "ಇದು ಕಾಗದವಿದ್ದರೂ ಇರಬಹುದು" ಎನ್ನುವಂತಹ ರಟ್ಟುಗಳು ತಯಾರಾದುವು. ಕೊನೆಗೆ ನಿಜವಾದ ಕಾಗದವೇ ಬಂದಿತು. ಹಳ್ಳಿಯವರಿಗೆ ಆ ಬಾಳೆಯ ನಾರು ಹೇಗೆ ಕಾಗದವಾದುದು ಬಹು ಆಶ್ಚರ್ಯವಾಗಿದ್ದಿತು. ಮಿತ್ರರು ಹೈಕೋರ್ಟಿಗೆ ಸಹ ಆ ಕಾಗದದಲ್ಲಿ ಅರ್ಜಿ ಬರೆದರು. ಹಳ್ಳಿಯವರು "ಯಂತ್ರಗಳು ಸರಿಯಾಗಿವೆ. ಇನ್ನು ಬಾಳೆಯ ನಾರಿನಿಂದ ಕಾಗದ ಬರುತ್ತದೆ. ಎಲ್ಲಿ ನಮಗೆ ಕಾಗದ ಕೊಡಿ" ಎಂದುಕೊಂಡು ನಾರಿನ ಕಂತೆಯನ್ನು ತಂದು ಕಾಗದದ ಮನೆಯ ಮುಂದೆ ಹಾಕಿದರು. ಸುದರ್ಶನನೂ ಕೆಲಸಗಾರರೂ ಅವರಿಗೆ ನಿರುತ್ಸಾಹ ವನ್ನುಂಟುಮಾಡಲಿಲ್ಲ. ಅವರ ಹತ್ತಿರವೇ ಕೆಲಸಮಾಡಿಸಿದರು. ಅವರ ಹತ್ತಿರ ಯಾತ ತುಳಿಸಿದರು; ಅವರ ಹತ್ತಿರವೇ ಪಲ್ಪು ತೊಳಿಸಿದರು. ಮುಖ್ಯವಾದ ಕೆಲಸವಾದ ಕಾಗದಗಳನ್ನು ಎತ್ತುವುದು; ರಸಾಯನ ಪದಾರ್ಥಗಳ ಅಳತೆ ಇವುಗಳನ್ನು ಮಾತ್ರ ಅವರು ಮಾಡುತ್ತಿದ್ದರು. ಇದ್ದಕ್ಕಿದಂತೆ ಕಾಗದದ ಮನೆ ಸಾರ್ವಜನಿಕರ ಕಟ್ಟಡವಾಯಿತು. ೪-೫-೬ ಗ್ರಾಮಸ್ಥರು ಬಾಳೆನಾರು ನೊಶೆಹುಲ್ಲು ಜೇಣಿ ಮುಂತಾದು ವನ್ನು ತಂದು ಉಲ್ಲಾಸದಿಂದ ಅವನ್ನು ಬೇಯಿಸಿ ತುಳಿದು ತಿಕ್ಕಿ ಬಣಗಿಸಿ ಕಾಗದ ಮಾಡಿಕೊಂಡು ಹೊರಟುಹೋಗುತ್ತಿದ್ದರು. ಹಳ್ಳಿಯುವರಿಗೆ ಕಾಗದ ಎಷ್ಟು ತಾನೆಬೇಕು? ಹೀಗೆ ಪ್ರತಿಯೊಬ್ಬನೂ ತನಗೆ ಬೇಕಾದ ಒಂದು ಎರಡು ರೀಮು ಕಾಗದ ಆಡತ ಆಡತ ಮಾಡಿಕೊಂಡು ಬಿಟ್ಟನು. ಹೀಗೆ ಖಾದಿ ಎಣ್ಣೆ ಕಾಗದ ಇವುಗಳನ್ನು ಮಲ್ಲಿಗೆಹಳ್ಳಿಯ ಗ್ರಾಮಸ್ಥರು ಕೊಳ್ಳುವುದನ್ನು ನಿಲ್ಲಿಸಿದರು.

ಈ ಯುಗದ ಪ್ರಭಾವ ಅಂತಹುದು. ವೈಸರಾಯಿಯಿಂದ ಹಿಡಿದು ಬೀದಿ ಗುಡಿಸುವವನವರೆಗೆ ನಿತ್ಯಾ ಒಂದುಸಲ ಒಂದಿಲ್ಲೊಂದು ಕಾರಣ ದಿಂದ ಗಾಂಧಿ ಧ್ಯಾನ ಬರುತ್ತದೆ. ಇದ್ದಕ್ಕಿದ್ದಂತೆ ಮಲಿಗೆಹಳ್ಳಿ ಸಾಹು ಕಾರರು ಮಿಶನ್ನಿನ ಅಕ್ಕಿ ಉಪಯೋಗಿಸಕೂಡದು. ಗಾಂಧಿ ಹೇಳಿದ್ದಾನೆ. ಕೊಟ್ಟದ ಅಕ್ಕಿ ಉಪಯೋಗಿಸಬೇಕು ಎಂದರು. ಲಕ್ಷ್ಮೀಗೌಡ್ನಮಗಳು ನಾಗಿ, ರಂಗೇಗೌಡನ ಮಗಳು ಮಾದಿ ರಿಟೈರ್ಡ್ ಹೆಡ್ಮಾಸ್ಟರ ವಿಧವೆಯಾದ ಮಗಳು ಲಕ್ಷ್ಮಿ, ಅನಂತುವಿನ ಹೆಂಡತಿ ಜಾನಕಿ ಇವರು "ಕೊಟ್ಟದ ಅಕ್ಕಿ ತಿನ್ನಬೇಕು. ಮಿಲ್‌ನಲ್ಲಿ ನಾವು ಈಗ ಅಕ್ಕಿ ಮಾಡಿಸುತ್ತಿರುವುದು ತಪ್ಪು. ಆಹಾರದಲ್ಲಿರುವ ಸಾರವೆಲ್ಲಾ ಅದರಿಂದ ನಾಶವಾಗಿ ಬಿಡುತ್ತದೆ. ನಮ್ಮ ದೇಶದಲ್ಲಿ ಮೊದಲೇ ಆಹಾರಕ್ಕೆ ಅಭಾವ. ನಮ್ಮ ಮಕ್ಕಳು ನಿಶ್ಶಕ್ತ ರಾಗಿರುವುದು, ಈ ನಿಸ್ಸಾರವಾದ ಅಕ್ಕಿಯನ್ನು ತಿಂದೆಯಂತೆ. ಮಿಲ್‌ಗೆ ಅಕ್ಕಿ ಹಾಕುವುದನ್ನು ಬಿಟ್ಟರೆ ಇಷ್ಟೊಂದು ಅಕ್ಕಿಯೂ ಬೇಕಾಗುವುದಿಲ್ಲ ವಂತೆ" ಎಂದು ಹೇಳಿಕೊಳ್ಳುತ್ತಿರುವುದನ್ನು ಕೇಳಿ ವೃದ್ಧರಾದವರಿಗೆ "ಇದೇನು ಪರಿಸ್ಥಿತಿಯಪ್ಪಾ. ಹುಡುಗಿಯರು ಹೀಗೆ ಮಾತನಾಡಿಕೊಳ್ಳು ತ್ತಾರೆ"ಎಂದು ಆಶ್ಚರ್ಯವಾಯಿತು. ಅನಂತವು ನಮ್ಮ ಮನೆಗೆ ತಿಂಗ ಳಿಗೇ ಎರಡು ಹೇರು ಭತ್ತಬೇಕು. ನಾನು ಗಾಡೀಲಿ ಹಾಕಿಕೊಂಡು ಹೋಗಿ ಮಿಲ್‌ನಲ್ಲಿಯೇ ಸುಖವಾಗಿ ಮಾಡಿಸಿಕೊಂಡು ಬಂದುಬಿಡು ತ್ತೇನೆ ಎನ್ನುತ್ತಿದ್ದವನಿಗೆ ಅವನ ಹೆಂಡತಿಯೇ "ಮಿಲ್ಲಿನ ಅಕ್ಕಿ ತಿಂದೇ ನಿಮ್ಮ ಹೊಟ್ಟೆ ಹೀಗೆ ಮುಂದಕ್ಕೆ ಬರುತ್ತಿರುವುದು"ಎಂದ ಕೂಡಲೆ ಅತ್ಯಂತ ಆಶ್ಚರ್ಯವಾಯಿತು. ಹೆಂಡತಿಗೆ ಒಂದು ಅಭಿಪ್ರಾಯ ಖಂಡಿತವಾದ ಮೇಲೆ ಗಂಡ ಎಷ್ಟು ಲಾಗಹಾಕಿದರೆ ತಾನೇ ಏನು ಪ್ರಯೋಜನ? ನಡೆ ಯುವುದು ಅವಳ ಮಾತೇ ಹೊರತು ಇವನ ಮಾತಲ್ಲ. ಎಲ್ಲಾ ಮನೆ ಗಳಲ್ಲಿಯೂ ಕೊಟ್ಟದ ಅಕ್ಕಿಯೇ ಪ್ರಾರಂಭವಾಯಿತು. ತಿಂಗಳಿಗೆ 15-20 ಗಾಡಿ ಭತ್ತ ಮಿಲ್‌ಗೆ ಹೋಗುತ್ತಿದ್ದುದು ನಿಂತುಹೋಯಿತು.

ಈಚೆಗೆ ಮಲ್ಲಿಗೆಹಳ್ಳಿಯುವರು ಈ ಬಗೆಯ ರಾಜದ್ರೋಹಗಳನ್ನೆಲ್ಲಾ ಪ್ರಾರಂಭಿಸಿದ ಮೇಲೆ ಪೋಲೀಸ್ ಅಧಿಕಾರಿಗಳು ಅಲ್ಲಿ ಹದಿನೈದು ರುಪಾ ಯಿನ ಒಬ್ಬ ಗುಪ್ತ ಪೋಲೀಸನನ್ನು ಖಾಯಂ ಆಗಿ ಇಟ್ಟಿದ್ದರು. ಅವನು ಒಂದು ವಾರಕ್ಕೆ ಎರಡು ವಾರಕ್ಕೆ ಸರ್ಕಾರಕ್ಕೆ ರಿಪೋರ್ಟು ಮಾಡುತ್ತಲೇ

ಇದ್ದನು. ಪೋಲೀಸು ಮುಖ್ಯಾಧಿಕಾರಿಗಳು ಇದು ಸರ್ಕಾರದವರು ಮಾಡಿರುವ ಮಾದರಿ ಗ್ರಾಮವಲ್ಲ. ಹೀಗಿರುವಾಗ ಇವರು ಈ ಕೆಲಸಗಳನ್ನೆಲ್ಲಾ ಮಾಡಲು ಕಾರಣವಿಲ್ಲ. ಅಂತೂ ಈ ಗ್ರಾಮದ ಮೇಲೆ ಕಣ್ಣಿಟ್ಟು ನೋಡಿಕೊಳ್ಳಬೇಕು ಎಂದು ಆಫೀಸ್ ನೋಟಿನಲ್ಲಿ ಬರೆದರು. ಈ ಕೈಗಾರಿಕೆಗಳ ಜತೆಗೆ ಚಾಪೆ ಜೇನುಗೂಡು ರೀಡಿಂಗ್ ರೂಮು ಲೈಬ್ರೇರಿ ಇವೆಲ್ಲಾ ಹೊಸ ಹೊಸ ರೂಪದಲ್ಲಿ ಸಿದ್ಧವಾದವು. ಆ ವೇಳೆಗೆ ಬರಡೋಲಿಯಲ್ಲಿ ಕರನಿರಾಕರಣ ಚಳವಳಿಯನ್ನು ಪ್ರಾರಂಭಿಸುವುದಕ್ಕೆ ಮುಂಚೆ ಇದೇ ರೀತಿ ಸ್ವಯಂ ಪರಿಪೂರ್ಣತೆಯಾಗಿದ್ದುದರಿಂದಲೂ, ಈ ವಿಷಯವನ್ನೆಲ್ಲಾ ಸರ್ಕಾರಕ್ಕೆ ತಿಳಿಸಿದವನು ಹದಿನೈದು ರುಪಾಯಿನ ಗುಪ್ತ ಪೋಲೀಸಿನವನೇ ಆದುದರಿಂದಲೂ ಸರ್ಕಾರ ಆ ಮಾತನ್ನು ನಂಬಿದರು.

---

## ೩೧. ಯಾರಿಗೂ ಬೇಡವಾದುದು

---

ಭಾರತದಲ್ಲಿ ಪರಿಸ್ಥಿತಿ ಬಿಗಡಾಯಿಸುತ್ತಾ ಇತ್ತು. ಯಾರಿಗೂ ಬೇಡವಾದ ಸೈಮನ್ ಕಮಿಶನ್ ಎಂಬ ಕೂಟ ಭಾರತಕ್ಕೆ ಬರುವುದಾಗಿದ್ದಿತು. ಮದರಾಸಿನಲ್ಲಿ ಡಾಕ್ಟರ್ ಅನಸಾರಿಯವರ ಅಧ್ಯಕ್ಷತೆಯಲ್ಲಿ ನಡೆದ ಕಾಂಗ್ರೆಸ್ ಸಭೆಯಲ್ಲಿ ಸೈಮನ್ ಸಮಿತಿಯನ್ನು ಭಾರತವಲ್ಲೆಲ್ಲಾ ಪೂರ್ಣವಾಗಿ ಬಹಿಷ್ಕರಿಸಬೇಕೆಂದು ತೀರ್ಮಾನಿಸಲಾಯಿತು. ಅದೇ ಸಭೆಯಲ್ಲಿ ಕಾಕೋರಿ ಖೈದಿಗಳಿಗೆ ರಿಯಾಯ್ತಿಯನ್ನು ತೋರಿಸದಿದ್ದುದಕ್ಕೆ ಸರ್ಕಾರವನ್ನು ಖಂಡಿಸಲಾಯಿತು. ಭಾರತಕ್ಕೆ ಪೂರ್ಣ ಸ್ವಾತಂತ್ರ್ಯವನ್ನು (ಸಾಮ್ರಾಜ್ಯಾಂತರ್ಗತವಲ್ಲ) ಸಂಪಾದಿಸುವುದೇ ಕಾಂಗ್ರೆಸ್ಸಿನ ಗುರಿ ಎಂದು ಸಾರಲಾಯಿತು. ಅನಿಬೆಸೆಂಟ್‌ರವರಿಗೂ ಅದರಲ್ಲಿ ಏನೂ ವಿರೋಧ ತೋರಲಿಲ್ಲ. ನಮ್ಮ ಗುರಿಯನ್ನು ನಾವು ಗಂಭೀರವಾಗಿ ಸ್ಪಷ್ಟಪಡಿಸಿದ್ದೇವೆ ಎಂದಳು. ಅದುವರೆಗೆ ಕಾಂಗ್ರೆಸ್ ಆವರಣದಲ್ಲಿ ಪೂರ್ಣ ಸ್ವಾತಂತ್ರ್ಯದ ಮಾತು ನಡೆದಿದ್ದರೂ ಅದು ಒಂದು ಠರಾವಾಗಿ ಅನುಮೋದನೆಯಾದದ್ದು ಮದರಾಸು ಕಾಂಗ್ರೆಸ್ಸಿನಲ್ಲಿಯೇ. ಇದಕ್ಕೆ ಜವಹರಲಾಲ್ ನೆಹರುರವರೇ ಮುಖ್ಯ ಕಾರಣ.

1928ನೇ ಇಸವಿ ಫೆಬ್ರವರಿ 3ನೆಯ ತಾರೀಖು ಯಾರಿಗೂ ಬೇಡವಾದ ಸೈಮನ್ ಕಮಿಶನ್ ಭಾರತದಲ್ಲಿ ಬಂದು ಬೊಂಬಾಯಿನಲ್ಲಿ ಇಳಿಯಿತು. ಬಂದ ದಿನ ಭಾರತವೆಲ್ಲಾ ಪೂರ್ಣವಾಗಿ ಹರತಾಳವನ್ನು ಆಚರಿಸಿತು. ಮದರಾಸಿನಲ್ಲಿ ಹೈಕೋರ್ಟಿನ ಹತ್ತಿರ ಜನ ಹೆಚ್ಚಾಗಿ ಸೇರಿದರೆಂಬ ನೆಪದ ಮೇಲೆ ಸರ್ಕಾರದವರು ಗುಂಡು ಹಾರಿಸಿದರು. ಕಲ್ಕತ್ತಾದಲ್ಲಿ ಪೋಲಿಸಿನವರು ಹರತಾಳದಲ್ಲಿ ಭಾಗವಹಿಸಿದ್ದ ವಿದ್ಯಾರ್ಥಿಗಳ ಮೇಲೆ ಬಿದ್ದರು. ಡಿಲ್ಲಿಯಲ್ಲಿ ಎಲ್ಲಾ ಕಡೆಗೂ ಕಪ್ಪು ಬಾವಟವೇ ಎದುರಾಯಿತು. ಮದರಾಸಿನಲ್ಲಿ ಜಸ್ಟಿಸ್ ಪಾರ್ಟಿ ಎನ್ನಿಸಿಕೊಳ್ಳುವವರೂ ಕೆಲವು ಮುಸ್ಲಿಂ ಸಂಸ್ಥೆಗಳೂ ಹೊರತು ಉಳಿದ ಎಲ್ಲಾ ಭಾರತವೂ ಒಮ್ಮುಖವಾಗಿ ಹರತಾಳವನ್ನು ಆಚರಿಸಿದರು. ಎಲ್ಲಾ ದೇಶಿಯ ರಾಜ್ಯಗಳಲ್ಲಿಯೂ ಹರತಾಳ ಪೂರ್ಣವಾಯಿತು

ಹೀಗೆ ಸೈಮನ್ ಕಮಿಶನ್ನಿನ ಮುಖಕ್ಕೆ ಜನ ಮಸಿಬಳಿದುದರಿಂದ ಸರ್ಕಾರಕ್ಕೆ ಪ್ರಜೆಗಳಮೇಲೆ ಒಹಳ ಕೋಪ ಬಂತು. ಅವರು ಬಲಾತ್ಕಾರವನ್ನೂ ಪಶುಶಕ್ತಿಯನ್ನೂ ಉಪಯೋಗಿಸಲು ಪ್ರಾರಂಭಿಸಿದರು. ಲಾಹೋರಿನಲ್ಲಿ ಕಮಿಶನ್‌ಗೆ ವಿರೋಧವನ್ನು ಪ್ರದರ್ಶಿಸಲು ನೆರೆದಿದ್ದ ಜನರ ಮೇಲೆ ಪೋಲಿಸರು ಲಾಠಿ ಪ್ರಯೋಗಿಸಿದರು ಲಾಲಾಲಜಪತ್‌ರಾಯ್‌ರವರಿಗೆ ಲಾಠಿಯಿಂದ ಬಲವಾದ ಹೊಡೆತ ಬಿತ್ತು. ಲಜಪತ್‌ರಾಯರ ಮರಣಕ್ಕೆ ಅವರ ಮೇಲೆ ನಡೆದ ಈ ಹೇಡಿತನದ ಅತ್ಯಾಚಾರವೂ ಒಂದು ಕಾರಣವೆಂದು ಭಾರತೀಯರು ನಂಬುತ್ತಾರೆ. ಅದು ಹೇಗಾದರೂ ಇರಲಿ. ಈ ಆಕ್ಷೇಪಣೆ ಸರ್ಕಾರದ ಮೇಲೆ ಜನ ಘಂಟಾಘೋಷವಾಗಿ ಮಾಡುತ್ತಿದ್ದರೂ ಅದನ್ನು ಪ್ರತಿಭಟಿಸುವುದಕ್ಕಾಗಿ ಅದರ ವಿಚಾರಣೆಗೆ ನಿಷ್ಪಕ್ಷಪಾತವಾದ ಸಮಿತಿಯನ್ನು ನೇಮಿಸುವ ಧೈರ್ಯವನ್ನಾಗಲಿ ನೀತಿಯನ್ನಾಗಲಿ ಸರ್ಕಾರ ತೋರಿಸಲಿಲ್ಲ. ಹಾಗೆಯೇ ಲಕ್ನೋದಲ್ಲಿಯೂ ಪೋಲೀಸರು ಅನವಶ್ಯಕವಾಗಿ ನಿರಾಯುಧರಮೇಲೆ ಅನೇಕ ಸಾರಿ ಲಾಠಿ ಪ್ರಯೋಗಿಸಿದರು. ಪೋಲಿಸಿನವರು ಜವಹರ್‌ಲಾಲ್ ನೆಹ್ರುರವರನ್ನೂ ಬಿಡಲಿಲ್ಲ. ಸವಾರರೂ ಪಾದಚಾರಗಳೂ ಆದ ಪೋಲಿಸಿನವರು, ತಮ್ಮ ಕರಕೌಶಲವನ್ನು ಗೌರವಸ್ಥರಾದ ಪ್ರಜೆಗಳ ಮೇಲೆ ತೋರಿಸಿದರು. ತಮ್ಮ ಮೈಯಿನ ಕೊಬ್ಬನ್ನು ನಿರಾಯುಧರ ಮೇಲೆ ಲಾಠಿ ಪ್ರಯೋಗಿಸುವ ಚಮತ್ಕಾರದಲ್ಲಿ

ಇಳಿಸಿಕೊಂಡರು. ಲಕ್ನೋ ನಗರ ಸ್ವಲ್ಪ ಹೆಚ್ಚು ಕಡಿಮೆ ಮಿಲಿಟರಿ ಕ್ಯಾಂಪ್ ಆಗಿಹೋಯಿತು. ಪೋಲೀಸಿನವರು ಮನೆಮನೆಗೂ ನುಗ್ಗಿ "ಸೈಮನ್‌ನೇ ತೊಲಗು" ಎಂದು ಕೂಗಿದುದಕ್ಕೆ ಗೃಹಸ್ತರನ್ನೆಲ್ಲಾ ಲಾಠಿಗಳಿಂದ ಹೊಡೆದರು. ಆದರೆ ಲಕ್ನೋ ಪ್ರಜೆಗಳು ಈ ಮದಾಂಧರ ವಿಕಟ ನರ್ತನಕ್ಕೆ ಹೆದರಲಿಲ್ಲ. ಅವರು ಎಲ್ಲವನ್ನೂ ವಿನೋದವಾಗಿಯೇ ತೆಗೆದುಕೊಂಡರು.

ಲಕ್ನೋದಲ್ಲಿ ಸೈಮನ್‌ರಿಗೆ ಒಂದು ಸತ್ಕಾರ ಕೂಟವನ್ನು ಏರ್ಪಡಿಸಿದ್ದವರು ತಾಲುಕು ಕಛೇರಿಯ ಗುಮಾಸ್ತರು! ಆ ಕೂಟದ ಸುತ್ತ ಹೆಜ್ಜೆಹೆಜ್ಜೆಗೂ ಪೋಲಿಸರು ನಿಂತುಕೊಂಡು ಬಹಿಷ್ಕಾರಕ್ಕೆ ಸಂಬಂಧಪಟ್ಟ ಒಬ್ಬರೂ ಒಳಕ್ಕೆ ಹೋಗದಂತೆ ಸರ್ಪ ಕಾವಲು ಕಾಯುತ್ತಿದ್ದರು. ಆದರೂ ಕೂಟ ನಡೆಯುತ್ತಿರುವಾಗ ಅಂತರಿಕ್ಷದಿಂದ ಸಾವಿರಾರು ಪಟಗಳೂ ಬಲೂನುಗಳೂ ಸೈಮನರೇ ತೊಲಗಿ ಎಂಬ ಬರಹದೊಂದಿಗೆ ಮಳೆಗರೆದವು. ಕಮಿಶನ್ ಪಾಟ್ನಾಕ್ಕೆ ಹೋದಾಗ 50 ಸಾವಿರ ಜನರು ಅವರಿಗೆ ವಿರೋಧವಾದ ಪ್ರದರ್ಶನವನ್ನು ಏರ್ಪಡಿಸಿದ್ದರು. ಮತ್ತೊಂದು ಕಡೆ ಕೆಲವು ಆಫೀಸು ಜವಾನರುಗಳೂ ಸರ್ಕಾರಿ ನೌಕರರೂ ಸ್ವಾಗತವನ್ನು ಏರ್ಪಡಿಸಿದ್ದರು. ಸರ್ ಜಾನ್ ಸೈಮನ್ ಕಮಿಶನ್ ಬೊಂಬಾಯಿಗೆ ಬಂದಾಗ ಅಲ್ಲಿರುವ ಇಪ್ಪತ್ತನಾಲ್ಕು "ಸರ್"ಗಳ ಪೈಕಿ ಒಬ್ಬರಾದರೂ ಅವರನ್ನು ಬಂದು ನೋಡಲಿಲ್ಲ. ಆದರೂ ಆಳುವವರು ಸತ್ಯಸಂಧರಾದುದರಿಂದ, ಸರ್ ಜಾನ್ ಸೈಮನ್‌ರು ಮಾರ್ಚಿಯಲ್ಲಿ ಭಾರತವನ್ನು ಬಿಡುವಾಗ "ಭಾರತದ ನಾನಾಭಾಗದಲ್ಲಿರುವ ಎಲ್ಲಾ ಪಂಗಡದ ಮತ್ತು ಪಕ್ಷಗಳ ಗುಂಪಿನೊಂದಿಗೆ ವಿಶೇಷವಾದ ಸಂಬಂಧವನ್ನೂ ಪರಿಚಯವನ್ನೂ ಹೊಂದಿದೆವು" ಎಂದು ಒಂದು ಹೇಳಿಕೆಯನ್ನು ಕೊಟ್ಟರು. ಸರ್ಕಾರದ ಪರವಾಗಿ ಕೊಡುವ ಹೇಳಿಕೆಗಳು ಅಭ್ಯಾಸವಾಗಿರುವ ಭಾರತೀಯರಿಗೆ ಎಷ್ಟು ದೊಡ್ಡ ಅಧಿಕಾರಿಗಳ ಬಾಯಿಂದ ಇಂತಹ ಮಾತುಗಳು ಬಂದರೂ ಆಶ್ಚರ್ಯವಾಗುವುದಿಲ್ಲ. ಭಾರತ ಸರ್ಕಾರದ ವರದಿಯು "ಪ್ರಜೆಗಳು ಸೈಮನ್ ಸಮಿತಿಯನ್ನು ಅಧಿಕಾರ ದೃಷ್ಟಿಯಿಂದ ಮಾತ್ರವೇ ಅಲ್ಲ. ಸಾಮಾಜಿಕವಾಗಿಯೂ ಬಹಿಷ್ಕರಿಸಿದರು" ಎಂದು ಹೇಳಿದೆ. ಸೈಮನ್ ಸಮಿತಿ ಈ ದೇಶಕ್ಕೂ ಬಂದಿತು. ಸುದರ್ಶನನೂ ಅವನ ಜತೆಯ ನಾಲ್ವರು

ಕೆಲಸಗಾರರೂ ರಾಜಧಾನಿಗೆ ಹೋಗಿ ಪರಶುರಾಮರ ಅಧ್ಯಕ್ಷತೆಯಲ್ಲಿ "ಸೈಮನ್‌ರವರೆ ತೊಲಗಿ" ಎಂಬ ಹಸ್ತ ಪತ್ರಿಕೆಯನ್ನೂ ಬರೆದು ಹಿಡಿದು ಕೊಂಡು ಹೋಗುತ್ತಿದ್ದರು. ಸರ್ಕಾರವರು ಎಲ್ಲರನ್ನೂ ಹಿಡಿದು ಒಳಗೆ ಕೂರಿಸಿದ್ದು ಸೈಮನರು ನಮ್ಮ ರಾಜ್ಯವನ್ನು ಬಿಟ್ಟುಹೋದಮೇಲೆ ಹೊರಕ್ಕೆ ಬಿಟ್ಟರು.

ಆಗ ನಿಜವಾಗಿಯೂ ಕರನಿರಾಕರಣ ಚಳುವಳಿಯಲ್ಲಿ ಭಾಗವಹಿಸಿ ಗೆದ್ದುದು ಎಂದರೆ ಬರಡೋಲಿ ತಾಲ್ಲೂಕು. ಗಾಂಧಿಯವರು ಹಿಂದೆ 1921ರಲ್ಲಿ ಬರಡೋಲಿಯನ್ನು ಕರನಿರಾಕರಣ ಚಳುವಳಿಗೆ ಆರಿಸಿದ್ದರು. ಆದರೆ ಆಗ ಗಾಂಧಿಯವರು ಪ್ರಯೋಗಿಸಬೇಕೆಂದಿದ್ದುದು ರಾಜಕೀಯ ವಾದ ಅಸ್ತ್ರ. ಆದರೆ 1928ರಲ್ಲಿ ಬರಡೋಲಿಯಲ್ಲಿ ನಡೆದ ಕರನಿರಾಕರಣೆ ಭೂಕಂದಾಯಕ್ಕೆ ಸಂಬಂಧಪಟ್ಟುದು. ಸಾಧಾರಣವಾಗಿ 20–30 ವರುಷ ಗಳಿಗೊಂದು ಸಲ ಭೂಕಂದಾಯದ ಪುನರ್ವಿಮರ್ಶೆ ನಡೆಯುತ್ತದೆ. ಇದರ ಫಲವೇನೆಂದರೆ, ಆಯಾ ಜಮೀನಿನ ಕಂದಾಯ ಶೇಕಡ 25 ಹೆಚ್ಚು ತ್ತದೆ. ಇಂತಹ ಪುನರ್ವಿಮರ್ಶೆಯಿಂದ ಕಂದಾಯ ಏರಿದಾಗ, ಬರಡೋಲಿಯ ರೈತರು ಈ ಕಂದಾಯವನ್ನು ಹೆಚ್ಚಿಸಕೂಡದೆಂದೂ, ಜಮೀನಿನಲ್ಲಿ ಉಂಟಾಗಿರುವ ಹೆಚ್ಚಿಗೆ ಉತ್ಪತ್ತಿಯು ತಾವು ಜಮೀನಿನ ಮೇಲೆ ಹಣ ಖರ್ಚುಮಾಡಿ ದುಡಿದುದರಿಂದ ಆದುದೆಂದೂ ಸರ್ಕಾರಕ್ಕೆ ತಿಳಿಸಿದರು. ಬರಡೋಲಿಯ ಪ್ರಜೆಗಳು ಕಂದಾಯವನ್ನು ಏರಿಸಲೇ ಕೂಡದೆಂದು ಹೇಳಲಿಲ್ಲ. "ಸರ್ಕಾರದವರು ಏರಿಸಿರುವುದು ಹೆಚ್ಚು. ಇದಕ್ಕಾಗಿ ಒಂದು ಸಮಿತಿಮಾಡಿ. ಕೂಲಿ, ರಸ್ತೆಯವೆಚ್ಚ, ಪೈರಿನಬೆಲೆ, ಕಂದಾಯ ಹಾಕಬೇಕಾದರೆ ಇರಬೇಕಾದ ಹಣಕಾಸಿನ ಮಟ್ಟ, ಏರಿಸ ಬಹುದೆ? ಏರಿಸಬಹುದಾದರೆ ಎಷ್ಟು? ಇದನ್ನೆಲ್ಲಾ ಆ ಸಮಿತಿ ನಿರ್ಣಯಿಸಲಿ. ನಾವು ಅದರಂತೆ ನಡೆಯುತ್ತೇವೆ" ಎಂದರು. ಇಂತಹ ಸಮಯಗಳಲ್ಲಿ ಮಾಡುವ ಕೆಲಸಗಳೆಲ್ಲಾ ಗುಟ್ಟಾಗಿಯೂ ಏಮ್ಮುಖವಾಗಿಯೂ ಇರುತ್ತವೆ. ಆರ್ಥಿಕ ಸರ್ವೆಗಳನ್ನು ಮಾಡುವಾಗ ಸರ್ಕಾರ ಜನರನ್ನು ಸೇರಿಸಿಕೊಂಡು ವಿಚಾರಗಳನ್ನು ಅವರಿಗೆ ತಿಳಿಸುವುದಿಲ್ಲ. ಸೆಟ್ಲಮೆಂಟ್ ಅಧಿಕಾರಿಗಳು "ಬೋರ್ಡ್ ಆಫ್ ರೆವಿನ್ಯೂ" ಗೆ ಬರೆಯುವ ವರದಿ ಸಾರ್ವಜನಿಕರಿಗೆ ಗೊತ್ತಾಗುವುದಿಲ್ಲ. ಒಂದುವೇಳೆ ಸರ್ಕಾರ ಅವುಗಳ ಸಾರಾಂಶ ಪ್ರಕಟಿ

ಸಿದರೂ ಅದು ಇಂಗ್ಲೀಷಿನಲ್ಲಿ ಇರುತ್ತದೆಯೇ ಹೊರತು ಸಾಮಾನ್ಯರಿಗೂ ತಿಳಿಯುವ ದೇಶಭಾಷೆಯಲ್ಲಿ ಇರುವುದಿಲ್ಲ. ಬರಡೋಲಿ ರೈತರ ಕಂದಾಯ ವನ್ನು ಶೇಕಡ 25 ಏರಿಸಿದ್ದರು. ಅವರು ವಿಚಾರಣಾಸಮಿತಿ ಏರ್ಪಡಿಸಿ ಎಂದು ಮಾಮೂಲಾದ ಕಾನೂನು ಬದ್ಧವಾದ ಮಾರ್ಗಗಳನ್ನೆಲ್ಲಾ ಅನುಸರಿಸಿ ಕೇಳಿದರು. ಸರ್ಕಾರ ಅಲ್ಲಾಡಲಿಲ್ಲ. ಆಗ ರೈತರು, ನಾವು ಕಂದಾಯವನ್ನು ಕೊಡುವುದಿಲ್ಲ ಎಂದರು. "ಈ ಕರನಿರಾಕರಣೆ ಕಾನೂನು ಭಂಗದಚಳುವಳಿಗೆ ಸೇರಿದುದಲ್ಲ. ಇದು ರೈತರ ಹೀನಸ್ಥಿತಿಯ ಪರಿಣಾಮ".

ಪ್ರಾರಂಭದ ದೆಸೆಯಲ್ಲಿ ಕಾಂಗ್ರೆಸ್ ಈ ಪ್ರಯತ್ನಗಳಲ್ಲಿ ಭಾಗವಹಿ ಸಲಿಲ್ಲ. ತಾಲ್ಲೂಕು ಸಭೆಯಲ್ಲಿ ರೈತರು ಕಂದಾಯ ಕೊಡುವುದಿಲ್ಲವೆಂದು ತೀರ್ಮಾನಿಸಿ ಆ ಕಾರ್ಯಕ್ರಮದ ಮುಂದಾಳುತನವನ್ನು ವಹಿಸಿಕೊಳ್ಳ ಬೇಕೆಂದು ವಲ್ಲಭಾಯಿ ಪಟೇಲನ್ನು ಪ್ರಾರ್ಥಿಸಿದರು. ಆಗ ಪಟೇಲರು ಕರ ನಿರಾಕರಣ ಚಳುವಳಿಯನ್ನು ಪ್ರಾರಂಭಿಸಿದರು. ದೇಶದ ನಾನಾ ಭಾಗದಿಂದ ಕೆಲಸಗಾರರು ಹೋಗಿ ಪಟೇಲರ ನೇತೃತ್ವದಲ್ಲಿ ಕೆಲಸಮಾಡಿ ದಂತೆ ಸುದರ್ಶನನೂ ಮಾಡಿದನು. ಆದರಲ್ಲಿ ಯಾರ ಮೇಲೂ ಕೋಪ ವಾಗಲಿ ಅಸಮಾಧಾನವಾಗಲಿ ದ್ವೇಷವಾಗಲಿ ಇರಲಿಲ್ಲ. ಚಳುವಳಿ ಹೂಡುವುದಕ್ಕೆ ಮುಂಚೆ ಪಟೇಲರು ದೀರ್ಘಕಾಲ ಆಲೋಚಿಸಿ "ಪ್ರಜೆಗಳ ಕಷ್ಟ ಸರ್ಕಾರಕ್ಕೆ ತಿಳಿಯಬೇಕಾದರೆ ಇದರ ಹೊರತು ಬೇರೆ ಮಾರ್ಗವಿಲ್ಲ ವೆಂದು" ತೀರ್ಮಾನಿಸಿದರು. ಸರ್ಕಾರ ರೈತರ ದನಗಳನ್ನು ಜಪ್ತಿಮಾಡಲು ಪ್ರಾರಂಭಿಸಿರು. ಮೊದಲು ಹೆದರುವವರ ದನಗಳನ್ನು ಹಿಡಿದರೆ ಇತರರು ದಾರಿಗೆ ಬರುತ್ತಾರೆ, ಎಂದು ಒಬ್ಬ ಸಾಧು ವೈಶ್ಯನ ದನಗಳನ್ನು ಹಿಡಿದರು. ಆದರೆ ವೈಶ್ಯ ಹೆದರಲಿಲ್ಲ ಆಗ ಸರ್ಕಾರದವರು ಒಬ್ಬ ಮುಸಲ್ಮಾನ್ ರೈತನ ದನಗಳನ್ನು ಹಿಡಿದರು. ಆದರೆ ಅವನೂ ಕಂದಾಯಕೊಡಲಿಲ್ಲ. ಹೆದರಿಸುವುದರಿಂದಲೂ, ಇತರ ಉಪಾಯಗಳಿಂದಲೂ ರೈತರು ತಮ್ಮ ನಿರ್ಧಾರವನ್ನು ಬದಲಾಯಿಸಲಿಲ್ಲ. ಸರ್ಕಾರದವರು ಆಗ ಪಠಾನ್ ಸಿಪಾಯಿಗಳನ್ನು ಕರೆಸಿದರು. ಪಠಾನ್ ಸಿಪಾಯಿಗಳ ಆವಶ್ಯಕತೆ ಇರಲೇ ಇಲ್ಲ. ಜನರು ಅಹಿಂಸಾಮಾರ್ಗಾವಲಂಬಿಗಳಾಗಿದ್ದರು. ಸರ್ಕಾರದಲ್ಲಿ ಸಾಧಾರಣ ಪೋಲಿಸು ಸಿಪಾಯಿಗಳಿಗೆ ಕಡಿಮೆ ಇರಲಿಲ್ಲ. ಆದರೂ ಸರ್ಕಾರ ಜನಕ್ಕೆ ಗಾಬರಿಯನ್ನೂ ಪೂರ್ಣವಾದ ಅಧೈರ್ಯವನ್ನೂ ಹುಟ್ಟಿಸು

ವುದಕ್ಕಾಗಿ ಕ್ರೂರಿಗಳಾದ ಪಠಾಣರನ್ನು ತಂದರು. ಸರ್ಕಾರದವರು ರೈತರ ಎಮ್ಮೆಗಳನ್ನೆಲ್ಲಾ ಹಿಡಿದು ದೊಡ್ಡಿಗೆ ಕೂಡುತ್ತಿದ್ದರು. ಎಮ್ಮೆಗಳು ಅಲ್ಲಿ ಆಹಾರದ ಅಭಾವದಿಂದಲೂ ಗಾಳಿ ಬೆಳಕು ಇಲ್ಲದೆಯೂ ಬೆಳ್ಳಗಾಗು ತ್ತಿದ್ದುವು. ರೈತರು ಇವೆಲ್ಲಾ ಲೇಡಿ ಎಮ್ಮೆಗಳು ಮೆಮ್ ಸಾಹೇಬರು ಎಂದು ಹಾಸ್ಯಮಾಡುತ್ತಿದ್ದರು. ಪಠಾಣರಿಗೆ ಜನರನ್ನು ಹೊಡೆಯು ವುದು ಬಡಿಯುವುದು ಎಮ್ಮೆಗಳನ್ನು ದೊಡ್ಡಿಗಳಿಗೆ ಅಟ್ಟುವುದು ಇದೇ ಕೆಲಸವಾಯಿತು.

ಅವರ ಎಡಗಡೆ ಪಠಾಣರು
ಅವರ ಬಲಗಡೆ ಪಠಾಣರು
ಅವರ ಮುಂದೆಯು ಪಠಾಣರು
ಅವರ ಹಿಂದೆಯು ಪೋಲೀಸರು
ಇಂತು ನಡೆಯಿತು ಮಹಿಷಸೈನ್ಯ

ಎಂದು ರೈತರು ಹಾಸ್ಯಮಾಡುತ್ತಿದ್ದರು.

ಅಖಿಲ ಭಾರತವೂ ಈ ಹೋರಾಟ ಏನಾಗುವುದೋ ಎಂದು ಕುತೂ ಹಲದಿಂದ ನಿರೀಕ್ಷಿಸುತ್ತಿದ್ದಿತು. ಸರ್ಕಾರದ ದಬ್ಬಾಳಿಕೆಯಿಂದ ಬೇಸರಿಕೆ ಗೊಂಡ ಅನೇಕ ಬೊಂಬಾಯಿ ಕೌನ್ಸಿಲ್ ಲೆಜಿಸ್ಲೆಟಿವ್ ಸದಸ್ಯರು ತಮ್ಮ ಸದಸ್ಯತನಕ್ಕೆ ರಾಜೀನಾಮೆಕೊಟ್ಟು ಚಳುವಳಿಯಲ್ಲಿ ಭಾಗವಹಿಸಿದರು. ಅಸೆಂಬ್ಲಿಯ ಅಧ್ಯಕ್ಷರಾದ ವಿಟ್ಠಲಭಾಯ್, ಪಟೇಲರು ರಾಜೀನಾಮೆ ಕೊಡುವುದಾಗಿ ಸರ್ಕಾರಕ್ಕೆ ಎಚ್ಚರಿಸಿದರು. ಕೊನೆಯಲ್ಲಿ ಸರ್ಕಾರದ ಒಂದು ಸಮಿತಿಯನ್ನು ಏರ್ಪಡಿಸಿದರು. ಇಂತಹ ಸಮಿತಿ ಏರ್ಪಡಿಸಲು ಲ್ಯಾಂಡ್ ರೆವಿನ್ಯು ಕೋಡಿನಲ್ಲಿ ಅವಕಾಶವೇ ಇರಲಿಲ್ಲ. ಆ ಸಮಿತಿ ಯವರು "ಕಂದಾಯ 25 ರಷ್ಟು ಹೆಚ್ಚಿಸಿರುವುದು ಬಹಳ ಅನ್ಯಾಯ ವೆಂದೂ, ಶೇಕಡ ಆರುಕಾಲು ಮಾತ್ರ ಹೆಚ್ಚಿಸಬಹುದೆಂದೂ ಹೇಳಿದರು. ಆದರೆ ಕೊನೆಯಲ್ಲಿ ಇತರ ವಿಷಯಗಳು ಪರಿಗಣಿತವಾದಾಗ ಕಂದಾಯ ಏರಲೇ ಇಲ್ಲ. ಮೊದಲು ಇದ್ದಂತೆಯೇ ಉಳಿಯಿತು. ಪಟೇಲ ಶ್ಯಾನು ಭೋಗರು ಈ ಚಳುವಳಿಯಲ್ಲಿ ಬಹಳ ಕೆಲಸಮಾಡಿದರು.

**1928-29ನೆಯ ವರುಷಗಳು ಭಾರತದಲ್ಲಿ ಬಹಳ ಬದಲಾವಣೆ, ಪ್ರಜಾಕಿರುಕುಳ ದಬ್ಬಾಳಿಕೆಗಳನ್ನು ನೋಡಿದವು. ಅಸೆಂಬ್ಲಿ ಬಾಂಬ್**

ಖಟ್ಲೆಯಲ್ಲಿ ಭಗತ್‌ಸಿಂಗ್ ಮತ್ತು ದತ್‌ರಿಗೆ ಜೀವಾವಧಿ ಶಿಕ್ಷೆಯಾಗಿದ್ದಿತು. ಖೈದಿಗಳು ಜೈಲಿನಲ್ಲಿ ಆರು ವಾರ ಉಪವಾಸ ಮಾಡಿದ್ದರು. ಜತೀಂದ್ರ ನಾತ್ ದಾಸ್ ಇವರ ಜತೆಯಲ್ಲಿ ಉಪವಾಸ ಮಾಡಿ ೬೪ನೇ ದಿನ ಮರಣ ಹೊಂದಿದರು. ಸೆರೆಮನೆಯಲ್ಲಿ ಭಾರತೀಯ ಖೈದಿಗಳಿಗೆ ಸರಿಯಾದ ಸೌಕರ್ಯಗಳು ಇಲ್ಲವೆಂಬುದೇ ಆ ಆತ್ಮಯಜ್ಞದ ಕಾರಣವಾಗಿದ್ದಿತು. ಅದೇ ವರುಷ ಬರ್ಮಾದಲ್ಲಿ ಪೋಂಗಿ ವಿಜಯ ಎಂಬುವರು ೧೬೪ ದಿನ ಉಪವಾಸ ಮಾಡಿ 19—9—1929ರಲ್ಲಿ ಸ್ವರ್ಗಸ್ಥರಾದರು. ಪೋಂಗಿ ವಿಜಯ ಇವರು ಬುದ್ಧಸನ್ಯಾಸಿಗಳು. ಅವರಿಗೆ ರಾಜದ್ರೋಹಕ್ಕಾಗಿ ೨೧ ತಿಂಗಳು ಕಠಿಣ ಶಿಕ್ಷೆಯಾಗಿ, ಅವರು ಅದನ್ನು ಅನುಭವಿಸಿದನಂತರ ಫೆಬ್ರವರಿ ೨೮ರಲ್ಲಿ ಬಿಡುಗಡೆಯಾಯಿತು. ಆದರೆ ಐದು ವಾರಗಳ ನಂತರ ಮತ್ತೊಂದು ರಾಜದ್ರೋಹದ ಭಾಷಣಕ್ಕಾಗಿ ಅವರನ್ನು ದಸ್ತಗಿರಿ ಮಾಡಿ, ಅವರಿಗೆ ಆರು ವರುಷ ಸಜಾ ವಿಧಿಸಿದರು. ಆದರೆ ಅದನ್ನು ಅನಂತರ ೩ ವರುಷಕ್ಕೆ ಇಳಿಸಿದರು. ಜೈಲಿನಲ್ಲಿ ಸನ್ಯಾಸಿಗಳ ಹಳದಿ ಬಟ್ಟೆಯನ್ನು ಧರಿಸಬೇಕೆಂದು ಪೋಂಗಿ ಹಠ ಹಿಡಿದು ಉಪವಾಸ ಮಾಡಿ ದರು. ಸರ್ಕಾರದವರು ಒಪ್ಪಲಿಲ್ಲ, ಉಪವಾಸದಲ್ಲಿಯೇ ಅವರ ಜೀವ ಮುಕ್ತಾಯವಾಯಿತು.

ಈ ವರುಷಗಳಲ್ಲಿ ಹಿಂದುಸ್ಥಾನೀ ಸೇವಾದಲ ಬಹಳ ಪ್ರಾಬಲ್ಯ ಹೊಂದಿತ್ತು. ಡಾಕ್ಟರ್ ಹರ್ಡಿಕರ್‌ರವರು ಇವರ ಜೀವವಾಗಿ, ತಾವು ಅಮೇರಿಕಾದಿಂದ ಬಂದ ನಂತರ ತಮ್ಮ ಬಾಳನ್ನು ಇದಕ್ಕೆ ಧಾರೆ ಎರೆದರು. ದಳದ ಮುಖ್ಯ ಕಛೇರಿ ಕರ್ನಾಟಕದಲ್ಲಿಯೂ ಅದರ ಅಕಡಮಿ (ವಿದ್ಯಾಲಯ) ಬಾಗಲಕೋಟೆಯಲ್ಲಿಯೂ ಇದ್ದಿತು. ಈ ದಳದ ಕೆಲಸ ಗಾರರನ್ನೂ, ಸ್ವಯಂಸೇವಕರನ್ನೂ ಪ್ರತಿ ಕಾಂಗ್ರೆಸ್ಸಿಗೂ ಕಳುಹಿಸುತ್ತಿ ದ್ದರು. ಸುದರ್ಶನ ದಳದ ಪ್ರಾರಂಭದಿಂದಲೂ ಅದರ ಕೆಲಸಕಾರ್ಯಗಳಲ್ಲಿ ಉತ್ಸಾಹವುಳ್ಳವನಾಗಿ ಅದರ ನೇತೃತ್ವದಲ್ಲಿ ಸ್ವಯಂಸೇವಕನಾಗಿ ಪ್ರತಿ ಯೊಂದು ಕಾಂಗ್ರೆಸ್ಸಿಗೂ ಹೋಗಿ ಬರುತ್ತಿದ್ದನು. ಹೀಗೆ ಸಾವಿರದ ಒಂಬೈನೂರ ಇಪ್ಪತ್ತೊಂಭತ್ತನೆ ವರುಷ ಮುಗಿದುಹೋಯಿತು.

ಹೀಗೆ ಸುದರ್ಶನ, ಜನರ ದೃಷ್ಟಿಯಿಂದ ಯಾವ ಒಂದು ಸಂ ಪಾದನೆಯ ಕೆಲಸದಲ್ಲಿಯೂ ತೊಡಗದೆ, ಯಾವ ಆಸ್ತಿಯನ್ನೂ ಮಾಡದೆ

" ಭಾರತದ ರೈತರು ನನಗಿಂತಲೂ ತೀರ ಬಡವರು ಈ ಬಡವರ ದೇಶದಲ್ಲಿ ಬಡವನಾಗಿರುವುದು ಅವಮಾನವಲ್ಲ " ಎಂದುಕೊಂಡು ತನ್ನ ೫೦ನೆಯ ವಯಸ್ಸನ್ನು ಮುಟ್ಟಿದ. ಇಂತಹ ಸಾರ್ವಜನಿಕರ ಕೆಲಸ ಮಾಡುವ ಮನುಷ್ಯನಿಗೆ ದೊರಕುವ ಗೌರವ ಗೊತ್ತೇ ಇದೆ. ಒಂದು ಕಡೆ ಸರ್ಕಾರಿ ಅಧಿಕಾರಿಗಳಿಗೆ, ಇವನನ್ನು ಕಂಡರೆ ಭಯವಿದ್ದರೂ ತಿರಸ್ಕಾರ. ಸಾರ್ವಜನಿಕರಿಗೆ ಒಂದು ವಿಧವಾದ " ಏನೋ ಪಾಪ, ದೇಶಸೇವೆ ಮಾಡುತ್ತಿದ್ದಾನೆ" ಎಂಬ ಭಾವ. ಅಧಿಕಾರಿಗಳು ಸಾಧ್ಯವಾದ ಮಟ್ಟಿಗೆ ಸುದರ್ಶನನ ಮಹಿಮೆಯನ್ನು ಕಮ್ಮಿ ಮಾಡಲು ಪ್ರಯತ್ನಿಸಿದರು. ಕಂದಾಯದ ರೆಮಿಶನ್ ಕೆರೆ ಕಾಮಗಾರಿ ಮುಂತಾದ ಯಾವ ವಿಚಾರಕ್ಕೆ ರೈತರು ಅಮಲ್ದಾರರ ಬಳಿಗೆ ಅರ್ಜಿ ತೆಗೆದುಕೊಂಡು ಹೋದರೂ, ಆ ಅರ್ಜಿಗಳು ಸುದರ್ಶನನ ಕೈಬರಹದಲ್ಲಿರುವುದನ್ನು ಅಮಲ್ದಾರರು ಕಂಡು—ನಮ್ಮ ದೇಶದಲ್ಲಿ ಹಳ್ಳಿಗೆ ಒಬ್ಬನಿಗೂ ಓದುವುದಕ್ಕೆ ಬರೆಯುವುದಕ್ಕೆ ಬರದ ಹಳ್ಳಿಗಳು ಅನೇಕವಾಗಿವೆ—" ನಿಮ್ಮ ಸುದರ್ಶನನ ಹತ್ತಿರಕ್ಕೆ ಹೋಗಿ; ಅವನು ನಿಮಗೆ ರೆಮಿಶನ್ ಕೊಡುತ್ತಾನೆ. ಕಂದಾಯವನ್ನೂ ಕಡಿಮೆ ಹಾಕುತ್ತಾನೆ " ಎಂದು ಗದರಿಸುತ್ತಿದ್ದರು. ಸುದರ್ಶನನ ಬರಹದ ಅರ್ಜಿಗೆ ಹೀಗೆ ಗದರಿಸುತ್ತಿದ್ದುದರಿಂದಲೂ ಸ್ವತಃ ತಾವೇ ಬರೆಯಲು ರೈತರಿಗೆ ಶಕ್ತಿಯಿಲ್ಲದುದರಿಂದಲೂ ಅಮಲ್ದಾರರಿಗೆ ಬರುವ ಅರ್ಜಿಗಳ ಸಂಖ್ಯೆಯೇ ಕಡಿಮೆಯಾಯಿತು.

ತಾವಾಗಿಯೇ, ತಾಯಿನಾಡಿನ ಸ್ವಾತಂತ್ರ್ಯಕ್ಕಾಗಿ ಹೊಡೆದಾಡುವ ಉದ್ದೇಶದಿಂದ ಧುಮುಕುವವರಿಗೇ ಆಗಲಿ, ಅಥವಾ " ಇವರು ಸ್ವಾತಂತ್ರ್ಯವಾದ ಮನೋಭಾವವುಳ್ಳವರು ಈ ದೇಶದ ಮಕ್ಕಳು ಸ್ವಾತಂತ್ರ್ಯ ಸಂತೋಷದಿಂದ ಇರಬೇಕೆಂಬುದು ಇವರ ಆಸೆ " ಎಂದು ಸರ್ಕಾರಕ್ಕೆ ಕೆಲವರ ವಿಷಯದಲ್ಲಿ ನಂಬಿಕೆ ಬಂದರೂ ಸರಿ. ಅನಂತರ ಅವರಿಗೆ ಸಂಸಾರ ಸುಖ ಶಾಂತಿ ಆಸ್ತಿಗಳು ದೂರವಾಗುತ್ತವೆ. ಪ್ರಾಣವನ್ನೂ ಕೊಡಬೇಕಾದ ಪ್ರಸಂಗ ಬರುತ್ತವೆ. ಲೋಕಮಾನ್ಯ ತಿಳಕರು ಎರಡನೆಯ ಸಲ ಆರು ವರುಷ ಕಾರಾಗ್ರಹ ಅನುಭವಿಸಿ ಬಂದ ಮೇಲೆ ಮತ್ತೆ ಅವರ ಮೇಲೆ ಸೆಕ್ಷನ್ ೧೨೪ರ ಖಟ್ಲೆ ಹಾಕಿದರು. 1920ರಿಂದ ಇವತ್ತಿನವರೆಗೆ ಸ್ವಲ್ಪ ಹೆಚ್ಚುಕಡಿಮೆ ದೇಶಭಕ್ತರೆಲ್ಲಾ ಕಾರಾಗ್ರಹದಲ್ಲಿಯೇ

ಕೊಳಿಯುತ್ತಿದ್ದಾರೆ. 1937ರಿಂದ ಇವತ್ತಿನವರೆಗೆ ಮೈಸೂರು ಕಾಂಗ್ರೆಸ್‌ನ ಜನರೆಲ್ಲಾ ಸ್ವಲ್ಪ ಹೆಚ್ಚು ಕಡಿಮೆ ಕಾರಾಗ್ರಹದಲ್ಲಿಯೇ ಕಳೆದಿದ್ದಾರೆ. ಹಿಂದೆ ಮಾಪಿಳ್ಳಾ ದಂಗೆಯ ಕಾಲದಲ್ಲಿ ಮಲಬಾರಿನಲ್ಲಿ ಇಂಗ್ಲಿಷರಿಗೆ ಪ್ರಾಣಾಪಾಯ ಉಂಟಾಗಿತ್ತು. ಎಂ. ಪಿ. ನಾರಾಯಣ ಮೆನನ್ ಎಂಬುವರು ತಮ್ಮ ಪ್ರಭಾವ ಸಾಹಸವನ್ನೆಲ್ಲಾ ಉಪಯೋಗಿಸಿ ಅವರನ್ನು ಉಳಿಸಿದರು. ಅದರ ಫಲವಾಗಿ ಅದೇ ವರುಷ ನವಂಬರ್‌ನಲ್ಲಿ ಅವರ ಮೇಲೆ ರಾಜದ್ರೋಹದ ಮೊಖದ್ದಮೆಯಾಗಿ ಅವರಿಗೆ ಜೀವಾವಧಿ ಶಿಕ್ಷೆಯಾಯಿತು. ತನ್ನ ಪೂರ್ಣ ಶಿಕ್ಷೆಯನ್ನು ಅನುಭವಿಸಿದ ನಂತರವೇ ಅಂದರೆ ಸೆಪ್ಟಂಬರ್ 1934ರಲ್ಲಿ ಅವರ ಬಿಡುಗಡೆಯಾಯಿತು. ವಾಳವನಾಡು ತಾಲ್ಲೂಕಿಗೆ ಮೂರು ವರುಷಕಾಲ ಪ್ರವೇಶಿಸುವುದಿಲ್ಲ ಎಂದು ಅವರು ಬಾಯಲ್ಲಿ ಹೇಳಿಬಿಟ್ಟಿದ್ದರೆ ಸಾಕಾಗಿದ್ದಿತು. ಸರ್ಕಾರ ಬಿಡುಗಡೆ ಮಾಡುತ್ತಿದ್ದಿತು. ಆದರೆ ನಾರಾಯಣ ಮೆನನ್ ಆ ವಾಗ್ದಾನ ಕೊಡಲಿಲ್ಲ. ಧೀರರಾಗಿ ಅನುಭವಿಸಿದರು. ಪಾರತಂತ್ರ್ಯದ ದೇಶದಲ್ಲಿ ನಡೆಯುವುದೇ ಹೀಗೆ. ಕೆಲವರು ಜೈಲಿನಲ್ಲಿಯೂ ಕೆಲವರು ಹೊರಗೂ ಇರುವುದು ಏನೋ ಒಂದು ಆಕಸ್ಮಿಕ. ಎಲ್ಲರೂ ಜೈಲಿನಲ್ಲಿದ್ದರೂ ಆಶ್ಚರ್ಯವಿಲ್ಲ.

---

## ೩೨. ಗ್ರಾಮಪುನರುಜ್ಜೀವನಕ್ಕೆ ಗ್ರಾಮಪ್ರೇಮ

---

ಮೊದಲ ವರುಷ ಮಳೆಹೋಗಿ ಸ್ವಲ್ಪ ಹೆಚ್ಚುಕಡಿಮೆ ಕ್ಷಾಮವೇ ಉಂಟಾದಾಗ ಸುದರ್ಶನ ಖಾದಿ ಮತ್ತು ಇತರ ಕೈಗಾರಿಕೆಗಳ ಮೂಲಕ ಜನರಿಗೆ ಸ್ವಲ್ಪ ದುಡ್ಡು ಕೈಯಲ್ಲಿ ಆಡುವಂತೆ ಮಾಡಿದ್ದನು. ಅದೇ ವರುಷ ಸರ್ಕಾರದವರು ಮಲ್ಲಿಗೆಹಳ್ಳಿಯಲ್ಲಿ ಒಂದು ಗ್ರಾಮ ಪುನರುಜ್ಜೀವನ ಕೇಂದ್ರವನ್ನು ಏರ್ಪಡಿಸಿ ಅದಕ್ಕೆ ನೂರು ರುಪಾಯಿ ಸಂಬಳದ ಒಬ್ಬ ಅಧಿಕಾರಿಯನ್ನು ನೇಮಿಸಿದರು. ಮಳೆ ಹೋದುದರಿಂದ ಉಂಟಾದ ಕಷ್ಟಕಾಲದಲ್ಲಿ ಜನರಿಗೆ ಯಾವದಾದರೂ ರೀತಿಯಿಂದ ಸೌಕರ್ಯವನ್ನು ಒದಗಿಸುವುದೇ. ಈ ಪುನರುಜ್ಜೀವನ ಕೇಂದ್ರದ ಮುಖ್ಯ ಉದ್ದೇಶವಾಗಿದ್ದಿತು. ಪುನರುಜ್ಜೀವನದ ಅಧಿಕಾರಿ ಮಿಸ್ಟರ್ ಅಪ್ಪನ್‌ರವರು ಪೋಲಿಸ್

ಅಧಿಕಾರಿಯಂತಹ ಜಬರ್‌ದಸ್ತು ಉಳ್ಳವರಾಗಿದ್ದರು. ಅವರು ಮಲ್ಲಿಗೆ ಹಳ್ಳಿಗೆ ಬಂದಕೂಡಲೇ ಗ್ರಾಮಪಂಚಾಯ್ತಿ ಅಧ್ಯಕ್ಷರು ಶೇಕದಾರ ಶ್ಯಾನುಭೋಗ ಇವರನ್ನೆಲ್ಲಾ ಕರೆಸಿ ಅವರಿಂದ ನಮಸ್ಕಾರವನ್ನು ಸ್ವೀಕರಿಸಿ "ನಾನು ನಿಮ್ಮ ಗ್ರಾಮವನ್ನು ಭೂಲೋಕದ ಸ್ವರ್ಗ ಮಾಡುವುದಕ್ಕೆ ಬಂದಿದ್ದೇನೆ. ಎಲ್ಲರೂ ಸಿದ್ಧರಾಗಿರಿ" ಎಂದು ಅಪ್ಪಣೆ ಕೊಡಿಸಿದರು. ಮಲ್ಲಿಗೆಹಳ್ಳಿಯ ಗ್ರಾಮಪಂಚಾಯ್ತಿ ಉತ್ಪತ್ತಿ ವರುಷಕ್ಕೆ 200 ರುಪಾಯಿಮಾತ್ರ. ಈ ಕಂದಾಯ ವಸೂಲ್ಮಾಡಿ ಸರ್ಕಾರದ ಟ್ರೆಜರಿಯಲ್ಲಿ ಇಟ್ಟುಬಿಟ್ಟರೆ ಆಮೇಲೆ ಅದನ್ನು ಮತ್ತೆ ತೆಗೆದುಕೊಳ್ಳಲು ಬ್ರಹ್ಮನೇ ಬರಬೇಕು. ಬ್ರಹ್ಮ ಬರ ಎದ್ದರೂ ಆಗುತ್ತೆ. ಹತ್ತು ರುಪಾಯಿ ಪಂಚಾಯ್ತಿ ಉಪಯೋಗಕ್ಕೆ ತೆಗೆದುಕೊಳ್ಳಬೇಕಾದರೆ ತಾಲ್ಲೂಕು ಕಛೇರಿ ಕಾಗೆಗಳಿಗೆ 5 ರುಪಾಯಿ ಕೊಟ್ಟರೂ ಸಾಕು. ಅದಕ್ಕೆ ಕಡಿಮೆಯಾದರೆ ಸಂಬಂಧಪಟ್ಟ ಗುಮಾಸ್ತರುಗಳು ಅಮಲ್ದಾರರಿಂದ, ಹಣ ವಾಪಸು ಕೊಡುವ ಕಾಗದಕ್ಕೆ ರುಜುವನ್ನೇ ಪಡೆಯುವುದಿಲ್ಲ. ಈ ಕಾರಣದಿಂದ ಪಂಚಾಯ್ತಿಗಳ ಹೆಸರಿನಲ್ಲಿ ಸರ್ಕಾರಕ್ಕೆ ವಸೂಲಾದ ಹಣ ಅಲ್ಲೆ ಉಳಿಯುತ್ತದೆ. ಊರಿನ ಚರಂಡಿ ತಿಪ್ಪೆಗುಂಡಿ ರಸ್ತೆಯಲ್ಲಿಯ ಕಂದಕಗಳು ಇದ್ದಂತೆಯೇ ಇರುತ್ತವೆ. ಹೀಗೆ ಮಲ್ಲಿಗೆ ಹಳ್ಳಿಯ ಪಂಚಾಯ್ತಿಯಲ್ಲಿ ಸುಮಾರು 400 ರುಪಾಯಿ ಉಳಿದಿತ್ತು. ಪುನರುಜ್ಜೀವನದ ಅಧಿಕಾರಿ ಮಿಸ್ಟರ್ ಅಪ್ಪನ್ ಬಂದ ಕೂಡಲೇ ಮೊದಲು ಆ ನಾಲ್ಕುನೂರು ರುಪಾಯಿಗಳನ್ನು ಖರ್ಚುಮಾಡಿ ಊರಮುಂದೆ ದನಗಳು ತಿರುಗುತ್ತಿರುವ ಸ್ಥಳದಲ್ಲಿ ಒಂದು ಕಲ್ಲಿನ ದುಂಡನ್ನೂ, ಎರಡು ಕಲ್ಲು ಕಂಬಗಳನ್ನೂ ಮಾಡಿಸಿ ನೆಟ್ಟುಬಿಟ್ಟರು. ಅಲ್ಲಿಂದ ಈಚೆಗೆ ಪ್ರತಿ ವರುಷವೂ ತಾಲ್ಲೂಕು ಸಮ್ಮೇಳನ ಹೋಬಳಿ ಸಮ್ಮೇಳನಗಳಲ್ಲಿ ಈ ಎರಡು ಕಂಬ ಮತ್ತು ಕಲ್ಲಿನದುಂಡು ಇದರ ಪ್ರಸ್ತಾಪ ಇದ್ದೇ ಇರುತ್ತದೆ.

ಪುನರುಜ್ಜೀವನದ ಅಧಿಕಾರಿ ಮಿಸ್ಟರ್ ಅಪ್ಪನ್‌ರವರು, ಕ್ಷಾಮ ಕಾಲದಲ್ಲಿ ಜನರಿಗೆ ಹಸಿವು ಹೆಚ್ಚಾಗುತ್ತಿರುವುದರಿಂದ ಆ ಹಸಿವಿನ ಭಾಧೆ ಅವರಿಗೆ ತೋರದಂತೆ ಯಾವುದಾದರೂ ವಿನೋದವನ್ನು ಏರ್ಪಡಿಸಬೇಕೆಂದೂ, ಅದಕ್ಕಾಗಿ ಒಂದುಗ್ರಾಮ ಫೋನ್ ಬೇಕೆಂದೂ ಸರ್ಕಾರಕ್ಕೆ ಬರೆದು, ಪಂಚಾಯ್ತಿಯ ಹಣದಿಂದ ಅರ್ಧ ಭಾಗ ಕೊಡಿಸಿ ಒಂದು ಗ್ರಾಮಫೋನನ್ನೂ ಅನೇಕ ಹಾಡಿನ ತಟ್ಟೆಗಳನ್ನೂ ತರಿಸಿದರು. ಗ್ರಾಮ

ಗಳಿಗೆ ಹೋಗಿ ಮೊದಲು ಗ್ರಾಮಫೋನನ್ನು ಯಾವುದಾದರೂ ಜಗಲಿಯ ಮೇಲೆ ಇಟ್ಟು ಜನ ಸೇರುವುದಕ್ಕಾಗಿ ಹಾಡುಗಳನ್ನೆಲ್ಲಾ ಹಾಡಿಸುವುದು; ಜನ ಸೇರಿದ ಮೇಲೆ ಅವರ ಸುಖಕ್ಕಾಗಿ ಮತ್ತೆ ಹಾಡುಗಳನ್ನೆಲ್ಲಾ ಹಾಡಿಸುವುದು. ಕೊನೆಯಲ್ಲಿ ಹೋಗಿ ಬರುವಾಗ ಮತ್ತೆ ಹಾಡುಗಳನ್ನು ಹಾಡಿಸುವುದು. ಹೀಗೆ ಮಿಸ್ಟರ್ ಅಪ್ಪನ್‌ರವರು ಅತ್ಯಂತ ಶ್ರದ್ಧೆಯಿಂದ ಪುನರುಜ್ಜೀವನ ಕಾರ್ಯದಲ್ಲಿ ತೊಡಗಿದರು. ಅವರ ಪ್ರಭಾವದಿಂದಲೂ ಮೇಲಧಿಕಾರಿಗಳ ಚಾಕಚಕ್ಯತೆಯಿಂದಲೂ ಮಲ್ಲಿಗೆಹಳ್ಳಿಯಲ್ಲಿ ಮಾತ್ರವೇ ಅಲ್ಲದೆ ಸುತ್ತಲ ಎಲ್ಲ ಗ್ರಾಮಗಳಲ್ಲಿಯೂ ಗ್ರಾಮಗಳ ಮುಂದೆಯೂ ಗ್ರಾಮದ ನೇರದಲ್ಲಿಯೂ, ಹಿಂದೆ ಗ್ರಾಮವಿದ್ದ ಜಾಗದಲ್ಲಿಯೂ ಮುಂದೆ ಗ್ರಾಮ ಹುಟ್ಟಿಕೊಳ್ಳಬಹುದಾದ ಸ್ಥಳದಲ್ಲಿಯೂ ಕಲ್ಲು ಮತ್ತು ಸಿಮೆಂಟಿನ ಕಂಬಗಳು ಎದ್ದು ನಿಲ್ಲಲು ಪ್ರಾರಂಭವಾದುವು. ಆ ವರುಷ ದೇಶದ ಪ್ರಜೆಗಳ ಪ್ರಾರ್ಥನಾ ಸಭೆಯಲ್ಲಿ (ಪ್ರಾರ್ಥಿಸುವುದೊಂದೇ ಈ ಸಭೆಯ ಕೆಲಸವಾಗಿದ್ದುದರಿಂದ ಅದಕ್ಕೆ ಆ ಅನ್ವರ್ಥನಾಮ ಬಂದಿದೆ) ದೇಶದ ಗ್ರಾಮಪುನರುಜ್ಜೀವನ ವಿಷಯದ ಚರ್ಚೆ ನಡೆದಾಗ ಸಂಸ್ಥಾನದ ಮುಖ್ಯಾಧಿಕಾರಿಗಳು "ಆಗಲೇ ಹದಿನಾಲ್ಕು ಸಾವಿರ ಕಂಬಗಳನ್ನು ನಿಲ್ಲಿಸಿಯಾಗಿದೆ. ಇನ್ನೂ ಗ್ರಾಮೋದ್ಧಾರ ಗ್ರಾಮೋದ್ಧಾರ ಎನ್ನುತ್ತೀರಿ. ಬಾಕಿ ದೇಶಗಳಿಗಿಂತ ಇದು ಎಷ್ಟೋ ಮುಂದುವರಿದಿದೆ. ಈ ಕಂಬಗಳ ಕಾರ್ಯ ಪೂರ್ತಿಯಾದಮೇಲೆ ಉಳಿದುವಕ್ಕೆ ಕೈಹಾಕುತ್ತೇವೆ" ಎಂದರು.

ಪುನರುಜ್ಜೀವನ ಅಧಿಕಾರಿ ಮಿಸ್ಟರ್ ಅಪ್ಪನ್‌ರವರು ಸೀಮೆ ಕೋಳಿಗಳನ್ನು ಸಾಕುವ ಕ್ರಮವನ್ನು ಜನರಿಗೆ ಹೇಳಿಕೊಡಲು ಪ್ರಾರಂಭಿಸಿದರು. ಇದು ಪುನರುಜ್ಜೀವನದ ಒಂದು ಮುಖ್ಯ ಭಾಗವಾಗಿದ್ದಿತು. ಇನ್ನೊಂದು ಪುನರುಜ್ಜೀವನ ಕೇಂದ್ರದಲ್ಲಿ ತಯಾರಾದ ಒಬ್ಬ 'ಮಿಸ್' (ಮಹಿಳೆ) ಕಸೂತಿ ಕೆಲಸ ಕಾಲುಚೀಲಗಳ ತಯಾರಿ, ಬಟ್ಟೆ ಹೊಲಿಯುವುದು ಸೂಲಗಿತ್ತಿಯ ಪ್ರಾಥಮಿಕ ಪಾಠಗಳು ಇವುಗಳನ್ನು ಕಲಿಸಲು ಬಂದಳು. ಮಿಸ್ಟರ್ ಅಪ್ಪನ್‌ರವರು ಬೌದ್ಧರೂ ಅಲ್ಲ. ಬ್ರಾಹ್ಮಣರೂ ಅಲ್ಲ. ಗಾಂಧಿಯವರ ಅನುಯಾಯಿಗಳೂ ಅಲ್ಲ. ಅಹಿಂಸಾವಾದಿಗಳೂ ಅಲ್ಲ. ಕಸೂತಿ ಕೆಲಸದ ಮಿಸ್' ಸಹ ಅಹಿಂಸಾವಾದಿಯಲ್ಲ. ಪುನರುಜ್ಜೀವನಕ್ಕಾಗಿ ಜೊತೆಗೆ ಹದಿನಾರು ರುಪಾಯಿ ಬಾಳುವ ಸೀಮೆ ಕೋಳಿಗಳನ್ನು 10-12 ಜತೆ

ತರಿಸಿದ್ದರು. ಅಪ್ಪನ್‌ರವರು ಹಳ್ಳಿಯವರಿಗೆಲ್ಲಾ “ಈ ಕೋಳಿಗಳಿಂದ ಒಂದೊಂದು ಕೋಳಿಗೆ ದಿನಕ್ಕೆ ಕೊನೆಯಪಕ್ಷ ಒಂದು ರುಪಾಯಿ ಸಿಕ್ಕುತ್ತೆ. ನಲವತ್ತು ಮೊಟ್ಟೆಹಾಕುತ್ತೆ. ದಿನಕ್ಕೆ ಒಂದು ರುಪಾಯಿ ಸಿಕ್ಕಿದರೂ ವರುಷಕ್ಕೆ 365 ರುಪಾಯಿ ಆಯಿತಲ್ಲ ಎಲ್ಲರೂ "ಒಂದೊಂದು ಜೊತೆಯಾದರೂ ಇಂತಹ ಕೋಳಿಗಳನ್ನು ಇಡಿ'' ಎಂದು ಪ್ರಚಾರಮಾಡತೊಡಗಿದರು. ಮೊದಲನೆಯದಾಗಿ ರೈತರಲ್ಲಿ ಒಂದು ಜತೆ ಕೋಳಿಗಳಿಗಾಗಿ ಕೊಡಲು ಹದಿನಾರು ರುಪಾಯಿಗಳು ಇರಲಿಲ್ಲ. ಹದಿನಾರು ರುಪಾಯಿ ಇದ್ದರೆ ಅವರಿಗೆ ಆಗ ಒಂದು ಎತ್ತು ಸಿಕ್ಕುತ್ತಿದ್ದಿತು. ಎರಡನೆಯದಾಗಿ “ಪ್ರತಿದಿನವೂ ನಲವತ್ತು ಮೊಟ್ಟೆ ಇಡುವ ಕೋಳಿಗಳನ್ನು ಊರಿನವರೆಲ್ಲಾ ಇಟ್ಟು ಬಿಟ್ಟರೆ ಆಮೇಲೆ ಆ ಮೊಟ್ಟೆಗಳಿಗೆ ಗಿರಾಕಿ ಎಲ್ಲಿ? ಪುನರುಜ್ಜೀವನದ ಅಧಿಕಾರಿಯ ಬಳಿ ಇರುವ 12 ಜತೆ ಕೋಳಿಗಳಿಂದ ನಿತ್ಯಾ ನಾನೂರು ಮೊಟ್ಟೆ ಬರುತ್ತೆಲ್ಲ. ಅದಕ್ಕೆ ಗಿರಾಕಿ ಎಲ್ಲಿ? ಸ್ವಲ್ಪ ಕಾಲ ಯೋಚಿಸೋಣ'' ಎಂದು ಸುಮ್ಮನಾದರು.

ಅದು ಏನುಕಾರಣವೋ ನಿಧಾನವಾಗಿ ಕೋಳಿಗಳು ರೋಗದಿಂದ ಸಾಯತೊಡಗಿದವು. ಅವಕ್ಕೆಲ್ಲಾ ಒಟ್ಟಿಗೆ ರೋಗಬರಲಿಲ್ಲ. 15–20 ದಿನಕ್ಕೆ ಒಂದೊಂದು ಕೋಳಿಗೆ ರೋಗಬಂದು ಅದು ಸಾಯುತ್ತಿದ್ದಿತು. ಮಲ್ಲಿಗೆ ಹಳ್ಳಿಯ ಹವ ಆ ಮೊಟ್ಟೆಗಳಿಗೆ ಒಗ್ಗದುದರಿಂದ ಕೋಳಿ ಮೊಟ್ಟೆಯಿಟ್ಟ ಎರಡು ಗಂಟೆಗಳೊಳಗಾಗಿಯೇ ಮೊಟ್ಟೆಗಳೆಲ್ಲಾ ಕರಗಿಹೋಗುತ್ತಿದ್ದವು! ಆದರೆ ಮಿಸ್ಟರ್ ಅಪ್ಪನ್‌ರವರೂ, ಕಸೂತಿಯ ಮಿಸ್ ರವರೂ ದಿನ ದಿನಕ್ಕೆ ಸೋರೆ ಬುರುಡೆಗಳಂತೆ ಊದುತ್ತಿದ್ದರು. ಆ ವರುಷ ಪ್ರಜಾ ಪ್ರಾರ್ಥನಾ ಸಭೆಯಲ್ಲಿ ಸಾಹೇಬರೊಬ್ಬರು ಕೋಳಿ ಸಾಕುವ ವಿಚಾರ ಪ್ರಸ್ತಾಪಿಸಿ ಆ ಉದ್ಯೋಗದಲ್ಲಿ ಬ್ರಾಹ್ಮಣರು ಎಷ್ಟು ಜನ ಇದ್ದಾರೆ ಎಂಬುದಾಗಿ ಕೇಳಿದಾಗ ಉತ್ತರವನ್ನು ಕೊಡಬೇಕಾದ ಸಂಬಂಧಪಟ್ಟ ಅಧಿಕಾರಿಗಳು, ಮಲ್ಲಿಗೆಹಳ್ಳಿಯ ಮಿಸ್ಟರ್ ಅಪ್ಪನ್‌ರವರನ್ನು ಸ್ಮರಿಸಿ ಕೊಂಡು “ಕೋಳಿ ಸಾಕುವ ಅಧಿಕಾರಕ್ಕೆ ಬ್ರಾಹ್ಮಣರನ್ನೂ ಜೈನರು ವೀರಶೈವರನ್ನೂ ನೇಮಿಸುವುದು ಸೂಕ್ತವೆಂಬುದು ಸರ್ಕಾರದವರ ಗಮನಕ್ಕೆ ಬಂದಿದೆ'' ಎಂದು ಜವಾಬುಕೊಟ್ಟರು.

ಮಳೆಯ ಅಭಾವದಿಂದ ಆ ವರುಷ ಉಂಟಾದ ಬರಗಾಲದ ನಿವಾ

ರಣೆಗೆ, ಪುನರುಜ್ಜೀವನದ 'ಮಿಸ್' ರವರು ಕಸೂತಿ ಕೆಲಸವನ್ನು ಹಳ್ಳಿಯ ಸ್ತ್ರೀಯರೆಲ್ಲಾ ಪ್ರಾರಂಭಿಸಬೇಕೆಂದು ಬೋಧಿಸಿದರು. ಮಿಸ್‌ರವರು 4-5 ದಿನ ಕಷ್ಟಪಟ್ಟು ಫ್ರಾಕ್ (ಮಕ್ಕಳ ಅಂಗಿಗೆ) ತೋಳಿನ ಮೇಲೆ ಎದೆಯ ಮೇಲೆ ಕತ್ತಿನಮೇಲೆ, ಕಸೂತಿ ದಾರದಲ್ಲಿ ಬಣ್ಣ ಬಣ್ಣದ ಹೂವುಗಳನ್ನು ಹಾಕಿ ತೋರಿಸಿ "ನೋಡಿ ಇಂತಹ ಒಂದು ಫ್ರಾಕಿಗೆ ಕಸೂತಿ ಹಾಕಿದರೆ ಎರಡು ಎರಡುವರೆ ರುಪಾಯಿ ಸಿಕ್ಕುತ್ತೆ. ತಿಂಗಳಿಗೆ ನಾಲ್ಕು ಫ್ರಾಕು, ಐದು ಫ್ರಾಕು ಮಾರಿದರೆ ಒಂದು ಹಳ್ಳಿಯ ಸಂಸಾರದ ಜೀವನವಾಗುತ್ತೆ" ಎಂದಳು. ಅಂಗಿಗಳನ್ನು ಹೊಲಿಸುವುದಕ್ಕೇ ಶಕ್ತಿಯಿಲ್ಲದೆ ಹೊಲಿದ ಅಂಗಿಗಳನ್ನೂ ರವಿಕೆಗಳನ್ನೂ ತಂದು ಸಿಗೆ ಹಾಕಿಕೊಳ್ಳುವ ರೈತರಿಗೂ ಹಳ್ಳಿಯವರಿಗೂ ಕಸೂತಿ ಫ್ರಾಕಿಗೆ ಎರಡುವರೆ ರುಪಾಯಿ ಕೊಡಲು ಎಲ್ಲಿದೆ ಗತಿ? ಆದರೆ 'ಮಿಸ್'ಗೆ ಅದು ತಿಳಿಯಲೇ ಇಲ್ಲ. ಅವಳು ಒಂದು ಫ್ರಾಕಿಗೆ ಇಷ್ಟು ಆದರೆ, ಇಷ್ಟು ಫ್ರಾಕಿಗೆ ಎಷ್ಟು, ಮುಂತಾದ ಲೆಕ್ಕ ಹಾಕುವುದರಲ್ಲಿಯೇ ತನ್ನ ಕಾಲವನ್ನೆಲ್ಲಾ ಕಳೆಯುತ್ತಿದ್ದಳು.

ಮಿಸ್ಸ್‌ರು "ಪ್ರತಿಯೊಬ್ಬರೂ ನಿಮ್ಮ ನಿಮ್ಮ ಬಟ್ಟೆಗಳನ್ನು ನಿಮ್ಮ ಮನೆಗಳಲ್ಲಿಯೇ ಹೊಲಿದುಕೊಳ್ಳಿ. ಪ್ರತಿಮನೆಯಲ್ಲಿಯೂ ಒಂದು ಹೊಲಿಯುವ ಯಂತ್ರ ಇರಲಿ. ನಿಮ್ಮ ಮಕ್ಕಳ ಬಟ್ಟೆಗಳನ್ನೆಲ್ಲಾ ಅದರಲ್ಲಿಯೇ ಹೊಲಿಯಿರಿ. ಇದರಿಂದ ನಿಮಗೆ ವರ್ಷೇ ವರ್ಷೇ ಹೊಲಿಯುವವನಿಗೆ ಕೊಡುವ ಕೂಲಿ ಉಳಿಯುತ್ತದೆ. ಒಬ್ಬ ವ್ಯಕ್ತಿಗೆ ವರ್ಷಕ್ಕೆ ಹೊಲಿಯುವ ಕೂಲಿ ಎರಡು ರುಪಾಯಿಯಾದರೂ ಆಗುತ್ತದೆ. ಅಂದರೆ ನಿಮ್ಮ ಹಳ್ಳಿಗೆ ಸಾವಿರಾರು ರುಪಾಯಿ ಉಳಿಯಿತು" ಎಂದಳು. "ಮಿಸ್ಸ್" ಈ ಲೆಕ್ಕ ಹಾಕುವಾಗ "ಪ್ರತಿಯೊಂದು ಮನೆಯವರೂ ಒಂದೊಂದು ಹೊಲಿಯುವ ಯಂತ್ರ ತೆಗೆದುಕೊಂಡರೆ ಅದಕ್ಕೆ ಬೇಕಾದ ಭಂಡವಾಳ ಎಲ್ಲಿಂದ ಬರಬೇಕು. ಊರಿನಲ್ಲಿರುವ ಒಬ್ಬ ದರ್ಜಿಗೇ ಕೆಲಸವಿಲ್ಲದಿರುವಾಗ ಇನ್ನು ಮನೆ ಮನೆಗೂ ಹೊಲಿಯುವ ಯಂತ್ರ ಇಟ್ಟರೆ ಹೇಗೆ? ಬಟ್ಟೆ ಕೊಳ್ಳಲು ದುಡ್ಡು ಇಲ್ಲದ ಜನ ಹೊಲಿಯುವ ಯಂತ್ರದಿಂದ ಹೊಲಿಯುವುದು ಏನನ್ನು" ಇವೊಂದನ್ನೂ ಕುರಿತು ಯೋಚಿಸಲೇ ಇಲ್ಲ. ಇದರ ಜತೆಗೆ "ಮಿಸ್ಸ್" "ಕಾಲು ಚೀಲಗಳನ್ನು ಮಾಡಿ. ರಾತ್ರಿ ದೀಪದ ಬತ್ತಿಗಳನ್ನು ಮಾಡಿ" ಎಂದು ಬೋಧಿಸಿದಳು. ಅದಕ್ಕೆ ಆವಶ್ಯಕವಾದ ಒಂದು ಯಂತ

ವನ್ನೂ ಸರ್ಕಾರಕ್ಕೆ ಹೇಳಿ ತರಿಸಿ ಇಟ್ಟಳು. ಮಿಸ್ಟರ್ ಅಪ್ಪನ್‌ರವರು ಜನರಿಗೆ ಹಗ್ಗ ಹೊಸೆಯಲು ಬೋಧಿಸಿದರು. ಕುಡಿಯುವುದಕ್ಕೆ ಬೇಕಾದ ಒಂದು ಬಿಂದಿಗೆ ನೀರಿಗಾಗಿ ಅರ್ಧ ಮೈಲಿ ಹೋಗಬೇಕಾದ ಹಳ್ಳಿಗಳ ವರಿಗೆ "ನಿಮ್ಮ ಹಿತ್ತಲಿನಲ್ಲಿ ಹಣ್ಣಿನ ಗಿಡಗಳನ್ನು ಹಾಕಿ. ಹಣ್ಣು ದೇಹಕ್ಕೆ ಬಹಳ ಒಳ್ಳೆಯದು. ದಿವಸಕ್ಕೆ ಒಂದು ಸೇಬಿನ ಹಣ್ಣನ್ನು ತಿಂದರೆ ಡಾಕ್ಟರು ನಿಮ್ಮ ಹತ್ತಿರಕ್ಕೇ ಬರುವುದಿಲ್ಲ" ಎಂದರು. ಹೀಗೆ ಮಿಸ್ಟರ್ ಅಪ್ಪನ್ ಮತ್ತು ಮಿಸ್‌ಗವರ ಗ್ರಾಮಪುನರುಜ್ಜೀವನ ಕಾರ್ಯ ಅತ್ಯಂತ ವೇಗದಿಂದ ಸಾಗತೊಡಗಿತು. ಆ ವರುಷದ ಪ್ರಜಾ ಪ್ರಾರ್ಥನಾ ಸಭೆಯಲ್ಲಿ ದೇಶದಲ್ಲಿ ಕ್ಷಾಮ ನಿವಾರಣೆಗಾಗಿ ಕೈಕೊಂಡ ವಿಷಯಗಳನ್ನು ಕುರಿತು ಪ್ರತಿನಿಧಿಗಳು ಕೇಳಿದಾಗ ಮಲ್ಲಿಗೆಹಳ್ಳಿ ಒಂದರಲ್ಲಿಯೇ ಸರ್ಕಾರದವರು ವರುಷಕ್ಕೆ ಐದು ಸಾವಿರ ರುಪಾಯಿ ಖರ್ಚು ಮಾಡಿರುವುದಾಗಿ ತಿಳಿಯಿತು. ಯಾರೋ "ತಲೆ ಹರಟೆ ಸದಸ್ಯರು" ಖರ್ಚಿನ ವಿವರ ಕೇಳಿದಾಗ ಹೀಗೆ ಉತ್ತರ ದೊರೆಯಿತು.

| | | |
|---|---|---|
| ಅಪ್ಪನ್‌ರವರ ಸಂಬಳ | 100 × 12 | 1200—0—0 |
| ಅಲೋಯನ್ಸ್ | 30 × 12 | 360—0—0 |
| ಮಿಸ್‌ಳ ಸಂಬಳ | 70 × 12 | 840—0—0 |
| ಅಲೋಯನ್ಸ್ | 20 × 12 | 240—0—0 |
| ಗುಮಾಸ್ತರು 25ರೂನಂತೆ ಇಬ್ಬರು | 50 × 12 | 600—0—0 |
| ಆಳುಗಳು 3 ಜನ 10ರೂ. ನಂತೆ | 30 × 12 | 360—0—0 |
| ಕಂಬಗಳು | | 100—0—0 |
| ದುಂಡು | | 400—0—0 |
| ಗ್ರಾಮಫೋನ್ | | 300—0—0 |
| ಹೊಲಿಯುವ ಯಂತ್ರ | | 350—0—0 |
| ಕಾಲುಚೀಲದ ಯಂತ್ರಗಳು | | 250—0—0 |
| ಫರ್ನಿಚರ್ | | 150—0—0 |
| ಬಾಡಿಗೆ—ಎರಡು ಮನೆ | 10 × 2 × 12 | 240—0—0 |
| ಕಂಟಿನ್‌ಜೆನ್‌ಸಿ | | 90—0—0 |
| ಪೌಲ್ಟ್ರಿಗೆ ಕೊಂಡ ಕೋಳಿಗಳು | | 192—0—0 |
| | | 5672—0—0 |

ಇದಲ್ಲದೆ ಪುನರುಜ್ಜೀವನದ ಅಪ್ಪನ್‌ರವರು ಮಾಡಿದ "ಹಾಲು ಹೆಚ್ಚಾಗಿ ಕುಡಿಯಿರಿ ಹಣ್ಣುಗಳನ್ನು ತಿನ್ನಿರಿ. ಪ್ರತಿ ದಿನವೂ ಸಾಬೂನು ಹಾಕಿ ಬಟ್ಟೆ ಒಗೆದುಕೊಳ್ಳಿ. ಸೊಳ್ಳೆಪರದೆ ಇಲ್ಲದೆ ಮಲಗಲೇ ಬೇಡಿ" ಮುಂತಾದ ಅದ್ಭುತವಾದ ಕಾರ್ಯಗಳ ವಿಚಾರಗಳನ್ನೂ ಸರ್ಕಾರದವರು ಸಭೆಯ ಗಮನಕ್ಕೆ ತಂದು "ಈ ವರುಷ ಒಂದು ಗ್ರಾಮಕ್ಕೆ ಇಷ್ಟು ಖರ್ಚು ಮಾಡಿದ್ದೇವೆ. ಮುಂದಲ ವರುಷ ಸಂಖೆ ಹೆಚ್ಚಿಸುತ್ತೇವೆ" ಎಂದು ಹೇಳಿದರು. ಒಬ್ಬಿಬ್ಬರು ಸದಸ್ಯರು "ಈ ಹಣದ ಪೈಕಿ ರೈತರಿಗೆ ಒಂದು ಕಾಸೂ ಮುಟ್ಟಿಲ್ಲ" ಎಂದು ಏನೋ ಗೊಣಗುಟ್ಟಿದರು. ಆದರೆ ಸರ್ಕಾರದವರು ಸರಿಯಾದ ಸಮಜಾಯಿಷಿ ಕೊಟ್ಟರು. ಅತೃಪ್ತರು ಎಲ್ಲಾ ಕಡೆಯೂ ಇದ್ದೇ ಇರುತ್ತಾರೆ!

ಅದೇ ವರುಷ ಸುದರ್ಶನ ವಾಸು ರಾಮಾನುಜ ಇವರೂ ಮಲ್ಲಿಗೆ ಹಳ್ಳಿಯಲ್ಲಿ ಅಖಿಲ ಭಾರತ ಗ್ರಾಮೋದ್ಯೋಗ ಸಂಘದ ಮಾರ್ಗದಲ್ಲಿ ಉದ್ಯೋಗಗಳನ್ನು ಜನರಿಗೆ ಒದಗಿಸಿ ಕ್ಷಾಮ ನಿವಾರಣೆಗಾಗಿ ಪ್ರಯತ್ನಿಸಿದರು. ಆದರೆ ಮಿಸ್ಟರ್ ಅಪ್ಪನ್‌ರವರಿಗೆ ಇದ್ದಂತೆ ಇವರಿಗೆ ಹಣದ ಸೌಕರ್ಯವಿರಲಿಲ್ಲ. ಇವರು ಸುಮಾರು ಎರಡು ಸಾವಿರ ರುಪಾಯಿಗಳಿಗಿಂತ ಹೆಚ್ಚು ಹಣ ವೆಚ್ಚಮಾಡಲು ಸಾಧ್ಯವಾಗಲಿಲ್ಲ. ಆ ಹಣ ಹೀಗೆ ವಿಲೆಯಾಯಿತು.

| | |
|---|---|
| ನೂಲುವವರಿಗೆ ಕೂಲಿ | 700—0—0 |
| ನೆಯ್ಗೆಯವರಿಗೆ ,, | 650—0—0 |
| ಗಾಣಿಗನಿಗೆ ,, | 230—0—0 |
| ಕೊಟ್ಟಣದ ಅಕ್ಕಿ ಮಾಡಿದ ಸ್ತ್ರೀಯರಿಗೆ | 90—0—0 |
| ಕಾಗದದ ಕೆಲಸದವರಿಗೆ ಕೂಲಿ | 150—0—0 |
| | 1820—0—0 |

ಹೀಗೆ ಒಂದು ಕಡೆಯಲ್ಲಿ ಪುನರುಜ್ಜೀವನದ ಮಿಸ್ಟರ್ ಅಪ್ಪನ್‌ರವರೂ ಮತ್ತೊಂದು ಕಡೆಯಲ್ಲಿ ಗ್ರಾಮ ಉದ್ಯೋಗ ಸಂಘಗಳವರೂ ಕೆಲಸ ಮಾಡಿದುದರಿಂದ ಕ್ಷಾಮಕಾಲವಾದರೂ ಕಂದಾಯ ಚೆನ್ನಾಗಿ ವಸೂಲಾಯಿತೆಂದು ಜಿಲ್ಲಾಧಿಕಾರಿಗಳೇ ಒಪ್ಪಬೇಕಾಯಿತು.

# ೩೩. ನಮ್ಮ ಉಪ್ಪು

1930ನೆಯ ಸಂವತ್ಸರ ಜನವರಿ 26ನೆ ತಾರೀಖು ಅಖಿಲ ಭಾರತ ಕಾಂಗ್ರೆಸ್ ಮಹಾಸಭೆಯ ವರ್ಕಿಂಗ್ ಸಮಿತಿಯವರು ಸ್ವಾತಂತ್ರ್ಯ ಘೋಷಣೆಯ ಠರಾವನ್ನು ದೇಶದ ಮೇಲೆ ಪ್ರಚಾರ ಮಾಡಿ ಪೂರ್ಣ ಸ್ವಾತಂತ್ರ್ಯ ದಿನವನ್ನಾಗಿ ಆಚರಿಸಬೇಕೆಂದು ಸೂಚಿಸಿದರು. ಪ್ರತಿ ಯೊಬ್ಬ ಭಾರತೀಯನೂ ಈ ಪ್ರತಿಜ್ಞೆ ತೆಗೆದುಕೊಳ್ಳಬೇಕೆಂದು ಅಪ್ಪಣೆ ಮಾಡಿದರು.

"ಪ್ರಪಂಚದ ಇತರ ಜನಾಂಗಗಳಿಗೆ ಹೇಗೋ ಹಾಗೆ ಭಾರತಕ್ಕೂ ಪೂರ್ಣವಾಗಿ ಬೆಳೆಯಲು ಅವಕಾಶ ಬೇಕು. ಜೀವನದ ಆವಶ್ಯಕತೆಗಳೂ, ತಮ್ಮ ಶ್ರಮದ ಫಲಗಳೂ, ಸ್ವಾತಂತ್ರ್ಯವೂ ಭಾರತೀಯರ ಹಕ್ಕು. ಯಾವುದಾದರೂ ಸರ್ಕಾರ ಜನರ ಈ ಹಕ್ಕುಗಳನ್ನು ಕಿತ್ತುಕೊಂಡರೆ ಅಥವ ಜನರ ಮೇಲೆ ದಬ್ಬಾಳಿಕೆ ನಡೆಸಿದರೆ, ಜನರಿಗೆ ಆ ಸರ್ಕಾರವನ್ನು ಬದಲಾಯಿಸುವ ಅಥವ ನಾಶಮಾಡುವ ಹಕ್ಕು ಇದೆಯೆಂದು ನಂಬುತ್ತೇವೆ. ಭಾರತದಲ್ಲಿ ಬ್ರಿಟಿಷ್ ಸರ್ಕಾರ ಭಾರತೀಯರ ಸ್ವಾತಂತ್ರ್ಯ ವನ್ನು ನಾಶಮಾಡಿರುವುದು ಮಾತ್ರವಲ್ಲದೆ ಜನರ ಲೂಟಿಯ ಮೇಲೆಯೇ ಅವಲಂಬಿಸಿ ಭಾರತವನ್ನು ಆರ್ಥಿಕ ರಾಜಕೀಯ ಸಾಂಸ್ಕೃತಿಕ ನೀತಿಯ ದೃಷ್ಟಿಯಿಂದ ಪೂರ್ಣವಾಗಿ ತುಳಿದಿದೆ; ಆದುದರಿಂದ ಭಾರತವು ಬ್ರಿಟಿಷ್ ಸಂಬಂಧವನ್ನು ತ್ಯಜಿಸಿ ಪೂರ್ಣ ಸ್ವರಾಜ್ಯ ಅಥವ ಸ್ವಾತಂತ್ರವನ್ನು ಹೊಂದಬೇಕೆಂದು ನಂಬುತ್ತೇವೆ.

"ಭಾರತವು ಆರ್ಥಿಕವಾಗಿ ನಾಶವಾಗಿದೆ. ನಮ್ಮ ದೇಶದವರಿಂದ ಸರ್ಕಾರ ಹೊಂದುವ ಉತ್ಪತ್ತಿಗೂ, ಜನರ ಉತ್ಪತ್ತಿಗೂ ಒಂದಕ್ಕೊಂದಕ್ಕೆ ಸಂಬಂಧವೇ ಇಲ್ಲ. ನಮ್ಮ ಸಾಮಾನ್ಯ ಉತ್ಪತ್ತಿ ದಿನಕ್ಕೆ ಒಂದೂ ಮುಕ್ಕಾಲು ಆಣೆ. ನಾವು ಕೊಡುವ ಹೆಚ್ಚಾದ ಕಂದಾಯದ ಪೈಕಿ ಶೇಕಡ 20 ಜಮೀನು ಕಂದಾಯ, ಶೇಕಡ 3 ಉಪ್ಪಿನ ಮೇಲಿನ ಕಂದಾಯ. ಈ ಕಂದಾಯ ಮುಖ್ಯವಾಗಿ ಬಡವರ ಮೇಲೆಯೇ ಬೀಳುತ್ತದೆ."

"ನೂಲುವುದು ಮುಂತಾದ ಕೈಗಾರಿಕೆಗಳೆಲ್ಲಾ ನಾಶವಾಗಿವೆ ರೈತರು ವರುಷಕ್ಕೆ ನಾಲ್ಕು ತಿಂಗಳು ಸೋಮಾರಿಗಳಾಗಿದ್ದಾರೆ. ಕೈಗಾರಿಕೆ ಗಳಿಲ್ಲದುದರಿಂದ ಅವರ ಬುದ್ಧಿ ಮಂಕಾಗಿದೆ. ಬಾಕಿ ದೇಶಗಳಲ್ಲಿ ಹೀಗೆ ನಾಶವಾದ ಕೈಗಾರಿಕೆಗಳ ಸ್ಥಳಗಳಲ್ಲಿ ಬೇರೆ ಕೈಗಾರಿಕೆಗಳನ್ನು ಅವರಿಗೆ ಒದಗಿಸಿದ್ದಾರೆ. ಇಲ್ಲಿ ಅಂತಹುದೇನೂ ಆಗಿಲ್ಲ".

"ಸುಂಕ, ನೋಟು ಇವುಗಳು, ರೈತನಿಗೆ ಹೆಚ್ಚು ಹೊರೆ ಬೀಳು ವಂತೆಯೇ ಏರ್ಪಾಡಾಗಿವೆ. ನಮ್ಮ ದೇಶಕ್ಕೆ ಆಮದಾಗುವುದರ ಪೈಕಿ ಬ್ರಿಟಿಷರ ಸಾಮಾನುಗಳೇ ಹೆಚ್ಚು. ಸುಂಕದ ಏರ್ಪಾಡಿನಲ್ಲಿ ಬ್ರಿಟಿಷರಿಗೆ, ಬಹಳ ಅನುಕೂಲವಾಗುವಂತೆ ಪಕ್ಷಪಾತವಾಗಿದೆ. ಸುಂಕದ ಆ ಉತ್ಪತ್ತಿ ರೈತನ ಹೊರೆಯನ್ನು ಕಡಿಮೆಮಾಡಲು ಉಪಯೋಗವಾಗುತ್ತಿಲ್ಲ. ಅಸಾಧ್ಯ ಸಂಬಳದ ಅಧಿಕಾರಿಗಳ ಸರ್ಕಾರ ನಡೆಸಲು ಉಪಯೋಗವಾಗು ತ್ತಿದೆ. ಹಣವಿನಿಮಯ ಇನ್ನೂ ಮನಸ್ಸಿಗೆ ಬಂದಂತೆ ಆಗಿದೆ. ಇದರಿಂದ ಈ ದೇಶದ ಅನೇಕ ಕೋಟಿ ರುಪಾಯಿಗಳು ಇಂಗ್ಲೆಂಡಿಗೆ ಹೋಗಿವೆ".

"ರಾಜಕೀಯವಾಗಿ, ಬ್ರಿಟಿಷರ ಕಾಲದಲ್ಲಿಯಂತೆ ಭಾರತದ ಯೋಗ್ಯತೆ ಮತ್ತಾವಾಗಲೂ ಇಷ್ಟು ಕಡಿಮೆಯಾಗಲಿಲ್ಲ. ಯಾವ ಸುಧಾರಣೆಗಳಿಂದಲೂ ಜನರಿಗೆ ನಿಜವಾದ ರಾಜಕೀಯ ಜವಾಬ್ದಾರಿ ದೊರೆತಿಲ್ಲ. ಪರದೇಶದ ಶಕ್ತಿಗೆ ನಮ್ಮಲ್ಲಿಯ ಅತ್ಯಂತ ಶ್ರೇಷ್ಠರೂ ಕೂಡ ತಲೆ ಬಗ್ಗಿಸಬೇಕಾಗಿದೆ. ಮಾತಿನ ಸ್ವಾತಂತ್ರ್ಯ, ಸಭೆಯ ಸ್ವಾತಂತ್ರ್ಯ ಇವೆಲ್ಲಾ ನಮಗೆ ಇಲ್ಲವೇ ಇಲ್ಲ. ನಮ್ಮ ದೇಶದ ಅನೇಕ ಬಾಂಧವರು ಈ ದೇಶಕ್ಕೆ ಬರಲು ಅವಕಾಶವಿಲ್ಲವಾಗಿದೆ. ಅವರು ದೇಶಭ್ರಷ್ಟರಾಗಿ ಪರದೇಶಗಳಲ್ಲಿ ಅಲೆಯುತ್ತಿದ್ದಾರೆ. ನಮ್ಮವರ ಆಳುವ ಶಕ್ತಿಯೆಲ್ಲಾ ನಾಶವಾಗುತ್ತಿದೆ. ಜನರು ಸಣ್ಣ ಸಣ್ಣ ಹಳ್ಳಿಯ ಹುದ್ದೆಗಳಿಂದಲೂ ಗುಮಾಸ್ತೆಗಳಿಂದಲೂ ತೃಪ್ತರಾಗಬೇಕಾಗಿದೆ.

"ನಮ್ಮ ವಿದ್ಯೆಯು, ನಮ್ಮ ಸಂಸ್ಕೃತಿಯು ತಳಹದಿ ಆವರಣ ಗಳನ್ನೆಲ್ಲಾ ಹರಿದು ಹಾಕಿದೆ. ಈ ವಿದ್ಯೆ, ನಮ್ಮನ್ನು ಬಂಧಿಸುವ ಸಂಕೋಲೆಗಳನ್ನೇ ನಾವು ಅಪ್ಪಿಕೊಳ್ಳುವಂತೆ ಮಾಡಿದೆ.

"ಬಲಾತ್ಕಾರವಾಗಿ ನಮ್ಮ ಆಯುಧಗಳನ್ನು ಕಿತ್ತುಕೊಂಡಿದ್ದಾರೆ. ನಮ್ಮ ಪುರುಷತ್ವವೇ ನಾಶವಾಗಿದೆ. ಪರದೇಶದ ಸೈನ್ಯ ಇಲ್ಲಿ ಇರುವುದ

ರಿಂದ ನಮ್ಮ ಹೊಡೆದಾಡುವ ಶಕ್ತಿ ಪೂರ್ಣವಾಗಿ ನಾಶವಾಗಿದೆ. ನಾವು ನಮ್ಮನ್ನು ಸಂರಕ್ಷಿಸಿಕೊಳ್ಳಲಾರೆವು. ಕಳ್ಳರಿಂದಲೂ ದುಷ್ಟರಿಂದಲೂ ನಮ್ಮ ಹೆಂಡತಿ ಮಕ್ಕಳನ್ನು ಸಂರಕ್ಷಿಸಿಕೊಳ್ಳಲಾರೆವು ಎಂಬ ಅಧೈರ್ಯ ಉಂಟಾಗಿದೆ.

"ನಮ್ಮದೇಶಕ್ಕೆ ಈ ನಾಲ್ಕು ಬಗೆಯ ಅನ್ಯಾಯಗಳನ್ನು ಮಾಡಿರುವ ಈ ಆಡಳಿತಕ್ಕೆ ಇನ್ನು ಒಗ್ಗಿರುವುದು ಮನುಷ್ಯನಿಗೂ ದೇವರಿಗೂ ವಿರೋಧ ವಾದ ಪಾಪವೆಂದು ನಾವು ನಂಬುತ್ತೇವೆ. ನಮ್ಮ ಸ್ವಾತಂತ್ರವನ್ನು ಹೊಂದುವ ಮಾರ್ಗ ಹಿಂಸೆಯ ಮೂಲಕವಲ್ಲವೆಂಬುದನ್ನು ನಾವು ಪರಿ ಗಣಿಸಿದ್ದೇವೆ. ಆದುದರಿಂದ ನಾವು ಬ್ರಿಟಿಷ್ ಸರ್ಕಾರದೊಂದಿಗೆ ಎಲ್ಲಾ ಸಹ ಕಾರವನ್ನೂ ಹಿಂದಕ್ಕೆ ತೆಗೆದುಕೊಳ್ಳುತ್ತೇವೆ. ಕಂದಾಯವನ್ನು ಕೊಡದಿರು ವುದೇ ಮೊದಲಾದ ಇತರ ಎಲ್ಲಾ ಕಾನೂನುಭಂಗ ಚಳವಳಿಗಳಿಗೂ ಸಿದ್ಧ ರಾಗುತ್ತೇವೆ. ಸರ್ಕಾರಕ್ಕೆ ನಮ್ಮ ಸಹಕಾರವನ್ನೂ ಕಂದಾಯವನ್ನೂ ಕೊಡುವ ನಿಲ್ಲಿಸಿಬಿಟ್ಟರೆ, ಎಂತಹ ಉದ್ರೇಕ ಸ್ಥಿತಿಯಲ್ಲಿಯೂ ಹಿಂಸಾ ಮಾರ್ಗಕ್ಕೆ ನಾವು ಹೋಗದಿದ್ದರೆ ಈ ಅಮಾನುಷ ಸರ್ಕಾರ ಕೊನೆಗಾಣು ತ್ತದೆ ಎಂದು ನಮ್ಮ ನಂಬಿಕೆ. ಆದುದರಿಂದ ನಾವು ಪೂರ್ಣ ಸ್ವರಾಜ್ಯ ಸ್ಥಾಪನೆಗಾಗಿ ಕಾಂಗ್ರೆಸ್‌ನವರು ಆಗಿಂದಾಗ್ಗೆ ತಿಳಿಸುವ ಕಾರ್ಯಗಳನ್ನು ನಡೆಸುವುವೆಂದು ಈ ಮೂಲಕ ಪ್ರತಿಜ್ಞೆ ಮಾಡುತ್ತೇನೆ."

ಸ್ವಾತಂತ್ರ್ಯ ಪ್ರತಿಜ್ಞೆ, ದೇಶದಲ್ಲಿ ಉಂಟಾಗಿದ್ದ ಉತ್ಸಾಹವನ್ನೂ ಒಳ ಶಕ್ತಿಯನ್ನೂ ಪ್ರಕಟಿಸಿತು. ಕಾಂಗ್ರೆಸ್ ವರ್ಕಿಂಗ್ ಸಮಿತಿ ಉಪ್ಪಿನ ಸತ್ಯಾಗ್ರಹವನ್ನು ನಡೆಸಬೇಕೆಂದು ನಿರ್ಣಯಿಸಿತು. 1930 ನೇ ಫೆಬ್ರವರಿ 14 ನೆಯ ತಾರೀಖಿನ ವೇಳೆಗೆ ಉಪ್ಪಿನ ಸತ್ಯಾಗ್ರಹದ ಮೇಲೆ ಬೇಕಾದಷ್ಟು ಪ್ರಚಾರ ನಡೆದಿದ್ದಿತು. ಉಪ್ಪಿನ ಮೇಲೆ ಹೇರಿದ ಕರದ ಮೂಲ ಭಾರ ತೀಯರಿಗೆ ಚೆನ್ನಾಗಿ ಗೊತ್ತಾಯಿತು. ಉಪ್ಪಿನ ಸಮಿತಿಯವರು 1836 ರಲ್ಲಿಯೇ, ಇಂಗ್ಲಿಷ್ ಉಪ್ಪು ಭಾರತದಲ್ಲಿ ಮಾರಾಟವಾಗಬೇಕಾದರೆ ಭಾರತದ ಉಪ್ಪಿಗೆ ಕಂದಾಯ ವಿಧಿಸಬೇಕೆಂದು ಸೂಚಿಸಿದ್ದರು. ಇಂಗ್ಲಿಷ್ ಹಡಗುಗಳು ಲಿವರ್‌ಪೂಲ್ ಸಮುದ್ರ ತೀರದಲ್ಲಿ ಭಾರತಕ್ಕೆ ಬರಲು ಸಿದ್ಧವಾಗಿ ನಿಂತಿದ್ದವು. ಆದರೆ ತಕ್ಕಷ್ಟು ಕನಿಷ್ಟ ಪ್ರಮಾಣದ ಸ್ವಲ್ಪ ಹೊರೆಯಿಲ್ಲದೆ (keel blast) ಅವು ಸಮುದ್ರದಲ್ಲಿ ಬರುವುದು

ಕಷ್ಟವಾಗಿದ್ದಿತು. ಕೆಲವು ಕಾಲ ಅವು ಕಲ್ಕತ್ತಾದಲ್ಲಿಯ ಚೌರಂಗೀ ರಸ್ತೆಗೆ, ಹಡಗಿನಲ್ಲಿ ಲಂಡನ್ನಿನ ಸ್ಟ್ರ್ಯಾಂಡ್‌ನಿಂದ ಮಣ್ಣು ತುಂಬಿಕೊಂಡು ಬಂದು ಹಾಕಿದವು! ಒಂದು ಕಾಲದಲ್ಲಿ ಹುಗ್ಲಿಯಿಂದ ಕಾಳಿಘಾಟ್ ದೇವಸ್ಥಾನದವರೆಗೆ ಕಾಲುವೆಯಾಗಿ ಹೋಗುತ್ತಿದ್ದುದನ್ನು ಲಂಡನ್ ಮಣ್ಣಿನಿಂದ ತುಂಬಿ ಭರ್ತಿ ಮಾಡಿದರು.

ಇರುವ ವಿಚಾರ ಇದು. ಭಾರತಕ್ಕೆ ಬರುವ ಸಾಮಾನಿಗಿಂತ ಭಾರತದಿಂದ ಹೊರಕ್ಕೆ ಹೋಗುವ ಪದಾರ್ಥ ಯಾವಾಗಲೂ ಹೆಚ್ಚು. 1925 ರಲ್ಲಿ ಭಾರತಕ್ಕೆ ಬಂದುದು 219 ಕೋಟಿ ರುಪಾಯಿನ ಸಾಮಾನು; ಭಾರತದಿಂದ ಹೋದುದು 316 ಕೋಟಿ ರುಪಾಯಿನದು. ಅಷ್ಟೇ ಅಲ್ಲ. ಭಾರತದಿಂದ ಹೋಗುವ ಸಾಮಾನುಗಳು ಆಹಾರ ಧಾನ್ಯ ಕಚ್ಚಾ ಮಾಲು ಗಳಾದುದರಿಂದ ಅವುಗಳಿಗೆ ಹಡಗಿನಲ್ಲಿ ಹೆಚ್ಚು ಸ್ಥಳ ಬೇಕು. ಇಂಗ್ಲೆಂಡಿ ನಿಂದ ಭಾರತಕ್ಕೆ ಬರುವ ಸಾಮಾನುಗಳು ತಯಾರಾದ ಪದಾರ್ಥ ಗಳಾದುದರಿಂದ ಹಡಗಿನಲ್ಲಿ ಹೆಚ್ಚು ಸ್ಥಳ ಬೇಕಿಲ್ಲ. ಅಂತೂ ಒಟ್ಟಿನಲ್ಲಿ ಭಾರತದಿಂದ ಇಂಗ್ಲೆಂಡಿಗೆ ಹೋಗುವ ಸಾಮಾನುಗಳಿಗೆ, ಇಂಗ್ಲೆಂಡಿ ನಿಂದ ಭಾರತಕ್ಕೆ ಬರುವ ಸಾಮಾನುಗಳಿಗೆ ಬೇಕಾಗುವುವರ ಐದರಷ್ಟು ಹಡಗುಗಳು ಬೇಕಾಗುತ್ತವೆ. ಈ ಹಡಗುಗಳು ಬರಿದಾಗಿ ತಾನೇ ಬರಬೇಕು. ಆದುದರಿಂದ "ಇಂಗ್ಲೆಂಡಿನ ಚೆಶೈರ್ (Cheshire ಉಪ್ಪನ್ನು ಭಾರತಕ್ಕೆ ತುಂಬಿ, ಅಲ್ಲಿಯ ಉಪ್ಪಿನ ಬೆಲೆ ಇದಕ್ಕಿಂತ ಅಧಿಕ ವಾಗುವಂತೆ ಅದರಮೇಲೆ ಕಂದಾಯ ವಿಧಿಸಿದರು" ಗಾಂಧಿಯವರು ಉಪ್ಪಿನ ಸತ್ಯಾಗ್ರಹ ಹೂಡುವುದು ತಿಳಿದ ಕೂಡಲೇ ಸರ್ಕಾರ "ಉಪ್ಪಿನ ತಯಾರಿಕೆಗೆ ಸೌದೆ ಖರ್ಚು ಇಷ್ಟು. ಕೂಲಿ ಇಷ್ಟು. ನೀವು ಇಲ್ಲಿ ಮಾಡುವ ಉಪ್ಪಿಗೆ ಸೀಮೆಯಿಂದ ಬರುವ ಸುಂಕ ಕೊಡುವ ಉಪ್ಪಿಗಿಂತ ಹೆಚ್ಚು ಬೆಲೆ ಬೀಳುತ್ತದೆ" ಎಂದು ಪ್ರಕಟಿಸಿದರು. ಈ ಹೊಡೆದಾಟದ ಮಟ್ಟವೇ ಬೇರೆ ಎಂಬುದು ಅವರಿಗೆ ತಿಳಿಯಲಿಲ್ಲ.

ಭಾರತದಲ್ಲಿ ಎಲ್ಲಿ ನೋಡಿದರೂ ಉಪ್ಪಿನ ಮಾತೇ ಮಾತಾಯಿತು. ಗಾಂಧಿಯವರು ವೈಸರಾಯರಿಗೆ ಬರೆದ ಪತ್ರಕ್ಕೆ ಸರಿಯಾದ ಪ್ರತ್ಯುತ್ತರ ಬರಲಿಲ್ಲ. ಉಪ್ಪಿನ ಸತ್ಯಾಗ್ರಹವನ್ನು ಪ್ರಾರಂಭಿಸುವುದಕ್ಕೆ ಮುಂಚೆ ಗಾಂಧಿಯವರು, ವೈಸರಾಯರ ಪ್ರತ್ಯುತ್ತರವನ್ನು ನೋಡಿ ಹೀಗೆ ಹೇಳಿದರು.

"ನಾನು ನಮಸ್ಕಾರಮಾಡಿ ಅನ್ನ ಕೇಳಿದೆ. ಆದರೆ ನನಗೆ ದೊರಕಿದುದು ಕಲ್ಲು. ಬ್ರಿಟಿಷ್ ಜನಾಂಗ ಹಿಂಸೆಗೆ ಮಾತ್ರವೇ ಬಗ್ಗುವುದು. ಆದುದರಿಂದ ವೈಸರಾಯರ ಪ್ರತ್ಯುತ್ತರದಿಂದ ನನಗೆ ಆಶ್ಚರ್ಯವಾಗಿಲ್ಲ. ಭಾರತದಲ್ಲಿ ಇರುವ ಶಾಂತಿ, ಸೆರೆಮನೆಯ ಶಾಂತಿ ಮಾತ್ರ. ಭಾರತ ಒಂದು ದೊಡ್ಡ ಸೆರೆಮನೆ. ಈ ಕಾನೂನನ್ನು ನಾನು ಪ್ರತಿಭಟಿಸುತ್ತೇನೆ. ದೇಶದ ಉಸಿರನ್ನು ಹಿಂಡುತ್ತಿರುವ ಈ ಬಲಾತ್ಕಾರವಾದ ದುಃಖದಾಯಕವಾದ ಶಾಂತಿಯನ್ನು ಒಡೆಯುತ್ತೇನೆ."

ಗಾಂಧಿಯವರ ಸಂದೇಶ ದೇಶದ ಮೂಲೆ ಮೂಲೆಗೂ ಹಬ್ಬಿತು ಜನರ ಉತ್ಸಾಹ ಅಸಾಧ್ಯವಾಗಿದ್ದಿತು. ಚಳುವಳಿ ದೈಹಿಕವಾಗಿದ್ದುದು ಬುದ್ಧಿಯ ಮಟ್ಟವನ್ನೂ ಅನಂತರ ನೀತಿಯ ಮಟ್ಟವನ್ನೂ ಹೊಂದಿತು. ಬೆಸೆಂಟರವರು "ಇದೊಂದು ನಕಲಿ ಹೊಡೆದಾಟ" ಎಂದು ಹಾಸ್ಯ ಮಾಡಿದರು. ಒಂದು ವಾರ ಸರ್ಕಾರ ಏನೂ ಮಾಡಲಿಲ್ಲ. ಇದರಿಂದ ಏನಾಗುತ್ತದೆ ಎಂಬಂತೆ ಇದ್ದಿತು. ಆದರೆ ಇದ್ದಕ್ಕಿದ್ದಂತೆ ಸರ್ಕಾರದ ಆ ಶಾಂತಿ ಭಂಗವಾಯಿತು. ಪಟೇಲರು, ಗಾಂಧಿಯವರಿಗಿಂತ ಮುಂಚೆ ಖೈದಿಗಳಾದರು. "ನಿಮ್ಮ ಮದುವೆ ಹಬ್ಬದ ವೈಭವಗಳನ್ನೆಲ್ಲಾ ಬಿಡಿ. ಅತ್ಯಂತ ಶಕ್ತವಾದ ಸರ್ಕಾರದೊಂದಿಗೆ ಕಾದಾಡುವ ಜನರಿಗೆ ಈ ವಿನೋದದಲ್ಲಿ ತೊಡಗಲು ಅವಕಾಶವಿಲ್ಲ. ನಾಳೆಯಿಂದ ನೀವು ನಿಮ್ಮ ಮನೆಗಳನ್ನು ಬೀಗಹಾಕಿಕೊಂಡು ಬಯಲಿನಲ್ಲಿಯೇ ವಾಸಿಸಬೇಕಾಗಬಹುದು. ನಿಮಗೆ ಬಂದಿರುವ ಹೆಸರಿಗೆ ನೀವು ಅರ್ಹರಾಗಬೇಕಾದರೆ ನೀವು ಇನ್ನೂ ಬಹಳ ಕೆಲಸಮಾಡಬೇಕು. ಈಗ ಪ್ರಾರಂಭಿಸಿಯಾಯಿತು. ಹಿಂದಿರುಗುವಂತೆ ಇಲ್ಲ ........ ನಿಮ್ಮ ಜಮೀನು ಹೋಗಬಹುದೆಂದು ಕೆಲವರಿಗೆ ಭಯವಿದೆ. ನನಗೆ ಗೊತ್ತು. ಆದರೆ ಕ್ಷಿಆದೇನು ಮಹಾ. ಈ ಜಮೀನುಗಳನ್ನು ಅವರೇನು ಇಂಗ್ಲೆಂಡಿಗೆ ಎತ್ತಿಕೊಂಡು ಹೋಗುತ್ತಾರೆಯೆ? ಜಮೀನುಗಳನ್ನೆಲ್ಲಾ ಸರ್ಕಾರ ತೆಗೆದುಕೊಳ್ಳಲಿ. ಅನಂತರ ಗುಜರಾತು ಪೂರ್ತ ನಿಮ್ಮ ಬೆಂಬಲದಲ್ಲಿರುವುದು. ಧೈರ್ಯವಾಗಿರಿ ನಿಮ್ಮ ಹಳ್ಳಿಗಳನ್ನೆಲ್ಲಾ ಚೆನ್ನಾಗಿ ವ್ಯವಸ್ಥೆಮಾಡಿ, ಇತರರಿಗೆ ಮೇಲುಪಂಗ್ತಿಯಾಗಲಿ; ಪ್ರತಿಯೊಂದು ಹಳ್ಳಿಯೂ ಒಂದು ಸೈನ್ಯ ಶಿಬಿರವಾಗಬೇಕು. ಶಿಸ್ತು ವ್ಯವಸ್ಥೆ ಇವು ಯುದ್ಧದ ಅರ್ಧಭಾಗ. ಸರ್ಕಾರಕ್ಕೆ ಒಂದೊಂದು ಊರಿಗೆ ಒಬ್ಬ

ಶ್ಯಾನುಭೋಗ ಒಬ್ಬ ಪಟೇಲ ಇದ್ದಾರೆ. ಆದರೆ ನಮಗೆ ಊರಿನಲ್ಲಿರುವ ಪ್ರತಿಯೊಬ್ಬರೂ ಒಬ್ಬ ಸ್ವಯಂಸೇವಕರೆ" ಎಂಬ ಪಟೇಲರ ನುಡಿ ಭಾರತಕ್ಕೆ ಸೈನ್ಯಾಧಿಕಾರಿಯ ಅಪ್ಪಣೆಯಂತೆ ಕೇಳಿಸಿತು. ಡಂಡಿ ಮಹಾ ಪ್ರಸ್ಥಾನದ ಚಲನ ಚಿತ್ರವನ್ನು—ಗಾಂಧಿಯವರ ಕೈಯಲ್ಲಿ ಒಂದು ತಕಲಿ. ಒಂದು ಹಿಂಜಿ ಇತ್ತು—ಎಲ್ಲೂ ತೋರಿಸಕೂಡದೆಂದು ಸರ್ಕಾರದವರು ಆಜ್ಞೆಮಾಡಿದರು. ಪೋಲಿಸಿಗೆ ಸಾಮಾನ್ಯ ಕರ್ತವ್ಯವೆಲ್ಲಾ ಇಲ್ಲ ವಾಯಿತು. ಬರಿಯ ಅಸಹಕಾರಿಗಳನ್ನು ಕಾಯುವುದೇ ಅವರ ಕೆಲಸ ವಾಯಿತು. ಹಿಂಸೆ ಪಶು ಶಕ್ತಿ ಸುಳ್ಳಿನ ಮೇಲೆ ಅವಲಂಬಿಸಿರುವ ಸರ್ಕಾರವು ಅಸಹಕಾರಿಗಳ ಧ್ಯೇಯದಲ್ಲಿ ಅಪನಂಬಿಕೆಯಿಟ್ಟದ್ದು ಆಶ್ಚರ್ಯ ವಲ್ಲ. ಗುಜರಾತಿನಲ್ಲಿ 200 ಜನ ಪಟೇಲರು ರಾಜೀನಾಮೆ ಕೊಟ್ಟರು. 1930ನೆ ಇಸವಿ ಏಪ್ರಿಲ್ ೬ನೇ ತಾರೀಖು ಗಾಂಧಿಯವರು ದಂಡಿಯನ್ನು ಸೇರಿದರು. ಆ ದಿವಸವೇ ಉಪ್ಪಿನ ಕಾನೂನನ್ನು ಮುರಿದು ಸಮುದ್ರ ತೀರದಲ್ಲಿದ್ದ ಉಪ್ಪನ್ನು ಎತ್ತಿಕೊಂಡರು. ಕರಾಚಿ, ಶಿರೋಡ, ರತ್ನಗಿರಿ ಪಾಟ್ನ, ಪೆಷಾವರ್ ಕಲ್ಕತ್ತಾ ಮದರಾಸು, ಶೋಲಾಪುರ್ ಮುಂತಾದ ಕಡೆಗಳಲ್ಲಿ ನಡೆದ ಗುಂಡುಗಳಿಂದ ಸರ್ಕಾರದಲ್ಲಿ ಹಿಂಸೆಯ ಭಾವ ಎಷ್ಟರ ಮಟ್ಟಿಗೆ ಇದೆ ಎಂಬುದು ವ್ಯಕ್ತವಾಯಿತು. ಕರಾಚಿಯಲ್ಲಿ ಜೈರಾಮ್ ದೌಲತ್ ರಾಮ್‌ರವರು ಕೆಲವು ಸತ್ಯಾಗ್ರಹಿಗಳ ವಿಚಾರಣೆಯ ಕಾಲದಲ್ಲಿ ನ್ಯಾಯಸ್ಥಾನದ ಮುಂದೆ ನೆರೆದ ಗುಂಪನ್ನು ಚದುರಿಸಲು ಪ್ರಯತ್ನಿಸು ತ್ತಿದ್ದರು. ಆಗ ಪೋಲಿಸರು ಬಂದು ಗುಂಡು ಹಾರಿಸಿದರು. ಜಯರಾಂ ದಾಸ್ ದೌಲತ್‌ರಾಮ್‌ರವರ ತೊಡೆಗೆ ಏಟು ಬಿತ್ತು. ಅನೇಕರು ಸತ್ತರು. ದೌಲತ್‌ರಾಮ್‌ರವರಿಗೆ ನಿಧಾನವಾಗಿ ಗುಣವಾಯಿತು

ಭಾರತವು ಆರ್ಡನೆನ್ಸ್ ರಾಜ್ಯವಾಯಿತು ಪ್ರೆಸ್‌ಗಳ ಆರ್ಡಿನೆನ್ಸ್ ಒಂದು ಬಂತು. ಗಾಂಧಿಯವರು ವೃತ್ತ ಪತ್ರಿಕೆಗಳವರಿಗೆ "ಈ ಆರ್ಡಿ ನೆನ್ಸ್‌ನಿಂದ ಹೆದರಬೇಡಿ. "ತೋರೋ" ಹೇಳಿದ 'ದಬ್ಬಾಳಿಕೆಯಲ್ಲಿ ಪ್ರಾಮಾಣಿಕರು ಧನಿಕರಾಗಲಾರರೆಂಬುದು' ನಿಮ್ಮ ಜ್ಞಾಪಕದಲ್ಲಿರಲಿ. ನಮ್ಮ ದೇಹವನ್ನು ಸರ್ಕಾರಕ್ಕೆ ಒಪ್ಪಿಸಿರುವಾಗ ನಮ್ಮ ಆಸ್ತಿಯನ್ನು ಯಾಕೆ ಒಪ್ಪಿಸಬಾರದು? ನಮ್ಮ ಆತ್ಮವನ್ನು ಮಾತ್ರ ಮಾರಬಾರದು. ಆದುದರಿಂದ ನಾನು ಪತ್ರಿಕಾಕರ್ತರಿಗೆ ಹೇಳುವುದು ಇಷ್ಟು. ಠೇವಣಿ

ಕೊಡಬೇಡಿ. ಪ್ರತಿಕಾಪ್ರಕಟನೆ ನಿಲ್ಲಿಸಿಬಿಡಿ. ದೇಶವೆಲ್ಲಾ ಸ್ವಾತಂತ್ರ್ಯಕ್ಕಾಗಿ ದುಃಖಪಡುತ್ತಿರುವಾಗ ಪತ್ರಿಕಾಕರ್ತರು ಸರಿಯಾದ ಮಟ್ಟಕ್ಕೆ ಬರಲಿಲ್ಲವೆಂಬುದುಬೇಡ. ಅವರು ಅಚ್ಚಿನ ಮೊಳೆಯಂತ್ರ ದಕ್ಕುಹಾಕಿಕೊಳ್ಳಬಹುದು. ಆದರೆ ಲೇಖನಿಯನ್ನೂ ಆತ್ಮದ ಚೈತನ್ಯವನ್ನೂ ದಕ್ಕುಹಾಕಿಕೊಳ್ಳಲಾರರು."

ಐದನೆ ರಾತ್ರಿ ಒಂದು ಗಂಟೆಗೆ ಸರ್ಕಾರ ಗಾಂಧಿಯವರನ್ನು ದಸ್ತಗಿರಿ ಮಾಡಿತು. ಭಾರತದಲ್ಲೆಲ್ಲಾ ಅಸಾಧ್ಯವಾದ ಹರತಾಳವಾಯಿತು. ಮಿಲ್‌ಗಳಿಂದ ೫೦,೦೦೦ ಜನರು ಹೊರಕ್ಕೆ ಬಂದರು. ಜಿ. ಐ. ಪಿ. ಮತ್ತು ಬಿ. ಬಿ. ಅಂಡ್ ಸಿ. ಐ. ರೈಲು ಕೆಲಸಗಾರರು ಹರತಾಳದಲ್ಲಿ ಸೇರಿದರು. ಬೊಂಬಾಯಿನ ಬಟ್ಟೆ ವ್ಯಾಪಾರಿಗಳು ಆರು ದಿನ ಅಂಗಡಿ ಮುಚ್ಚಿದರು. ಬೊಂಬಾಯಿ ಬಟ್ಟೆ ವ್ಯಾಪಾರಿಗಳು ಮೂರು ದಿನದ ಚರ್ಚೆಯ ನಂತರ ಸರ್ಕಾರದವರು ದಬ್ಬಾಳಿಕೆಯನ್ನು ನಿಲ್ಲಿಸಿ ರಾಷ್ಟ್ರದ ಬೇಡಿಕೆಯನ್ನು ಸಲ್ಲಿಸುವವರೆಗೆ ಅನಿರ್ದಿಷ್ಟಕಾಲ ಹರತಾಳವನ್ನು ಆಚರಿಸಬೇಕೆಂದು ತೀರ್ಮಾನಿಸಿದರು. ಪರದೇಶಿ ಬಟ್ಟೆ ವ್ಯಾಪಾರವೆಲ್ಲಾ ಆ ಸಂಘದ ಕೈಯಲ್ಲಿಯೇ ಇದ್ದಿತು. ಅವರು ವರುಷಕ್ಕೆ ೩೦ ಕೋಟಿ ರುಪಾಯಿ ಬಟ್ಟೆ ಪರದೇಶದಿಂದ ತರಿಸುತ್ತಿದ್ದರು. ಈ ಸಂಘಕ್ಕೆ ೫೦೦ ವರ್ತಕರು, ಮುಂಡಿ ವ್ಯಾಪಾರಿಗಳು ಸದಸ್ಯರಾಗಿದ್ದಾರೆ.

ಪನಾಮದಲ್ಲಿದ್ದ ಭಾರತೀಯರು ಹರತಾಳವನ್ನಾಚರಿಸಿದರು. ಸುಮಾತ್ರದ ಭಾರತೀಯರು ಹರತಾಳನ್ನು ಆಚರಿಸಿ ವೈಸರಾಯರಿಗೆ ತಂತಿ ಕೊಟ್ಟರು. ಫ್ರಾನ್ಸಿನ ಪತ್ರಿಕೆಗಳು ಗಾಂಧಿಯ ವಿಷಯದಿಂದಲೇ ತುಂಬಿ ಹೋದವು. ಜರ್ಮನಿಯವರು, ಬಹಿಷ್ಕಾರ ಬಲವಾದುದರಿಂದ ಬಟ್ಟೆಗಳನ್ನು ಕಳುಹಿಸುವುದನ್ನು ನಿಲ್ಲಿಸಿದರು. ಅಮೆರಿಕದ ೧೦೨ ಜನ ಪಾದ್ರಿಗಳು ರಾಮ್ಸೆ ಮಾಕ್ಡೊನಾಡ್‌ರವರಿಗೆ " ಗಾಂಧಿಯವರೊಂದಿಗೆ ರಾಜಿ ಮಾಡಿಕೊಳ್ಳಿ " ಎಂದು ಬರೆದರು. ಮಾಕ್ಡೊನಾಲ್ಡ್‌ರಂತಹ ಸ್ವಾತಂತ್ರ್ಯ ಪ್ರೇಮಿಗಳೆಂದುಕೊಳ್ಳುವವರು ಗಾಂಧಿಯವರನ್ನು ಸೆರೆಗೆ ಹಾಕಿದುದು ಜಗತ್ತಿಗೆ ಬಹಳ ಆಶ್ಚರ್ಯವಾಯಿತು.

ದರಶನದ ಉಪ್ಪಿನ ಗಣಿಗಳನ್ನು ಮುತ್ತುವವರಿಗೆ ಅಬ್ಬಾಸ್ ತಯಾಬ್ಜಿಯವರು ಮುಖಂಡರಾದರು. ಅವರ ದಸ್ತಗಿರಿಯಾದ

ಕೂಡಲೇ ಶ್ರೀಮತಿ ಸರೋಜನಿದೇವಿಯವರು ಹೋದರು. ಸರ್ಕಾರದವರು ಒಂದೇ ದಿನ ೨೨೦ ಜನರನ್ನು ದಸ್ತಗಿರಿಮಾಡಿ ದರಶನ್‌ದಲ್ಲಿ ಸೆರೆಯಿಟ್ಟರು. ೧೯ನೆಯ ತಾರೀಖು ವಾಲ್ಡ ಉಪ್ಪಿನ ಕೇಂದ್ರದಲ್ಲಿ ಸರ್ಕಾರದವರು ಬಂದೂಕುಗಳನ್ನು ಹಿಡಿದುಕೊಂಡು ೪೦೦ ಜನ ಸ್ವಯಂಸೇವಕರನ್ನು ದಸ್ತಗಿರಿಮಾಡಿದರು.

ವರ್ಕಿಂಗ್ ಸಮಿತಿಯು ಸಭೆಗಳು ನೆರೆದು ಕಾರ್ಯವನ್ನು ಮುಂದು ವರಿಸಬೇಕೆಂದು ತೀರ್ಮಾನಿಸಿದುವು. ಮೇ ೨೧ನೆ ತಾರೀಖು ದರಶನದಲ್ಲಿ ಬಾರಿ ಗುಂಪು, ಉಪ್ಪಿನ ಗಣಿ ಮುತ್ತಿತು. ೨,೫೦೦ ಜನ ಸಯಂಸೇವಕ ರಿದ್ದರು. ಗಾಂಧಿಯುವರೊಂದಿಗೆ ಆಫ್ರಿಕಾದಲ್ಲಿ ಕೆಲಸಮಾಡಿದ ೬೨ ವಯುಸ್ಸಿನ ಇಮಾಂ ಸಾಹೇಬರೂ ಸಹ ಅಲ್ಲಿದ್ದರು. ಸ್ವಯಂಸೇವಕರು ಬೆಳ್ಳಿಗ್ಗೆ ಉಪ್ಪಿನ ಗಣಿಗಳನ್ನು ಹಿಡಿಯುವುದಕ್ಕೆ ಹೋದರು. ಅವರು ಹೋದಕೂಡಲೇ ಪೋಲೀಸರು ಅವರನ್ನು ಲಾಠಿಗಳಿಂದ ಬಡಿದರು.

ಈ ದೃಶ್ಯವನ್ನು ನೋಡಲು ಸಾವಿರಾರು ಜನರು ನೆರೆದಿದ್ದರು. ಹೀಗೆ ಎರಡು ಗಂಟೆಗಳ ಕಾಲ ಪೋಲೀಸಿನವರು ಬಡಿದಮೇಲೆ ಇಮಾಮ್ ಸಾಹೇಬ್, ಪ್ಯಾರಿಲಾಲ್, ಮಣಿಲಾಲ್ ಗಾಂಧಿ ಇವರ ದಸ್ತಗಿರಿಯೂ, ಅನಂತರ ಶ್ರೀಮತಿ ಸರೋಜನಿ ದೇವಿಯುವರ ದಸ್ತಗಿರಿಯೂ ಆಯಿತು. ಆ ದಿವಸ ಗಾಯಗೊಂಡ ಸ್ಮಯಂಸೇವಕರ ಸಂಖ್ಯೆ ೨೯೦. ಭೈಲಾಲ್ ಭಾಯಿ, ದಾಜಾಭಾಯಿ ಮುತ್ತು ಹುಲಬಾಯಿ ಎಂಬ ಇಬ್ಬರು ಸ್ವಯಂಸೇವಕರು ಲಾಠಿ ಏಟುಗಳಿಂದ ಸತ್ತರು. ಪೋಲೀಸಿನವರು ದರ್ಶನದ ಕಡೆಗೆ, ಯಾವ ಕಡೆಗಳಿಂದಲೂ ಜನ ಹೋಗದಂತೆ ತಡೆ ಗಟ್ಟಿದ್ದರು. ರಸ್ತೆ, ಕಾಲುದಾರಿ ಎಲ್ಲವುಗಳಿಗೂ ಕಾವಲು ಹಾಕಿದ್ದರು. ಮಿಲಿಟರಿ ಮತ್ತು ಪೋಲೀಸು ಇವರು ಸೇರಿ ಸ್ವಯಂಸೇವಕರನ್ನೆಲ್ಲಾ ಎಲ್ಲಿಯೋ ಯಾರಿಗೂ ಗೊತ್ತಿಲ್ಲದ ಸ್ಥಳಕ್ಕೆ ಸಾಗಿಸಿದರು.

ಜೂನ್ ಮೂರನೇ ತಾರೀಖು ಎರಡು ಸ್ವಯಂಸೇವಕರ ಗುಂಪು ಸುಮಾರು (೩೦೦ ಜನ) ದರಶನವನ್ನು ಮುತ್ತಿದರು. ಪೋಲೀಸರು ಅವರನ್ನು ಲಾಟಿಗಳಿಂದ ಬಡಿದು ಚದುರಿಸಿದರು. ಘಾಯಗೊಂಡವರನ್ನು ಆಸ್ಪತ್ರೆಗೆ ಸೇರಿಸಲಾಯಿತು.

ವಾಡಲ ಉಪ್ಪಿನ ಉಗ್ರಾಣದ ಮೇಲೂ ಸ್ವಯಂಸೇವಕರು ಅನೇಕ

'ಧಾಳಿ' ಗಳನ್ನು ನಡೆಸಿದರು. ೨೨ನೇ ತಾರೀಖು ೧೮೮ ಸ್ವಯಂಸೇವಕರನ್ನು ದಸ್ತಗಿರಿಮಾಡಿ ವೊರ್ಲಿಗೆ ಸಾಗಿಸಿದರು. ೨೫ನೇ ತಾರೀಖು ನೂರು ಸ್ವಯಂಸೇವಕರು ಮುತ್ತಿದರು. ಪೋಲೀಸರು ಲಾಠಿ ಪ್ರಹಾರ ಮಾಡಿದರು ೧೭ ಜನಕ್ಕೆ ಏಟು ಬಿತ್ತು. ಪೋಲೀಸರು ಪ್ರೇಕ್ಷಕರ ಪೈಕಿ ಸಹ ಕೆಲವರನ್ನು ಸೇರಿಸಿ ೧೧೫ ಜನರನ್ನು ದಸ್ತಗಿರಿ ಮಾಡಿದರು. ೨೬ನೇ ತಾರೀಖು ೬೫ ಸ್ವಯಂಸೇವಕರು ಬಂದರು. ಪೋಲೀಸರು ೪೩ ಜನರನ್ನು ದಸ್ತಗಿರಿಮಾಡಿದರು. ಕಾಂಗ್ರೆಸ್ ವಾರದಲ್ಲಿ ಬೊಂಬಾಯಿನಲ್ಲಿ ೮೭ ಸಾವಿರ ಸ್ವಯಂಸೇವಕರು ಸಿದ್ಧರಾಗಿರುವರೆಂದು ಪ್ರಕಟನೆ ಹೊರಟಿತು.

ಜೂನ್ ೧ನೇ ತಾರೀಖು ವಾಡಲ ಮೇಲೆ ಸ್ವಯಂಸೇವಕರು ನಡೆಸಿದ ಮುತ್ತಿಗೆ ಅದ್ಭುತವಾಗಿದ್ದಿತು. ಆ ದಿನ ಸ್ವಯಂಸೇವಕರೂ, ಪ್ರೇಕ್ಷಕರೂ ಸೇರಿ ೧೫,೦೦೦ ಜನ ಇದ್ದರು. ಪೋಲೀಸರು ಬೇಲಿಯಂತೆ ನಿಂತು ತಡೆಯುತ್ತಿದ್ದರು. ಇದ್ದಕ್ಕಿದ್ದಂತೆ ಪ್ರೇಕ್ಷಕರ ಪೈಕಿ ಹೆಂಗಸರು ಮಕ್ಕಳು ಕೂಡ ಪೋಲೀಸರ ಬೇಲಿಯನ್ನು ನುಗ್ಗಿ ಒಳಕ್ಕೆ ಹೋದರು. ಸುಮಾರು ೧೫೦ ಜನರಿಗೆ ಘಾಯಗಳಾದುವು. ಪೋಲೀಸಿನವರು ಹೋಂ ಮೆಂಬರರ ನೇತೃತ್ವದಲ್ಲಿಯೇ ಜನರನ್ನು ತಡೆದು ದೂಡುತ್ತಿದ್ದರು. ಅನಂತರ ಮಿಲಿಟೆರಿ ಬಂತು. ಆ ವೇಳೆಗೆ ನಾಲ್ಕು ಸಾವಿರ ಜನರನ್ನು ವೊರ್ಲಿಯಲ್ಲಿ ಹಿಡಿದು ಹಾಕಿದ್ದರು. ೯೦ ಜನರಿಗೆ ಬಹಳ ಘಾಯಗಳಾದವು. ೨೫ ಜನರ ಸ್ಥಿತಿ ಚಿಂತಾಜನಕವಾಯಿತು. ಆ ಕಾಲದಲ್ಲಿ ಪೋಲೀಸರು ಅತ್ಯಂತ ಕ್ರೌರ್ಯದಿಂದ ನಡೆದುಕೊಂಡರು. ಬೊಂಬಾಯಿನ ನಿವೃತ್ತ ನ್ಯಾಯಾಧೀಶರಾದ ಮಿ| ಹುಸೇನ್‌ರವರೂ, ಕೆ. ನಟರಾಜನ್‌ರವರೂ, ಭಾರತ ಸೇವಕ ಸಂಘದ ಕಾರ್ಯದರ್ಶಿ ಮಿ| ದೇವಧರ್‌ರವರೂ ತಾವು ನೋಡಿದ ಬೀಭತ್ಸವನ್ನು ಕುರಿತು ಹೀಗೆ ಹೇಳಿಕೆ ಕೊಟ್ಟರು. "ಸತ್ಯಾಗ್ರಹಿಗಳು ಉಪ್ಪಿನ ಉಗ್ರಾಣದ ಗಡಿಯಿಂದ ಆಚೆಗೆ ಹೋದ ಮೇಲೆ, ಯುರೋಪಿಯನ್ ಕುದುರೆ ಸವಾರರು ಕೈಗಳಲ್ಲಿ ಲಾಠಿಗಳನ್ನು ಹಿಡಿದುಕೊಂಡು ಸಿಕ್ಕಿದವರನ್ನು ಹೊಡೆಯುತ್ತಾ, ಹಳ್ಳಿಗೂ ಉಪ್ಪಿನ ಉಗ್ರಾಣಕ್ಕೂ ನಡುವೆ ಇದ್ದ ಜನಗಳನ್ನು ಬಡಿದರು. ಅವರು ಹಳ್ಳಿಯ ಬೀದಿಯಲ್ಲಿ ಕುದುರೆಗಳನ್ನು ನಾಗಾಲೋಟದಲ್ಲಿ ಓಡಿಸಿಕೊಂಡು ಹೋಗಿ

ಹೆಂಗಸರನ್ನೂ ಹುಡುಗರನ್ನೂ ಚದುರಿಸಿದರು. ಹಳ್ಳಿಯವರು ಓಣಿ ಗಳಿಗೂ ಸಂದಿಗಳಿಗೂ ಓಡಿ ಹೋಗಿ ಬಾಗಿಲು ಮುಚ್ಚಿಕೊಂಡರು. ಆದರೆ ಹಾಗೆ ಮನೆಯೊಳಗೆ ಸೇರಿಕೊಳ್ಳಲು ಆಗದವರನ್ನು ಸವಾರರು ಲಾಠಿ ಗಳಿಂದ ಬಡಿದರು.

ನ್ಯೂಫ್ರೀಮನ್ ಎಂಬ ಪರದೇಶದ ಪತ್ರಿಕೆಗೆ ಲೇಖನ ಬರೆಯುತ್ತಾ ವೆಬ್ ಮಿಲರ್‌ರವರು ದಶನವನ್ನು ಕುರಿತು ಹೀಗೆ ಬರೆದರು. "ನಾನು ೨೨ ದೇಶಗಳಲ್ಲಿ ೧೮ ವರುಷ ಪತ್ರಿಕಾ ಸುದ್ದಿಗಾರನಾಗಿ ಅನೇಕ ಬಗೆಯ ದಂಗೆ ಅಶಾಂತಿಗಳನ್ನು ನೋಡಿದ್ದೇನೆ. ಆದರೆ ದರುಶನದಂತಹ ಭೀಭತ್ಸವನ್ನು ಎಲ್ಲೂ ಕಾಣಲಿಲ್ಲ. ಅದರ ನೋವು ಎಷ್ಟರಮಟ್ಟಿಗಿದ್ದಿ ತೆಂದರೆ ನಾನು, ನೋಡುವುದಕ್ಕೂ ಶಕ್ತಿ ಇಲ್ಲದೆ ಬೇರೆ ಕಡೆ ತಿರುಗಿ ಬಿಡುತ್ತಿದ್ದೆ. ಮುಖ್ಯವಾದ ಅದ್ಭುತ, ಸ್ವಯಂಸೇವಕರ ಶಾಂತಿ. ಅವರು ಗಾಂಧಿಯವರ ಅಹಿಂಸೆಯಿಂದ ಪೂರ್ಣವಾಗಿ ಆವೃತರಾಗಿದ್ದರು." ಅಮೇರಿಕ ಸಿನೇಟ್‌ನಲ್ಲಿ ಭಾರತಕ್ಕೆ ಸಂಬಂಧಪಟ್ಟ ಲೇಖನಗಳನ್ನು, ಸಿನೇಟರ್ ಆನರಬಲ್ ಜಾನ್ ಬ್ಲೇನ್‌ರವರು ಇಟ್ಟು ಭಾರತದ ಸ್ವಾತಂತ್ರ್ಯಕ್ಕೆ ಅಮೇರಿಕಾ ಸಹಾಯ ಮಾಡಬೇಕೆಂದರು.

ಈ ಉಪ್ಪಿನ ದಂಗೆಗಳನ್ನು ಕಣ್ಣಿನಿಂದ ನೋಡಿದ ಲಂಡನ್ ಡೇಲಿ ಹೆರಾಲ್ಡ್ ಪತ್ರಿಕೆಯ ಜಾರ್ಜ್ ಸ್ಲೊಕೋಂರವರು ಹೀಗೆ ಬರೆದರು. "ವಾಡಲದ ಹತ್ತಿರ ಒಂದು ಜಾಗದಿಂದ ನಾನು ನಡೆದುದನ್ನೆಲ್ಲಾ ನಿರೀಕ್ಷಿಸುತ್ತಿದ್ದೆ. ಭಾವನಾಪೂರಿತರಾಗಿ ಅತ್ಯಂತ ಸ್ನೇಹದಿಂದಿದ್ದ ಸ್ವಯಂಸೇವಕರ ಮತ್ತು ಜನರ ಮಧ್ಯೆ ನಿಂತುಕೊಂಡು, ನನ್ನ ದೇಶದ ಪ್ರತಿನಿಧಿಗಳು ಈ ಹಾಸ್ಯಾಸ್ಪದವೂ ಅವಮಾನಕರವೂ ಆದ ಕೆಲಸದಲ್ಲಿ ತೊಡಗಿರುವುದನ್ನು ನೋಡುವುದು ಇಂಗ್ಲಿಷ್ ಮನುಷ್ಯನಿಗೆ ಅತ್ಯಂತ ನಾಚಿಕೆಯನ್ನುಂಟುಮಾಡುವುದಾಗಿದ್ದಿತು.

"ಲಕ್ಷಾಂತರ ಜನರು ಮೆರವಣಿಗೆಗಳಲ್ಲಿ ಸೇರಿ ಕಾಂಗ್ರೆಸ್ ಧ್ವಜದ ಅಡಿಯಲ್ಲಿ ಹೋಗುತ್ತಾ ಸಿಖ್, ಮುಸಲ್ಮಾನ್, ಹಿಂದೂ, ಪಾರ್ಸಿ, ಬ್ರಾಹ್ಮಣ, ಯೂಡಮಾಲಿ ಎಲ್ಲರ ಬಾಯಿನಿಂದಲೂ ಕಾಂಗ್ರೆಸ್ಸಿನ ಪ್ರಶಂಸೆ, ಬ್ರಿಟಿಷರ ಬೈಗಳ ಕೇಳುವಾಗ, ಆಗಾಗ್ಗೆ ಸರ್ಕಾರದವರು ತಮ್ಮ ಮಾತುಗಳಲ್ಲಿಯೂ, ಪ್ರಕಟನೆಗಳಲ್ಲಿಯೂ ಹೇಳುವ "ರಾಜಭಕ್ತರೂ,

ಶಾಂತಿಪ್ರಿಯರೂ ಆದ ಆ ಅಸಂಖ್ಯಾತ ಜನ ಎಲ್ಲಿ" ಎಂದು ಯಾರಿಗಾದರೂ ಆಶ್ಚರ್ಯವಾಗುತ್ತದೆ.

ಬ್ರಿಟನ್ನನ್ನು ಕಂಡರೆ ದ್ವೇಷ ನಿಧಾನವಾಗಿ ಬೆಳೆಯುತ್ತಿದೆ. ಎಲ್ಲೋ ಕೆಲವು ಪುಂಡರು ಒಂದೆರಡು ಕಡೆ ಮಾಡಿರುವ ತುಂಟತನದ ಹೊರತು ಈ ಅಸಂಖ್ಯಾತ ಭಾರತೀಯರ ಮಧ್ಯೆ ಇಂಗ್ಲಿಷ್ ಜನ ಸುರಕ್ಷಿತವಾಗಿ ತಿರುಗಾಡುತ್ತಿದ್ದಾರೆ.

ಗುಂಪು ಎಷ್ಟೇ ದೊಡ್ಡದಾಗಿರಲಿ, ಇಂಗ್ಲಿಷಿನವನನ್ನು ಕಂಡರೆ ಒಂದು ತಿರಸ್ಕಾರದಿಂದ ನೋಡುತ್ತದೆ. ಬಹಿರಂಗವಾಗಿ ಏನನ್ನೂ ಪ್ರಕಟಿಸುವುದಿಲ್ಲ.

ಆದರೂ ಭಾರತದಲ್ಲಿ ನಮ್ಮ ಸ್ಥಾನ ಭದ್ರವಾಗಿಲ್ಲ.

ಒಂದು ಕಾಲದಲ್ಲಿ ಭಾರತೀಯರಿಗೆ ನಮ್ಮಲ್ಲಿ ಭಯ ಗೌರವ ಮತ್ತು ದ್ವೇಷ ಮೂರೂ ಇದ್ದಿತು. ಎರಡನೆಯ ಭಾವ ನಾಶವಾಗಿ ಎಷ್ಟೋ ದಿನಗಳಾದುವು. ಮೊದಲನೆಯದು ಬೇಗ ಬೇಗ ಮರೆಯಾಗುತ್ತಿದೆ. ಪರಿಸ್ಥಿತಿ ಬದಲಾವಣೆ ಆಗದಿದ್ದರೆ ಭಾರತೀಯರಿಗೆ ಇಂಗ್ಲಿಷರನ್ನು ಕಂಡರೆ ದ್ವೇಷಭಾವ ಒಂದೇ ಉಳಿಯುತ್ತದೆ.

ಭಾರತವನ್ನು ಬಿಟ್ಟುಹೋಗುತ್ತಿರುವ ಈ ಸಂದರ್ಭದಲ್ಲಿ ಇದೇ ನನ್ನ ವಿಷಾದಕರವಾದ ನಂಬಿಕೆ."

ಲಾರ್ಡ್ ಇರ್ವಿನ್‌ರು, ಕುಳಿತಿದ್ದಂತೆ ನಿಂತಿದ್ದಂತೆ ಆರ್ಡಿನೆನ್ಸ್ ಹೊರಡಿಸುತ್ತಿದ್ದರು. ಪ್ರಜೆಗಳ ಮೇಲೆ ಯುದ್ಧ ಮಾಡುವುದೇ ಅವರ ಕಸಬು ಆಯಿತು. ಮೊದಲು ಮೊದಲು ಸರ್ಕಾರದವರು ಬರಿಯ ಶಿಕ್ಷೆ ಮಾತ್ರ ವಿಧಿಸುತ್ತಿದ್ದರು. ಅನಂತರ ಶಿಕ್ಷೆಯ ಜತೆಗೆ ಜುಲ್ಮಾನೆಯೂ ಸೇರತೊಡಗಿತು. ಅನಂತರ ಲಾಠಿ ಹೊಡೆತ ಬಂತು. ಸರ್ಕಾರದವರು ಪೋಲೀಸರನ್ನು ಹೊಸ ಹೊಸದಾಗಿ ಸೇರಿಸಿಕೊಂಡು, ಸತ್ಯಾಗ್ರಹಿಗಳನ್ನು ಬಡಿಯಲು ಅವರಿಗೆ ಲಾಠಿ ಕವಾಯತ್ತು ಕೊಡುತ್ತಿರುವುದು ಜನರ ಕಣ್ಣಿಗೆ ಬೀಳುತ್ತಿದ್ದತು. ಎಲ್ಲಾ ಸಭೆಗಳನ್ನೂ ಪೋಲಿಸರು ಲಾಠಿಯಿಂದಲೇ ಚದುರಿಸುತ್ತಿದ್ದರು. ಪೀನಲ್ ಕೋಡಿಗೆ ಉಪ್ಪಿನ ಶಿಕ್ಷೆಗಳನ್ನೂ ಸೇರಿಸಿದರು. ಸರ್ಕಾರದವರು ಖೈದಿಗಳಲ್ಲಿ ಎ. ಬಿ. ಸಿ. ಎಂದು ಮಾಡಿದ್ದುದು ನೆಪಮಾತ್ರಕ್ಕೆ. ಎ ಎಂಬುದು ಹೆಸರಿಗೆ ಇತ್ತು. ಬಿ ಎಂಬುದನ್ನು ಸರ್ಕಾರ

ಬಹಳ ಜಿಪುಣತನದ ಮನೋಭಾವದಿಂದ ಕೊಡುತ್ತಿದ್ದಿತು. ಧನಿಕರೂ ವಿದ್ಯಾವಂತರೂ ನಾಗರೀಕರೂ ಆದವರಿಗೆಲ್ಲಾ ಸಿ. ತರಗತಿ ದೊರೆಯುತ್ತಿದ್ದಿತು. ಅವರು ಕಲ್ಲು ಒಡೆಯುವುದು, ಎಣ್ಣೆ ಅರೆಯುವುದು, ನೀರು ಎತ್ತುವುದು ಮುಂತಾದ ಕೆಲಸ ಮಾಡಬೇಕಾಗಿದ್ದಿತು. ಆದರೆ ಸ್ವಯಂ ಸೇವಕರು ಬೇಸರಿಕೆ ಹೊಂದಲಿಲ್ಲ. ಅವರು ಚಳುವಳಿಗೆ ಧುಮುಕುತ್ತಲೇ ಇದ್ದರು. ಲಾಠಿಯಿಂದ ಸಭೆ ಚದುರುತ್ತಿದ್ದಿತು. ಅದೃಷ್ಟವಶಾತ್ ಸೆರೆಮನೆಗೆ ಬಂದರೆ ಅಲ್ಲಿಯೂ ಲಾಠಿ ಛಾರ್ಜು.

ಚಳುವಳಿಯ ಪ್ರಾರಂಭದಲ್ಲಿ ಕಲ್ಕತ್ತಾಲದಲ್ಲಿ ಒಂದು ತೋಟದಲ್ಲಿ ಸೇರಿದ್ದ ಸಭೆಯ ಜನರನ್ನು, ಪೋಲೀಸಿನವರು ಬೀಗಹಾಕಿ ಹೊರಗೆ ಹೋಗುವ ದಾರಿಗಳನ್ನೆಲ್ಲಾ ತಪ್ಪಿಸಿ, ಲಾಠಿಗಳಿಂದ ಬಡಿದರು. ಮದರಾಸು ಪ್ರಾಂತ್ಯದಲ್ಲಿಯೂ ಬಹಳ ಲಾಠಿ ಹೊಡೆತ ಆಯಿತು. ಪೋಲೀಸಿನವರು ಖಾದಿ ಧರಿಸಿದವರನ್ನೆಲ್ಲಾ ಹೊಡೆಯುತ್ತಿದ್ದರು. ಅಂಗಡಿಗೆ ವ್ಯಾಪಾರಕ್ಕೆ ಹೋಗುವವರನ್ನೆಲ್ಲಾ ಹೊಡೆಯುತ್ತಿದ್ದರು. ಹೊಡೆಯುವ ಆನಂದಕ್ಕಾಗಿಯೇ ಹೊಡೆಯುತ್ತಿದ್ದರು. ಮಲಬಾರ್ ಮಿಲಿಟರಿ ಸೈನ್ಯ ಜನರನ್ನು ಹೊಡೆಯುತ್ತಾ ಆಂಧ್ರದೇಶವನ್ನೆಲ್ಲಾ ತಿರುಗಿತು. ಬರಹಾಂಪೂರ್ ಎಲ್ಲೂರು ಕಾಕಿನಾಡ ರಾಜಮಹೇಂದ್ರಿ ಇಲ್ಲೆಲ್ಲಾ ಮಿಲಿಟರಿಯವರು ಜನರನ್ನು ಬಡಿಯುತ್ತಾ ತಿರುಗಿದರು. ಏಟು ತಿಂದು ತಿಂದು ಸುಸ್ತಾದ ಜನ ಎಲ್ಲೂರಿನಲ್ಲಿ ಒಂದು ಸಲ ತಿರುಗಿಬಿದ್ದರು. ಪೋಲೀಸರು ಬಂದೂಕ ಹಾರಿಸಿದರು. 2—3 ಜನ ಸತ್ತರು. ಎಲ್ಲೂರಿನಲ್ಲಿ ಜನ ಎದುರಿಸಿದುದರಿಂದ ಪೋಲಿಸರ ರಾಕ್ಷಸತ್ವ ಸ್ವಲ್ಪ ಕಡಿಮೆಯಾಯಿತು. ಸ್ತ್ರೀಯರು ಎಲ್ಲೆಲ್ಲೂ ಚಳುವಳಿಯಲ್ಲಿ ಭಾಗವಹಿಸಿದರು. ಸರ್ಕಾರ ಅವರ ವಿಷಯದಲ್ಲಿಯೂ ಗೌರವ ರಿಯಾಯಿತಿ ತೋರಿಸಲಿಲ್ಲ. ಪರದೇಶದ ಬಟ್ಟೆಯ ಬಹಿಷ್ಕಾರ ಜೋರು ಆದಷ್ಟೂ ಆರ್ಡಿನೆನ್ಸು ರಾಜ್ಯದ ಶಿಕ್ಷೆಗಳೂ ಜೋರಾದುವು. ಸರ್ಕಾರದವರು ಸಭೆಗಳನ್ನು ಪ್ರತಿಬಂಧಿಸಿದರೂ ಜನರು ಸಭೆಗಳನ್ನು ನಡೆಸುತ್ತಲೇ ಇದ್ದರು. ಆಗ ಈ ದೇಶದಲ್ಲಿ ತಿರುಗಿದ ಬ್ರಾಲಿಸ್‌ಫಡ್‌ರವರು ಮಾಂಚೆಸ್ಟರ್ ಗಾರ್ಡಿಯನ್ ಪತ್ರಿಕೆಗೆ ಹೀಗೆ ಬರೆದರು.

"ಜವಾಬ್ದಾರರಾದ ಭಾರತೀಯರು ಪೋಲೀಸಿನವರ ಮೇಲೆ

ಮಾಡುವ ಆರೋಪಣೆಗಳು ಅಸಂಖ್ಯಾತವಾಗಿವೆ. ಎಲ್ಲಿ ನೋಡಲಿ ಪೋಲಿಸರು ಸಭೆಗಳನ್ನು ಚದುರಿಸುವುದಕ್ಕಾಗಿ ನಡೆಸಿದ ಅತ್ಯಾಚಾರಗಳ ಕತೆಯೇ ಕೇಳಿಬರುತ್ತದೆ. ಇವುಗಳನ್ನು ಕಂಡ ಒಬ್ಬ ಆಂಗ್ಲೇಯ ನಿಂದಲೂ, ಘಾಯಗೊಂಡವರಿಗೆ ಚಿಕಿತ್ಸೆ ಮಾಡಿದ ಅನೇಕ ಭಾರತೀಯ ವೈದ್ಯರಿಂದಲೂ ನಾನು ಬಹಳ ತಿಳಿದೆ. ಈ ಸಂದರ್ಭಗಳಲ್ಲೆಲ್ಲಾ, ಸಭೆ ಕೂಡದೆಂದು ಪ್ರತಿಬಂಧಿಸಿದ ಮೇಲಧಿಕಾರಿಗಳದೇ ತಪ್ಪು. ಎರಡು ಸಭೆ ಗಳಿಗೆ ನಾನು ಹೋಗಿದ್ದೆ. ಭಾಷಣಗಳು ರಾಜದ್ರೋಹಕರವಾಗಿದ್ದರೂ ಗಂಭೀರವಾಗಿದ್ದುವು. ಸಭೆಯಲ್ಲಿ ಜನಸಂಖೆ ಅಸಾಧ್ಯವಾಗಿದ್ದಿತು. ಭಾಷಣಕಾರರು ಹಿಂಸೆಗೆ ವಿರೋಧವಾಗಿ ಭಾಷಣಮಾಡುತ್ತಿದ್ದರು. ಆ ಅಸಂಖ್ಯಾತವಾದ ಜನಸಂಖ್ಯೆ—ಅವರಲ್ಲಿ ಸ್ತ್ರೀಯರೂ ಬಹಳ ಇದ್ದರು— ನೂಲುತ್ತಾ, ಭಾರತೀಯರಿಂದ ಮಾತ್ರ ಸಾಧ್ಯವಾದ ರೀತಿಯಲ್ಲಿ ತೆಪ್ಪಗೆ ನೆಲದ ಮೇಲೆ ಕುಳಿತಿದ್ದರು. ಅಂತಹ ಸಭೆಗಳನ್ನು ನಡೆಸಲು ಅವಕಾಶ ಕೊಟ್ಟರೆ ಜನರೇ ಬೇಸರಿಕೆ ಹೊಂದಿ ಹೊರಟುಹೋಗುತ್ತಾರೆ. ಆದರೆ ಬಲಾತ್ಕಾರದಿಂದ ಚದುರಿಸಿದುದು, ಅದರಲ್ಲೂ ಮುಖ್ಯವಾಗಿ ಬೊಂಬಾ ಯಿನಲ್ಲಿ ಜನರಿಗೆ ಕೋಪವನ್ನುಂಟುಮಾಡಿತು. ಲಾಠಿ ಏಟು ತಿನ್ನುವುದು ಗೌರವವಾಯಿತು. ಜನರು ಏಟು ತಿನ್ನುವುದಕ್ಕೇ ಉತ್ಸಾಹದಿಂದ ಸಾವಿರ ಸಂಖ್ಯೆಯಲ್ಲಿ ನುಗ್ಗಿದರು. ಅವರು ಅಹಿಂಸಾತ್ಮಕವಾದ ಧೈರ್ಯ ವನ್ನು ಪ್ರದರ್ಶಿಸಿದರು. ತಿಂದು ಕೊಬ್ಬಿ ಟೊಣಪರಾದ ಪೋಲೀಸಿನವರು, ವಯಸ್ಸಾಗದ ಹುಡುಗರನ್ನು ಲಾಠಿಗಳಿಂದ ಅನೇಕ ಕಡೆ ಹೊಡೆದ ವರ್ಣನೆ ಪದೇ ಪದೇ ಯೂರೋಪಿಯನ್‌ಗಳ ಬಾಯಿಂದಲೇ ತಿಳಿಯಿತು. ಕೇಳಿದರೇ ನನಗೆ ಜ್ವರ ಬರುವಂತೆ ಇತ್ತು. ಈ ದೃಶ್ಯಗಳನ್ನು ನೋಡಿದ ಒಬ್ಬ ಫ್ರೆಂಚ್ ಮಹಿಳೆ ಹೇಳಿದ ಮಾತುಗಳನ್ನು ಹೇಳಲು ನನಗೆ ಇಷ್ಟವಿಲ್ಲ.

"ಇಂಗ್ಲೀಷ್ ಅಧಿಕಾರಿಗಳ ಕೈಕೆಳಗೆ ಹೋದ ಪೋಲಿಸರೂ ಜನ ರನ್ನು ಲಾಠಿಗಳಿಂದ ಹೊಡೆದರೆಂಬುದರಲ್ಲಿ ನನಗೆ ಸಂದೇಹವುಂಟಾಗಲಿಲ್ಲ. ಕಲ್ಕತ್ತಾದಲ್ಲಿ ಹೀಗೆ ಪೋಲಿಸಿನವರು, ನಿರಾಯುಧರಾದ ಒಂದು ಗುಂಪನ್ನು ಹೊಡೆಯುತ್ತಿರುವುದು ಕಾಲೇಜು ಮಹಡಿಮೇಲಿನ ಕೊಠಡಿ ಯಲ್ಲಿದ್ದ ಕೆಲವು ವಿದ್ಯಾರ್ಥಿಗಳಿಗೆ ಕಂಡಿತು. ವಿದ್ಯಾರ್ಥಿಗಳು "ಹೇಡಿ

ಗಳು ಹೇಡಿಗಳು'' ಎಂದು ಕೂಗಿದರು. ಎರಡು ಗಂಟೆಗಳ ನಂತರ ಪೋಲೀಸರು ಇಂಗ್ಲೀಷ್ ಆಫೀಸರ ಜತೆಯಲ್ಲಿ ಮತ್ತೆ ಬಂದು ತರಗತಿಗಳಿಗೆಲ್ಲಾ ನುಗ್ಗಿ ಹುಡುಗರನ್ನು ದಿಕ್ಕಾಪಾಲಾಗಿ ಲಾಠಿಗಳಿಂದ ಹೊಡೆದರು. ಹುಡುಗರ ರಕ್ತಗಳು ಹಾರಿ ಗೋಡೆಗಳೆಲ್ಲಾ ಕೆಂಪಾದುವು. ವಿಶ್ವವಿದ್ಯಾಲಯದ ಅಧಿಕಾರಿಗಳು ಸರ್ಕಾರಕ್ಕೆ ತಿಳಿಸಿದರು. ಏನೂ ಆಗಲಿಲ್ಲ. ಯೂರೋಪಿನಲ್ಲಿ ವಿಜ್ಞಾನದಲ್ಲಿ ಪ್ರಸಿದ್ಧವಾದ ಹೆಸರನ್ನು ಸಂಪಾದಿಸಿರುವ ಅನೇಕ ವಿದ್ವಾಂಸರಿಂದ ಈ ಸುದ್ದಿ ನನಗೆ ತಿಳಿಯಿತು. ಕಲ್ಕತ್ತ ಹೈಕೋರ್ಟಿನ ಒಬ್ಬ ನ್ಯಾಯಾಧಿಪತಿಯ ಮಗ ಈ ಪೋಲಿಸರ ಏಟಿಗೆ ಸಿಕ್ಕಿದ. ಸರ್ಕಾರವನ್ನು ಕುರಿತು ನ್ಯಾಯಾಧಿಪತಿಯು ಹೇಳಿದ ಮಾತನ್ನು ಯಾರಾದರೂ ಅಧಿಕಾರಿಗಳು ಕೇಳಿದ್ದರೆ ಎಷ್ಟು ಚೆನ್ನಾಗಿದ್ದಿತು ಎನ್ನಿಸಿತು ನನಗೆ.

"ಲಾಹೋರಿನಲ್ಲಿ ಪೋಲೀಸರು ಯೂರೋಪಿಯನ್ ಅಧಿಕಾರಿಯ ಕೈಕೆಳಗೆ ಕಾಲೇಜಿಗೆ ನುಗ್ಗಿ ವಿದ್ಯಾರ್ಥಿಗಳನ್ನು ಮಾತ್ರವೇ ಅಲ್ಲ, ಪ್ರೊಫೆಸರುಗಳನ್ನೂ ಬಡಿದರು. ಇದಕ್ಕೆ ಕಾರಣವೇನೆಂದರೆ, ಮತ್ತಾವುದೋ ಕಾಲೇಜಿಗೆ ಸೇರಿದ ಹುಡುಗರು ಆ ಕಾಲೇಜು ಮುಂದೆ "ಶಾಂತವಾಗಿ ಪಿಕೆಟ್'' ಮಾಡಿದರಂತೆ, ಬಂಗಾಳದ ಕಾಂಟೈ ಎಂಬ ಹಳ್ಳಿಯಲ್ಲಿ ಪೋಲಿಸಿನವರು ನಿರಾಯುಧರೂ ನಿರಪರಾಧಿಗಳೂ ಆದ ಜನರನ್ನು ಚದುರಿಸುವಾಗ ಐದು ಜನ ಕೆರೆಯಲ್ಲಿ ಬಿದ್ದು ಸತ್ತರು. ಮೀರತ್‌ನಲ್ಲಿ ನಾನು ಒಬ್ಬ ವಕೀಲರನ್ನು ಕಂಡಿದ್ದೆ. ಅವರು ಚದುರಿಸಲ್ಪಟ್ಟ ಒಂದು ಸಭೆಯಲ್ಲಿದ್ದವರು. ಪೋಲೀಸಿನವರು ಅವರನ್ನು ದಸ್ತಗಿರಿಮಾಡಿ ಲಾಠಿಯಲ್ಲಿ ಬಡಿದರು. ಅನಂತರ ಒಬ್ಬ ಪೋಲೀಸಿನವನು ಅವರನ್ನು ಹತ್ತಿರದಲ್ಲಿ ಬಂದೂಕದಿಂದ ಹೊಡೆದನು. ಇದರ ಫಲವಾಗಿ ಅವರ ತೋಳನ್ನೆ ಕತ್ತರಿಸಬೇಕಾಯಿತು. ಇಂತಹ ಸಂಗತಿಗಳನ್ನು ಇನ್ನೂ ಸಾವಿರಾರು ಹೇಳಬಲ್ಲೆ. ಸರ್ಕಾರದ ನೀತಿಗೆ ಒಂದು ಕಾಸೂ ಬೆಲೆಯಿರಲಿಲ್ಲ. ಸಿ. ತರಗತಿಯ ಖೈದಿಗಳು ಸೆರೆಮನೆಯಲ್ಲಿ ಅನುಭವಿಸುತ್ತಿದ್ದ ಯಮಹಿಂಸೆಯನ್ನೂ ನಾನು ನೋಡಿದೆ.

"ಗುಜರಾತಿನಲ್ಲಿ ಪೋಲೀಸಿನವರು ನಡೆಸಿದ ಅತ್ಯಾಚಾರದ ಸಾಕ್ಷಿಗಳು ನನಗೆ ಯಥೇಚ್ಛವಾಗಿ ದೊರಕಿದವು. ಕಾನೂನಿನಿಂದ ಮಾಡುವ

ದಬ್ಬಾಳಿಕೆಯೇ ಸಾಕಾದಷ್ಟು ತೀವ್ರವಾಗಿದ್ದಿತು. ಬರಡೋಲಿ ಮತ್ತು ಕೈರಾ ಜಿಲ್ಲೆಗಳಲ್ಲಿ ಎಲ್ಲಾ ರೈತರೂ ಗಾಂಧಿಯಲ್ಲಿ ಅವರಿಗಿದ್ದ ಭಕ್ತಿಯಿಂದಲೂ, ಸ್ವರಾಜ್ಯದ ಆಸೆಯಿಂದಲೂ, ಧಾನ್ಯದ ಬೆಲೆ ಅತಿ ಕಡಿಮೆಯಾದುದರಿಂದಲೂ, ಕಂದಾಯವನ್ನು ಕೊಡಲು ತಿರಸ್ಕರಿಸಿದರು. ಕೆಲವು ಕಡೆ ವಾಯಿದೆ ಬರುವುದಕ್ಕೆ ಮುಂಚೆಯೇ ಕಂದಾಯ ಕೇಳುತ್ತಿದ್ದರು. ಪೋಲೀಸಿನವರು ಲಾಠಿ ಬಂದೂಕಗಳೊಂದಿಗೆ ಹಳ್ಳಿಯನ್ನು ಮುತ್ತಿ ಒಂದೇ ಸಮನಾಗಿ ಜನರನ್ನು ಲಾಠಿಗಳಿಂದಲೂ ಬಂದೂಕದ ಹಿಂಭಾಗದಿಂದಲೂ ಹೊಡೆಯುತ್ತಿದ್ದರು. ಈ ಘಾಯಗೊಂಡ 45 ಜನರ ಕಥೆ ನನ್ನಲ್ಲಿ ಇದೆ. ನಾನು ಅವರ ಮೈಯಿನ ಘಾಯಗಳನ್ನೆಲ್ಲಾ ನೋಡಿದೆ. (ಒಂದು ಹುಡುಗಿ ತೋರಿಸಲಿಲ್ಲ ಅದಕ್ಕೆ ನಾಚಿಕೆಯಾಯಿತು.) ಕೆಲವರ ಘಾಯಗಳು ಬಹಳ ಅಪಾಯಕರವಾಗಿದ್ದುವು. ಒಬ್ಬನ ಕೈಮುರಿದಿದ್ದಿತು. ಒಬ್ಬನ ಹೆಬ್ಬೆಟ್ಟು ಮೂಳೆ ಮುರಿದಿದ್ದಿತು. ಇತರರ ದೇಹಗಳೆಲ್ಲಾ ಘಾಯಗಳಿಂದ ತುಂಬಿದ್ದವು. ಉಳಿದವರು ಆಸ್ಪತ್ರೆಯಲ್ಲಿದ್ದುದರಿಂದ ಅವರ ಗಾಯಗಳನ್ನು ನಾನು ನೋಡಲಿಲ್ಲ.

"ಇದರ ಉದ್ದೇಶ ಕೆಲವು ಸಲ ಕಂದಾಯ ವಸೂಲಿ, ಕೆಲವು ಸಲ ಹೆದರಿಕೆ. ಕೆಲವು ವೇಳೆ ರೈತರು ಮಗ್ಗಲಲ್ಲಿದ್ದ ಗೈರುಹಾಜರಾದ ರೈತರ ಕಂದಾಯವನ್ನೂ ಕೊಡಬೇಕಾದ್ದಿತು. ಇಲ್ಲದಿದ್ದರೆ ಬಡಿತ; ಕೆಲವರು ಬಡಿಸಿಕೊಂಡನಂತರ ಕೊಡುತ್ತಿದ್ದರು. ಒಂದು ಸ್ಥಳದಿಂದ ಪೋಲೀಸಿನವರು ರಾಷ್ಟ್ರೀಯ ಧ್ವಜ ಮತ್ತು ಇತರ ಪ್ರದರ್ಶನ ಪಟಗಳನ್ನು ಕಿತ್ತು ನೆಲಕ್ಕೆ ಒಗೆದರು. ಈ ಧ್ವಜ ಎಂಟು ರೈತರ ಮನೆಗಳಿಗೆ ಹತ್ತಿರದಲ್ಲಿದ್ದುದರಿಂದ ಪೋಲೀಸರು ಅವರನ್ನು ಬಡಿದರು. ಇಬ್ಬರು ರೈತರನ್ನು ಗಾಂಧಿ ಟೋಪಿ ತೆಗೆಯುವವರೆಗೆ ಲಾಠಿಗಳಿಂದ ಬಡಿದರು. ಒಂದು ಸಂದರ್ಭದಲ್ಲಿ ಪೋಲೀಸಿನವನಿಗೆ ಸಲಾಂ ಮಾಡುವವರೆಗೆ(ಹನ್ನೆರಡು ಲಾಠಿ ಏಟು) ಹೊಡೆದರು. ಆಗ ಪೋಲೀಸರ ಹಾಸ್ಯ ಇದು. "ನಿನಗೆ ಸ್ವರಾಜ್ಯ ಬೇಕೋ ?" "ಹಾಗಾದರೆ ಇಲ್ಲಿ ತೆಗೆದುಕೊ" ಲಾಠಿ ತಲೆಯಮೇಲೆ ಬರುತ್ತಿದ್ದಿತು. ಎಲ್ಲಾದಕ್ಕಿಂತ ಅತ್ಯಂತ ಹೀನವಾದುದೆಂದರೆ ಭಾರತೀಯ ಅಧಿಕಾರಿಗಳೇ ಕ್ರಿಮಿನಲ್ ಟ್ರೈಬ್"ಗಳನ್ನು ರೈತರಿಗೆ ಎದುರಾಗಿ ಎತ್ತಿಕಟ್ಟುತ್ತಿದ್ದರು. ರೈತರ ಸಾಲಗಳನ್ನು ಕೊಡಬೇಡಿ; ಅವರ ಮನೆಗಳನ್ನು ಸುಡಿ" ಎಂದು

ಪ್ರೋತ್ಸಾಹಿಸುತ್ತಿದ್ದರು. ರೈತರ ಜಮೀನುಗಳನ್ನು ಅವರಿಗೆ 1–2 ರುಪಾಯಿಗಳಿಗೆ ಕೊಡುವುದಾಗಿ ಹೇಳುತ್ತಿದ್ದರು. ಅನೇಕ ಹಳ್ಳಿಗಳ ಕ್ರಿಮಿನಲ್ ಟ್ರೈಬ್ (ಬಾರಿ) ಜನರಿಂದಲೂ ನನಗೆ ಇದು ಗೊತ್ತಾಯಿತು. ರಷ್ಯಾದಲ್ಲಿ ಕಮ್ಯುನಿಸ್ಟ್ ಪಾರ್ಟಿಯು, ಹಳ್ಳಿಗಳಲ್ಲಿ ಪಂಗಡ ವ್ಯಾಜ್ಯ ಹುಟ್ಟಿಸಲು ಮಾಡುತ್ತಿದುದಕ್ಕಿಂತ ಇದು ಹೀನವಾದುದು.

"ಇದೆಲ್ಲಾ ಒಂದು ಕಡೆಯ ಸಾಕ್ಷ್ಯ ಎಂದು ನೀವು ಹೇಳಬಹುದು. ನನ್ನ ಸಾಕ್ಷಿಗಳನ್ನೆಲ್ಲಾ ಮೇಲಧಿಕಾರಿಗಳಿಗೆ ತೋರಿಸಿದೆ. ಕಮಿಶನರು ನನ್ನ ಜತೆಯಲ್ಲಿ ಪರೀಕ್ಷಿಸಲು ಒಂದು ಹಳ್ಳಿಗೆ ಬಂದರು. ಅವರ ವಿವೇಕಯುತವಾದ ತೀರ್ಮಾನಗಳೇನೋ ನನಗೆ ಗೊತ್ತಿಲ್ಲ. ಆದರೆ ಪರೀಕ್ಷಿಸಿದ 9 ದೂರಗಳ ಪೈಕಿ ಒಂದು ಮಾತ್ರ ಅನುಮಾನವೆಂದರು. ಅವರು (Modest girl ಪಾಪ ಸಾಧುಪ್ರಾಣಿ ಲಜ್ಜಾಶೀಲೆ!) ಇದಲ್ಲದೆ ಇಬ್ಬರು ಭಾರತೀಯ ಅಧಿಕಾರಿಗಳನ್ನೂ ಅವರ ನಡವಳಿಕೆಗಳನ್ನೂ ನೋಡಿದೆ. ಅವರ ಪೈಕಿ ಒಬ್ಬರು ನನ್ನೆದುರಿಗೇ ಒಬ್ಬ ಸತ್ಯಾಗ್ರಹಿಗೆ ಬೇಕು ಎಂದೇ ಹಿಂಸೆ ಮಾಡಿದರು. ಬೊರ್‌ಸಾದ್‌ನಲ್ಲಿ ಅವರು, ಇನ್ನೂ ವಿಚಾರಣೆಯಿಲ್ಲದೆ ಇಟ್ಟಿದ್ದ ಖೈದಿಗಳನ್ನು ನೋಡಿದೆ. ಅದೊಂದು ಬೋನು. ಸುಮಾರು 30 ಅಡಿ ಚಚ್ಚೌಕವಾದ ಮೃಗಾಲಯದ ಆ ಬೋನಿನಲ್ಲಿ ಹದಿನೆಂಟು ಜನ ಇದ್ದರು. ಅವರು ಹಗಲು ರಾತ್ರಿ ಆ ಬೋನಿನಲ್ಲಿರುತ್ತಿದ್ದರು. ಒಬ್ಬನು ಬಂದು ಆಗಲೇ ಆರು ವಾರವಾಗಿದ್ದಿತು. ಈ ಬೋನಿನ ಪ್ರಾಣಿಗಳನ್ನು ದಿವಸಕ್ಕೆ ಒಂದು ಸಲ ಮುಕ್ಕಾಲು ಗಂಟೆ ಮಾತ್ರ ಹೊರಕ್ಕೆ, ದೇಹಬಾಧೆ ತೀರಿಸಿಕೊಳ್ಳಲು ಬಿಡುತ್ತಿದ್ದರು. ಅವರಲ್ಲಿ ಮೂರು ಜನರನ್ನು ಜೈಲಿನಲ್ಲಿ ಹೊಡೆದರೆಂದು ಹೇಳಿದರು. ಈ ಬೋನು ಯಾವ ಹಳೆ ಕಾಲಕ್ಕೆ ಸೇರಿದುದೋ ಅದೇ ಕಾಲಕ್ಕೇ ಆ ಬಡಿಯುವುದೂ ಸೇರಿದುದು. ನಾನು ಅವರ ಮಾತನ್ನು ನಂಬುತ್ತೇನೆ. "ಗಾಂಧಿ ಜೈಲಿನಲ್ಲಿರುವವರೆಗೆ ಈ ಚಳುವಳಿ ನಿಲ್ಲುವುದಿಲ್ಲ. ಕಮ್ಮಿಯಾಗುವುದೂ ಇಲ್ಲ."

"ನನಗೇ ಇದರ ಅನುಭವವುಂಟಾಯಿತು. ನನ್ನ ಮೋಟಾರು ಒಂದು ಹಳ್ಳಿಯಮುಂದೆ ಹೋಗುತ್ತಿರುವಾಗ ಪೋಲೀಸಿನವನು ಬಂದೂಕವನ್ನು ಎತ್ತಿ 'ನಿಲ್ಲು' ಎಂದು ಅಪ್ಪಣೆ ಮಾಡಿದನು. ಪೋಲೀಸಿನವರ ಬರಹದ ಅಪ್ಪಣೆಯಿಲ್ಲದೆ ಮುಂದೆ ಹೋಗಕೂಡದೆಂದನು. ಆದರೆ ನನ

ಯೂರೋಪಿಯನ್ ಬಟ್ಟೆ ನೋಡಿದ ಕೂಡಲೇ ಅವನ ಪ್ರಾಣ ಹಾರಿಯೇ ಹೋಯಿತು. ನಾನು 'ಬಿಳಿ ಪೋಲೀಸಿನವನು ಎಂದು ನಾಯಿಯಾಗಿ ಹಲ್ಲು ಗಿರಿದ ಅವನ ಮೈಮೇಲೆ ಅವನ ಅಂಕಿ ಇರಲಿಲ್ಲ. ನಿನ್ನ ಅಂಕಿ ಎಲ್ಲಿ ಎಂದು ನಾನು ಕೇಳಿದಾಗ "ಅವನು ನನ್ನ ನಂಬರು ಗುಟ್ಟು" ಎಂದನು. ಹೀಗೆ ನಂಬರು ಹೊರಗೆ ಕಾಣದೆ ಇರುವುದಕ್ಕೆ ಅಧಿಕಾರಿಗಳ ಚಾತುರ್ಯ ಕಾರಣವಲ್ಲ. ಈ ಪೋಲೀಸು ಐರ್ಲೆಂಡಿನ ಬ್ಲಾಕ್ ಮತ್ತು ಟಾನ್ ಎಂಬ ಕ್ರೂರಕರ್ಮಿಗಳನ್ನು ಹೋಲುತ್ತದೆ.

"ಸರ್ಕಾರ ಕಾನೂನಿಗೆ ಅನುಸಾರವಾಗಿ ದಂಗೆಕೋರರನ್ನು ಅಹಿಂಸಾತ್ಮಕ ದಂಗೆಯಾದರೂ ಸರಿಯೆ—ಎದುರಿಸಿದರೆ ಅದನ್ನು ಯಾರೂ ಆಕ್ಷೇಪಿಸುವುದಿಲ್ಲ. ರಾಷ್ಟ್ರೀಯ ಸಭೆ ಕಾನೂನು ವಿರುದ್ಧವೆಂದು ಅದು ಸಾರಿದೆ. ಬರಡೋಲಿಯ ಸುಂದರವಾದ ಆಶ್ರಮವನ್ನು ಮುಟ್ಟಗೋಲು ಹಾಕಿಕೊಂಡಿದೆ. ನಾನು ಯಾರ ಅತಿಥಿಯಾಗಿದ್ದೆನೋ ಅವರನ್ನು ಸೂರತ್‌ನಲ್ಲಿ ನಾನು ಈಚೆಗೆ ಬಂದ ರಾತ್ರಿಯೇ ದಸ್ತಗಿರಿಮಾಡಿದೆ. ಬರಡೋಲಿ ರೈತರ ಸಾಮಾನುಗಳನ್ನು ಮುಟ್ಟಗೋಲು ಹಾಕಿಕೊಂಡಿದೆ. ಕೊಳ್ಳುವವರು ಸಿಕ್ಕಿದರೆ ಮಾರುತ್ತದೆ.

"ಇದು ಆಟದ ನಿಯಮ. ಆದರೆ ಭೀಭತ್ಸಗಳು ನಿಯಮದಿಂದ ಹೊರಗಾಗಿವೆ. ನನ್ನ ನೋಟುಬುಕ್ಕು ನಾನು ಪ್ರಯಾಣದಲ್ಲಿ ರೈತ ರೊಂದಿಗೆ ಮಾತನಾಡಿದುದರಿಂದ ತುಂಬಿದೆ. ನಾನು ಅವರು ಹೇಳಿದ ಕತೆಗಳನ್ನು ಬರೆಹಚ್ಚಲಿಲ್ಲ. ಆದರೆ ಅವರನ್ನು ಎಚ್ಚರಿಕೆಯಿಂದ ಪ್ರಶ್ನಿಸಿದೆ. ಅವರ ಮಾತುಗಳಲ್ಲಿ ನನಗೆ ಅಪನಂಬಿಕೆ ಇಲ್ಲ. ಈ ಟಿಪ್ಪಣಿಗಳೂ ಹೆಸರುಗಳೂ ಮೇಲಧಿಕಾರಿಗಳಿಗೆ ಹೋಗುತ್ತವೆ. ಒಂದು ಹಳ್ಳಿಯನ್ನು ಕಳ್ಳರು ಪ್ರತಿ ರಾತ್ರಿಯೂ ನುಗ್ಗಿ ಲೂಟಿ ಮಾಡುತ್ತಿದ್ದರು. ಬಂದೂಕ ಹಾರಿಸುತ್ತಿದ್ದರು. ಸ್ತ್ರೀಯರ ಘರದೆ ಕೀಳುತ್ತಿದ್ದರು. ಒಂದು ಸಲ ಒಬ್ಬ ಮುದುಕನನ್ನು ಕೊಡಲಿಯಿಂದ ಹೊಡೆದು ಕೊಂದೇ ಕೊಂದರು. ಗ್ರಾಮಸ್ಥರು ಸರ್ಕಾರದ ಒಬ್ಬ ಪೋಲೀಸ್ ಅಧಿಕಾರಿಯನ್ನು "ಈ ಡಕಾಯಿತರಿಂದ ನಮಗೆ ಸಂರಕ್ಷಣೆ ಕೊಡಿ" ಎಂದು ಕೇಳಿದಾಗ ಆ ಅಧಿ ಕಾರಿ "ನಿಮ್ಮ ಕಂದಾಯ ಕೊಡಿ. ಕೊಡುತ್ತೇವೆ" ಎಂದರು. ನನಗೆ ಬಂದ ದೂರುಗಳಲ್ಲಿ ಪೋಲೀಸಿನವರು ರೈತರನ್ನು ಕಾರಣವಿಲ್ಲದೆ ಲಾಠಿ ಗಳಿಂದ ಬಡಿದ ಸಂಗತಿಗಳೇ ಹೆಚ್ಚಾಗಿದ್ದವು.

" ಅನೇಕ ಪ್ರಶ್ನೆಗಳನ್ನು ಹಾಕಿ ಒಂದು ದೃಶ್ಯವನ್ನು ಪುನರ್ರಚಿಸಿದೆ. ಇದು ನಡೆದುದು ಆಷ್ಪ ಎಂಬ ಹಳ್ಳಿಯಲ್ಲಿ. ಇಲ್ಲಿ ಜಮೀನುಗಳು ಇಲ್ಲದ ಕೆಲವು ರೈತರು ಉಳಿದಿದ್ದರು. ಅವರ ಜತೆಯಲ್ಲಿ ಬರೋಡದಿಂದ ಹಿಂದಿರುಗಿದ ಕೆಲವರು ಇದ್ದರು. 21ನೇ ಅಕ್ಟೋಬರ್ ರಾತ್ರಿ 3 ಗಂಟೆಗೆ ಒಬ್ಬ ಸಬ್ ಇನಿಸ್ಪೆಕ್ಟರ್‌ರವರ ಜತೆಯಲ್ಲಿ 10 ಜನ ಪೋಲೀಸಿನವರು ಒಂದು ಮೋಟಾರಿನಲ್ಲಿ ಬಂದು ಇಳಿದರು. ಅವರು ಬರುವವೇಳೆಗೆ ಆ ರೈತರು ಬಯಲಿನಲ್ಲಿ ಮಲಗಿದ್ದರು. ಅವರು ಅವರನ್ನು ಬಡಿದು ಕಂದಾಯವನ್ನು ಕೇಳಿದರು. ಪೋಲಿಸಿನವರು, ರೈತರನ್ನು ಸಬ್ ಇನಿಸ್ಪೆಕ್ಟರ್‌ರವರ ಎದುರಿಗೆ ಕರೆತಂದರು. ಅವರೂ ಕೆಲವರನ್ನು ಬಡಿದರು. ಕೆಲವರನ್ನು ಒದ್ದರು. ಒಬ್ಬನು ಕುಂಟುತ್ತಿದ್ದನು. ಒಬ್ಬನಿಗೆ ಕಾಲು ಊದಿದ್ದಿತು. ಇಬ್ಬರು ಅಣ್ಣತಮ್ಮಂದಿರ ತಲೆಗಳನ್ನು ಸಬ್‌ಇನಿಸ್ಪೆಕ್ಟರು ಒಂದಕ್ಕೊಂದಕ್ಕೆ ಡಿಕ್ಕಿ ಹೊಡಿಸಿದರು. ಅನಂತರ ಅವರನ್ನು ಬರಡೋಲಿ ಲಾಕ್‌ಅಪ್‌ನಲ್ಲಿ ಸೇರಿಸಿದರು. ಅಲ್ಲಿ ಆ ಸಬ್ ಇನಿಸ್ಪೆಕ್ಟರು, ಅಚ್ಚು ಮಾಡಲಾರದಂತಹ ವಿವರಗಳಿಂದ ಅವರನ್ನು " ಅವರ ಹೆಂಡತಿಯರಿಗೆ ಅನುಪಯುಕ್ತವಾಗಿ ಮಾಡುವುದಾಗಿ " ಹೆದರಿಸಿದನು. ಆ ಹೆದರಿಕೆ ಫಲವಾಯಿತು. ಚಿಕ್ಕ ತಮ್ಮನು, ತಾನು ಜಮೀನದಾರನಲ್ಲದಿದ್ದರೂ ತಂದೆಯ ಜಮೀನಿಗೆ ಕಂದಾಯವನ್ನು ಕೊಟ್ಟನು. ಇನ್ನೊಂದು ಸಂದರ್ಭದಲ್ಲಿ ಮಾರ್ಗದಲ್ಲಿ ಹೋಗುತ್ತಿದ್ದ ಒಬ್ಬನನ್ನು ಹಿಡಿದು ಅವನನ್ನು ಬಡಿದು ಅವನ ಜೇಬಿನಲ್ಲಿದ್ದ ದುಡ್ಡನ್ನು ಕಿತ್ತುಕೊಂಡು, ಯಾರೊ ಒಬ್ಬನ ಕಂದಾಯಕ್ಕಾಗಿ ರಸೀತಿ ಕೊಡಿಸಿದರು. ಅನಂತರ ಅವನಿಗೆ ನೀನು ಹೋಗಿ ಅವನಿಂದ ಕೊಟ್ಟಿರುವ ಕಂದಾಯ ವಸೂಲುಮಾಡಿಕೊ " ಎಂದು ಹೇಳಿದರು. ಸಬ್ ಇನಿಸ್ಪೆಕ್ಟರು ಬಹಳ ಬುದ್ಧಿವಂತ ಮತ್ತು ಕ್ರೂರಿ. ಹಳ್ಳಿಗೆ ಸೂರತ್‌ನಿಂದ ಒಬ್ಬ ಹೊಸಬ ಬಂದಿದ್ದ. ಸಬ್ ಇನಿಸ್ಪೆಕ್ಟರು ಅವನ ಹತ್ತಿರ ಇದ್ದ ಚಿನ್ನದ ಒಡವೆಗಳನ್ನು ಕಿತ್ತುಕೊಂಡು ಅದನ್ನು ಕೊಳ್ಳುವಂತೆ ಹಳ್ಳಿಯವರನ್ನು ಬಲಾತ್ಕರಿಸಿದ. ಈ ಇತಿಹಾಸ ನಾನು ಅಂತ್ಯವಿಲ್ಲದಂತೆ ಹೇಳಬಹುದು ಆದರೂ ಅದು ಈ ಅಧಿಕಾರಿಯ ಒಂದು ಪ್ರಾತಃಕಾಲದ ಕೆಲಸ ಮಾತ್ರವಾಗುತ್ತಿದ್ದಿತು. ಈ ಅಧಿಕಾರಿಯನ್ನು ಕಂಡು ಅವನು ಹೇಳುತ್ತಿದ್ದ ಸುಳ್ಳನ್ನು ನಾನು ಅನುಭವಿಸದೆ ಇದ್ದಿದ್ದರೆ, ಇದನ್ನು ನಾನು ನಂಬಲು

ಹಿಂದು ಮುಂದು ನೋಡಬೇಕಾಗುತ್ತಿದ್ದಿತು. ಭಾರತ ದೇಶದ ಮೂಕರಾದ ೪೦ ಕೋಟಿ ಸಂಖೆಯ ಜನರಿಗೆ, ಸಿಮ್ಲಾ ಮತ್ತು ವೈಟ್‌ಹಾಲಿನ ಸುರಕ್ಷಿತವಾದ ಎತ್ತರದಲ್ಲಿ ಕುಳಿತು ಹೀಗೆ ಶಿಸ್ತು ಶಾಂತಿಯನ್ನು ಸರ್ಕಾರ ಕೊಡುತ್ತಿದೆ.'' "ಬರಡೋಲಿಯ ರೈತರು ತಾಲ್ಲೂಕು ಬಿಟ್ಟು ಹೊರಟು ಹೋದರು. ಅವರು ಬಿತ್ತಿದ್ದ ಪೈರುಗಳನ್ನು ಸಹ ಕಟಾವುಮಾಡಿ ತೆಗೆದುಕೊಂಡು ಹೋಗಲು ಅವರಿಂದ ಸಾಧ್ಯವಾಗಲಿಲ್ಲ. ಬರಡೋಲಿ ತಾಲ್ಲೂಕು ಒಂದರಲ್ಲಿಯೇ 1,17,000 ಎಕರೆ|ಜಮೀನನ್ನು ಅಂದರೆ 6 ಕೋಟಿ ರುಪಾಯಿ ಬೆಲೆ ಬಾಳುವ ಜಮೀನನ್ನು ಬಿಟ್ಟು ಹೊರಟುಹೋದರು. ಅವರು ಬಿಟ್ಟು ಹೋದ ಮನೆಗಳಿಗೆ ಸುಮಾರು 3 ಕೋಟಿ ರುಪಾಯಿ ಬೆಲೆ ಬಾಳುತ್ತದೆ. ಆ ವರುಷ ಬೆಳೆದು ಕಟಾವಿಗೆ ಬಂದಿದ್ದ ಸುಮಾರು 50 ಲಕ್ಷ ರುಪಾಯಿಗಳ ಧಾನ್ಯವನ್ನು ಬಿಟ್ಟುಹೋದರು. ಗಾಂಧೀಜಿಯವರಿಗೂ ವಲ್ಲಭಾಯಿರವರಿಗೂ ಕೊಟ್ಟ ವಾಗ್ದಾನವನ್ನು ಉಳಿಸಿಕೊಳ್ಳುವುದಕ್ಕಾಗಿ ಅವರು ಇಂದು ಸಮಸ್ತವನ್ನೂ ತೊರೆದು ಹೋಗುತ್ತಿದ್ದಾರೆ.''

ಈ ಸಂದರ್ಭದಲ್ಲಿ ಪೋಲೀಸರು ಅಸಂಖ್ಯಾತವಾಗಿ ಗುಂಡುಹಾರಿಸಿದರು; ಮಿಲಿಟರಿಯವರು ಮನಸ್ಸು ಒಂದಂತೆ ನಡೆದರು; ಪೆಷಾವರ್‌ನಲ್ಲಿ ಸರ್‌ದಾರ್ ಗಂಗಾಸಿಂಗ್ ಎಂಬುವರು ಒಂದು ಟಾಂಗಾದಲ್ಲಿ ತಮ್ಮ ಹೆಂಡತಿ, 9 ವರುಷದ ಹೆಣ್ಣು ಮಗಳು, 15 ತಿಂಗಳಿನ ಗಂಡು ಮಗು ಇವರೊಂದಿಗೆ ಎಲ್ಲಿಗೋ ಹೋಗುತ್ತಿರುವಾಗ ಒಬ್ಬ ಬ್ರಿಟಿಷ್ ಸಿಪಾಯಿ ಅವರ ಮೇಲೆ ಗುಂಡು ಹಾರಿಸಿದನು. 15 ತಿಂಗಳ ಮಗುವೂ 9 ವರುಷದ ಹೆಣ್ಣೂ ಅಲ್ಲಿಯೇ ಸತ್ತವು. ಅವರ ಹೆಂಡತಿಗೆ ಬಹಳ ಘಾಯಗಳಾದವು. ಗುಂಡು ಅವರ ಎದೆಯನ್ನು ಕಿತ್ತುಕೊಂಡೇ ಹೋಯಿತು. ಪೋಲೀಸ್ ಆಗಲಿ ಮಿಲಿಟರಿ ಆಗಲಿ ಅವರನ್ನು ವೈದ್ಯಶಾಲೆಗೆ ಸಾಗಿಸಲು ಏನೊಂದೂ ಸಹಾಯಮಾಡಲಿಲ್ಲ. ಶವಗಳನ್ನು ಜನರು ಡಿಪ್ಯುಟಿ ಕಮಿಶನರ ಅಪ್ಪಣೆ ಮೇರೆ ಮೆರವಣಿಗೆ ತೆಗೆದುಕೊಂಡು ಹೋಗುತ್ತಿರುವಾಗ, ಕೆಲವು ಬ್ರಿಟಿಷ್ ಸಿಪಾಯಿಗಳು ಆ ಮೆರವಣಿಗೆಯ ಮೇಲೆ ಮತ್ತೆ ಗುಂಡು ಹಾರಿಸಿದರು. ಸರ್ಕಾರದವರು, ಅಸೆಂಬ್ಲಿಯಲ್ಲಿ ಕೇಳಿದ ಪ್ರಶ್ನೆಗಳಿಗೆ ಉತ್ತರವಾಗಿ "ಅವತ್ತು 17 ರೌಂಡು ಗುಂಡು ಹಾರಿಸಿದುದಾಗಿಯೂ ಬಹಳ ವಿಷಾದಕರವಾದ ಘಟನೆ'' ಎಂದೂ ಮಾತ್ರ ಹೇಳಿದರು. ಸತ್ತವರು 9 ಜನ. ಸರಕಾರದವರ

ಯಾರ ಮೇಲೂ ಯಾವ ಕಾರ್ಯಕ್ರಮವನ್ನೂ ತೆಗೆದುಕೊಳ್ಳಲಿಲ್ಲ. ಲೆಜಿಸ್ಲೆಟೀವ್ ಅಸೆಂಬ್ಲಿಯಲ್ಲಿ ಪ್ರಶ್ನೆ ಬಂದಾಗ ಎಲ್ಲಾ ಪ್ರಾಂತ್ಯಗಳಲ್ಲಿಯೂ, ಗುಂಡುಹಾರಿಸಿರುವುದಾಗಿಯೂ ಒಟ್ಟು 111 ಜನ ಸತ್ತುದಾಗಿಯೂ ಸುಮಾರು 400 ಜನ ಘಾಯಗೊಂಡವರಾಗಿಯೂ ತಿಳಿಸಿದರು. ಸಾರ್ವಜನಿಕರ ಅಂದಾಜಿನಲ್ಲಿ ಈ ಸಂಖ್ಯೆಗಳು ಇವುಗಳ 7 ಅಥವಾ 8 ರಷ್ಟು ಇದ್ದವು.

ಬೊಂಬಾಯಿನಲ್ಲಿ ಅಸಾಧ್ಯವಾದ ಲಾಠಿ ಛಾರ್ಜುಗಳು ಪ್ರತಿದಿನವೂ ನಡೆಯುತ್ತಿದ್ದವು. ಪ್ರತಿ ತಿಂಗಳ ನಾಲ್ಕನೆ ತಾರೀಖನ್ನೂ ಗಾಂಧಿ ದಿವಸವಾಗಿಯೂ ಪ್ರತಿತಿಂಗಳ ಕೊನೆಯುವಾರವನ್ನೂ ಧ್ವಜಾರೋಹಣ ದಿನವಾಗಿಯೂ ನಡೆಸುತ್ತಿದ್ದರು. ಪೋಲಿಸಿನವರಿಗೆ ನಿತ್ಯಾ ಆಜಾದ್ ಮೈದಾನದಲ್ಲಿ ಕೂಡಿದ ಸಭೆ ಚದುರಿಸುವುದೊಂದು ಕೆಲಸವಾಯಿತು. ದೇಶದ ಉಳಿದ ಶಿಸ್ತು ಶಾಂತಿ ದೇವರು ನೋಡಿಕೊಳ್ಳುತ್ತಿದ್ದ! ಬೊಂಬಾಯಿನಲ್ಲಿ ಈ ಲಾಠಿ ಪ್ರಹಾರವನ್ನು ನೋಡಿದ ಬಿಕನೀರ್ ಮಹಾರಾಜರು "ಈ ಲಾಠಿಗಿಂತ ಮಾರ್ಷಲ್‌ಲಾ ಉತ್ತಮ. ಲಾಠಿ ಪ್ರಹಾರವನ್ನು ಸಹಿಸಿರುವ ದೇಶ ನಿಜವಾಗಿಯೂ ಮಾರ್ಷಲ್‌ಲಾವನ್ನು ತಡೆಯುತ್ತದೆ" ಎಂದರು. ಮದರಾಸಿನಲ್ಲಿ ದೂರದಲ್ಲಿ ನಿಂತು ನೋಡುತ್ತಿದ್ದ ಪೇಟನ್ ಎಂಬ ಪಾದ್ರಿಯನ್ನು ಪೋಲಿಸರು ಲಾಠಿಯಿಂದ ಬಡಿದರು. ಸತ್ಯಾಗ್ರಹಿಗಳನ್ನೆಲ್ಲಾ ಲಾಠಿಗಳಲ್ಲಿ ಕೂರಿಸಿಕೊಂಡು ಹೋಗಿ ನೂರಾರು ಮೈಲಿ ಆಚೆ ಬಿಟ್ಟು ಬರುತ್ತಿದ್ದರು.

ಪರದೇಶದ ಬಟ್ಟೆ ಅಂಗಡಿ ಮತ್ತು ಹೆಂಡದ ಅಂಗಡಿಗಳ ಸಂರಕ್ಷಣೆಗಾಗಿಯೇ ಸರ್ಕಾರ ನಡೆಯುತ್ತಿದ್ದಂತೆ ತೋರಿತು. ಮನೆ, ಪ್ರೆಸ್ಸು ಎಲ್ಲವನ್ನೂ ಸರ್ಕಾರ ಮುಟ್ಟುಗೋಲು ಹಾಕಿಕೊಳ್ಳತೊಡಗಿತು. ಮಿಡ್ನಾಪುರದಲ್ಲಿ ದಬ್ಬಾಳಿಕೆ ಅಸಾಧ್ಯವಾಯಿತು. ಕಾಂಗ್ರೆಸ್ ಸ್ವಯಂ ಸೇವಕರಿಗೆ ನೀರು ಅನ್ನ ಕೊಟ್ಟುದಕ್ಕೂ, ಗಾಯಗೊಂಡು ಬಿದ್ದವರಿಗೆ ಚಿಕಿತ್ಸೆ ಮಾಡಿದುವಕ್ಕೂ ಜನರನ್ನು ಬಂಧಿಸಿದರು. ಬಂಗಾಳದಲ್ಲಿ ಖೇರ್‌ಸೈ ಎಂಬಲ್ಲಿ ಸಣ್ಣ ಕಾರಣಕ್ಕಾಗಿಯೂ ಗುಂಡು ಹಾರಿಸುವಂತೆ ಅಪ್ಪಣೆಯಾಗಿತ್ತು. ಸಾಮಾನು ಜಪ್ತಿ ಮಾಡುವುದನ್ನು ನೋಡಲು ಖೇರ್‌ಸೈನಲ್ಲಿ ಗುಂಪು ಸೇರಿದ್ದಾಗ, ಪೋಲಿಸರು ಇದ್ದಕ್ಕಿದಂತೆ ಗುಂಡು ಹಾರಿ

ಸಿದರು. ಚೆಚ್ನ ಎಂಬಲ್ಲಿ ಓಡಿಹೋಗುತ್ತಿದ್ದ ಗುಂಪಿನ ಮೇಲೆ ಗುಂಡು ಹಾರಿಸಿದುದರಿಂದ 6 ಜನ ಸತ್ತರು. 18 ಜನಕ್ಕೆ ಘಾಯವಾಯಿತು. ಕಾಂಟ್ಥೈ ಎಂಬಲ್ಲಿ ಉಪ್ಪನ್ನು ತಯಾರಿಸುತ್ತಿದ್ದುದನ್ನು ನೋಡಲು ನೆರೆದಿದ್ದ ಜನರ ಮೇಲೆ ಪೋಲೀಸರು ಗುಂಡು ಹಾರಿಸಿದಾಗ 25 ಜನಕ್ಕೆ ಘಾಯಗಳಾದವು. ಒಬ್ಬನನ್ನು ದಸ್ತಗಿರಿಮಾಡಲು, ಅವನನ್ನು ನೋಡುವುದಕ್ಕಾಗಿ ನೆರೆದಿದ್ದ ಗುಂಪಿನಮೇಲೆ ಗುಂಡುಹಾರಿಸಿದಾಗ 11 ಜನ ಸತ್ತರು. ಕಲ್ಕತ್ತದಲ್ಲಿ ದೇಶಬಂಧು ದಾಸರ ಶ್ರಾದ್ಧ ಉತ್ಸವವನ್ನು ನೆರವೇರಿಸಲು ಜನ ನೆರೆದಿದ್ದಾಗ ಪೋಲಿಸಿನವರು ಸ್ತ್ರೀ ಪುರುಷರನ್ನು ಕಣ್ಣು ಮುಚ್ಚಿಕೊಂಡು ಲಾಠಿಗಳಿಂದ ಬಡಿದರು. ಸ್ತ್ರೀಯರು ಗಾಯಗೊಂಡವರ ಮೇಲೆ ನುಗ್ಗುತ್ತಿದ್ದ ಕುದುರೆಗಳನ್ನು ತಡೆಯಲು ಕುದುರೆಗಳ ಮುಂದೆ ಗುಂಪು ಗುಂಪಾಗಿ ಮಲಗಿದರು. ಇಷ್ಟಾದರೂ ಪೋಲಿಸಿನವರು ಮಾಡುವ ಲಾಠಿ ಛಾರ್ಜು ಮೃದುವಾದ (Mild) ಲಾಠಿ ಛಾರ್ಜು ಎಂದು ಹೇಳುವವರು ನಮ್ಮಲ್ಲಿ ಇನ್ನೂ ಇದ್ದಾರೆ.

ಬಾರಿಸಾಲ್‌ನಲ್ಲಿ ಒಂದು ದಿವಸದ ಲಾಠಿ ಛಾರ್ಜಿನಲ್ಲಿ 500 ಜನಕ್ಕೆ ಘಾಯಗಳಾದುವು. ಟಾಮಲ್ಕ್ ಎಂಬ ಊರಿನಲ್ಲಿ ಪೋಲೀಸಿನವರೇ ಸತ್ಯಾಗ್ರಹಿಗಳ ಮತ್ತು ಅವರಲ್ಲಿ ಸಹಾನುಭೂತಿಯುಳ್ಳವರ ಮನೆಗಳಿಗೆ ಬೆಂಕಿ ಹಚ್ಚಿದರೆಂದು ಹೇಳಲ್ಪಟ್ಟಿತು. ಅತ್ಯಾಚಾರದ ಸುದ್ದಿಗಳೂ ಹರಡಿದವು. ಗೋಪಿನಾತ್‌ಪುರದಲ್ಲಿ ಕಾಂಗ್ರೆಸ್ ಸ್ವಯಂ ಸೇವಕರನ್ನು ಪೋಲೀಸಿನವರು ಚೆನ್ನಾಗಿ ಬಡಿದರು. ಅವರ ಪೈಕಿ ಒಬ್ಬ ಮುಸಲ್ಮಾನ ಹುಡುಗನೂ ಇದ್ದ. ಹಳ್ಳಿಯವರು ಒಂದುಗಳಿಗೆ ಗಾಂಧಿಯವರ ಅಹಿಂಸೆಯನ್ನು ಮರೆತು ಪೋಲೀಸಿನವರ ಮೇಲೆ ಬಿದ್ದು ಅವರನ್ನು ಹಳ್ಳಿಯ ಸ್ಕೂಲಿನಲ್ಲಿ ಕೂಡಿ ಬೀಗಹಾಕಿ ಸ್ಕೂಲಿಗೆ ಬೆಂಕಿ ಹತ್ತಿಸುವುದರಲ್ಲಿದ್ದರು. ಇಬ್ಬರು ಸ್ವಯಂ ಸೇವಕರು ಜೀವದ ಆಸೆ ತೊರೆದು ನುಗ್ಗಿ ಸ್ಕೂಲನ್ನು ತೆರೆದು ಪೋಲಿಸಿನವರನ್ನು ರಕ್ಷಿಸಿದರು. ಲಾಹೋರಿನಲ್ಲಿ ಸ್ವಾತಂತ್ರ್ಯ ದಿನಾಚರಣೆಯ ಮೆರವಣಿಗೆಯಲ್ಲಿ ಹೋಗುತ್ತಿರುವಾಗ ಪೋಲೀಸರು ಸುಭಾಷ್ ಬೋಸರನ್ನು ಲಾಠಿಯಿಂದ ಬಡಿದರು. ಅವರು ರಾಜದ್ರೋಹಕ್ಕೆ ಆಗತಾನೆ ಒಂದು ವರುಷ ಕಾರಾಗೃಹವನ್ನು ಅನುಭವಿಸಿ ಬಂದಿದ್ದರು. ಲುಧಿಯಾನದಲ್ಲಿ ಒಬ್ಬಳು ಮುಸ್ಲಿಂ ಘರದಾ ಸ್ತ್ರೀಯನ್ನು

ಪಿಕೆಟಿಂಗ್‌ಗಾಗಿ ಬಂಧಿಸಿದರು. ರಾವಲ್‌ಪಿಂಡಿಯಲ್ಲಿ ಸೆರೆಯಾಳುಗಳು ಕೆಟ್ಟಆಹಾರವನ್ನು ತೆಗೆದುಕೊಳ್ಳದುದರಿಂದ ಖೈದಿಗಳಮೇಲೆ ಮತ್ತೊಂದು ಖಟ್ಲೆ ಹಾಕಿದರು. ಟಾಮ್ ಟಾವ್‌ನಲ್ಲಿ ಪೋಲಿಸರು ಒಬ್ಬ ಸ್ತ್ರೀಯ ಮೇಲೆ ಅತ್ಯಾಚಾರ ಮಾಡಿದರು. ಮಾಂಟ್‌ಗೊಮರಿಯಲ್ಲಿ ಲಾಲಾಲಕಿರಾಂ ಎಂಬುವರು ಉಪವಾಸದಿಂದ ಸತ್ತರು. ಪಂಜಾಬ್ ಸಿನೇಟಿನಲ್ಲಿ ಗವರ್ನರ ಮೇಲೆ ಗುಂಡು ಹಾರಿಸಿದುದರಿಂದ ಪೋಲಿಸಿನವರಿಗೆ ರಾಕ್ಷಸೀಕೃತ್ಯ ಮಾಡಲು ಅಲ್ಲಿ ಒಂದು ಅವಕಾಶ ದೊರಕಿತು. ಬಿಹಾರ್‌ನಲ್ಲಿ ಶಾಹ ಪುರ್ ಸಬ್ ಡಿವಿಜನ್‌ನಲ್ಲಿ ಒಂದುದಿನ 125 ಪೋಲಿಸಿನವರು ಶಾಹಪುರ್ ಪಟೋರಿಯಾ ಎಂಬ ಅಂಗಡಿ ಬೀದಿಯನ್ನು ಮುತ್ತಿ 46 ಜನರನ್ನು ದಸ್ತ ಗಿರಿಮಾಡಿ, ಮನೆಗಳಲ್ಲಿಲ್ಲದವರ ಸಾಮಾನುಗಳನ್ನೆಲ್ಲಾ 12 ಗಾಡಿಗಳಲ್ಲಿ ಲೂಟಿಮಾಡಿಕೊಂಡು ಹೋದರು. ಇಂತಹ ಲೂಟಿಗಳ ಸುದ್ದಿ ಉಳಿದ ಕಡೆಗಳಿಂದಲೂ ಬಂದವು.

ಬಿಹಾರ್‌ನಲ್ಲಿ ಹೆಂಡದ ಅಂಗಡಿ ಪಿಕೆಟ್‌ನಿಂದ ಸರ್ಕಾರಕ್ಕೆ ೪೦ ಲಕ್ಷ ರುಪಾಯಿ ನಷ್ಟವಾಯಿತು. ಮೋತಿಹಾರಿಯ ಪುಲ್‌ವೇರಿಯ ಎಂಬಲ್ಲಿ ಪೋಲೀಸಿನವರೂ ಘೂರ್ಕರ ಮಿಲಿಟರಿಯೂ ಬಂದು ಛತ್ರದ ಪೈರ ನ್ನೆಲ್ಲಾ ಧ್ವಂಸಮಾಡಿ ಅಸಂಖ್ಯಾತ ಜನರನ್ನು ಬಂಧಿಸಿತು. ಚಂಪಾರಣ್ಯ ಸಾರನ್, ಮುಜಫರ್‌ಪುರ್, ಮಾಂಘೀರ್ ಪಾಟ್ನ ಮತ್ತು ಶಾಹಾಬಾದ್ ಡಿಸ್ಟ್ರಿಕ್ಟ್‌ಗಳಲ್ಲಿ ಚೌಕಿದಾರಿ ಕರನಿರಾಕರಣದ ವ್ಯವಸ್ಥೆಯಾಯಿತು. ಮಧ್ಯ ಪ್ರಾಂತ್ರದಲ್ಲಿ ಹೆಂಡದ ಉತ್ಪತ್ತಿ ಶೇಕಡ 60 ಕಡಿಮೆಯಾಯಿತು. ಆಂಧ್ರ ದಲ್ಲಿ ಒಂದು ಮನೆಯಲಿ ಜನರು ಔತಣಕ್ಕಾಗಿ ಸೇರಿದ್ದಾಗ ಪೋಲೀಸರು ಅಲ್ಲಿ 80 ಜನರನ್ನು ಬಡಿದರು ಇಬ್ಬರು ಮೂವರು ಸ್ತ್ರೀಯರಿಗೂ ಇತರ ರಿಗೂ ಬಹಳ ಏಟುಬಿದ್ದಿತು. ಕೇರಳದಲ್ಲಿ ಹೆಂಡದ ಉತ್ಪತ್ತಿ ಶೇಕಡ 70 ರಷ್ಟು ಕಡಿಮೆಯಾಯಿತು. ತಮಿಳ್‌ನಾಡಿನಲ್ಲಿ ಹೆಂಡದ ಉತ್ಪತ್ತಿಕಡಮೆ ಯಾದ ಕಡೆ, ಹರಾಜಿಗೆ ಜನ ಬರದಕಡೆ ಪೋಲೀಸಿನವರು ಲಾಠಿ ಪ್ರಯೋ ಗಿಸಿದರು; ಬಂದೂಕ ಹಾಕಿಸಿದರು. ಡೆಲ್ಲಿಯಲ್ಲಿ ಹೆಂಡದ ವ್ಯಾಪಾರಿ ಯಾದ ಒಬ್ಬ ರಾಯ್‌ಸಾಹೇಬ, ಪಿಕೆಟ್‌ಮಾಡಲು ಬಂದ 80 ಜನ ಸ್ವಯಂಸೇವಕಿಯರನ್ನೂ ಅನೇಕ ನೂರು ಸ್ವಯಂಸೇವಕರನ್ನೂ ದಸ್ತ ಗಿರಿ ಮಾಡಿಸಿ ಪ್ರಸಿದ್ಧನಾದನು.

ಬಟ್ಟೆಯ ವ್ಯಾಪಾರಿಗಳೂ ವರ್ತಕರೂ ಪಿಕೆಟ್ ಮಾಡುವವರಿಗೆ ತೊಂದರೆಕೊಡಬೇಡಿ ಎಂದು ಹೇಳಿದರೂ ಸರ್ಕಾರ ಕೇಳಲಿಲ್ಲ. ಜನರನ್ನು ಬಡಿಯಲು ಅವರಿಗೆ ಯಾವುದೋ ಒಂದು ಕಾರಣಬೇಕಾಗಿದ್ದಿತು. 1930ನೆ ಇಸವಿ ಆಗಸ್ಟ್ 14ನೇ ತಾರೀಖು ಬೊಂಬಾಯಿನ 480 ಪ್ರಮುಖ ವರ್ತಕರು ಪೋಲೀಸ್ ಕಮಿಶನರಿಗೆ "ನೀವು ನಮ್ಮ ಅಂಗಡಿ ಮುಂದೆ ಪಿಕೆಟ್ ಮಾಡುತ್ತಿರುವ ಸ್ವಯಂ ಸೇವಕರನ್ನು ದಸ್ತಗಿರಿಮಾಡಬೇಡಿ. ನಿಮ್ಮ ಸಹಾಯ ನಮಗೆ ಬೇಕಿಲ್ಲ. ಸ್ವಯಂ ಸೇವಕರಿಂದ ನಮಗಾಗಲಿ ನಮ್ಮ ಗಿರಾಕಿಗಳಿಗಾಗಲಿ ಸ್ವಲ್ಪವೂ ಕಷ್ಟವುಂಟಾಗಿಲ್ಲ. ಈ ಸುತ್ತುಮುತ್ತ ನಮಗಾಗಿ ನಿಲ್ಲಿಸಿರುವ ಪೋಲೀಸ್ ಶೂರರನ್ನು ಹಿಂದಕ್ಕೆ ಕರೆದುಕೊಳ್ಳಿ.

"ನೀವು ಈ ಪೋಲೀಸನ್ನು ಹಿಂದಕ್ಕೆ ಕರೆಸದಿದ್ದರೆ ನಾವು ಅಂಗಡಿಗಳನ್ನು ಪೂರ್ಣವಾಗಿ ಮುಚ್ಚಿಯೇ ಬಿಡುತ್ತೇವೆ. ಯಾವನಾದರೂ ವ್ಯಾಪಾರಿಗೆ ಸ್ವಯಂಸೇವಕರಿಂದ ತೊಂದರೆಯುಂಟಾಗಿದೆಯೆಂದು ತಿಳಿದರೆ ಅವನಿಗೆ ಸಹಾಯಮಾಡಿ. ನಮ್ಮ ಬಟ್ಟೆ ಮಾರ್ಕೆಟ್ಟಿನಲ್ಲಿ ಇಲ್ಲದ ತೊಂದರೆ ಉಂಟುಮಾಡಬೇಡಿ" ಎಂದು ಬರೆದರು.

ಆದರೆ ಪೋಲೀಸರು ಲಾಠಿಪ್ರಯೋಗಿಸುವ ಅವಕಾಶವನ್ನು ಯಾಕೆ ತಾನೆಬಿಡುತ್ತಾರೆ?

ಗಡಿನಾಡಿನಲ್ಲಿ ನಡೆದ ಅತ್ಯಾಚಾರಗಳು ಎಲ್ಲರಿಗೂ ಗೊತ್ತೇ ಇವೆ. ವಿಟ್ಠಲಭಾಯಿ ಪಟೇಲರು ಗಡಿನಾಡಿಗೆ ಹೋಗಿ ವಿಚಾರಣೆ ಮಾಡಿ ಪ್ರಕಟಿಸಿದ ವರದಿಯನ್ನು ಸರಕಾರದವರು ಮಟ್ಟಗೋಲು ಹಾಕಿಕೊಂಡರು. ಮೇಲೆ ಹೇಳಿರುವುದನ್ನೆಲ್ಲಾ ಸರ್ಕಾರದವರು ಪ್ರಕಟವಾಗಲು ಒಪ್ಪಿ ಅದನ್ನು ಮಟ್ಟಗೋಲುಹಾಕಿಕೊಂಡುದನ್ನು ನೋಡಿದರೆ, ಅಲ್ಲಿ ನಡೆದ ಕ್ರೌರ್ಯಗಳು ಮಾರ್ಷಲ್ ಲಾ ನಡೆಸುತ್ತಿದ್ದ ಸರ್ಕಾರದ ಮುಖಕ್ಕೆ ಸಹ ಮಸಿ ಬಳಿದಂತೆ ಆಗಿದ್ದಿರಬೇಕು. ಈ ಸಂದರ್ಭದಲ್ಲಿ ಗಡಿನಾಡಿನಲ್ಲಿ ಒಂದು ಅದ್ಭುತ ಸಂಗತಿ ನಡೆಯಿತು. ಗಡಿನಾಡಿನಲ್ಲಿ ಪೋಲೀಸು ಮತ್ತು ಮಿಲಿಟರಿಯ ವಿಕಟ ನರ್ತನ ನಡೆಯುತ್ತಿರುವಾಗ ಘರ್‌ವಾಲ್ ಮಿಲಿಟರಿಯವರು, ಸಾಧುಗಳು ನಿರಾಯುಧರೂ ಆದ ಜನರ ಮೇಲೆ ಗುಂಡು ಹಾರಿಸಲು ತಿರಸ್ಕರಿಸಿದರು. ಆದರಿಂದ ಸರ್ಕಾರಕ್ಕೆ ಅವರ ಮೇಲೆ

ಕೋಪಬಂದು ಅವರನ್ನು ಕೋರ್ಟು ಮಾರ್ಷಲ್ ಮಾಡಿದರು. ಸಿಪಾಯಿಗಳಿಗೆಲ್ಲಾ 10 ವರುಷದಿಂದ 14 ವರುಷಗಳವರೆಗೆ ಸಜಾ ಆಯಿತು. ಅವರಲ್ಲಿ ಕೆಲವರು ಇನ್ನೂ ಸೆರೆಯಲ್ಲಿದ್ದಾರೆ.

ಈ ಚಳುವಳಿಯಲ್ಲಿ ಇದೇ ಮೊದಲನೆಯ ಸಲವಾಗಿ ಸಿಂಧ್‌ನಲ್ಲಿ ಒಬ್ಬ ರಾಜಕೀಯ ಖೈದಿಗೆ ಚಾವಟಿ ಶಿಕ್ಷೆ ವಿಧಿಸಲ್ಪಟ್ಟಿತು. ಹುಸೇನ್ ಬಕ್ಸ್ ಎಂಬ ಮುಸಲ್ಮಾನ ಸತ್ಯಾಗ್ರಹಿಗೆ ಪಿಕೆಟ್ ಮಾಡುವಾಗ ಒಬ್ಬನಿಂದ ಹೆಂಡದ ಸೀಸೆ ಕಿತ್ತುಕೊಂಡನೆಂಬ ಆಪಾದನೆಯ ಮೇಲೆ 12 ಚಾವಟಿ ಏಟು ವಿಧಿಸಲಾಯಿತು. ಯಾರ ಸೀಸೆಯನ್ನು ಕಿತ್ತುಕೊಂಡನೋ ಅವನು ನ್ಯಾಯಸ್ಥಾನಕ್ಕೆ ಬಂದಿರಲಿಲ್ಲ. ಸತ್ಯಾಗ್ರಹಿಯ ಮೇಲೆ ಹಾಕಿದ ಸೆಕ್ಷನ್ ಕಳವಿನ ಸೆಕ್ಷನ್. ಶಿಕ್ಷೆಯನ್ನು ವಿಧಿಸಿದಾಗ ಸತ್ಯಾಗ್ರಹಿಯನ್ನು ಪೂರ್ಣವಾಗಿ ಬೆತ್ತಲೆ ಮಾಡಿದ್ದರು. ಅವನನ್ನು ಬಲವಾಗಿ ಕಟ್ಟಿದ್ದರು. ಅವನು ಏಟುಗಳನ್ನು ಸಂತೋಷದಿಂದ ಸಹಿಸಿಕೊಂಡನು.

ಈ ಸಂದರ್ಭದಲ್ಲಿ ಇಂಗ್ಲೆಂಡಿನ ಪತ್ರಿಕೆ ಬರೆದ ಒಂದು ಅಭಿಪ್ರಾಯವನ್ನು ಈಗ ನೋಡುವುದು ಗಮನಾರ್ಹವಾಗಿದೆ. ಡೇಲಿ ಮೇಲ್ ಎಂಬ ಪತ್ರಿಕೆ ಹೀಗೆ ಬರೆಯಿತು.

“ಬ್ರಿಟನ್ನು ಭಾರತದಲ್ಲಿ ತನ್ನ ಕರ್ತವ್ಯವಿಮುಖವಾಗಿರುವುದೇ ಈ ಎಲ್ಲಾ ಅನಾಹುತಗಳಿಗೂ ಕಾರಣ. ಮಾಂಟಿಗೂ ಛೆಲಮ್ಸ್‌ಫರ್ಡ್ ಸುಧಾರಣೆಗಳೆನ್ನಿಸಿಕೊಳ್ಳುವುದರೊಂದಿಗೆ ಇದು ಪ್ರಾರಂಭವಾಯಿತು. ಅಲ್ಲಿಂದ ಈಚೆಗೆ ಅನೇಕ ವರುಷ ರಾಜದ್ರೋಹಕ್ಕೆ ಅವಕಾಶವಾಯಿತು.

“ನಾನು ಹತ್ತು ವರುಷದ ಹಿಂದೆ ಭಾರತಕ್ಕೆ ಹೋಗಿದ್ದಾಗ, ಈಗ ಅಸೆಂಬ್ಲಿಯ ಸ್ಪೀಕರ್ ಕೆಲಸಕ್ಕೆ ರಾಜೀನಾಮೆ ಕೊಟ್ಟ ಪಟೇಲರೇ ರಾಜದ್ರೋಹವನ್ನು ಎಬ್ಬಿಸುತ್ತಿದ್ದರು. ಗಾಂಧಿ ಅನೇಕ ವರುಷಗಳಿಂದ ಅನಾಹುತ ಮಾಡುತ್ತಿದ್ದಾರೆ. ಈಗ ಕೆಲವು ತಿಂಗಳುಗಳಿಂದಲಂತೂ ವೈಸರಾಯರನ್ನೇ ಎದುರಿಸುತ್ತಿದ್ದಾರೆ.

“ಅವನನ್ನು ದಸ್ತಗಿರಿ ಮಾಡಲು ಇಷ್ಟು ಸಾವಕಾಶವಾಗಬೇಕೆ? ಅವನನ್ನು ನಾವೇ ಪ್ರಸಿದ್ಧನನ್ನಾಗಿ ಮಾಡಬೇಕೆ? ನನ್ನ ಮಾತು ನಂಬಿ. ಅದೆಲ್ಲಾ ಸುಳ್ಳು; ಸೆರೆಮನೆಗೆ ಹೋದ ಮೇಲೆ ಅವರು ಪ್ರಸಿದ್ಧರಾಗುವುದಿಲ್ಲ. ಕೆಲವು ವಾರಗಳಲ್ಲಿ ಜನ ಅವರನ್ನು ಮರೆಯುತ್ತಾರೆ.

"ಇದೆಲ್ಲಾ ತಿಳಿದಿದ್ದರೂ, ಭಾರತದ ವರ್ತಮಾನ ಪತ್ರಿಕೆಗಳೆಲ್ಲಾ ರಾಜದ್ರೋಹಿಗಳಾದರೂ, ಪಾರ್ಲಿಮೆಂಟರಿ ರಾಜ್ಯಭಾರ ಪದ್ಧತಿಗಳನ್ನು ಅಸಹಕಾರಿಗಳು ಚೂರು ಚೂರು ಮಾಡುತ್ತಿದ್ದರೂ, ಹೋದ ವರುಷ, ವೈಸರಾಯರು ಆ ದುರದೃಷ್ಟದ ಡೊಮಿನಿಯನ್ ಸ್ಟೇಟಸ್ ಹೇಳಿಕೆಯನ್ನು ಕೊಡುವಂತೆ ನಮ್ಮ ಸರ್ಕಾರ ಅವರಿಗೆ ಅನುಮತಿ ಕೊಟ್ಟಿತು. ಅದರಂತಹ ಹುಚ್ಚು ಕೆಲಸ ಮತ್ತಾವುದೂ ಇಲ್ಲ. ದಂಗೆಕೋರರ ಎದುರಿಗೆ ಸಾಮ್ರಾಜ್ಯಾಂತರ್ಗತ ಸ್ವರಾಜ್ಯವನ್ನು ತೋರಿಸುವುದು ಮದ್ದಿನ ಮೇಲೆ ಕುಳಿತು ಬೀಡಿ ಹಚ್ಚಿಕೊಂಡಂತೆ.

"ಭಾರತದಲ್ಲಿ ಬ್ರಿಟಿಷ್ ವ್ಯಾಪಾರದ ಪರಿಸ್ಥಿತಿಯೇನು? ಇರಲಿ ಬ್ರಿಟಿಷರ ಪರಿಸ್ಥಿತಿಯೇ ಏನು? ಭಾರತೀಯರಿಗೆ ವಿದ್ಯೆ ಇಲ್ಲ. ಅವರಿಗೆ ಪ್ರಜಾ ಸರ್ಕಾರ ತಿಳಿಯುವುದಿಲ್ಲ. ಆದರೂ ದಂಗೆಕೋರರು ಅವರನ್ನು ಬುದ್ಧಿವಂತಿಕೆಯ ಮಾತಿನಿಂದ, ಎಬ್ಬಿಸಿದ್ದಾರೆ. ಸಾಮ್ರಾಜ್ಯ ಸ್ವರಾಜ್ಯ ಅಂತ್ಯಧ್ಯೇಯವಾದರೂ ಸದ್ಯಕ್ಕೆ ಅದರ ವಿಚಾರ ಯೋಚಿಸುವುದೂ ಸಹ ಸಾಧ್ಯವಲ್ಲವೆಂಬುದನ್ನು ಅವರಿಗೆ ತಿಳಿಸಬೇಕು. ಬಾರತಕ್ಕೆ ಖಂಡಿತ ಹೇಳಬೇಕು. ಇಂಗ್ಲೆಂಡು ಭಾರತವನ್ನು ಬಿಡುವುದಿಲ್ಲ. ಅದು ಅಲ್ಲಿರುವವರೆಗೆ ಆಳಿಯೇ ಆಳುತ್ತದೆ."

ಈ ಅತ್ಯಾಚಾರದ ಕತೆಯನ್ನು ಯಾಕೆ ಮುಂದರಿಸೋಣ. ಇನ್ನೊಂದು ಸಂಗತಿಯನ್ನು ಹೇಳಿ ಮುಗಿಸುತ್ತೇವೆ. ಬಾರಸಾದ್ ಸ್ತ್ರೀಯರು ರಾಷ್ಟ್ರೀಯ ಚಳುವಳಿಯ ಸಂಬಂಧದಲ್ಲಿ 1931 ನೇ ಜನವರಿ ತಿಂಗಳಿನಲ್ಲಿ ಸಭೆ ಸೇರಿದ್ದರು. ಈ ಸಭೆಯನ್ನು ಚದುರಿಸಬೇಕೆಂಬುದು ಪೋಲೀಸರ ಉದ್ದೇಶವಾಗಿದ್ದಿತು. ಸ್ತ್ರೀಯರು ಬಾಯಾರಿಕೆಯಾದಾಗ ಕುಡಿಯುವುದಕ್ಕಾಗಿ ಬೇರೆ ಬೇರೆ ಸ್ಥಳಗಳಲ್ಲಿ ದೊಡ್ಡ ದೊಡ್ಡ ಮಡಿಕೆಗಳಲ್ಲಿ ನೀರನು ಇಟ್ಟಿದ್ದರು. ಪೋಲೀಸಿನವರು ಮಾಡಿದ ಮೊದಲನೆಯ ಕೆಲಸ ಆ ಮಡಿಕೆಗಳನ್ನು ಒಡೆದುದು. ಅನಂತರ ಸ್ತ್ರೀಯರನ್ನು ಬಡಿದು ಚದರಿಸಿದರು. ಸ್ತ್ರೀಯರು ಕೆಳಗೆ ಬಿದ್ದಾಗ ಅವರ ಎದೆಗಳ ಮೇಲೆ ಪೋಲೀಸಿನವರು ಬೂಟ್ಸು ಕಾಲುಗಳನ್ನು ಇಟ್ಟುಕೊಂಡು ನಡೆದುಕೊಂಡು ಹೋದರೆಂಬ (Specific-allegation) ಸ್ಪಷ್ಟವಾದ ಆಪಾದನೆ ಮಾಡಲ್ಪಟ್ಟಿತು. ಇದು ಪೋಲೀಸಿನವರ ಅತ್ಯಾಚಾರದ ಕೊನೆ ಎಂದು ಹೇಳಬಹುದು.

ಅಮೆರಿಕದ ಚಿಕಾಗೋ ಡೇಲಿ ನ್ಯೂಸ್ ಎಂಬ ಪತ್ರಿಕೆಯು ಈ ಆಡಳಿತ ವೈಖರಿಯನ್ನು ಕುರಿತು ಹೀಗೆ ಹೇಳಿತು.

"ಸ್ವಲ್ಪ ಸಾವಕಾಶವಾದ ನಂತರ, ಸೆನ್‌ಸರ್‌ಗಳು ಚಿಕಾಗೊ ಡೇಲಿ ನ್ಯೂಸ್ ಬಾತ್ಮಿದಾರ ನೆಗ್ಲೆ ಫಾರ್‌ಸನ್‌ರ ಸುದ್ದಿಗಳನ್ನು ಈ ದೇಶಕ್ಕೆ ಬಿಟ್ಟಿದ್ದಾರೆ. ಭಾರತದಲ್ಲಿ ತಾನು ನೋಡುತ್ತಿರುವ ದೃಶ್ಯಗಳು ತನ್ನ ಮೇಲೆ ಯಾವ ಪರಿಣಾಮವನ್ನುಂಟುಮಾಡುತ್ತಿವೆ ಎಂಬುದನ್ನು ಫಾರಸನ್ ಹೇಳುತ್ತಾನೆ. ಅವರು ಒಳ್ಳೆಯ ನುರಿತ ಸುದ್ದಿಗಾರರು; ಅಹಿಂಸಾಯುತರಾದ ಭಾರತೀಯರ ತಪ್ಪು ಅವರು ಸ್ವಾತಂತ್ರ್ಯಬೇಕೆಂದು ಕೇಳುವುದೇ. ಅವರನ್ನು ಹೀಗೆ ದೊಣ್ಣೆಗಳಿಂದ ಬಡಿಯುವುದು ನನ್ನ ಹೃದಯ ಕಲಕಿತು. ನನಗೇ ಜ್ವರ ಬಂದಂತೆ ಆಯಿತು." ಅವರು ಕಳುಹಿಸಿರುವ ಸುದ್ದಿಯನ್ನು ಓದುವ ಅನೇಕ ಕ್ರಿಶ್ಚಿಯನ್‌ರು, ಬೊಂಬಾಯಿನಿಂದ ತಾವು ಸಾವಿರಾರು ಮೈಲಿ ದೂರದಲ್ಲಿದ್ದರೂ ಇದೇ ಅನುಭವವನ್ನು ಹೊಂದುವರು. ಸರ್ಕಾರದ ಪೋಲೀಸರು ಪ್ರಜೆಗಳನ್ನು ಜ್ಞಾನ ಹೋಗುವಂತೆ ದೊಣ್ಣೆಗಳಿಂದ ಬಡಿಯುವುದು ಮಾತ್ರವೇ ಅಲ್ಲ; ಪಾಶ್ಚಾತ್ಯ ನಾಗರೀಕತೆಯ ಪ್ರತಿನಿಧಿಗಳು, ಪೂರ್ವ ದೇಶದ ಆತ್ಮ ಶಕ್ತಿಯ ಮುಂದೆ ತಮ್ಮ ನಾಗರೀಕತೆಯ ಗೌರವವನ್ನು ಪುಡಿಪುಡಿ ಮಾಡಿಕೊಳ್ಳುವ ಕತೆ ಇದು. ಬೊಂಬಾಯಿನಲ್ಲಿ ನಡೆಯುತ್ತಿರುವುದು ಅತ್ಯಂತ ಭಯಂಕರ; ಭೀಭತ್ಸವಾದದು. ಅದನ್ನು ವಿವರಿಸಲು ಮಾತುಗಳಿಂದ ಸಾಧ್ಯವಿಲ್ಲ. ಬೊಂಬಾಯಿ ಪೋಲೀಸರ ದೊಣ್ಣೆ ಏಟುಗಳಿಂದ ಪಾಶ್ಚಾತ್ಯ ನಾಗರಿಕತೆ ಸಾಯುತ್ತಿದೆ. ಇನ್ನು ಕೆಲವು ವಾರ ಹೀಗೆ ನಡೆದರೆ, ಬಿಳಿಯ ಬಣ್ಣದ ಧರ್ಮದ ಒಬ್ಬ ಮಿಶನರಿ ಅಥವಾ ಪ್ರತಿನಿಧಿಯನ್ನು ಭಾರತದಲ್ಲಿ ಕಂಡರೂ ಭಾರತೀಯರು ಅದನ್ನು ಅವಮಾನವೆಂದೇ ಭಾವಿಸುವರು. ಈಗ ಭಾರತದಲ್ಲಿ, ಕ್ರೈಸ್ತರ ವೇದದ ಪ್ರತಿಯೊಂದು ತತ್ವವೂ ನಾಶವಾಗುತ್ತಿದೆ. ಹೀಗೆ ಕ್ರೈಸ್ತ ಧರ್ಮದ ತತ್ವ ನಾಶವಾದ ಕೂಡಲೇ ಪಾಶ್ಚಾತ್ಯ ಜೀವನ ಪ್ರಭುತ್ವ ಸಹ ಬಹುಬೇಗ ಅದನ್ನು ಖಂಡಿತ ಹಿಂಬಾಲಿಸುವುದು."

ಈ ಕ್ರೂರ ಕರ್ಮಗಳ ವಿವರಣೆ ಸಾಕು. ಸರ್ಕಾರದವರು 1931 ನೇ ಜನವರಿ 26 ನೇ ತಾರೀಖು ಗಾಂಧಿಯವರನ್ನೂ ಉಳಿದ ಮುಖಂಡರನ್ನೂ ಬಿಡುಗಡೆ ಮಾಡಿದರು.

---

# ೩೪. ಇಲ್ಲಿಯ ಚಳುವಳಿ

---

ಈ ವೇಳೆಯಲ್ಲಿ ಕರ್ನಾಟಕದಲ್ಲಿ ಕರ ನಿರಾಕರಣ ಚಳುವಳಿಯಲ್ಲಿ ಸುದರ್ಶನ ಮುಖ್ಯ ಪಾತ್ರವನ್ನು ವಹಿಸಿದ. ಸುದರ್ಶನ ಒಂದು ಹಳ್ಳಿಯನ್ನು ಆರಿಸಿಕೊಂಡು ಅಲ್ಲಿ ನಿಂತ. ಆಗ ಕರ್ನಾಟಕದ ಮತ್ತೊಂದು ಭಾಗವಾದ ಅಂಕೋಲಾದಲ್ಲಿ ರಾಜಕೀಯ ಕಾರಣಗಳಿಗಾಗಿ ಕರ ನಿರಾಕರಣೆ ನಡೆದಿತ್ತು. ಸುದರ್ಶನ ಆ ಹಳ್ಳಿಗೆ ಹೋದುದು ಗೊತ್ತಾದ ಕೂಡಲೇ ಪೋಲೀಸಿನವರು ತಮ್ಮ ಕಾವಲನ್ನು ಅವನ ಮೇಲೆ ಬಲಪಡಿಸಿದರು. ಅದುವರೆಗೆ ಹಳ್ಳಿಯುವರು ಆ ಸ್ಥಳದಲ್ಲಿ ಪೋಲೀಸಿನವರನ್ನು ಕಂಡಿರಲಿಲ್ಲ.

ಒಬ್ಬ ರೈತ. ಅವನ ಮನೆ ಭಾರಿ ದೇವಸ್ಥಾನದಂತೆ ಇತ್ತು. ಸುದರ್ಶನ ಅಲ್ಲಿ ತನ್ನ ಆಶ್ರಮ ಸ್ಥಾಪಿಸಿದ. ಸುದರ್ಶನನ ಹತ್ತಿರ ಬಂದು ಮಾತುಕತೆಯಾಡುವ ಸ್ವಯಂಸೇವಕರ ಸಂಖ್ಯೆ ಹೆಚ್ಚಾಯಿತು. ಒಂದು ಕಡೆಯಿಂದ ಯಾರ್‍ಯಾರಿಗೆ ಎಷ್ಟೆಷ್ಟು ಪೈರು ನಷ್ಟವಾಗಿದೆ? ಅವನ ಮೇಲೆ ಬಿದ್ದಿರುವ ಕಂದಾಯದ ಹೊರೆ ಎಷ್ಟು? ಈ ಕಂದಾಯ ಅವನಿಗೆ ಕೊಡುವುದಕ್ಕಾಗುತ್ತದೆಯೇ? ಕೊಡದಿದ್ದರೆ ಏನು ಆಗುತ್ತೆ? ಸರ್ಕಾರದವರು ಬಂದು ಮನೆ ಮಠ ದನ ಕರ ಹರಾಜು ಹಾಕುತ್ತಾರೆ. ಜಮೀನುಗಳನ್ನು ಹರಾಜು ಹಾಕುತ್ತಾರೆ. ಕೊನೆಗೆ ಬಡಿಯುತ್ತಾರೆ; ಊರುಬಿಟ್ಟು ಓಡಿಸುತ್ತಾರೆ. ಏನೂ ಆಗದಿದ್ದರೆ ಗುಂಡು ಹಾರಿಸುತ್ತಾರೆ. ಇದಕ್ಕೆಲ್ಲಾ ನೀವು ಸಿದ್ಧವಾಗಿದ್ದೀರಾ?" ಎಂದು ಸುದರ್ಶನ ಪ್ರಶ್ನೆ ಹಾಕಿದ. ಗ್ರಾಮಸ್ಥರು ಎಲ್ಲಾದಕ್ಕೂ ಸಿದ್ಧವಾಗಿದ್ದರು. ಆದರೂ ಸುದರ್ಶನನಿಗೆ ಅಪನಂಬಿಕೆ. ಸರ್ಕಾರದ ಕ್ರೂರವಾದ ದಬ್ಬಾಳಿಕೆ ಪ್ರಾರಂಭವಾದಾಗ ಇವರಲ್ಲಿ ನಿಜವಾಗಿಯೂ ಎಷ್ಟು ಜನ ಈ ಎಲ್ಲಾ ಪರೀಕ್ಷೆಗಳಲ್ಲಿಯೂ ತೇರ್ಗಡೆಯಾದಾರು? ಜನ ತಮ್ಮ ಪ್ರಾಣವನ್ನು ಬೇಕಾದರೂ ಕೊಡುತ್ತಾರೆ. ಆದರೆ ಆಸ್ತಿ ಹೋಗುವುದನ್ನು ಸಹಿಸುವುದಿಲ್ಲ. ತಮಗೆ ಹೊಡೆತ ಬಿದ್ದರೆ ತಡೆಯುತ್ತಾರೆ. ಆದರೆ ಹೆಂಡತಿ ಮಕ್ಕಳಿಗೆ ಹೊಡೆತ ಬಿದ್ದರೆ ಹಣ್ಣಾಗುತ್ತಾರೆ. ಬ್ರಾಹ್ಮಣ ಶೂದ್ರ ಲಿಂಗಾಯಿತ ಮುಸಲ್ಮಾನ ನೇಟಿವ್ ಕ್ರಿಸ್ತ ಇವರೆಲ್ಲಾ ಇರುವ

ಈ ತಾಲ್ಲೂಕಿನಲ್ಲಿ ಈ ಕೆಲಸಕ್ಕೆ ಬೇಕಾದ ಒಗ್ಗಟ್ಟು ಸಿಕ್ಕುತ್ತದೆಯೆ? ಎಂದು ಸುದರ್ಶನ ಚಿಂತಿತನಾದ. ಪೋಲೀಸರ ಮುಖಂಡನಾಗಿ ಬರುತ್ತಿದ್ದ ಮಹಮ್ಮದಲ್ಲಿಖಾನನ ಗಡ್ಡವನ್ನು ನೋಡಿದರೇಯೇ ಜನಕ್ಕೆ ನಡುಕ ವುಂಟಾಗುತ್ತಿದ್ದಿತು. ಅವನು ಲಾಠಿಯನ್ನು ಕೈಯ್ಯಲ್ಲಿ ಹಿಡಿದುಕೊಂಡು ಹೊರಟಾಗ ಯಮಕಿಂಕರನಂತೆ ತೋರುತ್ತಿದ್ದನು. ಆದರೂ ಜನ ಮುಂದೆ ಬಂದರು. ಭತ್ತ ಕೊಡುವವರು ಭತ್ತ ಕೊಟ್ಟರು; ಜೋಳ ಕೊಡುವವರು ಜೋಳ ಕೊಟ್ಟರು. ಬಟ್ಟೆ ಕೊಡುವವರು ಭಟ್ಟೆಕೊಟ್ಟರು. ಸ್ವಯಂ ಸೇವಕರ ಸಂಖ್ಯೆ ದಿನ ದಿನಕ್ಕೆ ಏರುತ್ತಾಹೋಯಿತು. ಸ್ವಯಂ ಸೇವಕರು ಕವಾಯತ್ತು ಶಿಸ್ತಿನಲ್ಲಿ ತಯಾರಾಗುತ್ತಿದ್ದರು. ಸುದರ್ಶನ ಇದಕ್ಕೆ ಸ್ವರಾಜ್ಯ ಆಶ್ರಮವೆಂದು ಹೆಸರಿಟ್ಟನು. ಅಲ್ಲಿಯ ಜೀವನ ಸರಳವಾಗಿದ್ದಿತು. ಸ್ವಯಂ ಸೇವಕರೆಲ್ಲಾ ಒಟ್ಟಾಗಿಯೇ ಅಡಿಗೆ ಮಾಡುತ್ತಿದ್ದರು. ಒಟ್ಟಾಗಿಯೇ ಊಟಕ್ಕೆ ಕುಳಿತುಕೊಳ್ಳುತ್ತಿದ್ದರು. ಸ್ವಯಂ ಸೇವಕಿಯರು ಯಜಮಾಂತಿಯರಂತೆ ಎಲ್ಲವನ್ನೂ ನೋಡಿಕೊಳ್ಳುತ್ತಿದ್ದರು.

ಪ್ರತಿ ದಿನವೂ ಸ್ವಯಂ ಸೇವಕರ ಸಂಖ್ಯೆ ಹೆಚ್ಚುತ್ತಿದ್ದಿತು. ದಿನ ದಿನವೂ ತಾಲ್ಲೂಕಿನ ಪ್ರತಿ ಹಳ್ಳಿಗೂ ಸ್ವರಾಜ್ಯ ಆಶ್ರಮದಲ್ಲಿ ತಯಾರಾದ ಸ್ವಯಂ ಸೇವಕರು ಹೊರಟುಹೋಗುತ್ತಿದ್ದರು. ಇಂತಹ ಸ್ವಯಂ ಸೇವಕರ ಸಂಖ್ಯೆ ಅನೇಕವಾಗಿ ಅವರು ಹಳ್ಳಿಗಳಲ್ಲೆಲ್ಲಾ ಹೆಣೆದುಕೊಂಡರು. ಸುದರ್ಶನ ಸೈಕ್ಲೊಸ್ಟೈಲಿನಲ್ಲಿ ಪ್ರತಿ ದಿನವೂ ಪತ್ರಿಕೆಗಳನ್ನು ಹೊರಡಿಸಿ ಎಲ್ಲಾ ಹಳ್ಳಿಗಳಿಗೂ ಕಳುಹಿಸುತ್ತಿದ್ದ. ಅವುಗಳಲ್ಲಿ ಗಾಂಧಿಯವರ ಸಂದೇಶಗಳು; ಅಹಿಂಸೆಗೆ ಕೊಡಬೇಕಾದ ಪ್ರಾಮುಖ್ಯತೆ; ಎದುರಾಳಿ ಬಂದೂಕದಿಂದ ಹೊಡೆದರೂ ಎದೆ ಒಡ್ಡಬೇಕೆ ಹೊರತು ಅವನ ಮೇಲೆ ಕೈ ಎತ್ತಬಾರದು" ಎಂಬ ತತ್ವಗಳ ಪ್ರತಿಪಾದನೆ ಇರುತ್ತಿದ್ದಿತು. ಸ್ವಯಂ ಸೇವಕರು ಹಳ್ಳಿಗಳಲ್ಲಿ ಅವುಗಳನ್ನು ಜನರಿಗೆಲ್ಲಾ ಓದಿ ಹೇಳುತ್ತಿದ್ದರು. ಈ ಪತ್ರಿಕೆಯಲ್ಲಿ ಸ್ತ್ರೀಯರಿಗೂ ಮುಖ್ಯವಾಗಿ ಸಲಹೆಗಳಿದ್ದವು. "ಎಲ್ಲವನ್ನೂ ಕಳೆದುಕೊಳ್ಳುವುದಕ್ಕೆ ಸಿದ್ಧರಾಗಿರಬೇಕು. ಪ್ರಾಣವನ್ನೂ ಸಹಾ ಕಳೆದುಕೊಳ್ಳುವುದಕ್ಕೆ ಸಿದ್ಧರಾಗಿರಬೇಕು." ಈ ವೃತ್ತ ಪತ್ರಗಳ ಸಂಖ್ಯೆ ಬರ ಬರುತ್ತಾ ಸಾವಿರಕ್ಕೆ ಏರಿತು. ಪ್ರತಿಯೊಂದು ಹಳ್ಳಿಯಲ್ಲಿಯೂ ಸಾಯಂಕಾಲವಾಗುವುದನ್ನೇ ನಿರೀಕ್ಷಿಸುತ್ತಾ ವೃತ್ತಪತ್ರಿಕೆ ಬರುತ್ತದೆಯೇ

ಎಂದು ಕಾತುರರಾಗುತ್ತಿದ್ದರು. ಕೊನೆ ಕೊನೆಗೆ ಸುದರ್ಶನನಿಗೆ ಅದು ಎಲ್ಲಿ ಪ್ರಕಟವಾಗುತ್ತಿದೆ ಎಂಬುದು ತನಗೇ ತಿಳಿಯಲಿಲ್ಲ. ಅವನು ಒಂದು ಕಾಗದದಲ್ಲಿ ಬರೆದು ಕೊಟ್ಟುಬಿಡುತ್ತಿದ್ದನು. ಅದು ಎಲ್ಲಿಂದಲೋ ಕಲ್ಲು ಅಚ್ಚಾಗಿ ಪ್ರತಿ ಸಾಯಂಕಾಲದ ವೇಳೆಗೆ ಅವನ ಕೈಗೆ ಬರುತ್ತಿದ್ದಿತು. ಕೆಲವು ದಿನ ಅವನಿಗೆ ಬರೆಯಲು ವಿರಾಮವಾಗುತ್ತಿರಲಿಲ್ಲ. ಆವತ್ತೂ ಪತ್ರಿಕೆ ಸಾಯಂಕಾಲದ ವೇಳೆಗೆ ಕೈಗೆ ಬಂದೇ ಬರುತ್ತಿದ್ದಿತು. ಕೊನೆಗೆ ಸುದರ್ಶನ ಅದರ ಯೋಚನೆ ಬಿಟ್ಟನು. ಅದು ಮಾತ್ರ ಬರುತ್ತಲೇ ಇದ್ದಿತು.

ಸರ್ಕಾರದವರು ಬಹು ಕಾಲ ಸುಮ್ಮನಿರುವುದು ಸಾಧ್ಯವಾಗಲಿಲ್ಲ. ಅವರಿಗೆ ವೃತ್ತಪತ್ರಿಕೆಯಪ್ರತಿ ದಿನವೂ ಸಾಯಂಕಾಲ ಸಿಕ್ಕುತ್ತಿದ್ದಿತು. ಆದರೆ ಇದನ್ನು ಬರೆಯುವರು ಯಾರು? ಅಚ್ಚು ಹಾಕುವವರು ಯಾರು? ಇದನ್ನು ಅಚ್ಚು ಹಾಕುವ ಸೈಕ್ಲೊಸ್ಟೈಲ್ ಮಿಶನ್ ಎಲ್ಲಿದೆ? ಇದನ್ನು ನಡೆಸುವವರು ಯಾರು? ರೈತರೇ ಇಷ್ಟು ಧೈರ್ಯಶಾಲಿಗಳಾಗಿದ್ದಾರೆಯೇ. ಈ ಸುದರ್ಶನ ಎಂಬುವನು ಎಲ್ಲಿಯವನು? ಇವರ ಮಾತನ್ನೇ ರೈತರು ಕೇಳುತ್ತಾರೆಯೆ? ಎಂಬ ಸಮಸ್ಯೆಗಳು ಅವರಿಗೆ ಉಂಟಾದವು. ಗುಪ್ತ ಪೋಲೀಸರ ಸಂಖ್ಯೆ ದಿನ ದಿನಕ್ಕೂ ಹೆಚ್ಚಿತು. ಅವರು ಸ್ವರಾಜ್ಯ ಆಶ್ರಮದ ಇಪ್ಪತ್ತು ಮೂಲೆಗಳಲ್ಲಿಯೂ ಕಾಯುತ್ತಿದ್ದರು. ಅರ್ಧ ರಾತ್ರಿಯಾದ ಮೇಲೆ ಮನೆಯಲ್ಲಿ ಜನ ಮಲಗಿರುವಾಗ ಏನು ಮಾತನಾಡಿಕೊಳ್ಳುತ್ತಾರೆ ಎಂದು ಹೊಂಚು ಕೇಳುತ್ತಿದ್ದರು. ಅವರ ಕಿವಿಗೆ ಯಾವ ಮಾತುಗಳೂ ಬೀಳದೇ ಇರಲಿಲ್ಲ ಆದರೆ ರೈತರು ಯಾವ ಮಾತುಗಳನ್ನು ಹಗಲು ಹೊತ್ತೂ ಘಂಟಾಘೋಷವಾಗಿ ಆಡುತ್ತಿದ್ದರೋ ಅದೇ ಮಾತುಗಳನ್ನೂ ರಾತ್ರಿಯೂ ಆಡುತ್ತಿದ್ದರು. "ಈ ಸಲ ಕಂದಾಯ ಕೊಡಲು ಸಾಧ್ಯವಿಲ್ಲ. ಪೈರು ಬೆಳೆದಿಲ್ಲ. ಕೊಡುವುದಿಲ್ಲ. ಬಂದದ್ದನ್ನು ಅನುಭವಿಸಬೇಕು."

ಒಂದು ದಿನ ಇದ್ದಕ್ಕಿದ್ದಂತೆ ಪೋಲೀಸಿನವರು ಸ್ವರಾಜ್ಯ ಆಶ್ರಮವನ್ನು ಮುತ್ತಿದರು. ಅಲ್ಲಿದ್ದ ಸ್ವಯಂ ಸೇವಕರ ಸಾಮಾನುಗಳನ್ನೂ ಸುದರ್ಶನನ ಸಾಮಾನುಗಳನ್ನೂ ತೆಗೆದು ಹೊರಕ್ಕೆ ಎಸೆದರು. ಹಾಹೂ ಎಂದವರಿಗೆ ದೊಣ್ಣೆಗಳಿಂದ ಬಡಿದರು. ಆ ಮನೆಯನ್ನು ತಾವು ಆಕ್ರಮಿಸಿ

ಕೊಂಡು ಅಲ್ಲಿ ತಮ್ಮ ಮರದ ಹಲಗೆಯ ಬೂಟ್ಸುಗಳನ್ನೂ ಬಂದೂಕಗಳೆನ್ನೂ ಇಟ್ಟುಕೊಂಡರು. "ಈ ಸುದರ್ಶನನಿಗೆ ಯಾರಾದರೂ ಜಾಗಕೊಟ್ಟರೆ ಅವರ ತಲೆ ಒಡೆಯುತ್ತೇವೆ" ಎಂದರು. ಪೋಲೀಸಿನವರ ಕ್ರೂರ ಕೃತ್ಯಗಳನ್ನು ಅನೇಕವಾಗಿ ಕೇಳಿದ್ದ ಹಳ್ಳಿಯುವರು ಹೆದರಿದರು. ವೃತ್ತ ಪತ್ರಿಕೆಗಳ ಮೂಲಕ ಅಷ್ಟೊಂದು ಧೈರ್ಯವನ್ನು ಹೇಳಿದ್ದರೂ ಏನೂ ಪ್ರಯೋಜನವಾಗಿರಲಿಲ್ಲ. ಇದ್ದಕ್ಕಿದ್ದಂತೆ ಪಟೇಲ್ ಬೊಮ್ಮೇಗೌಡ "ನನ್ನ ಮನೆಗೆ ಬನ್ನಿ" ಎಂದನು. ಸಬ್ ಇನಿಸ್ಪೆಕ್ಟರ್ ಮಹಮ್ಮದಖಾನ ಹಣೆ ಮಟ್ಟಗ ದೊಣ್ಣೆಯನ್ನು ಬೊಮ್ಮೇಗೌಡನ ಮುಂದೆ ಅಲ್ಲಾಡಿಸಿ "ಇವನಿಗೆ ಆಶ್ರಯಕೊಟ್ಟರೆ ನಿನ್ನ ಮನೆ ಸುಡುತ್ತೇನೆ. ಜೋಪಾನ, ನೀನೂ ಸರ್ಕಾರ ಅಧಿಕಾರಿ ಪಟೇಲ" ಎಂದನು. ಬೊಮ್ಮೇಗೌಡ ಹೆದರದೆ "ಈ ಪಟೇಲಿಯನ್ನೇ ಬಿಟ್ಟೆ" ಎಂದು ಹೇಳಿ ಸುದರ್ಶನನ್ನೂ ತನ್ನ ಮನೆಗೆ ಕರೆದು ಕೊಂಡು ಹೋದನು.

ಬೊಮ್ಮೇಗೌಡ ರಾಜೀನಾಮೆ ಕೊಟ್ಟುದೇ ತಡ. ಪಟೇಲರು ಎಲ್ಲೆಲ್ಲೂ ರಾಜೀನಾಮೆಗಳನ್ನು ಕೊಡಲು ಪ್ರಾರಂಭಿಸಿದರು. ಸರ್ಕಾರದವರು ಮೊದಲು ಬೊಮ್ಮೇಗೌಡನ ಮನೆಯ ದನಗಳನ್ನು ಅವನ ಕಂದಾಯಕ್ಕಾಗಿ ಹರಾಜು ಹಾಕಿದರು. ಯಾರೂ ಕೊಳ್ಳಲಿಲ್ಲ. ಸರ್ಕಾರದವರು ತಮ್ಮ ಸ್ವಂತ ಖರ್ಚಿನಿಂದ ಬಸ್ಸನ್ನು ಕಳುಹಿಸಿ ದೂರದ ಜಿಲ್ಲೆಯಿಂದ ಯಾರನ್ನೋ ಕರೆಸಿ ಬೊಮ್ಮೇಗೌಡನ ಸುಮಾರು ಸಾವಿರ ರುಪಾಯಿ ದನಗಳನ್ನು ಅವು ಹೋದ ಬೆಲೆಗೆ ಮಾರಿದರು. ಮನೆಯಲ್ಲಿದ್ದ ಹಿತ್ತಾಳೆ ಪಾತ್ರೆಗಳನ್ನೂ ಅವು ಹೋದ ಬೆಲೆಗೆ ಮಾರಿದರು. ಇಷ್ಟಾದರೂ ಕಂದಾಯ ಅದರಲ್ಲಿ ಪೂರ್ಣವಾಗಿ ಹುಟ್ಟಲಿಲ್ಲ. ಬೊಮ್ಮೇಗೌಡನ ಕೊನೆಯ ಎಮ್ಮೆಯನ್ನು ಹರಾಜು ಹಾಕುವಾಗ ಅವನ ಹೆಂಡತಿಯು ಕಣ್ಣಿನಲ್ಲಿ ಪಟ ಪಟನೆ ನೀರು ಸುರಿಯುತ್ತಿದ್ದಿತು. ಆ ಎಮ್ಮೆ ಅನೇಕ ವರುಷಗಳಿಂದ ಬಂದ ತಳಿಯಾಗಿದ್ದಿತು. ಅದನ್ನು ಬೊಮ್ಮೇಗೌಡನ ಹೆಂಡತಿ ಬಹು ಪ್ರೀತಿಯಿಂದ ಸಾಕಿದ್ದಳು. ಆದರೆ ಯಾರೂ ತುಟಿ ಎರಡು ಮಾಡಲಿಲ್ಲ. ಹಳ್ಳಿಯುವರೆಲ್ಲಾ ಶವ ಸಂಸ್ಕಾರವನ್ನು ನೋಡುವಂತೆ ಹರಾಜನ್ನು ನೋಡುತ್ತಾ ನಿಂತಿದ್ದರು.

ಸರ್ಕಾರದವರು ರಾಮಭಟ್ಟರನ್ನು ಎಮ್ಮೆ ತೆಗೆದು ಕೊಳ್ಳುವಂತೆ ಬಲಾ

ಶ್ಕರಿಸಿದರು. ರಾಮುಭಟ್ಟರು ಮೊದಲು ವೈದಿಕರಾಗಿದ್ದವರು—ಈಚೆಗೆ ಲೇವಾದೇವಿ ಕಂಟ್ರಾಕ್ಟುಗಳಿಂದ ದುಡ್ಡು ಸಂಪಾದನೆ ಮಾಡಿಕೊಂಡಿದ್ದಾರೆ. ಕಂಟ್ರಾಕ್ಟಿನಲ್ಲಿ ಅವರಿಗೆ ಸಾಧಾರಣವಾಗಿ ಅಧಿಕಾರಿಗಳ ಪರಿಚಯ ಸಂಬಂಧ ಹೆಚ್ಚಾಗಿ ಬೆಳೆದಿದ್ದಿತು. ಒಂದೊಂದು ಸಲ ರಾಮುಭಟ್ಟರ ನಡವಳಿಕೆ ನೋಡಿ ಬೊಮ್ಮೇಗೌಡ "ಕಂಟ್ರಾಕ್ಟರುಗಳೂ ಸರ್ಕಾರದ ಅಂಗವೇ, ಎಂದಿದ್ದನು. ಅಂತೂ ಪ್ರಜೆಗಳಿಗೂ ಸರ್ಕಾರಕ್ಕೂ ಯಾವಾಗ ಘರ್ಷಣೆಯುಂಟಾದರೂ, ಬಿರುಸಾಗಿ ಮಾತುಗಳು ನಡೆದರೂ ಭಟ್ಟ ಸರ್ಕಾರದ ಪರವಾಗಿಯೇ ಮಾತನಾಡುತ್ತಿದ್ದನು. ಆದರೆ ತಾಲ್ಲೂಕು ಈ ರೀತಿ ಪೂರ್ಣವಾಗಿ ತ್ಯಾಗದ ಅಗ್ನಿಯಲ್ಲಿ ಭಸ್ಮವಾಗುತ್ತಿರುವಾಗ ಅವನಿಗೆ ಯಾವುದನ್ನೂ ಕೊಳ್ಳಲು ಧೈರ್ಯವಿರಲಿಲ್ಲ. ಬೊಮ್ಮೇಗೌಡನ ಅಂತಹ ಠಾಸುಗಳು ಭಾರಿ ಭಾರಿ ಹಂಡೆ ಕೊಳಗ ದಪ್ಪಲೆಗಳು, ಎಲ್ಲಾದಕ್ಕಿಂತ ಹೆಚ್ಚಾಗಿ ಆ ಮುದ್ದಾದ ಹೊತ್ತಿಗೆ ನಾಲ್ಕು ಸೇರು ಹಾಲು ಕರೆಯುವ ಒಳ್ಳೆಯ ತಳಿಸು ಎಮ್ಮೆ, ಒಂದು ರುಪಾಯಿಗೆ ಬೇರೆ ಡಿಸ್ಟ್ರಿಕ್ಟಿನವನಿಗೆ ಹೋಗುವುದನ್ನು ಕಂಡು ಅವನ ಹೊಟ್ಟೆ ಉರಿಯಿತು. ಆ ಎಮ್ಮೆಯನ್ನು ಸರಿಯಾದ ಬೆಲೆಗೆ ಕೊಡು ಎಂದು ಹಿಂದೆ ಅವನು ಅನೇಕ ಸಾರಿ ಬೊಮ್ಮೇಗೌಡನನ್ನು ಕೇಳಿದ್ದನು. ಬೊಮ್ಮೇಗೌಡ "ಭಟ್ಟರೇ ಎಲ್ಲಾ ಒಳ್ಳೆಯ ಸಾಮಾನೂ ನಿಮಗೇ ಸೇರಬೇಕಲ್ಲವೇ" ಎಂದಿದ್ದನು. ಭಟ್ಟ ಈಗ "ಎಮ್ಮೆ ಒಂದನ್ನು ಹರಾಜಿನಲ್ಲಿ" ಕೂಗಿಯೇ ಬಿಡುತ್ತೇನೆ ಆಗುವುದೇನು" ಎಂದು ಧೈರ್ಯಮಾಡಿಕೊಂಡನು. ಆದರೆ ಮರು ನಿಮಿಷವೇ ಆ ಧೈರ್ಯ ಮಾಯವಾಯಿತು. "ಈಗೇನೋ ಆ ಪುಣ್ಯಾತ್ಮ ಗಾಂಧಿ ಅಹಿಂಸೆ ಅಹಿಂಸೆ ಅಂತ ಬಡಕೋತ ಇರುವುದರಿಂದ ಈ ಪೋಲೀಸಿನವರು ಉಳಕೊಂಡಿದಾರೆ; ನಾನೂ ಉಳಕೊಂಡಿದೇನೆ! ಈ ಕೊಂಡ್ಕೋತಾ ಇರೋನೂ ಉಳಕೊಂಡಿದಾನೆ. ನಾವು ಇವತ್ತು ಎಮ್ಮೆ ಕೊಂಡುಕೊಂಡರೆ, ಇವರೇನಾದರೂ ನನ್ನ ಗ್ರಹಚಾರಕ್ಕೆ ನಾಳೆ ಗಾಂಧಿ ಮಹಾತ್ಮರ ಮಾತನ್ನೂ ಮರೆತು ಹಿಂಸಾ ಮಾರ್ಗ ಅನುಸರಿಸಿದರೆ ಆಮೇಲೆ ನನ್ನ ಗತಿ ಏನು?" ಎಂದು ಯೋಚಿಸಿ ಸುಮ್ಮನಾದನು.

ಪ್ರತಿದಿನವೂ ಹರಾಜುಗಳು ನಡೆಯ ತೊಡಗಿದವು. ಕರ ನಿರಾಕರಣೆಯ ಸಂಬಂಧದಲ್ಲಿ ಹೊಸದಾಗಿ ಮಾಡಿದ ಆರ್ಡಿನೆನ್ಸ್ ಕರ್ಣಾಟಕಕ್ಕೆ ಅನ್ವ

ಯಿಸಿತು. ಬೊಮ್ಮೇಗೌಡನ ಮನೆಯನ್ನು ಅಧಿಕಾರಿಗಳು ಹರಾಜುಮಾಡಿದರು. ಬೊಮ್ಮೇಗೌಡನೂ ಅವನ ಹೆಂಡತಿ ಮಕ್ಕಳೂ ಸುದರ್ಶನನೂ ಹೊರಗೆ ಬಂದು ಒಂದು ಮರದ ಕೆಳಗೆ ಉಳಿದರು. ಪೋಲೀಸಿನವರು ಇನ್ನೂ ಕೆಲವು ಮನೆಗಳನ್ನು ಸ್ವಾಧೀನಪಡಿಸಿಕೊಂಡು ಅಲ್ಲೆಲ್ಲಾ ತಮ್ಮ ಸಿಪಾಯಿಗಳನ್ನು ಇಟ್ಟರು. ಕಂದಾಯ ಕೊಡದಿದ್ದವರ ಮನೆಗಳೆಲ್ಲಾ ಹರಾಜಾದವು. ಅವರ ಮನೆಯ ಸಾಮಾನುಗಳೆಲ್ಲಾ ಒಂದು ಎರಡು ಆಣೆಗಳಿಗೆ ಸಹ ಹೋಗ ತೊಡಗಿದವು. ಪುಟ್ಟಪ್ಪನ ವಿಳ್ಳೆದೆಲೆ ತೋಟದ ಮೇಲೆ ಭಟ್ಟರಿಗೆ ಬಹು ಕಾಲದಿಂದ ಆಸೆ ಇತ್ತು. ಅದು ಹರಾಜಾಗುವಾಗ ಭಟ್ಟರಿಗೆ ಸಹಿಸುವುದಕ್ಕೆ ಆಗಲಿಲ್ಲ. ಅವರು ಆ ತೋಟವನ್ನು ಹರಾಜಿನಲ್ಲಿ ಕೂಗಿದರು. ಹರಾಜು ಆದ ಕೂಡಲೆ ಭಟ್ಟರಿಗೆ ಭಯ ಪ್ರಾರಂಭವಾಯಿತು." ಊರಿನವರೆಲ್ಲಾ ಕಷ್ಟ ಅನುಭವಿಸುತ್ತಾ ಒಂದಾಗಿದ್ದಾರೆ. ನಾನು ಹೀಗೆ ಅವರಿಗೆ ವಿರೋಧವಾಗಿ ಹೋದೆನೆಲ್ಲಾ, ಅವರೇನಾದರೂ ಹುಲ್ಲು ಗುಡ್ಡೆಗೆ ಬೆಂಕಿ ಹಾಕಿದರೆ ಏನು ಮಾಡಲಿ, ಮನೆ ಮುರಿದರೆ ಏನು ಮಾಡಲಿ, ಅಥವಾ ನನಗೇ ನಾಲ್ಕು ಮಡಗಿದರೋ" ಎಂದು ಅವರಿಗೆ ಎದೆ ಹೊಡೆದುಕೊಳ್ಳ ತೊಡಗಿತು. ಭಟ್ಟರ ಹೆಂಡತಿ "ನಿಮಗೆ ದುರಾಸೆ, ಹೀಗೆ ಊರಿನವರಿಗೆಲ್ಲಾ ವಿರೋಧವಾಗಿ ಹೋದರೆ ನಮ್ಮನ್ನು ಸುಮ್ಮನೆ ಬಿಡ್ತಾರೆಯೆ?" ಎಂದು ಹೆದರಿಸಿದರು. ಗಾಂಧಿಯವರ ಹೆಸರು ಕೇಳಿಸುವುದಕ್ಕಿಂತ ಮುಂಚೆ ಊರಿನಲ್ಲಿ ನಡೆದಿದ್ದ ಹೊಡೆದಾಟಗಳೂ, ದೊಂಬಿಗಳೂ, ಕೈ ಕಾಲುಗಳು ಮುರಿದು ಹುಲ್ಲಿನ ಗುಡ್ಡೆಗೆ ಬೆಂಕಿ ಬಿದ್ದುದೂ, ಅವಳಿಗೆ ಚೆನ್ನಾಗಿ ಜ್ಞಾಪಕವಿದ್ದಿತು. ಆದರೆ ಭಟ್ಟರು "ಆ ಭಯ ಏನೂ ಇಲ್ಲ. ಈಗ ಇವರದೆಲ್ಲಾ ಅಹಿಂಸೆ. ಅಹಿಂಸೆಯ ಯಾವ ಆಯುಧ ಉಪಯೋಗಿಸುತ್ತಾರೆಯೋ! ಎಂದು ನಾನು ಹೆದರಿದ್ದೇನೆ" ಎಂದರು.

ಅವರ ಬೆದರಿಕೆಗೆ ಆಧಾರವಿಲ್ಲದೆ ಇರಲಿಲ್ಲ. ಮರು ದಿವಸ ಅವರು ಹಾಸಿಗೆಯಿಂದ ಎದ್ದು ಬೀದಿಯ ಬಾಗಿಲಿಗೆ ಬರುವ ವೇಳೆಗೆ ಅವರ ಮನೆಯ ಜಗಲಿಯ ಮೇಲೆ ಹತ್ತು ಜನ ಗಂಡಸರೂ ೬ ಜನ ಹುಡುಗಿಯರೂ ಕುಳಿತಿದ್ದರು. ಭಟ್ಟರು ಅವರನ್ನು ನೋಡಿದ ಕೂಡಲೇ ಗಾಬರಿಯಿಂದ "ಏನು. ಯಾಕೆ ಕುಳಿತಿದ್ದೀರಿ ಏನು ಬೇಕು" ಎಂದರು. ಕುಳಿತಿದ್ದವರು "ಏನೂ ಬೇಡ" ಎಂದು ಪ್ರತ್ಯುತ್ತರವಿತ್ತರು. ಭಟ್ಟರು ಹಾಗಾ

ದರೆ ಒಳಕ್ಕೆ ಬನ್ನಿ ಎಂದರು. ಬಂದಿದ್ದವರು "ಇಲ್ಲೇ ಇರುತ್ತೇವೆ" ಎಂದರು. ಹೀಗೆ ಮಧ್ಯಾಹ್ನವಾಯಿತು. ಭಟ್ಟರಿಗೆ ಊಟದ ಹೊತ್ತಾಯಿತು. ಬಂದಿದ್ದವರು ಊಟ ತಿಂಡಿ ಯೋಚನೆಯಿಲ್ಲದೆ ನಿರ್ಯೋಚನೆಯಿಂದ ಕುಳಿತಿದ್ದರು. ಭಟ್ಟರ ಭಯ ಗಳಿಗೆ ಗಳಿಗೂ ಹೆಚ್ಚಾಯಿತು. "ಇವರು ಮೇಲೆಬಿದ್ದರೆ ಪೋಲೀಸಿಗಾದರೂ ಹೇಳಿ ಅವರ ಸಹಾಯವನ್ನಾದರೂ ಹೊಂದಬಹುದು. ಆದರೆ ಅದೂ ಇಲ್ಲ, ಸುಮ್ಮನೆ ಕುಳಿತಿದ್ದಾರೆ ಏನು ಮಾಡುವುದಕ್ಕೂ ತೋಚುವುದಿಲ್ಲ" ಎಂದುಕೊಂಡು ಅವರು "ಅಡಿಗೆ ಮಾಡಿಸಲೇ" ಎಂದರು. ಬಂದಿದ್ದವರು "ಬೇಡ ಊಟ ಮಾಡುವುದಿಲ್ಲ" ಎಂದರು. ಭಟ್ಟರಿಗೆ ಏನೂ ತೋಚದಾಯಿತು. ಅವರು "ಇರಲಿ ನೋಡೋಣ" ಎಂದುಕೊಂಡು ತಾವು ಹೋಗಿ ಊಟ ಮಾಡಿ ಬಂದರು. ಬಂದಿದ್ದವರು ಕುಳಿತ ಜಾಗದಿಂದ ಅಲುಗಾಡದೆ ಕುಳಿತೇ ಇದ್ದರು ಆಗ ಭಟ್ಟರಿಗೆ ಗೊತ್ತಾಯಿತು. ಇವರು ಉಪವಾಸ ಮಾಡುತ್ತಿದ್ದಾರೆ ಎಂದು.

ಗಾಂಧಿಯುವರ ಮಾರ್ಗ ಉಪವಾಸ ಎಂದು ಭಟ್ಟರಿಗೆ ಗೊತ್ತಿದ್ದಿತು. ಆದರೆ ಇಷ್ಟು ಹತ್ತಿರದಲ್ಲಿ ಆ ಅಸ್ತ್ರ ತಮ್ಮ ಮೇಲೆಯೇ ಪ್ರಯೋಗವಾದೀತು ಎಂದು ಅವರು ತಿಳಿದಿರಲಿಲ್ಲ. ಅದು ಆಗುವವರೆಗೆ ಇಂತಹುದು ಸಾಧ್ಯವೆಂದೂ ಅವರು ನಂಬಿರಲಿಲ್ಲ. ಈಗ ನೋಡುತ್ತಾರೆ. 15 ಜನ ಉಪವಾಸ ಕುಳಿತಿದ್ದಾರೆ. ಭಟ್ಟರು ಊಟಮಾಡಿಕೊಂಡು ಬಂದಾಗ ಆ ಉಪವಾಸ ಸತ್ಯಾಗ್ರಹಿಗಳು ಅವರ ಕಡೆ ನೋಡದೆ ಇದ್ದರೂ ಭಟ್ಟರಿಗೇನೋ ಇವರು ನನ್ನ ಹೊಟ್ಟೆಯ ಕಡೆಯೇ ನೋಡುತ್ತಿದ್ದಾರೆ ಎಂದು ತೋರತೊಡಗಿತು. ಇದನ್ನು ಎದುರಿಸುವುದು ಹೇಗೆ? ಮೇಲೆ ಬಿದ್ದರೆ ನಾವೂ ಮೇಲೆ ಬೀಳಬಹುದು. ಪೋಲೀಸಿನವರ ಸಹಾಯ ಕೇಳಬಹುದು. ಹೀಗೆ ಉಪವಾಸ ಕುಳಿತವರನ್ನು ಹೇಗೆ ಎದುರಿಸಲಿ ಎಂಬುದು ಅವರ ಸಮಸ್ಯೆಯಾಯಿತು. "ಹಾಳು ಮುಂಡೆ ತೋಟ, ನಾನು ಯಾಕಯ್ಯ ಕೊಂಡುಕೊಂಡೆ" ಎಂದು ಅವರಿಗೆ ಬಹಳ ದುಃಖವಾಯಿತು.

ಅಷ್ಟುಹೊತ್ತಿಗೆ ಪೋಲೀಸ್ ಇನಿಸ್ಪೆಕ್ಟರ್ ಮುಹಮ್ಮದಾಲಿ ಖಾನ್ ಅಲ್ಲಿಗೆ ಬಂದರು. ಪೋಲೀಸಿನವರಾದುದರಿಂದ ಇನಿಸ್ಪೆಕ್ಟರಿಗೆ ಯಾವಾಗಲೂ ಇತರರ ಕೆಲಸಗಳಲ್ಲಿಯೇ ಆಸಕ್ತಿ. ಅಲ್ಲದೆ ಅವರಿಗೆ ಗೊತ್ತು.

ಮೊದಲು ದಿವಸ ಭಟ್ಟರು ಹರಾಜಿನಲ್ಲಿ ಕಂದಾಯ ಕೊಡದವರ ಜಮೀನು ಕೊಂಡುಕೊಂಡುದರಿಂದ, ಸರ್ಕಾರವನ್ನೇ ತಲೆಕೆಳಕು ಮಾಡಲು ನಿಂತಿರುವ ಈ ಜನ ಅವರಮೇಲೆ ಏನಾದರೂ ಪ್ರತೀಕಾರ ಮಾಡಬಹುದು ಎಂದು. ಆದರೆ ಆ ಪ್ರತೀಕಾರ ಹೇಗೆ ಮಾಡುತ್ತಾರೆ ಎಂಬುದು ಅವರಿಗೆ ತಿಳಿಯಲಿಲ್ಲ. ನೋಡೋಣ ಎಂದು ಭಟ್ಟರ ಮನೆ ಬಾಗಿಲಿಗೆ ಬಂದರು. ದೂರದಿಂದ ಬರುತ್ತಿರುವಾಗಲೇ ಭಟ್ಟರ ಬಾಗಿಲಿನಲ್ಲಿ 10-15 ಜನ ಕುಳಿತಿರುವುದನ್ನು ಕಂಡ ಮುಹಮ್ಮದಾಲಿ ಖಾನರು, "ಓಹೊ ಸೇರಿದ್ದಾರೆ. ನಾನು ಪಿಸ್ತೂಲು ತರಬೇಕಾಗಿದ್ದಿತು" ಎಂದುಕೊಂಡು ಹಿಂದಕ್ಕೆ ಹೋಗಿ ಪಿಸ್ತೂಲನ್ನು ತೆಗೆದುಕೊಂಡು ಬಂದರು. ಆದರೆ ಭಟ್ಟರ ಮನೆಯ ಹತ್ತಿರಕ್ಕೆ ಬಂದಮೇಲೆ "ಈ ಜನಗಳ ಮೇಲೆ ಹೊಡೆದಾಡುವುದು ನೆರಳಿನೊಂದಿಗೆ ಹೊಡೆದಾಡಿದಂತೆ. ಇವರು ಮೇಲೆ ಬೀಳುವುದಿಲ್ಲ. ಪಿಸ್ತೂಲು ದಂಡ" ಎಂದುಕೊಂಡರು. ಮುಹಮ್ಮದಾಲಿ ಖಾನ ದುಷ್ಟ. ಕಟುಕ. ಸ್ವಲ್ಪ ನೆಪ ಸಿಕ್ಕಿದರೂ ಪಿಸ್ತೂಲನ್ನು ಹಾರಿಸುವ ಅಭ್ಯಾಸ ಅವನದು. ಆದುದರಿಂದಲೇ ಅವನಿಗೆ ಬರಿಯ ರುಜು ಹಾಕುವುದಕ್ಕೆ ಮಾತ್ರ ಬರುತ್ತಿದ್ದರೂ ಅವನು ಸಬ್ ಇನಿಸ್ಪೆಕ್ಟರ್ ಆಗಿದ್ದನು. ಸರ್ಕಾರದಲ್ಲಿ ಬುದ್ಧಿ ಇರುವವರಿಗೆ ಹೇಗೆ ಸ್ಥಳವಿಲ್ಲವೋ ಹಾಗೆಯೇ ಪೋಲೀಸಿನಲ್ಲಿ ಮನುಷ್ಯತ್ವವಿರುವವರಿಗೆ ಸ್ಥಳವಿಲ್ಲ. ಆದರೆ, ಈ ಉಪವಾಸಸ ತ್ಯಾಗ್ರಹಿಗಳೆದುರಿಗೆ ಸಬ್ ಇನಿಸ್ಪೆಕ್ಟರಿಗೂ ಏನೂಮಾಡಲು ಸಾಧ್ಯವಾಗಲಿಲ್ಲ. ಅವರು ಉಪವಾಸ ಹೂಡುತ್ತಿದ್ದ ಕೆಲವರನ್ನು ದಸ್ತಗಿರಿಮಾಡಿದರು. ಎರಡು ಹುಡುಗಿಯರನ್ನೂ ದಸ್ತಗಿರಿ ಮಾಡಿದರು ಭಟ್ಟರಿಗೆ ಏನುಮಾಡುವುದಕ್ಕೂ ತೋಚಲಿಲ್ಲ. ಅವರು ಜಮೀನನ್ನು ರಾಜಿನಾಮೆ ಕೊಟ್ಟರು.

ಈ ಕರನಿರಾಕರಣದ ಪ್ರಭಾವ ಅಂಕೋಲೆ ಸಿರಸಿ ಸಿದ್ದಾಪುರಗಳಲ್ಲಿ ಅತಿ ಪ್ರಬಲವಾಯಿತು. ಸಣ್ಣ ಹುಡುಗರು ಸಹ ಹೆಗಲಿನ ಮೇಲೆ ಕೊಡಲಿಗಳನ್ನು ಹಿಡಿದುಕೊಂಡು ಹೊರಟರು. ಸುಮಾರು ಮೂರು ಲಕ್ಷ ಈಚಲು ಮರಗಳನ್ನು ಕಡಿದರು. ಸಿರಸಿ ತಾಲ್ಲೂಕಿನ 130 ಪಟೇಲರ ಪೈಕಿ 96 ಪಟೇಲರು ರಾಜೀನಾಮೆಯಿತ್ತರು. ಸಿದ್ದಾಪುರದ ತಾಲ್ಲೂಕಿನ 25 ಪಟೇಲರು ರಾಜೀನಾಮೆ ಕೊಟ್ಟರು. ಅಂಕೋಲಾ ತಾಲ್ಲೂಕಿನ 63

ಪಟೇಲರ ಪೈಕಿ 43 ಜನ ರಾಜಿನಾಮೆ ಕೊಟ್ಟರು. ಸುಮಾರು 800 ಸಂಸಾರ ಗಳು ಚಳುವಳಿಯಲ್ಲಿ ಭಾಗವಹಿಸಿದುವು. 330 ಸಂಸಾರಗಳ ಜಮೀನು ಗಳು ಪೂರ್ಣವಾಗಿ ಕೈಬಿಟ್ಟು ಹೋದವು. 15 ಲಕ್ಷ ರುಪಾಯಿ ಬೆಲೆ ಬಾಳುವ ಜಮೀನುಗಳನ್ನು ಸರ್ಕಾರದವರು ಮುಟ್ಟಗೋಲು ಹಾಕಿಕೊಂ ಡರು. 50 ಸಾವಿರ ರುಪಾಯಿ ಬೆಲೆ ಬಾಳುವ 166 ಮನೆಗಳನ್ನು ಮುಟ್ಟ ಗೋಲು ಹಾಕಿಕೊಂಡರು. ಚರಸ್ವತ್ತುಗಳು 218 ಜಪ್ತಿಗಳಾಗಿ 20,000 ರುಪಾಯಿ ಬೆಲೆಬಾಳುವ ಸಾಮಾನು ಸರ್ಕಾರಕ್ಕೆ ಸೇರಿತು. ಹರಾಜಿನ ಸಾಮಾನುಗಳನ್ನು ಕೊಂಡುಕೊಂಡವರ ಬಾಗಿಲುಗಳಲ್ಲಿ 37 ಸತ್ಯಾಗ್ರಹಿ ಗಳು ಉಪವಾಸಮಾಡಿದರು. ಲಕ್ಷ್ಮಮ್ಮನೆಂಬಾಕೆಯು 31 ದಿನಗಳು ಉಪವಾಸ ಮಾಡಿದರು. ಸಿರಸಿ ಸಿದ್ದಾಪುರದಲ್ಲಿ ಸರ್ಕಾರದವರು 110 ಪೋಲೀಸರನ್ನು ಹೆಚ್ಚಾಗಿ ನಿಯಮಿಸಿದರು. ಅವರ ವೆಚ್ಚಕ್ಕಾಗಿ ಪ್ರಜೆ ಗಳಿಂದ 37,000 ರುಪಾಯಿ ದಂಡ ಕಂದಾಯವನ್ನು ವಸೂಲ್ಮಾಡಿದರು. 800 ಜನರಿಗೆ ಸಜಾ ಆಯಿತು. ಆ ಪೈಕಿ 100 ಜನ ಸ್ತ್ರೀಯರು ಇದ್ದರು.

ಈ ಧೀರವಾದ ವೀರಪುರುಷ ವೀರ ಸ್ತ್ರೀ ರತ್ನಗಳನ್ನು ಕುರಿತ ಅಧ್ಯಾಯವನ್ನು ಮುಗಿಸುವುದಕ್ಕೆ ಮುಂಚೆ ಒಂದು ಸಂಗತಿ ಹೇಳಿಬಿಡು ತ್ತೇವೆ ಸುದರ್ಶನ ಯಾವ ಹಳ್ಳಿಯಲ್ಲಿ ಆ ಕಾಲದಲ್ಲಿ ವಾಸಿಸುತ್ತಿದ್ದನೋ ಆ ಹಳ್ಳಿಯಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಏನೂ ಉಳಿಯಲಿಲ್ಲ. ಯಾವ ಮನೆ ಯಲ್ಲಿಯೂ ಯಾವ ಸಾಮಾನೂ ಉಳಿಯಲಿಲ್ಲ. ಒಂದು ಕಾಳು ರಾಗಿ ಜೋಳ ಹಿತ್ತಾಳೆ ಪಾತ್ರೆ ಏನೂ ಇರಲಿಲ್ಲ. ಮುಕ್ಕಾಲು ಭಾಗ ಮನೆಗಳು ಸರ್ಕಾರದ ಪೋಲೀಸರ ವಶದಲ್ಲಿದ್ದುವು. ಆರ್ಡಿನೆನ್ಸ್ ಜಾರಿಯಿದ್ದುದರಿಂದ ಮನೆಗಳಿದ್ದವರು, ಇತರರಿಗೆ ಸ್ವಲ್ಪ ಸಹಾಯಮಾಡಿದರೂ ಪೋಲೀಸಿ ನವರು ಅವರ ಮೇಲೆ ಬೀಳುತ್ತಿದ್ದರು. ಆದುದರಿಂದ ಸರ್ಕಾರದ ಕಂದಾಯ ಕೊಡದವರು ಬಯಲಿನಲ್ಲಿಯೇ ಮುಡಕೆಗಳನ್ನು ಇಟ್ಟು ಕೊಂಡು ಸೊಪ್ಪು ಸೆದೆಗಳನ್ನು ಬೇಯಿಸಿಕೊಂಡು ತಿನ್ನುತ್ತಿದ್ದರು. ಒಂದು ದಿವಸ ಸರ್ಕಾರದವರು ಒಬ್ಬ ಆಚಾರಿಯ ಪೈರು ಬೆಳೆದಿದ್ದ ಜಮೀನನ್ನು ಕಂದಾಯಕ್ಕಾಗಿ ಹರಾಜು ಹಾಕಿದರು. ಆ ವೇಳೆಗೆ ಹರಾಜುಮಾಡಿದ ಪದಾರ್ಥಗಳಿಂದಲೇ ಅವನ ಕಂದಾಯ ಉತ್ಪತ್ತಿಯಾಗಿದ್ದಿತು. ಆದರೆ ಅವನ್ನೆಲ್ಲಾ ಲೆಕ್ಕಚಾರಮಾಡುವಷ್ಟು ಶಾಂತಿ ಅವರಿಗೆ ಆಗ ಇರಲಿಲ್ಲ.

ಆಚಾರಿಯು ಜಮೀನನ್ನು ಪರಸ್ಥಳದ ಒಬ್ಬನ ಹೆಸರಿಗೆ ನಿಲ್ಲಿಸಿದರು. ಆ ಜಮೀನು ಆ ದಿನ ಕಟಾವಾಗಬೇಕಾಗಿದ್ದಿತು. ಊರಿನ ಯಾವ ಕೂಲಿಯೂ ಜಮೀನನ್ನು ಕಟಾವು ಮಾಡಲು ಒಪ್ಪಲಿಲ್ಲ. ಸರ್ಕಾರದವರು ಒಬ್ಬೊಬ್ಬ ಕೂಲಿಗೆ ಮೂರು ಮೂರು ರುಪಾಯಿ ಕೊಡುತ್ತೇವೆ ಎಂದರು. ಆದರೂ ಒಬ್ಬ ಕೂಲಿಯೂ ದೊರಕಲಿಲ್ಲ.

ಆ ಸಾಯಂಕಾಲ ಬೆಳದಿಂಗಳಿನಲ್ಲಿ ಊರಿನವರು "ಆಚಾರಿಯ ಹೊಲವನ್ನು ನಾವೇ ಯಾಕೆ ಕಟಾ ಮಾಡಬಾರದು. "ಈಗ ಮಾರಿರುವ ಸಾಮಾನುಗಳು ಕಂದಾಯದ ಐದುನೂರರಷ್ಟಾಗಿವೆ. ಅಲ್ಲದೆ ಗ್ರಾಮ ಸ್ತರಿಗೆ ಊಟಕ್ಕೂ ಇಲ್ಲ" ಎಂದುಕೊಂಡು ಕಟಾವು ಮಾಡಬೇಕೆಂದು ಹೊಲದ ಮುಂದೆ ಸೇರಿದ್ದರು. ರಾತ್ರಿ ಸುಮಾರು 9-9½ ಗಂಟೆ ಆಗಿತ್ತಿ ದ್ದಿತು. ಇದ್ದಕ್ಕಿದ್ದಂತೆ ದೂರದಲ್ಲಿ ಬಸ್ಸು ಸದ್ದಾಯಿತು. ಗ್ರಾಮದ ಸುಮಾರು ನೂರು ಹೆಣ್ಣು ಗಂಡುಗಳು ಕಿವಿ ನಿಮಿರಿಸಿ ಆ ಕಡೆ ನೋಡ ತೊಡಗಿದರು. ಒಂದು ಬಸ್ಸಿನ ತುಂಬ ಕೂಲಿಗಳು ಬಂದು ಇಳಿದರು. ಅದರ ಹಿಂದೆ ಬಂದ ಬಸ್ಸಿನಲ್ಲಿ ಪೋಲೀಸಿನವರು ಲಾಠಿಗಳೊಂದಿಗೆ ಇಳಿ ದರು. ಕೂಡಲೇ ಅವರು ಗ್ರಾಮಸ್ತರು ಇಲ್ಲಿ ಯಾಕೆ ಸೇರಿದ್ದಾರೆ ಎಂಬು ದೊಂದನ್ನೂ ವಿಚಾರಿಸದೆ ಒಂದೇ ಏಟಿಗೆ ಲಾಠಿಛಾರ್ಜು ಮಾಡಲು ಪ್ರಾರಂಭಿಸಿದರು. ಪೋಲೀಸು ಯಾಕೆ ಬಂದಿದ್ದಾರೆ ಎಂಬುದು ಜನಕ್ಕೆ ತಿಳಿಯುವುದಕ್ಕೆ ಮುಂಚೆಯೇ ಜನರ ತಲೆಯ ಮೇಲೆ ದೊಣ್ಣೆ ಪೆಟ್ಟುಗಳು ಬಿದ್ದವು. ಒಂದು ಏಟು ತಲೆಯ ಮೇಲೆ ಬಿದ್ದಾಗ ಬೊಮ್ಮೇಗೌಡನು "ಒಯಕ್" ಎಂದನು. ಅನೇಕ ಸ್ತ್ರೀಯರಿಗೆ ಏಟು ಬಿತ್ತು. ಸ್ವತಃ ಮಹಮ್ಮದಲ್ಲಿಖಾನನೇ ಲಾಠಿಗಳಿಂದ ಎಲ್ಲರಿಗೂ ಬಾರಿಸುತ್ತಿದ್ದನು. ಆಗ ಅವನ ಮುಖವನ್ನು ನೋಡಿದರೆ ತನಗೆ ಬಹು ಇಷ್ಟವಾದ ಕೆಲಸವನ್ನು ಅವನು ಮಾಡುತ್ತಿದ್ದಂತೆ ತೋರಿತು. ಭಟ್ಟರು ಸುಮ್ಮನೆ ನೋಡುತ್ತಾ ದೂರದಲ್ಲಿ ನಿಂತಿದ್ದರೂ ಮಾಡಿದ ಪಾಪ ಕರ್ಮಗಳಿಗೆ ಇದು ಪ್ರತೀ ಕಾರವೋ ಎಂಬಂತೆ, ಮಹಮ್ಮದಲ್ಲಿಖಾನ ಅವರ ಬಳಿಗೆ ಹೋಗಿ ದೊಣ್ಣೆ ಬೀಸಿದನು. ಭಟ್ಟರು "ನಾನು ರಾಮಾಭಟ್ಟ ಇನಿಸ್ಪೆಕ್ಟರೇ ಎಂದರು. ಇನಿಸ್ಪೆಕ್ಟರಲ್ಲ, ಸಬ್ ಇನಿಸ್ಪೆಕ್ಟರು ಎಂದು ಭಟ್ಟರಿಗೆ ಗೊತ್ತು. ಆದರೂ ಸಬ್ ಇನಿಸ್ಪೆಕ್ಟರ ಕೈಯ್ಯಲ್ಲಿ ದೊಣ್ಣೆ ಇದ್ದುದರಿಂದ ಅದರ ಏಟು ತಪ್ಪಲಿ

ಎಂದು ಭಟ್ಟರು ಅವರಿಗೆ ಇನಿಸ್ಪೆಕ್ಟರ್ ಎಂದು ಸಂಭೋದಿಸಿದರು. ಆಗ ಅವರು "ನೀವು ಭಟ್ಟರೋ ಆದರೂ ಪರವಾಯಿಲ್ಲ" ಎಂದು ಹೇಳಿ ಲಾಠಿಯಿಂದ ಎತ್ತಿ ಒಂದು ಬಿಟ್ಟರು. ಭಟ್ಟರು "ಅಯ್ಯೊ ಅಪ್ಪಾ ಸತ್ತೆ" ಎಂದು ನೆಲದ ಮೇಲೆ ಬಿದ್ದರು. ಗೌರಿಗೂ ಮಾದಿಗೂ ಭಾದಕನಿಗೂ (ಇವನು ಬಾಧಕ ಎಂಬುದನ್ನು ಭಾದಕ ಎಂದು ಉಚ್ಚರಿಸುವುದರಿಂದ ಇವನಿಗೆ ಈ ಹೆಸರೇ ನಿಂತಿದೆ) ನೆರೆದಿದ್ದವರೆಲ್ಲರಿಗೂ ಏಟು ಬಿತ್ತು. ಆಚಾರಿಯ ಹೆಂಡತಿ ಜೋಳದ ಸಂದಿಯಲ್ಲಿ ಅಡಗಿಕೊಂಡಿದ್ದಳು. ಪೋಲೀಸಿನವರು ಅವಳನ್ನೂ ಈಚೆಗೆ ಎಳೆದು ಬಾರಿಸಿದರು.

ಕರ್ನಾಟಕದ ಈ ಧೀರರನ್ನು ಕುರಿತು ವಲ್ಲಭಾಯಿ ಪಟೇಲರು ಹೇಳಿದ ಮಾತುಗಳು ಈಗಲೂ ಆ ತ್ಯಾಗ ಧೈರ್ಯದ ಮಹಿಮೆಯನ್ನು ನಮ್ಮ ಮುಂದೆ ತಂದು ಇಂತಹ ಕೆಲಸವನ್ನು ಮಾಡಿದವರು ಎಂತಹ ಕೆಲಸವನ್ನು ಬೇಕಾದರೂ ಮಾಡಬಲ್ಲರೆಂಬ ಧೈರ್ಯವನ್ನು ನಮಗೆ ಕೊಡುತ್ತದೆ.

"ಕರ್ನಾಟಕದ ಧೀರರಾದ ರೈತರು ತ್ಯಾಗದಲ್ಲಿಯೂ ಭೂಮಿ ಆಸ್ತಿಗಳನ್ನು ಕಳೆದುಕೊಂಡಿರುವುದರಲ್ಲಿಯೂ ಕಷ್ಟ ಸಹನೆಯಲ್ಲಿಯೂ ನಿಮಗೆ (ಗುಜರಾತಿನ ರೈತರಿಗೆ) ಸಮಾನರಾಗಿದ್ದಾರೆ. ಅವರ ಆಸ್ತಿಗಳೆಲ್ಲಾ ಜಫ್ತಾಗಿವೆ; ಮಟ್ಟಗೋಲು ಹಾಕಿಕೊಂಡಿದ್ದಾರೆ. ಜನರನ್ನು ಜೈಲಿಗೆ ತುಂಬಿದ್ದಾರೆ. ಇನ್ನೂ ಹೆಚ್ಚಿಗೆ ಕಷ್ಟಗಳೆಲ್ಲಾ ಅವರಿಗೆ ಉಂಟಾಗಿವೆ. ಸ್ತ್ರೀಯರೂ ಪುರುಷರೂ ತಾವು ಯಾವ ಕಷ್ಟಗಳಿಗೂ ಹೆದರುವುದಿಲ್ಲವೆಂಬುದನ್ನು ಜಗತ್ತಿಗೇ ತೋರಿಸಿದ್ದಾರೆ. ಇವತ್ತು ಅವರು ಪೂರ್ಣವಾಗಿ ನಿರಾಶ್ರಿತರಾಗಿದ್ದಾರೆ. ಅವರ ಕಷ್ಟ ನೋವು ಧೈರ್ಯದ ಕಥೆ ನನ್ನಲ್ಲಿ ಮೆಚ್ಚಿಕೆಯನ್ನು ಉಂಟುಮಾಡಿದೆ. ಅವರ ಕಷ್ಟ ಒಂದೊಂದು ಸಲ ನನ್ನ ಮನಸ್ಸನ್ನು ಬಹಳ ವಿಚಲಿತಮಾಡಿದೆ."

---

## ೩೫. ಮತ್ತೆ ವಿಕಟ ನರ್ತನ

---

ಅನಂತರ ಗಾಂಧಿ ಇರ್ವಿನ್ ರಾಜಿ ಒಪ್ಪಂದವಾಯಿತು. ಗಾಂಧಿಯವರು ಲಂಡನ್‌ನಲ್ಲಿ ನಡೆದ ದುಂಡು ಮೇಜಿನ ಪರಿಷತ್ತಿಗೆ ಹೋದರು.

ಅವರು ವಾಪಸು ಬಂದುದು 1931ನೆ ಡಿಸೆಂಬರ್ 28 ರಲ್ಲಿ. ಅವರಿಗೆ ಬೊಂಬಾಯಿನಲ್ಲಿ ನಡೆದ ಮೆರವಣಿಗೆ ಯಾವ ಧೊರೆಗೂ ವೈಸರಾಯಿಗೂ ಹೊಟ್ಟೆಕಿಚ್ಚು ಉಂಟುಮಾಡುವುದಾಗಿದ್ದಿತು. ಲಾರ್ಡ್ ಎಲ್ಲಿಂಗ್‌ಡನ್‌ರವರು ಗಾಂಧಿಯವರು ಹಿಂದಿರುಗುವ ವೇಳೆಗೆ ಕತ್ತಿಗಳನ್ನೆಲ್ಲಾ ಮಸೆದು ಇಟ್ಟಿದ್ದರು. ಗಾಂಧಿ ಇರ್ವಿನ್ ಒಪ್ಪಂದದಿಂದ ಸರ್ಕಾರಕ್ಕೆ ದೊರೆತ ವಿರಾಮವನ್ನು ಎಲ್ಲಿಂಗ್ಡನ್ನರು ಪೋಲೀಸರ ಲಾಠಿಗಳನ್ನು ಮಾಡಿಸಲು ಉಪಯೋಗಿಸಿದರು. ಇರ್ವಿನರು ಕೊಟ್ಟ ವಾಗ್ದಾನಗಳೊಂದನ್ನೂ ನಡೆಸಲು ಎಲ್ಲಿಂಗ್‌ಡನ್‌ರಿಗೆ ಇಷ್ಟವಿರಲಿಲ್ಲ. ಗಾಂಧಿಯವರು ಸೀಮೆಯಿಂದ ಬರುವುದಕ್ಕೆ ಮುಂಚೆಯೇ ಜವಾಹಿರ್‌ಲಾಲ್ ನೆಹ್ರು, ಶರ್ವಾಣಿ ಇವರ ದಸ್ತಗಿರಿಯಾಯಿತು. ಗಡಿನಾಡಿನಲ್ಲಿ, ಗೌವರ್ನರ ದರ್ಬಾರ್ ದವಲತ್‌ಗೆ ಹೋಗಲಿಲ್ಲವೆಂಬ ಕಾರಣದಿಂದ ಅಬ್ದುಲ್ ಗಫಾರ್‌ಖಾನ್ ಮತ್ತು ಡಾಕ್ಟರ್ ಖಾನ್ ಸಾಹೇಬರ ದಸ್ತಗಿರಿಯಾಯಿತು. ಒಪ್ಪಂದದ ಕಾಲದಲ್ಲಿಯೂ ಅಲ್ಲಲ್ಲಿ ಲಾಠಿ ಛಾರ್ಜುಗಳೂ ಒಂದೆರಡು ಕಡೆ ಗುಂಡು ಹಾರಿಸುವಿಕೆಯೂ ನಡೆದೇ ನಡೆದವು. ಸರ್ಕಾರಕ್ಕೆ ಸಮಯಬಿದ್ದ ಕಡೆಗಳಲ್ಲೆಲ್ಲಾ ಒಪ್ಪಂದವನ್ನು ಮುರಿಯುವುದೇ ಒಂದು ಆಟವಾಯಿತು. ಲಾರ್ಡ್ ಎಲ್ಲಿಂಗ್‌ಡನ್‌ರವರು ಆರ್ಡಿನೆನ್ಸುಗಳನ್ನು ಪ್ರಾರಂಭಿಸಿದರು. ಆಗ ಯುದ್ಧವೂ ಇರಲಿಲ್ಲ ಏನೂ ಇಲ್ಲ. ಅವರು ಮಾಡುವ ಯುದ್ಧವೆಲ್ಲ ನಮ್ಮ ಮೇಲೆಯೆ. ಬಂಗಾಳಾ ಆರ್ಡಿನೆನ್ಸು ಗಾಂಧಿಯವರು ಇನ್ನೂ ಲಂಡನ್ನಿನಲ್ಲಿರುವಾಗಲೇ, ಒಪ್ಪಂದದ ಕಾಲದಲ್ಲಿಯೇ ಆಯಿತು. ಬಂಗಾಳದಲ್ಲಿ ಸಣ್ಣ ಪೋಲೀಸ್ ಅಧಿಕಾರಿಗೆ ಕೂಡ ಯಾರ ಮೇಲೆ ಅನುಮಾನ ಬಂದರೂ ಅವನನ್ನು ದಸ್ತಗಿರಿ ಮಾಡಬಹುದು. ಯಾರ ಮನೆಯನ್ನು ಬೇಕಾದರೂ ಶೋಧಿಸಬಹುದು. ಯಾರ ಮನೆಯನ್ನು ಬೇಕಾದರೂ ಪೋಲೀಸರು, ಪ್ರತಿಫಲ ಕೊಟ್ಟಾಗಲಿ ಕೊಡದೆಯೇ ಆಗಲಿ ಸ್ವಾಧೀನಕ್ಕೆ ತೆಗೆದುಕೊಳ್ಳಬಹುದು. ಯಾರನ್ನು ಬೇಕಾದರೂ ರೈಲು ಮೊದಲುಗೊಂಡು ಎಲ್ಲಿಗೂ ಹೋಗಕೂಡದೆಂದು ತಡೆಯಬಹುದು. ಯಾರಲ್ಲಿರುವ ವಾಹನಗಳನ್ನು ಬೇಕಾದರೂ ಸರ್ಕಾರದವರು ವಹಿಸಿಕೊಳ್ಳಬಹುದು. ಪುಂಡು ಕಂದಾಯ ವಿಧಿಸಬಹುದು. ಇದಕ್ಕೆ ಯಾವ ಸಿವಿಲ್ ಕೋರ್ಟಿನಲ್ಲಿಯೂ ಅಪೀಲು ಇಲ್ಲ. ಸ್ಪೆಷಲ್ ಕೋರ್ಟು ಅಂದರೆ ಆರ್ಡಿನೆನ್ಸ್

ಕೋರ್ಟುಗಳನ್ನು ಮಾಡಬಹುದು. ಈ ಕೋರ್ಟುಗಳಿಗೆ ಬೇರೆ ಕಾನೂನು. ಕೆಲವು ಸಮಯದಲ್ಲಿ ಸ್ಪೆಷಲ್ ಕೋರ್ಟುಗಳು ಅಪರಾಧಿ ಇಲ್ಲದೇಲೆ ವಿಚಾರಣೆ ನಡೆಸಬಹುದು'' ಮುಂತಾದ ಅಧಿಕಾರ ದೊರೆಯಿತು. ಇದು ಯುದ್ಧ ಮುಂತಾದ ಯಾವ ಭಯವೂ ಇಲ್ಲದೆ ಶಾಂತವಾದ ಕಾಲದಲ್ಲಿ ಲಾರ್ಡ್ ವಿಲ್ಲಿಂಗ್ಡನ್ನರ ಆಡಳಿತ ಕ್ರಮ.

ಯುನೈಟೆಡ್ ಪ್ರಾಂತದ ಆವಶ್ಯಕತೆಯ ಆರ್ಡಿನೆನ್ಸು—ಇದರ ಸ್ವಭಾವವೂ ಮೇಲಿನ ಆರ್ಡಿನೆನ್ಸಿನಂತೆಯೇ. ಗಡಿನಾಡಿಗೆ ಸಂಬಂಧಿಸಿದ ಮೂರು ಆರ್ಡಿನೆನ್ಸು. ಅವುಗಳಲ್ಲಿ ಮೇಲಿನ ಆರ್ಡಿನೆನ್ಸಿನ ಕಿರುಕುಳಗಳ ಜತೆಗೆ ಯಾರ ಹತ್ತಿರ ಇರುವ ದವಸ ಧಾನ್ಯ ಬೇಕಾದರೂ ಸರ್ಕಾರ ತೆಗೆದುಕೊಳ್ಳಬಹುದು. ಟಪಾಲು ಟೆಲಿಗ್ರಾಫು ಎಲ್ಲದರಲ್ಲಿಯೂ ಸಾರ್ವಜನಿಕರು ಕಳುಹಿಸುವ ಸುದ್ದಿಗಳನ್ನು ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟು ಒಡೆದು ನೋಡಬಹುದು. ಯಾವ ಪ್ರಯಾಣಿಕರನ್ನು ಬೇಕಾದರೂ ರೈಲಿನಿಂದ ಆಚೆಗೆ ದೂಡಬಹುದು. ಪೋಲೀಸರ ಉಪಯೋಗಕ್ಕಾಗಿ ರೈಲ್ವೆ ಗಾಡಿಗಳನ್ನು ಸ್ವಾಧೀನಕ್ಕೆ ತೆಗೆದುಕೊಳ್ಳಬಹುದು. ಖಾಸಗಿ ಸಭೆಗಳಲ್ಲಿ ಸಹ ಕಾವಲಿರಲು ಪೋಲೀಸಿನವರನ್ನು ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟು ಕಳುಹಿಸಬಹುದು. ಹದಿನಾರು ವರುಷದ ಕೆಳಗಿನವರು ಸರ್ಕಾರದ—ಅಂದರೆ ಕಡೆ ದರ್ಜೆಯ ಪೋಲೀಸ್ ಸಿಪಾಯಿಯ—ಅಸಂತುಷ್ಟಿಗೆ ಪಾತ್ರರಾದರೆ ಅವರ ಮೇಲೆ ವಿಧಿಸುವ ಜುಲ್ಮಾನೆಯನ್ನು ಅವರ ಪೋಷಕರು ಕೊಡಬೇಕು. ಇಲ್ಲಿಯೂ ಸ್ಪೆಷಲ್ ಕೋರ್ಟು ಸ್ಪೆಷಲ್ ಜಡ್ಜಿ ಸ್ಪೆಷಲ್ ಟ್ರಿಬುನಲ್ ಸಮ್ಮರಿ ಟ್ರಯಲ್ ಎಲ್ಲಾ ಉಂಟು. ಅವಕ್ಕೇ ಬೇರೆ ಕಾನೂನು. ಪೋಲೀಸಿನವರು, ಯಾವ ಜಾಗವಾದರೂ ಕಾಯಿದೆಗೆ ವಿರುದ್ಧವಾದ ಕೆಲಸಕ್ಕೆ ಉಪಯೋಗವಾಗುತ್ತಿದೆ ಎಂಬ ಅನುಮಾನದ ಮೇಲೆ ಅಲ್ಲಿರುವವರನ್ನೆಲ್ಲಾ ಬೀದಿಗೆ ದೂಡಿ ಆ ಸ್ಥಳವನ್ನು ತಮ್ಮ ಸ್ವಾಧೀನಕ್ಕೆ ತೆಗೆದುಕೊಳ್ಳಬಹುದು. ಯಾರ ಹತ್ತಿರ ಇರುವ ಹಣವಾದರೂ ಕಾನೂನಿಗೆ ವಿರುದ್ಧವಾದ ಕೆಲಸಕ್ಕೆ ಉಪಯೋಗವಾಗುತ್ತದೆ ಎಂಬ ಅನುಮಾನದ ಮೇಲೆ ಸರ್ಕಾರ ಆ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಬಹುದು.

1932ನೇ ಜನವರಿ ನಾಲ್ಕನೆ ತಾರೀಖು ಲಾರ್ಡ್ ವಿಲ್ಲಿಂಗ್ಡನ್ನರು ಮತ್ತೆ ನಾಲ್ಕು ಆರ್ಡಿನೆನ್ಸುಗಳನ್ನು ಹೊರಡಿಸಿದರು. ಅವಸರದ ಅಧಿ

ಕಾರದ ಆರ್ಡಿನೆನ್ಸು. ಕಾಯಿದೆಗೆ ವಿರೋಧವಾಗಿ ಪುಸಲಾಯಿಸುವ ಆರ್ಡಿನೆನ್ಸು; ಕಾಯಿದೆಗೆ ವಿರೋಧ ಕೂಟದ ಆರ್ಡಿನೆನ್ಸು; ಬಹಿಷ್ಕಾರ ವಿರೋಧವಾದ ಆರ್ಡಿನೆನ್ಸು.

ಇವುಗಳಿಗೆಲ್ಲಾ ಮಾರ್ಷಲ್‌ಲಾಗಳಿಗೆಇರುವಅಧಿಕಾರಗಳೇ ಇದ್ದವು. ಭಾರತ ವೃತ್ತಪತ್ರಿಕಾ ಆರ್ಡನೆನ್ಸು, ಮೊದಲು ಇದ್ದುದಕ್ಕಿಂತಲೂ ಕಠಿಣ ವಾಯಿತು. ಸರ್ಕಾರ ಮತ್ತು ಪೋಲೀಸ್ ಅಧಿಕಾರಿಗಳು ಏನು ಮಾಡಿ ದರೂ ಅದಕ್ಕೆ ಆರ್ಡಿನೆನ್ಸಿನಲ್ಲಿ ರಕ್ಷಣೆಯಿತ್ತು. ಗಾಂಧಿಜಿಯವರು ವಿನೋದವಾಗಿ ಇವು "ಭಾರತಕ್ಕೆ ವಿಲ್ಲಿಂಗ್ಡನ್‌ರವರ ಕ್ರಿಸ್‌ಮಸ್ ಕಾಣಿಕೆ" ಎಂದರು. ಈ ಆರ್ಡಿನೆನ್ಸುಗಳ ವಾಯಿದೆ ಕಳದ ಮೇಲೆ, ವಿಲ್ಲಿಂಗ್ಡನ್ನರು ಅದನ್ನು ಶಾಸನಸಭೆಗಳ ಮುಂದೆ ಕಾನೂನು ಮಾಡಿ ಕೊಂಡರು.

1932ನೆ ಜನವರಿ ನಾಲ್ಕನೇ ತಾರೀಖು ರೌಂಡ್ ಟೇಬಲ್ ಸಮ್ಮೇಳನ ದಿಂದ ಹಿಂದಿರುಗಿದ ಮೇಲೆ ಮಹಾತ್ಮಾ ಗಾಂಧಿಯವರ ದಸ್ತಗಿರಿಯಾ ಯಿತು. ಅದೇದಿನ ರಾತ್ರೆ ಪೋಲೀಸಿನವರು ಕರ್ನಾಟಕದಲ್ಲಿ ಬಾಗಲ್ ಕೋಟೆಯಲ್ಲಿ ಸತ್ಯಾಗ್ರಹ ಶಿಬಿರ ನಡೆಯುತ್ತಿದ್ದುದನ್ನು ಮುತ್ತಿದರು. ಅಖಿಲಭಾರತದಿಂದ ಅಲ್ಲಿ ತಯಾರಿ ತೆಗೆದುಕೊಳ್ಳಲು ಜನ ನೆರೆದಿದ್ದರು. ಆದರೆ ಗಾಂಧಿಯವರ ದಸ್ತಗಿರಿಯಾದ ಕೂಡಲೇ ಜನರು ಅವರವರ ಊರುಗಳಿಗೋ ಇದ್ದಕ್ಕಿದ್ದಂತೆಯೇ ಹೊರಟುಹೋದರು. ಪೋಲೀಸಿ ನವರು ಕಟ್ಟಡವನ್ನು ಮಾತ್ರ ಸ್ವಾಧೀನಪಡಿಸಿಕೊಂಡರು. ಭಾರತದ ರಾಷ್ಟ್ರದ ಏಕಮಾತ್ರ ಪ್ರತಿನಿಧಿ, ಇಂಗ್ಲೆಂಡಿನಲ್ಲಿ ದುಂಡು ಮೇಜಿನ ಪರಿಷ ತ್ತಿನಲ್ಲಿ ಗಾಂಧಿಜಿ ಸಮಸ್ತ ಆಂಗ್ಲೇಯರ ಗೌರವಕ್ಕೂ ಪಾತ್ರರಾದ ಚಕ್ರವರ್ತಿಯ ಪ್ರತಿನಿಧಿಯಾದ ಇರ್ವಿನರವರೊಡನೆ ಮಾಡಿಕೊಂಡ ಒಪ್ಪಂದ ಇನ್ನೂ ನಡೆಯುತ್ತಲೇ ಇದೆಯೆಂದು ಹೆಸರು. ವಿಲ್ಲಿಂಗ್ಡನ್ ತಮ್ಮ ಹಿಂದಿಲ ವೈಸರಾಯರ ಒಪ್ಪಂದವನ್ನು ಕಸಕ್ಕಿಂತ ಕಡೆಮಾಡಿ ಭಾರತದಲ್ಲಿ ಆರ್ಡಿನೆನ್ಸ್ ರಾಜ್ಯ ಸ್ಥಾಪಿಸಿದರು. ಗಾಂಧಿಯವರು 1921 ರಲ್ಲಿ ಹೂಡಿದ ಅಸಹಕಾರ ಚಳುವಳಿಯಲ್ಲಿ 20 ಸಾವಿರ ಜನ ಮಾತ್ರ ಸೆರೆ ಮನೆಗೆ ಸೇರಿದ್ದರು. 1930 ರಲ್ಲಿ 90 ಸಾವಿರ ಜನ ಸೆರೆಮನೆ ಕಂಡರು. ಲಾಠಿ ಏಟು ತಿಂದವರ ಸಂಖೆ ಅದರ ನಾಲ್ಕರಷ್ಟು ಇದ್ದಿತು. 30ನೇ

ಚಳುವಳಿಯಲ್ಲಿ ಲಾಠಿ ಏಟು ಕೊನೆಕೊನೆಗೆ ಬಂದಿತು. ಆದರೆ 32 ರಲ್ಲಿ ಆ ಮಿತ್ರನು ಪ್ರಾರಂಭದಿಂದಲೇ ಸತ್ಯಾಗ್ರಹಿಗಳನ್ನು ಎದುರುಗೊಂಡನು. ಹೇಳಲಸಾಧ್ಯವಾದ ರೀತಿಯಲ್ಲಿ ಜನಗಳಿಗೆ ಹೇಳಬಾರದ ಹಿಂಸೆಗಳಾದುವು. ಒಂದೇ ಉದಾಹರಣೆ ಸಾಕು. ಹೆಸರು ಹೇಳಲಿಲ್ಲ ಎಂದು ಪೋಲೀಸಿನವರು ಒಬ್ಬ ಹೈಕೋರ್ಟು ನ್ಯಾಯಾಧೀಶರ ತಲೆಯ ಕೂದಲುಗಳನ್ನು ಒಂದೊಂದಾಗಿ ಕಿತ್ತರು.

ಎಲ್ಲಾ ರಾಷ್ಟ್ರೀಯ ಸಂಸ್ಥೆಗಳೂ ಕಾಯಿದೆ ವಿರುದ್ಧವಾದುವು. ಎಲ್ಲಾ ರಾಷ್ಟ್ರ ಸೇವಕರು ಸೆರಮನೆ ಸೇರಿದರು. ಪುಣೆಯ ಯೂರೋಪಿಯನ್ ಸಂಘದ ಸದಸ್ಯರು 1931ನೇ ಅಕ್ಟೋಬರಿನಲ್ಲಿಯೇ, ಕಾಂಗ್ರೆಸ್ಸನ್ನು ಪೂರ್ಣವಾಗಿ ಮಟ್ಟಹಾಕಬೇಕೆಂದು ಬೊಂಬಾಯಿನ ಗೃಹಖಾತೆಗೆ ಬರೆದರು. ಭಾರತದಿಂದ ಜೀವಿಸುವ ಮಹನೀಯರ ಕೃತಜ್ಞತೆ! 1932 ನೆಯ ವರ್ಷದಲ್ಲಿ ಆರ್ಡಿನೆನ್ಸುಗಳು ಬಹಳ ಕ್ರೂರವಾಗಿವೆಯೆಂದೂ, ಭಾರತದಲ್ಲಿ ಸರ್ಕಾರದ ಬುಡ ಅಲ್ಲಾಡುತ್ತಿದೆಯೆಂದು ಸರ್ಕಾರಕ್ಕೆ ಖಂಡಿತವಾಗಿ ತಿಳಿದಿರುವುದರಿಂದ ಭಾರತಕ್ಕೆಲ್ಲಾ ಅನ್ವಯಿಸುವ ಇಂತಹ ಶಾಸನಗಳನ್ನು ಮಾಡಿದೆಯೆಂದೂ ಸರ್ ಸ್ಯಾಮುಯಲ್ ಹೋರರು ಪಾರ್ಲಿಮೆಂಟಿನಲ್ಲಿ ಒಪ್ಪಿಕೊಂಡರು. ಪಂಡಿತ ಮದನಮೋಹನ ಮಾಳವೀಯರು ಭಾರತದಿಂದ ಇಂಗ್ಲೆಂಡಿಗೆ ಕಳುಹಿಸಿದ 1100 ಪದಗಳ ತಂತಿಯನ್ನು ಸರ್ಕಾರ ಪ್ರೆಸ್ ಕಾನೂನಿನ ಆಧಾರದಿಂದ, ಕಳುಹಿಸಲೇ ಇಲ್ಲ. ಒಂದು ಲಕ್ಷಕ್ಕಿಂತ ಹೆಚ್ಚು ಜನರಿಗೆ ಶಿಕ್ಷೆ ವಿಧಿಸಲ್ಪಟ್ಟಿತು. ಸರ್ಕಾರ ರಾಜಕೀಯ ಬಂದಿಗಳನ್ನು ಬೇರೆ ಮಾಡಲಿಲ್ಲ, ವಕೀಲರು, ಸಾಹುಕಾರರು ದೊಡ್ಡ ದೊಡ್ಡ ಜಮೀನುದಾರರು, ಯಾರನ್ನು ಸರ್ಕಾರದವರೇ ಮೇಲು ದರ್ಜೆಯವರೆಂದು ಅವರಿಗೆ ಸಾವಿರ ಎರಡು ಸಾವಿರ ಐದು ಸಾವಿರ ಜುಲ್ಮಾನೆ ವಿಧಿಸಿದರೋ ಅವರನ್ನೆಲ್ಲಾ ಒಂದೇ ತರಗತಿಯಲ್ಲಿ ತುಂಬುತ್ತಿದ್ದರು. ಎ. ಬಿ. ಕ್ಲಾಸು ಎಂಬುದು ಸುಮ್ಮನೆ ಪ್ರಚಾರಮಾಡಲು ಇದ್ದುದೇ ಹೊರತು ಕಾರ್ಯರೂಪಕ್ಕೆ ಬರಲಿಲ್ಲ.

ಜೈಲಿನಲ್ಲಿ ಅವಮಾನಕರವಾದ ಅನೇಕ ನಿಯಮಗಳಿವೆ. ದೇಶದ ಸ್ವಾತಂತ್ರ್ಯ ಸಾಧನೆಗಾಗಿ ಬಂದಿದ್ದ ಸ್ತ್ರೀ ಪುರುಷರು ಅವನ್ನು ಒಪ್ಪುವ ಸಂಭವವಿರಲಿಲ್ಲ. ಅದರಿಂದ ಸೆರೆಮನೆಯ ಅಧಿಕಾರಿಗಳಿಗೂ ಸತ್ಯಾಗ್ರಹಿ

ಗಳಿಗೂ ತಿಕ್ಕಾಟವುಂಟಾಗುತ್ತಿದ್ದಿತು. ಕೆಲವರ ಮೇಲೆ ಜೈಲಿನಲ್ಲಿರು ವಾಗಲೇ ಮತ್ತೆ ಖಟ್ಲೆಗಳಾಗಿ ಶಿಕ್ಷೆಗಳಾದವು. ಜೈಲಿನ ಅಧಿಕಾರಿಗಳಿಗೆ, ಜೈಲಿನೊಳಗೆ ಏನುಮಾಡಿದರೂ ಮಾಫಿ. ಲಾಠಿ ಛಾರ್ಜುಗಳಿಗೆ ಲೆಕ್ಕ ವಿರಲಿಲ್ಲ. ಹೀಗೆ ಖೈದಿಗಳ ಮೇಲೆ ತೀವ್ರವಾಗಿ ಕಾನೂನು ಚಲಾಯಿ ಸಿದುದಕ್ಕಾಗಿ ನಾಸಿಕ್ ಜೈಲರ್ ಮತ್ತು ಅವನ ಕೆಳಗಿನ ನೌಕರರ ಮೇಲೆ ಪ್ರಾಸಿಕ್ಯೂಷನ್ ಸಹ ಆಯಿತು. ಜಿಂಕ್‌ಶೀಟ್‌ಗಳಿಂದ ಅನೇಕ ಹಂಗಾಮಿ ಸೆರೆಮನೆಗಳನ್ನು ಕಟ್ಟಿದ್ದರು. ಅವುಗಳಿಂದಲೂ ಸತ್ಯಾಗ್ರಹಿಗಳ ದೇಹ ಸ್ಥಿತಿ ಛಳಿ ಬಿಸಿಲಿಗೆ ಒಳಗಾಗಿ ಬಹಳ ಕೆಟ್ಟಿತು. ಖಾಯಂ ಜೈಲುಗಳಲ್ಲಿ ಸಹ ಸರಿಯಾದ ವ್ಯವಸ್ಥೆಯಿರಲಿಲ್ಲ. ಆಮಶಂಕೆ ಅತಿಸಾರ ವಿಶಮುಶೀತ ಜ್ವರ ಶ್ವಾಸಕೋಶದ ತೊಂದರೆ ಇವುಗಳಿಂದ ಅನೇಕ ಸತ್ಯಾಗ್ರಹಿಗಳು ಸತ್ತರು. ಎಲ್ಲಾ ವ್ಯವಸ್ಥೆಗಳಲ್ಲಿಯೂ ಇರುವಂತೆ ಅಲ್ಲಿಯೂ ಜೈಲು ಸೂಪರ್ಇಂಟೆಂಡೆಂಟ್ ಮುಂತಾದ ಮೇಲಧಿಕಾರಿಗಳ ಗುಣ ಯೋಗ್ಯತೆ ಪ್ರಾಮಾಣಿಕತೆ ಇವುಗಳಿಗೆ ಅನುಸಾರವಾಗಿ ಸತ್ಯಾಗ್ರಹಿಗಳಿಗೆ ತೋರಿಸು ತ್ತಿದ್ದ ಸೌಕರ್ಯ ಹೆಚ್ಚು ಕಡಿಮೆಯಾಗುತ್ತಿದ್ದಿತು. ಒಟ್ಟಿನಲ್ಲಿ ರಾಜಕೀಯ ಬಂದಿಗಳಿಗೆ ಕೊಟ್ಟ ಸೌಕರ್ಯಗಳು ಸ್ವಲ್ಪವೂ ಸಮರ್ಪಕವಾಗಿರಲಿಲ್ಲ.

ಎಲ್ಲಿ ಸಭೆ ಸೇರಿದರೂ ಪೋಲೀಸಿನವರು ಲಾಠಿಗಳಿಂದ ಬಾರಿಸಿ ಚದುರಿಸುತ್ತಿದ್ದರು. ಅಂತಹ ಸಭೆಗಳಲ್ಲಿ ಬಹಳ ಜನರಿಗೆ ಕ್ರೂರವಾಗಿಯೂ ಅಪಾಯಕರವಾಗಿಯೂ ಏಟುಗಳು ಬೀಳುತ್ತಿದ್ದುವು. ಸತ್ಯಾಗ್ರಹಿಗಳು ಯಾವುದಾದರೂ ಕಾನೂನು ಮುರಿಯುವಾಗ, ನೋಡಲು ನೆರೆದಿದ್ದ ಜನರ ಮೇಲೆಲ್ಲಾ ಲಾಠಿಛಾರ್ಜು ಆಗುತ್ತಿದ್ದಿತು. ಪೋಲೀಸರು ನೋಡು ವುದಕ್ಕೆ ಬಂದವರೆಂದು ವಿಮರ್ಶಿಸುತ್ತಿರಲಿಲ್ಲ. ಅಷ್ಟು ಬುದ್ಧಿ ಇರು ವವರು ಯಾರೂ ಪೋಲೀಸಿಗೆ ಸೇರುವುದೇ ಇಲ್ಲ. ಸ್ತ್ರೀಯರಿಗೂ ಲಾಠಿ ಏಟು ತಪ್ಪಲಿಲ್ಲ. ಪೋಲೀಸ್ ಲಾಕಪ್‌ನಲ್ಲಿ, ಕ್ರೂರ ಕರ್ಮಗಳನ್ನೂ ಹಿಂಸೆಗಳನ್ನೂ ವಿಧಿಸಲು ಆಯಾ ಅಧಿಕಾರಿಗಳಿಗೆ ಇದ್ದ ಬುದ್ಧಿ ಶಕ್ತ್ಯಾನು ಸಾರವಾಗಿ ಸತ್ಯಾಗ್ರಹಿಗಳಿಗೆ ಹೇಳಬಾರದ ಹಿಂಸೆಗಳಾಗುತ್ತಿದ್ದುವು ಹತ್ತು ಸಾವಿರಕ್ಕೆ ಮೇಲ್ಪಟ್ಟ ಜುಲ್ಮಾನೆಗಳು ಬೇಕಾದಷ್ಟು ವಿಧಿಸಲ್ಪ ಟ್ಟವು. ಜುಲ್ಮಾನೆ ಕೊಡದವರ ಬಂಧುಗಳ ಆಸ್ತಿಗಳನ್ನೂ ಸಹ ಜಪ್ತು ಮಾಡಿ ಜುಲ್ಮಾನೆಗೆ ವಹಿಸಿಕೊಳ್ಳುತ್ತಿದ್ದರು. ಆ ಮಾರಾಟದಲ್ಲಿ ಸಾವಿರ

ರುಪಾಯಿನ ಸಾಮಾನು ಹತ್ತು ರುಪಾಯಿಗೆ ಮಾರಾಟವಾಗುತ್ತಿದ್ದಿತು, ಸರ್ಕಾರದ ಉದ್ದೇಶ ಜುಲ್ಮಾನೆ ವಸೂಲ್ಮಾಡುವುದು ಆಗಿರಲಿಲ್ಲ. ಆ ನೆಪದಲ್ಲಿ ಸತ್ಯಾಗ್ರಹಿಗಳಿಗೆ ಆದಷ್ಟು ಹಿಂಸೆ ಕೊಡಬೇಕೆನ್ನುವುದು. ಬೀಹಾರ್‌ನಲ್ಲಿ ಐದು ಜಾಗದಲ್ಲಿ ಹೆಚ್ಚಿಗೆ ಪೋಲೀಸನ್ನು ನಿಯಮಿಸಿದುದಕ್ಕೆ ನಾಲ್ಕು ಲಕ್ಷ ಎಪ್ಪತ್ತು ಸಾವಿರ ಪುಂಡುಗಂದಾಯವನ್ನು ವಸೂಲ್ಮಾಡಿದರು. ಬಂಗಾಳದಲ್ಲಿ ಈ ಪೋಲೀಸು ಬಂದುದನ್ನು ಕಂಡು ಹೆದರಿದ ಜನರು ತಮ್ಮ ತಮ್ಮ ಊರುಗಳನ್ನು ಬಿಟ್ಟು ಎಲ್ಲೆಲ್ಲಿಗೋ ಹೋಗಿಬಿಟ್ಟರು. ಆ ಹೋಗಾಟದಲ್ಲಿ ಅನೇಕ ಸ್ತ್ರೀಯರು ಮರಣಹೊಂದಿದರು. ಸರ್ಕಾರದವರು ಸ್ವಾಧೀನಕ್ಕೆ ತೆಗೆದುಕೊಳ್ಳದಿದ್ದ ಆಶ್ರಮಗಳನ್ನೂ ಕಾಂಗ್ರೆಸ್ ಕಛೇರಿಗಳನ್ನೂ ಸರ್ಕಾರದವರೇ ನಾಶಮಾಡಿದರು; ಸುಟ್ಟರು. ಪತ್ರಿಕೆಗಳಿಂದ ಠೇವಣಾತಿ ಕೇಳುವುದು ಹೆಚ್ಚಾಯಿತು. ಅನೇಕ ಪತ್ರಿಕೆಗಳು ಪ್ರಕಟವಾಗುವುದೇ ನಿಂತಿತು. ಆಗ ಸರ್ಕಾರವನ್ನು ಎದುರಿಸಿದ ಸ್ವಯಂ ಸೇವಕ ಸ್ತ್ರೀ ಪುರುಷರ ಹೆಸರುಗಳನ್ನೂ, ಸ್ಥಳಗಳನ್ನೂ ಹೇಳುತ್ತಾ ಹೋದರೆ ಅದೇ ಒಂದು ದೊಡ್ಡ ಗ್ರಂಥವಾಗುವುದು.

ಈ ಸಂದರ್ಭದಲ್ಲಿ ಒಂದು ಸಂಗತಿಯನ್ನು ಜ್ಞಾಪಕದಲ್ಲಿ ಇಟ್ಟುಕೊಳ್ಳಬೇಕು. ಸರ್ಕಾರದ ಇಷ್ಟು ದಬ್ಬಾಳಿಕೆ ನಡೆಸಿದರೂ ಕಾಂಗ್ರೆಸ್ ಸೇವಕರು ಎಲ್ಲಿಯೂ ಅಹಿಂಸಾ ಮಾರ್ಗವನ್ನು ಬಿಟ್ಟು ನಡೆಯಲಿಲ್ಲ. ಆರ್ಡಿನೆನ್ಸುಗಳು ಇಲ್ಲದೆ ಎಲ್ಲಾ ನಾಗರೀಕವಾದ ರಾಜ್ಯಗಳಲ್ಲಿಯೂ ಆಳುವಂತೆ ಭಾರತದಲ್ಲಿಯೂ ಆಳಿದ್ದರೆ, ಚಳುವಳಿಯನ್ನು ತುಳಿದಂತೆ ಮಾಡುವುದಕ್ಕೂ ಆಗುತ್ತಿರಲಿಲ್ಲ. ಆರ್ಡಿನೆನ್ಸು ರಾಜ್ಯ ಎಲ್ಲಿಯೂ ನಾಗರೀಕ ಸರ್ಕಾರದ ನಾಶದ ಗುರುತು. 1932ನೇ ಇಸವಿಯಲ್ಲಿ ಡೆಲ್ಲಿಯಲ್ಲಿ ಕಾಂಗ್ರೆಸ್ ಮಹಾಸಭೆ ಸರ್ಕಾರದ ಆಜ್ಞೆಗೆ ವಿರುದ್ಧವಾಗಿಯೇ ನಡೆಯಿತು. ಅದಕ್ಕೆ ಅಧ್ಯಕ್ಷರಾಗಿ ಹೋಗುತ್ತಿದ್ದ ಪಂಡಿತ ಮದನಮೋಹನ ಮಾಳವೀಯರನ್ನು ಸರ್ಕಾರ ದಾರಿಯಲ್ಲಿಯೇ ದಸ್ತಗಿರಿಮಾಡಿತು. ಕಲ್ಕತ್ತಾ ಕಾಂಗ್ರೆಸ್‌ಗೆ ಸೇತ್ ರಾಂಚಂದ್‌ದಾಸ್ ಅಮೃತಲಾಲ್ ಅಧ್ಯಕ್ಷರಾದರು. ಆ ಸಂದರ್ಭದಲ್ಲಿಯೂ ಸರ್ಕಾರದವರು ಅಸಂಖ್ಯಾತ ಜನರನ್ನು ದಸ್ತಗಿರಿ ಮಾಡಿದರು.

ಚಳುವಳಿ ಭರದೆಯ ಹಿಂದೆ ಹೋಯಿತು. ಇದರಲ್ಲಿಯೂ ಸತ್ಯಾ

ಗ್ರಹಿಗಳು ಕಡಿಮೆಯಾಗಿರಲಿಲ್ಲ. ಸುದರ್ಶನನೂ ಕರ್ನಾಟಕದಲ್ಲಿ ಹೀಗೆ ಫರದೆ ಹಿಂದೆ ಕೆಲಸಮಾಡಿದನು. ಪೋಲೀಸರಿಗೆ ಯಾರನ್ನೂ ಕಂಡು ಹಿಡಿಯಲು ಸಾಧ್ಯವಾಗಲಿಲ್ಲ. ಸಾಮಾನ್ಯ, ಗುಟ್ಟು, ಸ್ಪೆಷಲ್, ಯಾವ ಪೋಲೀಸರಿಗೂ ಕಂಡುಹಿಡಿಯಲು ಸಾಧ್ಯವಾಗುತ್ತಿರಲಿಲ್ಲ. ಅಂತಹ ಬುದ್ಧಿಯ ಕೆಲಸಗಳನ್ನು ನಮ್ಮ ಪೋಲೀಸರಿಂದ ನಿರೀಕ್ಷಿಸುವುದು ಸಾಧ್ಯ ವಿಲ್ಲ. ಸತ್ಯಾಗ್ರಹಕ್ಕೆ ಹೆಚ್ಚು ಹಣ ಬೇಡವಾದರೂ ಇಂತಹ ಕೆಲಸಗ ಳೆಲ್ಲಾ ಹಣ ಸಹಾಯವಿಲ್ಲದೆ ನಡೆಯುವುದಿಲ್ಲ. ಕಾಂಗ್ರೆಸ್ ಕಛೇರಿಗಳು, ಬುಲೆಟಿನ್‌ಗಳು, ಕಾಂಗ್ರೆಸ್ ಕೆಲಸಗಾರರಿಗೆ ಸೂಚನೆಗಳು, ಸಾರ್ವಜನಿಕ ವಾಗಿ ಅನುಸರಿಸಬೇಕಾದ ಕಾರ್ಯಕ್ರಮಗಳು, ಇವುಗಳ ಹಸ್ತಪ್ರತಿಗಳು ಅನೇಕ ಲಕ್ಷ ಸಂಖ್ಯೆಯಲ್ಲಿ ಹೊರಟು ದೇಶದ ಮೂಲೆ ಮೂಲೆಗಳಲ್ಲಿಯೂ ಪ್ರಚಾರವಾಗುತ್ತಿದ್ದುವು. ಹಣದ ಅಡಚಣೆಯಿಂದ ಯಾವ ಕೆಲಸವೂ ಯಾವಾಗಲೂ ನಿಲ್ಲಲಿಲ್ಲ. ಹಣ ಎಲ್ಲಿಂದ ಬಂತು? ಬಲ್ಲವರು ಯಾರು? ಹೆಸರು ಹೇಳದೆ, ಹೆಸರು ಕೇಳದೆ ಜನ ಹಣ ಕೊಡುತ್ತಿದ್ದರು. ಅಂತಹ ಪರಿಸ್ಥಿತಿಯಲ್ಲಿ ವಸೂಲಾದ ಹಣಗಳನ್ನು ಕೆಲಸಗಾರರು ಬಹಳ ಎಚ್ಚರಿಕೆ ಯಿಂದಲೂ ಪ್ರಾಮಾಣಿಕತೆಯಿಂದಲೂ ಉಪಯೋಗಿಸುತ್ತಿದ್ದರು. ಸರಿ ಯಾದ ಲೆಕ್ಕಗಳನ್ನು ಇಡುತ್ತಿದ್ದರು. ಅನೇಕವೇಳೆ ಆಫೀಸುಗಳನ್ನೇ ಜೇಬುಗಳಲ್ಲಿ ಹೊತ್ತುಕೊಂಡು ಹೋಗುತ್ತಿದ್ದರು. ಪೋಲೀಸಿನವರಿಗೆ ಏನುಮಾಡುವುದಕ್ಕೂ ತೋಚಲಿಲ್ಲ. ಆದರೆ ಗಾಂಧಿಯವರು ಇಂತಹ ರಹಸ್ಯವಾದ ಕೆಲಸಕೂಡದೆಂದೂ ಬಹಿರಂಗವಾಗಿಯೇ ಸರ್ಕಾರದೊಂದಿಗೆ ಹೊಡೆದಾಡಬೇಕೆಂದೂ ಹೇಳಿದುದರಿಂದ ಕೆಲಸಗಾರರು ಅಂತರಂಗವಾದ ಕೆಲಸಗಳನ್ನು ಬಿಟ್ಟರು. ಆ ಸಮಯದಲ್ಲಿ ಸುದರ್ಶನನೂ ಗಾಂಧಿಯವರ ಸೂಚನೆಯಂತೆ ಬಹಿರಂಗವಾಗಿ ಬಂದುದರಿಂದ, ಅವನಿಗೂ ಕರನಿರಾಕರ ಣದ ಚಳುವಳಿಯಲ್ಲಿ ಭಾಗವಹಿಸಿದುದಕ್ಕಾಗಿ ಎರಡು ವರುಷ ಸಜಾ ವಿಧಿಸಿದರು. ಈ ಕಾಲಗಳನ್ನು ಸುದರ್ಶನ ಬಿಜಾಪುರ ನಾಸಿಕ್‌ರೋಡು ಮುಂತಾದ ಸೆರೆಮನೆಗಳಲ್ಲಿ ಕಳೆದನು.

ಸರ್ಕಾರದವರು ಯಾವ ಕಾರಣವೂ ಇಲ್ಲದೆ ಹೇಗೆ ಗಾಂಧಿಯವ ರನ್ನು ಬಂಧಿಸಿದ್ದರೋ ಹಾಗೆಯೇ ಯಾವ ಕಾರಣವೂ ಇಲ್ಲದೆ 1933 ನೇ ಆಗಸ್ಟ 23ನೇ ತಾರೀಖು ಬಿಡುಗಡೆಮಾಡಿದರು. ಅನಂತರ ಜವಹಿರ್

ಲಾಲ್‌ನೆಹ್ರುರವರನ್ನೂ ಬಿಡುಗಡೆಮಾಡಿದರು. ಗಾಂಧಿಯವರು 1934ನೇ ಏಪ್ರೆಲ್ 7ನೇ ತಾರೀಖು ಸತ್ಯಾಗ್ರಹ ಚಳುವಳಿಯನ್ನು ಸದ್ಯಕ್ಕೆ ಹಿಂದಕ್ಕೆ ತೆಗೆದುಕೊಂಡರು.

---

## ೩೬. ಸಂಶಯಾತ್ಮಾ ವಿನಶ್ಯತಿ

---

ಗಾಂಧಿಯವರ ಬಿಡುಗಡೆಯಾದ ನಂತರ ಸುದರ್ಶನನ ಬಿಡುಗಡೆಯೂ ಆಯಿತು. ಸೆರೆಯಿಂದ ಹೊರಬಿದ್ದವನೇ ಸುದರ್ಶನ ನೆಟ್ಟಗೆ ಮಲ್ಲಿಗೆಹಳ್ಳಿಯ ತನ್ನ ಗ್ರಾಮಕ್ಕೆ ಬಂದನು. ಊರೊಳಕ್ಕೆ ಕಾಲಿಟ್ಟ ಕೂಡಲೇ ವಾತಾವರಣ ಸ್ವಲ್ಪ ಬಿರುಸಾಗಿರುವುದು ಸುದರ್ಶನನಿಗೆ ತೋರಿತು. ಸುದರ್ಶನ ಅನಂತುವಿನ ಮನೆಗೆ ಬಂದು ಊಟಮಾಡಿ ಕುಳಿತನು. ಬೆಂಗಳೂರಿನಿಂದ ವೈದೇಹಿಯೂ ಬಂದಿದ್ದಳು. ಸುದರ್ಶನನ ತಂಗಿ ಸೀತೆ 13-14 ವರುಷದ ಹುಡುಗಿ ಅಣ್ಣನ ಎದುರಿಗೆ ಬಂದು ಕುಳಿತಳು. ಒಂದು ಗಳಿಗೆಯ ನಂತರ ಸುದರ್ಶನನ ತಾಯಿ ಸುಭದ್ರೆಯೂ ಬಂದಳು. ಅನಂತುವೂ ಬಂದನು.

ವಿಷಯ ಏನೋ ಗಂಭೀರವಾಗಿದೆ ಎಂಬುದು ಸುದರ್ಶನನಿಗೆ ತಿಳಿಯಿತು. ಅನಂತು, ಸ್ವಲ್ಪವೂ ಹಿಂದು ಮುಂದು ನೋಡದೆ ಒಂದೇ ಏಟಿಗೆ ವಿಷಯ ಪ್ರವೇಶಮಾಡಿದನು. ಅವನು ಮಾತು ಪ್ರಾರಂಭಿಸಿದುದನ್ನು ನೋಡಿದರೆ, "ಸುದರ್ಶನ ಕೈಗೆ ಸಿಕ್ಕದೆ ಇನ್ನೇನು ಓಡಿಬಿಡುತ್ತಾನೆ. ನನಗೆ ಗೊತ್ತು. ಈಗ ಸಿಕ್ಕಿರುವಾಗಲೇ ಹಿಡಿದು ಹಾಕಿಬಿಡಬೇಕು ಎನ್ನುವಷ್ಟು ಆತುರ ಅವನಿಗೆ ಇದ್ದಂತೆ ತೋರುತ್ತಿದ್ದಿತು. ಸುದರ್ಶನನ ವಿಷಯದಲ್ಲಿ ಹಾಗೆ ಹೆದರುವುದು ಸ್ವಾಭಾವಿಕವಾಗಿದ್ದಿತು. ಯಾಕೆಂದರೆ ಸುದರ್ಶನ ಈಗಾಗಲೇ ಮೂರು ನಾಲ್ಕುಸಲ ಇದ್ದಕ್ಕಿದ್ದಂತೆ ಸೆರೆಮನೆ ಹೊಕ್ಕಿದ್ದನು ಅನಂತುವಿನ ದೃಷ್ಟಿಯಲ್ಲಿ ಸುದರ್ಶನ ಬಿ. ಎ. ಮಾಡಿದ ಇತರ ಗ್ರಾಜುಯೇಟುಗಳಂತೆ ಸಂಪಾದನೆಮಾಡುತ್ತಾ ಸಂಸಾರವನ್ನು ನಡೆಸುವವನಾಗಿ ತೋರಲಿಲ್ಲ. ಸುದರ್ಶನನಿಂದ ಮನೆಯವರಿಗೆ ಯಾವ ಸಹಾಯವೂ ಆಗುವಂತೆಯೇ ತೋರಲಿಲ್ಲ. ಸುದರ್ಶನನ ತಾಯಿ ಮುದುಕಿಯಾಗುತ್ತಾ

ಇದ್ದಳು. ತಂಗಿ ಸೀತೆ ಸ್ಕೂಲನ್ನು ಬಿಟ್ಟು ಮನೆಯಲ್ಲಿ ಕುಳಿತಳು. ಅವಳ ಮದುವೆಗೂ ಕಾಲ ಬಂದಿತ್ತು. ಜತೆಗೆ ಸುದರ್ಶನನ ತಂದೆ ಡಾಕ್ಟರು ಮಾಡಿದ್ದ ಹತ್ತು ಸಾವಿರ ರುಪಾಯಿ ಸಾಲ ಬೇರೆ ತಲೆಯ ಮೇಲೆ ಹೇರಿಕೊಂಡಿತ್ತು. ಸಾಲ ಕೊಟ್ಟವರು ಸುದರ್ಶನ ಬಿ. ಎ. ಮಾಡಿದ್ದಾನೆ ಯಾವುದಾದರೂ ಕೆಲಸಮಾಡಿ ಸಂಪಾದಿಸುವುದಂತೂ ಖಂಡಿತ. ಅಲ್ಲಿಯವರೆಗೆ ಸುಮ್ಮನಿರೋಣ ಎಂದು ತಡೆದಿದ್ದರು. ಅನಂತುವೂ ಅವರಿಗೆ ಹಾಗೆಯೇ ಧೈರ್ಯ ಹೇಳುತ್ತಿದ್ದನು.

ಸೆರೆಯಿಂದ ಹೊರಕ್ಕೆ ಬಂದ ಕೂಡಲೇ ಹೀಗೆ ಎಲ್ಲಾ ವಿಷಯಗಳೂ ಸುದರ್ಶನನ ನಿರುತ್ಸಾಹಕ್ಕೇ ಕಾರಣವಾಗಿದ್ದುವು. ತಾಯಿ ಸುಭದ್ರೆಗೆ ಅನಂತುವಿನ ಮನೆಯ ಜೀವನ ಬೇಸರಿಕೆಯಾಗಿದ್ದಿತು. ಆಕೆ ಆಗಲೇ ನಿರಾಶಳಾಗುತ್ತ ಬಂದಿದ್ದಳು. ನನ್ನ ಜೀವಮಾನವನ್ನೆಲ್ಲಾ ಮಕ್ಕಳೊಂದಿಗೆ ಅಣ್ಣನ ಮನೆಯಲ್ಲಿಯೇ ಕಳೆಯಬೇಕಾಗುವುದೋ ಏನೋ ಎಂದು ಆಕೆ ಕೊರಗತೊಡಗಿದ್ದಳು. ಅನಂತು ಸುದರ್ಶನನಿಗೆ "ಇನ್ನು ನೀನು ಸಂಪಾದಿಸಬೇಕು. ಹೀಗೆ ಇದ್ದರೆ ಆಗುವುದಿಲ್ಲ. ಯಾವುದಾದರೂ ಕೆಲಸಕ್ಕೆ ಸೇರಬೇಕು" ಎಂದನು. ತನ್ನ ವಾದದ ಸಮರ್ಥನೆಗಾಗಿ ಹೇಳಬೇಕಾದ ಮಾತುಗಳನ್ನೆಲ್ಲಾ ಹೇಳಿದನು. ಸುಭದ್ರೆಯೂ ಸೀತೆಯೂ ವೈದೇಹಿಯೂ 'ಮತ್ತೆ ಹೋಗುವುದಿಲ್ಲತಾನೆ' ಎಂದು ಆಸೆಯಿಂದ ಸುದರ್ಶನನನ್ನು ಕೇಳಿದರು. ಸುದರ್ಶನ ಯಾವ ಪ್ರತ್ಯುತ್ತರವನ್ನೂ ಕೊಡಲಿಲ್ಲ. ಸುಭದ್ರೆಯೂ ಆಸೆಯಿಂದ ಅವನ ಮುಖವನ್ನೇ ನೋಡುತ್ತಿದ್ದಳು. ಸುದರ್ಶನ ನೀರವವಾಗಿ ಗೋಡೆಗಳ ಕಡೆಯೇ ನೋಡುತ್ತಿದ್ದ. ಅವನ ಬಾಯಿಂದ ಯಾವ ಮಾತೂ ಹೊರಡಲಿಲ್ಲ. ಇಲ್ಲ ಎಂಬ ಆಶ್ವಾಸನವೂ ಬರಲಿಲ್ಲ. ಅವನು ಸೀತೆಯ ಬೆನ್ನಿನ ಮೇಲೆ ಮೆತ್ತಗೆ ಒಂದು ಸಲ ಕೈ ಅಲ್ಲಾಡಿಸಿದ. ಆತನ ತಾಯಿ ದುಃಖದ ನಿಟ್ಟುಸಿರನ್ನು ಬಿಟ್ಟಳು. ಅನಂತು ಕೋಪದ ಹಾವಿನಂತೆ ಮೊರೆಯುತ್ತಾ ಆಚೆಗೆ ಹೋದ.

ಸುದರ್ಶನ ಮೊದಲಿನಂತೆ ಮತ್ತೆ ಗ್ರಾಮೋದ್ಧಾರ ಗ್ರಾಮಪುನರುಜ್ಜೀವನ ಎಂದು ಪ್ರಾರಂಭಿಸಿದ. "ಈ ಕೆಲಸವನ್ನು ಈಗಾಗಲೇ ಹತ್ತು ವರುಷ ಮಾಡಿಯಾಯಿತಲ್ಲ. ಇದರಿಂದ ಏನು ಫಲವಾಗಿದೆ" ಎಂದು ಯೋಚಿಸಿದ. ಉಪ್ಪಿನ ಸತ್ಯಾಗ್ರಹದಲ್ಲಿ ಜನರಿಗಿದ್ದ ಉತ್ಸಾಹ ಈಗ ಏನಾ

ಯಿತು. ಹಾಗಾದರೆ ಈಗ ಹೋರಾಟ ಮುಗಿಯಿತೆ? ಹೋರಾಟ ಮುಗಿಯುತ್ತೇನೋ ಎಂಬಂತೆ ಜನ ಹಗುರವಾಗಿದ್ದಾರೆಲ್ಲ. ಸ್ವಾತಂತ್ರ ಬರುವ ವರೆಗೆ ಹೋರಾಟ ಎಲ್ಲಿ ಮುಗಿದಂತೆ ಆಯಿತು. ಸ್ವಾತಂತ್ರ್ಯ ಬರುವ ವರೆಗೆ ಈ ದೇಶದಲ್ಲಿ, ಸ್ವಾಭಾವಿಕವಾಗಿರುವುದು ಹೇಗೆತಾನೆ ಸಾಧ್ಯ'' ಎಂಬುದು ಅವನಿಗೆ ಹೊಳೆಯಲಿಲ್ಲ.

ಒಂದು ದೃಷ್ಟಿಯಿಂದ ನೋಡಿದರೆ ಯಾವ ತ್ಯಾಗದಿಂದಲೂ ಏನೂ ಫಲವಾದಂತೆ ತೋರಲಿಲ್ಲ. ಹಾಗಾದರೆ ಈ ತ್ಯಾಗ ಇನ್ನೂ ಸಾಲದೆ? ಸ್ವಾತಂತ್ರ್ಯ ದೇವತೆಗೆ ನಮ್ಮ ಎದೆಯ ರಕ್ತದ ಕಾಲುವೆಯನ್ನೇ ಹರಿಸಬೇಕೇನೊ? ಸುದರ್ಶನ ಅಷ್ಟೊಂದು ತ್ಯಾಗ ಮಾಡಿದ್ದರೂ ಹಳ್ಳಿಯ ಜನ ಇದ್ದಂತೆ ಇದ್ದರು. ಅವರು ಏನೂ ತಿಳಿಯದವರಂತೆ, ಭಾರತ ದೇಶದಲ್ಲಿ ಹೋರಾಟವೇ ನಡೆಯಲಿಲ್ಲವೋ ಎಂಬಂತೆ ತಮ್ಮ ಪಾಡಿಗೆ ತಾವು ಇದ್ದರು. ಒಂದು ದೃಷ್ಟಿಯಿಂದ ಸುದರ್ಶನನಿಗೆ ಅವರ ಈ ಶಾಂತಿ, ಅನಾಸಕ್ತಿಯನ್ನು ನೋಡಿ ಸಂತೋಷವಾಯಿತು. ಮತ್ತೊಂದು ದೃಷ್ಟಿಯಿಂದ '' ಈ ಹೇಡಿಗಳು ಏನು ಮಾಡಿದರೂ ದಂಗೆ ಏಳುವುದಿಲ್ಲ '' ಎಂದು ಕೋಪವುಂಟಾಯಿತು.

ಈ ಕಡೆ ಸುದರ್ಶನ ತನ್ನ ಸಂಸಾರದ ಕಡೆ ನೋಡಿದ. ಅಲ್ಲಿ ಎಲ್ಲಾ ಹಾಳು. ಅವನ ಜತೆಯಲ್ಲಿ ಓದಿ ಬಿ. ಎ. ಪ್ಯಾಸುಮಾಡಿದ್ದ ರಂಗಪ್ಪ ಸುಬ್ಬು ಅಜೀಜ್‌ಸಾಬ್ ಎಲ್ಲರನ್ನೂ ನೋಡಿದ. ಒಬ್ಬರಿಗಿಂತ ಒಬ್ಬರು ಪ್ರಬಲರಾಗಿದ್ದರು; ಪ್ರತಿಷ್ಠಿತರಾಗಿದ್ದರು; ಸಮಾಜದಲ್ಲಿ ಗೌರವವುಳ್ಳವರಾಗಿದ್ದರು. ರಂಗಪ್ಪ ಪೋಲೀಸ್ ಸಬ್ ಇನಿಸ್ಪೆಕ್ಟರ್ ಆಗಿದ್ದ. ಮದುವೆ ಮಾಡಿಕೊಂಡು ಸುಖವಾಗಿದ್ದ. ಆದರೆ ಅವನ ಹುದ್ದೆಯನ್ನು ಅವನ ಹೆಂಡತಿಯೇ ಒಪ್ಪಿರಲಿಲ್ಲವೆಂಬುದೂ, ಆ ಹುದ್ದೆಯನ್ನು ಅವಳು ತಿರಸ್ಕರಿಸುತ್ತಿದ್ದಳೆಂಬುದೂ ಬೇರೆ ವಿಚಾರ. ಆಕೆಯ ಅಣ್ಣನೇ ತನಗೆ ದೊರೆತಿದ್ದ ಪೋಲೀಸ್ ಸಬ್ ಇನಿಸ್ಪೆಕ್ಟರ ಹುದ್ದೆಗೆ ರಾಜೀನಾಮೆ ಇತ್ತಿದ್ದನು. '' ಯಾಕೆ ಸಿಕ್ಕಿದ ಕೆಲಸಕ್ಕೆ ರಾಜೀನಾಮೆ ಕೊಟ್ಟೆ '' ಎಂದು ರಂಗಪ್ಪ ಕೇಳಿದಾಗ ಅವನ ಹೆಂಡತಿಯ ಅಣ್ಣ '' ಈ ಕೆಲಸ ನನ್ನಿಂದ ಸಾಧ್ಯವಿಲ್ಲ. ಬಹಳ ಸುಳ್ಳು ಹೇಳಬೇಕು. ಇಷ್ಟೊಂದು ಸುಳ್ಳು ಹೇಳುವುದೂ ನನ್ನಿಂದ ಸಾಧ್ಯವಿಲ್ಲ. ಪೋಲೀಸರ ಪರವಾದ ಸಾಕ್ಷಿಗಳನ್ನೆಲ್ಲಾ ನನ್ನ ಮನೆಗೆ

ಪೋಲೀಸಿನವರು ಕರೆದುಕೊಂಡು ಬಂದು ನಾನು ಸುಳ್ಳು ಸಾಕ್ಷಿಗಳ ನ್ನೆಲ್ಲಾ ತಯಾರುಮಾಡುತ್ತಿರುವಾಗ ನನ್ನ ಹೆಂಡತಿ ಮಕ್ಕಳೆಲ್ಲಾ ನಗುತ್ತಿ ದ್ದರು. ಒರಬರುತ್ತಾ ನನ್ನ ಹೆಂಡತಿಗೆ ಸಹ ತಿರಸ್ಕಾರವುಂಟಾಯಿತು. ಆದುದರಿಂದ ಬಿಟ್ಟೆ'' ಎಂದ.! ಹಿರಿಯರಲ್ಲಿ ಅನೇಕರು ಅವನು ಮುಟ್ಠಾಳ ಎಂದರು.

ಇನ್ನು ಎರಡು ವರುಷಗಳು ಕಳೆದುಹೋದುವು. ಸುದರ್ಶನನು ಮಲ್ಲಿಗೆಹಳ್ಳಿಯಲ್ಲಿ ತನ್ನ ಪ್ರಯೋಗಗಳನ್ನು ನಡೆಸುತ್ತಲೇ ಇದ್ದನು. ಗಾಳಿ ನೀರು ಬೆಳಕುಗಳನ್ನು ಸಹಜವಾಗಿ ತಮ್ಮದೆಂದುಕೊಳ್ಳುವಂತೆ, ಜನ ಸುದರ್ಶನನನ್ನೂ ಹಳ್ಳಿಯ ಒಂದು ಪ್ರಕೃತಿಯ ಅಂಗವಾಗಿಯೇ ಅರಿತು ಕೊಂಡರು. ಹೇಮಾವತೀ ನದಿ ಹೇಗೆ ಊರಿನ ಭಾಗವಾಯಿತೋ ಹಾಗೆಯೇ ಸುದರ್ಶನನೂ ಊರಿನ ಭಾಗವೇ ಆದನು.

ಹೀಗೆ ಎರಡು ವರುಷಕಾಲ ಮತ್ತೆ ಹಳ್ಳಿಗಾಗಿ ದುಡಿದ ಮೇಲೆ ಸುದರ್ಶನನಿಗೆ ಇದ್ದಕ್ಕಿದ್ದಂತೆ ನಾನು ಬಿಸಿಲು ಕುದುರೆಯನ್ನು ಅಟ್ಟಿಸಿ ಕೊಂಡು ಹೋಗುತ್ತಿಲ್ಲವೆ? ಈ ಹಳ್ಳಿಯಲ್ಲಿ ಹೀಗೆ ಸಾಯುತ್ತಿರುವುದ ರಿಂದಲೇ ನಾನು ಮಾಡಬೇಕಾದ ಕೆಲಸವನ್ನು ಮಾಡಿಯಾಯಿತೆ? ಹೀಗೆ ಈ ಕಲ್ಲಿಗೆ ತಲೆ ಚಚ್ಚಿಕೊಳ್ಳುತ್ತಿರುವುದರಿಂದ ನನ್ನ ಶಕ್ತಿಯ ಅಪವ್ಯಯ ವಾಗುತ್ತಿಲ್ಲವೆ? ಸಂಸಾರ ಮನೆ ಸುಖ ಇವುಗಳಿಗೆ ನನಗೂ ಅರ್ಹತೆ ಇಲ್ಲವೇ ಎಂಬ ಯೋಚನೆ ಬಂದಿತು. ಭಾರತ ದೇಶ ಹೋರಾಟ ನಿಂತಂತೆ ಶಾಂತವಾಗಿದೆಯಲ್ಲ? ಹಾಗಾದರೆ ಹೋರಾಟ ನಿಂತಿತೆ? ಆದರೆ ಸ್ವರಾಜ್ಯ ವೆಲ್ಲಿ?

ಸುದರ್ಶನನಿಗೆ ಉಪ್ಪಿನ ಸತ್ಯಾಗ್ರಹದ ಕಾಲದ ಮಿತ್ರರು ಏನು ಮಾಡುತ್ತಿರಬಹುದು. ಅವರೂ ನನ್ನಂತೆಯೇ ಅತೃಪ್ತರಾಗಿದ್ದಾರೆಯೆ? ಅವರ ಸಂಸಾರಗಳು ಹೇಗಿರಬಹುದು? ಅವರ ಮಟ್ಟಿಗೆ ಹೋರಾಟ ಮುಗಿದಿದೆಯೆ? ಸ್ವರಾಜ್ಯ ಬಂದ ಹೊರತು ಹೋರಾಟ ಮುಗಿದಿದೆ ಯೆಂದು ಹೇಳಲು ಈ ದೇಶದಲ್ಲಿ ಹೇಗೆ ತಾನೆ ಸಾಧ್ಯ. ಶ್ರೀಕಂಠ, ಶ್ರೀಧರ, ತಿಮ್ಮಪ್ಪ, ಶಂಕರ ಇವರೆಲ್ಲಾ ಈಗ ಏನು ಮಾಡುತ್ತಿರಬಹುದು? ಎಲ್ಲರಿಗಿಂತ ಹೆಚ್ಚಾಗಿ ಸರಸ್ವತಿ? ಸರಸ್ವತಿಯ ಹೆಸರನ್ನು ಜ್ಞಾಪಿಸಿಕೊಂಡ ಕೂಡಲೇ ಸುದರ್ಶನನಿಗೆ ಒಂದು ಬಗೆಯ ಹೊಸ ಚೈತನ್ಯವುಂಟಾಯಿತು.

ಆ ಬೇಸರಿಕೆಯಲ್ಲಿಯೂ ಅಮೃತಪಾನವನ್ನು ಮಾಡಿದ ಉತ್ಸಾಹವುಂಟಾಯಿತು. ಅದಕ್ಕೆ ಕಾರಣ ಸರಸ್ವತಿಯನ್ನು ಯಾವಾಗಲಾದರೂ ಸುದರ್ಶನ, ಗಂಡು ಹೆಣ್ಣನ್ನು ಪ್ರೀತಿಸುವ ಕಾಮದೃಷ್ಟಿಯಿಂದ ಪ್ರೀತಿಸಿದ್ದನೆಂಬುದಲ್ಲ. ಅಂತಹ ಕಾಮ ಪ್ರೇಮದಿಂದ ಸುದರ್ಶನ ಅತೀತನಾಗಿದ್ದನು. ಅವನು ಯಾವ ಸ್ತ್ರೀಯನ್ನೂ ಹೆಂಡತಿಯನ್ನಾಗಿ ಮಾಡಿಕೊಳ್ಳುವ ಗುರಿಯಿಂದ ನೋಡುತ್ತಲೇ ಇರಲಿಲ್ಲ. ಹೆಂಡತಿಯಿರುವವನು ದೇಶ ಸೇವೆ ಮಾಡಲು ಸಾಧ್ಯವಿಲ್ಲ ಎಂಬ ಕಾರಣದಿಂದಲ್ಲ. ಆದರೆ ಸುದರ್ಶನನಿಗೇನೋ ದೇಶಕ್ಕಾಗಿ ದುಡಿಯುವವನಿಗೆ ಯಾವ ಬಂಧನವೂ ಇಲ್ಲದಿರುವುದು ಒಳ್ಳೆಯದೆಂಬ ಭಾವ ಬಂದಿತ್ತು. ಆದುದರಿಂದ ಅವನು ಯಾವ ಸ್ತ್ರೀಯನ್ನು ನೋಡಿದರೂ "ಇದು ಎಂತಹ ಶಕ್ತಿಯ ದೇವತೆ! ಮನುಷ್ಯ ಪ್ರಾಣಿಗೆ ಒಳ್ಳೆಯದನ್ನು ಮಾಡಲು ಇದರ ಕೈಯಲ್ಲಿ ಎಷ್ಟು ಶಕ್ತಿ ಇದೆ. ಸ್ತ್ರೀಯರು ಮಾತ್ರ ಮನಸ್ಸು ಮಾಡಿದರೆ ಭಾರತದ ಮುಕ್ತಿ ಎಷ್ಟು ಸುಲಭ" ಎಂದು ಭಾವಿಸುತ್ತಿದ್ದನು. ಅವನು ಸರಸ್ವತಿಯನ್ನು ನೋಡುತ್ತಿದ್ದುದೂ ಇದೇ ಭಾವನೆಯಿಂದ.

ಸುದರ್ಶನ ಸರಸ್ವತಿಯನ್ನು ಜ್ಞಾಪಿಸಿಕೊಂಡನು. ಉದ್ದವಾದ ಶಕ್ತವಾದ ದೇಹ. ಒಳ್ಳೆಯ ಸೌಂದರ್ಯ. ಸರಸ್ವತಿ 19-20 ವಯಸ್ಸಿನ ಹುಡುಗಿ. ಕಾಲೇಜಿನಲ್ಲಿ ಮೊದಲನೆಯ ಬಿ.ಎ. ತರಗತಿಯಲ್ಲಿ ಓದುತ್ತಿದ್ದವಳು ಉಪ್ಪಿನ ಸತ್ಯಾಗ್ರಹದ ಕಾಲದಲ್ಲಿ ಕಾಲೇಜನ್ನು ಬಿಟ್ಟಳು. ಅಬ್ಬ! ಅವಳ ಧ್ವನಿ ಎಷ್ಟು ಮಧುರವಾಗಿದ್ದರೂ, ಸ್ಪಷ್ಟವಾಗಿ ಪರಾಕ್ರಮದ ಧ್ವನಿಯೇ ಆಗಿದ್ದಿತು. ಹೇಗೆ ಕಾಲೇಜು ವಿದ್ಯಾರ್ಥಿಗಳೆಲ್ಲಾ ಸರಸ್ವತಿಯ ಹಿಂದೆ ಸಾವಿರದ ಸಂಖ್ಯೆಯಲ್ಲಿ ಹೊರಟುಬಿಡುತ್ತಿದ್ದರು! ಜನರಲ್ಲಿ ಉತ್ಸಾಹವನ್ನು ಹುಟ್ಟಿಸುವುದರಲ್ಲಿ-ಸರಸ್ವತಿ ನಿಜವಾಗಿಯೂ ಚಾಮುಂಡಿ ಶಕ್ತಿಯ ಪ್ರತ್ಯವತಾರವಾಗಿದ್ದಳು. ಅವಳ ನೇತೃತ್ವದಲ್ಲಿ ಯಾವ ತ್ಯಾಗಕ್ಕೂ, ಯಾವ ಅಹಿಂಸೆಯ ಅಗ್ನಿಕುಂಡದಲ್ಲಿ ಹಾರುವುದಕ್ಕೂ ಯುವಕರು ಸಿದ್ಧರಾಗಿದ್ದರು.

ಸುದರ್ಶನ ಈಗ ಸರಸ್ವತಿ ಏನಾಗಿರಬಹುದೆಂದು ಯೋಚಿಸಿದನು. ಬಹುಶಃ ಮದುವೆಯಾಗಿ ಈಗ ಅವಳಿಗೆ ಒಂದು ಮೊಗುವಿದ್ದರೂ ಇರಬಹುದೆಂದುಕೊಂಡನು. ಸರಸ್ವತಿಯ ತಂದೆ ಭಾರಿ ಜಮೀನ್‌ದಾರ. ರಾಯ

ಬಹದ್ದೂರ. ಸಾಲದುದಕ್ಕೆ ಸರಸ್ವತಿ ಒಬ್ಬಳೇ ಮಗಳು. ರಾಯುಬಹದ್ದೂರ ನಿಗೆ ಗಂಡು ಹೆಣ್ಣು ಎಲ್ಲಾ ಅವಳೇ. ರಾಯಬಹದ್ದೂರರ ಹೆಂಡತಿ, ಸರಸ್ವತಿಯ ತಾಯಿ, ಸರಸ್ವತಿಯನ್ನು ಎರಡು ವರುಷಗಳ ಮೊಗುವಾಗಿರು ವಾಗಲೇ ಬಿಟ್ಟು ಸ್ವರ್ಗಸ್ಥಳಾದಳು. ರಾಯಬಹದ್ದೂರನಿಗೆ ಆಗ 45 ವಯ ಸ್ಸಾಗಿದ್ದರೂ, ಅವನ ಐಶ್ವರ್ಯಕ್ಕಾಗಿ ಬೇರೆ ಹೆಣ್ಣು ಕೊಡುವವರು ಸಿದ್ಧ ರಾಗಿದ್ದರು. ಆದರೆ ರಾಯಬಹದ್ದೂರನಿಗೆ ಆ ಎರಡು ವರುಷದ ಮಗು ಸರಸ್ವತಿಯಲ್ಲಿಯೇ ಅತಿ ಪ್ರೇಮವಿದ್ದುದರಿಂದ ಆತ ಎರಡನೆಯ ಮದುವೆ ಯನ್ನು ಮಾಡಿಕೊಳ್ಳದೆ ಸರಸ್ವತಿ ದಿನ ದಿನವೂ ಬೆಳೆಯುತ್ತಿರುವುದನ್ನು ನೋಡುವುದರಲ್ಲಿಯೇ ಆನಂದಗೊಂಡಿದ್ದನು. ರಾಯಬಹದ್ದೂರನಿಗೆ ಅಪಾರವಾದ ಆಸ್ತಿ ಇದ್ದಿತು. ಅದಕ್ಕೆಲ್ಲಾ ಸರಸ್ವತಿಯೇ ಒಡತಿಯಾಗು ವವಳಾಗಿದ್ದಳು. ಸರಸ್ವತಿಯನ್ನು ಪೂರ್ಣ ವಿದ್ಯಾವಂತಳನ್ನಾಗಿ ಮಾಡಿ ಆಕೆಯ ಮದುವೆ ಮಾಡಿ ಅವಳು ಸುಖವಾಗಿ ತನ್ನ ಕಣ್ಣೆದುರಿಗೆ ಗಂಡ ನೊಂದಿಗೆ ಸಂಸಾರ ಮಾಡಿಕ್ಕೊಂಡಿರುವ ದಿನವನ್ನೇ ರಾಯಬಹದ್ದೂರನು ನಿರೀಕ್ಷಿಸಿಕೊಂಡಿದ್ದನು. ರಾಯುಬಹದ್ದೂರನ ವಾಸ ಧಾರವಾಡದಲ್ಲಿ. ಸರಸ್ವತಿಯನ್ನು ಮದುವೆಯಾಗಲು ಕಾತುರರಾಗಿದ್ದ ಯುವಕರ ಸಂಖ್ಯೆ ಕಡಿಮೆಯಾಗಿರಲಿಲ್ಲ. ಯುವಕರು "ಸರಸ್ವತಿಯಂತಹ ಹೆಣ್ಣು ಹಿಂದೆ ಹುಟ್ಟಲಿಲ್ಲ; ಮುಂದೆ ಹುಟ್ಟುವುದಿಲ್ಲ" ಎಂದರು. ಈಕೆಯನ್ನು ಮದುವೆ ಯಾಗುವವನು ಯಾವ ಅದೃಷ್ಟಶಾಲಿಯೋ ಎಂದು ಯುವಕರು ಯೋಚಿ ಸುತ್ತಿರುವಾಗ, ಅಂತರಿಕ್ಷದಿಂದ ಸಿಡಿಮದ್ದು ಕೆಳಗೆ ಬಿದ್ದು ಸಿಡಿದಂತೆ ಉಪ್ಪಿನ ಸತ್ಯಾಗ್ರಹ ಬಂದು ಸರಸ್ವತಿ ಒಂದು ವರುಷ ಸೆರೆಯಾಳಾದಳು. ರಾಯಬಹದ್ದೂರನು ಏನೂ ಅರಿಯದ ಹುಚ್ಚನಂತಾದನು.

ಮೊದಲು ಸರಸ್ವತಿಯ ತಂದೆ ರಾಯಬಹದ್ದೂರನಿಗೆ ದಿಕ್ಕೇ ತೋರ ಲಿಲ್ಲ. ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿದ ಸ್ತ್ರೀಯರ ಸಂಖ್ಯೆ ಕಡಿಮೆ ಇರಲಿಲ್ಲವಾದರೂ ಇದರ ಏಟು ತನ್ನ ಮನೆಯಲ್ಲಿಯೇ ಇಷ್ಟು ಬೇಗ ತನ್ನನ್ನು ಇಷ್ಟು ಹತ್ತಿರದಲ್ಲಿ ಮುಟ್ಟಿಸಬಹುದೆಂದು ಆತ ಭಾವಿಸಿರಲಿಲ್ಲ. ಮೊದಲನೆಯ ಗಾಬರಿ ಕಳೆದ ಮೇಲೆ ರಾಯಬಹದ್ದೂರನು ಸೆರೆಮನೆಗೆ ಹೋಗಿ, ಸರಸ್ವತಿಯನ್ನು ಎ ತರಗತಿಯ ಖೈದಿಯಾಗಿ ಮಾಡಿಸುತ್ತೇಂದು ಮಗಳಿಗೆ ಹೇಳಿದನು; ಊಟ ತಿಂಡಿಗಳ ವಿಷಯದಲ್ಲಿ ನಿನಗೆ ಹೆಚ್ಚು ಸುಖ

ವಾಗುವಂತೆ ಮಾಡುತ್ತೇನೆ ಎಂದನು. ಸರಸ್ವತಿ ಯಾವುದನ್ನೂ ಒಪ್ಪ ಲಿಲ್ಲ. ನಾನು ಧನಿಕನಾದ ರಾಯಬಹದ್ದೂರನ ಮಗಳೆಂಬುದನ್ನು ಮರೆತು ಬಿಡಿ. ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿರುವ ಸಾವಿರಾರು ಬಡ ಮಹಿ ಳೆಯರಂತೆ ನಾನೂ ಒಬ್ಬಳು. ನನಗೆ ಯಾವ ಹೆಚ್ಚು ರಿಯಾಯ್ತಿಯೂ ಬೇಡ. ಹೆಚ್ಚು ಸುಖವೂ ಬೇಡ. ನಾನೂ ಎಲ್ಲರಂತೆ ಸೆರೆಮನೆಯ ಎಲ್ಲಾ ಕಷ್ಟಗಳನ್ನೂ ಅನುಭವಿಸುತ್ತೇನೆ. ಗಂಡಸರಿಗೆ ಇರುವ ಶಕ್ತಿ ಏನು? ಹೆಂಗ ಸರಿಗೆ ಇಲ್ಲದುದೇನು ಎಂದುಬಿಟ್ಟಳು. ಸರಸ್ವತಿ ಕೋಮಲವಾಗಿದ್ದಷ್ಟೂ ತನ್ನ ವಿಷಯದಲ್ಲಿ ಕಠಿಣಳಾಗಿಯೇ ಇರುತ್ತಿದ್ದಳು. ಸೆರೆಮನೆಯ ಅವಳ ಸಹಬಂದಿಗಳು ಅವಳಿಗೆ ಹೆಚ್ಚು ಸೌಕರ್ಯವನ್ನು ಒದಗಿಸಲು ಮಾಡಿದ ಯಾವ ಪ್ರಯತ್ನವನ್ನೂ ಆಕೆ ಒಪ್ಪಲಿಲ್ಲ.

ಸುದರ್ಶನ ಇವರನ್ನೆಲ್ಲಾ ಕುರಿತು ಯೋಚಿಸಿದನು. ಶ್ರೀಕಂಠ, ಶ್ರೀ ಧರ, ಶಂಕರ, ತಿಮ್ಮಪ್ಪ, ಸರಸ್ವತಿ! ಮಲ್ಲಿಗೆಹಳ್ಳಿಯ ಹೇಮಾವತೀ ತೀರದ ಮರಳಿನ ಮೇಲೆ, ಸ್ಥಳದ ಕೆಲಸಗಾರರೊಂದಿಗೆ ಮಾತನಾಡುತ್ತಾ ಕುಳಿತಿ ರುವಾಗ ಸುದರ್ಶನನಿಗೆ ಇದ್ದಕ್ಕಿದ್ದಂತೆ "ಇಲ್ಲಿ ಈಗ ಹೋರಾಟ ಮುಗಿದಂತೆ ತೋರುತ್ತಿದೆಯಲ್ಲ. ಹೇಗಾದರೂ ಆಗಲಿ ಒಂದು ಸಲ ಹೋಗಿ ಹಳೆಯ ಸ್ನೇಹಿತರೆಲ್ಲಾ ಏನು ಮಾಡುತ್ತಿದ್ದಾರೆಂದು ನೋಡಿಕೊಂಡು ಬರೋಣ" ಎಂದು ತೋರಿತು ಮುಖ್ಯವಾಗಿ ಸುದರ್ಶನನಿಗೆ ಇದ್ದಕ್ಕಿದ್ದಂತೆ ಏನೋ ಒಂದು ಬಗೆಯ ಅತೃಪ್ತಿಯುಂಟಾಯಿತು. ಅನೇಕ ಎಡರುಗಳ ನಡುವೆ ಗ್ರಾಮದಲ್ಲಿ ಕುಳಿತು ಕೆಲಸಮಾಡುವವನಿಗೆ ಅತೃಪ್ತಿ ಒಳ್ಳೆಯದಲ್ಲ.

ಸುದರ್ಶನ ಹೀಗೆ ಮತ್ತೆ ಹೊರಡುವ ತೀರ್ಮಾನವನ್ನು ಹೇಳಿದ ಕೂಡಲೇ ತಾಯಿ ಸುಭದ್ರೆಯೂ ತಂಗಿ ಸೀತೆಯೂ ಬಹಳ ಹೆದರಿದರು. ಇವನು ಇನ್ನು ಹಿಂದಿರುಗುತ್ತಾನೆಯೋ ಅಥವ ಹಾಗೆಯೇ ಮತ್ತೆ ಜೈಲಿಗೆ ಹೋಗುತ್ತಾನೆಯೋ ಎಂದು ಅವರು ಯೋಚಿಸತೊಡಗಿದರು. ಅನಂತುವು ಹಾಗಾದರೆ ನೀನು ನಿಮ್ಮ ತಾಯಿಯನ್ನಿಟ್ಟುಕೊಂಡು ಸಂಸಾರ ಮಾಡು ವವನಾಗಿ ಕಾಣಲಿಲ್ಲ. ನಿನ್ನ ತಂಗಿಗೆ ನೀನು ವಿದ್ಯೆ ಕಲಿಸುವುದೂ ಮದುವೆ ಮಾಡುವುದೂ ಬರಿಯ ಸ್ವಪ್ನ. ಸಾಲಗಾರರ ಸಾಲ ಹಾಗೆಯೇ ಉಳಿ ಯಿತು; ಹೇಗಾದರೂ ಆಗಲಿ. ಇನ್ನು ನಿನ್ನ ತಾಯಿಯನ್ನೂ ತಂಗಿಯನ್ನೂ ನನ್ನ ಮನೆಯಲ್ಲಿಟ್ಟುಕೊಂಡು ಸಾಕುವುದು ನನ್ನಿಂದ ಸಾಧ್ಯವಿಲ್ಲ ಎಂದು

ಆರ್ಭಟಿಸಿದನು. ಸುದರ್ಶನನಿಗೆ ಆ ಯಾವ ವಿಚಾರಗಳೂ ತಿಳಿಯದೇ ಇರಲಿಲ್ಲ. ಆ ಕೊರಗು ಒಂದು ಗಳಿಗೆಯೂ ಅವನ ಮನಸ್ಸನ್ನು ಬಿಟ್ಟು ಇರಲಿಲ್ಲ. ಅವನು "ಮಾವ ಒಂದು ತಿಂಗಳು ತಡೆದುಕೊಳ್ಳಿ. ಮನಸ್ಸಿಗೆ ಯಾಕೊ ಶಾಂತಿ ಇಲ್ಲ. ಆಸ್ತಿಕನು ನಾಸ್ತಿಕನಾಗುವಂತೆ ಯಾಕೊ ಇದ್ದಕ್ಕಿದ್ದಂತೆ ಸಂಶಯ ಮನಸ್ಸಿನಲ್ಲಿ ಹುಟ್ಟಿದೆ. ಒಂದು ತಿಂಗಳ ನಂತರ ಹಿಂದಿರುಗಿ ಏನು ಮಾಡಬೇಕೋ ಮಾಡೋಣ ಎಂದು ಹೇಳಿ ಮಲ್ಲಿಗೆ ಹಳ್ಳಿಯನ್ನು ಬಿಟ್ಟನು.

ಸುದರ್ಶನ ನೆಟ್ಟಗೆ ಧಾರವಾಡಕ್ಕೆ ಹೋದನು. ಧಾರವಾಡದ ಸ್ಟೇಶನ್ನಿನಲ್ಲಿಯೇ ಸುದರ್ಶನನಿಗೆ ಶಂಕರನ ದರಶನವಾಯಿತು. ಶಂಕರ ಅಂಕೋಲ ಸತ್ಯಾಗ್ರಹದಲ್ಲಿ ಅತ್ಯಂತ ಪ್ರಸಿದ್ಧನಾದವನು. ಪೋಲೀಸರ ಕೈಗೆ ಸಿಕ್ಕದೆ ಎರಡು ವರುಷ ತನ್ನ ಕೆಲಸವನ್ನು ಮಾಡಿಕೊಂಡಿದ್ದು ಕೊನೆಗೆ ಗಾಂಧಿಯವರ ಅಪ್ಪಣೆ ಮೇರೆ ಪೋಲೀಸರ ವಶವಾಗಿ ಸೆರೆ ಅನುಭವಿಸಿದವನು. ಅತ್ಯಂತ ಉತ್ಸಾಹೀ ಯುವಕ. ಉಪ್ಪಿನ ಸತ್ಯಾಗ್ರಹಕ್ಕಾಗಿ ಕಾಲೇಜನ್ನು ಬಿಟ್ಟು ಬಂದವನು. ಶಂಕರನನ್ನು ನೋಡಿದರೆ ತನಗೆ ಹೊಸ ಉತ್ಸಾಹ ಬರುವುದೆಂದು ಸುದರ್ಶನನಿಗೆ ಗೊತ್ತು. ಪರಸ್ಪರ ಯೋಗಕ್ಷೇಮಗಳಾದ ನಂತರ ಸುದರ್ಶನ ಶಂಕರನನ್ನು ಏನು ಮಾಡುತ್ತಿದ್ದೀಯೆ ಎಂದು ಕೇಳಿದ. ಶಂಕರ "ಮಾಡುತ್ತಿರುವುದೇನು ? ಸೋದರ ಮಾವನ ಮನೆಯಲ್ಲಿದ್ದೇನೆ. ಜೀವನ ಕಷ್ಟವಾಗುತ್ತಿದೆ. ಏನು ಮಾಡುವುದಕ್ಕೂ ತೋಚುತ್ತಾ ಇಲ್ಲ. ಎಲ್ಲಿಯಾದರೂ ಕೆಲಸ ಸಿಕ್ಕಿದರೆ ಸೇರೋಣ ಅಂತ ಮಾಡಿದ್ದೇನೆ. ನಮ್ಮ ಸೋದರ ಮಾವ, ರೆವಿನ್ಯೂ ಆಫೀಸಿನಲ್ಲಿ ಗುಮಾಸ್ತರಾಗಿ ಸೇರು ಎನ್ನುತ್ತಾರೆ. ಏರ್ಪಾಡು ಮಾಡಿದ್ದೇನೆ ಎನ್ನುತ್ತಾರೆ" ಎಂದ. ಸುದರ್ಶನನಿಗೆ ಕೇಳಿ ಆಶ್ಚರ್ಯವಾಯಿತು. ಬೆಂಕಿಯ ಕಿಡಿಯಾದ ಆ ಅಂಕೋಲದ ಶಂಕರ ಎಲ್ಲಿ? ಈಗ ರೆವಿನ್ಯೂ ಆಫೀಸಿನಲ್ಲಿ ಗುಮಾಸ್ತನಾಗುವ ಈ ಬಡಪಾಯಿ ಎಲ್ಲಿ! ಸುದರ್ಶನನು "ಹೋರಾಟಮುಗಿಯಿತು. ಇನ್ನೇನು ನಾವು ಕಷ್ಟಪಡಬೇಕಾದುದಿಲ್ಲ. ಒಂದೊಂದು ಹಳ್ಳಿಯಲ್ಲಿ ಒಬ್ಬೊಬ್ಬ ಇದ್ದು ಆ ಹಳ್ಳಿಯ ಪುನರುಜ್ಜೀವನ ಮಾಡಬೇಕಾದುದಿಲ್ಲ? ಹಾಗಾದರೆ ನಮಗೆ ಸ್ವರಾಜ್ಯ ಸಿಕ್ಕಿದೆಯೆ ?" ಎಂದ. ಶಂಕರ ಮಾತನಾಡಲಿಲ್ಲ. ನನ್ನ ಜತೆಯಲ್ಲಿ ಮನೆಗೆ ಬಾ ಎಂದ.

ಶಂಕರನ ಮಾವನ ಮನೆಗೆ ಹೋಗುತ್ತಿರುವಾಗ ದಾರಿಯಲ್ಲಿ ಸುದರ್ಶನ ಇತರ ಸ್ನೇಹಿತರನ್ನು ಕುರಿತು ವಿಚಾರಿಸಿದ. ಶ್ರೀಕಂಠ ಏನಾಗಿದ್ದಾನೆ ಎಂದು ಕೇಳಿದ. ಶ್ರೀಕಂಠ ಮದುವೆಯಾಗಿ ಹೆಂಡತಿಯೊಂದಿಗೆ ಇದ್ದಾನೆ. ಆದರೆ ಅವನಿಗೆ ಈ ಬಾಳು ಸಾಕಾಗಿದೆ. ಯಾವುದಾದರೂ ಹಳ್ಳಿಗೆ ಹೋಗಿ ಅಲ್ಲಿ, ಸೇವೆ ಮಾಡುತ್ತಾ ನಿಲ್ಲಬೇಕೆಂದು ಯೋಚಿಸುತ್ತಿದ್ದಾನೆ. ಆದರೆ ಅವನ ಹೆಂಡತಿ ಅವನಿಗೆ ಅದಕ್ಕೆ ಅವಕಾಶಕೊಡುತ್ತಿಲ್ಲ. ಆತ ಮುಳ್ಳಿನ ಮೇಲೆ ಇದ್ದ ಹಾಗೆ ಇದ್ದಾನೆ ಎಂದ ಶಂಕರ. ಸುದರ್ಶನನು “ ಹೌದು. ಶ್ರೀಕಂಠ ಜೀವನಕ್ಕೆ ಏನು ಮಾಡುತ್ತಿದ್ದಾನೆ ಎಂದ. ಶಂಕರನು ಒಂದು ಖಾದಿ ಅಂಗಡಿ ಇಡಬೇಕೆಂದು ಯೋಚಿಸಿದ. ಆದರೆ ಅದಕ್ಕೆ ಭಂಡವಾಳ ಎಲ್ಲ. ಖಾದಿಯ ಅಂಗಡಿಯಲ್ಲಿ ಸಂಸಾರಕ್ಕೆ ಸಾಕಾಗುವ ಉತ್ಪತ್ತಿ ಎಲ್ಲಿ ಬರುತ್ತೆ, ಸರಿ. ಕೆಲವು ಕಾಲ ಖಾದಿ ಹೊತ್ತು ಮಾರಿದ. ಈಗ ಒಂದು ಗಿರಣಿಯಲ್ಲಿ ಗುಮಾಸ್ತನಾಗಿದ್ದಾನೆ ಎಂದ. ಸುದರ್ಶನನು “ಸರಿ. ತಿಮ್ಮಪ್ಪ ಏನು ಮಾಡುತ್ತಿದ್ದಾನೆ” ಎಂದ. ಶಂಕರನು ಕಂಟ್ರಾಕ್ಟ್ ಮಾಡುತ್ತಿದ್ದೇನೆ ಎನ್ನುತ್ತಿದ್ದಾನೆ ಯಾವುದರಲ್ಲಿಯೂ ಮನಸ್ಸಿರುವಂತೆ ಕಾಣುವುದಿಲ್ಲ. ಚಳುವಳಿಯಲ್ಲಿ ಒಂದು ಸಲ ಸೇರಿದ ಮೇಲೆ ಇನ್ನು ಯಾವುದರಲ್ಲಿ ತಾನೇ ಉತ್ಸಾಹವುಂಟಾಗುತ್ತೆ ಎಂದ ಶಂಕರ. ಸುದರ್ಶನನಿಗೆ ಚಳುವಳಿಯಲ್ಲಿ ಭಾಗವಹಿಸಿದ್ದ ಜನವೆಲ್ಲಾ ಹೀಗೆ ಬೂದಿ ಮುಚ್ಚಿದ ಕೆಂಡವಾಗಿದ್ದಂತೆ ತೋರಿತು. ಅವರು ಯಾರೊಬ್ಬರಿಗೂ ಈ ಬಾಳು ಬಾಳೇ ಆಗಿರಲಿಲ್ಲ. ಅವರಿಗೆ ಇಲ್ಲಿಯ ಇಂದಿನ ಜೀವನವೇ ಕನಸಾಗಿ, ಭಾರತ ಸ್ವಾತಂತ್ರ್ಯಕ್ಕಾಗಿ ಹೋರಾಡುವ, ಸಿದ್ಧ ಮಾಡುವ ಬಾಳೇ ಬಾಳಾಗಿದ್ದಿತು.

ಶಂಕರನ ಮನೆಯನ್ನು ಪ್ರವೇಶಿಸಿದ ಕೂಡಲೇ ಇದು ಸ್ಪಷ್ಟವಾಯಿತು. ಶಂಕರನ ಸ್ಥಿತಿ ಸುದರ್ಶನನ ಸ್ಥಿತಿಯಂತೆಯೇ ಇದ್ದಿತು. ಅವನ ತಾಯಿಯೂ ತಮ್ಮ ಅಣ್ಣನ ಮನೆಯಲ್ಲಿ ಇದ್ದಳು. ಶಂಕರನ ಮಾವ ರೆವಿನ್ಯೂ ಆಫೀಸಿನ ಹೆಡ್ ಗುಮಾಸ್ತ. ಶಂಕರನನ್ನು ರೆವಿನ್ಯೂ ಆಫೀಸಿಗೆ ಸೇರಿಸಿಬಿಟ್ಟರೆ ಅಧಿಕಾರಿಗಳ ಕೃಪೆಗೆ ಪಾತ್ರನಾದ ಅವನು ಮುಂದೆ ತನ್ನ ಜೀವನವನ್ನು ನಡೆಸಿಕೊಂಡು ಹೋಗುವ ವಿಷಯದಲ್ಲಿ ಮಾವನಿಗೆ ಯೋಚನೆ ಇರಲಿಲ್ಲ. ಆದರೆ ಶಂಕರನಿಗೆ ರೆವಿನ್ಯೂ ಆಫೀಸಿನ ಗುಮಾಸ್ತೆಯಾಗಿರುವುದು ಹೇಗೂ ಒಪ್ಪಿಗೆಯಾಗಿರಲಿಲ್ಲ. ಮನೆಯಲ್ಲಿ ಶಂಕರನಿಗೂ ಅವನ

ಮಾವನಿಗೂ ತಾಯಿಗೂ ನಿತ್ಯಾ ನಡೆಯುತ್ತಿದ್ದ ಚರ್ಚೆಯ ಒಂದು ಮಾದರಿ ಸುದರ್ಶನನು ಹೋದ ದಿನವೂ ನಡೆಯಿತು. ಸುದರ್ಶನನ ಮಾವ ಅನಂತುವಿನಂತೆಯೇ ಶಂಕರನ ಮಾವನೂ ರೇಗಾಡಿದನು. ಇನ್ನು ನಾನು ನಿನ್ನನ್ನೂ ನಿನ್ನ ತಾಯಿಯನ್ನೂ ಸಾಕಲಾರೆ ಎಂದನು. ಶಂಕರನೂ ಕೋಪಿಸಿಕೊಂಡನು. ತನ್ನ ಮಾವ ಹೇಳುತ್ತಿರುವ ಮಾತು ಸರಿ ಎಂಬುದು ಶಂಕರನಿಗೆ ತೋರಿತು. ಆದರೆ ಹೋರಾಟ ಇನ್ನೂ ನಡೆಯುತ್ತಲೇ ಇರುವಾಗ ರೆವಿನ್ಯುಆಫೀಸಿನಗುಮಾಸ್ತನಾಗುವುದೆಂದರೆ ಅವನ ಮೈಜುಮ್ಮೆನ್ನುತ್ತಿದ್ದಿತು. ತಾಯಿಯನ್ನು ಕರೆದುಕೊಂಡು ಯಾವುದಾದರೂ ಹಳ್ಳಿಯನ್ನು ಸೇರಿ ತನ್ನಿಂದಾದ ಸೇವೆ ಮಾಡುತ್ತಾ ಹಳ್ಳಿಯವರು ಕೊಟ್ಟುದರಲ್ಲಿ ತೃಪ್ತನಾಗಿರಬೇಕೆಂದು ಅವನು ಬಯಸಿದನು. ಆದರೆ ಶಂಕರನ ತಾಯಿ ಇದಕ್ಕೆ ಒಪ್ಪಿರಲಿಲ್ಲ.

ಶಂಕರನ ಮನೆಗೆ ಹೋಗಿ ಊಟಮಾಡಿ ಕುಳಿತ ನಂತರ, ಸುದರ್ಶನ ಸರಸ್ವತಿಯ ವಿಷಯವನ್ನು ಕೇಳಿದನು. ಶಂಕರ "ಸರಸ್ವತಿ ಮನೆಯಲ್ಲಿ ರಾದ್ಧಾಂತ ಮಾಡುತ್ತಿದ್ದಾಳೆ. ಅವಳ ವಯಸ್ಸಿನವರಿಗೆಲ್ಲಾ ಮದುವೆ ಆಗಿ ಎರಡು ಮೂರು ಮಕ್ಕಳಾಗಿದೆ. ರಾಯಬಹದ್ದೂರನು ಅವಳಿಗೆ ಮದುವೆ ಮಾಡಬೇಕೆಂದು ಮಾಡಿದ ಪ್ರಯತ್ನಗಳೆಲ್ಲಾ ವ್ಯರ್ಥವಾಗಿವೆ. ನಾನು ಮದುವೆಯೇ ಆಗುವುದಿಲ್ಲವೆಂದು ಆಕೆ ಹಟ ಹಿಡಿದಿದ್ದಾಳೆ. ಸ್ವಾತಂತ್ರದ ಹೋರಾಟ ಇನ್ನೂ ಮುಗಿದಿಲ್ಲ. ಇದು ಮುಗಿಯುವವರೆಗೆ ಮದುವೆ ಇಲ್ಲ ಎನ್ನುತ್ತಿದ್ದಾಳೆ. ಒಂದು ದಿನ ರಾಯಬಹದ್ದೂರನು ನೀನು ಮದುವೆಯಾಗಲೇಬೇಕೆಂದು ಬಲಾತ್ಕರಿಸಿದುದರಿಂದ, ಆಕೆ ನನ್ನಿಂದ 20 ರುಪಾಯಿ ತೆಗೆದುಕೊಂಡು ಮನೆಯಿಂದ ಏನನ್ನೂ ತೆಗೆದುಕೊಳ್ಳದೆ ಪುಣೆಯ ಸೇವಾಸದನಕ್ಕೆ ಹೋಗಿಬಿಟ್ಟಳು, ಪಾಪ. ರಾಯಬಹದ್ದೂರ ದಿಕ್ಕಿಲ್ಲದ ಬಡ ಕುರಿಯಂತೆ ಅನಾಥನಾದ. ಅವನ ಆಸ್ತಿಯಿಂದ ಏನು ಪ್ರಯೋಜನ? ಪುಣೆಗೆ ಹೋಗಿ ಮಗಳ ಕಾಲು ಕಟ್ಟಿಕೊಳ್ಳುವುದು ಒಂದು ಮಾತ್ರ ಬಾಕಿ; ನಿನ್ನ ಇಷ್ಟದಂತೆ ಇರು. ನಿನ್ನನ್ನು ಇನ್ನು ಬಲಾತ್ಕರಿಸುವುದಿಲ್ಲ. ಮದುವೆಯಾಗಲೇ ಬೇಡ, ನನ್ನ ಮನೆಯಲ್ಲಿ ನೀನು ಇದ್ದರೆ ಸಾಕು ಎಂದ. ಸರಸ್ವತಿ ಈಗ ಮನೆಗೆ ಬಂದಿದ್ದಾಳೆ. ಮದುವೆಯ ವಿಷಯ ನಾನೂ ಪ್ರಸ್ತಾಪಿಸಿದೆ. ಅವಳಿಗೆ ದೇಶದ ಹುಚ್ಚು ಹತ್ತಿದೆ."

ಊಟಮಾಡಿ ಒಂದೆರಡು ಗಂಟೆ ವಿಶ್ರಮಿಸಿಕೊಂಡು ಸುದರ್ಶನನೂ ಶಂಕರನೂ ಸ್ನೇಹಿತರನ್ನು ನೋಡಿಕ್ಕೊಂಡು ಬರಲು ಹೊರಟರು. ತಿಮ್ಮಪ್ಪ ಶ್ರೀಕಂಠ ಶ್ರೀಧರ ಎಲ್ಲರೂ ಒಟ್ಟಾಗಿ ಸೇರಿದರು. ನೆಟ್ಟಗೆ ಸರಸ್ವತಿಯ ಮನೆಗೆ ಹೊರಟರು. ರಾಯಬಹದ್ದೂರನಿಗೆ ಈ ಐವರು '' ಪಂಚಪಾಂಡವರನ್ನು '' ಕಂಡು ಭಯವಾಯಿತು. ಭಯವಾಯಿತೆಂದು ಹೇಳುವುದೂ ಸರಿಯಲ್ಲ. ಅವನೂ ನಿಧಾನವಾಗಿ ಸರಸ್ವತಿಯ ದಾರಿಗೇ ಬರುತ್ತಿದ್ದನು. ಚಿಕ್ಕವರ ಯವ್ವನದ ಉತ್ಸಾಹವನ್ನು ಎದುರಿಸುವ ಶಕ್ತಿ ಅವನಲ್ಲಿ ಪೂರ್ಣವಾಗಿ ಮಾಯವಾಗಿದ್ದಿತು.

ಅಂದು ಸುದರ್ಶನ ತನ್ನ ಗೆಳೆಯ ಗೆಳತಿಯರೊಡನೆ ಸೇರಿ ನಡೆಸಿದ ಆ ಸಂಭಾಷಣೆಯಿಂದ, ಒಂದು ಸಲ ಸ್ವಾತಂತ್ರ್ಯದ ಆಸೆ ಬಂದ ಮೇಲೆ ಅದನ್ನು ಅಮುಕುವುದು ಹೇಗೆ ಸಾಧ್ಯವಿಲ್ಲವೆಂಬುದು ಗೊತ್ತಾಯಿತು. 1920 ರಲ್ಲಿ ಮನೆಗೆ ಒಬ್ಬ ಸ್ವಾತಂತ್ರ್ಯ ಸಿಪಾಯಿ ಇದ್ದರೆ 1930 ರಲ್ಲಿ ಮನೆಗೆ ಇಬ್ಬರಾಗಿದ್ದರು. 1936-37 ಮನೆಗೆ ಮುವ್ವರಾಗಿದ್ದರು ಸ್ವಾತಂತ್ರ್ಯವೆಂಬ ಕಿಡಿ ಯಾರಲ್ಲಿ ತಾನೇ ಇಲ್ಲ. ಅದಕ್ಕೆ ಸುದರ್ಶನನ ಮಾವ ಅನಂತುವೇ ಒಂದು „ಉದಾಹರಣೆಯಾಗಿದ್ದನು. ಅನಂತು ಸುದರ್ಶನನ ಈ ಚೇಷ್ಟೆಯನ್ನೆಲ್ಲ ಸಹಿಸಿಕೊಂಡಿದ್ದುದು, ತನ್ನಲ್ಲಿಯೂ ಸ್ವಾತಂತ್ರ್ಯದ ಜ್ಯೋತಿ ಹೊಗೆಯಾಡುತ್ತಿದ್ದುದರಿಂದ. ರಾಯಬಹದ್ದೂರನು ಸಹ, ಶಂಕರನ ಮಾವ ರೆವಿನ್ಯೂ ಆಫೀಸ್ ಹೆಡ್ ಗುಮಾಸ್ತನೂ ಸಹ ಎಲ್ಲರೂ ಸ್ವಾತಂತ್ರ್ಯಕ್ಕಾಗಿ ಹೋರಾಡುವುದು ತಪ್ಪಲ್ಲವೆಂದು ತಿಳಿದರು. ಆದರೆ ಕೆಲವರು ಯುದ್ಧಭೂಮಿಯ ಸಿಪಾಯಿಗಳಂತೆ ಹೋರಾಡುತ್ತಾರೆ. ಇನ್ನು ಕೆಲವರು ಹಿಂದೆ ನಿಂತು ಅವರಿಗೆ ಸಹಾಯವನ್ನು ಕೊಡುತ್ತಾರೆ. ದೇಶ ಪ್ರೇಮವಿಲ್ಲದವನು ಯಾವ ದೇಶದಲ್ಲಿಯೂ ಯಾವಾಗಲೂ ಇರಲಿಲ್ಲ. ಕೆಲವರು ಆ ಪ್ರೇಮವನ್ನು ಹೊರಗಡೆ ತೋರಿಸುತ್ತಾರೆ. ಕೆಲವರು ತೋರಿಸುವುದಿಲ್ಲ.

ಸುದರ್ಶನ, ಶಂಕರ, ಶ್ರೀಕಂಠ, ಶ್ರೀಧರ, ತಿಮ್ಮಪ್ಪ, ಸರಸ್ವತಿ ಇವರು ಮತ್ತೆ ಒಂದಾಗಿ ಸೇರಿದುದೇ ಮತ್ತೆ ಅಸಹಕಾರದ ದಿನಗಳಂತೆ ಉಪ್ಪಿನ ಸತ್ಯಾಗ್ರಹದ ದಿನಗಳಂತೆ ತೋರಿದವು. ಮಿತ್ರರು ಸರಸ್ವತಿಯೊಂದಿಗೆ ಮಾತನಾಡಲು ಪ್ರಾರಂಭಿಸಿದಾಗ ವಾತಾವರಣ ಉಪ್ಪಿನ ಸತ್ಯಾಗ್ರಹದ ವಿದ್ಯುತ್ತಿನ ಚುರುಕನ್ನೂ ಕಾವನ್ನೂ ಹೊಂದಿತು. ಬಹಳ

ಹೊತ್ತು ಮಳೆ ಮೋಡದಿಂದ ಕಪ್ಪಾದ ಆಕಾಶದಲ್ಲಿ ಇದ್ದಕ್ಕಿದ್ದಂತೆ ಸೂರ್ಯ ಪ್ರಕಾಶವಾದರೆ ಹಿಂದಲ ಅಂಧಕಾರವೆಲ್ಲಾ ಮರೆಯುವಂತೆ ಸರಸ್ವತಿಯ ಮುಖದಿಂದ ಮಾತುಗಳು ಹೊರಹೊರಟಂತೆ ಸುದರ್ಶನನ ಮನಸ್ಸಿಲ್ಲಿದ್ದ ಸಂಶಯಪಿಶಾಚ ನಾಶವಾಯಿತು. "ಹೋರಾಟ ಇನ್ನೂ ಮುಗಿದಿಲ್ಲ. ಈಗ ತಾನೇ ಪ್ರಾರಂಭವಾಗಿದೆ. ಅದರಲ್ಲಿ ಇನ್ನೂ ಮೊದಲನೆಯ ಮೆಟ್ಟಲನ್ನು ಈಗ ಹತ್ತಿದ್ದೇವೆ. ಇನ್ನೂ ಅನೇಕ ಮೆಟ್ಟಲುಗಳನ್ನು ಹತ್ತಬೇಕು. ಪ್ರತಿಯೊಬ್ಬ ಕೆಲಸಗಾರನೂ ಒಂದೊಂದು ಹಳ್ಳಿಯನ್ನು ಆರಿಸಿಕೊಂಡು, ಹಿತವಾದ ಆಯುಧವನ್ನು ಸಿದ್ಧಮಾಡುವ ರೀತಿ, ಆ ಹಳ್ಳಿಯ ಜನರನ್ನು ಸಿದ್ಧಮಾಡಬೇಕು. ಇದೇ ನಮ್ಮ ಗುರಿ. ಹಳ್ಳಿಗಳು ಈಗಿನಂತೆ ದಾರಿದ್ರ್ಯ, ಕೊಳಕು, ದೈನ್ಯ, ಹೇಡಿತನದಲ್ಲಿರುವವರೆಗೆ ನಮಗೆ ಯಾವುದೂ ಸಾಧ್ಯವಿಲ್ಲ. ಹೇಡಿಯಾಗಿರುವುದಕ್ಕಿಂತ ಹೆಚ್ಚಿನ ಪಾಪ ಬೇರೆ ಇಲ್ಲ. ಸ್ವಾತಂತ್ರ್ಯ ನಮ್ಮದಾಗುವುದಕ್ಕಿಂತ ಮುಂಚೆ ಅನೇಕ ಕಡಲ್ಗಾಲುವೆ ರಕ್ತವನ್ನು ನಾವು ಅರ್ಪಿಸಬೇಕು. ಸ್ವಾತಂತ್ರ್ಯ ಬಂದ ನಂತರವೂ ಹೇಡಿಗಳಾಗಿದ್ದರೆ ಆ ಸ್ವಾತಂತ್ರ್ಯ ನಮ್ಮಲ್ಲಿ ಒಂದು ಗಳಿಗೆಯೂ ನಿಲ್ಲದು. ನಾವು ಹೊರಗಿನ ಶತ್ರುಗಳನ್ನೂ ಒಳಗಿನ ಶತ್ರುಗಳನ್ನೂ ಎದುರಿಸಬೇಕಾಗುವುದು. ಸರ್ಕಾರವನ್ನು ಎದುರಿಸಬೇಕು. ಬಂಡವಾಳಗಾರರನ್ನು ಎದುರಿಸಬೇಕು; "ಗೂಂಡ"ಗಳನ್ನು ಎದುರಿಸಬೇಕು. ಜಾತಿ ಮತಗಳ ಹೆಸರಿನಲ್ಲಿ, ಮನುಷ್ಯತ್ವಕ್ಕೆ ವಿರೋಧವಾದ ಮನುಷ್ಯನಿಂದ ವಿವರಿಸಲು ಸಹ ಅಸಾಧ್ಯವಾದ ಘೋರಕೃತ್ಯಗಳನ್ನು ಎಸಗುತ್ತಿರುವ ಕೊಲೆಪಾತಕರನ್ನೆಲ್ಲಾ ಎದುರಿಸಬೇಕು. ಭಾರತಸ್ವಾತಂತ್ರ್ಯಕ್ಕಾಗಿ ಪ್ರಾಣಗಳನ್ನು ಕೊಡಲು ಸಿದ್ಧರಾಗಿರಬೇಕು. ಸರಸ್ವತಿಯು ನಮ್ಮ ಸೈನ್ಯ ಸಿದ್ಧವಾಗಿದೆ ಹೋರಾಟ ಯಾವಾಗಲೂ ಮುಗಿದೇ ಇರಲಿಲ್ಲ. ಗಾಂಧಿ ಮಹಾತ್ಮರು ಸೂಚನೆ ಕೊಡುವುದನ್ನೇ ಕಾಯುತ್ತಿದ್ದೇವೆ. ನಿಮ್ಮ ನಿಮ್ಮ ಗ್ರಾಮಗಳಿಗೆ ನಡಿಯಿರಿ.

"ನಾನೂ ಒಂದು ಹಳ್ಳಿಗೆ ಹೋಗುತ್ತೇನೆ. ಪ್ರತಿಯೊಬ್ಬರೂ ನಿಮ್ಮ ನಿಮ್ಮ ಹಳ್ಳಿಗಳನ್ನು ಆರಿಸಿಕೊಳ್ಳಿ. ಶಂಕರ ನಿನ್ನ ರೆವಿನ್ಯು ಗುಮಾಸ್ತೆ ನಿಮ್ಮ ಮಾವನಿಗೇ ಇರಲಿ. ತಿಮ್ಮಪ್ಪ ನಿನ್ನ ಕಂಟ್ರಾಕ್ಟು ಬಂಡವಾಳಗಾರರಿಗೆ. ಎಲ್ಲರೂ ನಿಮ್ಮ ನಿಮ್ಮ ಗ್ರಾಮಗಳಿಗೆ ಹೋಗಿ

ಎಂದು ಹೇಳಿದಳು. "ಮತ್ತೊಂದು ಹೋರಾಟ ಸಿದ್ಧ. ಅಲ್ಲಿಯವರೆಗೆ ನಮ್ಮ ಸಿದ್ಧತೆಗಳನ್ನು ನಾವು ಮಾಡಿಕೊಳ್ಳೋಣ. ಮತ್ತೆ ಸೇರೋಣ" ಎಂದು ಮಿತ್ರರು ಬೇರೆ ಬೇರೆಯಾದರು. ಅವರಾರಿಗೂ ಸಂಸಾರದ ಯಾವ ಬಂಧನಗಳೂ ಹೆಚ್ಚಾಗಿರಲಿಲ್ಲ. ತಮ್ಮ ಸ್ನೇಹಿತರಿಗಿಂತ ಹೆಚ್ಚಿನ ಬಂಧುಗಳೂ ನೆಂಟರೂ ಅವರಿಗೆ ಯಾರೂ ಇರಲಿಲ್ಲ.

ಸುದರ್ಶನ ಇನ್ನೂ ನಾಲ್ಕಾರು ದಿನಗಳು ಧಾರವಾಡದಲ್ಲಿ ನಿಂತನು. ಅವನ ಮಿತ್ರನೊಬ್ಬನು ಅಹಮ್ಮದಾಬಾದಿನಲ್ಲಿ ಇದ್ದುದರಿಂದ ಸುದರ್ಶನ ಅಲ್ಲಿಗೂ ಹೋದನು. ಅಹಮ್ಮದಾಬಾದು ಗಾಂಧಿಯವರು ಹಿಂದೆ ಅಲ್ಲಿ ಇದ್ದುದರಿಂದ ಅತ್ಯಂತ ಪವಿತ್ರವಾದ ಕ್ಷೇತ್ರ. ಅಹಮ್ಮದಾಬಾದಿನಿಂದ ಸಬರಮತಿಗೆ ಸುದರ್ಶನ ನಡೆದುಕೊಂಡು ಹೋಗುತ್ತಿರುವಾಗ ಸೇತುವೆಯ ಮೇಲೆ ಗಾಂಧಿಯವರ ಜ್ಞಾಪಕ ಬಂತು. ಗಾಂಧಿಯಿಲ್ಲದ ಮೇಲೆ ಸಬರಮತಿ ಆಶ್ರಮದಲ್ಲಿ ಏನಿದೆ? ಗಾಂಧಿ ಇರುವೆಡೆಯೇ ಭಾರತದ ಪುಣ್ಯ ಕ್ಷೇತ್ರ. ಅದೇ ಭಾರತದ ಉಸಿರು ಕಣ್ಣು ಆತ್ಮ. ಗಾಂಧಿಯವರಿಲ್ಲದ ಸತ್ಯಾಗ್ರಹ ಆಶ್ರಮ, ರಾಮಚಂದ್ರನಿಲ್ಲದ ಅಯೋಧ್ಯೆಯಂತೆ, ಚಂದ್ರ ನಿಲ್ಲದ ಆಕಾಶದಂತೆ ತೋರಿತು. ರಾಮನು ಕಾಡಿಗೆ ಹೋದರೂ ಅಯೋಧ್ಯಾಪುರದ ಜನ ಅವನ ಹಿಂದೆಯೇ ಕಾಡಿಗೆ ಹೋದರು. ಇದೇ ಸ್ವರ್ಗ ಎಂದರು. ಧರ್ಮರಾಜನ ಜತೆಯಲ್ಲಿ ನಾಯಿಗಳು ಹೋದುದೂ ಇದೇ ಕಾರಣದಿಂದ. ನಾಡೂ ಕಾಡೂ ಆಗುವುದು ಕಟ್ಟಡಗಳಿಂದಲ್ಲ; ಮಹಾತ್ಮರ ವಾಸದಿಂದ. ಧನ್ಯತೆಯನ್ನು ಪಡೆದ ಕ್ಷೇತ್ರಗಳು ಮಾತ್ರ ಈ ಮಹಾತ್ಮರ ಪಾದಸ್ಪರ್ಶಗಳಿಂದ ಪವಿತ್ರವಾಗುತ್ತವೆ. ಈ ಪುಣ್ಯ ಅಹಮ್ಮದಾಬಾದಿಗೆ ದಂಡಿ ಮಹಾಯಾತ್ರೆಯ ಕಾಲದವರೆಗೆ ಇದ್ದಿತು. ಅನಂತರ ಹೆಚ್ಚು ಪುಣ್ಯ ಫಲದಿಂದಲೋ ಏನೋ ವಾರ್ಧಾ ಸೇವಾಗ್ರಾಮ ಆ ಮಹಿಮೆಗೆ ಪಾತ್ರವಾಯಿತು. ಸಬರಮತಿ ಆಶ್ರಮದ ಹತ್ತಿರ ಹತ್ತಿರಕ್ಕೆ ಸುದರ್ಶನ ಹೋದಂತೆ, ವೈಭವಯುಕ್ತವಾಗಿ ಬಾಳಿ ಈಗ ನಿರ್ಜನವಾದ ಮನೆಗೆ ಹೋಗುವವನ ಮನೋಭಾವ ಅವನಿಗೆ ಉಂಟಾಯಿತು. ನಿರ್ಜನವಾದ ಮನೆಗೆ ಹೋದಂತೆ ಅವನು ಅನುಭವಿಸತೊಡಗಿದನು. ಮಹಾತ್ಮರ ಪಾದಸ್ಪರ್ಶದಿಂದ ಪ್ರಕೃತಿ ಪ್ರಫುಲ್ಲಿತವಾಗುವುದಂತೆ; ಪ್ರಾಣಿ ಗಳು ನಿಸರ್ಗಸಹಜವಾದ ಪರಸ್ಪರ ವೈರವನ್ನು ಮರೆತು ಸ್ನೇಹವಾಗಿರುವ

ವಂತೆ. ಆದರೆ ಗಾಂಧಿರಹಿತವಾದ ಆಶ್ರಮಕ್ಕೆ ಸುದರ್ಶನ ಬರುತ್ತಿರುವಾಗ ಅವನಿಗೆ ಪ್ರಕೃತಿಯೇ ಗೋಳೋ ಎಂದು ಅಳುತ್ತಿರುವಂತೆ ತೋರಿತು. ನೀರಿದ್ದ ಕೊಳಕ್ಕೆ ಕರುಗಳು, ನೀರು ಕುಡಿಯಲು ಬರುತ್ತವೆ. ಹಣ್ಣಿರುವ ಮರಕ್ಕೆ ಗಿಣಿಗಳು ಬರುತ್ತವೆ. ಒಣಗಿದ ಮರಕ್ಕೆ ಯಾವ ಗಿಣಿ ತಾನೇ ಬರುತ್ತೆ? ಸುದರ್ಶನ ಹಿಂದೆ ತಾನು ಸಬರಮತಿ ಆಶ್ರಮದಲ್ಲಿ ಇದ್ದ ಕಾಲವನ್ನು ಜ್ಞಾಪಿಸಿಕೊಂಡ. ಆಗ ಆಶ್ರಮದಿಂದ ಅಹಮ್ಮದಾಬಾದಿನವರೆಗೆ ಉದ್ದಕ್ಕೂ ಹಗಲು ರಾತ್ರಿಯೂ ಜನಗಳ ಜಾತ್ರೆ. ರಸ್ತೆಯಲ್ಲಿ ತಿರುಗಲು ಸ್ಥಳವಿರುತ್ತಿರಲಿಲ್ಲ. ಗಾಡಿಯಲ್ಲಿ ಬರುವವರು ಗಾಡಿಯಲ್ಲಿ ಬರುತ್ತಿದ್ದರು; ಮೋಟಾರಿನಲ್ಲಿ ಬರುವವರು ಮೋಟಾರಿನಲ್ಲಿ ಬರುತ್ತಿದ್ದರು; ಕುದುರೆ ಗಾಡಿಗಳಲ್ಲಿ ಬರುತ್ತಿರುವವರು ಕುದುರೆ ಗಾಡಿಗಳಲ್ಲಿ ಬರುತ್ತಿದ್ದರು. ಬೈಸಿಕಲ್, ಕಾಲು ನಡಿಗೆ ಅಂತೂ ಜಾತ್ರೆಗೆ ಜನ ನುಗ್ಗುತ್ತಿದ್ದಂತೆ ಆಶ್ರಮದ ಕಡೆಗೆ ಸಂತೆ ಸಾಗುತ್ತಿತ್ತು. ಆಗ ಅಹಮ್ಮದಾಬಾದಿನಿಂದ ಹೊರಟು ಆ ನಾಲ್ಕು ಮೈಲಿ ನಡೆಯುವುದು ಕಷ್ಟವಾಗಿಯೇ ತೋರುತ್ತಿರಲಿಲ್ಲ. ಮನುಷ್ಯ ಪ್ರಾಣಿಗೆ ಸ್ವಾಭಾವಿಕವಾದ ಕುತೂಹಲದಿಂದ ಮಾರ್ಗವನ್ನು ನಡೆಯುವವರು ಒಬ್ಬರನ್ನೊಬ್ಬರು ನೋಡುತ್ತಾ ಒಬ್ಬರಲ್ಲೊಬ್ಬರು ಆಸಕ್ತರಾಗಿ ಕಣ್ಣು ಮುಚ್ಚಿ ತೆರೆಯುವಷ್ಟರಲ್ಲಿ ಎಂಬಷ್ಟು ವೇಗವಾಗಿ ಹೊರಟು ಹೋಗುತ್ತಿದ್ದರು.

ಈಗ ಸುದರ್ಶನನಿಗೆ ದಾರಿ ಏನು ಮಾಡಿದರೂ ಸಾಗಲೇ ಇಲ್ಲ. ನಾಲ್ಕು ಮೈಲಿಗಳು ನಲವತ್ತು ಮೈಲಿಗಳಾಗಿ ತೋರಿದವು. ರಸ್ತೆಯ ಮರಗಳು ಯಾವಾಗಿನಂತೆ ಚಿಗರಿರುವಾಗಿ ತೋರಲಿಲ್ಲ. ಹಕ್ಕಿಗಳು ಸಹ "ಇನ್ನು ನಮ್ಮ ವೈಭವದ ಕಾಲ ಹೋಯಿತು" ಎಂಬಂತೆ ತಮ್ಮ ಗಾನವನ್ನೇ ಮರೆತಂತೆ ತೋರಿದವು. ಸುದರ್ಶನನಿಗೆ ಆ ದಾರಿಯಲ್ಲಿ, ಅಭ್ಯಾಸವಾಗಿದ್ದಂತೆ ಹಕ್ಕಿಗಳು ಹಾರುವುದೂ ಕೂಗುವುದೂ ಕೇಳಿಸಲೇ ಇಲ್ಲ. ಸುದರ್ಶನನು "ಜನರಿಗೆ ವೈಭವದ ಕಾಲವಿರುವಂತೆ ಸ್ಥಳಗಳಿಗೂ ವೈಭವದ ಕಾಲವಿದೆ. ಪಟ್ಟಣಕ್ಕೂ ಅದೃಷ್ಟ ಶುಕ್ರಮಹರ್ದೆಸೆ ಎಂಬುದು ಉಂಟು. ದೇವರ ಉತ್ಸವ ಬೀದಿಯಲ್ಲಿ ಬರುತ್ತಿರುವಾಗ, ಯಾವ ಯಾವ ಮನೆಯ ಮುಂದೆ ಬರುತ್ತದೆಯೋ ಆ ಮನೆಯ ಮೇಲೂ ಜನರ ದೃಷ್ಟಿ ಬೀಳುತ್ತದೆ. ದೇವರು ಮುಂದಕ್ಕೆ ಹೋದರೆ ಜನರ ದೃಷ್ಟಿಯೂ

ಮನೆಯನ್ನು ಮರೆಯುತ್ತದೆ. ಅಹಮ್ಮದಾಬಾದನ್ನು ಹಿಂದೆ ಕೇಳುತ್ತಿದ್ದ ವರು ಯಾರು? ಅಹಮ್ಮದಾಬಾದು ಹೆಸರುವಾಸಿಯಾದುದು ಅದರಲ್ಲಿ ರುವ ಗಿರಣಿಗಾಗಿ ಅಲ್ಲ. ಗಾಂಧಿಯಿಂದ. ಕಪಿಲವಸ್ತುವಿನ ಹೆಸರು ಈಗ ಜನಕ್ಕೆ ಗೊತ್ತಿರುವುದು ಅದು ಒಂದು ರಾಜಧಾನಿಯಾಗಿದ್ದುದರಿಂದ ಅಲ್ಲ. ಅಲ್ಲಿ ಬುದ್ಧನು ಜನ್ಮವೆತ್ತಿದುದರಿಂದ. ಹೀಗೆ ಭಾರವಾದ ಆಲೋಚನೆಗಳನ್ನು ಮಾಡುತ್ತಾ ಸುದರ್ಶನನು ದೇವರಿಲ್ಲದ ಗುಡಿಯನ್ನು ಹೊಗುವಂತೆ ದಯೆಯಿಲ್ಲದ ಮನುಷ್ಯನ ಹೃದಯದಂತಿದ್ದ ಸಬರಮತಿ ಆಶ್ರಮವನ್ನು ಹೊಕ್ಕನು.

ಆಶ್ರಮವನ್ನು ಪ್ರವೇಶಿಸಿದ ಕೂಡಲೇ ಸುದರ್ಶನನಿಗೆ ಭಾವನೆಗಳು ಉಕ್ಕಿಬಂದವು. ಆಶ್ರಮ ಬಿಕೊ ಎನ್ನುತ್ತಿದ್ದಿತು. ದೈನ್ಯ ಸ್ವರದಿಂದ ಕೂಗುತ್ತಿದ್ದಿತು. ಕೃಷ್ಣ ಪರಮಾತ್ಮ ಎಸೆದ ಕೊಳಲು "ಅಯ್ಯೋ ನಾನು ಇನ್ನು ಅಪ್ರಯೋಜಕನಾದೆನೇ. ಇದುವರೆಗಿನ ನನ್ನ ಬಾಳೇ ಬಾಳು ಎಂದು ಕೊರಗಿದಂತೆ ಆಶ್ರಮ ಕೊರಗುತ್ತಿದ್ದಿತು. ಸುದರ್ಶನನು ಆಶ್ರ ಮದ ಮೆಟ್ಟಲುಗಳ ಮೇಲೆ ಕುಳಿತು ಗೊಳೋ ಎಂದು ಅತ್ತುಬಿಟ್ಟನು. ಕಣ್ಣೀರು, ಧಾರೆಧಾರೆಯಾಗಿ ಅವನ ಇಚ್ಛೆಯಿಲ್ಲದೆ ಅವನ ಮಾತನ್ನು ಕೇಳದೆ ಹರಿಯಿತು. ಇನ್ನು ಗಾಂಧಿ ಯಡಿಗಳು ಈ ಪ್ರದೇಶವನ್ನು ಸ್ಪರ್ಶ ಮಾಡುವುವೆ? ಹಿಂದೆ ನೋಡಿದ್ದಂತೆ ಮತ್ತೆ ಇಲ್ಲಿ ಗಾಂಧಿಯನ್ನು ನೋಡು ವೆವೇ ಎಂದು ಅವನು ಕೊರಗಿದನು. ಆಶ್ರಮದ ಪ್ರತಿಯೊಂದು ಕಲ್ಲು, ಮರ, ಹೆಜ್ಜೆ ನೆಲ ಎಲ್ಲೆಲ್ಲಿಯೂ ಸುದರ್ಶನನಿಗೆ ಗಾಂಧಿಯವರ ಅಡಿಗಳ ಸದ್ದು ಕೇಳಿಸುತ್ತಿದ್ದಂತೆ ಇದ್ದಿತು. ಆ ಗರುಕೆ ಕಲ್ಲು ಮೆಟ್ಟಲುಗಳನ್ನು ನೋಡಿ ಸುದರ್ಶನ "ನೀವೇ ಧನ್ಯರು. ಗಾಂಧಿಯಡಿಗಳು ನಿಮ್ಮನ್ನು ಸೋಕಿವೆ ಎಂದುಕೊಂಡನು.

ಸಬರಮತಿ ಆಶ್ರಮದ ಹರಿಜನ ಮಂದಿರದ ವ್ಯವಸ್ಥಾಪಕ, ಸುದ ರ್ಶನನ ಹಳೆಯ ಸ್ನೇಹಿತ ಕೃಷ್ಣ ಆಶ್ರಮದಿಂದ ಹೊರಗೆ ಬಂದು, ಅಶ್ರು ಧಾರೆ ಸುರಿಸುತ್ತಿದ್ದ ಸುದರ್ಶನನನ್ನು ನೋಡಿದನು. ಮಿತ್ರರಿಬ್ಬರೂ ಮಾತುಕಥೆಯಾಡಿದರು. ಆಶ್ರಮ ಭಜನೆಯನ್ನು ಮಾಡಿದರು. ಗಾಂಧಿ ಯವರನ್ನು ಕುರಿತು ಮಾತನಾಡಿದರು. ಇದ್ದಕ್ಕಿದ್ದಂತೆ ಗಾಂಧಿಯವರು ಇಂತಹ ಸಂಸ್ಥೆಯನ್ನು ಬಿಟ್ಟು ಹೋದ ಅನಾಸಕ್ತಿಯನ್ನು ಯೋಚಿಸಿ ಬೆರ

ಗಾದರು. ಕೃಷ್ಣನು "ಅನಾಸಕ್ತಿ ಹೌದು. ಆದರೆ ಸ್ವಾತಂತ್ರ್ಯದ ವಿಷಯದಲ್ಲಿ ಗಾಂಧಿ ಅನಾಸಕ್ತರಲ್ಲ. ಇಂದಲ್ಲ ನಾಳೆ ಸಂದೇಶ ಬರುತ್ತದೆ. ಹಿಂದೆಂದೂ ಕಾಣದಿದ್ದ ಅನಿರೀಕ್ಷಿತವಾದ ಹೋರಾಟ ಪ್ರಾರಂಭ ವಾಗುತ್ತದೆ.

ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರ ಮುಪಾವೃತಂ
ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧ ಮೀದೃಶಂ

ಈ ಹೋರಾಟದಲ್ಲಿ ಭಾಗವಹಿಸುವ ನಾವೇ ಪುಣ್ಯವಂತರು ಎಂದನು. ಕೃಷ್ಣನೂ ಸುದರ್ಶನನೂ ಅರ್ಧ ರಾತ್ರಿಯವರೆಗೆ ಮಾತನಾ ಡುತ್ತಲೇ ಕುಳಿತಿದ್ದರು. ಕಾಲ ಕಳೆದುಹೋದುದು ಅವರಿಗೆ ಗೊತ್ತಾ ಗಲೇ ಇಲ್ಲ. ಬೆಳಗಾದ ನಂತರ ಸುದರ್ಶನನು ಕೃಷ್ಣನಿಂದ ಬೀಳ್ಕೊಂಡು ತನ್ನ ಊರಿಗೆ ಹೊರಟು ಬಂದನು. ಅವನ ಕಿವಿಯಲ್ಲಿ ಸಂಶಯಾತ್ಮಾ ವಿನಶ್ಯತಿ ಎಂಬುದು ಪ್ರತಿಧ್ವನಿತವಾಗುತ್ತಿದ್ದಿತು.

* * * *

ಆದರೆ ಸುದರ್ಶನ ಪಾಪ, ಪ್ರಕೃತಿಯ ವಿಕಟ ನರ್ತನವನ್ನೇನು ಬಲ್ಲ! ಸುಮಾರು ಮೂರು ತಿಂಗಳು ತಿರುಗಿಕೊಂಡು ಅವನು ಹಿಂದಿರುಗಿ ಧಾರ ವಾಡಕ್ಕೆ ಬರುವವೇಳೆಗೆ, ಅವನ ತಾಯಿ ಸುಭದ್ರೆಗೆ ಬಹಳ ಖಾಯಿಲೆ ಎಂದು ಅವನಿಗೆ ಅನಂತುವಿನಿಂದ ತಂತಿ ಬಂದಿತು. ತಂತಿ ಧಾರವಾಡ ವನ್ನು ಮುಟ್ಟಿದಾಗ ಸುದರ್ಶನ ಅಲ್ಲಿ ಇರಲಿಲ್ಲ. ಕವಿ ಬೇಂದ್ರೆ ಹಿಂದೆ ಸ್ಥಾನಬದ್ಧರಾಗಿದ್ದ ಹಳ್ಳಿಯನ್ನು ನೋಡಿಕೊಂಡು ಬರಲು ಹೋಗಿದ್ದ. ಸುದರ್ಶನ ಆ ಹಳ್ಳಿಯನ್ನು ತಲಪಿದ ಒಂದು ಗಂಟೆಯೊಳಗಾಗಿ ಶಂಕರ ಬೈಸ್‌ಕಲ್‌ನಲ್ಲಿ ಅಲ್ಲಿಗೆ ಬಂದ. ಸುದರ್ಶನ ಗಡಿಬಿಡಿಯಿಂದ ರೈಲು ಹತ್ತಿ ಮಾರನೆಯ ಸಂಧ್ಯಾಕಾಲವೇ ಮಲ್ಲಿಗೆಹಳ್ಳಿಯನ್ನು ಸೇರಿದ.

ಮನೆಯಹತ್ತಿರಕ್ಕೆಬರಬರುತ್ತಾ ಸುದರ್ಶನನ ದಿಗಿಲು ಹೆಚ್ಚಾಯಿತು. ನಾವು ಯುದ್ಧದಲ್ಲಿ ತೊಡಗಿರುವಾಗಲೇ ಇವೆಲ್ಲಾ ಬರಬೇಕೆ? ಉಪ್ಪಿನ ಸತ್ಯಾಗ್ರಹದಲ್ಲಿ, ತನ್ನ ಜತೆಯಲ್ಲಿ ಸೆರೆಯಲ್ಲಿದ್ದ ಅನೇಕ ಸ್ನೇಹಿತರ ಬಂಧು ಗಳು ಹೊರಗೆ ತೀರಿ ಹೋದಾಗ, ಆ ಸ್ನೇಹಿತರು ಹೇಳುತ್ತಿದ್ದ "ನಮಗೆ ಬರುವ ಅಪಾಯಗಳೆಲ್ಲಾ ನಾವು ಒಳಗಿರುವಾಗಲೇ ಬರಬೇಕೆ" ಎಂಬ ಕೊರಗು ಅವನ ಜ್ಞಾಪಕಕ್ಕೆ ಬಂದಿತು. ಸ್ವಲ್ಪ ಹೆಚ್ಚು ಕಡಿಮೆ ಅವನ

ಪರಿಚಿತರಾದ ರಾಜಕೀಯ ಕ್ಷೇತ್ರದಲ್ಲಿ ದುಡಿಯುವವರಿಗೆಲ್ಲಾ ಹೀಗೆಯೇ ಆಗಿದ್ದಿತು. ಇಷ್ಟರಾದವರ ಮೃತ್ಯುಶಯ್ಯೆಯ ಬಳಿ ಸಹ ಅವರು ಇರಲು ಅವಕಾಶವಾಗಿರಲಿಲ್ಲ. ಸುದರ್ಶನನು ಇನ್ನು ನನ್ನ ಹಣೆಯ ಬರಹ ಹೇಗಿದೆಯೋ ಎಂದು ಮನೆಯನ್ನು ಸೇರಿದನು.

ಅದು ಸಂಧ್ಯಾಕಾಲ, ಸಾಯಂಕಾಲದ ಶಾಂತಿ ಮನೆಯನ್ನು ಆವರಿಸಿದ್ದಿತು. ಅಷ್ಟೊಂದು ಗದ್ದಲವಾಗುತ್ತಿದ್ದ ಅನಂತುವಿನ ಮನೆಯಲ್ಲಿ ಎಲ್ಲವೂ ಮೌನವಾಗಿ ತೋರಿತು. ಸುದರ್ಶನ ಹೆದರುತ್ತಾ ಹೆದರುತ್ತಾ ಮನೆಯೊಳಕ್ಕೆ ಹೋದನು. ಸುಭದ್ರೆಯ ಅನಾರೋಗ್ಯ ಎಲ್ಲರಿಗೂ ತಂತಿಯ ಮೂಲಕ ತಿಳಿದಿದ್ದುದರಿಂದ ವೈದೇಹಿ ಸೀತಾರಾಮು ನಾರಾಯಣ ಎಲ್ಲರೂ ಬಂದು ಸೇರಿದ್ದರು. ತೊಟ್ಟಿಯಲ್ಲಿ ಒಂದೇ ದೀಪ ಮಿನುಗುಟ್ಟುತ್ತಿದ್ದಿತು. ತೊಟ್ಟಿಯಲ್ಲಿ ಕಾಲಿಟ್ಟ ಕೂಡಲೇ ಸುಭದ್ರೆ ಚಿಕ್ಕಮನೆಯ ಹಾಸಿಗೆಯ ಮೇಲೆ ಮಲಗಿರುವುದು ಸುದರ್ಶನನ ಕಣ್ಣಿಗೆ ಬಿದ್ದಿತು. ಹಾಸಿಗೆಯ ಒಂದು ಕಡೆ ವೈದೇಹಿಯೂ ಮತ್ತೊಂದೆಡೆ ಸೀತೆಯೂ ಕುಳಿತಿದ್ದರು. ಅವರಿಬ್ಬರೂ ಒಂದೇ ಸಮನಾಗಿ ಅಳುತ್ತಿದ್ದರು. ಅನಂತು ತೊಟ್ಟಿಯಲ್ಲಿ ಕಂಬವನ್ನು ಒರಗಿಕೊಂಡು ಮತ್ತೊಂದು ಮೂಲೆಯಲ್ಲಿ ಕುಳಿತಿದ್ದನು. ಸುದರ್ಶನನನ್ನು ಎಲ್ಲರೂ ಕಣ್ಣಿನಿಂದ ಗುರುತಿಸಿದರೇ ಹೊರತು ಒಬ್ಬರೂ ಮಾತನಾಡಲಿಲ್ಲ. ಸುಭದ್ರೆ ಕಣ್ಣುಮುಚ್ಚಿಕೊಂಡು ಮಲಗಿದ್ದಳು. ಎಲ್ಲರ ಮುಖಭಾವವನ್ನೂ ನೋಡಿದಾಗ ಆಕೆ ಇನ್ನೂ ಜೀವಂತಳಾಗಿರುವಳೆಂಬುದು ಸುದರ್ಶನನಿಗೆ ತಿಳಿಯಿತು. ಆದರೆ ಅವರ ಅದೇ ಮುಖಭಾವದಿಂದ ಸುಭದ್ರೆ ಹೆಚ್ಚು ಕಾಲ ಬದುಕುವ ಆಸೆ ಇನ್ನು ಇಲ್ಲವೆಂದೂ ಅವನಿಗೆ ತೋರಿತು. ಸುದರ್ಶನನು ತಾಯಿಯ ಹಾಸಿಗೆಯ ಹತ್ತಿರ ಹೋಗಿ ಕುಳಿತು ಆಕೆಯ ಪಾದಗಳನ್ನು ಎರಡು ಕೈಗಳಿಂದಲೂ ಸ್ಪರ್ಶಮಾಡಿದನು. ಸುಭದ್ರೆ ಕಣ್ಣುಬಿಟ್ಟು ನೋಡಿ ಮಗನನ್ನು ಗುರುತಿಸಿ "ಸುದರ್ಶನ ಸುದರ್ಶನ" ಎಂದಳು.

ರಾತ್ರಿ ಹತ್ತು ಗಂಟೆಯಾಯಿತು. ಸುಭದ್ರೆ ಸುದರ್ಶನನ ಕೈಹಿಡಿದುಕೊಂಡೇ ಮಲಗಿದ್ದಳು. ಎಂಟು ಹತ್ತು ದಿನಗಳಿಂದ ರಾತ್ರಿ ಅವಳ ಹಾಸಿಗೆಯ ಬಳಿ ಕುಳಿತು ವೈದೇಹಿಯ ಕಣ್ಣುಗಳು ಕೆಂಪಾಗಿದ್ದವು. ಅತ್ತು ಅತ್ತು ಸೀತೆಯೂ ಬಳಲಿದ್ದಳು. ಅನಂತು ಸೀತಾರಾಮು ನಾರಾ

ಯಣ ಎಲ್ಲರ ಮುಖಗಳೂ ಬಾಡಿದ್ದವು. ಸುದರ್ಶನನು ಎಲ್ಲರನ್ನೂ ಹೋಗಿ ಮಲಗಿಕೊಳ್ಳುವಂತೆಯೂ, ತಾನು ರಾತ್ರಿ ಎಚ್ಚರವಾಗಿದ್ದು ತಾಯಿಯ ಬಳಿ ಕುಳಿತಿರುವುದಾಗಿಯೂ ಹೇಳಿದನು. "ಎಲ್ಲರೂ ಇಲ್ಲಿಯೇ ಇದ್ದೇವೆ. ಬೇಕಾದಾಗ ಕರೆ" ಎಂದು ಹೇಳಿ ಒಬ್ಬೊಬ್ಬರಾಗಿ ಹೋಗಿ ಮಲಗಿಕೊಂಡರು.

ರಾತ್ರಿ ಹನ್ನೆರಡು ಗಂಟೆಯ ಹೊತ್ತಿಗೆ ಸುಭದ್ರೆ ಕಣ್ಣುಬಿಟ್ಟಳು ಅವಳ ಮನಸ್ಸು ಒಳ್ಳೆ ತಿಳಿಯಾಗಿ ಎಚ್ಚರವಾಗಿದ್ದಿತು. ಕಾಯಿಲೆ ಬಿದ್ದ ಎರಡು ತಿಂಗಳಿನಿಂದ ಅವಳ ಮನಸ್ಸು ಯಾವಾಗಲೂ ಇಷ್ಟರಮಟ್ಟಿಗೆ ಗೆಲುವಾಗಿರಲಿಲ್ಲ. ಕಸವೆಲ್ಲಾ ತಳದಲ್ಲಿ ಉಳಿದು ಮೇಲೆ ನೀರು ತಿಳಿಯಾಗುವಂತೆ ಅವಳ ಮನಸ್ಸು ಸ್ಪಷ್ಟವಾಗಿ ಶುಭ್ರವಾಗಿದ್ದಿತು. ಆ ಶಾಂತಿ ಆಕೆಗೇ ಒಂದು ವಿಧವಾಗಿ ವಿಚಿತ್ರವಾಗಿ ತೋರಿತು. ಆಕೆ ಸುದರ್ಶನನ ಕೈಯ್ಯನ್ನು ಹಿಡಿದುಕೊಂಡು "ಅಪ್ಪಾ ಇನ್ನು ನನ್ನ ಕಾಲವಾಯಿತು. ದೇವರು ನಿಮ್ಮನ್ನೆಲ್ಲಾ ಸುಖವಾಗಿ ಇಟ್ಟಿರಲಿ. ನಿನಗೂ ಸೀತೆಗೂ ಮದುವೆಯಾದುದನ್ನು ನೋಡಿಬಿಟ್ಟಿದ್ದರೆ ನಾನು ಸುಖವಾಗಿ ಪ್ರಾಣಬಿಡುತ್ತಿದ್ದೆ. ನಾನು ಈ ಭೂಮಿಯಲ್ಲಿ ಇನ್ನು ಅನುಭವಿಸಬೇಕಾದುದು ಏನೂ ಇಲ್ಲ. ಇದರ ಹತ್ತರಷ್ಟು ನೂರರಷ್ಟು ಸಾವಿರದಷ್ಟು ಸುಖ ದೊರೆತರೂ ಮತ್ತೆ ಈ ಭೂಮಿಯಲ್ಲಿ ಹುಟ್ಟಿಬರುವುದು ಬೇಡ. ಈ ಸಲಕ್ಕೇ ಸಾಕು. ಆದರೆ ನೀನಂತೂ ಮದುವೆಯಾಗಲಿಲ್ಲ. ಹೋಗಲಿ. ನಿನ್ನ ಇಷ್ಟ. ಆದರೆ ಸೀತೆಗೆ ಹದಿನೆಂಟು ವಯಸ್ಸಾಗುತ್ತಾ ಬಂತು. ವೈದೇಹಿಯ ಮದುವೆ ಮಾಡಿದಂತೆ ಅನಂತು ಈ ಮದುವೆ ಮಾಡುವುದಿಲ್ಲ. "ನಾನು ಸುದರ್ಶನನಿಗೆ ಬಿ. ಎ. ಮಾಡಿಸಿದೆ. ಇನ್ನು ಅವನ ಸಂಸಾರ ಅವನು ಮಾಡಿಕೊಳ್ಳಲಿ" ಎನ್ನುತ್ತಾನೆ. ಅದೂ ಸರಿ. ಅವನು ತಾನೇ ಎಷ್ಟು ದಿನ ನಮ್ಮನ್ನು ಸಾಕುತ್ತಾನೆ. ಇನ್ನು ನಿಮ್ಮ ತಂದೆ ಮಾಡಿದ ಸಾಲವೋ? ಎಲ್ಲರೂ ಅನಂತುವಿನ ಮಾತಿಗಾಗಿ ಸುಮ್ಮನಿದ್ದಾರೆ. ನೀನು ಇವತ್ತಲ್ಲ ನಾಳೆ ಯಾವುದಾದರೂ ಕೆಲಸಮಾಡಿಕೊಂಡು ಸಂಪಾದನೆಮಾಡಿ ನಿಮ್ಮ ತಂದೆಯವರ ಸಾಲ ತೀರಿಸುತ್ತೀ ಎಂದು ಸುಮ್ಮನಿದ್ದಾರೆ. ಇಲ್ಲದೆ ಇದ್ದಿದ್ದರೆ ಇಷ್ಟು ಹೊತ್ತಿಗೆ ಎಷ್ಟು ದಾವಾ ಡಿಕ್ರಿ, ಬಿಕ್ರಿಮಾಡಿ ನಮ್ಮನ್ನು ಬೀದಿಯಲ್ಲಿ ನಿಲ್ಲಿಸುತ್ತಿದ್ದರೋ.

ಒಂದು ಗಳಿಗೆ ಸುಧಾರಿಸಿಕೊಂಡು ಸುಭದ್ರೆ ಮತ್ತೆ ಹೇಳಿದಳು. "ನನ್ನ ಅನಂತರ ನಿಮ್ಮಲ್ಲಿ ಅನಂತುವಿನ ವಿಶ್ವಾಸ ಇನ್ನೂ ಕಡಿಮೆಯಾಗುತ್ತದೆ. (ಸುದರ್ಶನನು ಅಮ್ಮ ನೀನು ಇನ್ನೂ ಬದುಕುತ್ತೀ. ಆರೋಗ್ಯವಾಗುತ್ತೆ. ಆ ಮಾತೆಲ್ಲಾ ಈಗ ಯಾಕೆ ಎಂದನು. ಸುಭದ್ರೆಯು ಸ್ವಲ್ಪ ನಕ್ಕು ಇನ್ನು ಗುಣವಾಗುವುದು ಒಂದೇ ಸಲ. ಗಂಗಾನೀರೇ ಔಷಧಿ. ನಾರಾಯಣ ಹರಿಯೇ ವೈದ್ಯ. ನನ್ನ ಮಾತನ್ನು ಪೂರ್ತಾ ಕೇಳಿಬಿಡು ಎಂದಳು.)

ಸುಭದ್ರೆ ಮುಂದುವರಿಸಿದಳು "ನನ್ನ ಆಸರೆ ಇರುವುದರಿಂದ ಸುದರ್ಶನ ಹೀಗೆ ತಿರುಗುತ್ತಿದ್ದಾನೆ. ಅವನ ಸಂಸಾರ ಅವನ ತಲೆಯ ಮೇಲೆ ಹಾಕುವುದು ಅವನ ಒಳ್ಳೆಯದಕ್ಕೇಯೆ" ಎಂದು ಅನಂತು ಹೇಳುತ್ತಿದ್ದಾನೆ. ನಾನು ಸಾಯುವುದಕ್ಕೆ ಮುಂಚೆ ನೀನು ನನಗೆ ಒಂದು ವಾಗ್ದಾನ ಮಾಡುತ್ತೀಯ? ನಾನು ಆಗ ಶಾಂತವಾಗಿ ಪ್ರಾಣಬಿಡುತ್ತೇನೆ ಎಂದಳು. ಸುದರ್ಶನನಿಗೆ ಅವಳು ಏನು ಕೇಳುತ್ತಾಳೆ ಎಂಬುದು ಗೊತ್ತಾಯಿತು. ಸುಭದ್ರೆಯ ಮುಖ, ಮುಂಕಾದ ದೀಪದ ಮಬ್ಬಿನಲ್ಲಿ ಅತಿ ದೀನವಾಗಿ ತೋರಿತು. ಸುದರ್ಶನನು "ಸಾಯಲು ಬಿದ್ದಿರುವ ಈ ತಾಯಿ ಕೇಳಿದುದನ್ನು ಕೊಡದಿರುವ ನಾನು ಪಾಪಿ" ಎಂದು ತಲೆ ಚಚ್ಚಿಕೊಂಡು "ಅಮ್ಮ ನಿನಗೆ ಬೇಕಾದುದೇನು ಕೇಳು" ಎಂದನು. ಸುಭದ್ರೆ ಒಂದು ಗಳಿಗೆ ಯೋಚಿಸಿ ನೀನು ಇದುವರೆಗೆ ದೇಶಕ್ಕಾಗಿ ಮಾಡುವುದನ್ನು ಮಾಡಿಯಾಯಿತು. ನೀನು ದೇಶಕ್ಕೆ ಮಗನಾದಂತೆ ನನಗೂ ಮಗ. ದೇಶಕ್ಕೆ ಮಾಡಿದಂತೆ ನನಗೂ ಮನೆಗೂ ಮಾಡಬೇಕು. ನಾನು ನಿನ್ನ ಆಸೆಯಿಂದ ಎಲ್ಲಾ ಕಷ್ಟಗಳನ್ನು ಸಹಿಸಿಕೊಂಡು, ವಿಧವೆಯಾಗಿ ಇವರ ಸೇವೆ ಮಾಡುತ್ತಾ ಇಷ್ಟು ವರುಷ ಕಳೆದೆ. ಇನ್ನು ಸೀತೆಯನ್ನು ಮತ್ತೆ ಅನಾಥಳನ್ನಾಗಿ ಇಲ್ಲಿ ಬಿಡಬೇಡ. ನಿಮ್ಮ ತಂದೆ ಅಂತಹ ಡಾಕ್ಟರು, ಯಾರೂ ಹೋಗದಿದ್ದ ಮಲೆನಾಡಿಗೆ ಹೋಗಿ ಜನರ ಸೇವೆಯಲ್ಲಿ ಪ್ರಾಣ ಒಪ್ಪಿಸಿದರು. ಅವರ ಸಾಲವನ್ನು ತೀರಿಸದಿದ್ದರೆ ಅವರ ಹೆಸರಿಗೆ ಕಳಂಕ. ಸೀತೆಯ ವಿವಾಹಕ್ಕೆ ಏರ್ಪಾಡು ಮಾಡು. ಯಾವುದಾದರೂ ಒಂದು ಕೆಲಸಕ್ಕೆ ಸೇರಿಕೋ. ಕೆಲವು ವರುಷ ಗಾಂಧಿ ಬೈರಾಗಿಯನ್ನು ಮರೆತು ಬಿಡು. ನನ್ನ ಮಾತನ್ನು ನಡೆಸುವೆಯಾ? ಎಂದಳು.

ಸುಭದ್ರೆ ಹೆಚ್ಚು ಮಾತನಾಡಲಿಲ್ಲ. ಸಾಯುವವರ ಮಗ್ಗುಲಲ್ಲಿರು ವವರಿಗೆ ಗೊತ್ತಾಗುವಂತೆ ಇದೇ ಅವಳ ಮಾತಿನ ಕೊನೆ ಎಂಬುದು ಸುದ ರ್ಶನನಿಗೆ ತಿಳಿಯಿತು. ಅವನು ಒಂದು ಗಳಿಗೆ ಯೋಚಿಸಿ "ಅಮ್ಮ ಹಾಗೆಯೇ ಆಗಲಿ. ನೀನು ಸುಮ್ಮನೆ ಮಲಗಿಕೊ" ಎಂದನು. ಸುಭದ್ರೆ ಅವನ ಕೈಯ್ಯನ್ನು ಸವರುತ್ತಾ "ಸುದರ್ಶನ ಸುದರ್ಶನ" ಎಂದು ಕಣ್ಣು ಮುಚ್ಚಿದಳು. ಅವಳ ಪ್ರಾಣಪಕ್ಷಿ ಯಾವಾಗ ಹಾರಿ ಹೋಯಿತೋ ಸುದರ್ಶನನಿಗೆ ತಿಳಿಯಲಿಲ್ಲ. ಆದರೆ ಒಂದು ಗಂಟೆಯ ನಂತರ ಇದ್ದಕ್ಕಿ ದ್ದಂತೆ ಅವಳು ಸತ್ತು ಹೋಗಿರುವಳೆಂದು ಅರಿತಾಗ ಸುದರ್ಶನನ ಕಣ್ಣಿಗೆ ಕತ್ತಲೆ ಕವಿದುಕೊಂಡಿತು. ಅವನ ಕಣ್ಣುಗಳಿಂದ ನೀರು ಧಾರಾಕಾರ ವಾಗಿ ಸುರಿಯಿತು. ಅವನ ಎಲ್ಲಾ ದುಃಖವೂ ಈ ಮೂಲಕ ತೊಳೆದು ಹೋಯಿತು. ನಾನು ಏನುಮಾಡಿದ್ದರೂ ಹೇಗಿದ್ದರೂ ಸರಿ ಎಂಬ ವಸ್ತು ಇಂದಿಗೆ ಮರೆಯಾಯಿತು. ನಾನು ನಿಜವಾಗಿಯೂ ಅನಾಥ ಎಂದು ಅವನು ಅರಿತನು.

ಮರಣಾನಂತರದ ಕ್ರಿಯೆಗಳು ಯಥಾಸಾಂಗವಾಗಿ ನಡೆದವು. ಸುಭದ್ರೆಯ ಮರಣವನ್ನು ಯಾರೂ ಹೆಚ್ಚಾಗಿ ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ. ಸುದರ್ಶನ, ಸೀತೆ ವೈದೇಹಿ ಇವರಿಗೆ ಹೊರತು ಉಳಿದವರಿಗೆಲ್ಲಾ ಅದು ನಿಧಾನವಾಗಿ ಮರೆಯತೊಡಗಿತು. ಒಂದು ದಿನ ಅನಂತು ಸುದರ್ಶನನಿಗೆ ಅಪ್ಪಾ, ನೀನು ಇನ್ನು ಸಂಪಾದಿಸದಿದ್ದರೆ ಆಗುವುದಿಲ್ಲ. ನಮ್ಮ ಭಾವ ನಮ್ಮ ಸೀತಾರಾಮುವಿನ ಸ್ನೇಹಿತರು ಮದರಾಸಿನಲ್ಲಿ ಭಾರಿ ವ್ಯಾಪಾರಿ ಗಳು. ಅವರಿಗೆ ಬುದ್ಧಿವಂತರಾದವರು ಒಬ್ಬರ ಸಹಾಯ ಬೇಕಂತೆ. ನಾನೂ ಸೀತಾರಾಮುವೂ ನಿನ್ನ ಹೆಸರನ್ನು ಹೇಳಿದೆವು. ನಮ್ಮ ಸಂಸಾರ ವೆಲ್ಲಾ ಅವರಿಗೂ ಗೊತ್ತು. ಅವರು ಬಹು ಸಂತೋಷದಿಂದ ನಿನ್ನನ್ನು ಕೆಲಸಕ್ಕೆ ಸೇರಿಸಿಕೊಳ್ಳಲು ಒಪ್ಪಿದ್ದಾರೆ. ತಿಂಗಳಿಗೆ 150 ರುಪಾಯಿ ಕೊಡು ತ್ತಾರೆ. ಒಂದೆರಡು ವರುಷಗಳಲ್ಲಿ ಸಂಬಳ ಇನ್ನೂ ಹೆಚ್ಚಿಸುವುದರಲ್ಲಿ ಸಂದೇಹವಿಲ್ಲ. ಯಾರಿಗೆ ಗೊತ್ತು; ನಿನ್ನ ಅದೃಷ್ಟ ಒಳ್ಳೆಯದಾಗಿದ್ದರೆ ನಿನ್ನನ್ನು ಪಾಲುಗಾರರನ್ನಾಗಿಯೂ ಅವರು ಮಾಡಿಕೊಳ್ಳಬಹುದು. ನಿನಗೆ ಬುದ್ಧಿಯೂ ಕಡಿಮೆ ಇಲ್ಲ. ಮನಸ್ಸು ಮಾಡಿದರೆ ನಿನಗೆ ಯಾವ ಕೆಲಸವೂ ಕಷ್ಟವಿಲ್ಲ ಎಂದನು. ಸುದರ್ಶನನು ಇಲ್ಲೇ ಇದ್ದು ಕೆಲಸ

ಮಾಡುತ್ತೇನೆ ಎಂದನು. ಅನಂತುವು ಇಲ್ಲಿ ನೀನು ಅಷ್ಟು ವರುಷದಿಂದ ಮಾಡಿದುದನ್ನು ನೋಡಲಿಲ್ಲವೆ? ಇನ್ನೆ ನಿನಗೆ ತಿಂಗಳಿಗೆ ನೂರಐವತ್ತು ರುಪಾಯಿ ಕೊಡುವವರು ಯಾರು? ನಿಮ್ಮ ತಂದೆ ಮಾಡಿರುವ ಸಾಲ ಹರಿಯುವುದೆಂತು? ಸೀತೆಯ ಮದುವೆಗೆ ನಾಲ್ಕು ಸಾವಿರ ಬೇಕಲ್ಲ ಎಂದು ಅನಂತು ಗದರಿಸಿದನು. ಸುದರ್ಶನನು ನಾಲ್ಕು ಸಾವಿರ ಬೇಡ. ನಾಲ್ಕು ರುಪಾಯಿನಲ್ಲಿಯೇ ಮಾಡೋಣ. ನಾಲ್ಕು ಸಾವಿರ ಮಾಡದಿದ್ದರೆ ಮದುವೆ ಅಲ್ಲ ಎಂದು ಎಲ್ಲಿ ಹೇಳಿದೆ ಎಂದನು. ಅನಂತುವು ನಮ್ಮ ಸಂಸಾರದಲ್ಲಿ ಹೇಗೆ ಮಾಡುವುದು ವಾಡಿಕೆಯೋ ಹಾಗೆ ಮಾಡಲೇಬೇಕು. ನಮ್ಮ ಮನೆಯ ಗೌರವಕ್ಕೆ ಅನುಸಾರವಾಗಿ ಮಾಡದಿದ್ದರೆ ನೋಡಿದವರು ನಗುತ್ತಾರೆ ಎಂದನು. ನೋಡಿದವರು ನಗುತ್ತಾರೆ ಎಂದು ನಾವು ಕೈಲಿ ದುಡ್ಡಿಲ್ಲದಿದ್ದರೂ ಸಾಲಮಾಡಿ ಇತರರಿಗೂ ಕೊಟ್ಟ ಮೇಲುಪಂಗ್ತಿ ಹಾಕುವುದಕ್ಕಾಗುವುದೇ ಎಂದ ಸುದರ್ಶನ. ಈ ವಾಗ್ವಾದದಿಂದ ಹೆಚ್ಚು ಪ್ರಯೋಜನವಿಲ್ಲವೆಂದು ಸುದರ್ಶನ ಸುಮ್ಮನಾದ. ಮಲ್ಲಿಗೆಹಳ್ಳಿಯಲ್ಲಿಯೇ ಕುಳಿತುಕೊಂಡು ಏನಾದರೂ ವ್ಯಾಪಾರ ಮಾಡುತ್ತೇನೆ ಮದರಾಸು ಬೇಡ ಎಂದ. ಆದರೆ ಅನಂತು ಈ ಹಳ್ಳಿಯಲ್ಲಿ ನಡೆಯುವ ವ್ಯಾಪಾರ ಅಷ್ಟರಲ್ಲಿಯೇ ಇದೆ. ಇಲ್ಲಿ ನಿನಗೆ ಮೂಲಧನ ಎಲ್ಲಿದೆ. ಆಗುವುದಿಲ್ಲ ಮದರಾಸಿಗೇ ಹೊರಡು ಎಂದ. ಸೀತೆ ಹೋಗಿಬಾ ಅಣ್ಣ ಎಂದು ಅತ್ತಳು. ವೈದೇಹಿಯೂ ಬಲಾತ್ಕರಿಸಿದಳು. ಅನಂತುವಿನ ಹೆಂಡತಿ ಜಾನಕಮ್ಮನವರೂ ಬೋಧಿಸಿದರು. ಸಾಲಗಾರರೆಲ್ಲಾ ಬಂದು—ಮದರಾಸಿನಲ್ಲಿ ಕೆಲಸ ಸಿಕ್ಕಿದೆಯಂತೆ. ಹೋಗಿ ಬನ್ನಿ. ಸಾಲದ ವಿಷಯ ಹಚ್ಚಿಕೊಳ್ಳಬೇಡಿ. ಅಲ್ಲಿಂದ ಹಿಂದಿರುಗಿದ ಮೇಲೆ ನೋಡೋಣ ಎಂದರು. ಇದೆಲ್ಲದುದರಲ್ಲಿಯೂ ಅನಂತುವಿನ ಕೈವಾಡವೇ ಇದ್ದಿತು. ಒಂದು ಸಲ ಕೋಪದಲ್ಲಿ ಸುದರ್ಶನ ನಮ್ಮ ತಂದೆ ಮಾಡಿದ ಸಾಲ ನಾನು ಕೊಡುವುದೇ ಇಲ್ಲ ಎಂದನು. ಆದರೆ ಕೊಟ್ಟೇ ತೀರಿಸಬೇಕೆಂಬುದು ಅವನ ಸಂಕಲ್ಪವಾಗಿದ್ದಿತು. ಅಂತೂ ಸೀತಾರಾಮು ಸುದರ್ಶನನನ್ನು ಬೆಂಗಳೂರಿಗೆ ಎಳೆದುಕೊಂಡು ಹೋಗಿ ಮದರಾಸು ರೈಲಿನಲ್ಲಿ ಕೂರಿಸಿ ಕಳುಹಿಸಿದನು.

ಸುದರ್ಶನ ಕನಸಿನಲ್ಲಿದ್ದವನಂತೆ ರೈಲಿನಲ್ಲಿ ಕುಳಿತನು. ಅವನಿಗೆ ಜಗತ್ತಿನಲ್ಲಿ ನಡೆಯುವುದೆಲ್ಲಾ ವಿಚಿತ್ರವಾಗಿ ತೋರಿತು. ಉಪ್ಪಿನ ಸತ್ಯಾ

ಗ್ರಹದ ಧೀರ, ಗ್ರಾಮಗಳನ್ನು ಸ್ವರ್ಗಗಳಾಗಿ ಮಾಡುತ್ತೇನೆಂದು ಜಂಭ ಹೊಡೆದುಕೊಂಡ ಆ ಸುದರ್ಶನ ಎಲ್ಲಿ? ಅಂಗಡಿ ಗುಮಾಸ್ತನಾಗಲು ಮದರಾಸಿಗೆ ಓಡುತ್ತಿದ್ದ ಈ ಸುದರ್ಶನ ಎಲ್ಲಿ? ವಿಧಿಯ ವಿಕಟ ನರ್ತನವೆಂದುಕೊಂಡು ಸುದರ್ಶನ ಮದರಾಸನ್ನು ತಲಪಿದ. ಅವನನ್ನು ಕೆಲಸಕ್ಕೆ ನಿಯಮಿಸಿಕೊಳ್ಳುವ ಯಜಮಾನರು ಸ್ಟೇಶನ್ನಿಗೆ ಒಬ್ಬ ಆಳನ್ನು ಕಳುಹಿಸಿದ್ದರು. ಅವರ ಅಂಗಡಿ ಆಫೀಸು ಎಲ್ಲಾ ಮುರಗಪ್ಪ ಮುದಲಿ ಬೀದಿಯಲ್ಲಿದ್ದಿತು. ಸುದರ್ಶನನು ಆಫೀಸಿಗೇ ಹೋದ. ಆಫೀಸಿನ ಮಹಡಿಯ ಮೇಲೆ ಅವನು ಉಳಿಯುವುದಕ್ಕೆ ಅವನಿಗೆ ಜಾಗ ಕೊಟ್ಟರು.

ಅವರದು ದೊಡ್ಡದಾದ ಒಟ್ಟೆ ಅಂಗಡಿ. ಸ್ಟಾಕು ಷೇರು ಇನ್ನೂ ಯಾವ ವ್ಯಾಪಾರದಲ್ಲಿ ಲಾಭ ಬಂದರೂ ಅದನ್ನೆಲ್ಲಾ ಮಾಡುತ್ತಿದ್ದರು. ಅವರ ಅಂಗಡಿ–ಆಫೀಸಿನಲ್ಲಿ ಇನ್ನೂ 3-4 ಗುಮಾಸ್ತರಿದ್ದರು. ಆದರೆ ಅವರಾರಿಗೂ ಇಂಗ್ಲಿಷು ಬರುತ್ತಿರಲಿಲ್ಲ. ಅವರಿಗೆಲ್ಲಾ ಬಹಳ ಕಡಿಮೆಯ ಸಂಬಳಗಳನ್ನು ಕೊಡುತ್ತಿದ್ದರು. ಸುದರ್ಶನನಿಗೆ ತಿಂಗಳಿಗೆ ನೂರಐವತ್ತು ರೂಪಾಯಿ ಕೊಡಲು ಅವರು ಒಪ್ಪಿದುದು ಸುದರ್ಶನನ ಮತ್ತಾವ ಗುಣಕ್ಕಾಗಿಯೂ ಅಲ್ಲ. ಅವನ ಇಂಗ್ಲಿಷ್‌ಗಾಗಿ. ಒಳ್ಳೆಯ ಇಂಗ್ಲಿಷ್ ಭಾಷೆಯಲ್ಲಿ ಚೆನ್ನಾಗಿ ಟೈಪ್‌ರೈಟರ್‌ನಲ್ಲಿ ಕಾಗದ ಬರೆದರೆ ಈಗಿನ ಎರಡರಷ್ಟು ಗಿರಾಗಳನ್ನು ಸಂಪಾದಿಸಿಕೊಳ್ಳಬಹುದೆಂದು ಅವರಿಗೆ ನಂಬಿಕೆಯಾಗಿದ್ದಿತು. ಅಂಗಡಿಯ ಯಜಮಾನರು ವ್ಯಾಪಾರದಲ್ಲಿ ಬಹಳ ಗಟ್ಟಿಗರು. ವ್ಯಾಪಾರಕ್ಕೆ ಪೂರ್ಣವಾಗಿ ಅವರು ಶರಣಾಗತರಾಗಿದ್ದರು ವ್ಯಾಪಾರದ ಹೊರತು ಅವರಿಗೆ ಇನ್ನೇನೂ ತಿಳಿದಿರಲಿಲ್ಲ. ವ್ಯಾಪಾರ, ಅದರ ಲಾಭ ನಷ್ಟ; ಲಾಭದಿಂದ ಕಟ್ಟಿಸಬಹುದಾದ ಮನೆಗಳು, ಮೋಟಾರು, ಧನಿಕರನ್ನು ಕುರಿತ ಮಾತು, ಇವೇ ಅವರ ಜಪತಪ ಪಾರಾಯಣಗಳಾಗಿದ್ದವು. ವ್ಯಾಪಾರದ ಸ್ನೇಹಿತರು, ಕಾರುಗಳನ್ನು ಇಟ್ಟಿರುವ ಸ್ನೇಹಿತರು ಇದರ ಹೊರತು ಅವರಿಗೆ ಬಂಧು ಬಳಗ ಆಪ್ತಮಿತ್ರ ಯಾರೂ ಇರಲಿಲ್ಲ. ಆ ಬಡಪಾಯಿಗೆ ಸಾಹಿತ್ಯ ಸತ್ಯ ಸೌಂದರ್ಯ ಸಾಮಾಜಿಕ ಸ್ನೇಹ ಗೃಹಜೀವನ ಒಂದೂ ಇರಲಿಲ್ಲ. ಅವನನ್ನು ನೋಡಿದವರಿಗೆ "ಅಯ್ಯೋ ಪ್ರಾಣಿ ಇದು ಯಾಕೆ ಹೀಗೆ ದುಡಿಯುತ್ತಿದೆ. ಕೊನೆಯಲ್ಲಿ ಎಲ್ಲವನ್ನೂ ಇಲ್ಲಿಯೇ ಬಿಟ್ಟು ಹೋಗಬೇಕಲ್ಲಾ" ಎಂದೆನ್ನಿಸುತ್ತಿದ್ದಿತು.

ಬರಿಯ ಅನಾಸಕ್ತವಾದ ಕರ್ಮದಿಂದಲೇ ಮುಕ್ತಿ ದೊರೆಯುವುದಾದರೆ ಆ ವ್ಯಾಪಾರಿ ಪ್ರಾಣಿಗೆ ಮುಕ್ತಿದೊರೆಯಬೇಕು. ಆದರೆ ಅನಾಸಕ್ತವಾದ ಕರ್ಮವನ್ನುಮಾಡಿ ಅನಂತರ ಮನಸ್ಸನ್ನು ಭಗವಂತನ ಕಡೆಗೆ ತಿರುಗಿಸಿದ ಹೊರತು ಮುಕ್ತಿ ದೊರೆಯುವುದಿಲ್ಲ. ಅನಾಸಕ್ತವಾದ ಕರ್ಮವೇ ಗುರಿಯಲ್ಲ. ಈ ವ್ಯಾಪಾರಿ ಧನಿಕರು ಸುದರ್ಶನನಿಗೆ ಒಂದುದಿನ " ನನ್ನ ಮನೆಯಲ್ಲಿ ಎರಡು ವರುಷದ ನನ್ನ ಮಗುವಿದೆ. ಅದಕ್ಕೆ ನಾನು ಯಾರು ಎಂಬುದು ಗೊತ್ತಿಲ್ಲ. ನಾನು ನಿತ್ಯ ಬೆಳಿಗ್ಗೆ ಐದುವರೆ ಗಂಟೆಗೆ ಮೋಟಾರಿನಲ್ಲಿ ಮನೆ ಬಿಡುತ್ತೇನೆ. ಮಧ್ಯಾಹ್ನದ ಊಟ ಎಲ್ಲೋ ? ರಾತ್ರೆ ಮನೆಗೆ ಹೋಗುವ ವೇಳೆಗೆ ಹತ್ತು ಗಂಟೆ ಹನ್ನೊಂದು ಗಂಟೆ. ಇನ್ನು ನನ್ನ ಮಗು ನನ್ನ ಮುಖ ನೋಡುವುದೆಲ್ಲಿ? ನಾನು ವ್ಯಾಪಾರಿಯಾದುದರಿಂದ ನನಗೆ ಭಾನುವಾರವೂ ಇಲ್ಲ ರಜವೂ ಇಲ್ಲ. ಹಬ್ಬವೂ ಇಲ್ಲ. ಹರಿದಿನವೂ ಇಲ್ಲ—ಎಂದರು. ನನ್ನ ಸ್ಥಿತಿಯೂ ಹೀಗೆಯೇ ಎಂದುಕೊಂಡು ಸುದರ್ಶನ ನಡುಗಿದನು.

ಸುದರ್ಶನ ಮುರಗಪ್ಪ ಮುದಲಿ ಬೀದಿಯ ಅಂಗಡಿಯಲ್ಲಿ ಕುಳಿತ ನಾಲ್ಕು ದಿನಗಳಲ್ಲಿಯೇ ಅಂಗಡಿಯ ಯಜಮಾನನಿಗೆ ಸುದರ್ಶನನ ಯೋಗ್ಯತೆ ಗೊತ್ತಾಯಿತು. ಆರು ತಿಂಗಳಿನಿಂದ ಬಿದ್ದಿದ್ದ ಹಳೆಯ ಪತ್ರ ವ್ಯವಹಾರವನ್ನೆಲ್ಲಾ ಸುದರ್ಶನ ಎರಡೇ ದಿನಗಳಿಗೆ ಮುಗಿಸಿದನು. ಅವನ ಕಾಗದವನ್ನು ನೋಡಿದ ಕೂಡಲೇ ಇದ್ಯಾರೋ ಒಳ್ಳೆಯ ಬುದ್ಧಿವಂತರು ಇಲ್ಲಿ ಸೇರಿಕೊಂಡಿದ್ದಾರೆಂದು ಜನ ಅಂಗಡಿಗೆ ಬರತೊಡಗಿದರು. ನಾಲ್ಕಾರು ತಿಂಗಳುಗಳಿಂದ ಮುಗಿಯದೆ ಉಳಿದಿದ್ದ ಅನೇಕ ವ್ಯವಹಾರಗಳನ್ನು, ಯಜಮಾನರ ಇಚ್ಛೆಗೆ ಅನುಸಾರವಾಗಿ ಸುದರ್ಶನ ಸರಸರನೆ ಮುಗಿಸಿದನು. ಎರಡು ತಿಂಗಳು ಕಳೆಯುವುದರೊಳಗಾಗಿ ಗಿರಾಕಿಗಳು ಸುದರ್ಶನನೇ ಯಜಮಾನನಿರಬಹುದೆಂದು ಅವನ ಬಳಿಯೇ ಮಾತುಕಥೆ ಯಾಡಿಕೊಂಡು ಹೋಗುತ್ತಿದ್ದರು. ಹೀಗೆ ಸುದರ್ಶನ ಮುರಗಪ್ಪ ಮುದಲಿಯ ಬೀದಿಯ ಆ ಅಂಗಡಿಗೇ ಕಣ್ಣಾದನು.

ಅಂಗಡಿಯ ಯಜಮಾನರು ವ್ಯಾಪಾರದ ಹೊರತು ಮತ್ತೇನನ್ನೂ ಅರಿಯದವರಾದರೂ ಸುದರ್ಶನನ ಶಕ್ತಿಯನ್ನು ಚೆನ್ನಾಗಿ ಕಂಡುಕೊಂಡರು. ಮೂರನೆಯ ತಿಂಗಳಿನಲ್ಲಿಯೇ ಅವನಿಗೆ ತಿಂಗಳಿಗೆ ಇನ್ನೂರು

ರುಪಾಯಿ ಸಂಬಳ ಗೊತ್ತುಮಾಡಿದರು. ಸುದರ್ಶನ ಎಲ್ಲಿ ಬಿಟ್ಟು ಹೋಗಿ ಬಿಡುತ್ತಾನೆಯೋ ಎಂಬುದು ಅವರ ಭಯವಾಯಿತು. ಅವರು ಸುದರ್ಶನನಿಗೆ "ಈ ನನ್ನ ವ್ಯಾಪಾರದಲ್ಲಿ ತಿಂಗಳಿಗೆ ಎರಡು ಸಾವಿರ ರುಪಾಯಿ ಲಾಭವುಂಟು. ನೀನು ಐದು ವರುಷ ಇಲ್ಲಿರಲು ಒಪ್ಪಿ ಮುಚ್ಚಳಿಕೆ ಬರೆದು ಕೊಡು. ನಿನ್ನನ್ನು ನಾಲ್ಕಾಣೆಯ ಲಾಭದ ಪಾಲುದಾರನನ್ನು ಮಾಡುತ್ತೇನೆ. ಐದು ವರುಷಗಳ ನಂತರ ನೀನಾಗಿಯೇ ಬಿಟ್ಟು ಹೋಗುವುದಿಲ್ಲ. ಅಥವ ನಿನ್ನ ಇಷ್ಟ" ಎಂದರು. ಸುದರ್ಶನನಿಗೆ ಒಳ್ಳೆಯ ಪೀಕಲಾಟಕ್ಕೆ ಬಂತು. ಪಿಶಾಚಿ ನನ್ನನ್ನು ಹೀಗೆ ಆಕರ್ಶಿಸುತ್ತಿದೆ ಎಂದುಕೊಂಡನು. ಐದು ವರುಷಗಳ ಕಾಲದೊಳಗೆ ತಂದೆಮಾಡಿರುವ ಸಾಲವನ್ನೂ ತೀರಿಸಿ ಸೀತೆಯ ಮದುವೆಗೆ ಹಣವನ್ನೂ ಒದಗಿಸಿ ಕೈಯಲ್ಲಿಯೂ 10 ಸಾವಿರ ರುಪಾಯಿ ಇಟ್ಟುಕೊಳ್ಳಬಹುದು. ಆಹ ಇದು ಎಷ್ಟು ಸುಲಭ. ಎಂತಹ ಆಸೆ. ಇದು ಪಿಶಾಚಿಯ ತಂತ್ರ. ಸಂದೇಹವಿಲ್ಲ. ನನ್ನ ಹಳ್ಳಿಯಲ್ಲಿ ನಾನು ಹತ್ತು ರುಪಾಯಿ ಬಾಳುವುದಿಲ್ಲ. ಇಲ್ಲಿ ತಿಂಗಳಿಗೆ ಐನೂರು ರುಪಾಯಿ! ಅಬ್ಬ. ನನಗಿಂತ ಹೆಚ್ಚು ಅರ್ಹರಾದವರೆಲ್ಲಾ ಹೊಟ್ಟೆಗಿಲ್ಲದೆ ಸಾಯುತ್ತಿದ್ದಾರೆ. ಲೋಕಕ್ಕೆಲ್ಲ ಅನ್ನ ಕೊಡುವ ರೈತ ದಿವಸಕ್ಕೆ ಒಂದು ಹೊತ್ತು ಊಟಮಾಡುತ್ತಿದ್ದಾನೆ. ನನಗೆ ಐದುನೂರು ರುಪಾಯಿ! ಇದು ಪಿಶಾಚಿಯ ಒಲೆ. ನನ್ನ ಆತ್ಮ ಅದರ ಕೈಗೆ ಸಿಕ್ಕಿತು. ನನ್ನಂತಹ ಅಪ್ರಯೋಜಕನಿಗೆ 500 ರುಪಾಯಿ ಕೊಡಬೇಕಾದರೆ, ಇನ್ನು ಎಷ್ಟು ಜನ ಕಷ್ಟಜೀವಿಗಳು ಹೊಟ್ಟೆಗಿಲ್ಲದೆ ಸಾಯುತ್ತಿದ್ದಾರೆಯೋ ನನಗೆ 500 ರುಪಾಯಿ ಕೊಡುತ್ತಿರುವುದನ್ನು ನೋಡಿದರೆ ನಿಜವಾಗಿಯೂ ನನ್ನಿಂದ ಏನೋ ಅಕಾರ್ಯ ನಡೆಯುತ್ತಿರುವಂತೆ ಕಾಣುತ್ತದೆ. ಹಣದ ಪಿಶಾಚಿ ಹಿಡಿದವನಿಗೆ ಇನ್ನು ಏನೂ ಬೇಕಿಲ್ಲ. ಭಗವಂತ ಈ ಆಸೆಯನ್ನು ಜಯಿಸಲಾರೆ; ಇದಕ್ಕೆ ಒಳಗಾಗಲೂ ಒಲ್ಲೆ. ಹಾವಿನ ಬಾಯಿನಲ್ಲಿ ಕಪ್ಪೆ ಸಿಕ್ಕಿದಂತೆ ಸಿಕ್ಕಿಕೊಂಡೆ. ಇದರ ಹಿಡಿತದಿಂದ ಕಾಪಾಡು—ಎಂದು ದೇವರಲ್ಲಿ ಮೊರೆಯಿಟ್ಟನು. ದೌರ್ಬಲ್ಯದ ಕಣ್ಣೀರು ಸುದರ್ಶನನ ಕಣ್ಣಿನಿಂದ ಧಾರೆಧಾರೆಯಾಗಿ ಹರಿಯಿತು.

ಮರುದಿವಸ ಸುದರ್ಶನನು ಈ ಉಸಬು ನಿಧಾನವಾಗಿ ನನ್ನನ್ನು ನುಂಗುತ್ತಿದೆ. ಚಂದ್ರನನ್ನು ರಾಹು ನುಂಗುವಂತೆ ನಾನು ಈ ಆಸೆಯ

ನಕ್ರದ ಬಾಯೊಳಕ್ಕೆ ಸಿಕ್ಕಿದೆ. ಪರಮಾತ್ಮ ನನಗೆ ಕೈಕೊಡು ಎಂದು ಕೊಂಡನು. ಅಂದಿನ ಟಪಾಲಿನಲ್ಲಿ ಅವನಿಗೆ ಶಂಕರನಿಂದ ಈ ಕಾಗದ ಬಂದಿತು.

"ನೀವು ಮದರಾಸಿನಲ್ಲಿ ಕೆಲಸಕ್ಕೆ ಸೇರಿರುವ ವಿಚಾರ ನಮಗೆ ತಿಳಿಯಿತು. ಮೊದಲು ಬಹಳ ಆಶ್ಚರ್ಯವಾಯಿತು. ಈಗ ಏನೂ ತೋಚದಾಗಿದೆ. ಮೊನ್ನೆ ಸರಸ್ವತಿಯನ್ನು ಕಂಡಿದ್ದೆ. ಆಕೆಗೂ ಬಹಳ ಆಶ್ಚರ್ಯವಾಗಿದೆ ಎಂದು ತಿಳಿಯಿತು. ನೀವು ಹೀಗೆ ಶಾಂತರಾಗಿ ಕೆಲಸಕ್ಕೆ ಸೇರಿದುದನ್ನು ನೋಡಿದರೆ ಇನ್ನೇನೂ ಹೋರಾಟವಿಲ್ಲವೆಂದೂ ಇನ್ನೂ ಸಾವಿರಾರು ವರುಷ ಭಾರತ ಹೀಗೆಯೇ ಇರಬೇಕೆಂದೂ ಕಾಣುತ್ತದೆ. ನನಗಂತೂ ಒಂದೂ ತೋರುವುದಿಲ್ಲ. ಇಷ್ಟನ್ನು ಮಾತ್ರ ಹೇಳಬಲ್ಲೆ. ನಿಮ್ಮ ಅಪಾರವಾದ ಶಕ್ತಿಯನ್ನು ಬರಿಯ ಹಣದ ಗುಣಾಕಾರಕ್ಕೆ ವಿನಿಯೋಗಿಸಿ ಬಿಡಬೇಡಿ. ನೀವು ಎಷ್ಟು ಹಣ ಸಂಪಾದಿಸಿದರೂ ನಿಮ್ಮ ಮನೆ ನಿಮ್ಮ ಸಂಸಾರ ಸರಿಪಡಿಸಿಕೊಳ್ಳಲು ಉಪಯೋಗಿಸಬಹುದು. ಆದರೆ ನಿಮ್ಮಂತವರ ಬುದ್ಧಿಯೂ ಜ್ಞಾನವೂ ತ್ಯಾಗವೂ, ಬರಿಯ ಒಂದು ಸಂಸಾರದ ವ್ಯವಸ್ಥೆಗೇ ಆದರೆ ವ್ಯರ್ಥವಾಗಿಬಿಡುವುದು. ಗಾಳಿ ಮಳೆ ಬೆಳಕು ಸೂರ್ಯ ಚಂದ್ರರಂತೆ ನಿಮ್ಮ ಶಕ್ತಿ ದೇಶಕ್ಕೆ ಸೇರಿದುದು. ಅದನ್ನು ಒಂದು ಮನೆ ಸಂಸಾರಕ್ಕೆ ಮಾತ್ರ ಉಪಯೋಗಿಸಲು ಪ್ರಯತ್ನಿಸುವುದು ಗಾಳಿಗೆ ಬೀಗ ಹಾಕಿದಂತೆ".

ಸುದರ್ಶನನಿಗೆ ಶಂಕರನ ಕಾಗದದ ಅವಶ್ಯಕತೆ ಇರಲಿಲ್ಲ. ಅವನ ಮನಸ್ಸು ಅವನ ಕೆಲಸದಿಂದ ವಿಮುಖವಾಗಿತ್ತು. ತಾಯಿಗೆ ಕೊಟ್ಟ ವಾಗ್ದಾನ, ತಂದೆಯ ಸಾಲ ಸೀತೆಯ ವಿವಾಹ ಅನಂತುವಿಗೆ ಸಂಸಾರದ ಹೊರೆಯನ್ನು ಸ್ವಲ್ಪ ಕಡಿಮೆಮಾಡುವ ಆಸೆ ಇವು ಅವನನ್ನು ಮದರಾಸಿಗೆ ಎಳೆದು ತಂದಿದ್ದವು. ಆದರೆ ಅವನ ಮನಸ್ಸು ಹಳ್ಳಿಯಲ್ಲಿಯ ತನ್ನ ಕೆಲಸದಲ್ಲಿಯೇ ಸಿಲುಕಿಕೊಂಡಿತ್ತು. ಮದರಾಸಿನಲ್ಲಿದ್ದ ಪ್ರತಿಯೊಂದು ದಿನವೂ ವ್ಯರ್ಥವೇ ಆದಂತೆ ಅವನ ದೇಹದ ರಕ್ತವನ್ನೂ ಶಕ್ತಿಯನ್ನೂ ಹೀರುತ್ತಿದ್ದಂತೆ ಅವನಿಗೆ ತೋರಿತು. ಆತನ ಯಜಮಾನ ವ್ಯಾಪಾರಿ "ಇಷ್ಟು ಲಾಭ ಬಂದಿತು. ಇದುವರೆಗೆ ನನ್ನ ಲೆಕ್ಕಾಚಾರವನ್ನೆ ಒಪ್ಪದಿದ್ದ ಆ ಕರಾಚಿಯ ವರ್ತಕ ನಿನ್ನ ಕಾಗದ ಹೋದಮೇಲೆ ನಾನು

ಮೊದಲು ಹೇಳಿದುದನ್ನೇ ಒಪ್ಪಿದ್ದಾನೆ" ಎಂದನು. ಸುದರ್ಶನನಿಗೆ ಬುದ್ಧಿ ಹೃದಯವನ್ನು ಮೋಸಮಾಡುತ್ತಿರುವಂತೆ ತೋರಿತು. ದೇವರು ಕೊಟ್ಟ ನನ್ನ ಬುದ್ಧಿ, ಶಕ್ತಿಗಳ ವ್ಯಭಿಚಾರವಾಗುತ್ತಿದೆ. ಎಂದು ಅವನು ಕೊರಗಿದನು. ಮತ್ತೆ ಮತ್ತೆ ಅಶಾಂತಿ; ಶಂಕರ ತಿಮ್ಮಪ್ಪ ಶ್ರೀಕಂಠ ಶ್ರೀಧರ ಸರಸ್ವತಿ ಮಲ್ಲಿಗೆಹಳ್ಳಿಯ ಯೋಚನೆ. ಸುದರ್ಶನನಿಗೆ ಅಂಗಡಿಯಲ್ಲಿ ಕುಳಿತಿದ್ದಾಗಲೆಲ್ಲಾ ಇದೇ ಯೋಚನೆ; ರಾತ್ರಿ ಇದೇ ಕನಸು ನೋಟ. ಅವನಿಗೆ ಮದರಾಸಿನ ಮೇಲೆ ದ್ವೇಷವೇ ಉಂಟಾಯಿತು. ಏನೂ ಬೇಡ ಸುಖವೂ ಬೇಡ ಸಂಪಾದನೆಯೂ ಬೇಡ, ನನ್ನ ಹಳ್ಳಿಯಲ್ಲಿ ನಾನು ಇದ್ದರೆ ಸಾಕು ಎಂಬುದೇ ಅವನ ಆಸೆಯಾಯಿತು. ಮದರಾಸಿನ ಅಶಾಂತಿ, ಕೃತ್ರಿಮ, ಥಳಕು, ಜೀವನದ ಹೋರಾಟ, ಹಣವನ್ನು ಹೇಗೆ ದುಡಿದಿದ್ದರೂ ಅದಕ್ಕೆ ದೊರೆಯುವ ಬೆಲೆ ಇವೆಲ್ಲಾ ಅವನಿಗೆ ಅಸಹ್ಯವಾದುವು. ಆಧುನಿಕ ನಾಗರೀಕತೆ ಧನಪಿಶಾಚಿಗೆ ಪೂರ್ಣವಾಗಿ ದಾಸನಾಗಿದ್ದಂತೆ ತೋರಿತು. ಯಾವ ಮಾರ್ಗದಿಂದಲೋ ಹಣ ಸಂಪಾದನೆಮಾಡಿ ಸುಖವಾಗಿದ್ದರೆ ಅದೇ ಮೋಕ್ಷ; ಹಣವು ಸುಖಕ್ಕೆ ದಾರಿಯಾಗುವುದರ ಬದಲು ಹಣವೇ ಒಂದು ಗುರಿಯಾಗಿದೆ ಎಂಬುದು ಅವನಿಗೆ ಸ್ಪಷ್ಟವಾಯಿತು. ಮನುಷ್ಯತ್ವ ದಯೆ ಅಹಿಂಸೆ ಸಾತ್ವಿಕ ಭಾವನೆಗಳೆಲ್ಲಾ ಮದರಾಸಿನ ನಾಗರೀಕತೆಯ ಅಶಾಂತಿಗೆ ದೂರವಾಗಿದ್ದುವ. ತ್ಯಾಗಮೂರ್ತಿ ಗಾಂಧಿ "ಇದು ಮಾತ್ರವೇ ಜೀವವಲ್ಲ. ಬೇರೆ ದೃಷ್ಟಿಯೂ ಇದೆ. ಹಳ್ಳಿಗಳ ದಾರಿದ್ರ್ಯ, ದೀನತೆ ಅವಿದ್ಯೆ ಅಜ್ಞಾನ ಮೂಢಭಕ್ತಿ ಮೂಢ ನಂಬಿಕೆ ಇವನ್ನೆಲ್ಲಾ ಮುಚ್ಚಿಕೊಂಡು ನಿಜವಾದ ಶಕ್ತಿ ಅಲ್ಲಿದೆ. ಈ ಮೂಢ ನಂಬಿಕೆಗಳ ಬೂದಿಯನ್ನು ಊರುಬಿದರೆ ನಿಜವಾದ ಭಾರತ ಹಳ್ಳಿಯಲ್ಲಿ ಜ್ಯೋತಿಯಂತೆ ಪ್ರಕಾಶಿಸುವುದು. ಈ ಬಾಳಿಗೆ ಈ ಅಮೃತತತ್ವಕ್ಕೆ ಇದೋ ಆಹ್ವಾನ" ಎಂದು ಕರೆದಿದ್ದಾನೆ. ಆ ಸಂದೇಶ ಕಿವಿಗೆ ಮುಟ್ಟಿಯೂ ಹೀಗೆ ಈ ನಗರದ ನರಕದಲ್ಲಿ ಬಿದ್ದಿದ್ದೇನಲ್ಲ ಎಂದು ಸುದರ್ಶನ ಕೊರಗಿದನು.

ಸುದರ್ಶನನ ಮನಸ್ಸು ಕೆಲಸದ ಕಡೆ ಹೋಗಲಿಲ್ಲ. ಅವನ ಮನಸ್ಸಿನ ಶಾಂತಿ ದೂರವಾಯಿತು. ಆಹಾರ ನಿದ್ರೆ ಕಡಿಮೆಯಾಯಿತು. ಈ ನಾಗರೀಕತೆ ಬರೀ ವನ ಮೃಗ-ವ್ಯಾಘ್ರಗಳ ಧರ್ಮ. ಪಾಶ್ಚಾತ್ಯ ನಾಗರೀಕತೆ ಪೈಶಾಚಿಕ ನಾಗರೀಕತೆ ಎಂಬುದನ್ನು ತೋರಿಸುವಂತೆ ಎರಡನೆಯ

ಮಹಾಯುದ್ಧ ನಮ್ಮ ತಲೆಮಾರಿನಲ್ಲಿಯೇ ಪ್ರಾರಂಭವಾಯಿತು. ಮತ್ತೊಂದು ಹೋರಾಟ ಎಂಬ ಮಾತುಗಳು ಗಾಂಧಿಯವರ ಬಾಯಿನಿಂದ ಪದೇ ಪದೇ ಬರತೊಡಗಿದವು. ಮದರಾಸಿನಲ್ಲಿ ಕುಳಿತಲ್ಲಿಯೇ ಸುದರ್ಶನ ತನಗೆ ತಿಳಿಯದಂತೆಯೇ ನಿಧಾನವಾಗಿ ನಿಶ್ಶಕ್ತನಾಗತೊಡಗಿದ್ದನು. ಇದ್ದಕ್ಕಿದ್ದಂತೆ ಹಿಂದಲ ಶ್ರಮವೆಲ್ಲಾ ಸೇರಿಕೊಂಡು ಅವನನ್ನು ಜರ್ಝರಿತ ಮಾಡಿದವು. ಜ್ವರ ಜೋರಾಗಿ ಬಡಿಯಿತು. ಸನ್ನಿಯ ತರಹ ಆಗಿ ಸುದರ್ಶನ ಅಜ್ಞಾನದಲ್ಲಿಯೂ ಮಲ್ಲಿಗೆಹಳ್ಳಿ, ಮುಂದಲ ಹೋರಾಟ ಇವುಗಳನ್ನೇ "ಉಪನ್ಯಾಸಿಸುತ್ತಿದ್ದನು." ಅವನ ಸ್ಥಿತಿಯನ್ನು ನೋಡಿದ ವೈದ್ಯರು ಇವನಿಗೆ ರೋಗ ಹೆಚ್ಚಾಗಿಲ್ಲ. ಆದರೆ ಮನಸ್ಸಿಗೆ ಅಶಾಂತಿ. ಇಲ್ಲಿದ್ದರೆ ಇವನಿಗೆ ಖಂಡಿತ ಗುಣವಾಗುವುದಿಲ್ಲ. ಆದುದರಿಂದ ಇವನನ್ನು ಇವನ ಊರಿಗೆ ಕಳುಹಿಸಿಬಿಡಿ ಎಂದರು. ಸುದರ್ಶನನೂ ತನ್ನ ಯಜಮಾನ ವ್ಯಾಪಾರಿಗಳಿಗೆ—ಹೌದು ನನಗೆ ಇರುವುದು ಕಾಯಿಲೆ ಅಲ್ಲ. ನನಗೆ ಬೇಕಾದುದು ಔಷಧಿಯಲ್ಲ. ಇಲ್ಲಿ ಅಂಗಡಿಯಲ್ಲಿ ಸುಳ್ಳು ಹೇಳುತ್ತಾ ಕುಳಿತಿರುವುದರ ಬದಲು ನನ್ನ ಹಳ್ಳಿಯಲ್ಲಿ ಹೊಲಗಳ ಬಯಲಿನಲ್ಲಿ ಹಸಿರು ಪೈರನ್ನು ನೋಡುತ್ತಾ ಕುಳಿತಿರಬೇಕು. ಈ ಮೋಟಾರುಗಳ ಧೂಳನ್ನು ಕುಡಿಯುವ ಬದಲು ನದಿಯ ಮೇಲೆ ಬೀಸಿ ಚೈತನ್ಯ ಜೀವ ಕಣಗಳನ್ನು ಹೊತ್ತುಕೊಂಡು ಬರುವ ತೆಂಗಾಳಿಯನ್ನು ಸೇವಿಸಬೇಕು. ಗಿರಣಿಗಳ ಈ ಕೂಗನ್ನು ಕೇಳುವ ಬದಲು ಅಲ್ಲಿಯ ಮರಗಳಲ್ಲಿ ಕುಳಿತು ಹಾಡುವ ಹಕ್ಕಿಗಳ ಗೀತವನ್ನು ಕೇಳಬೇಕು. ವಿಕಟವಾಗಿ ಕೃತಕವಾಗಿ ನಟನೆಗಾಗಿಯೇ ವರ್ತಿಸುವ ಈ ನಾಗರೀಕತೆಯ ಆಪಾಥಭೂತಿಗಳನ್ನು ಮರೆತು, ಮನುಷ್ಯನನ್ನು ನಿಜವಾದ ಮನುಷ್ಯತ್ವದಲ್ಲಿ ಅವನು ಇರುವಂತೆ ಸ್ವಾಭಾವಿಕವಾಗಿ ನೋಡಬೇಕು. ಈ ಪಟ್ಟಣದಿಂದ ಆ ಹಳ್ಳಿಗೆ ಹೋಗಬೇಕು. ಈ ನರಕದಿಂದ ಆ ಸ್ವರ್ಗಕ್ಕೆ ಹೋಗಬೇಕು. ಈ ಸಂಕುಚಿತದಿಂದ ಆ ವಿಸ್ತಾರಕ್ಕೆ ಹೋಗಬೇಕು. ಈ ಪಾರತಂತ್ರದಿಂದ ಆ ಸ್ವತಂತ್ರಕ್ಕೆ ಹೋಗಬೇಕು. ಹೌದು ಸ್ವತಂತ್ರ !

ಹೀಗೆಯೇ ಇನ್ನೂ ಸುದರ್ಶನ ಎಷ್ಟು ಹರಟುತ್ತಿದ್ದನೋ. ವೈದ್ಯರು ಅವನ ಮಾತನ್ನು ನಿಲ್ಲಿಸಿದರು. ಅಂಗಡಿಯ ಯಜಮಾನರಿಗೆ "ಇವನಿಗೆ ಇಲ್ಲಿದ್ದರೆ ಗುಣವಾಗುವುದಿಲ್ಲ. ಇವನಿಗಿರುವುದು ರೋಗವಲ್ಲ. ಮನೋ

ವೇದನೆ. ಈ ರೋಗಕ್ಕೆ ಔಷಧಿಯಿಲ್ಲ. ಇವನನ್ನು ಇವನ ಹಳ್ಳಿಗೆ ಸಾಗಿಸಿ'' ಎಂದರು. ಅಂಗಡಿ ಯಜಮಾನರು ಸುದರ್ಶನನನ್ನು ರೈಲಿನಲ್ಲಿ ಕೂರಿಸಿ ಊರಿಗೆ ಕಳುಹಿಸಿದರು. ಸುದರ್ಶನ ಮಲ್ಲಿಗೆಹಳ್ಳಿಗೆ ಬಂದ ನಾಲ್ಕಾರು ದಿನಗಳಲ್ಲಿಯೇ ನೀರಿನಿಂದ ಎತ್ತಿದ್ದ ಮೀನನ್ನು ಮತ್ತೆ ನೀರಿಗೇ ಬಿಟ್ಟಂತೆ ಮೊದಲಿನಂತೆ ಗೆಲುವಾದನು. ಇನ್ನು ಇವನನ್ನು ಮಾತನಾಡಿಸಿ ಪ್ರಯೋಜನವಿಲ್ಲವೆಂದು ಅನಂತು ಸಹ ಸುಮ್ಮನಾದನು.

---

## ೩೭. ಸ್ವತಂತ್ರ ಭಾರತ

ಸಾವಿರದ ಒಂಬೈನೂರ ಮುವತ್ತೊಂಭತ್ತನೆಯ ವರ್ಷ; ವರ್ಸೇಲ್ಸ್ ಒಪ್ಪಂದದ ಅನ್ಯಾಯದ ಫಲವಾಗಿ ನಮ್ಮ ತಲೆಮಾರಿನಲ್ಲಿಯೇ ಈ ಎರಡನೆಯ ಜಗತ್ತಿನ ಮಹಾ ಯುದ್ಧ ಪ್ರಾರಂಭವಾದಂದಿನಿಂದ, ಭಾರತದ ಸ್ಥಿತಿ ಈ ಯುದ್ಧದ ದೆಸೆಯಿಂದ ಬದಲಾವಣೆ ಹೊಂದುವುದೆಂದು ಭಾರತೀಯರೆಲ್ಲ ಆಶಿಸಿದರು. ಯುದ್ಧ ಪ್ರಾರಂಭವಾದ ಕೂಡಲೆ ಗಾಂಧಿಯವರು ಬ್ರಿಟಿಷರಿಗೇ ಜಯವಾಗಬೇಕೆಂದು ಕೋರಿದರು. ನಿಧಾನವಾಗಿ ಜಗತ್ತಿನ ರಾಷ್ಟ್ರಗಳೆಲ್ಲ ಈ ಜ್ವಾಲೆಗೆ ಸಿಲುಕತೊಡಗಿದವು. "ನಮ್ಮ ದೇಶವನ್ನು ರಕ್ಷಿಸಲು ನಾವು ಸಿದ್ಧವಾಗಿದ್ದೇವೆ. ನಮ್ಮ ಸ್ವಾತಂತ್ರ್ಯಕ್ಕಾಗಿ ನಾವು ಯಾವ ತ್ಯಾಗಕ್ಕೂ ಸಿದ್ಧರಾಗಿದ್ದೇವೆ. ರಕ್ತದ ಕಾಲುವೆ ಹರಿಸಲೂ ಹರಿಸುತ್ತೇವೆ. ಆದರೆ ಹಾಗೆ ಹೊಡೆದಾಡುವುದಕ್ಕಾದರೂ ನಮಗೆ ಸ್ವಾತಂತ್ರ್ಯ ಕೊಡಿ'' ಎಂದು ಭಾರತೀಯರು ಕೇಳತೊಡಗಿದರು. ಈ ಯುದ್ಧದ ಧ್ಯೇಯವೇನು ಎಂದು ಜಗತ್ತು ಪ್ರಶ್ನಿಸತೊಡಗಿತು. ತಾವು ಹೇಳಿದುದು ಜಗತ್ತಿಗೆ ಕೇಳಿಸುವುದಿಲ್ಲ ಎಂದು ತಿಳಿದಾಗ ಬ್ರಿಟಿಷರು ಮೆತ್ತಗೆ "ಈ ಯುದ್ಧ ಜಗತ್ತಿನ ಸ್ವಾತಂತ್ರ್ಯಕ್ಕಾಗಿ'' ಎಂದರು. "ಹಾಗಾದರೆ ಭಾರತಕ್ಕೆ ಸ್ವಾತಂತ್ರ್ಯವನ್ನು ಕೊಡಿ. ಭಾರತ ತನ್ನ ದೇಶವನ್ನು ತಾನು ಕಾಯ್ದುಕೊಳ್ಳಲಿ'' ಎಂದು ಜಗತ್ತಿಗೆ ಜಗತ್ತೇ ಕೂಗಿತು. ಸರ್ಕಾರ ಒಂದು ಕಡೆಯಿಂದ ಭಾರತೀಯರನ್ನು ಸೆರೆಹಿಡಿಯತೊಡಗಿತು. ಜವಹರ್‌ಲಾಲ್ ನೆಹ್ರುರವರಿಗೆ ನಾಲ್ಕು ವರುಷ ಶಿಕ್ಷೆ ವಿಧಿಸಿತು. ಸರ್ವಾಧಿಕಾರಿಗಳ ಪ್ರಾಬ

ಲ್ಯವನ್ನು ಅಡಗಿಸಿ ಪ್ರಪಂಚದ ಎಲ್ಲಾ ರಾಷ್ಟ್ರಗಳ ಸ್ವಾತಂತ್ರ್ಯವನ್ನೂ ಕಾಯಲು ಪ್ರಾರಂಭಿಸಿದ ಯುದ್ಧದಲ್ಲಿ ಅಹಿಂಸಾ ವಾದಿಯಾದ ಜವಹಿರ್ ಲಾಲ್ ನೆಹ್ರುರವರಿಗೆ ನಾಲ್ಕು ವರುಷ ಕಾರಾಗ್ರಹ! ಜವಹಿರ್‌ಲಾಲ್ ನೆಹರುರವರು ಪ್ರಾರಂಭದಿಂದಲೂ ಸರ್ವಾಧಿಕಾರಿ ಮತ್ತು ಫೇಸಿಸ್ಟ್ ವಿರೋಧಿಗಳು. ಅಬಿಸೀನಿಯಾದ ಮೇಲೆ ಬಿದ್ದ ಇಟಲಿಯನ್ನು ಜವಹಿರ್ ಲಾಲ್ ನೆಹರುರವರು ವಿರೋಧಿಸಿದಾಗ ಬ್ರಿಟನ್ನು ಸುಮ್ಮನೆ ಇದ್ದಿತು. ಸ್ಪೈಯಿನ್ ಪ್ರಜಾಪ್ರಭುತ್ವದ ನಾಶವನ್ನು ಕುರಿತು ನೆಹರುರವರು ಕೊರಗು ತ್ತಿದ್ದಾಗ ಇಟಲಿ ಜರ್ಮನಿಗಳು ಫ್ರಾಂಕೋವಿಗೆ ಸೈನ್ಯ ಮತ್ತು ಮದ್ದು ಗುಂಡು ಸಹಾಯ ಮಾಡುತ್ತಿದ್ದುವು. ಜಪಾನಿನ ಹೊಡೆತದಿಂದ ನೊಂದ ಚೀಣಾವಿಗೆ ಸಹಾಯ ಮಾಡಲು ನೆಹರುರವರ ಬೆಂಬಲದಿಂದ ಒಂದು ವೈದ್ಯ ಮಂಡಲಿ ಚೀಣಾಕ್ಕೆ ಹೋಯಿತು. ಆಗ ಜಪಾನಿಗಳು ಚೀನಾದವ ರನ್ನು ಹೊಡೆಯಲು ಇಂಗ್ಲೆಂಡ್ ಅಮೆರಿಕಾದಲ್ಲಿ ತಯಾರಾದ ಮದ್ದು ಗುಂಡುಗಳನ್ನು ಉಪಯೋಗಿಸುತ್ತಿದ್ದರು. ಹೀಗೆ ಆ ಜನ್ಮ ಫೇಸಿಸ್ಟ್ ವಿರೋಧಿ ಜವಹಿರ್‌ಲಾಲ್ ನೆಹ್ರುರವರನ್ನು, ಬ್ರಿಟಿಷ್ ಸರ್ಕಾರ ಜಗತ್ತಿನ ಸ್ವಾತಂತ್ರ್ಯ ಯುದ್ಧದ ಹೆಸರಿನಲ್ಲಿ ಖೈದುಮಾಡಿತು. ಮಹಾತ್ಮಾ ಗಾಂಧಿ ಯವರು ಬಯಸಿದ ಎಲ್ಲಾ ನಾಗರೀಕ ಪ್ರಜೆಗಳ ಹಕ್ಕು ಆದ ವಾಕ್ ಸ್ವಾತಂತ್ರ್ಯ ಸಹ ಭಾರತೀಯರಿಗೆ ದೊರೆಯದುದಾಯಿತು. ಭಾರತದ ನಲವತ್ತು ಕೋಟಿ ಪ್ರಜೆಗಳನ್ನೂ ಗಾಂಧಿಯವರ ಆತ್ಮಶಕ್ತಿಯನ್ನೂ ಜವ ಹಿರ್‌ಲಾಲ್ ನೆಹರುರವರ ಜಗತ್ ಪ್ರೇಮವನ್ನೂ ಬ್ರಿಟಿಷರು ಈ ಯುದ್ಧ ಕ್ಕೆ ನಿಯೋಗಿಸಿಕೊಳ್ಳಬಹುದೆಂದು ಎಲ್ಲರೂ ಬಯಸಿದರು. ಆದರೆ ಬ್ರಿಟ ನ್ನಿನಲ್ಲಿ ಅಂತಹ ದೂರದರ್ಶಿಗಳಾದ ರಾಜತಂತ್ರಜ್ಞರು ಇಲ್ಲ. ಭಾರತ ದಲ್ಲಿ ವಾಕ್ ಸ್ವಾತಂತ್ರಕ್ಕಾಗಿ ದಸ್ತಗಿರಿಗಳು ಪ್ರಾರಂಭವಾದುವು. ವಾಕ್ ಸ್ವಾತಂತ್ರ್ಯ ಚಳುವಳಿಯ ಭಾರವನ್ನು ಗಾಂಧಿಯವರೇ ವಹಿಸಿದ್ದರು.

ಗಾಂಧಿಯವರು ಪೂರ್ಣ ಅಹಿಂಸಾವಾದಿಗಳಾಗಿದ್ದವರಿಗೆ ಮಾತ್ರ ಸತ್ಯಾಗ್ರಹಿಯಾಗಲು ಅಪ್ಪಣೆ ಕೊಡುತ್ತಿದ್ದರು. ಇಂತಹ ಸತ್ಯಾಗ್ರಹಿಗಳಲ್ಲಿ ಮೊದಲನೆಯವರು ಆಚಾರ್ಯ ವಿನೋಭಭಾವೇ. ಅನೇಕ ಸಹಸ್ರ ಜನರ ದಸ್ತಗಿರಿ ನಡೆಯಿತು. ಸುದರ್ಶನನ ಬಂಧನವೂ ನಡೆಯಿತು. ಭಾರತ ದಲ್ಲಿ ಬ್ರಿಟಿಷರನ್ನು ಕುರಿತ ದ್ವೇಷ ಬೆಟ್ಟವಾಗಿ ಬೆಳೆಯಿತು. ಗಾಂಧಿಯ

ವರೇ, "ಭಾರತದಲ್ಲಿ ಬ್ರಿಟಿಷರನ್ನು ಕಂಡರೆ ಇರುವ ಅತೃಪ್ತಿಯಿಂದ ನನಗೆ ಬಯವಾಗುತ್ತಿದೆ" ಎಂದರು. ಅಮೆರಿಕಾದಲ್ಲಿಯೂ "ಭಾರತ ದೊಂದಿಗೆ ನ್ಯಾಯವಾಗಿ ನಡೆದುಕೊಳ್ಳಿ" ಎಂಬ ಕೂಗು ಹೊರಟಿತು. ಪೆರಲ್ ಹಾರ್ಬರ್, ಸಿಂಗಪುರ್, ಮಲಯ, ಬರ್ಮಾ ಎಲ್ಲಾ ಆಗಿಹೋಯಿತು. ಬ್ರಿಟಿಷ್ ಸರ್ಕಾರದವರು ಪಂಡಿತ್ ನೆಹರುರವರನ್ನು ಬಿಡುಗಡೆ ಮಾಡಿದರು. ಭಾರತೀಯರ ಕಣ್ಣಿಗೆ ಮತ್ತೆ ಮಣ್ಣೆರಚಲು ಸರ್ ಸ್ಟ್ಯಾಫರ್ಡ್ ಕ್ರಿಪ್ಸರು ಭಾರತಕ್ಕೆ ಬಂದರು. ಸರ್ ಸ್ಟ್ಯಾಫರ್ಡ್ಡರ ಹೆಮ್ಮೆ ಯಡಗಿಸಲು ಚರ್ಚಿಲ್ಲರು ಅವರನ್ನು ಭಾರತಕ್ಕೆ ಕಳುಹಿಸಿದರು ಎಂದೂ ಕೆಲವರು ಹೇಳುತ್ತಾರೆ. ಆಗ ಭಾರತದ ಸ್ಥಿತಿ ಕುರಿತು ಲೂಯಿ ಫಿಷರ್ ಹೀಗೆ ಹೇಳಿದರು.

"ಭಾರತ ಮುಖ್ಯ ಸಮಸ್ಯೆಯನ್ನು ಕುರಿತು ಯಾರೂ ಹೇಳುವುದೇ ಇಲ್ಲ. ಯಾಕೆಂದರೆ ಭಾರತ ಸ್ವತಂತ್ರವಾದ ಹೊರತು ಈ ಸಮಸ್ಯೆ ತೀರ್ಮಾನವಾಗುವಂತೆ ಇಲ್ಲ. ಭಾರತದ ಸಮಸ್ಯೆ ಆರ್ಥಿಕವಾದದ್ದು. ಭಾರತದ ಜನ ಸಂಖ್ಯೆ ಪ್ರತಿ ವರುಷವೂ 50 ಲಕ್ಷ ಏರುತ್ತಿದೆ. ರಷ್ಯದಲ್ಲಿ ಅಸಾಧ್ಯವಾದ ಪಾಂಚ ವಾರ್ಷಿಕ ಯೋಜನೆಯ ಕೈಗಾರಿಕೆಯ ಕಾಲದಲ್ಲಿ ನಾನು ಅಲ್ಲಿ ಇದ್ದೆ. ಆಗ ವರುಷಕ್ಕೆ ೧೦ ಲಕ್ಷ ಜನರನ್ನು ಹೆಚ್ಚಾಗಿ ಕೆಲಸಕ್ಕೆ ಸೇರಿಸಿಕೊಳ್ಳಲು ಸಾಧ್ಯವಾಯಿತು. ಆದರೆ ಭಾರತದಲ್ಲಿ ವರುಷೇ ವರುಷೇ ಹೆಚ್ಚುತ್ತಿರುವ ಈ 50 ಲಕ್ಷಕ್ಕೆ ಯಾವ ಕೈಗಾರಿಕೆಯೂ ಇಲ್ಲ. ಏನೋ ಇಲ್ಲೊಂದು ಅಲ್ಲೊಂದು ಕೈಗಾರಿಕೆ ಕಾರ್ಖಾನೆ ಏಳಬಹುದು. ಆದರೆ ಒಟ್ಟಿನಲ್ಲಿ ಭಾರತದಲ್ಲಿ ಆರ್ಥಿಕ ಅಭಿವೃದ್ಧಿಯಿಲ್ಲ. ಹತ್ತು ವರುಷಗಳ ಕೆಳಗೆ ಮುನ್ನೂರ ಮುವತ್ತೆಂಟು ದಶಲಕ್ಷ ಜನ ತಿನ್ನುತ್ತಿದ್ದ ಆಹಾರ ಇವತ್ತು 388 ದಶಲಕ್ಷ ಜನಕ್ಕೆ ಆಗಬೇಕಾಗಿದೆ. ಆಗ 33 ಕೋಟಿ ಧರಿಸುತ್ತಿದ್ದ ವಸ್ತ್ರಗಳನ್ನು ಈಗ 38 ಕೋಟಿ ಧರಿಸಬೇಕಾಗಿದೆ. ಎಲ್ಲವೂ ಹೀಗೆಯೇ ಭಾರತ ಯಾವಾಗಲೂ ಹಸಿದುಕೊಂಡೇ ಇದೆ. ಯಾವಾಗಲೂ ಅಸುಖಿಯಾಗಿಯೇ ಇದೆ. ಭಾರತದಿಂದ ಹಿಂದಿರುಗಿದ ಮೇಲೆ ನಾನು ಕ್ರಿಸ್ತ ಪಾದ್ರಿಯ ಮಗಳೂ ತಾನೇ ಪಾದ್ರಿಯೂ ಆದ ಪೆರಲ್‌ಬಕ್‌ಳಿಗೆ ಭಾರತದ ವಿಚಾರ ಹೇಳಿದೆ. ಅವಳು ಹೀಗೆ ಹೇಳಿದಳು "ಚೀಣದ ರೈತ ಭಾರತದ ರೈತನಿಗಿಂತ ಎಷ್ಟೋ ಪಾಲು ಹೆಚ್ಚು ಸುಖಿ" ಎಂದು. ಅನಂತರ ಇದೇ

ವಿಚಾರ ನ್ಯೂಯಾರ್ಕ್ ಟೈಂಸ್‌ನಲ್ಲಿ ಬರೆದಳು. ಭಾರತದ ರೈತನ ಬಡ ತನವನ್ನು ನೀವು ಊಹಿಸಬಹುದು. ನಾನು ಭಾರತದ ಹಳ್ಳಿಗಳಿಗೆ ಹೋದಿ ರೈತರನ್ನು ಈ ಯುದ್ಧದ ವಿಚಾರದಲ್ಲಿ ನಿಮ್ಮ ಅಭಿಪ್ರಾಯವೇನು ಎಂದು ಕೇಳಿದೆ. ಅವರು ಪ್ರತ್ಯುತ್ತರವನ್ನೇ ಕೊಡಲಿಲ್ಲ. ನಮಗೆ ಹಸಿವು ಎಂದರು. ಬ್ರಿಟಿಷರನ್ನು ಕುರಿತು ನಿಮ್ಮ ಅಭಿಪ್ರಾಯವೇನು ಎಂದೆ. ಅವರು ಅದಕ್ಕೂ ಪ್ರತ್ಯುತ್ತರ ಕೊಡಲಿಲ್ಲ. ನಮಗೆ ಹಸಿವು ಎಂದರು. ಭಾರತದ ರಾಜಕಾರಣವೆಲ್ಲ ಹೊಟ್ಟೆಯಲ್ಲಿಯೇ ಆಗುತ್ತದೆ. ಭಾರತಕ್ಕೆ ಹೋದವರೆಲ್ಲ ಹೇಳುವುದು ಇದೇ ಮಾತು. ಒಳ್ಳೆಯ ಅನುಭವಶಾಲಿಯಾದ, ಹೆರಾಲ್ಡ್ ಟ್ರಿಬ್ಯೂನಿನ ಸುದ್ದಿಗಾರನಾದ ಸೋನ್ಯಾ ಟಮಾರಾ ಹೀಗೆ ಹೇಳಿದ "ಭಾರ ತದಲ್ಲಿ ಹೆಚ್ಚು ದಿನ ಇದ್ದಂತೆ ಇಲ್ಲಿಯ ಅತೃಪ್ತಿ ನಿರುತ್ಸಾಹ ನಿರಾಶೆ ನಮ್ಮನ್ನು ಅಮುಕುತ್ತದೆ. ಭಾರತೀಯರು ತಮ್ಮ ಹಸಿವು ಕಷ್ಟಗಳಿಗೆ ಬ್ರಿಟಿಷ್ ಆಡಳಿತವನ್ನು ದೂರುತ್ತಾರೆ. ಭಾರತದ ಬ್ರಿಟಿಷ್ ವೈಸರಾಯ್ ಲಾರ್ಡ್ ಲಿನ್‌ಲಿತಗೋ ನನಗೆ ಹೀಗೆ ಹೇಳಿದರು. "ಭಾರತ ಇವತ್ತಿನಷ್ಟು ಹಿಂದೆ ಯಾವಾಗಲೂ ಬ್ರಿಟಿಷ್ ದ್ವೇಷಿಯಾಗಿರಲಿಲ್ಲ."

"ಪ್ರತಿಯೊಂದು ದೇಶಕ್ಕೂ ಒಂದು ಕಾಲ ಬರುತ್ತದೆ. ಪ್ರತಿಯೊಬ್ಬ ಸ್ತ್ರೀ ಪುರುಷರ ಜೀವಮಾನದಲ್ಲಿಯೂ ಬರುವಂತೆ. ಇದು ಅಮೆರಿಕಾದವ ರಿಗೆ 1776 ರಲ್ಲಿ ಬಂದಿತು. ಆಗ ಜನಾಂಗ "ನಾವು ಸ್ವತಂತ್ರವಾಗಿ ನಡೆ ಯಲು ಬಯಸುತ್ತೇವೆ. ನಮಗೆ ಮಾರ್ಗದರ್ಶಕವಾಗಿರುವ ಕೈಯನ್ನು ಇನ್ನು ಬಿಡುತ್ತೇವೆ ಎಂದರು. ಭಾರತದಲ್ಲಿ ಪ್ರತಿಯೊಬ್ಬರೂ ಜಾತಿ ಮತ ವ್ಯತ್ಯಾಸವಿಲ್ಲದೆ ಸ್ವತಂತ್ರರಾಗಲು ಬಯಸುತ್ತಾರೆ. ಬ್ರಿಟಿಷರ ಸಂಬಂಧ ಇಟ್ಟುಕೊಳ್ಳಬಹುದು ಅಥವ ಬಿಡಬಹುದು. ಭಾರತದ ರಾಜ್ಯದ ಅಧಿ ಕಾರಿಗಳಿಂದಲೇ ಈ ಮಾತನ್ನು ನಾನು ಕೇಳಿದೆ. ಭಾರತೀಯರೆಲಾ ಸ್ವತಂತ್ರರಾಗಿರಲು ಬಯಸುತ್ತಾರೆ. ವೆಂಡಲ್ ವಿಲ್ಕಿ ಈಗ ಪೂರ್ವ ದೇಶಕ್ಕೆ ಹೋದಾಗ ಒಂದು ಸರಳವಾದ ವಿಷಯವನ್ನು ಕಂಡುಹಿಡಿದ. ಜೀವನದ ಅನೇಕ ಮಹತ್ವದ ಸಂಗತಿಗಳು ಸರಳವಾದುವೇ. ಈ ಜಗತ್ತಿನಲ್ಲಿ 200 ಕೋಟಿ ಜನರಿದ್ದಾರೆಂದು ಅವನು ಕಂಡುಹಿಡಿದ. ಹಿಂದೆ ನಾವು ಮಾತ ನಾಡುವಾಗ ಪಶ್ಚಿಮ ದೇಶದ 60 ಕೋಟಿ ಜನರನ್ನು ಕುರಿತೇ ಪ್ರಪಂಚದ ವಿಚಾರಗಳನ್ನೆಲ್ಲಾ ಮಾತನಾಡುತ್ತಿದ್ದೆವು. ಆದರೆ ಭಾರತ ಚೀಣಾ ಮತ್ತು

ಅದರ ಸುತ್ತಲಿನ ಸಣ್ಣ ಸಣ್ಣ ದ್ವೀಪಗಳಲ್ಲಿಯೇ ಒಂದು ನೂರು ಕೋಟಿ ಜನ ಇದ್ದಾರೆ. ಅವರು ಸ್ವಾತಂತ್ರ್ಯವನ್ನೋ ಗಾಂಭೀರ್ಯ ಜೀವನವನ್ನೊ ಬಯಸುತ್ತಿದ್ದಾರೆ. ಅದನ್ನು ತಡೆಯಲು ನಾವು ಪ್ರಯತ್ನಿಸಿದರೆ ಅನಾಹುತವಾಗುವುದು. ಆ ಅನಾಹುತ ಈ ಜಗತ್ತಿನ ಮಹಾ ಯುದ್ಧವನ್ನು ಕೂಡ ಅಲ್ಪವಾಗಿ ಮಾಡುವುದು.

"ಭಾರತದ ಸ್ವಾತಂತ್ರ್ಯವೆಂಬ ಸಾರ್ವಜನಿಕ ಆಸೆಯ ಗುರುತೇ ಮಹಾತ್ಮಾ ಗಾಂಧಿ. ಅವರು ಭಾರತಕ್ಕೆಲ್ಲಾ ಪ್ರತಿನಿಧಿಯಲ್ಲ. ಆದರೆ ಸ್ವಾತಂತ್ರ್ಯಬೇಕೆಂಬ ಎಲ್ಲಾ ಭಾರತದ ಆಸೆಯನ್ನೂ ಅವರು ಪ್ರತಿಬಿಂಬಿಸುತ್ತಾರೆ. ಮಹಾತ್ಮನು, ಒಂದೇ ಕಲ್ಲಿನಿಂದ ಕಡೆದ ಉತ್ತಮ ಶಿಲ್ಪ. ಮಹಾತ್ಮರು, ಒಂದೇ ಮಾರ್ಗದಲ್ಲಿ ಪ್ರಯಾಣ ಮಾಡುತ್ತಾರೆ. ಲಿಂಕನ್ ಮಹನೀಯನಾಗಿದ್ದ. ಅವನು ಒಗ್ಗಟ್ಟಿಗಾಗಿಯೇ ಬಾಳಿದ. ಲೆನಿನ್ ಮಹಾತ್ಮನಾದ. ಅವನು ರಷ್ಯಾವನ್ನು ಹಳೆಯ ಕಾಲದ ಗುಲಾಮಗಿರಿಯ ಅಸ್ವಾತಂತ್ರದಿಂದ ಮೇಲಕ್ಕೆ ಎತ್ತಿದ. ಚರ್ಚಿಲ್ ಮಹನೀಯ ಯಾಕೆಂದರೆ ಅವನ ಎಲ್ಲಾ ಕೆಲಸಗಳೂ, ಇಂಗ್ಲೆಂಡನ್ನು ಉನ್ನತ ಸ್ಥಾನದಲ್ಲಿ ಇಡುವುದರ ಕಡೆಗೇ ಇವೆ. ಹಾಗೆಯೇ ಗಾಂಧಿಯೂ ಮಹನೀಯ. ಯಾಕೆಂದರೆ ಅವನು ಮಾಡುವ ಪ್ರತಿಯೊಂದು ಕೆಲಸವೂ ಅವನ ಗುರಿಯನ್ನು ಅಂದರೆ ಭಾರತ ಸ್ವಾತಂತ್ರ್ಯವನ್ನು ಹೊಂದಲು ಸಹಾಯಕವಾಗಿವೆ. ಗಾಂಧಿಗೆ ಭಾರತವನ್ನು ಆಳುವ ಇಚ್ಛೆಯಿಲ್ಲ. ಅವನು ಆ ಬಗೆಯ ಮನುಷ್ಯನಲ್ಲ. ಭಾರತವು ಸ್ವಾತಂತ್ರ್ಯವನ್ನು ಹೊಂದಿದ ಕೂಡಲೇ ಅವನ ಕೆಲಸ ಮುಗಿಯುವುದು. ಮಹನೀಯರು, ಸ್ವಲ್ಪ ದೊಡ್ಡ ರೂಪದಲ್ಲಿರುವ ಸಾಮಾನ್ಯರೇ ಹೊರತು ಬೇರೆ ಏನೂ ಅಲ್ಲ. ನಿಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವ ಮಹನೀಯನನ್ನು ನೀವು ಒಪ್ಪುತ್ತೀರಿ. ಗಾಂಧಿಯವರು, ಯಾವ ಸಂಸ್ಥೆಯ ಹೆಸರಿನಿಂದಲೂ ಅಲ್ಲ. ಯಾರ ಮತದ ಬಲದಿಂದಲೂ ಅಲ್ಲ—ಸ್ವತಂತ್ರವಾಗಬೇಕೆಂಬ ಭಾರತದ ಸಾರ್ವತ್ರಿಕ ಇಚ್ಛೆಯನ್ನು ಪ್ರತಿಬಿಂಬಿಸುತ್ತಾರೆ. ಭಾರತದ ಬಿಸಿಲಿನಲ್ಲಿ ಅವರ ಗುಡಿಸಲಿನ ಮಣ್ಣು ನೆಲದ ಮೇಲೆ ಕುಳಿತುಕೊಂಡು-ಅವರ ಮಾತನ್ನು ನಾನು ಕೇಳುತ್ತಿರುವಾಗ ನನಗೆ 40 ಕೋಟಿ ಜನರ ಮಾತುಗಳನ್ನೂ ಕೇಳುತ್ತಿರುವಂತೆ ಭಾಸವಾಯಿತು. ಆ ಮಾತುಗಳ ಪ್ರಭಾವ ನನ್ನ ಮೇಲೆ ಬಹಳವಾಯಿತು.

“ ಬ್ರಿಟಿಷರ ಸೈನ್ಯ ಭಾರತದಲ್ಲಿರುವುದು ಭಾರತವನ್ನು ಸ್ವಾಧೀನ ದಲ್ಲಿಟ್ಟುಕೊಳ್ಳುವುದಕ್ಕಾಗಿ ಎಂದು ವೈಸರಾಯರೇ ನನಗೆ ಹೇಳಿದರು. ಒಂದು ಅಂದಾಜು ಮಾಡೋಣ. ಒಂದು ಪರದೇಶ ಸೈನ್ಯ ನಮ್ಮ ದೇಶ ವನ್ನು ಆಕ್ರಮಿಸಿಕೊಂಡಿದೆ ಎನ್ನಿ. ನಮ್ಮ ರಾಜಕೀಯ ಪಕ್ಷಗಳನ್ನೆಲ್ಲಾ ತುಳಿದು ರಾಜಕೀಯ ಜೀವನ ಇಲ್ಲದಂತೆ ಮಾಡುತ್ತದೆನ್ನಿ. ನಮ್ಮ ರಾಜ ಕೀಯ ಮುಖಂಡರೆಲ್ಲಾ ಸೆರೆಮನೆಯಲ್ಲಿರುವವರೆನ್ನಿ. ಪರದೇಶದವರು ನಮ್ಮನ್ನು ಆಳುತ್ತಿರುವರೆನ್ನಿ. ಪರದೇಶದವರನ್ನು ಹೊಡೆದೋಡಿಸಲು ನಾವು ಸಿಕ್ಕಿದ ಆಯುಧವನ್ನು ತೆಗೆದುಕೊಳ್ಳುವುದಿಲ್ಲವೇ ? ಗಾಂಧಿಯಲ್ಲಿ ಬೇರೆ ಆಯುಧವಿಲ್ಲ. ಗಾಂಧಿಯ ಅಲ್ಪವಾದ ಗುಡಿಸಿಲಿನಲ್ಲಿ ಒಂದೇ ಒಂದು ಏಸುವಿನ ಪಠವಿದೆ. ಗಾಂಧಿ ಕ್ರಿಸ್ತರವನಲ್ಲ. ಅವನು ಹಿಂದು. ಆದರೆ ಅವನು ಕ್ರಿಸ್ತರ ಅನೇಕ ತತ್ವಗಳನ್ನು ನಂಬುತ್ತಾನೆ. ಹಿಂದಲ ಕಾಲದ ಕ್ರಿಸ್ತರಿಗೆ ತ್ಯಾಗವೆಂಬುದಾದರೂ ಗೊತ್ತಿದ್ದಿತು. ಭಾರತೀಯ ರಿಗೆ ತ್ಯಾಗಮಾಡುವವರನ್ನು ಕಂಡರೆ ಪ್ರೀತಿ. ಬ್ರಿಟಿಷರು ಗಾಂಧಿಯ ಮಹಿಮೆ ಅಳಿಯುತ್ತಿದೆ ಎಂದು ಹೇಳಿ, ಆ ಅಳಿಯುತ್ತಿರುವ ಮಹಿಮೆಯ ನ್ನು ಎದುರಿಸಲು ಅಸಾಧ್ಯವಾದ ಶಕ್ತಿಯನ್ನೂ ಹಣವನ್ನೂ ವ್ಯಯಮಾ ಡುತ್ತಾ ತಮ್ಮ ಮಾತು ಸುಳ್ಳು ಎಂಬುದನ್ನು ತಾವೇ ತೋರಿಸುತ್ತಿದ್ದಾರೆ. ವೈಸರಾಯರ ಕಾರ್ಯಕಾರಿ ಸಮಿತಿಯಲ್ಲಿ ಹದಿನಾಲ್ಕು ಜನ ಸದಸ್ಯರಿದ್ದಾರೆ. ಅವರ ಪೈಕಿ ಹತ್ತು ಜನ ಭಾರತೀಯರು. ಅವರು ಉನ್ನತಾಧಿಕಾರಿಗಳಾಗಿ ದ್ದಾರೆ. ಬ್ರಿಟಿಷರಿಗೆ ಸಹಾಯ ಮಾಡಲು ಸಿದ್ಧರಾಗಿದ್ದಾರೆ. ಬೇರೆ ಮಾತು ಗಳಲ್ಲಿ ಹೇಳಬೇಕಾದರೆ ಅವರಿಗೆ ಸ್ವಾತಂತ್ರ್ಯ ಮುಖ್ಯವಲ್ಲ. ಅವರಲ್ಲಿ ಮೂರು ಜನ ಗಾಂಧಿ ಉಪವಾಸದ ಕಾರಣದಿಂದ ರಾಜೀನಾಮೆ ಕೊಟ್ಟಿ ದ್ದಾರೆ.

“ ಇದೆಲ್ಲಾ ನಡೆಯಬೇಕಾಗಿರಲಿಲ್ಲ. ನಾನು ಗಾಂಧಿಯನ್ನು ಜೂನ್ ತಿಂಗಳಿನಲ್ಲಿ ನೋಡಿದಾಗಲೂ, ಈಚೆಗೂ ರಾಜಿಮಾಡಿಕೊಳ್ಳುವ ಮನೋಭಾವದಲ್ಲಿದ್ದರು. ತಮ್ಮ ಕೇಳಿಕೆಗಳನ್ನು ಆತ ಬಹಿರಂಗವಾಗಿ ಕಡಿಮೆ ಮಾಡಿದ್ದನು. ಬ್ರಿಟಿಷರು ಕೊಡಲಾರದುದನ್ನ ಆತ ಕೇಳುತ್ತಿರ ಲಿಲ್ಲ. ಕಾನೂನುಭಂಗ ಚಳುವಳಿ ಆಗಬೇಕಾದುದಿರಲಿಲ್ಲ. ಈ ಕೊಲೆಗ ಳೆಲ್ಲಾ ನಡೆಯಬೇಕಾದುದಿರಲಿಲ್ಲ. (ಗಾಂಧಿ ಹಿಂಸೆಯನ್ನು ಪ್ರೇರಿಸಿದ

ನೆಂಬ ಬ್ರಿಟಿಷ್ ಸರ್ಕಾರದ ದೂರು ಹಿಂಸೆಯ ಮೇಲೆ ಅವಲಂಬಿಸಿರುವ ಆ ಸರ್ಕಾರದ ಬಾಯಿಂದ ಬರುವುದು ವಿಕಟವಾಗಿದೆ). ಗಾಂಧಿ, ಈ ಬೇಸಿಗೆಯಲ್ಲಿ ವೈಸರಾಯನ್ನು ನೋಡಲು ಎರಡು ಸಲ ಬೇಡಿದರು. ಆದರೆ ವೈಸರಾಯ್ ಒಪ್ಪಲಿಲ್ಲ. ಗಾಂಧಿ ಯಾವುದಾದರೂ ರಾಜಿ ಒಪ್ಪಂದಕ್ಕೆ ಸಿದ್ಧವಾಗಿದ್ದರು. ವೈಸರಾಯ್‌ಗೆ ಅದು ಬೇಕಿರಲಿಲ್ಲ. ಅದರ ಕಾರಣ ಸುಲಭವಾಗಿದೆ. ವಿನ್‌ಸ್ಟನ್ ಚರ್ಚಿಲರು ತಮಗೆ 55 ವರುಷವಾಗಿದ್ದಾಗ ಹೀಗೆ ಹೇಳಿದರು—ಅಲ್ಲಿಂದ ಈಚೆಗೆ ಅವರು ಬದಲಾಯಿಸಿಯೂ ಇಲ್ಲ— "ನಿಜಾಂಶವೇನೆಂದರೆ ಗಾಂಧಿ ತತ್ವವನ್ನೂ ಅದಕ್ಕೆ ಸಂಬಂಧಪಟ್ಟವುಗಳೆಲ್ಲವನ್ನೂ ಇಷ್ಟರಲ್ಲಿಯೇ ಎದುರಿಸಿ ತುಳಿಯಬೇಕಾಗಿದೆ.'' ದೊಡ್ಡ ಅಧಿಕಾರದಲ್ಲಿದ್ದುಕೊಂಡು ಗಾಂಧಿಯನ್ನು ಎದುರಿಸಲು ಚರ್ಚಿಲ್ಲಿಗೆ ದೊರೆತಿರುವುದು ಇದೇ ಮೊದಲ ಸಂದರ್ಭ. ಬ್ರಿಟಿಷರು ಭಾರತದ ಸ್ವಾತಂತ್ರ್ಯ ಆಂದೋಳನದ ಮೇಲೆ ಹಟಮಾಡಿದ್ದಾರೆ. ಬ್ರಿಟಿಷರು ಗಾಂಧಿಯನ್ನು ಮುರಿಯಬೇಕು. ಭಾರತದ ಸ್ವಾತಂತ್ರ್ಯ ಆಂದೋಳನವನ್ನು ಮುರಿಯಬೇಕು ಎಂದು ಖಂಡಿತವಾಗಿ ತೀರ್ಮಾನಿಸಿದ್ದಾರೆ. ಚಿಯಾಂಗ್ ಕೈಷೇಕ್ ಚರ್ಚಿಲ್‌ಗೂ ರೂಸವೆಲ್ಟ್‌ಗೂ ಯುದ್ಧ ಕಾಲದಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಡುವ ದೊಡ್ಡ ಜನಾಂಗದ ಹೋರಾಟವನ್ನು ತಡೆಗಟ್ಟುವುದರಿಂದ, ಏಷ್ಯಾಖಂಡ ಪೂರ್ಣವಾಗಿ ಶತ್ರುಗಳನ್ನು ಸೇರಿಕೊಳ್ಳಬಹುದೆಂದು ಎಚ್ಚರಿಸಿದ್ದಾನೆ.... ಸ್ಪೆಯಿನ್ ರಿಪಬ್ಲಿಕನ್ನು ಸಂರಕ್ಷಿಸಿದವರು; ಜೆಕೊಸ್ಲೊವೇಕಿಯಾವನ್ನು ಕೊಂದವರು, ಹಿಟ್ಲರ್ ಮುಸಲೋನಿಗಳ ಬಳಿ ಹೋಗಿ ಅವರು ಜಗತ್ತಿನ ಮಹಾತ್ಮರೆಂದುಕೊಂಡವರು ಇಂತಹವರೆಲ್ಲಾ ಇನ್ನೂ ಬ್ರಿಟಿಷ್ ಕ್ಯಾಬಿನೆಟ್‌ನಲ್ಲಿ ಇದ್ದಾರೆ. ಈ ಸ್ವಾತಂತ್ರ ವಿರೋಧಿಗಳೂ ಟೋರಿಗಳೂ ಭಾರತಕ್ಕೆ ಸ್ವಾತಂತ್ರ್ಯವನ್ನು ಕೊಡುತ್ತಾರೆಂದು ನಾನು ನಿರೀಕ್ಷಿಸುವುದಿಲ್ಲ.

"ಈ ಬೇಸಿಗೆಯಲ್ಲಿ ನಾನು ಗಾಂಧಿಯವರ ಜತೆಯಲ್ಲಿ ಒಂದು ವಾರ ಕಳೆದೆ. ಪ್ರತಿ ಬೆಳಗ್ಗೆಯೂ 5¾ ಗಂಟೆಯಿಂದ 6¼ ಗಂಟೆಯವರೆಗೆ ಅವರೊಡನೆ ತಿರುಗುತ್ತಲಿದ್ದೆ. ಪ್ರತಿ ಮಧ್ಯಾಹ್ನ ಅವರೊಂದಿಗೆ ಒಂದು ಗಂಟೆ ಪೂರ್ಣವಾಗಿ ಸಂಭಾಷಣೆ ಮಾಡುತ್ತಲಿದ್ದೆ. ಪ್ರತಿ ದಿನವೂ ಅವರೊಂದಿಗೆ ಊಟ ತಿಂಡಿ ಮಾಡುತ್ತಿದ್ದೆ. ಒಬ್ಬಂಟಿಗನಾದ, ನೋಡಿದ ಕೂಡಲೆ ಭಯವನ್ನು ಹುಟ್ಟಿಸುವ ಕಾವು ಇಲ್ಲದ ಒಣ ಸನ್ಯಾಸಿಯನ್ನು ನೋಡುವೆ

ನೆಂದುಕೊಂಡು ನಾನು ಹೋದೆ. ಆದರೆ ವಾಸ್ತವವಾಗಿ ಗಾಂಧಿ ಒಳ್ಳೆಯ ಕಾವು ಉಳ್ಳ ಮನುಷ್ಯ. ಆತನಲ್ಲಿ ಮನುಷ್ಯತ್ವ ಪೂರ್ಣವಾಗಿದೆ. ಆತನ ಹಾಸ್ಯ ಸ್ವಭಾವ ಬಹಳ ಸೂಕ್ಷ್ಮವಾಗಿದೆ. ಆತನು ಮಕ್ಕಳೊಂದಿಗೆ ಆಡು ತ್ತಾನೆ. ನೋಡುವವರಿಗೆ ಒಂದು ಸಮಸ್ಯೆಯಾದ ಒಂದು ಗುಣ ಆತನ ಲ್ಲಿದೆ. ತಾನು ಯೋಚಿಸುವುದನ್ನೆಲ್ಲಾ ಅವನು ಹೇಳುತ್ತಾನೆ. ನಾವೆಲ್ಲ ಮನಸ್ಸಿನಲ್ಲಿ ಒಂದು ನೀಲಿ ಸೀಸದ ಕಡ್ಡಿಯನ್ನು ಇಟ್ಟುಕೊಂಡಿರುತ್ತೇವೆ. ನಮ್ಮ ಆಲೋಚನೆಗೆ ನಮ್ಮದೇ ಹತೋಟಿ. ಆದರೆ ಗಾಂಧಿಯ ಮೈ ಮೇಲೆ ಹೆಚ್ಚು ಪದಾರ್ಥಗಳಿಲ್ಲ. ನೀಲಿಯ ಸೀಸದ ಕಡ್ಡಿಯಂತೂ ಇಲ್ಲವೇ ಇಲ್ಲ. ಮೈದಾನದಲ್ಲಿ ಒಂದು ದಿನ ಅವರ ಜತೆಯಲ್ಲಿ ನಡೆಯುತ್ತಿರುವಾಗ "ಮೌನ ಮಾಡುವ ದಿನವನ್ನು ನೀವು ಹೇಗೆ ಪ್ರಾರಂಭಿಸಿದಿರಿ" ಎಂದು ಕೇಳಿದೆ--ಸೋಮವಾರ ಅವರು ಮಾತನಾಡುವುದಿಲ್ಲ. ಇತರರೂ ಅದನ್ನೇ ಅನುಸರಿಸಬಹುದು. ಇರಲಿ—ಅದು ಬಹು ದಿನಗಳ ಹಿಂದೆ ಪ್ರಾರಂಭ ವಾಯಿತೆಂದು ಆತ ಹೇಳಿದ. "ಬಿಸಿಲಿನಲ್ಲಿ, ಕಾದ ರೈಲಿನಲ್ಲಿ ಮರೆಯಿಲ್ಲದ ಎತ್ತಿನ ಗಾಡಿಯಲ್ಲಿ ನಾನು ಬೆಳಿಗ್ಗೆ ಸಾಯಂಕಾಲ ಮಧ್ಯಾಹ್ನ ಭಾರತವ ನ್ನೆಲ್ಲಾ ತಿರುಗುತ್ತಿದ್ದೆ. ಸಾವಿರಾರು ಜನ ನನ್ನಲ್ಲಿ ಒಂದು ಪ್ರಶ್ನೆಗಳನ್ನು ಕೇಳುತ್ತಿದ್ದರು, ಸಬೂಬು ಹೇಳುತ್ತಿದ್ದರು; ಅವರೊಂದಿಗೆ ನಾನು ಪ್ರಾರ್ಥಿಸಬೇಕೆಂದು ಹೇಳುತ್ತಿದ್ದರು. ನನಗೆ ಆಯಾಸವಾಯಿತು. ಆಗ ಈ ಮೌನದ ದಿನವನ್ನು ಪ್ರಾರಂಬಿಸಿದೆ. ಅಲ್ಲಿಂದ ಈಚೆಗೆ ಇದಕ್ಕೆ ನೀತಿಯ ಆವರಣವನ್ನು ಕಲ್ಪಿಸಿ ಇದನ್ನು ಒಂದು ತತ್ವವಾಗಿ ಮಾಡಿದ್ದೇನೆ. ಆದರೆ ವಾಸ್ತವವಾಗಿ ನಾನು ಅದನ್ನು ಪ್ರಾರಂಭಿಸಿದುದು ಒಂದು ದಿನ ವಿರಾಮ ವಿಶ್ರಾಂತಿಯನ್ನು ಹೊಂದುವುದಕ್ಕಾಗಿಯೇ" ಆತ ಹಾಗೆ ಹೇಳದೆ ಇದ್ದಿ ದ್ದರೂ ಆಗಿದ್ದಿತು. ಆದರೆ ಗಾಂಧಿ ಸತ್ಯದ ಭಕ್ತ. ಆತನ ನಾಲಿಗೆ ಪರಿ ಶುದ್ಧವಾಗಿದೆ. ಅದು ಅವನನ್ನು ಸತ್ಯವನ್ನು ಹೇಳುವಂತೆ ಮಾಡುತ್ತದೆ.

ತನ್ನ ಕತೆಯನ್ನು ಪೂರ್ತಿ ಹೇಳುವಂತೆ ಮಾಡುತ್ತದೆ. ಅದರಿಂದ ಅವರು ಬಗೆಬಗೆಯ ಕಷ್ಟಗಳಿಗೆ ಸಿಕ್ಕಿಕೊಳ್ಳುತ್ತಾರೆ. ಉದಾಹರಣೆಗೆ ನನಗೆ ಹೀಗೆ ಹೇಳಿದರು. "ಜಪಾನಿಗೆ ಹೋಗಿ ಜಪಾನರೊಂದಿಗೆ ಒಂದು ಕೌಲು ಪತ್ರಕ್ಕೆ ಸಹಿಮಾಡಲು ನನಗೆ ಇಷ್ಟ" ಆದರೆ ಮುಂದೆ ಮಾತ ನಾಡುತ್ತಾ ಅವರು ನನಗೆ ಗೊತ್ತು. ಬ್ರಿಟಿಷರು ನನ್ನನ್ನು ಜಪಾನಿಗೆ

ಬಿಡುವುದಿಲ್ಲ. ಬಿಟ್ಟರೂ ಜಪಾನರು ನನ್ನೊಂದಿಗೆ ರಾಜಿ ಕೌಲಿಗೆ ಸಹಿ ಮಾಡುವುದಿಲ್ಲ "ಹಾಗಾದ ಮೇಲೆ ಅದನ್ನು ಕುರಿತು ಯಾಕೆ ಮಾತನಾಡಬೇಕು. ಯಾಕೆಂದರೆ ಆ ಅಭಿಪ್ರಾಯ ಅವರಿಗೆ ಹೊಳೆಯಿತು. ಗಾಂಧಿಯವರಿಗೆ, ಒಂದು ಅಭಿಪ್ರಾಯ ಕಾರ್ಯಕಾರಿಯಲ್ಲವೆಂಬ ಕಾರಣದಿಂದ ಅದನ್ನು ಕುರಿತು ಮಾತನಾಡಲೇ ಕೂಡದೆಂದಲ್ಲ. ಜಪಾನಿನ ಸ್ನೇಹಿತರು ಇಂತಹವರು ಎಂದು ಹೇಳುವ, ಅನೇಕ ಇಂಗ್ಲಿಷ್ ಮತ್ತು ಅಮೆರಿಕಾದವರ ಮಾತನ್ನು ನಾನು ಒಪ್ಪಲು ಸಿದ್ಧನಾಗಿಲ್ಲ. ಯಾಕೆಂದರೆ ಈ ಅಮೆರಿಕದವರೂ ಇಂಗ್ಲಿಷರೂ ಜಪಾನಿನ ಮಿತ್ರರಾಗಿದ್ದರು. ಜಪಾನನ್ನು ಪದೇ ಪದೇ ಸಮಾಧಾನಪಡಿಸಿದರು. ಜಪಾನಿಗೆ ಹಳೆಯ ಕಬ್ಬಿಣವನ್ನೂ ಎಣ್ಣೆಯನ್ನೂ ಕಳುಹಿಸಿದರು. ಈ ಕಬ್ಬಿಣ ಎಣ್ಣೆ ಈಗ ನಮ್ಮ ಸಿಪಾಯಿಗಳು ಇನ್ನೂ ಹೆಚ್ಚು ಘೋರವಾದ ರೂಪದಲ್ಲಿ ಸ್ವೀಕರಿಸುತ್ತಿದ್ದಾರೆ. ಯಾರು ಜಪಾನಿನ ಮಿತ್ರ ಯಾರು ಜಪಾನಿನ ವಿರೋಧಿ ಎಂಬುದಕ್ಕೆ ನಾನು ಒಬ್ಬನ ಮಾತನ್ನು ಖಾತರಿಯಾಗಿ ಇಟ್ಟುಕೊಳ್ಳುತ್ತೇನೆ. ಅವನೇ ಚಿಯಾಂಗ್ ಕೈಶೇಕ್. ಅವನು ಗಾಂಧಿಯವರ ಮಿತ್ರ. ಭಾರತದ ಸ್ವಾತಂತ್ರ್ಯ ಚಳುವಳಿಯ ಮಿತ್ರ. ಭಾರತದಲ್ಲಿ ಬ್ರಿಟಿಷರ ನೀತಿ ಬದಲಾಗಬೇಕೆಂದು ಅವನು ಪದೇ ಪದೇ ರೂಸವೆಲ್ಟರನ್ನೂ ಚರ್ಚಿಲರನ್ನೂ ನೋಡಿ ಒಲಾತ್ಕರಿಸಿದ್ದಾನೆ. ಚಿಯಾಂಗ್ ಕೈಶೇಕ್‌ಗೆ ಗೊತ್ತಿತ್ತು. ಗಾಂಧಿ ಜಪಾನ್ ವಿರೋಧಿ, ಚೀಣದ ಮಿತ್ರ. ಶತ್ರುಗಳ ವಿರೋಧಿ. ಗಾಂಧಿ ಅದನ್ನು ತಾರ್ಕಣೆ ಕೊಟ್ಟಿದ್ದಾರೆ. ಆದರೆ ಗಾಂಧಿಯವರ ಮಾತಿನ ಕ್ರಮ ಅವರನ್ನು ಇಂತಹ ಸುಳ್ಳು ಆಪಾದನೆಗಳಿಗೆ ಗುರಿಮಾಡಿದೆ.

"ಪ್ರಕೃತ ರಾಜಕೀಯ ಸಂದಿಗ್ಧ ಸ್ಥಿತಿಯಲ್ಲಿಯೂ ಗಾಂಧಿ ಹೀಗೆಯೇ ಮಾಡಿದರು. ಭಾರತದಲ್ಲಿ ದುಃಖ ತುಂಬಿದೆ, ಅತೃಪ್ತಿ ಅಶಾಂತಿ ಹೆಚ್ಚಾಗಿದೆ ಈ ಪರಿಸ್ಥಿತಿಯಲ್ಲಿ ದೂರಪ್ರಾಚ್ಯದಲ್ಲಿ ಬ್ರಿಟಿಷರ ಹಿಂದೋಟಗಳು ಸಂಭವಿಸಿದವು. ಹಾಂಗ್‌ಕಾಂಗ್ ಮಲಯಾ ಸಿಂಗಪುರ್ ಬರ್ಮಾ—ಎಪ್ಪಾಯ್ಯದಲ್ಲಿ ಬ್ರಿಟಿಷರ ಪ್ರತಿಷ್ಠೆ ಸೊನ್ನೆಯಾಯಿತು. ಬ್ರಿಟಿಷರು ಬರ್ಮಾದಿಂದ ಆಗತಾನೇ ಓಡಿಬಂದಿದ್ದಂತೆ ಭಾರತದಿಂದಲೂ ಓಡಿಬಿಡುವರೆಂದು ಭಾರತೀಯರು ಹೆದರಿದರು. ಇಂಗ್ಲೆಂಡಿನಲ್ಲಿ, ಬ್ರಿಟಿಷ್ ಸರ್ಕಾರಕ್ಕೆ, ಒಂದು ಸಂದಿಗ್ಧ ಪರಿಸ್ಥಿತಿ ಭಾರತದಲ್ಲಿ ಒದಗಿದೆ ಎಂಬುದು ಗೊತ್ತಾ

ಯಿತು. ಆದರೆ ಪ್ರೆಸಿಡೆಂಟ್ ರೂಸವೆಲ್ಟರು ಚೆನ್ನಾಗಿ ತಿವಿದ ಮೇಲೆಯೇ ಬ್ರಿಟಿಷ್ ಮಂತ್ರಿಮಂಡಲ ನಡೆದಿದ್ದ ಅಪಘಾತವನ್ನು ಸರಿಪಡಿಸಲು ಸರ್ ಸ್ಟ್ಯಾಫರ್ಡ್ ಕ್ರಿಪ್ಸರನ್ನು ಭಾರತಕ್ಕೆ ದಬ್ಬಿತು. ಕ್ರಿಪ್ಸ್ ಅಪಜಯ ಹೊಂದಿದ ಕಾರಣ ಏನೇ ಇರಲಿ (ಈಚೆಗೆ ಯುದ್ಧ ಮಂತ್ರಿಮಂಡಲ ದಿಂದಲೂ ಆತನನ್ನು ತಳ್ಳಿದರು—ಸಿಂಗಪುರ ಶತ್ರುಗಳ ವಶವಾದುದರಿಂದ ದಿಂದಲೂ, ಜರ್ಮನ್ ಪಾಕೆಟ್ ಯುದ್ಧದ ಎರಡು ಹಡಗುಗಳು ಎ. ಆರ್. ಎಫ್. ಮತ್ತು ಬ್ರಿಟಿಷ್ ನೌಕಾಪಡೆಯ ಕಣ್ಣೆದುರಿಗೇ ಇಂಗ್ಲಿಷ್ ಕಡಲ್ಗಾಲುವೆಯಿಂದ ತಪ್ಪಿಸಿಕೊಂಡುದರಿಂದಲೂ, ಚರ್ಚಿಲ್ ಮಂತ್ರಿ ಮಂಡಲ ಅಲ್ಲಾಡಿತು. ಚರ್ಚಿಲಗೆ ಕ್ರಿಪ್ಸ್‌ರಂತಹ ಸಾರ್ವಜನಿಕ ವಿಶ್ವಾಸ ವನ್ನು ಗಳಿಸಿದ ಮನುಷ್ಯರ ಬೆಂಬಲ ಯುದ್ಧಮಂತ್ರಿ ಮಂಡಲದಲ್ಲಿ ಬೇಕಾಗಿದ್ದಿತು. ರೊಮೆಲ್ ಸೋತು ಬ್ರಿಟಿಷ್ ಸೈನ್ಯ ಉತ್ತರ ಆಫ್ರಿಕಾ ದಲ್ಲಿ ಕಾಲಿಟ್ಟ ಮೂರು ದಿನದ ನಂತರ ಕ್ರಿಪ್ಸ್‌ರನ್ನು ಯುದ್ಧ ಮಂತ್ರಿ ಮಂಡಲದಿಂದ ತಳ್ಳಿದರು. ಆ ಹಿನ್ನೆಲೆಯಿಂದ ನೋಡಿದರೆ ಕ್ರಿಪ್ಸ್‌ರನ್ನು ಭಾರತಕ್ಕೆ ಕಳುಹಿಸಿದುದು ಕ್ರಿಪ್ಸರ ವಿನಾಶದ ಏರ್ಪಾಡಿನ ಒಂದು ಭಾಗ. ಸ್ಟ್ಯಾಲಿನ್ ತನ್ನ ಶತ್ರುಗಳನ್ನು ಬಂದೂಕದಿಂದ ಹೊಡೆದು ಕೊಲ್ಲು ತ್ತಾನೆ. ಚರ್ಚಿಲ್ ತನ್ನ ಶತ್ರುಗಳನ್ನು ಜೀರ್ಣಿಸಿಕೊಳ್ಳುತ್ತಾನೆ. ಕ್ರಿಪ್ಸ್, ಜಯಶಾಲಿಯಾಗಲು ಪ್ರಯತ್ನಿಸಿದರು. ಆದರೆ ಅವರು ಆ ಪ್ರಯತ್ನದಲ್ಲಿ ಜಯಿಸಲಿಲ್ಲ. ಯಾಕೆಂದರೆ ಇಂಗ್ಲೆಂಡಿನಲ್ಲಿ ಕೆಲವು ಸ್ವಾತಂತ್ರ್ಯ ವಿರೋ ಧಿಗಳು ಕ್ರಿಪ್ಸ್ ಜಯಿಸುವುದನ್ನು ಸಹಿಸಲಿಲ್ಲ; ಕ್ರಿಪ್ಸ್ ಇದ್ದುದಕ್ಕಿಂತ ಹೆಚ್ಚು ದೊಡ್ಡವನಾಗುವುದನ್ನು ಒಪ್ಪಲಿಲ್ಲ. ಕ್ರಿಪ್ಸ್ ಅಪಜಯ ಹೊಂದಿ ದುದರ ಕಾರಣ ಏನು ಬೇಕಾದರೂ ಇರಲಿ. ನಡೆದು ಹೋಗಿದ್ದ ಆಘಾ ತವನ್ನು ಅವರು ಸರಿಮಾಡಲಾರದೆ ಹೋದರು. ಕೆಟ್ಟು ಹೋಗಿದ್ದ ಪರಿ ಸ್ಥಿತಿ ಇನ್ನೂ ಕೆಟ್ಟಿತು. ಭಾರತದ ಪರಿಸ್ಥಿತಿ ಹೀಗೆ ಕೆಟ್ಟುದಕ್ಕೆ ಗಾಂಧಿ ಸ್ವಾಭಾವಿಕವಾಗಿ ಪ್ರತಿಭಟಿಸಿದರು. ನನಗೆ ಇದು ಸಾಕಾಯಿತು. ಬ್ರಿಟಿ ಷರು ಭಾರತವನ್ನು ಬಿಟ್ಟು ಹೋಗಬೇಕು".

ಅನಂತರ ಗಾಂಧಿ ಯೋಚಿಸಿದರು. ಸ್ನೇಹಿತರು ಅವರೊಂದಿಗೆ ಮಾತನಾಡಿದರು. ಆಗ ಗಾಂಧಿ "ಅದು ತಪ್ಪು ಹಾಗೆ ಹೇಳಲು ನನಗೆ ಅಧಿಕಾರವಿರಲಿಲ್ಲ" ಎಂದರು. ಬಹಿರಂಗವಾಗಿ ತಾವು ಮಾಡಿದ

ತಪ್ಪನ್ನು ತಪ್ಪು ಎಂದು ಹೇಳುವ ಜಗತ್ತಿನ ಕೆಲವು ಮಹನೀಯರ ಪೈಕಿ ಗಾಂಧಿ ಒಬ್ಬರು. ಗಾಂಧಿ ಹೀಗೆ ಹೇಳಿದರು "ಯುದ್ಧದ ಮಧ್ಯದಲ್ಲಿ ಭಾರತವನ್ನು ಬಿಡುವಂತೆ ನಾನು ಬ್ರಿಟಿಷರಿಗೆ ಹೇಳಲಾಗುವುದಿಲ್ಲ. ಹಾಗೆ ಮಾಡಿದರೆ ಶತ್ರುಗಳಿಗೆ ಭಾರತವನ್ನು ಪಾರಿತೋಷಕವಾಗಿ ಕೊಟ್ಟಂತೆ ಆಗುವುದು" ಗಾಂಧಿ ಅಂದಿನಿಂದ ಇಂದಿನವರಗೆ ಹೀಗೆ ಹೇಳುತ್ತಿದ್ದಾರೆ. "ಬ್ರಿಟಿಷರೂ ಅಮೇರಿಕದವರೂ ಭಾರತದಲ್ಲಿ ನಿಲ್ಲಬಹುದು. ಭಾರತದಲ್ಲಿ ಅವರು ತಮ್ಮ ಸೈನ್ಯಗಳನ್ನು ಬಲಪಡಿಸಿಕೊಳ್ಳಬಹುದು. ಅವರು ಶತ್ರುಗಳಿಗೆ ವಿರೋಧವಾಗಿ ಕಾದಲು ಭಾರತದಲ್ಲಿ ಸಿದ್ಧತೆ ಮಾಡಿಕೊಳ್ಳಬಹುದು" ಯುದ್ಧ ನಡೆಯುತ್ತಿರುವಾಗ ಭಾರತದಿಂದ ಹೊರಟುಹೋಗಿ ಎಂದು ಗಾಂಧಿಯೇ ಆಗಲಿ ಭಾರತದ ಇತರ ಯಾವ ಮುಖಂಡರೇ ಆಗಲಿ ಹೇಳುತ್ತಿಲ್ಲ. ಯುದ್ಧದ ಮಧ್ಯದಲ್ಲಿ ಪೂರ್ಣ ಸ್ವಾತಂತ್ರ್ಯವನ್ನೂ ಗಾಂಧಿಯೂ ಇತರ ಭಾರತದ ಮುಂದಾಳುಗಳೂ ನಿರೀಕ್ಷಿಸುವುದಿಲ್ಲ. ಗಾಂಧಿಯೂ ಭಾರತದ ಮುಖಂಡರೂ ಕೇಳುತ್ತಿರುವುದು ರಾಷ್ಟ್ರೀಯ ಸರ್ಕಾರ. ಗಾಂಧಿ ನನಗೆ ಹಾಗೆಯೇ ಹೇಳಿದರು. ಅದನ್ನೇ ಅನಂತರ ಪತ್ರಿಕೆಯಲ್ಲಿ ಬರೆದರು. "ರಾಷ್ಟ್ರೀಯ ಸರ್ಕಾರ ಯುದ್ಧದ ಪ್ರಯತ್ನದಲ್ಲಿ ಪ್ರವೇಶಿಸುವುದಿಲ್ಲ. ಮಿತ್ರರಾಷ್ಟ್ರಗಳೊಂದಿಗೆ ಪೂರ್ಣ ಸಹಾನುಭೂತಿಯ ಕೌಲು ಮಾಡಿಕೊಂಡು ಯುದ್ಧವನ್ನು ಗೆಲ್ಲಲು ಸಹಾಯ ಮಾಡುವುದು."

ಭಾರತಕ್ಕೆ ಇಂತಹ ಯಾವುದಾದರೂ ರಿಯಾಯ್ತಿಯನ್ನು ಕೊಟ್ಟ ಹೊರತು, ಯುದ್ಧಾನಂತರದ ಸ್ವಾತಂತ್ರ್ಯದ ಒಂದು ಕಂತನ್ನು ಈಗ ಕೊಟ್ಟ ಹೊರತು, ಭಾರತೀಯರನ್ನು ಯುದ್ಧ ಪ್ರಯತ್ನಕ್ಕೆ ಉತ್ಸಾಹದಿಂದ ಹುರಿದುಂಬಿಸುವುದು ಸಾಧ್ಯವಿಲ್ಲವೆಂದು ಭಾರತೀಯರು ಹೇಳುತ್ತಾರೆ. ಚೀಣದವರೂ ರಷ್ಯಾದವರೂ, ಈ ಯುದ್ಧದಲ್ಲಿ ಹಿಡಿದು ಇಷ್ಟು ಚೆನ್ನಾಗಿ ಯಾಕೆ ಕಾದಾಡುತ್ತಿದ್ದಾರೆಂದೂ, ಭಾರತೀಯರು ಯಾಕೆ ಈ ಯುದ್ಧದಲ್ಲಿ ಇಷ್ಟು ಉದಾಸೀನರಾಗಿದ್ದಾರೆಂದೂ ನಮ್ಮನ್ನು ನಾವು ಕೇಳಿಕೊಂಡರೆ—ಅದರ ಉತ್ತರ ಹೀಗೆ. ಯಾರಿಗೆ ಯಾವ ಯುದ್ಧದಿಂದ ಏನಾದರೂ ಲಾಭವಿದೆಯೋ ಅಥವ ನಷ್ಟವಾಗುವುದೋ. ಆ ಯುದ್ಧವನ್ನು ಜನರು ಮಾಡುತ್ತಾರೆ. ನಾವೂ ನೀವೂ ಈ ಯುದ್ಧ ಮಾಡುತ್ತಿರುವ ಕಾರಣ ನಮಗೆ ಇದರಿಂದ ಇಲ್ಲದಿದ್ದರೆ ನಷ್ಟವಾಗುತ್ತದೆ. ಅಥವ

ಯುದ್ಧದಿಂದ ನಮಗೇನಾದರೂ ಲಾಭವಿದೆಯೆ? ಆದರೆ ಭಾರತೀಯರಿಗೆ ಈ ಯುದ್ಧದಿಂದ ಆಗುವ ನಷ್ಟ ಏನೂ ಇಲ್ಲ. ಅವರಿಗೆ ಏನಾದರೂ ಲಾಭವಾಗಬಹುದೇ ಎಂಬುದನ್ನು ಯಾರೂ ಅವರಿಗೆ ಸ್ಪಷ್ಟವಾಗಿ ಹೇಳಿಲ್ಲ.

" ಆದರ ಬದಲು, ನಾನು 1941ನೆ ಸೆಪ್ಟೆಂಬರ್ ತಿಂಗಳಿನಲ್ಲಿ ಹೌಸ್ ಆಫ್ ಕಾಮನ್ಸ್ ಗ್ಯಾಲರಿಯಲ್ಲಿ ಕುಳಿತ್ತಿದ್ದೆ. ಚರ್ಚಿಲ್‌ರು ಪ್ರೆಸಿಡೆಂಟ್ ರೂಸವೆಲ್ಟ್‌ರೊಂದಿಗೆ ಸೇರಿ ಅಟ್ಲಾಂಟಿಕ್ ಘೋಷಣೆ ಆಗತಾನೆ ಹೊರಡಿಸಿ ಬಂದಿದ್ದರು. ಒಬ್ಬ ಪಾರ್ಲಿಮೆಂಟ್ ಸದಸ್ಯರು ಎದ್ದು ಹೀಗೆ ಕೇಳಿದರು. ಮುಖ್ಯ ಮಂತ್ರಿಗಳೇ. ಅಟ್ಲಾಂಟಿಕ್ ಘೋಷಣೆಯ ಮೂರನೆಯ ಟಿಪ್ಪಣಿಯ ಭಾಗ (ಪ್ರತಿಯೊಂದು ದೇಶಕ್ಕೂ ತನಗೆ ಬೇಕಾದ ಆಡಳಿತ ಕ್ರಮವನ್ನು ಆರಿಸಿಕೊಳ್ಳಲು ತನಗೆ ಹಕ್ಕು ಇರಬೇಕೆಂಬ ಭಾಗ) ಭಾರತಕ್ಕೂ ಅನ್ವಯಿಸುವುದೇ ಎಂಬುದಾಗಿ. ಚರ್ಚಿಲ್ಲರು ಎದ್ದು ನಿಂತುಕೊಂಡು " ಇಲ್ಲ ಸ್ವಾಮಿ " ಎಂದು ಹೇಳಿ ಕುಳಿತುಬಿಟ್ಟರು. ಅಲ್ಲಿಂದ ಈಚೆಗೆ ಸ್ಮಟ್ಸ್‌ರಾಗಲಿ ಹಾಲಿಫಾಕ್ಸ್‌ರಾಗಲಿ ಹರ್ಬರ್ಟ್‌ಮಾರಿಸ್ ಕ್ರಿಪ್ಸ್ ಮುಂತಾದ ಯಾವ ಬ್ರಿಟಿಷ್ ರಾಜಕಾರಣ ಧುರೀಣರಾಗಲಿ ಹೇಳಿದ ಮಾತುಗಳು, ಚರ್ಚಿಲ್‌ರ " ಇಲ್ಲ ಸ್ವಾಮಿ " ಎಂಬ ಈ ಎರಡು ಮಾತುಗಳ ಅಸ್ತಿತ್ವವನ್ನು ಹೋಗಲಾಡಿಸಿಲ್ಲ. ಚರ್ಚಿಲ್‌ರೇ ನವಂಬರ್ ಹತ್ತರಲ್ಲಿ ಲಂಡನ್‌ನಲ್ಲಿ ತಮ್ಮ ಮಾತುಗಳನ್ನು ಇನ್ನೂ ಪುಷ್ಟೀಕರಿಸಿದರು. " ಇಂಗ್ಲೆಂಡು ತನಗೆ ಸೇರಿದುದನ್ನು ತಾನು ಹಿಡಿದುಕೊಳ್ಳುತ್ತದೆ. ಬ್ರಿಟಿಷ್ ಸಾಮ್ರಾಜ್ಯ ದಿವಾಳಿ ಹೊಂದುವ ಉತ್ಸವದಲ್ಲಿ ಅಧ್ಯಕ್ಷನಾಗಲು, ನಾನು ಮುಖ್ಯ ಮಂತ್ರಿಯಾಗಲಿಲ್ಲ " ಬ್ರಿಟಿಷ್ ಸಾಮ್ರಾಜ್ಯವನ್ನು ಬ್ರಿಟಿಷ್ ಕಾಮನ್‌ವೆಲ್ತ್ ಎಂದು ಹೇಳಿದ ಮಾತ್ರಕ್ಕೆ ಅದರ ಸ್ವರೂಪ ಬದಲಾವಣೆಯಾಗುವುದಿಲ್ಲ. ಕಾನಡ, ನ್ಯೂಜಿಲೆಂಡ್ ದಕ್ಷಿಣ ಆಫ್ರಿಕ ಆಸ್ಟ್ರೇಲಿಯ ಇವು ಸ್ವತಂತ್ರ ಡೊಮಿನಿಯನ್‌ಗಳು. ಆದರೆ ಭಾರತ ತುಳಿಯಲ್ಪಟ್ಟ ಅಸುಖಿ ಅಧೀನರಾಷ್ಟ್ರ. ಜಪಾನನ್ನು ಸೋಲಿಸಲು ಭಾರತವನ್ನು ಯುದ್ಧಭೂಮಿಯಾಗಿ ನಾವು ಇಟ್ಟುಕೊಳ್ಳುವುದಾದರೆ, ಅಲ್ಲಿಯ ಕೋಟಿ ಸಂಖೆಯ ಜನರಿಗೆ ಅತೃಪ್ತಿ ವಿಷಾದಗಳುಂಟಾದರೆ ನಮಗೆ ಬಹಳ ಕಷ್ಟವಾಗುವುದು.

" ಈ ಯುದ್ಧದಲ್ಲಿ ನಮ್ಮ ಯುದ್ಧದ ಗುರಿಗಳೇನು? ನಾಲ್ಕು

ಸ್ವಾತಂತ್ರ್ಯಗಳು—ಮಾತಿನ ಸ್ವಾತಂತ್ರ್ಯ, ಪೂಜಾ ಸ್ವಾತಂತ್ರ್ಯ, ಸಮೃದ್ಧಿ, ಸ್ವಾತಂತ್ರ್ಯ—ಇವು ನಮಗೆ ಬೇಕು. ಭೂಪಟಕ್ಕಾಗಿ ಈ ಯುದ್ಧವಲ್ಲ. ಈ ಯುದ್ಧ ಮುಗಿದ ಮೇಲೆ ಶಾಂತಿ ಸಮ್ಮೇಳನ ನಡೆಯದೆಯೇ ಇರಬಹುದು. "ಒಂದು ದೇಶವನ್ನು ಏಳಿಸಿ ಮತ್ತೊಂದು ದೇಶವನ್ನು ತುಳಿಯುವುದರಿಂದ ಶಾಂತಿ ಸ್ಥಾಪನೆಯಾಗುವುದಿಲ್ಲ. ಒಂದು ದೇಶವನ್ನು ನಾಶಮಾಡುವುದರಿಂದಲಾಗಲಿ ಅದರ ಒಂದು ಭಾಗವನ್ನು ಕಿತ್ತು ಮತ್ತೊಂದು ದೇಶಕ್ಕೆ ಸೇರಿಸುವುದರಿಂದಾಗಲಿ ಶಾಂತಿಸ್ಥಾಪನೆಯಾಗುವುದಿಲ್ಲ. ಈ ಯುದ್ಧ ನಮಗಾಗಿ. ಇದು ಸಾಮಾಜಿಕ ಯುದ್ಧ. ನಮ್ಮ ಬಾಳಿನ ಮೂಲ ತತ್ವಗಳನ್ನೇ ಕುರಿತ ಯುದ್ಧ.

"ಎರಡು ದೃಷ್ಟಿಯಲ್ಲಿ ಯೋಚಿಸುವ ಜನ ಹೀಗೆ ಯೋಚಿಸುತ್ತಾರೆ. ಹಿಟ್ಲರ್ ಮುಸಲೋನಿ ಜಪಾನ್ ಫ್ರಾನ್ಸಿನ ಯುದ್ಧಕೋರರು ಈ ಯುದ್ಧವನ್ನು ಮಾಡಿದರು. ನಿಜ. ಆದರೆ ಅವರನ್ನು ಮಾಡಿದವರು ನಾವು. ಹಿಟ್ಲರ್ ಹುಚ್ಚ, ಪಿತ್ಥವಿಕಾರಿ, ಆದರೆ ಅವನು ನಮ್ಮ ನಾಗರೀಕತೆಯ ಫಲ. ಅವನು ನಮ್ಮ ಸಮಾಜದ ಮಗು. ಒಬ್ಬ ಕೈಸರನನ್ನು ನಾವು ಸೋಲಿಸಿದೆವು. ಒಬ್ಬ ಹಿಟ್ಲರ್ ಬಂದ. ಈ ಹಿಟ್ಲರನನ್ನು ಸೋಲಿಸಿದರೆ ಇವನಿಗಿಂತ ಕೆಟ್ಟ ಹಿಟ್ಲರ್ ಬರುತ್ತಾನೆ. ಹಿಟ್ಲರ್ ಬೆಳೆಯುವ ಭೂಮಿಯನ್ನೂ ಬೀಜವನ್ನೂ ನಾಶಮಾಡಬೇಕು. ಆದುದರಿಂದ ಇದು ಪರದೇಶದ ಫೆಸಿಸಂ ಮತ್ತು ಹಿಟ್ಲರಿಸಂಗೆ ಮಾತ್ರ ವಿರೋಧವಾದ ಯುದ್ಧವಲ್ಲ. ನಮ್ಮಲ್ಲಿಯೇ ಪ್ರಜಾಪ್ರಭುತ್ವಗಳಲ್ಲಿಯೇ ಇದ್ದುಕೊಂಡು ಈ ಯುದ್ಧವೂ ಇತರ ಇಂತಹ ಯುದ್ಧಗಳೂ ಆಗುವಂತೆ ಮಾಡುತ್ತಿರುವ ನಮ್ಮವರೇ ಆದ ಶೇಕಡ 50 ಹಿಟ್ಲರ್ ಶೇಕಡ ಹತ್ತು ಹಿಟ್ಲರ್ ಶೇಕಡ ಎರಡು ಹಿಟ್ಲರ್ ಇವರಿಗೆಲ್ಲಾ ವಿರೋಧವಾದ ಯುದ್ಧ ಇದು. ಶಾಂತಿ ನಮ್ಮ ಮೇಲೆ ಅವಲಂಬಿಸಿದೆ. ನಾವು ಯುದ್ಧದ ಕಾಲದಲ್ಲಿ "ಏನು ಮಾಡುತ್ತೇವೆ, ಏನು ಯೋಚಿಸುತ್ತೇವೆ ಎಂಬುದರ ಮೇಲೆ ಅವಲಂಬಿಸಿದೆ. ಶಾಂತಿಯನ್ನು ಸ್ಥಾಪಿಸುವ ಜನರಿಗಿಂತ ಆ ಶಾಂತಿ ಹೆಚ್ಚು ಉತ್ತಮವಾಗಿರುವುದಿಲ್ಲ. ಸರ್ಕಾರಗಳು ತಮ್ಮ ಪ್ರತಿಬಿಂಬದಲ್ಲಿಯೇ ಶಾಂತಿಯನ್ನು ಸ್ಥಾಪಿಸುತ್ತವೆ. ದಾನ ಔದಾರ್ಯಗಳಂತೆ, ಶಾಂತಿಯೂ ತನ್ನ ಸ್ವಂತ ಮನೆಯಲ್ಲಿಯೇ ಪ್ರಾರಂಭವಾಗುತ್ತದೆ. ನಾವು ಎಷ್ಟರಮಟ್ಟಿಗೆ

ಶಾಂತಿಗೆ ಸಿದ್ಧರಾಗುತ್ತೇವೆಯೋ ಅಷ್ಟರಮಟ್ಟಿಗೇ ಶಾಂತಿ ಉಂಟಾಗು ತ್ತದೆ. ನಾವು ಗಾಂಧಿಗೆ ಒಂದು ದಿನ ಕೃತಜ್ಞರಾಗಬೇಕಾಗುತ್ತದೆ. ಈ ಯುದ್ಧ ಕಾಲದಲ್ಲಿ, ಯುದ್ಧಾನಂತರ ಹೊಸ ಪ್ರಪಂಚ ನಿರ್ಮಾಣಕ್ಕೆ ನಾವು ಪರಿಶುದ್ಧರಾಗುವಂತೆ ನಮ್ಮ ಮುಂದೆ ಆ ಪ್ರಶ್ನೆ ಎತ್ತಿರುವುದಕ್ಕಾಗಿ.

" ಜುಲೈ 4ನೇ ತಾರೀಖು ನಾನು ಭಾರತದಲ್ಲಿದ್ದಾಗ ಬ್ರಿಟಿಷ್ ವೈಸ ರಾಯ್ ಲಾರ್ಡ್ ಲಿನ್‌ಲಿತ್‌ಗೋರವರು, ಅಮೇರಿಕಾ ಬ್ರಿಟಿಷ್ ಚಕ್ರಾ ಧಿಪತ್ಯದಿಂದ ಸ್ವತಂತ್ರವಾದುದನ್ನು ಹೊಗಳಲು ತನ್ನ ಅಮೃತಶಿಲೆಯ ಭವನದಲ್ಲಿ ಒಂದು ಸತ್ಕಾರ ಕೂಟವನ್ನು ಏರ್ಪಡಿಸಿದ್ದರು. (ನಗು) ಆ ಕೂಟದಲ್ಲಿ ಬ್ರಿಟಿಷ್ ಚಕ್ರಾಧಿಪತ್ಯದಿಂದ ಭಾರತ ಸ್ವತಂತ್ರವಾಗು ವುದಕ್ಕೆ ವಿರೋಧವಾಗಿ ಬೇಕಾದಂತೆ ವಾದಗಳನ್ನು ನಾನು ಕೇಳಿದೆ. ಬರ್ಮಾಕ್ಕೆ ಹೋಗಿದ್ದ ಒಬ್ಬ ಬ್ರಿಟಿಷ್ ಯುದ್ಧಾಧಿಪತಿ ನನಗೆ ಹೀಗೆ ಹೇಳಿ ದನು. " ಸ್ವತಂತ್ರ ಭಾರತ ಯುದ್ಧಾನಂತರ ತನ್ನ ರಕ್ಷಣೆಯನ್ನು ತಾನು ಮಾಡಿಕೊಳ್ಳಬಲ್ಲದೇ ?" ನಾನು " ಇಂಗ್ಲೆಂಡು ಮಾಡಿಕೊಳ್ಳಬಲ್ಲುದೇ " ಎಂದೆ. ಈ ಕಾಲದಲ್ಲಿ ಒಂಟಿಯಾದ ಯಾವ ರಾಜ್ಯತಾನೇ ತನ್ನ ರಕ್ಷಣೆ ಯನ್ನು ಮಾಡಿಕೊಳ್ಳಬಲ್ಲದು ? ಇಂಗ್ಲೆಂಡೂ ಅಲ್ಲ. ಫ್ರಾನ್ಸೂ ಅಲ್ಲ. ಇಟಲಿಯೂ ಅಲ್ಲ. ರಷ್ಯಾವೂ ಬಹುಶಃ ಅಲ್ಲ. ಈ ಯುದ್ಧಾನಂತರ ತನ್ನ ರಕ್ಷಣೆಯನ್ನು ಮಾಡಿಕೊಳ್ಳಬಹುದಾದ ರಾಷ್ಟ್ರಗಳು ಮಾತ್ರ ಸ್ವತಂತ್ರವಾಗುವುದಾದರೆ, ಸ್ವತಂತ್ರ ರಾಷ್ಟ್ರಗಳ ಸಂಖೆ ಬಹು ಕಡಿಮೆ ಯಾಗುವುದು. ನನ್ನನ್ನು ಕೇಳಿದ ಯುದ್ಧಾಧಿಕಾರಿಯ ಅಭಿಪ್ರಾಯ, ಈ ಯುದ್ಧವಾದ ಮೇಲೆ ಒಂದು ಅಂತರ ರಾಷ್ಟ್ರೀಯ ಸಂಸ್ಥೆ ಎಲ್ಲಾ ರಾಷ್ಟ್ರಗಳ ಸ್ವಾತಂತ್ರ್ಯವನ್ನೂ ಸಂರಕ್ಷಿಸುವುದೆಂದು. ಅದೇ ಸತ್ಕಾರ ಕೂಟದಲ್ಲಿ ಭವ್ಯಳಾದ ರಾಜಠೀವಿಯ ಸತಿ ಲಿನ್‌ಲಿತ್‌ಗೋರಿಗೆ ಮುಂದಲ ಆಸನದಲ್ಲಿ ನನ್ನನ್ನು ಕೂರಿಸಿದರು. ಆಕೆ ನನ್ನೊಂದಿಗೆ ಹವೆಯನ್ನು ಕುರಿತು ಮಾತನಾಡಲು ಪ್ರಯತ್ನಿಸಿದಳು. ಭಾರತದಲ್ಲಿ ಯಾವಾಗಲೂ ಹವದ ಮಾತೇ. ಅಲ್ಲಿ ಬೆಳಿಗ್ಗೆಯಿಂದ ಮಧ್ಯಾನ್ಹದವರೆಗೆ 110 ಡಿಗ್ರಿ ಉಷ್ಣವಿರುತ್ತದೆ. ಆದರೆ ನಾನು ಬೇಗ ಆಕೆಯನ್ನು ಆ ಮಾತಿನಿಂದ ತಪ್ಪಿಸಿ ರಾಜಕೀಯ ಮತ್ತು ಭಾರತ ಸ್ವಾತಂತ್ರ್ಯದ ಮಾತಿಗೆ ಎಳೆದೆ. " ಆದರೆ ಈ ಜನಗಳು ತಮ್ಮನ್ನು ತಾವು ಆಳಿಕೊಳ್ಳಲು ಶಕ್ತರೇ ಎಂದು

ಆಕೆ ಕೇಳಿದಳು. ಕೆಲವು ವೇಳೆ ನಾನು ಮಾತಿನಲ್ಲಿ ಒರಟ. ನಾನು "ಸತಿ ಲಿನ್‌ಲಿತ್‌ಗೋ, ಈ ರಾತ್ರಿ ಕೇಳುವುದಕ್ಕೆ ಅದು ಬಹು ವಿಚಿತ್ರ ವಾದ ಪ್ರಶ್ನೆಯಾಗಿದೆ. 1776 ರಲ್ಲಿ ಅಮೇರಿಕಾವನ್ನು ಕುರಿತು ಬ್ರಿಟಿಷ್ ಟೋರಿಗಳು ಹೇಳಿದುದು ಇದೇಯೆ. ಇವತ್ತು ವರ್ತಮಾನ ಪತ್ರಿಕೆಗಳಲ್ಲಿ ಅಚ್ಚಾಗಿರುವುದರಲ್ಲಿ ಪ್ರೆಸಿಡೆಂಟರು ಹೇಳಿರುವಂತೆ "ವಾಷಿಂಗ್‌ಟನ್‌ನ ಕಾಲದಲ್ಲಿ, ಸಾಮಾನ್ಯ ಸ್ತ್ರೀ ಪುರುಷರು ಸ್ವತಂತ್ರರಾಗಿ ತಮ್ಮ ದೇಶವನ್ನು ತಾವು ಆಳಿಕೊಳ್ಳಬಲ್ಲರೆಂದು ನಂಬದಿದ್ದವರು ಬೇಕಾದಂತೆ ಇದ್ದರು" ಎಂದೆ. ನಾನು ಹಾಗೇ ಯೋಚಿಸಿದೆ. ನಾಗರೀಕರೆನ್ನಿಸಿಕೊಂಡವರು ಪ್ರಪಂಚದಲ್ಲಿ ಮಾಡಿರುವ ಆಭಾಸ ಅನಾಹುತಗಳನ್ನು ನೋಡಿದರೆ, ಚೀನಾ ಇಂಡಿಯಾ ಮೊದಲಾದ "ಅನಾಗರೀಕ" ದೇಶಗಳನ್ನು ಜಗತ್ತನ್ನು ಆಳಲು ನಮಗೆ ಸಹಾಯಮಾಡಲು ಕರೆಯಬೇಕೆಂದು ಕಾಣುತ್ತದೆ. ಫ್ರಿಜಿಡೈರ್ (ತಣ್ಣಗಿರುವ ಪೆಟ್ಟಿಗೆ ಯಂತ್ರ) ಬಾಂಬು ಇವುಗಳನ್ನೆಲ್ಲಾ ಮಾಡುವುದರಲ್ಲಿ ನಾವೇನೋ ಬಹು ಸಾಹಸಿಗಳೇ. ಆದರೆ ಒಂದು ಜೀವಮಾನದಲ್ಲಿ ನಾವು ಎರಡು ಯುದ್ಧ ಮಾಡುತ್ತಿದ್ದೇವೆ. ಪ್ರಪಂಚದ ಆಡಳಿತವನ್ನು ನಡೆಸಲು ಇದು ನಮ್ಮ ಯೋಗ್ಯತೆಯನ್ನು ತೋರಿಸುವುದಿಲ್ಲ. ಹೇಗಾದರೂ ಆಗಲಿ. ವಾಷಿಂಗ್‌ಟನ್‌ನ ಕಾಲದಲ್ಲಿ ಅಮೇರಿಕದ ಬಹುಸಂಖ್ಯಾತರು, ತಾವು ಸ್ವಾತಂತ್ರ್ಯಕ್ಕೆ ಅರ್ಹರೆಂದು ತಿಳಿದಂತೆ ಏಷ್ಯಾದವರೂ ತಮ್ಮ ಸ್ವಾತಂತ್ರ್ಯವನ್ನು ಬಯಸುತ್ತಿದ್ದಾರೆ. ಅದನ್ನು ನಾವು ಎದುರಿಸಿದರೆ ಕಷ್ಟವುಂಟಾಗುತ್ತದೆ. ಸ್ವಾತಂತ್ರ್ಯವನ್ನು ಉಪಯೋಗಿಸುವ ಶಕ್ತಿ, ಕಲಿಯಬೇಕಾದುದು. ಆ ಶಕ್ತಿ ಹುಟ್ಟುವಾಗಲೇ ಬರುವುದಿಲ್ಲ. ಸ್ವಾತಂತ್ರ್ಯವನ್ನು ಚಲಾಯಿಸುವುದರ ಜತೆಯಲ್ಲಿಯೇ ಅದೂ ಬರುತ್ತದೆ.

"ಆ ಕೂಟದಲ್ಲಿಯೂ ಇತರ ಕಡೆಗಳಲ್ಲಿಯೂ ಭಾರತದ ಸ್ವಾತಂತ್ರ್ಯಕ್ಕೆ ಕೊನೆಯದಾದ ಅಡ್ಡಿಯನ್ನು ನಾನು ಕೇಳಿದೆ. ಹಿಂದು ಮುಸಲ್ಮಾನ ಪ್ರಶ್ನೆ. ಇಲ್ಲಿ ಈ ಮುಖ್ಯವಾದ ಮಾತನ್ನು ಜ್ಞಾಪಕದಲ್ಲಿಟ್ಟುಕೊಳ್ಳುವುದು ಆವಶ್ಯಕ. ಮಸೀತಿಯ ಮುಂದೆ ಸಂಗೀತ, ಗೋವಧೆ, ಇವುಗಳ ವಿಚಾರ ನಮ್ಮ ಕಿವಿಗೆ ಬೀಳುತ್ತಲೇ ಇರುತ್ತದೆ. ಆದರೆ ಎಲ್ಲಾ ಬ್ರಿಟಿಷ್ ಅಧಿಕಾರಿಗಳೂ ಹಿಂದೂ ಮುಸಲ್ಮಾನ ಮುಖಂಡರೂ ಒಂದು

ವಿಷಯವನ್ನು ಒಪ್ಪುತ್ತಾರೆ. ಭಾರತದ ಹಳ್ಳಿಗಳಲ್ಲಿ ಹಿಂದೂ ಮುಸಲ್ಮಾನರಿಗೆ ತಿಕ್ಕಾಟವಿಲ್ಲ. ಆದರೆ ಭಾರತದ ಹಳ್ಳಿಗಳು ಭಾರತದಲ್ಲಿ ಶೇಕಡ 90. ಬೇರೆ ಮಾತಿನಲ್ಲಿ ಹೇಳಬೇಕಾದರೆ ಹಿಂದು ಮುಸಲ್ಮಾನರ ಪ್ರಶ್ನೆ ಮನುಷ್ಯ ಮಾಡಿರುವ, ಪಟ್ಟಣದ ಪ್ರಶ್ನೆ. ಸರ್ ಸ್ಟ್ಯಾಫರ್ಡ್ ಕ್ರಿಪ್ಸ್, ಈ ಸಂಬಂಧದಲ್ಲಿ ತಾನು ಭಾರತದ ಮುಖಂಡರೊಂದಿಗೆ ಹಿಂದು ಮುಸಲ್ಮಾನ ಪ್ರಶ್ನೆಯನ್ನು ಕುರಿತು ಚರ್ಚಿಸಲಿಲ್ಲವೆಂದು ಹೌಸ್ ಆಫ್ ಕಾಮನ್ಸ್‌ನಲ್ಲಿ ಹೇಳಿದುದು ಗಮನಾರ್ಹವಾಗಿದೆ. ಇದು ಯಾಕೋ ವಿಚಿತ್ರವಾಗಿದೆ. ಅಲ್ಲವೆ? ಅವರು ಭಾರತದ ಪ್ರಶ್ನೆಯನ್ನು ಬಗೆಹರಿಸಲು ಭಾರತಕ್ಕೆ ಹೋದರು. ಭಾರತದ ಪ್ರಶ್ನೆ ಬಗೆಹರಿಯಲು, ಅತ್ಯಂತ ಮಹತ್ವದ ಪ್ರಶ್ನೆ ಹಿಂದು ಮುಸಲ್ಮಾನ ಪ್ರಶ್ನೆ ಆದರೆ ಕ್ರಿಪ್ಸ್, ಆ ಪ್ರಶ್ನೆಯನ್ನು ಭಾರತದ ಮುಖಂಡರೊಂದಿಗೆ ಚರ್ಚಿಸಲೇ ಇಲ್ಲ. ಯಾಕೆ? ಭಾರತದ ಸಮಸ್ಯೆಯ ಪರಿಹಾರ ಇಲ್ಲ. ಇದನ್ನು ತಿಳಿದು ಪಕ್ಷಗಳು ತಮ್ಮ ಬೇಡಿಕೆಗಳನ್ನು ಬಹಳ ಹೆಚ್ಚಿನ ಮಟ್ಟದಲ್ಲಿ ಇಡುತ್ತಾರೆ. ಅಸಂಬದ್ಧವಾಗಿ ಹೆದರಿಸುತ್ತಾರೆ. ಅವರೂ ಇತರ ಕಡೆಯ ರಾಜಕೀಯ ಮುಖಂಡರಂತೆಯೂ ಪಕ್ಷಗಳ ಮುಖಂಡರಂತೆಯೂ ಜವಾಬ್ದಾರಿಯಿಲ್ಲದವರಾಗಿ ಮಾತನಾಡುತ್ತಾರೆ.

ಆದರೆ ಕ್ರಿಪ್ಸ್ ಬಂದು, ಒಂದು ಗಳಿಗೆ ಮಟ್ಟಿಗೆ ಭಾರತದ ಸಮಸ್ಯೆಯ ಪರಿಹಾರ ಮಾರ್ಗವನ್ನು ತೋರಿಸಿದಾಗ ಅವರು ತಮ್ಮ ದೊಡ್ಡ ಕುದುರೆಗಳಿಂದ ಇಳಿದರು. ತಮ್ಮ ತಮ್ಮಲ್ಲಿಯ ವ್ಯತ್ಯಾಸಗಳನ್ನು ಮರೆತರು. ತಮ್ಮಲ್ಲಿರುವ ಒಮ್ಮತಗಳಾವುವು ಅವುಗಳನ್ನು ಕುರಿತು ಅವರು ಮಾತನಾಡಿದರೇ ಹೊರತು ವ್ಯತ್ಯಾಸಗಳಾವುವು ಎಂಬುವನ್ನು ಕುರಿತು ಅಲ್ಲ. ಗಾಂಧಿ, ಮುಸಲ್ಮಾನರೊಂದಿಗೆ ಸಹಕರಿಸಿ ರಾಷ್ಟ್ರೀಯ ಸರ್ಕಾರವನ್ನು ಸ್ಥಾಪಿಸುವುದಾಗಿ ಹೇಳಿದ್ದಾರೆ. ಜಿನ್ನ ಹಿಂದೂಗಳೊಂದಿಗೆ ಸಹಕರಿಸಿ ರಾಷ್ಟ್ರೀಯ ಸರ್ಕಾರವನ್ನು ಸ್ಥಾಪಿಸುವುದಾಗಿ ಹೇಳಿದ್ದಾರೆ. ಇನ್ನು ಆಗಬೇಕಾಗಿರುವುದು ಭಾರತದ ರಾಷ್ಟ್ರೀಯ ಸರ್ಕಾರ. ಅದನ್ನು ಕೊಡಬೇಕಾದವರು ಬ್ರಿಟಿಷರು. ಅವರು ಇಲ್ಲಿಯವರೆಗೆ ಅದನ್ನು ಕೊಡಲು ಒಪ್ಪಿಲ್ಲ. ನಿಷ್ಪಕ್ಷಪಾತವಾಗಿ ಯೋಚಿಸುವವರ ಅಭಿಪ್ರಾಯ ಇದು. ಬ್ರಿಟಿಷರು ಬಯಸಿದರೆ ಭಾರತದಲ್ಲಿ ಒಂದೇ ಗಳಿಗೆಯಲ್ಲಿ ರಾಜಕೀಯ ಒಗ್ಗಟ್ಟು

ಉಂಟಾಗುತ್ತದೆ. ಭಾರತದಲ್ಲಿ ಹಿಂದು ಮುಸಲ್ಮಾನರು ಅನೇಕ ಶತ ಮಾನಗಳಿಂದ ಜೀವಿಸುತ್ತಿದ್ದಾರೆ. ಮುಂದೆಯೂ ರಾಜಕೀಯ ಪ್ರಶ್ನೆ ಬಗೆ ಹರಿದ ಕೂಡಲೇ ಮತ್ತೆ ಹಾಗೆಯೇ ವಾಸಿಸುತ್ತಾರೆ. ಸಾಮ್ರಾಜ್ಯ ಸರ್ಕಾರಕ್ಕೆ ಜನರಲ್ಲಿ ಒಡಕನ್ನು ಹುಟ್ಟಿಸಿ ಅವರನ್ನು ಆಳಲು ಅನೇಕ ಮಾರ್ಗಗಳಿವೆ. ಪಕ್ಷಪಾತವನ್ನು ತೋರಿಸುವುದು, ಪದವಿಗಳನ್ನು ಕೊಡು ವುದು (ರಾವ್ ಬಹದ್ದೂರ್ ಇತ್ಯಾದಿ) ವರ್ತಮಾನ ಪತ್ರಿಕೆ ಮಾಸಪತ್ರಿಕೆ ಗಳಿಗೆ ಧನಸಹಾಯ ಮಾಡುವುದು, ಅಧಿಕಾರಗಳನ್ನು ಕೊಡುವುದು, ಕೆಲ ವರಿಗೆ ಅತ್ಯಾಶೆಯನ್ನು ಹುಟ್ಟಿಸುವುದು. ಎಲ್ಲಾ ಬಗೆಯ ಪ್ರಾಮಾಣಿಕ ಅಪ್ರಾಮಾಣಿಕ ಮಾರ್ಗಗಳನ್ನೂ ಅನುಸರಿಸಬಹುದಾಗಿದೆ.

"ನಾನು ಭಾರತದಿಂದ ಈ ನಂಬಿಕೆಯಿಂದ ಹಿಂದಿರುಗಿದೆ. ಇಷ್ಟ ಪಟ್ಟರೆ ಭಾರತದಲ್ಲಿ ಒಂದು ದಿನದಲ್ಲಿ ರಾಜಕೀಯ ಒಗ್ಗಟ್ಟು ಉಂಟಾಗು ತ್ತದೆ. ಮುಂದಲ ಸಾಮಾಜಿಕ ಆರ್ಥಿಕ ಪ್ರಗತಿಗೆ ಅದೇ ಮೊದಲನೆಯ ಮೆಟ್ಟಲು. ಭಾರತದ ಸ್ವಾತಂತ್ರ್ಯಕ್ಕೆ ಪ್ರತಿಬಂಧಕ ಭಾರತದಲ್ಲಿಲ್ಲ ಎಂಬ ನಂಬಿಕೆಯಿಂದ ನಾನು ಹಿಂದಿರುಗಿದೆ. ಆ ಪ್ರತಿಬಂಧಕ ಇರುವುದು ಇಂಗ್ಲೆಂಡಿನಲ್ಲಿ. ಅವರಿಗೆ ಭಾರತ ಬಹು ಒಳ್ಳೆಯ ವಸ್ತು. ಇಂಗ್ಲೆಂಡಿನಲ್ಲಿ ಅನೇಕ ಪಂಗಡಗಳೂ ಸಂಸಾರಗಳೂ ಕಂಪನಿಗಳೂ ಭಾರತದ ಐಶ್ವರ್ಯ ದಿಂದ ಪುಷ್ಟವಾಗಿವೆ. ಆದರೆ ಈ ಸಮಸ್ಯೆ ಇಷ್ಟರಲ್ಲಿ ಮುಗಿಯುವುದಿಲ್ಲ. ಅದು ಇನ್ನೂ ದೊಡ್ಡದು. ಚೇಂಬರ್‌ಲೇನ್ ಸಮಾಧಾನ ಮಾಡುವ ಪ್ರಕೃತಿಯವರು. ಅವರ ಇಂಗ್ಲೆಂಡು (ಜಾತಿಯ ಹೆಮ್ಮೆಯ ಧನಿಕರ ಶ್ರೀಮಂತರ ಇಂಗ್ಲೆಂಡು) ಯುದ್ಧದಲ್ಲಿ ತೊಡಗಬಾರದೆಂದು ಅವರು ಹೆದ ರಿದರು. ಆದರೆ ಚರ್ಚಿಲರು "ಇಲ್ಲ. ಇಂಗ್ಲೆಂಡ್ ಈ ಯುದ್ಧದಲ್ಲಿ ಕಾದಬಲ್ಲದು. ಗೆಲ್ಲಬಲ್ಲದು. ಗೆದ್ದೂ ಹಳೆಯ ಇಂಗ್ಲೆಂಡ್ ಆಗಿಯೇ ಉಳಿಯ ಬಲ್ಲದು" ಎಂದರು. ಚರ್ಚಿಲರ 'ಇಂಗ್ಲೆಂಡ್'ನಲ್ಲಿ ಭಾರ ತದ ಗುಲಾಮಗಿರಿ ಬೀವರಿಡ್ಜ್ ವರದಿಯನ್ನು ಸೊನ್ನೆ ಮಾಡಿದುದು ಇನ್ನೂ ಇವೇ ಮುಂತಾದ ಅನೇಕ ಸ್ವಾತಂತ್ರ್ಯ ವಿರೋಧಗಳೆಲ್ಲಾ ಅಡಕ ವಾಗಿವೆ.

"ಆದುದರಿಂದ ಭಾರತವು ಸ್ವಾತಂತ್ರ್ಯಕ್ಕೆ ಸಿದ್ಧವಾಗಿದೆಯೇ ಎಂಬುದಲ್ಲ ಈಗಿನ ಪ್ರಶ್ನೆ. ನಾವು ಭಾರತ ಸ್ವಾತಂತ್ರ್ಯಕ್ಕೆ ಸಿದ್ಧವಾಗಿ

ದ್ದೇವೆಯೇ" ಎಂಬುದು. ಈ ಯುದ್ಧದ ಫಲವಾಗಿ ಚೇಂಬರ್‌ಲೇನ್ ಚರ್ಚಿಲ್ಲರ ಇಂಗ್ಲೆಂಡ್ ಅಲ್ಲದೆ ಹೊಸ ಇಂಗ್ಲೆಂಡು ಆವಿರ್ಭವಿಸುವುದಾದರೆ, ಅದು ಭಾರತವನ್ನು ಅಧೀನದಲ್ಲಿಟ್ಟುಕೊಳ್ಳಲು ಬಯಸುವುದಿಲ್ಲ. ಅದೇ ಮುಖ್ಯವಾದ ಪ್ರಶ್ನೆ. ಸಾಮ್ರಾಜ್ಯವಿದ್ದರೆ ಯುದ್ಧವಿರುತ್ತದೆ. ಸಾಮ್ರಾಜ್ಯಗಳನ್ನು ನಾಶಮಾಡಬೇಕಾದರೆ ಹೊಸ ಇಂಗ್ಲೆಂಡು ಬೇಕು. ಹಳೆ ಅಮೆರಿಕ ಇದ್ದರೆ ಹೊಸ ಇಂಗ್ಲೆಂಡು ಇರಲಾರದು. ಹಳೆ ಪ್ರಪಂಚದಲ್ಲಿ ಹೊಸ ಇಂಗ್ಲೆಂಡು ಇರಲಾರದು. ಪ್ರಜಾಪ್ರಭುತ್ವದ ರಾಜ್ಯಗಳಲ್ಲಿ ದೂರ ಫಲಗಳುಳ್ಳ ಬದಲಾವಣೆಗಳ ಮೇಲೆ ಭಾರತದ ಸ್ವಾತಂತ್ರ್ಯವು ಅವಲಂಬಿಸಿದೆ.

ಬ್ಯಾಂಕ್ ಆಫ್ ಇಂಗ್ಲೆಂಡಿನ ಡೈರೆಕ್ಟರ್ ಆದ ಜಾನ್ ಮೆಯರ್ ನಾರ್ಡ ಕೆಯುನ್ಸ್‌ರವರು ಒಂದು ಭಾಷಣದಲ್ಲಿ ಹೀಗೆ ಹೇಳಿದರು "ಈ ಯುದ್ಧವಾದ ಮೇಲೆ ಇಂಗ್ಲೆಂಡು, ತನ್ನ ರಫ್ತು ವ್ಯಾಪಾರವನ್ನು 1939 ರಲ್ಲಿದ್ದುದರ 50 ರಷ್ಟು ಹೆಚ್ಚಿಸಬೇಕು. ಇದರಲ್ಲಿ ಸಂದೇಹವೇ ಇಲ್ಲ. ಇಲ್ಲದಿದ್ದರೆ ಇಂಗ್ಲೆಂಡು ನಾಶವಾಗುವುದು." ಇಂಗ್ಲೆಂಡು ಬದುಕಬೇಕಾದರೆ ಅದರ ರಫ್ತು ವ್ಯಾಪಾರ 1938 ರದಕ್ಕಿಂತ ಶೇಕಡ 50 ಹೆಚ್ಚಬೇಕಾದರೆ, ಇಂಗ್ಲೆಂಡು ಆ ರಫ್ತು ವ್ಯಾಪಾರವನ್ನು ತೆಗೆದುಕೊಳ್ಳುವ ಸಾಮ್ರಾಜ್ಯವನ್ನು ಬಿಡುವುದು ಹೇಗೆ ?

---

## ೩೮. ರಾಷ್ಟ್ರವಾಣಿ

ವಾಸ್ತವಾಂಶ ಹೀಗಿತ್ತು. ದೇಶ ಯುದ್ಧಕ್ಕಾಗಿ ತನುಮನ ಧನಗಳನ್ನು ಚೆಲ್ಲಲು ಸಿದ್ಧವಾಗಿದ್ದಿತು. ಕೋಟಿ ಸಂಖ್ಯೆಯಲ್ಲಿ ಯುದ್ಧ ಭೂಮಿಯಲ್ಲಿ ಮಡಿದು ರಕ್ತದ ಕಡಲ್ಕಾಲುವೆ ಹರಿಸಲು ಸಿದ್ಧವಾಗಿದ್ದಿತು. "ಆದರೆ ಸ್ವತಂತ್ರ ರಾಷ್ಟ್ರವಾಗಿ ಮಾತ್ರ ಕಾದುತ್ತೇವೆ. ಕೇವಲ ನಮ್ಮ ಶೃಂಖಲೆಗಳನ್ನೇ ಬಲಪಡಿಸುವ ಸಾಮ್ರಾಜ್ಯ ಯುದ್ಧವಾದರೆ ಕಾದುವುದಿಲ್ಲ ಎಂದಿತು. ಅಂದಿನ ನಮ್ಮ ಮನೋಭಾವವನ್ನು ಲೆಜಿಸ್ಲೇಟಿವ್ ಕೌನ್ಸಿಲಿನಲ್ಲಿ ಶ್ರೀ ಬುಲಾಭಾಯಿ ದೇಸಾಯಿಯವರು ಹೀಗೆ ವ್ಯಕ್ತಪಡಿಸಿದರು"

"ಗವರ್ನರ್ ಜನರಲ್ ಭಾರತದ ಹೆಸರಿನಲ್ಲಿ ಯುದ್ಧವನ್ನು ಘೋಷಿಸಿದ ಕೂಡಲೇ, ಕಾಂಗ್ರೆಸ್ ವರ್ಕಿಂಗ್ ಕಮಿಟಿ ಒಂದು ಹೇಳಿಕೆಯನ್ನು ಕೊಟ್ಟಿತು. ನಾವು ಆ ಹೇಳಿಕೆಯಂತೆ ನಡೆಯಲು ಯಾವಾಗಲೂ ಸಿದ್ಧರಾಗಿದ್ದೇವೆ. ಆ ಹೇಳಿಕೆ, ಯಾವ ಒಂದು ಪಕ್ಷದ ಪರವಾಗಿಯೂ ಕೊಟ್ಟ ಹೇಳಿಕೆಯಲ್ಲ, ಈ ಯುದ್ಧ ಇರುವುದನ್ನು ಇರುವಂತೆ ನಿಲ್ಲಿಸುವ ಯುದ್ಧವಾದರೆ, ಸಾಮ್ರಾಜ್ಯ ಅಧೀನ ರಾಷ್ಟ್ರಗಳನ್ನೂ ವಸಾಹತುಗಳನ್ನೂ ತಮಗೇ ಎಲ್ಲಾ ಸುಖ ಭೋಗಗಳನ್ನೂ ಮುಂದುವರಿಸುವುದಕ್ಕಾದರೆ, ಭಾರತಕ್ಕೂ ಈ ಯುದ್ಧಕ್ಕೂ ಸಂಬಂಧವಿಲ್ಲ. ಆದರೆ ಈ ಯುದ್ಧ ಪ್ರಜಾ ಸ್ವಾತಂತ್ರ್ಯಕ್ಕಾಗಿ, ಪ್ರಜಾ ಸ್ವಾತಂತ್ರ್ಯದ ಜಗತ್ತಿಗಾಗಿಯಾದರೆ ಭಾರತಕ್ಕೆ ಅದರಲ್ಲಿ ಪೂರ್ಣವಾಗಿ ಉತ್ಸಾಹವಿದೆ. ಭಾರತ ಸ್ವಾತಂತ್ರ್ಯಕ್ಕೂ ಜಗತ್ತಿನ ಮತ್ತು ಬ್ರಿಟಿಷ್ ಪ್ರಜಾ ಸ್ವಾತಂತ್ರ್ಯಕ್ಕೂ ವಿರೋಧವಿಲ್ಲವೆಂಗ್ಸು ವರ್ಕಿಂಗ್ ಕಮಿಟಿಗೆ ನಂಬಿಕೆಯಾಗಿದೆ. ಆದರೆ ಭಾರತದಲ್ಲಿ ಪ್ರಜಾ ಸ್ವಾತಂತ್ರ್ಯಕ್ಕೂ ಸಾಮ್ರಾಜ್ಯವಾದ ಮತ್ತು ಸರ್ವಾಧಿಕಾರಕ್ಕೂ, ಇತರ ಕಡೆಗಳ ಪ್ರಜಾ ಸ್ವಾತಂತ್ರ್ಯಕ್ಕೂ ವ್ಯತ್ಯಾಸವಿದೆ. ಗ್ರೇಟ್ ಬ್ರಿಟನ್ ಪ್ರಜಾ ಸ್ವಾತಂತ್ರ್ಯವನ್ನು ಸ್ಥಾಪಿಸುವುದಕ್ಕೂ ಉಳಿಸುವುದಕ್ಕೂ ಯುದ್ಧ ಮಾಡುವುದಾದರೆ, ಆಗ ಅದು ತನ್ನ ಅಧೀನ ರಾಷ್ಟ್ರಗಳಲ್ಲಿ ಸಾಮ್ರಾಜ್ಯತ್ವವನ್ನು ನಾಶಮಾಡಿ ಭಾರತದಲ್ಲಿ ಪ್ರಜಾ ಸ್ವಾತಂತ್ರ್ಯವನ್ನು ಸ್ಥಾಪಿಸಬೇಕು. ಭಾರತೀಯರಿಗೆ ತಮ್ಮನ್ನು ತಾವು ಆಳಿಕೊಳ್ಳುವ ಸ್ವಾತಂತ್ರ್ಯವಿರಬೇಕು.

"ಆಗ ನಾವು ಆ ನಿಲುವಿನಲ್ಲಿ ನಿಂತೆವು ಅಲ್ಲಿಂದಲೂ ಅದೇ ನಿಲುವಿನಲ್ಲಿ ನಿಂತಿದ್ದೇವೆ. ಮುಂದೆ ಹೀಗೆ ಹೇಳಿದೆವು "ವರ್ಕಿಂಗ್ ಕಮಿಟಿ ಬ್ರಿಟಿಷ್ ಸರ್ಕಾರವನ್ನು ಹೀಗೆ ಕೇಳುತ್ತದೆ. ಪ್ರಜಾ ಸ್ವಾತಂತ್ರ್ಯ ಸಾಮ್ರಾಜವಾದಿತ್ವ ಭಾವಿ ಪ್ರಪಂಚ ಇವುಗಳನ್ನು ಕುರಿತು ನಿಮ್ಮ ಯುದ್ಧದ ಉದ್ದೇಶಗಳನ್ನು ಸ್ಪಷ್ಟವಾಗಿ ಘೋಷಿಸಿ. ಈ ಉದ್ದೇಶಗಳು ಭಾರತಕ್ಕೆ ಹೇಗೆ ಅನ್ವಯಿಸುತ್ತವೆ. ಮತ್ತು ಈಗ ಹೇಗೆ ಭಾರತಕ್ಕೆ ಅನ್ವಯಿಸುತ್ತೀರಿ, ಇದನ್ನೂ ಘೋಷಿಸಿ." ಯುದ್ಧ ಪ್ರಾರಂಭವಾದಂದಿನಿಂದ ಈ ಯುದ್ಧವನ್ನು ನಮ್ಮ ಮೇಲೆ ಬಲಾತ್ಕಾರವಾಗಿ ಹೇರಿದ್ದರೂ, ನಮ್ಮ ಹೇಳಿಕೆಗೆ ಹೇಗೆ ಪ್ರತಿಕ್ರಿಯೆ ಉಂಟಾಗಬಹುದೆಂದು ನಾವು ನಿರೀಕ್ಷಿಸುತ್ತಿದ್ದೇವೆ.

"ಈ ಯುದ್ಧ ಹೀಗೆ ನಮ್ಮ ಮೇಲೆ ಬಲಾತ್ಕಾರವಾಗಿ ಹೇರಿದ

ಯುದ್ಧವಾದರೂ ಯಾವ ನಿಯಮಕ್ಕೆ ಅನುಸಾರವಾಗಿ ಈ ಯುದ್ಧವನ್ನು ನಮ್ಮ ಸ್ವಂತ ಯುದ್ಧವಾಗಿ ಮಾಡಿಕೊಳ್ಳುತ್ತೇವೆ " ಎಂಬುದನ್ನು ಸ್ಪಷ್ಟ ವಾಗಿ ಹೇಳಿದ್ದೇವೆ. ಇದು ನಮ್ಮ ಮೇಲೆ ಬಲಾತ್ಕಾರವಾಗಿ ಹೇರಿರುವ ಯುದ್ಧವೆಂದೆವು. ಎಷ್ಟು ವಾದಿಸಿದರೂ ಇದು ಬಲಾತ್ಕಾರವಾಗಿ ನಮ್ಮ ಮೇಲೆ ಹೇರಿದ ಯುದ್ಧ ಎಂಬುದು ಸುಳ್ಳಲ್ಲ. ನಮ್ಮನ್ನು ಯುದ್ಧಕ್ಕೆ ಎಳೆ ಯಲು ಬ್ರಿಟನ್ ಏನೇ ಸಬೂಬು ಹೇಳಲಿ, ಬಲಾತ್ಕಾರವಾಗಿ ನಮ್ಮ ಮೇಲೆ ಹೇರಿದ ಯುದ್ಧವೆಂಬ ಕಾರಣದಿಂದಲೇ ನಾವು ಇದನ್ನು ಪ್ರತಿಭಟಿ ಸಬೇಕಾದರೂ, ಈ ಯುದ್ಧ ಇಂಗ್ಲೆಂಡು ಭಾರತವನ್ನು ತನ್ನ ಸ್ವಾಧೀನ ದಲ್ಲಿಟ್ಟುಕೊಳ್ಳುವುದಕ್ಕಾಗಿ ಮಾಡುವ ಯುದ್ಧವಲ್ಲ, ಎಂದು ತಿಳಿದರೆ ನಾವು ಯುದ್ಧದಲ್ಲಿ ಭಾಗವಹಿಸಲು ಸಿದ್ಧರಾಗಿದ್ದೇವೆ. ಆದುದರಿಂದ ಸಮಸ್ಯೆ ಯೂ ಪರಿಸ್ಥಿತಿಯೂ ತೀರ ಸುಲಭವಾಗಿದೆ. ಇದು ಭಾರತದ ಯುದ್ಧ ವಾಗದಿದ್ದಲ್ಲಿ ಭಾರತದ ಸಹಾಯ ದೊರೆಯುವುದು ಸಾಧ್ಯವಿಲ್ಲ. ನಮ್ಮದು ಈ ನಿಲು ಇವತ್ತು; ಆವತ್ತೂ ಇದೇ ನಿಲು.

"ಹೀಗೆ ನಾವು ಹೇಳಿದ ಮೇಲೆ ಬೇಕಾದಂತೆ ಚರ್ಚೆ ಆಯಿತು. ಆಗಿಂದಾಗ್ಗೆ ಉದ್ದೇಶಗಳನ್ನೂ ಸ್ಪಷ್ಟಪಡಿಸಿದರು. ಸರ್ಕಾರದ ಪರವಾಗಿ ಸೆಂಟ್ರಲ್ ಲೆಜಿಸ್ಲೆಟೀವ್ ಅಸೆಂಬ್ಲಿಯಲ್ಲಿ ಶ್ರೀ ಜೇಮ್ಸರು ಹೇಳಿದರು. ಕೊನೆಯಲ್ಲಿ ವೈಸರಾಯರು ನಮಗೆ ನಂಬಿಕೆ ಕೊಡುವುದಾಗಿ ಹೇಳಿದರು. ಆದರೆ ನೀವು ಅಧಿಕಾರ ಕೇಳದಿರಿ. ಅಧಿಕಾರದಿಂದ ನಿಮಗೆ ಆಗುವ ಪ್ರಯೋಜನವೇನು ಎಂದಿರಿ? ಇಲ್ಲಿ, ನಾವು ಕಾದಬೇಕೆಂದು ಹೇಳುವವರು ಬ್ರಿಟಿಷ್ ಗವರ್ನಮೆಂಟು ಅಲ್ಲ. ಅದರ ಇಲ್ಲಿಯ ಪ್ರತಿನಿಧಿಗಳು. ಇವರಿಗೆ ತಮ್ಮ ಕುಲಾಭಿಮಾನ ಹೆಚ್ಚು. ಈ ಸರ್ಕಾರದ ಪ್ರತಿನಿಧಿಗಳು "ಅಧಿಕಾರ ನಮ್ಮ ಕೈಯಲ್ಲಿ ಉಳಿಯಬೇಕು. ನೀವು ನಮ್ಮ ಆಳುಗಳಾಗಿ ಯುದ್ಧ ದಲ್ಲಿ ಕಾದಿ " ಎಂದರು. ಅಧಿಕಾರ ನಮ್ಮಲ್ಲಿ, ನೀವು ನಮ್ಮ ಆಯುಧ ಮಾತ್ರ. ಇದೇ ನಮ್ಮ ಪರಸ್ಪರ ಸಂಬಂಧವಾದರೆ ನಾನು ಈ ಕೇಳಿಕೆ ಯನ್ನು ನಿರ್ದಾಕ್ಷಿಣ್ಯವಾಗಿ ನನಗೆ ಸಾಧ್ಯವಾದ ಎಲ್ಲಾ ರೀತಿಗಳಿಂದಲೂ ತಿರಸ್ಕರಿಸುತ್ತೇನೆ. ಇದು ನಮ್ಮ ಯುದ್ಧ ಎಂದು ಸುಮ್ಮನೆ ನಮ್ಮನ್ನು ಹೆದರಿಸಿ, ಭೂಮಿಯ ಮೇಲೆ ಸ್ವರ್ಗ ಯಾವತ್ತೋ ಬರುತ್ತೆ ಎಂದು ಹೇಳುವುದರಿಂದ ಪ್ರಯೋಜನವೇನು? ಭಾರತೀಯ ಇತಿಹಾಸದ ಹಿಂದಲ

ಅನುಭವದಿಂದ ಈ ವಾದಗಳಿಗೆಲ್ಲ ತಿರುಳಿಲ್ಲವೆಂದು ನಮಗೆ ಗೊತ್ತಾಗಿದೆ. ನಾನು ಯಾರನ್ನೂ ದೂಷಿಸುವುದಿಲ್ಲ. ಯಾರಿಗೂ ದುರುದ್ದೇಶವನ್ನು ಹೇಳುವುದಿಲ್ಲ. ಆದರೆ ಅನುಭವದಿಂದ ಜ್ಞಾನ ಹೊಂದಿ ಲಾಭ ಸಂಪಾದಿಸದ ಮನುಷ್ಯ ಮನುಷ್ಯನೇ ಅಲ್ಲ; ಜಾಣನಾದ ಮನುಷ್ಯನೇ ಅಲ್ಲ.

"ಕಳೆದ ಯುದ್ಧದಲ್ಲಿ ಭಾರತ ಪೂರ್ಣವಾಗಿ ಸಹಾಯ ಮಾಡಿತು. ಗಾಂಧಿಯವರೂ ಸಹಾಯ ಮಾಡಿದರು. ನಾನೂ ಮಾಡಿದೆ. ನಾನು ನನ್ನ ಮಿತ್ರ ಸರ್ ಥಾಮಸ್ ಸ್ಟ್ರಂಗ್‌ಮನ್‌ರ ಜತೆಯಲ್ಲಿ ಉಪನ್ಯಾಸ ಮಾಡುತ್ತಾ ತಿರುಗಿದೆ. 15 ಲಕ್ಷ ಜನರೂ ಎಪ್ಪತ್ತುಕೋಟಿ ಪೌಂಡುಗಳೂ ಸಹಾಯ ಮಾಡಿದೆವು. ಯುದ್ಧದ ನಂತರ ನಡೆದುದು ನಮಗೆಲ್ಲಾ ಗೊತ್ತೇ ಇದೆ. ಆಗಲೂ ಈಗ ಹೇಳುತ್ತಿರುವ ಮಾತುಗಳನ್ನೇ ಹೇಳಿದರು, ಜಗತ್ತಿನ ಸ್ವಾತಂತ್ರ್ಯವನ್ನು ರಕ್ಷಿಸುವುದಾಗಿ, ಸಣ್ಣ ಸಣ್ಣ ರಾಷ್ಟ್ರಗಳಿಗೂ ಅಧೀನ ರಾಷ್ಟ್ರಗಳಿಗೂ ಸ್ವಾತಂತ್ರ್ಯ ಕೊಡುವುದಾಗಿ ಹೇಳಿದರು. ಜರ್ಮನರನ್ನು ಬಾಯಿಗೆ ಬಂದಂತೆ ಬೈದರು. ಆದರೆ ವರ್ಸಲಿಸ್ ಒಪ್ಪಂದದಲ್ಲಿ ಒಬ್ಬರನ್ನೊಬ್ಬರು ಅಪ್ಪಿಕೊಂಡರು. ಜರ್ಮನರನ್ನು ಕುರಿತ ಈ ಬೈಗಳಿಂದ ಯಾರೂ ಮೋಸ ಹೋಗುವುದಿಲ್ಲ. ನಿಮಗೆ ಬೇಕಾದ ಕೂಡಲೆ, ಕಾಡು ಪ್ರಾಣಿಯಾಗಿದ್ದುದು ಸಾಧು ಪ್ರಾಣಿಯಾಗುತ್ತದೆ. ಆದುದರಿಂದ "ಈ ಯುದ್ಧ ಅನಾಗರೀಕತೆಗೆ ಎದುರಾಗಿ ನಾಗರೀಕತೆಯ ಯುದ್ಧ" ಎಂದು ನಮಗೆ ಹೇಳುವುದು ತಿರುಳಿಲ್ಲದ ವಾದ. ನಾಗರೀಕತೆಯು ಭಾರತದ ಗುಲಾಮಗಿರಿಯನ್ನು ಮುಂದುವರಿಸುವುದಾದರೆ, ನನಗೆ ಅದು ನಾಗರೀಕತೆಯಲ್ಲ. ನನಗೆ ಅದು ಯಾವಾಗ ನಾಗರೀಕತೆಯಲ್ಲವೋ ಆಗ ನಾನು "ನಿನ್ನ ನಾಗರೀಕತೆಯನ್ನು ನೀನು ಸಂರಕ್ಷಿಸಿಕೊ" ಎನ್ನುತ್ತೇನೆ. ನೀವು ಮಾತಿನಲ್ಲಿ ಒಳ್ಳೆಯ ಚಿತ್ರವನ್ನು ತೋರಿಸುತ್ತೀರಿ. ಇದು ಮಿಶನರಿಗಳ ಚಾಕಚಕ್ಯ. ಮಿಶನರಿ ಒಂದು ಒಳ್ಳೆಯ ಚಿತ್ರವನ್ನು ಬಾಯಲ್ಲಿ ತೋರಿಸುತ್ತಾನೆ. ನಿಮಗೆ ಆ ಸುಂದರವಾದ ಜಗತ್ತು ಸಿಕ್ಕಿದಂತೆಯೇ ನಿವು ಭಾಸುತ್ತೀರಿ. ಯಕ್ಷಿಣಿ ಮಂತ್ರಗಾರನೂ ಹಾಗೆಯೇ. ಇಲ್ಲಿ ಬರಿನೆಲ. ಈಗ ನೋಡಿ ಮಾವಿನ ಗಿಡ. ಹಣ್ಣು. ಯಾಕೆ ಹಣ್ಣು ತಿನ್ನುವುದಿಲ್ಲ" ಕ್ಷಮಿಸಿ, ಇದರಿಂದ ಪ್ರಯೋಜನವಿಲ್ಲ. ನಿಮಗೆ ಅರ್ಥವಾಗದ ಭಗವದ್ಗೀತೆಯ ಶ್ಲೋಕಗಳನ್ನು ಹೇಳುವುದರಿಂದ

ಲೂ ಪ್ರಯೋಜನವಿಲ್ಲ. ಕಷ್ಟವನ್ನು ಸಹಿಸಿ ನಿಮ್ಮ ಹೃದಯದ ಪರಿಶುದ್ಧ ವಾಗಿದೆಯೆಂದು ನಾನು ತಿಳಿದಿದ್ದೆ. ಕ್ರಿಸ್ತರ ಪುಸ್ತಕವಂತೂ ಹಾಗೆ ಹೇಳುತ್ತದೆ. ಆದರೆ ಕಷ್ಟದಿಂದ ನೀವು ಹೆಚ್ಚು ಎಚ್ಚರಿಕೆಯುಳ್ಳವರೂ ಸೋಲದವರೂ ಮಾತ್ರ ಆದಿರಿ. ನಮಗೆ ಅಧಿಕಾರ ಕೊಡದಿದ್ದರೆ ನಾವು ಖಂಡಿತ ಸಹಾಯಮಾಡುವುದಿಲ್ಲ. ಅಧಿಕಾರವಿಲ್ಲದಿದ್ದರೆ ಜವಾಬ್ದಾರಿ ನಿರ್ವಹಿಸಲು ಸಾಧ್ಯವಿಲ್ಲ ಎಂಬುದು ನಿಮಗೆ ತಿಳಿಯಬೇಕು.

"ಪರಿಸ್ಥಿತಿ ಹೀಗೆ. ಈ ಸಭೆಗೂ ಪ್ರಪಂಚಕ್ಕೂ ಒಂದು ವಿಷಯ ನಾವು ಸ್ಪಷ್ಟಪಡಿಸುತ್ತೇವೆ. ನೀವು ಪ್ರಜಾಸ್ವಾತಂತ್ರ್ಯ ಪ್ರೇಮಿಗಳು ಎಂದು ಹೇಳುವುದು ಶುದ್ಧ ಠಕ್ಕು; ಮೋಸ. ಪ್ರಜಾಸ್ವಾತಂತ್ರ್ಯಕ್ಕೆ ಯಾರು ತಾನೇ ವಿರೋಧಿಗಳು? ಪ್ರಜಾಸ್ವಾತಂತ್ರ್ಯವನ್ನು ಪ್ರಶಂಸಿಸು ವುದರಲ್ಲಿ ನಾನು ಯಾರಿಗೂ ಕಡಿಮೆ ಇಲ್ಲ. ಆದರೆ ಯಾರ ಪ್ರಜಾ ಸ್ವಾತಂತ್ರ್ಯ? ನಿಮ್ಮ ಪ್ರಜಾಸ್ವಾತಂತ್ರ್ಯವೇ, ನಮ್ಮ ಪ್ರಜಾಸ್ವಾತಂ ತ್ರ್ಯವೇ, ಇಬ್ಬರ ಒಟ್ಟಾದ ಪ್ರಜಾಸ್ವಾತಂತ್ರ್ಯವೇ. "ನಿಮ್ಮ ಪ್ರಜಾ ಸ್ವಾತಂತ್ರ್ಯ ನಮ್ಮ ಗುಲಾಮಗಿರಿ" ಎನ್ನುವುದಾದರೆ ಆ ಮಾತು ಮೋಸದ ಮಾತು. ಆದರೆ ಅದರ ಬದಲು ಅದು ನಮ್ಮಿಬ್ಬರ ಪ್ರಜಾ ಸ್ವಾತಂತ್ರ್ಯವೂ ಆದರೆ, ನಾವು ಸಮಾನರಾಗಿ ನಿಮ್ಮ ಜತೆಯಲ್ಲಿ ಕಾದಲು ಸಿದ್ಧರಾಗಿದ್ದೇವೆ. ಯುದ್ಧ ಪ್ರಾರಂಭವಾದ ಒಂದು ವಾರದಲ್ಲಿಯೇ ಇದನ್ನು ಹೇಳಿದೆವು. "ಭಾರತ ಎಂದೂ ಯುದ್ಧದಿಂದ ಹಿಂದೆಗೆಯುವು ದಿಲ್ಲ" ಎಂದು. ಆದರೆ ನೀವು ಪ್ರತಿ ಸಲವೂ ಭಾರತಕ್ಕೆ ಮೋಸ ಮಾಡು ವುದು ಸಾಧ್ಯವಿಲ್ಲ. ಯುದ್ಧ ಇಬ್ಬರ ಸ್ವಾತಂತ್ರ್ಯಕ್ಕಾಗಿಯಾದರೆ ಮಾತ್ರ ನಾವು ಮಾಡುತ್ತೇವೆ ಎಂಬ ಕಾಲ ಬಂದೇ ಬರುತ್ತದೆ. ಹಿಂದಲ ಯುದ್ಧ ದಲ್ಲಿ ಮರ್‍ನೆಯಲ್ಲಿ ಸಂರಕ್ಷಿಸಿದ ಸಿಕ್ಕರು ಈಗಲೂ ನಿಮ್ಮ ಅಪ್ಪಣೆಯಂತೆ ಹಾಗೆ ಮಾಡುವರೆಂದು ನಿಮಗೆ ತೋರಿದರೆ ನೀವು ಸಿಕ್ಕರನ್ನು ಕೊಂಡು ಕೊಳ್ಳಬಹುದು. ಅವರು ಕೂಲಿ ಸಿಪಾಯಿಗಳು ಎಂದು ಹೇಳಿದರೆ ಅದು ಕಠಿಣವಾದ ಮಾತು ಎಂದು ನೀವು ಯೋಚಿಸಬಹುದು. ಆದರೆ ಅವರನ್ನು ವರ್ಣಿಸಲು ಇರುವುದು ಅದೊಂದೇ ಮಾತು. ಒಬ್ಬ ಮನುಷ್ಯ ಸ್ವಂತ ಇಚ್ಛೆಯಿಂದ ತನ್ನ ದೇಶಕ್ಕೂ ಸ್ವಾತಂತ್ರ್ಯಕ್ಕೂ ಯುದ್ಧ ಮಾಡುತ್ತಾನೆ. ಇತರರಿಗಾಗಿ ಕಾದಾಡುವವನಿಗೆ ನಿಘಂಟಿನಲ್ಲಿಯೂ ಕೂಲಿ ಸಿಪಾಯಿ

ಎಂಬುದರ ಹೊರತು ಬೇರೆ ಮಾತು ಇಲ್ಲ. ನಿಮಗೆ ಕೋಪ ಬರಬಹುದು. ಆದರೆ ಆ ಮಾತು ಸರಿಯಾಗಿದೆ. ತಾನು ತನ್ನ ದೇಶದ ಸ್ವಾತಂತ್ರ್ಯಕ್ಕಾಗಿ ಕಾದಾಡುವುದಿಲ್ಲ ಎಂದು ತಿಳಿದ ಭಾರತೀಯರೆಲ್ಲ ಕೂಲಿ ಸಿಪಾಯಿಗಳೇ. ಇದು ಬರಿಯ ಮಾತಲ್ಲ. ಇರುವುದೇ ಹಾಗೆ. ಬರಿಯ ಮಾತು, ವಾಗಾಡಂಬರ, ಗ್ರಂಥಗಳಿಂದ ಉದ್ಧೃತ ವಾಕ್ಯ ಇವುಗಳಿಂದ ಪ್ರಯೋಜನವೇನು? ಇವು ಕಾರ್ಯದ ಸ್ಥಾನವನ್ನು ಆಕ್ರಮಿಸಲಾರವು. ಬ್ರಿಟಿಷ್ ನೀತಿ ಬದಲಾಯಿಸಿದ ಹೊರತು ನಾವು ಇರುವ ಕಡೆ ಬಿಟ್ಟು ಕದಲುವುದಿಲ್ಲ. ಅವರು ತಮಗೆ ತೋರುವ ರೀತಿ ಯುದ್ಧ ಮಾಡಬೇಕಾಗುವುದು.

"ಹೀಗೂ ಹೇಳುತ್ತಾರೆ "ಇದು ಬರಿಯ ರಾಜಕೀಯ ವಾದ. ಇಂತಹ ಕಷ್ಟ ಕಾಲದಲ್ಲಿ ಹೀಗೆ ವಾದಿಸುವುದು ತಪ್ಪು" ಎಂದು. ಅಮೆರಿಯವರ ಮಾತಿನಲ್ಲಿ "ಯುದ್ಧದ ಮಧ್ಯ ಕಾಲದಲ್ಲಿ ರಾಜ್ಯಾಂಗದಲ್ಲಿ ಬದಲಾವಣೆ ಮಾಡುವುದು ಹೇಗೆ ಸಾಧ್ಯ?" ಎಲ್ಲಿಯವರೆಗೆ ವಾದಿಸಿದರೂ ನಡೆಯುತ್ತದೆ ಎಂದು ತೋರುವುದೋ ಅಲ್ಲಿಯವರೆಗೆ ನೀವು ವಾದಿಸಬಹುದು. ಇಂತಹ ಮಾತುಗಳಿಗೆ ನನ್ನ ಅಭಿಪ್ರಾಯದಲ್ಲಿ ಅಷ್ಟೇ ಬೆಲೆ. ಆವಶ್ಯಕತೆ ಬಂದಾಗ ರಾಜ್ಯದ ಆಡಳಿತವನ್ನು ಬದಲಾಯಿಸುವುದು ಮಾತ್ರವೇ ಅಲ್ಲ. ಮತ್ತೊಂದು ದೇಶದೊಂದಿಗೆ ನಿಮ್ಮ ಎಲ್ಲಾ ವಸ್ತುಗಳನ್ನೂ ಸ್ವಾತಂತ್ರ್ಯವನ್ನೂ ಹಂಚಿಕೊಳ್ಳುತ್ತೀರಿ. ಬೇರೆ ದೇಶವಾದ ನಿಮಗೆ ಸಂಬಂಧವೇ ಇಲ್ಲದ ಫ್ರಾನ್ಸು ಸೋಲುವುದಕ್ಕೆ ಮೂರು ದಿನ ಮುಂಚೆ ಚರ್ಚಿಲ್‌ರು ಫ್ರಾನ್ಸಿಗೆ ಹೋಗಿ ಇದೇ ಮಾತನ್ನು ಹೇಳಿದರು. ಅದು ಆಗಬಹುದಾದ ಮೇಲೆ ಭಾರತದ ರಾಜ್ಯಾಂಗದಲ್ಲಿ ಬದಲಾವಣೆ ಆಗಲಾರದೇ? ಮಾಡಬೇಕೆಂಬ ಅಭಿಪ್ರಾಯವಿಲ್ಲದುದರಿಂದ ಆಗಲಿಲ್ಲ,

"ಮುಂದೆ, ಆಗಿಂದಾಗ್ಗೆ ಹೇಳುತ್ತಿರುವ ವಾದವನ್ನು ಕುರಿತು ಮಾತನಾಡೋಣ. "ಕಳೆದ ಕಾಲದ ತಪ್ಪುಗಳನ್ನು ಮರೆತುಬಿಡಿ. ಭವಿಷ್ಯದಲ್ಲಿ ನಂಬಿಕೆಯಿಡಿ. ನಾವು ಕಷ್ಟದಲ್ಲಿರುವಾಗ ಯಾಕೆ ಆ ಚರ್ಚೆ. ನಾವು ಸೋತರೆ ಸಂಭವಿಸುವ ಅನಾಹುತ ಯೋಚಿಸಿ." ಇದನ್ನು ನಾನು ಭಯದ ವಾದವೆನ್ನುತ್ತೇನೆ. ಈ ಭಯದ ವಾದದ ಹಿಂದೆ ಇರುವ ಭಾವಗಳನ್ನು ವಿಮರ್ಶಿಸಿ. ಯಾವ ಭಾರತದ ಯುದ್ಧ ಪ್ರಯತ್ನಕ್ಕೆ ನೀವು ನಮ್ಮನ್ನು ಆಹ್ವಾನಿಸುತ್ತಿದ್ದೀರೋ, ನಮ್ಮ ಆ ನೀತಿ ಬಲಕ್ಕೆ ಏನಾದರೂ

ನಿಜವಾದ ಬೆಲೆಯುಂಟೆ ? ಈ ನೀತಿ ಬಲದಿಂದ ಬ್ರಿಟಿಷರ ಜಯಾಪಜಯ ಗಳು ತೀರ್ಮಾನವಾಗುವುದೆ ? ಈ ನಮ್ಮ ನೀತಿ ಬಲಕ್ಕೆ ಅಂತಹ ಬೆಲೆಯಿ ದ್ದರೆ,—ಇಂಗ್ಲೆಂಡಿನಲ್ಲಿರುವವರಿಗೂ, ಇಲ್ಲಿರುವ ಅದರ ಪ್ರತಿನಿಧಿಗಳಿಗೂ ಅದಕ್ಕೆ ಆ ಬೆಲೆಯಿದೆಯೆಂದು ನಂಬಿಕೆಯಿದೆಯೇ—ಆ ಬಲವನ್ನು ಗಳಿ ಸಲು ನೀವು ಏನು ಕೊಡುತ್ತೀರಿ ? ಆ ನಮ್ಮ ನೀತಿ ಬಲದಿಂದ ಯುದ್ಧದ ಜಯಾಪಜಯಗಳು ತೀರ್ಮಾನವಾಗುವುದಾದರೆ ಆ ಬಲವನ್ನು ಹೊಂದಲು ಏನೇನು ಕೊಡುತ್ತೀರಿ. ಸ್ವಲ್ಪ ಊಹಿಸಿ. ಪ್ರಪಂಚದ ಐದನೆಯ ಒಂದು ಭಾಗ ಜನ ಸಂಖೆ. ಫೈನಾನ್ಸ್ ಸದಸ್ಯರ ಮಾತಿನಲ್ಲಿ ಹೇಳಬೇಕಾದರೆ "ಯುದ್ಧ ಪ್ರಾರಂಭವಾದಾಗ ಭಾರತದಲ್ಲಿ ಮುಖ್ಯವಾಗಿ ದೊಡ್ಡ ಜನ ಬಲವೂ ಅಪರಿಮಿತವಾಗಿ ಕಚ್ಚಾ ಮಾಲೂ ಇದ್ದವು." ಇದರಿಂದ ನಿಮಗೆ ಜಯವಾಗುವುದಾದರೆ, ಭಾರತ ಸ್ವತಂತ್ರ ರಾಷ್ಟ್ರವಾಗಿದ್ದರೆ—ನೀವು ಇಷ್ಟೊಂದು ಶಕ್ತಿಯಿಲ್ಲದ ಅನೇಕ ಸಣ್ಣ ರಾಜ್ಯಗಳನ್ನು ವಿಧೇಯತೆಯಿಂದ ಆಶ್ರಯಿಸಿದ್ದೀರಿ—ಸ್ವತಂತ್ರ ಭಾರತ ನಿಮ್ಮಲ್ಲಿ ಬಂದು "ನಮಗೆ ಪ್ರಜಾ ಸ್ವಾತಂತ್ರ್ಯಕ್ಕಾಗಿ ಯುದ್ಧ ಮಾಡುವುದರಲ್ಲಿ ನಂಬಿಕೆ ಇದೆ. ನಮಗೂ ಸ್ವಾತಂತ್ರ್ಯ ಪ್ರೇಮವಿದೆ. ನೀವೂ ಸ್ವಾತಂತ್ರ ಪ್ರೇಮಿಗಳು. ಇಬ್ಬರೂ ಒಂದಾಗಿ ಯುದ್ಧ ಮಾಡೋಣ ಎಂದು ಹೇಳಿದ್ದರೆ, ಇಂಗ್ಲೆಂಡಿನ ಯಾವ ರಾಜಕೀಯ ಧುರೀಣರೇ ಆಗಲಿ—ಅವರು ಎಷ್ಟೇ ಕನಸರ್‌ವೆಟೀವ್ ಆಗಿ ದ್ದರೂ ಇಂತಹ ಕೇಳಿಕೆಯನ್ನು ಕುರಿತು ಅನುಮಾನಿಸುವ ಅಥವ ತಿರಸ್ಕರಿ ಸುವ ಧೈರ್ಯವನ್ನು ಹೊಂದುತ್ತಿದ್ದರೇ ? ಬೇರೆ ಮಾತಿನಲ್ಲಿ ಹೇಳಬೇಕಾ ದರೆ ನೀವು ಭಾರತದ ಸಹಕಾರವನ್ನು ತಿರಸ್ಕರಿಸುವ ಕಾರಣವೇನೆಂದರೆ "ಭಾರತ ಸ್ವತಂತ್ರ ರಾಷ್ಟ್ರವಾಗಿ ಮಾತ್ರ ನಿಮಗೆ ಸಹಕಾರ ಕೊಡುವೆ ನೆಂದು ಹೇಳುವುದೇ. ಈ ಪ್ರಶ್ನೆಯ ತಿರುಳು ಇರುವುದೂ ಅಲ್ಲಿಯೇ.

ನಾವು ಈ ಯುದ್ಧದ ಪ್ರಾರಂಭದಲ್ಲಿ ಹೇಳಿದಂತೆ, ಭಾರತ ಈಗಿನಂತೆ ಮುಂದೆಯೂ ಇರುವುದಾದರೆ ನಮಗೆ ಈ ಯುದ್ಧ ಬೇಡ. ನಾವು ನಿಮ್ಮ ವಾಗ್ದಾನಗಳನ್ನು ನಂಬುವುದಿಲ್ಲ. ವಾಗ್ದಾನವೇನೋ ಒಳ್ಳೆಯ ಉದ್ದೇಶ ದಿಂದಲೇ ಕೂಡಿರಬಹುದು. ಆದರೆ ನೀವು ಆ ವಾಗ್ದಾನದಂತೆ ನಡೆಯು ವುದಿಲ್ಲವೆಂಬುದು ನಮ್ಮ ಹಿಂದಲ ಅನುಭವ. ಆದುದರಿಂದ ಕಾಂಗ್ರೆಸ್ ವರ್ಕಿಂಗ್ ಸಮಿತಿ ತುಂಬ ಕಾಲ ತಡೆದು ಚರ್ಚಿಸಿ, ತಾತ್ಕಾಲಿಕವಾಗಿ

ಬಹಳ ಕಡಿಮೆ ತೆಗೆದುಕೊಂಡು ಯುದ್ಧ ಪ್ರಯತ್ನದಲ್ಲಿ ಸಹಾಯಕವಾಗ ಬೇಕೆಂದು ತೀರ್ಮಾನಿಸಿತು. ಒಂದು ರಾಷ್ಟ್ರೀಯ ಸರ್ಕಾರವನ್ನು ಸ್ಥಾಪಿಸಿ: ಭಾರತ ಸಂರಕ್ಷಣೆ ಅದರ ಮೇಲೆ ಇರಲಿ. ಪ್ರಜಾಸ್ವಾತಂತ್ರ್ಯದ ರಕ್ಷ ಣೆಗೆ ಆವಶ್ಯಕವಾದ ಇತರ ಕೆಲಸಗಳನ್ನೂ ಮಾಡಿ, ಭಾರತ ಸಹಕರಿಸಲು ಸಿದ್ಧವಾಗಿದೆ" ಎಂದಿತು. ಇದು ಕಾಂಗ್ರೆಸ್ಸು ತನ್ನ ಲಾಭಕ್ಕಾಗಿ ಕೇಳಿದ ಕೇಳಿಕೆಯಲ್ಲ. ಕಾಂಗ್ರೆಸ್ಸು ಭಾರತದ ಪರವಾಗಿ ಈ ಕೇಳಿಕೆಯನ್ನು ಕೇಳಿತು. ಈ ರಾಷ್ಟ್ರೀಯ ಸರ್ಕಾರ ಎಂಬ ಮಾತು ಸ್ಟೇಟ್ ಸೆಕ್ರೆಟರಿಗೆ ತಿಳಿಯದೇ ಇರಲಿಲ್ಲ. ಈ ಕೇಳಿಕೆಯನ್ನು ನಾವು ಕೇಳುವುದಕ್ಕೆ ಕೆಲವು ದಿನ ಮುಂಚೆ, ಅಮೆರಿಯವರೇ ಒಂದು ಸಲ ಉದಾರವಾದ ಮನೋ ಭಾವದಿಂದ ಇದ್ದಾಗ ವೈಸರಾಯರ ಕೌನ್ಸಿಲನ್ನು ಹೆಚ್ಚು ವಿಸ್ತರಿಸುವ ಸಂದರ್ಭದಲ್ಲಿ ಈ ಪದವನ್ನು ಉಪಯೋಗಿಸಿದರು. ಅವರು ಉಪಯೋಗಿ ಸಿದ ಮಾತು ಇವು "ನಮಗೆ ಭಾರತದಲ್ಲಿ ರಾಷ್ಟ್ರೀಯ ಸರ್ಕಾರಬೇಕು. ಇಂಗ್ಲೆಂಡಿನಲ್ಲಿರುವಂತೆ." ಸರಿ. ನಮಗೆ ಬೇಕಾದುದೂ ಅದೇಯೆ. ನೀವು ಹೇಳುವುದು ನಿಜವೇ ? ಅಥವ ಯಾವುದನ್ನೋ ಸೇಬು ಎಂದು ಕರೆಯುತ್ತೀರಾ ? ಕಲ್ಲನ್ನು ಸೇಬು ಎಂದು ಕರೆದು "ತೆಗೆದುಕೊಳ್ಳಿ, ಕೊಟ್ಟಿ ದ್ದೇವೆ" ಎನ್ನುತೀರಾ ? ಅಮೆರಿಯವರು, ಹೇಳಿದ ಮಾತಿನಂತೆ ಅವರು ನಡೆಯುವವರಾದರೆ ನಾವು ಕೇಳುವುದೂ ಅದೇಯೇ. ಕಾಂಗ್ರೆಸ್ ಸರ್ಕಾರ ಬೇಕೆಂದು ನಾವು ಕೇಳಲೇ ಇಲ್ಲ. ನಾವು ಕೇಳಿದುದು ಇಷ್ಟು. ನಿಮ್ಮ ದೇಶದಲ್ಲಿರುವಂತಹ ರಾಷ್ಟ್ರೀಯ ಸರ್ಕಾರವನ್ನು ಕೊಡಿ. ಈ ಸಭೆಯ ಲ್ಲಿರುವ ಪ್ರತಿಯೊಬ್ಬ ಸದಸ್ಯನೂ—ನಾಮಕರಣ ಅಧಿಕಾರಿ ಅನಧಿಕಾರಿ ಸದಸ್ಯರನ್ನು ಬಿಟ್ಟು—ದೇಶದ ಜನರ ಮತದಿಂದ ಬಂದವರೇ. ಆದುದ ರಿಂದ ನಾವು ಕೇಳುವುದು ಸುಲಭವಾಗಿ ಕಾರ್ಯಕಾರಿಯಾಗಿಯಾಗು ವುದಿದೆ.

"ಯುದ್ಧದ ಮಧ್ಯದಲ್ಲಿ ಕ್ರಾಂತಿಕಾರವಾದ ಯಾವ ಬದಲಾವಣೆ ಯನ್ನೂ ನಾವು ಬಯಸಲಿಲ್ಲ. ಇದರಿಂದ ಉಂಟಾದ ಫಲ ಎಲ್ಲರಿಗೂ ತಿಳಿದೇ ಇದೆ. ಈಗ ಕಾಂಗ್ರೆಸಿನವರಲ್ಲದೆ, ಇತರ ಸಾರ್ವಜನಿಕರೂ ಕೂಡ "ಇಂಗ್ಲೆಂಡಿಗೆ ನಮ್ಮ ಸಹಾನುಭೂತಿ ಬೇಕು ನಮ್ಮ ನೀತಿ ಬಲ ಬೇಕು, ನಮ್ಮ ಸರ್ವಶಕ್ತಿಗಳೂ ಅವರ ಸೇವೆಗೆ ಆಗಬೇಕು. ಈ ಯುದ

ವನ್ನು ಜನರ ಯುದ್ಧವಾಗಿ ಮಾಡಲು ನಾವು ಅವರ ಆಯುಧಗಳಾಗಬೇಕು. ಇತರ ಮಾತುಗಳಲ್ಲಿ ಹೇಳಬೇಕಾದರೆ ನಾವು ನಮ್ಮ ಧಣಿಗಳಿಗಾಗಿ ಕೆಲಸ ಮಾಡಬೇಕು" ಎನ್ನುತ್ತಾರೆ. ಆ ಕೇಳಿಕೆ ಜನ ಒಪ್ಪುವುದಿಲ್ಲ. ಒಪ್ಪಲಾರದು.

ಸರ್ಕಾರದವರು ಹೀಗೂ ಹೇಳುತ್ತಾರೆ "ಅದಿರಲಿ ಬಿಡಿ. ನಿಮಗೆ ಅಧಿಕಾರವನ್ನು ಕೊಡುವುದಿಲ್ಲ. ಆದರೆ ಶತ್ರುವಿನ ಭಯಕ್ಕೆ ಏನುಮಾಡುತ್ತೀರಿ" ಸರಿ. ನಮ್ಮ ಸಹಾಯ ನಿಮಗೆ ನಿಜವಾಗಿಯೂ ಬೇಕಾದರೆ ಅದಕ್ಕೆ ಆವಶ್ಯಕವಾದ ತ್ಯಾಗವನ್ನು—ಅದನ್ನು ನೀವು ತ್ಯಾಗವೆಂದು ಕರೆಯುವುದಾದರೆ—ಮಾಡಲೇ ಬೇಕು. "ನಾನು ಈ ದೇಶವನ್ನು ಜಯಿಸಿದುದರಿಂದ ನನಗೆ ಅನೇಕ ಜವಾಬ್ದಾರಿಗಳುಂಟಾಗಿವೆ" ಎಂದು ನೀವು ಹೇಳುವುದು ಸುಲಭ. ನಿಜ, ನಿಮಗೆ ಆ ಜವಾಬ್ದಾರಿಗಳಿವೆ. ನಿಮಗೆ ಆ ಜವಾಬ್ದಾರಿಗಳು ಬೇಡವಾದರೆ ಅವುಗಳನ್ನು ಬಿಟ್ಟುಬಿಡಬಹುದು. ಆದರೆ ಜವಾಬ್ದಾರಿ ಎಂಬುದರಿಂದ "ನಿನ್ನ ಮನೆ ನನ್ನ ಸ್ವಾಧೀನದಲ್ಲಿದೆ. ಆದರೆ ನಿನಗೆ ಯಾವಾಗ ಇದನ್ನು ಹಿಂದಕ್ಕೆ ಕೊಡಬೇಕು ಎಂಬುದು ಇನ್ನೂ ತೀರ್ಮಾನವಾಗಿಲ್ಲ. ಅಣ್ಣ ತಮ್ಮ ಅಕ್ಕ ತಂಗಿ ಯಾವ ಯಾವ ಭಾಗಗಳನ್ನು ಇಟ್ಟುಕೊಳ್ಳಬೇಕು ಇನ್ನೂ ತೀರ್ಮಾನವಾಗಿಲ್ಲ. ಆದುದರಿಂದ ನಾನು ಈ ಮನೆಯನ್ನು ಇಟ್ಟುಕೊಳ್ಳುತ್ತೇನೆ" ಎಂಬುದು ಆದರೆ ಬೀದಿಯಲ್ಲಿ ಹೋಗುವ ಮನುಷ್ಯನಿಗೂ ಇದು ಅರ್ಥವಾಗುತ್ತದೆ. ಬೀದಿಯಲ್ಲಿ ಹೋಗುವ ಮನುಷ್ಯ ಜಾಣನಲ್ಲ. ಸೂಕ್ಷ್ಮ ಬುದ್ಧಿಯುಳ್ಳವನಲ್ಲ. ಆದರೆ ಮೇಲಿನ ಮಾತಿನ ಅರ್ಥವೇನೆಂಬುದು ಅವನಿಗೆ ಗೊತ್ತಾಗುತ್ತದೆ. ಅದರ ಅರ್ಥ ಇದು. "ನಿಮಗೆ ಕೊಡಲು ನನಗೆ ಇಷ್ಟವಿಲ್ಲ. ಕೊಡುವಂತೆ ನಟಿಸುತ್ತೇವೆ. ನೀವು ಈ ನಟನೆಗೆ ಬಲಿ ಬಿದ್ದರೆ ಒಳ್ಳೆಯದೇ ಆಯಿತು. ಇಲ್ಲವೋ ನಾವು ನಡೆಸಿಕೊಂಡು ಹೋಗುತ್ತೇವೆ" ಒಳ್ಳೆಯದು. ನಡೆಸಿಕೊಂಡು ಹೋಗಿ. ನಿಮ್ಮ ಹಣೆಬರಹ. ನೀವು ನನ್ನ ಖರ್ಚಿನಲ್ಲಿಯೋ ನನ್ನ ಇಚ್ಛೆಗೆ ವಿರೋಧವಾಗಿಯೋ ನಡೆಸಿಕೊಂಡು ಹೋಗಬಹುದು. ಆದರೆ ನಾನು ನನ್ನ ಆತ್ಮವನ್ನು ಮಾರುವುದಿಲ್ಲ. ನನ್ನ ಮನಸ್ಸು ಬುದ್ಧಿಯನ್ನು ಮಾರುವುದಿಲ್ಲ. ನನ್ನ ದೇಶವನ್ನು ಮಾರುವುದಿಲ್ಲ. ಆ ಕೆಲಸಗಳನ್ನೂ ನಾನು ನಿನಗಾಗಿ ಮಾಡುವುದಿಲ್ಲ. ನೀವೇನೋ ನಿಮ್ಮ ಒಂದು

ಭಾಷಣದಲ್ಲಿ ಹೇಳಿದಂತೆ "ಭಾರತ ನಮ್ಮಂತೆ ಇದೆ" ಎಂದು ಜಂಭ ಕೊಚ್ಚಿಕೊಳ್ಳಬಹುದು. ಹಾಗಾದರೆ ಸರಿ. ಭಾರತ ನಿಮ್ಮಂತೆ ಇದ್ದರೆ ಯಾಕೆ ಇನ್ನು ಹೆಚ್ಚು ಮಾತು. ಆದರೆ ಇಂಗ್ಲೆಂಡಿನಲ್ಲಿರುವವರು ಏನು ಯೋಚಿಸುತ್ತಿದ್ದಾರೆ ಎಂಬುದನ್ನು ನಿಮಗೆ ಹೇಳುತ್ತೇನೆ. ಭಾರತ ನಿಮ್ಮೊಂದಿಗೆ ಇದೆ ಎಂದು ನೀವು (ಸರ್ಕಾರ) ಹೇಳುತ್ತೀರಿ. ಡೇಲಿ ಹೆರಾಲ್ಡ್ ಹೇಳುವುದು ಹೀಗೆ "ಭಾರತ ಯುದ್ಧಕ್ಕೆ ಮಾಡುವ ಸಹಾಯದ ಮಾತೆಲ್ಲಾ, ವೈಸರಾಯ್ ಕಾಂಗ್ರೆಸ್ಸಿನೊಂದಿಗೆ ಒಪ್ಪಂದಕ್ಕೆ ಬರದುದರಿಂದ ನಿಷ್ಫಲವಾಗಿದೆ. ಸರ್ಕಾರವೂ ಪಾರ್ಲಿಮೆಂಟೂ, ಕಾಂಗ್ರೆಸ್ಸಿನೊಂದಿಗೆ ರಾಜಿಯಾಗಲು ಬೇರೆ ಹೊಸ ದಾರಿಗಳಿಂದ ಹೊಸ ಪ್ರಯತ್ನ ಮಾಡಬೇಕೆಂದು ವೈಸರಾಯರಿಗೆ ಸ್ಪಷ್ಟವಾಗಿ ತಿಳಿಸಬೇಕು. ಅವರು ಎರಡು ಪಕ್ಷದ ಮುಂದಾಳುಗಳಿಗೂ ಮತ್ತೆ ನಿಮ್ಮ ವ್ಯತ್ಯಾಸಗಳನ್ನು ಸರಿ ಮಾಡಿಕೊಳ್ಳಿ—ಎಂದು ಹೇಳಬೇಕು. ಈ ವ್ಯತ್ಯಾಸದಿಂದ ಶತ್ರುವಿಗೆ ಸಂತೋಷವಾಗುತ್ತದೆ." ಬ್ರಿಟಿಷ್ ರಾಜಕಾರಣ ಪಟುಗಳೂ ಪತ್ರಿಕಾಕರ್ತರೂ ಹೇಳುವುದು ಹೀಗೆ. ಇದಕ್ಕೆ ವಿರೋಧವಾದ ಮಾತಿಗೆ ಬೆಲೆ ಇಲ್ಲ. ಯಾಕೆಂದರೆ ಪರಿಸ್ಥಿತಿ ಕಠಿಣವಾಗಿರುವುದನ್ನು ತಿಳಿಯದೆ ಇದ್ದಿದ್ದರೆ ಈ ಕೊನೆಯ ಗಳಿಗೆಯಲ್ಲಿಯೂ ಅವರು ಈ ಎಚ್ಚರಿಕೆಯನ್ನು ಕೊಡುತ್ತಿರಲಿಲ್ಲ.

"ಸರ್ಕಾರದ ಸದಸ್ಯರು ಹೇಳುವುದು ಇದು. "ನೀವು ಹೇಳುವುದನ್ನೆಲ್ಲಾ ನಾನು ಒಪ್ಪುತ್ತೇನೆ. ನಿಮಗೆ ಸ್ವರಾಜ್ಯ ಬೇಕು. ಒಪ್ಪುತ್ತೇನೆ" ಹೀಗೆ ಒಪ್ಪುತ್ತೇನೆ ಎಂಬುದರಿಂದಲೇ ನಮ್ಮಿಬ್ಬರಿಗೂ ಒಪ್ಪಿಗೆಯಾಯಿತೆಂದು ಅವರು ತಿಳಿಯುತ್ತಾರೆ. ಈ ಮಾತುಗಳನ್ನು ಹೇಳುವವರು ಅವರೇ (Leader of the house) ಸರ್ಕಾರದ ಸಭಾನಾಯಕರೇ, ಅವರಲ್ಲದೆ ಬೇರೆಯಾರಾದರೂ ಆಗಿದ್ದರೆ ನಂಬುವುದೇ ಕಷ್ಟ. ನೀವು ಹೇಳುವುದನ್ನೆಲ್ಲಾ ನಾನು ಒಪ್ಪುತ್ತೇನೆ. ಹೀಗೆ ಒಪ್ಪಿದ ಮೇಲೆ ಮುಂದೆ ಏನನ್ನೂ ಕೇಳಕೂಡದು. ನಿಮ್ಮ ಎಲ್ಲಾ ಮಾತುಗಳನ್ನೂ ಒಪ್ಪುತ್ತೇನೆ. ಬೈಬಲ್‌ನಿಂದಲೂ ಇತರ ಗ್ರಂಥಗಳಿಂದಲೂ ಆಧಾರ ಕೊಡುತ್ತೇನೆ. ಇನ್ನೇನು ಬೇಕು ನಿಮಗೆ?" ಮುಂದೆ ಹೀಗೆ ಹೇಳುತ್ತಾರೆ "ನಿಮಗೆ ಆಸೆ ಹೆಚ್ಚು. ನನ್ನ ಮನೆಗೆ ಬಂದು ಇನ್ನು ಸಹಾಯಮಾಡಬೇಕು."

ಇದೇ ಸರ್ಕಾರದವರ ವಾದ. ಈ ಬಲೆಗೆ ನಾವು ಬೀಳಲಾರೆವು. "ನಿಮಗೆ ಸ್ವರಾಜ್ಯ ಬೇಕು. ಆಗಲಿ. ಒಪ್ಪುತ್ತೇನೆ" ಎನ್ನುತ್ತಾರೆ. ಒಪ್ಪುವುದು ಕಾರ್ಯತಃ ಮಾಡುವುದರಷ್ಟೇ ಎಂದು ಅವರು ನಂಬಿದಂತೆ ಕಾಣುತ್ತದೆ. ಅವರು ಎಲ್ಲರಿಗೂ "ಸ್ವರಾಜ್ಯಮಿಠಾಯಿ" ಹಂಚಿದಂತೆ ತೋರಿತು. ಸರ್ಕಾರಿ ಸದಸ್ಯರಿಗೆ ಇನ್ನೂ ಚೆನ್ನಾಗಿ ತಿಳಿದಿರಬೇಕಾಗಿದ್ದಿತು. ಜನರಿಗೆ ಬೇಕಾದುದಕ್ಕೆಲ್ಲಾ ಒಪ್ಪುವುದು, ಜನರಿಗೆ ಬೇಕಾದುದನ್ನು ಕೊಟ್ಟಂತೆ ಆಗಲಿಲ್ಲ ಎಂಬುದು; ದೇಶಕ್ಕೆ ತಿಳಿದಿದೆ. "ಹಿಂದಲದೆಲ್ಲಾ ಹೋಗಲಿ. ಈಗ ನೀವು ಮಾಡುವುದೇನು" ಎಂದು ಕೇಳುತ್ತೇವೆ. "ಏನೂ ಇಲ್ಲ" ಎಂಬುದೇ ಸಭಾ ಮುಖಂಡರ ಈ ದೀರ್ಘ ಭಾಷಣದ ಸಾರಾಂಶ. ಕೊನೆಯಲ್ಲಿ ಸರ್ಕಾರಿಯ ಸಭಾ ಮುಖಂಡರು ಹೀಗೆ ಹೇಳಿದರು. "ಅದೆಲ್ಲಾ ಇರಲಿ. ಭಾರತ ಯುದ್ಧದಲ್ಲಿ ಸಹಾಯಮಾಡುತ್ತಿದೆ. ಸೈನ್ಯಕ್ಕೆ ಸೇರಿರುವ ಯುವಕರನ್ನು ನೋಡಿ. ಇನ್ನೂ ಹೆಚ್ಚು ಹೆಚ್ಚಾಗಿ ಸೇರಲು ಉತ್ಸಾಹಿಗಳಾಗಿರುವ ಯುವಕರನ್ನು ನೋಡಿ. ಅವರು ಕಾಂಗ್ರೆಸ್‌ನವರಾದರೆ ನಾವು ಹೇಳತಕ್ಕದ್ದು ಏನೂ ಇಲ್ಲ. ಅವರು ಕಾಂಗ್ರೆಸ್‌ನವರಲ್ಲವಾದರೆ ಅವರೆಲ್ಲಾ ಕಾಂಗ್ರೆಸ್ ವಿರೋಧಿಗಳೇ." ಸರ್ಕಾರದ ಸದಸ್ಯರ ಸಮಸ್ಯೆ ಇದು. ಇಂತಹ ತೂಕವಾದ ವಾದವನ್ನು ನೀವು ಹಿಂದೆ ಕೇಳಿದ್ದೀರಾ. "ಕೆಲವರು ಬಂದು ಕೆಲಸಕ್ಕೆ ಸೇರುತ್ತಿದ್ದಾರೆ. ಆದುದರಿಂದ ಭಾರತ ಯುದ್ಧದಲ್ಲಿ ಸ್ವಂತ ಇಚ್ಛೆಯಿಂದ ಸಮಾನತೆಯಿಂದ ಸಹಾಯ ಮಾಡುತ್ತಿದೆ."

"ವಾಣಿಜ್ಯ ಸದಸ್ಯರಾದ ನನ್ನ ಮಿತ್ರರು ಏನೇನೋ ಹೇಳುತ್ತಾರೆ ಸತ್ಯಮೂರ್ತಿ ಹೀಗೆ ಮಾಡಿದರು. ಹಾಗೆ ಮಾಡಿದರು." ಎಂದು ವ್ಯಕ್ತಿ ವಿಷಯವಾದ ಮನಸ್ತಾಪಗಳಿಗೆಲ್ಲಾ ಪ್ರವೇಶಿಸಲು ನನಗೆ ಇಷ್ಟವಿಲ್ಲ. ಅವರು ಹೀಗೂ ಹೇಳುತ್ತಾರೆ. ಮದರಾಸ್ ಮೇಲ್ ಪತ್ರಿಕೆ ಪ್ರಾರ್ಥನೆ ಹೊರಡಿಸಿ ಯುದ್ಧಕ್ಕಾಗಿ ಬಹಳ ಹಣ ಶೇಖರಿಸಿದೆಯಂತೆ; ಅವೆಲ್ಲವೂ ಮದರಾಸು ಸರ್ಕಾರ ಸೃಷ್ಟಿಸಿರುವ ಬೂಟಾಟಿಕೆಯ ದೇಶಭಕ್ತರೆಂದು ಹೇಳುತ್ತೇನೆ. ಆಂಗ್ಲೋ ಇಂಡಿಯನ್ ಪತ್ರಿಕೆ ಒಂದು, ಪ್ರಾರ್ಥನೆ ಹೊರಡಿಸಿತೆಂದು ನನಗೆ ಹೇಳುವುದು ಪ್ರಯೋಜನವಿಲ್ಲ. ಆ ಪ್ರಾರ್ಥನೆಯನ್ನು ಮನ್ನಿಸಿ ಯಾರೋ ಅಲ್ಪಸ್ವಲ್ಪ ಹಣ ಕೊಟ್ಟರೆಂದೂ ಅದೇ

ಭಾರತದ ಯುದ್ಧ ಪ್ರಯತ್ನವೆಂದು ಅವರು ಹೇಳುತ್ತಾರೆ. ಇದು ಒಳ್ಳೆಯ ವೃತ್ತಪತ್ರಿಕಾಕರ್ತನ ವಾದ. ಅಂತಹ ಜಾಣನಾದ ವೃತ್ತಪತ್ರಿಕಾ ಕರ್ತನಾಗಿದ್ದರೆ ಸರ್ಕಾರ ನಿಜವಾಗಿಯೂ ಅವರನ್ನು ಪಬ್ಲಿಕ್ ಇನ್ ಫರ್ಮೇಶನ್ ಮತ್ತು ಪ್ರೊಪಗಾಂಡಾ ಮಂತ್ರಿಯನ್ನು ಮಾಡಬಹು ದಾಗಿದ್ದಿತು. ಆದರೆ ವಾಣಿಜ್ಯ ಸದಸ್ಯರಾದವರಿಗೆ, ಮಿ. ಜೇಮ್ಸ್ ಎಂಬು ವರು ಯುದ್ಧಕ್ಕೆ ಒಂದು ಪೌಂಡು ಚಂದಾಕೊಟ್ಟರು ಎನ್ನುವುದಕ್ಕಿಂತ ಇನ್ನೂ ಹೆಚ್ಚಾಗಿ ವಿಷಯ ತಿಳಿದಿರಬೇಕಾಗಿದ್ದಿತು.

"ಅನಂತರ ಇನ್ನೊಂದು ಬಗೆಯ ವಾದವನ್ನು ತೆಗೆದುಕೊಳ್ಳೋಣ. ಭಾಷಣಗಳಿಂದ ಸರ್ಕಾರದವರು ಉದಾಹರಿಸಿದರು. ಅವು ಯಾರ ಭಾಷಣಗಳು ಎಂಬುದನ್ನು ಕೊನೆಯವರೆಗೆ ಹೇಳಲಿಲ್ಲ. ಅದೊಂದು ಆಶ್ಚರ್ಯವಾಗಿರಲಿ ಎಂದು! ಈ ಭಾಷಣದ ಭಾಗಗಳು ಯಾರವು ಎಂದು ನಮಗೆ ಕುತೂಲಹಲವುಂಟಾಗುವಂತೆ ಅನೇಕ ಭಾಗಗಳು ಉದ್ಧೃತ ವಾದುವು. ಕೊನೆಯಲ್ಲಿ ಇವು ಮುನಿಶಿಯ ಭಾಷಣದಿಂದ, ಇವು ಸತ್ಯ ಮೂರ್ತಿ ಭಾಷಣದಿಂದ, ಎಲ್ಲಾದಕ್ಕಿಂತ ಹೆಚ್ಚಾಗಿ ಗಾಂಧಿಯವರ ಬರಹ ದಿಂದ ಎಂದು ಹೇಳಿದರು. ಯುದ್ಧ ಪ್ರಾರಂಭವಾದ ಮರುದಿನವೇ ಗಾಂಧಿಯವರು ಬ್ರಿಟಿಷರಲ್ಲಿ ತಮ್ಮ ಸಹಾನುಭೂತಿಯನ್ನು ವ್ಯಕ್ತಪಡಿ ಸಿದುದು ಪ್ರಾಯಶಃ ನನ್ನ ಸರ್ಕಾರಿ ಮಿತ್ರರಿಗೆ ತಿಳಿದಿರಬಹುದು. ನಮ್ಮ ವರು ಯಾರೂ ಹೇಳಿದ ಮಾತನ್ನು ಇಲ್ಲವೆನ್ನುವುದಿಲ್ಲ. ಬರಿಯ ಭಾವನೆ ಗಳನ್ನೇ ಎಳಿಸಿ, ನೀವು ಮಾತ್ರ ನಿಮ್ಮಭಾಗದ ಕಾರ್ಯವನ್ನು ಮಾಡದೆ ಸಹಾನುಭೂತಿಯನ್ನು ಹೊಂದುವುದು ಸಾಧ್ಯವೆಂದು ನೀವು ಎಣಿಸುವು ದಾದರೆ ನಿಮ್ಮ ಎಣಿಕೆ ತಪ್ಪು. ಅಷ್ಟೇ ಅಲ್ಲ. ಇನ್ನೂ ಮುಂದೆ ಹೋಗಿ ನಾನೂ ಒಂದು ಚೂರನ್ನು ಉದ್ಧರಿಸುತ್ತೇನೆ. ನಮ್ಮ ಕೇಳಿಕೆ, ನಮ್ಮ ಅಲ್ಪವಾದ ಕೇಳಿಕೆ, ಸರ್ಕಾರ ಮನ್ನಿಸದಿದ್ದ ಮಾತ್ರಕ್ಕೆ ಅದರಲ್ಲಿ ವಿರೋಧಾ ಭಾಸವಿಲ್ಲ; ಉದ್ದವಾದ ಹೇಳಿಕೆಗಳನ್ನು ಉದಹರಿಸುವುದರಿಂದ ಏನು ಪ್ರಯೋಜನ? ಯುದ್ಧ ಪ್ರಾರಂಭವಾದಾಗ ಹೇಳಿದ ಮಾತುಗಳು ನ್ಯಾಯ ವಾಗಿ ಹೇಳಿದುವೇ. ಸುಮ್ಮನೆ "ಮಾಡುತ್ತೇನೆ' ಎಂದು ನಟಿಸುತ್ತಿರುವುದು ಮಾಡುವುದಿಲ್ಲ ಎಂದಂತೆ" ಎಂದು ಹೇಳುವುದರಲ್ಲಿ ವಿರೋಧಾಭಾಸವಿಲ್ಲ. ನೀವು ಪ್ರಜಾ ಸ್ವಾತಂತ್ರಕ್ಕಾಗಿ ಯುದ್ಧಮಾಡುತ್ತಿರುವುದಾಗಿ ಹೇಳುತ್ತೀರಿ.

ಎಲ್ಲಿ ತೋರಿ. ಭಾರತ ಪ್ರಜಾಸ್ವಾತಂತ್ರ್ಯಕ್ಕೆ ಸಿದ್ಧವಾಗಿದೆ. ಇಲ್ಲಿ ಸ್ಥಾಪಿಸಿ ಅದನ್ನು ಹೇಳುವಾಗ ನಾನು ಇದು ನ್ಯಾಯವಾದ ಯುದ್ಧ ಎಂದು ಯೋಚಿಸುತ್ತೇನೆ. ನಿಮ್ಮ ಅಭಿಪ್ರಾಯ ಸಾಧು ನ್ಯಾಯ ಎಂದು ನಾನು ಯೋಚಿಸಿದುದೇ ನನ್ನ ತಪ್ಪೆ? ಹೀಗೆ ಹೇಳಿಕೆಗಳ ಭಾಗಗಳನ್ನು ಉದಹರಿಸುವುದು ವಿಚಿತ್ರವಾಗಿದೆ. ಒಬ್ಬ ಮನುಷ್ಯ ನನ್ನೊಂದಿಗೆ ಮಾತ ನಾಡುತ್ತಾನೆ. ನಾನು ಅವನಿಗೆ ಹೀಗೆ ಹೇಳುತ್ತೇನೆ. 'ಸರಿ. ನಿನ್ನ ಮಾತನ್ನು ನಂಬುತ್ತೇನೆ. ಈಸಲ ಹೇಗಾದರೂ ಆಗಲಿ ನೀನು ಮಾಡು ವುದು ನ್ಯಾಯುವೆಂದು ಭಾವಿಸುತ್ತೇನೆ. ಆದರೆ ನೀವು ಅದನ್ನು ಘೋಷಣೆ ಮಾಡಬೇಕು. ನಿನ್ನ ಸದುದ್ದೇಶದ ಗುರುತಾಗಿ, ಈಗ ಕಾರ್ಯಕಾರಿ ಮಾಡಲು ಪ್ರಯತ್ನಿಸಬೇಕು. ಈಗ ಕಾರ್ಯಕಾರಿಮಾಡುವ ಸೂಚನೆ ಯಿಲ್ಲದಿದ್ದರೆ ಚರ್ಚಿಸಿ ಪ್ರಯೋಜನವಿಲ್ಲ. ವಾಗ್ದಾನಮಾಡುತ್ತೇನೆ. ವಾಗ್ದಾನಮಾಡುತ್ತೇನೆ ಎಂದು ಸುಮ್ಮನೆ ಹೇಳಿ ಕೊನೆಗೂ ವಾಗ್ದಾನದಂತೆ ನಡೆಯದಿರುವುದು ಒಪ್ಪಂದವಲ್ಲ. ಈಗ ಆದರೆ ನಿಜವಾದ ಒಪ್ಪಂದ ವಾಗಲಿ. ಇಲ್ಲವಾದರೆ ಏನೂ ಇಲ್ಲ. ಬರಿಯ ವಾಗ್ದಾನ ತೋರಿಕೆ ಮಾಯಾಜಾಲ ಸಾಕು. ಹೀಗೆ ನೀವು ಸರ್ಕಾರ ಯುದ್ಧದ ಪ್ರಾರಂಭ ದಲ್ಲಿ ಸದ್ಭಾವನೆಯಿಂದ ಕೂಡಿದ್ದಿರಿ ಎಂದು ನಾವು ತಿಳಿದುದೂ ತಪ್ಪೆ? ಗಾಂಧಿಯವರು ನಿಮ್ಮ ಅಭಿಪ್ರಾಯದಂತೆ ಒಪ್ಪದಮಾತ್ರಕ್ಕೆ ಅವರಲ್ಲಿ ಗೌರವ ಹೋಗುತ್ತದೆಯೇ? ನೀವು ಅವರ ಮಾತನ್ನು ಒಪ್ಪಿ ಅಥವಾ ಬಿಡಿ, ಅವರಲ್ಲಿ ಸರಿಯಾದ ಗೌರವನ್ನೇ ಇಟ್ಟಿರಬೇಕೆಂದು ಭಾವಿಸುತ್ತೇನೆ. 1940 ನೆ ಇಸ್ವಿ ಫೆಬ್ರುವರಿ 17 ರ ಹರಿಜನ್‌ದಲ್ಲಿ ಅವರು ಈ ಯುದ್ಧ ಭಾರತದ ದೃಷ್ಟಿಯಿಂದ ನ್ಯಾಯ ನಡೆಯಲು ಸಾಧಕವಾಗಬೇಕು ಎಂದು ಹೇಳಿ ಮುಂದೆ ಹೀಗೆ ಹೇಳಿದರು. "ಭಾರತ ಸಾಮ್ರಾಜ್ಯ ಸ್ಥಾಪಕರು ಈ ಚಕ್ರಾಧಿಪತ್ಯವನ್ನು ಯೂರೋಪಿನವರ ಹಿತ, ಸೈನ್ಯ. ದೇಶೀಯ ರಾಜ್ಯ ಗಳು, ಜಾತಿ ಜಾತಿಗಳ ಕಲಹ ವ್ಯತ್ಯಾಸ, ಈ ನಾಲ್ಕು ಕಂಬಗಳ ಮೇಲೆ ಕಟ್ಟಿದ್ದಾರೆ." ಅನಂತರ ಗಾಂಧಿಯವರು ಯುದ್ಧದ ಉದ್ದೇಶವನ್ನು ಕುರಿತು ಎಲ್ಲರೂ ವೈಸರಾಯರೂ ಲಾರ್ಡ್ ಜೆಟ್‌ಲೆಂಡ್‌ರೂ ಮಾಡಿದ ಹೇಳಿಕೆಗಳನ್ನೆಲ್ಲಾ ವಿಮರ್ಶಿಸಿ "ಉದ್ದೇಶಗಳು ಸ್ಪಷ್ಟವಾಗಿದೆ. ಒಂದು ರಾಷ್ಟ್ರೀಯ ಮತ್ತೊಂದು ಸಾಮ್ರಾಜ್ಯ ಸಂಬಂಧ ಎರಡೂ ಒಂದಾಗಿ ಸೇರುವಂತೆ ಇಲ್ಲ" ಎಂದರು.

"ಸ್ವಾಮಿ; ಸಾಮ್ರಾಜ್ಯವಾದಿ ಎಂದು ಕರೆಸಿಕೊಳ್ಳಲು ನಿಮ ಗೇನೋ ಹೆಮ್ಮೆ ಇರಬಹುದು. ಜಗತ್ತಿನ ಐದನೆಯ ಒಂದು ಭಾಗವನ್ನು ಗುಲಾಮಗಿರಿಯಲ್ಲಿಡುವುದು ನಿಮಗೆ ಬಹು ಸಂತೋಷವಾಗಿರಬಹುದು. ಆದರೆ ಎಚ್ಚರಿಕೆ. ಅದೇ ನಮ್ಮ ಆಕ್ಷೇಪಣೆ. ಈ ಸಾಮ್ರಾಜ್ಯವಾದಕ್ಕೆ ನೀವು ಬ್ರಿಟಿಷ್ ಕಾಮನ್‌ವೆಲ್ತ್ ಎಂಬ ಬೇರೆ ಮಾತನ್ನು ಹೇಳಬಹುದು. ನಾನು ಯಾವಾಗಲೂ ಹೇಳುತ್ತಿರುವಂತೆ ಈ ಕಾಮನ್‌ವೆಲ್ತ್ ಎಂದರೆ ನನ್ನ ಮಟ್ಟಿಗೆ ಹೀಗಿರಬೇಕು. "ನಿನ್ನ ಐಶ್ವರ್ಯ ನಿನ್ನದು. ನನ್ನದೂ ನಿನ್ನದೇ" ಸಾಮ್ರಾಜ್ಯದಲ್ಲಿ ಅನೇಕರ ಸ್ವತ್ತು ನಿಮ್ಮ ಸ್ವಾಧೀನದಲ್ಲಿರುವು ದಾಗುತ್ತದೆ. ಆ ಸಾಮ್ರಾಜ್ಯವನ್ನು ನಾಶಮಾಡಬೇಕೆಂಬುದು ನಮ್ಮ ಇಷ್ಟ. ನೀವು ಅದರ ಹೆಸರನ್ನು ಬದಲಾಯಿಸಿದ ಮಾತ್ರಕ್ಕೇ, ಪರಿಸ್ಥಿತಿ ಬದಲಾಯಿಸುವುದಿಲ್ಲ. ಇಬ್ಬರ ಸ್ವಾತಂತ್ರ್ಯಕ್ಕೂ ನಾವು ಯುದ್ಧ ಮಾಡಬೇಕು. ಅಥವ ಇಬ್ಬರ ಸ್ವಾತಂತ್ರ್ಯವೂ ಇಲ್ಲಿ ಇಲ್ಲ. ಅನಂತರ ಗಾಂಧಿಯವರು ಹೇಳಿರುವ ಮಾತು ವಿವೇಕವುಳ್ಳ ಭಾವನೆ ಗಳುಳ್ಳ ನೀತಿಪರರಾದ ಎಲ್ಲರಿಗೂ ಮನಸ್ಸಿಗೆ ಹಿಡಿಯುತ್ತದೆ. "ಬ್ರಿಟಿಷರ ಜಯದಿಂದ ಭಾರತದ ಗುಲಾಮಗಿರಿ ಮುಂದುವರಿಯುವುದಾದರೆ, ಇವರಿಗೆ ಜಯವಾಗಲೆಂದು ನಾನು ಮನಃಪೂರ್ತಿಯಾಗಿ ಆತ್ಮವಂಚನೆಯಿಲ್ಲದೆ ಪ್ರಾರ್ಥಿಸಲಾರೆ." ಈ ವಾಕ್ಯವನ್ನು ಹೇಳುವಾಗ ನನ್ನ ಹೃದಯ ನೋಯುತ್ತಿದೆ.

"ಈ ವಾಕ್ಯವನ್ನು ಬರೆದಮೇಲೂ ಗಾಂಧಿಯವರು ಬ್ರಿಟಿಷ್ ಸರ್ಕಾರವನ್ನು ಪೇಚಾಟದಲ್ಲಿ ಕೆಡವಲು ಬಯಸಲಿಲ್ಲ. ಆದರೆ ಈ ಸರ್ಕಾರ ದಲ್ಲಿ ಭಾಗವಹಿಸಲು ನಮಗೆ ಇಷ್ಟ ಬರಲಿಲ್ಲ. ಇದಕ್ಕೆ ಜವಾಬ್ದಾರರಾಗಲು, ಇದರ ಬರಿಯ ಆಯುಧಗಳಾಗಿರಲು ನಾವು ಒಪ್ಪಲಿಲ್ಲ. ಆದರೆ ನಿಮಗೆ ಪೇಚಾಟವಾಗದಿರಲಿ ಎಂದು ಅವರು ಹೇಳುವುದನ್ನು ತಮ್ಮ ಅಸ್ತಿತ್ವಕ್ಕೇ ಧಕ್ಕೆ ಬಂದರೂ ಹೇಳದಿರುವುದು ಸಾಧ್ಯವಿಲ್ಲ. ನಿಮಗೆ ಕಷ್ಟ ಕೊಡ ಬಾರದು ಎಂದು ನನ್ನ ಆಸೆಯಾದ ಮಾತ್ರಕ್ಕೆ ನನ್ನನ್ನು ನೀವು ಪೂರ್ಣ ನಾಶಮಾಡಲು ಬಿಡುವುದಿಲ್ಲ. ನಿಮ್ಮಿಂದ ಏನನ್ನು ಜಗತ್ತು ನಿರೀಕ್ಷಿಸು ವುದೋ ಅದನ್ನು ಮಾಡದೆ ಇದ್ದರೆ ನಿಮಗೇ ನೀತಿಯ ದೌರ್ಬಲ್ಯ. ನಿಮ್ಮ ಶಕ್ತನ್ನು ಮುಚ್ಚಿಕೊಳ್ಳಲು ಇತರರ ಒಳ್ಳೆಯತನವನ್ನು ಉಪಯೋಗಿಸ

ಬೇಡಿ. ಸ್ವಭಾವದಿಂದ ಶಾಂತಿಪ್ರಿಯರಾದ ಗಾಂಧಿ, ಮನುಷ್ಯ ಸ್ವಭಾವ ದಲ್ಲಿ ಯಾವಾಗಲೂ ನಂಬಿಕೆಯಿಟ್ಟಿದ್ದಾರೆ. ಈ ಕಾರಣದಿಂದ ಅವರು ಆ ಹೇಳಿಕೆ ಕೊಟ್ಟದು.

"ಜರ್ಮನಿ ಬಂದುಬಿಟ್ಟರೆ ಆಗ?" ಹೀಗೆ ವಾದಿಸುವವರು ತಾವು ಹೇಳುತ್ತಿರುವ ಮಾತನ್ನು ಕುರಿತು ಸ್ವಲ್ಪವೂ ಯೋಚಿಸಿಯೇ ಇಲ್ಲ. ತಾವು ಸೋತು ಜರ್ಮನರು ಬಂದರೆ, ತಾವೂ ಸೋತಾಯಿತು ಎಂಬುದು ಅವರಿಗೆ ಗೊತ್ತಾಗಿಲ್ಲ. ಹಾಗೆ ಅವರು ಸೋತರೆ ನನ್ನ ಯೋಗಕ್ಷೇಮ ಅವರು ನೋಡುವುದಿರಲಿ. ಮೊದಲು ತಮ್ಮ ಯೋಗಕ್ಷೇಮ ನೋಡಿ ಕೊಳ್ಳಬೇಕಾಗುವುದು. ಅವರು ಹೀಗೆ ಕೇಳುತ್ತಾರೆ. "ಬ್ರಿಟನ್ ಸೋತರೆ ನಿಮಗೆ ಏನಾಗುತ್ತೆ ಗೊತ್ತೆ?" ನಾನು ಹೀಗೆ ಕೇಳುತ್ತೇನೆ. "ನೀವು ಸೋತರೆ ನಿಮಗೆ ಏನಾಗುತ್ತೆ" ಈ ವಾದ ನನಗೆ ಸರಿಯಾಗಿ ಅರ್ಥವಾಗುವುದಿಲ್ಲ. ಇದನ್ನು ಅರ್ಥ ಮಾಡಿಕೊಳ್ಳದೆ ಟೈಂಸ್ ಆಫ್ ಇಂಡಿಯ ಪತ್ರಿಕೆ ಈ ವಾದವನ್ನು ಪ್ರಾರಂಭಿಸಿತು. ನೀವು ಸೋತರೆ ನೀವು ಸೋಲುತ್ತೀರಿ. ನಿಮ್ಮ ಸ್ವಾತಂತ್ರ್ಯ ಹೋಗುತ್ತದೆ. ಅದರ ಜತೆಯಲ್ಲಿ ನನ್ನದೂ ಹೋಗುತ್ತದೆ. ಆದುದರಿಂದ ಆ ದೃಷ್ಟಿಯಲ್ಲಿ ವಾದಿಸುವುದು ಬೇಡ. ಹಾಗೆ ಕೇಳುವುದು ತಪ್ಪುದಾರಿ. ಅದರ ಅವಶ್ಯ ಕತೆ ಇಲ್ಲ. ಧೈರ್ಯವಿದ್ದರೆ ಇದು ನಮ್ಮಿಬ್ಬರ ಯುದ್ಧ ಎಂದು ಹೇಳಿ "ನಿಮ್ಮ ಸ್ವಾತಂತ್ರ್ಯ ನಮ್ಮ ಸ್ವಾತಂತ್ರ್ಯ ಎರಡೂ ನಾಶವಾಗುವುದ ರಲ್ಲಿದೆ" ಎಂದು ಹೇಳಿ. ಸರ್ಕಾರಿ ಸದಸ್ಯರು "ಕೊನೆಗೂ ನಾವು ಮ್ಯೂನಿಚ್‌ಗೆ ಹೋಗಿ ಸೋತೇ ಬಂದೆವು" ಎಂದರು. ಅದನ್ನು ನಾನು ಪ್ರತಿಭಟಿಸುವುದಿಲ್ಲ. ಇಂಗ್ಲೆಂಡಿಗೆ ಆಗ ಅದು ಒಪ್ಪಿತ್ತು. ಇಂಗ್ಲೆಂಡು ಯುದ್ಧಕ್ಕೆ ಸಿದ್ಧವಾಗಿರಲಿಲ್ಲ. ಅವರು ಹೇಗೆ ಮತ್ತು ಯಾವಾಗ ರಾಜಿ ಮಾಡಿಕೊಳ್ಳುತ್ತಾರೆಂಬುದನ್ನು ಹೇಳುವುದೂ ನನ್ನ ಕೆಲಸವಲ್ಲ. ನನ್ನ ಯಾವುದಾದರೂ ಒಂದು ವಸ್ತು ಆಸೆ ಧ್ಯೇಯಕ್ಕಾಗಿ ಯುದ್ಧದಲ್ಲಿ ಭಾಗವಹಿಸುವುದಷ್ಟೇ ನನಗೆ ಸಾಕು."

---

# ೩೯. ಭಾರತ ರಕ್ಷಣೆ

ಭಾರತ ಸರ್ಕಾರ ಈ ಒಂದು ಮಾತಿಗೂ ಸರಿಯಾದ ಪ್ರತ್ಯುತ್ತರ ಕೊಡುವ ಸ್ಥಿತಿಯಲ್ಲಿರಲಿಲ್ಲ. ಬಹು ದಿವಸಗಳಿಂದ ಕಾಂಗ್ರೆಸ್ ಸಂಸ್ಥೆಯನ್ನೂ ಗಾಂಧಿಯವರನ್ನೂ ತುಳಿಯಬೇಕೆಂದು ಚರ್ಚಿಲ್‌ರಿಗೆ ಆಸೆ ಇತ್ತು. ಅಲ್ಪ ಮನುಷ್ಯನಂತೆ ತಮಗೆ ಶಕ್ತಿ ದೊರೆತ ಕೂಡಲೆ ಅದನ್ನು ಅವರು ಪ್ರಯೋಗಿಸಿದರು. ಅವರ "ಈ ಕಾಂಗ್ರೆಸ್ ಗಾಂಧಿ ಭಾರತ ಸ್ವಾತಂತ್ರ್ಯ ನಾಶ ಪ್ರಯತ್ನಕ್ಕೆ" ನಮ್ಮ ದೇಶದ ಸ್ವಾರ್ಥಿಗಳೂ ಸೇರಿದರು.

1942ನೆಯ ಆಗಸ್ಟು ಎಂಟನೆ ತಾರೀಖು ಬೊಂಬಾಯಿನಲ್ಲಿ ಅಖಿಲ ಭಾರತ ಕಾಂಗ್ರೆಸ್ ಸಮಿತಿ ನಡೆದು 'ಬ್ರಿಟಿಷರೇ ಹೊರಡಿ' ಎಂದಿತು. ಆಗ ಗಾಂಧಿಜಿಯವರು ಮಾಡಿದ ಭಾಷಣ ಅವರ ಆತ್ಮದ ಪರಿಶುದ್ಧತೆಯನ್ನೂ ಅಹಿಂಸೆಯಲ್ಲಿ ಅವರಿಗೆ ದಿನೇ ದಿನೇ ಬೆಳೆಯುತ್ತಿರುವ ದೃಢವಾದ ನಂಬಿಕೆಯನ್ನೂ ವ್ಯಕ್ತಪಡಿಸಿತು. ಅಂತಹ ದೃಶ್ಯ ಪುಣ್ಯಮಾಡಿದವರಿಗೆ ಮಾತ್ರ ದೊರೆಯುತ್ತದೆ. ದೇವತೆಗಳು ಕೃತಾರ್ಥರಾದೆವು ಎಂದುಕೊಳ್ಳುವ ಸಂದರ್ಭವದು. ಭಾರತದ ಸಮಸ್ತವಾದ ಶಕ್ತಿಯೂ ಆಗ ಬೊಂಬಾಯಿನಲ್ಲಿ ಕೇಂದ್ರೀಕೃತವಾಗಿದ್ದಿತು. ಜನ ಯಾವ ತ್ಯಾಗಕ್ಕೂ ಯಾವ ಕಷ್ಟಕ್ಕೂ ಸಿದ್ಧವಾಗಿದ್ದಿತು. ಸ್ವಾತಂತ್ರ್ಯದ ಬಾಗಿಲನ್ನು ತೆರೆದುಕೊಂಡು ನಿಂತಿದ್ದರು. "ಸ್ವರ್ಗದ ಬಾಗಿಲು ಅದಾಗಿಯೇ ತೆರೆದಿದೆ. ಇಂತಹ ಯುದ್ಧದಲ್ಲಿ ಭಾಗವಹಿಸಬೇಕಾದರೆ ಪುಣ್ಯಮಾಡಿರಬೇಕು. ಇಂತಹ ಯುದ್ಧ ಮಾಡುವವನು ಸುಖಿ, ಸತ್ತರೆ ಮೋಕ್ಷ, ಬದುಕಿದರೆ ಸ್ವರಾಜ್ಯ. ಮಾಡಿ ಅಥವ ಮಡಿಯಿರಿ."

ಭಾರತದ ಸ್ವಾತಂತ್ರ್ಯನೆಲ್ಲಾ ರೂಪವೆತ್ತ ಋಷಿಯಂತಿದ್ದ ಗಾಂಧಿಯವರ ಬಾಯಿನಿಂದ ಹೊರಟ ಒಂದೊಂದು ಮಾತೂ ಒಂದೊಂದು ವೇದಮಂತ್ರದಂತೆ ಜನರ ಮನಸ್ಸನ್ನು ಹಿಡಿಯಿತು. "ರಥ ನಿಂತಿದೆ. ಇದನ್ನು ಜಯ ಜಯಕಾರದೊಡನೆ ಎಳೆದುಕೊಂಡು ಹೋಗಿ ಅದರ ಸ್ಥಳದಲ್ಲಿ ಸೇರಿಸಿಬಿಡಬೇಕು." ಆದರೆ ಮಹಾತ್ಮರು ಯಾವಾಗ ಅಪ್ಪಣೆ ಕೊಡುತ್ತಾರೆ? ವೈಸರಾಯರನ್ನು ನೋಡಿಕೊಂಡು ಬಂದನಂತರ ತಾನೇ

ಈ ಚಳುವಳಿಯ ಆವಶ್ಯಕತೆಯೇ ಉಂಟಾಗದಂತೆ ವೈಸರಾಯ್ ಮಾಡಿದರೂ ಮಾಡಬಹುದು" ಎಂದು ಜನ ನಿರೀಕ್ಷಣೆಯಿಂದಿದ್ದರು. ಒಂಭತ್ತನೆಯ ತಾರೀಖು ಬೆಳಗಾಗುವುದಕ್ಕೆ ಮುಂಚೆಯೇ ಗಾಂಧಿಯವರೂ ವರ್ಕಿಂಗ್ ಸಮಿತಿ ಸದಸ್ಯರೂ ಬೊಂಬಾಯಿನಲ್ಲಿ ದಸ್ತಗಿರಿಯಾದರು. ಸರ್ಕಾರ ಹೀಗೆ ದೇಶದ ಮುಖಂಡರನ್ನು ದಸ್ತಗಿರಿ ಮಾಡಿ ದೇಶವನ್ನು ಅನಾಥವಾಗಿ ಮಾಡಿ ಮುಂದೆ ನಡೆದ ಅನಾಹುತಗಳಿಗೆಲ್ಲಾ ತಾನೇ ಜವಾಬ್ದಾರವಾಯಿತು. ಸುದರ್ಶನನನ್ನೂ ಸರ್ಕಾರದವರು ಹನ್ನೊಂದನೆಯ ತಾರೀಖು ದಸ್ತಗಿರಿ ಮಾಡಿ ಜಿಲ್ಲೆಯ ಸಬ್ ಜೈಲಿಗೆ ಒಯ್ದರು.

ಎಲ್ಲೆಲ್ಲಿ ಇದ್ದವರು ಅಲ್ಲಲ್ಲೇ ದಸ್ತಗಿರಿಯಾದರು. ಬೊಂಬಾಯಿಗೆ ಹೋಗಿ ಬಂದಿದ್ದರೆಂದರೇ ಸಾಕು. ಅವರು ವ್ಯಾಪಾರಕ್ಕೆ ಹೋಗಿರಲಿ. ಎ.ಐ.ಸಿ.ಸಿ. ಸಭೆ ನೋಡಲು ಹೋಗಿರಲಿ. ನೆಂಟರನ್ನು ನೋಡಲು ಹೋಗಿರಲಿ. ಸುಮ್ಮನೆ ದೇಶ ಸಂಚಾರಕ್ಕೆ ಹೋಗಿರಲಿ ಅವರನ್ನೆಲ್ಲಾ ಸರ್ಕಾರದವರು ತಂದು ಸೆರೆಮನೆಗಳಲ್ಲಿ ತುಂಬಿದರು. ಆಗ ಸರ್ಕಾರಗಳು ಗಾದೆ ಹೇಳುವಂತೆ "ಮೊದಲೇ ಮರ್ಕಟ; ಜತೆಗೆ ಚೇಳುಕಡಿದಿದೆ. ಮದ್ಯಪಾನ ಬೇರೆಮಾಡಿದೆ. ದೆವ್ವಹಿಡಿದಿದೆ ಕೇಳಬೇಕೆ? ಎಂಬಂತೆ ಸ್ವಾತಂತ್ರ್ಯ ಕೇಳುವವರ ಮೇಲೆ ಮೊದಲೇ ಕೋಪ. ಜತೆಗೆ ಡಿಫೆನ್ಸ್ ಆಫ್ ಇಡಿಯ ಮುಂತಾದ ಅಸ್ತ್ರಗಳು, ಮೇಲಿನ ಬಿಳಿಯವರ ಒದೆತ— ಆಗ ಸರ್ಕಾರಗಳು ನವನಾಟಕಗಳನ್ನು ಆಡಿದುವು.

ಸುದರ್ಶನ ಬೊಂಬಾಯಿಗೆ ಹೋಗಿಯೂ ಇರಲಿಲ್ಲ. ಅವನು ತನ್ನ ಪಾಡಿಗೆ ತಾನು ಹಳ್ಳಿಯಲ್ಲಿ ಕುಳಿತಿದ್ದ. ಸರ್ಕಾರದವರು ತನ್ನನ್ನು ಸೆರೆಹಿಡಿಯುವರೆಂಬುದೂ ಅವನಿಗೆ ನಂಬಿಕೆ ಇರಲಿಲ್ಲ. ಆಗಸ್ಟ್ ತಿಂಗಳು 9 ರ ನಂತರ ನವನಂದರಿಗೂ (ಒಂಭತ್ತು ಜಿಲ್ಲಾಧಿಕಾರಿಗಳು) ಪಿತ್ಥ ಹೇಗೆ ಗಳಿಗೆ ಗಳಿಗೆಗೂ ಏರುತ್ತಿದೆ ಎಂಬುದು ಅವನಿಗೆ ಇನ್ನೂ ಅನುಭವಕ್ಕೆ ಬಂದಿರಲ್ಲಿಲ್ಲ. ಹದಿನೇಳು ರುಪಾಯಿ ಕಾನಸ್ಟೆಬಲ್‌ನೇ ಇನ್‌ಸ್ಪೆಕ್ಟರ್; ದಫೆದಾರರೇ ಸೂಪರಿಂಟೆಂಡೆಂಟ್ ; ಸೂಪರಿಂಟೆಂಡೆಂಟ್‌ರೇ ಸರ್ವಾಧಿಕಾರಿ. ಜಿಲ್ಲಾಧಿಕಾರಿಗಳೇ ಪೂರ್ಣ ಸರ್ಕಾರ. ಅಧಿಕಾರಿಗಳ ಈ ಹೊಸ ದರ್ಪದ ಏಕಟನರ್ತನ ಪ್ರಾರಂಭವಾದುದು ಆಗಸ್ಟ್ ತಿಂಗಳಿನಲ್ಲಿ; ಅದು ಸುದರ್ಶನನಿಗೆ ಅನುಭವವಾದುದೂ ತನ್ನ ದಸ್ತಗಿರಿಯ ಸಂಬಂಧದಲ್ಲಿಯೇ.

ಸುದರ್ಶನನನ್ನು ದಸ್ತಗಿರಿ ಮಾಡಿದುದು ಅವನ ಹಳ್ಳಿಯಲ್ಲಿ; ಅದೇದಿನ ವಾಸುವಿನ ದಸ್ತಗಿರಿಯೂ ಆಯಿತು. ಪೋಲೀಸ್ ಇನ್‌ಸ್ಪೆಕ್ಟರು ಹತ್ತು ಹದಿನೈದು ಮಂದಿ ಪೋಲೀಸ್ ಜವಾನರೊಂದಿಗೆ ಬಾಡಿಗೆಗೆ ಮಾಡಿ ಕೊಂಡ ಬಸ್ ಒಂದರಲ್ಲಿ ಸುದರ್ಶನನ ಹಳ್ಳಿಗೆ ಬಂದರು. ಸುದರ್ಶನ ನನ್ನು ದಸ್ತಗಿರಿಮಾಡಿ ಅನಂತರ ' ವಾಸುವಿನ ಮನೆಗೆ ಹೋದರು. ಆ ದಿನ ವಾಸುವಿನ ಮನೆಯಲ್ಲಿ ಅವರ ತಾಯಿಯವರ ತಿಥಿ ನಡೆಯುತ್ತಿದ್ದಿತು. ಇನಿಸ್ಪೆಕ್ಟರು ಬಾಗಿಲಿಗೆ ಹೋಗುವವೇಳೆಗೆ ಒಳಗಡೆ ವಾಸು ಶ್ರಾದ್ಧವನ್ನು ಪ್ರಾರಂಭಿಸಿ ಬ್ರಾಹ್ಮಣರನ್ನು ಊಟಕ್ಕೆ ಕೂರಿಸಿದ್ದನು. ಪೋಲೀಸ್ ಇನಿಸ್ಪೆಕ್ಟರು ಬಂದವರೇ ಒಳಕ್ಕೆ ಹೇಳಿಕಳುಹಿಸಿದರು. ವಾಸು ಈಚೆಗೆ ಬರುವುದು ಒಂದೆರಡು ನಿಮಿಷ ತಡವಾಯಿತು. ಪೋಲಿಸ್ ಇನಿಸ್ಪೆಕ್ಟರು ದರ್ಪದಿಂದ "—ಬೇಗ ಈಚೆಗೆ ಬನ್ನಿ. ಇಲ್ಲದಿದ್ದರೆ ನನ್ನ ಕೆಲಸ ನಾನು ಮಾಡುತ್ತೇನೆ" ಎಂದರು. ಪೋಲಿಸ್ ಇನ್‌ಸ್ಪೆಕ್ಟರು ರಂಗಪ್ಪ ಸುದರ್ಶನ ಹಿಂದಲ ಮಿತ್ರ ಮತ್ತು ಸಹಪಾಠಿ. ಅದೇ ಊರಿಗೆ ಸೇರಿದವ; ವಾಸು ವನ್ನೂ ಚೆನ್ನಾಗಿ ಬಲ್ಲವನು; ಆದರೂ ಆ ಉಡುಪು ಮತ್ತು ಅಧಿಕಾರದ ಜಬರ್ದು ಅಂತಹುದು. ಆ ಉಡುಪನ್ನು ಹಾಕಿಕೊಂಡಿರುವಾಗ ಎದುರಿಗೆ ಮಗ ಬಂದರೂ ಲಾಠಿಛಾರ್ಜು ಮಾಡುತ್ತಾರೆ. ಹೆಂಡತಿ ಬಂದರೂ 'ಶೂಟ್' ಮಾಡುತ್ತಾರೆ. ಮುದಿ ತಂದೆ ಬಂದರೂ ಒದೆಯುತ್ತಾರೆ. ನಿರಾಯುಧರಾದ ತಮ್ಮ ದೇಶದವರ ಮೇಲೆಯೇ ಗುಂಡು ಹಾರಿಸುತ್ತಾರೆ. ಇದು ಆ ಅಧಿಕಾರದ ದರ್ಪ; ಸುದರ್ಶನ ಹೇಳಿದುದರ ಮೇಲೆ, ಇನ್ ಸ್ಪೆಕ್ಟರ್ ರಂಗಪ್ಪ ವಾಸುವಿಗೆ ಸ್ವಲ್ಪ ವಾಯಿದೆ ಕೊಟ್ಟನು. ಹತ್ತು ಹದಿನೈದು ನಿಮಿಷಗಳೊಳಗಾಗಿ ವಾಸು ಶ್ರಾದ್ಧ ಕರ್ಮವನ್ನು ಹೇಗೋ ಮುಗಿಯಿಸಿ ಬಾಗಿಲಿಗೆ ಬಂದನು. ಆ ದಿನ ವಾಸುವಿನ ವೇಷ ವಿಚಿತ್ರ ವಾಗಿದ್ದಿತು. ಮೈಗೆಲ್ಲಾ ಹನ್ನೆರಡು ನಾಮ ಧರಿಸಿದ್ದನು. ಯಾವ ವಾಸು ಅಸಾಧ್ಯ ಮನುಷ್ಯ. ಅವನು ಹೊರಗೆ ಇದ್ದರೆ ಭಾರತದ ರಕ್ಷಣೆಯಾಗುವು ದಿಲ್ಲ ಎಂದು ಪೋಲಿಸ್ ಇನ್‌ಸ್ಪೆಕ್ಟರ್ ರಂಗಪ್ಪ ಆ 15 ಜನ ರಿಸರ್ವ್ ಗಳನ್ನು ತಂದಿದ್ದನೋ, ಯಾರ ಮೇಲೆ ಸಿಐಡಿ ವರದಿಗಳು ದಸ್ತು ದಸ್ತು ಗಟ್ಟಲೆ ದಾಖಲಾಗಿದ್ದವೋ, ಆ ವಾಸು ನೋಡುವುದಕ್ಕೆ ಗೊಡ್ಡು ವೈದಿಕ ನಾಗಿ ಸಾತ್ವಿಕವಾಗಿ ಏನೂ ಅರಿಯದವನಂತೆಯೇ ತೋರಿದನು.

ಇನಿಸ್ಪೆಕ್ಟರ್ ರಂಗಪ್ಪ ಅವನ ಗಡ್ಡವನ್ನೂ ಹನ್ನೆರಡು ನಾಮವನ್ನೂ ನೋಡಿ 'ನೀವೇಯೋವಾಸು' ಎಂದು ಕೇಳಿದ. ವಾಸು ತಲೆಯಲ್ಲಾಡಿಸಿ ವಾರಂಟು ಇದೆಯೇ ಎಂದ—ಇನಿಸ್ಪೆಕ್ಟರು ಇದೆ ಎಂದು ಹೇಳಿ, ತಮ್ಮ ಸೊಂಟದ ಚಕ್ಲದ ಚೀಲದಿಂದ ಒಂದು ರಿವಾಲ್ವರನ್ನು ಹೊರಕ್ಕೆ ತೆಗೆದು ಹಿಡಿದುಕೊಂಡು ಅದನ್ನು ವಾಸುವಿನ ಕಡೆಗೆ ತೋರಿಸಿ, ವಾರಂಟನ್ನು ವಾಸುವಿನ ಕೈಯಲ್ಲಿ ಕೊಟ್ಟು ಮತ್ತೆ ರಿವಾಲ್ವರನ್ನು ಮೊದಲಿನಂತೆ ಅವನ ಕಡೆಗೇ ಹಿಡಿದು ನಿಂತುಕೊಂಡರು.

ವಾಸು ವಾರಂಟನ್ನು ಓದಿಕೊಂಡ. ಅದು ಆ ಕಾಲದಲ್ಲಿ ಜಿಲ್ಲಾಧಿಕಾರಿಗಳು ಟೈಪ್‌ಮಾಡಿಸಿ ಕೆಳಗೆ ರುಜುವನ್ನು ಹಾಕಿಕೊಟ್ಟಿದ್ದ ವಾರಂಟು ಫಾರಂ ಪೈಕಿ ಒಂದು. ಖಾಲಿಬಿದ್ದ ಜಾಗದಲ್ಲಿ ಪೋಲೀಸಿನವರು ತಮಗೆ ಬೇಕಾದವರ ಹೆಸರನ್ನು ಬರೆದುಕೊಳ್ಳುತ್ತಿದ್ದರು. ಅನೇಕ ಸಂದರ್ಭಗಳಲ್ಲಿ ದಸ್ತಗಿರಿ ಮಾಡಿದನಂತರವೂ ಪೋಲೀಸಿನವರು ಹೋಗಿ ಜಿಲ್ಲಾಧಿಕಾರಿಗಳ ರುಜು ಹಾಕಿಸಿಕೊಳ್ಳುತ್ತಿದ್ದರು. ಆಗ ಜಿಲ್ಲಾಧಿಕಾರಿಗಳು ಪೋಲೀಸಿನವರ ಕೈಗೊಂಬೆಗಳೇ ಆಗಿದ್ದರು. ಇಲ್ಲದಿದ್ದರೆ ಶಾಂತಿ ಶಿಸ್ತು ಕಾಪಾಡುವುದಕ್ಕೆ ಆಗುವುದಿಲ್ಲವೆಂದು ಪೋಲೀಸಿನವರು ಹೆದರಿಸಿ ಬಿಡುತ್ತಿದ್ದರು. ನಾವು ವ್ಯವಹರಿಸುತ್ತಿರುವುದು ನಮ್ಮ ಜನರೊಂದಿಗೆ. ಜಪಾನ್ ಜರ್ಮನಿಯವರೊಂದಿಗೆ ಅಲ್ಲ ಎಂಬುದು ಯಾವ ಅಧಿಕಾರಿಗೂ ಹೊಳೆದಿಲ್ಲ. ವಾಸು ವಾರಂಟನ್ನು ಓದಿಕೊಳ್ಳುತ್ತಾ ಹಾಗೇ ತಲೆ ಎತ್ತಿನೋಡಿದ. ಪೋಲಿಸ್ ಇನಿಸ್ಪೆಕ್ಟರು ರಂಗಪ್ಪ ಅವನ ಕಡೆಗೆ ಪಿಸ್ತೂಲನ್ನು ತೋರಿಸುತ್ತಾ ನಿಂತುಕೊಂಡಿದ್ದ. ಇದು ಹೊಸದಾಗಿ ಇನಿಸ್ಪೆಕ್ಟರ್ ಆಗಿ ತನ್ನ ಹುದ್ದೆಯ ವಿಷಯದಲ್ಲಿ ತಲೆಕೆಟ್ಟ ಇನಿಸ್ಪೆಕ್ಟರ ದರ್ಪ ಎಂಬುದು ವಾಸುವಿಗೆ ತಿಳಿಯದೆ ಹೋಗಲಿಲ್ಲ. ಅವನಿಗೆ ನಗು ಬಂದಿತು. ಕೋರ್ಟುಮಾರ್ಶಲ್‌ಗೆ ಗುರಿಯಾದವನನ್ನು ತೀರ್ಮಾನ ಓದಿದಮೇಲೆ ಹೊಡೆಯಲು ಸಿದ್ಧನಾಗಿ ನಿಂತಿದ್ದ ಹತ್ಯಾಕಾರಿಯಂತೆ ಇನಿಸ್ಪೆಕ್ಟರು ಕಾಣುತ್ತಿದ್ದ ಆ ವೇಳೆಗೆ ಗ್ರಾಮದ ಸಾವಿರಾರು ಜನ ವಾಸುವಿನ ಬಾಗಿಲಿನಲ್ಲಿ ನೆರೆದರು. ಹುಡುಗರು ರಾಷ್ಟ್ರೀಯ ಬಾವುಟವನ್ನು ಹಿಡಿದುಕೊಂಡು ಬಂದು 'ಪೋಲಿಸರೇ ರಾಜೀನಾಮೆ ಕೊಡಿ' ಎಂದು ಕೂಗತೊಡಗಿದರು. ಇನಿಸ್ಪೆಕ್ಟರ್ ರಂಗಪ್ಪನ ರಿವಾಲ್ವರ್ ನೋಡಿ ಜನರಿಗೆ ಉದ್ರೇಕ ಹೆಚ್ಚಾಯಿತು. ಆಗ ಸುದರ್ಶನ

"ರಂಗಪ್ಪ. ನಿಮ್ಮ ರಿವಾಲ್ವರ್ ಮುಚ್ಚಿಕೊಳ್ಳಿ. ಇಷ್ಟು ಜನರೆದುರಿಗೆ ನಿಮ್ಮ ರಿವಾಲ್ವರು ಮಾಡುವುದಾದರೂ ಏನು? ನಿಮ್ಮ ಜವಾಬ್ದಾರಿ ನೀವು ಅರಿತಂತೆ ತೋರುವುದಿಲ್ಲ. ಇದಾವ ನಿಮ್ಮ ದರ್ಪ? ಎಂದನು. ರಂಗಪ್ಪ ರಿವಾಲ್ವರನ್ನು ಜೇಬಿನಲ್ಲಿ ಹಾಕಿಕೊಂಡನು.

ಸುದರ್ಶನ ಸೆರೆಮನೆಗೆ ಹೋದದ್ದು ಅದು ನಾಲ್ಕನೇ ಸಲ. ಆದರೆ ಈಸಲ ಜನರ ಸಂಭ್ರಮ ಅದೇನು? ಬಸ್ ಏರುವುದಕ್ಕೆ ಮುಂಚೆ ಆರತಿಗಳೆಷ್ಟು, ಹೂವಿನ, ನೂಲಿನ ಹಾರಗಳೆಷ್ಟು, ಹಣೆಯಲ್ಲಿ ಆಶೀರ್ವಾದ ಕುಂಕುಮಗಳನ್ನಿಡುವ ಸುಮಂಗಲಿಯರ ತಂಡವೇನು! ಎಲ್ಲಾದಕ್ಕಿಂತ ಹೆಚ್ಚಾಗಿ ವಿದ್ಯಾರ್ಥಿಗಳ ಉತ್ಸಾಹವೇನು! ಪ್ರಯಾಣಿಕರ ಸೌಕರ್ಯಕ್ಕೆ ಮೋಟಾರೂ ಪೆಟ್ರೋಲೂ ಇಲ್ಲ. ಆದರೆ ಈ ಬಂಧನಕ್ಕೆ ಒಂದು ಸ್ಪೆಷಲ್ ಬಸ್ ಬಂದಿತ್ತು. ಅಂತೂ ಇನಿಸ್ಪೆಕ್ಟರು ರಂಗಪ್ಪ ವಾಸುವನ್ನೂ ಸುದರ್ಶನನನ್ನೂ ಖೈದುಮಾಡಿ ಜಿಲ್ಲೆಯ ಮುಖ್ಯ ಪಟ್ಟಣದ ಸಬ್‌ಜೈಲಿಗೆ ಕರೆದುಕೊಂಡು ಹೋಗಿಬಿಟ್ಟರು. ಭಾರತದ ರಕ್ಷಣೆ ಆಗಿ ಹೋಯಿತು! ರಂಗಪ್ಪ ರಾಜಕೀಯ ಖೈದಿಗಳನ್ನು ದಸ್ತಗಿರಿಮಾಡಿದುದು ಅದೇ ಮೊದಲು. ಅದು ಇಷ್ಟು ಸುಲಭವಾಗಿಯೇ ಆಗಿಹೋಯಿತಲ್ಲಾ ಎಂದು ಅವನಿಗೆ ಸ್ವಲ್ಪ ಬೇಜಾರೇ ಆಯಿತು. ಈ ಸಂದರ್ಭದಲ್ಲಿ ಸ್ವಲ್ಪ ದೊಂಬಿ ಗಲಾಟೆ ನಡೆದು ತಾನು ಅದನ್ನು ಅಡಗಿಸಿದ್ದರೆ ತನ್ನ ಪ್ರಮೋಶನ್‌ಗೆ ಹೆಚ್ಚಿಗೆ ಅನುಕೂಲವಾಗುತ್ತಿತ್ತೆಲ್ಲ ಎಂದೂ ಅವನಿಗೆ ಕಿಂಕೃತಿಯುಂಟಾಯಿತು. ಆದರೆ ಆ ಬೇಸರಿಕೆಯೂ ಅವನಿಗೆ ಬೇಗ ಮಾಯವಾಗುವ ಪ್ರಸಂಗ ವೊಂದು ಕೂಡಲೆ ದೊರಕಿತು.

ಮಲ್ಲಿಗೆಹಳ್ಳಿಯ ಆಗಿನ ಹೆಂಡದ ಕಂಟ್ರಾಕ್ಟರ್ ಪಾರಸಿ ಸಾಹುಕಾರನ ಮೇಲೆ ಹಳ್ಳಿಯ ಹೆಂಡಪ್ರೇಮಿಗಳಿಗೂ ಸುತ್ತಮುತ್ತಲ ಹಳ್ಳಿಯ ಕುಡುಕರಿಗೂ ಅಸಮಾಧಾನವುಂಟಾಗಿದ್ದಿತು. ಹಣದ ಅತಿ ಪ್ರಸರಣದಿಂದ ಜನರಲ್ಲಿ ದುಡ್ಡು ಅಧಿಕವಾಗಿ ಸೇರಿದುದರಿಂದಲೂ, ಹೆಂಡದ ಕಂಟ್ರಾಕ್ಟರುಗಳಲ್ಲಿ ಒಬ್ಬರಿಂದೊಬ್ಬರಿಗೆ ಪೈಪೋಟಿ ಬಿದ್ದುದರಿಂದಲೂ ಆ ವರುಷ ಹೆಂಡದ ಉತ್ಪತ್ತಿ ಭೂಕಂದಾಯದಷ್ಟೇ ಏರಿತು. ಕಂಟ್ರಾಕ್ಟರು, ತನಗೆ ಬಿದ್ದ ಹೆಚ್ಚು ವೆಚ್ಚ ಎಬ್ಬಿಸಲು, ಒದಗಿದಷ್ಟು ಹೆಂಡಕ್ಕೇ ನೀರು ಬೆರಸಿ ಮಾರುತ್ತಿದ್ದನು. ಹೆಂಡಕುಡುಕರ ನಾಲಗೆಯ

ರುಚಿ ಬಹು ಸೂಕ್ಷ್ಮ. ಅದು ಒಂದು ಉಷ್ಣಮಾಪಕ (ಥರ್ಮಾಮೀಟರ್) ಇದ್ದಂತೆ. ಹೆಂಡದ ರುಚಿ ಸ್ವಲ್ಪ ಹೆಚ್ಚು ಕಡಿಮೆಯಾದರೂ ತತ್‌ಕ್ಷಣ ಅವರಿಗೆ ಗೊತ್ತಾಗುತ್ತದೆ. ಅವರಿಗೆ ಸಾಹುಕಾರನ ಮೇಲೆ ಕೋಪ ವುಂಟಾಯಿತು. ಹೆಂಡ ನೀರು ಎಂದು ಹೇಳಿ ಹೇಳಿ ಸಾಕಾಯಿತು. ಕೊನೆಗೆ ಒಂದು ದಿನ, ಸುದರ್ಶನ ಮತ್ತು ವಾಸುವಿನ ದಸ್ತಗಿರಿಯಾದ ದಿನ, ಕುಡುಕರಲ್ಲಿ ಕೆಲವರು ರಸ್ತೆಯಲ್ಲಿ ಹೆಂಡದ ಲಾರಿಯನ್ನು ಕಾಯುತ್ತಾ ನಿಂತಿದ್ದರು. ಹೆಂಡ ಭಾರತದ ರಕ್ಷಣೆಗೆ ಸೇರಿದುದು. ಅದು ಎಸೆನ್‌ಶಿ-ಯಲ್ ಸರ್ವಿಸ್, ನಡೆದೇ ತೀರಬೇಕೆಂಬ ವಿಧಿ ಸಹ ಹೌದು. ಆದುದರಿಂದ ಸರ್ಕಾರದವರು ಅದರ ಸರಪರಾಜಿಗೆ ಪೆಟ್ರೋಲ್ ಒದಗಿಸುತ್ತಾರೆ. ಹೆಂಡದ ಲಾರಿ ತಮ್ಮ ಹತ್ತಿರಕ್ಕೆ ಬಂದ ಕೂಡಲೇ ಅದರ ಪೋಷಕರು ಲಾರಿಯನ್ನು ನಿಲ್ಲಿಸಿದರು. ಲಾರಿಯಲ್ಲಿದ್ದ ಹೆಂಡದ ಪೀಪಾಯಿಯನ್ನು ಕೆಳಕ್ಕೆ ತಳ್ಳಿ ಅದನ್ನು ತಮ್ಮ ಕೈಯಲ್ಲಿದ್ದ ಕೊಡಲಿ ಮಚ್ಚುಗಳಿಂದ ಒಡೆದುಹಾಕಿದರು. ಪೀಪಾಯಿನಿಂದ ಹೆಂಡದ ಪ್ರವಾಹವೇ ಹೊರಟಿತು. ಕುಡುಕರನೇಕರು ರಸ್ತೆಯಲ್ಲಿ ಹರಿಯುತ್ತಿದ್ದ ಹೆಂಡದ ಮೇಲೆ ಬಟ್ಟೆ ಹಾಕಿ ಹಿಂಡಿಕೊಂಡು ಬಾಯಿಗೆ ಸುರಿದುಕೊಂಡರು. ಆ ದಿನ ಹೆಂಡದ ವ್ಯಾಪಾರ ನಡೆಯಲಿಲ್ಲ. ರೈತನ ದುಡ್ಡು ರೈತನಲ್ಲಿಯೇ ಉಳಿದು ಹೋಯಿತು. ಭಾರತದ ರಕ್ಷಣೆಗೂ ಅಪಾಯ ಬಂತು.

ಹೆಂಡದ ಕಂಟ್ರಾಕ್ಟರ್ ಕೂಡಲೇ ಹಾಸನದಿಂದ ಪೋಲೀಸ್ ಇನಿಸ್ಪೆಕ್ಟರನ್ನೂ, 10–15 ಪೋಲೀಸಿನವರನ್ನೂ, 20-30 ಪೋಲಿಗಳನ್ನೂ ಕರೆದುಕೊಂಡು ಮಲ್ಲಿಗೆಹಳ್ಳಿಗೆ ಬಂದನು. ಈಗ ನಮ್ಮ ದೇಶದಲ್ಲಿ ಏನು ನಡೆದರೂ ಅದು ತತ್‌ಕ್ಷಣ "ಕಾಂಗ್ರೆಸ್ ಗಲಾಟೆ" ಯಾಗುತ್ತದೆ. ಮಲ್ಲಿಗೆಹಳ್ಳಿಯ ಪಾಠಶಾಲೆಯ, ಹಾಸ್ಟೆಲ್ಲಿನ ಸಣ್ಣಪುಟ್ಟ ಹುಡುಗರು ಮಿಡಲ್ ಸ್ಕೂಲಿನ ಮಕ್ಕಳು, ಆ ದಿವಸ ಎಲ್ಲೆಲ್ಲೂ ಗಾಂಧಿಕಿ ಜೈ ಎಂದು ಕೂಗಿದ್ದರು. ರಾಷ್ಟ್ರೀಯ ಬಾವಟದ ಮೆರವಣಿಗೆ ಮಾಡಿದ್ದರು. ಹೆಂಡ ಕುಡಿಯಬೇಡಿ ಎಂದು ಹೇಳಿದ್ದರು. ಪೋಲೀಸಿನವರಿಗೂ ಪೋಲಿಗಳಿಗೂ ಅವರ ಮೇಲೆ ಕಣ್ಣು ಹೋಯಿತು. ಈ ಎರಡು ಮಾತುಗಳೂ ಏಕವಚನ ಬಹುವಚನಗಳಾಗಿರಬಹುದೇ ಎಂಬುದು ಭಾಷಾಶಾಸ್ತ್ರಜ್ಞರಿಗೆ ಸಂಬಂಧ ಪಟ್ಟ ಪ್ರಶ್ನೆ. ಆ ತುಂಡಾಂಡಿಗಳಾದ ಹೆಂಡಕುಡುಕರು ಒಕ್ಕಲಿಗರ

ಹಾಸ್ಟೆಲ್‌ಗೆ ನುಗ್ಗಿದರು. ಆಗ ರಾತ್ರಿ ಎಂಟೂವರೆ ಗಂಟೆ ಆಗಿದ್ದಿತು. ಮನಸ್ಸಿಗೆ ಬಂದಂತೆ ಅವರು ಆ ಚಿಕ್ಕ ಮಕ್ಕಳನ್ನೆಲ್ಲಾ ಹೊಡೆದರು. ಓಹೊಹೊ ನೀವು ನೋಡಬೇಕು. ನಿರಾಯುಧರೂ, ಹುಡುಗರೂ, ಮುದುಕರೂ, ದನಗಳೂ ಇರುವಾಗ ಪೋಲಿಸ್ ಅಧಿಕಾರಿಗಳ ಜರ್ಬನ್ನು. ದನಗಳ ವಿಚಾರ ಯಾಕೆ ಹೇಳಿದೆನೆಂದರೆ ಅದೇ ಕಾಲದಲ್ಲಿ ನಮ್ಮ ಸಬ್-ಡಿವಿಜನ್ ಸಾಹೇಬರು, ಎಲ್ಲಿಯೋ ಮೇಯುತ್ತಿದ್ದ ಅನೇಕ ದನಗಳನ್ನು ಡಿಫೆನ್ಸ್ ಆಫ್ ಇಂಡಿಯ ಹೆಸರಿನಲ್ಲಿ ತಾವೇ ಕೆಲವು ಪೋಲಿಸ್ ಸಿಪಾಯಿಗಳೊಂದಿಗೆ ಅಡ್ಡಹಾಕಿ ದೊಡ್ಡಿಗೆ ತಂದು ಕೂಡಿ ಭಾರತದ ರಕ್ಷಣೆ ಮಾಡಿದರು. ಇರಲಿ. ಹೀಗೆ ಆ ಕುಡುಕರು ಆ ಎಳೆಯ ಮಕ್ಕಳನ್ನೆಲ್ಲಾ ತಮ್ಮ ಮನಸ್ಸಿಗೆ ತೃಪ್ತಿಯಾಗುವಂತೆ ಹೊಡೆದರು. ಹಳ್ಳಿಯಲ್ಲಿ ಪಿಶಾಚಿ ನರ್ತನವೇ ಪ್ರಾರಂಭವಾಯಿತು. ಸ್ತ್ರೀಪುರುಷರೆಲ್ಲಾ ಹೆದರಿ ಮನೆಯ ಬಾಗಿಲುಗಳನ್ನು ಹಾಕಿಕೊಂಡರು.

ರಾತ್ರಿ ಮತ್ತರಾಗಿ ಕುಡಿದ ಪೋಲಿಗಳು; ಅವರ ಸಹಾಯಕ್ಕೆ ಪೋಲಿಸರು—ಈ ದೇಶದ ಪೋಲಿಸು ಯಾವುದಕ್ಕೂ ಹೇಸುವುದಿಲ್ಲ. ಮಹಾತ್ಮಾ ಗಾಂಧಿಯವರು ಒಂದೆಡೆ ಹೇಳಿದ್ದಾರೆ. “ಸತ್ಯಾಗ್ರಹವೆಂಬ ಯುದ್ಧಕ್ಕೆ ಎದುರಾಗಿ ಇಂಗ್ಲೀಷರು ಲಾಠಿ ಪ್ರಹಾರ ಮಾಡುತ್ತಾರೆ. ಆದರೆ ನಮ್ಮ ದೇಶೀಯ ಸರ್ಕಾರಗಳು ಬಂದೂಕಗಳನ್ನೇ ಬಾರಿಸುತ್ತವೆ. ಬ್ರಿಟಿಷರಿಗೆ, ಸ್ವಾತಂತ್ರ್ಯ ಮನೋಭಾವ; ಆ ಮಾರ್ಗದಲ್ಲಿ ಪ್ರವೃತ್ತಿ ಇವೆ. ದೇಶೀಯ ಈ ಅಧಿಕಾರಿಗಳು ಶುದ್ಧ ಗುಲಾಮರು.” ನಿರಪರಾಧಿಗಳು ಎದೆ ತೋರಿಸಿ ಹೊಡಿ ಎಂದರೆ ಅವರ ಧೈರ್ಯವನ್ನು ಮೆಚ್ಚುವ ಬದಲು ಗುಂಡಿನಿಂದ ಹೊಡೆದೇ ಬಿಟ್ಟರೆಂದು ವರದಿಯಾಗಿರುವ ಅಧಿಕಾರಿಗಳಿರುವ ಜನ ಇದು. ಆದುದರಿಂದ ಜನ ಹೆದರಿದರು. ಪೋಲಿಸ್ ಅಧಿಕಾರಿಗಳೂ ಕಾನಿಸ್ಟೆಬಲ್ಲಿಗಳೂ ಬಸ್‌ನಲ್ಲಿ ಕುಳಿತುಕೊಂಡು ಊರ ಸುತ್ತಾ ಹೋದರು. ಮೊದಲು ಒಬ್ಬ ಪ್ರೈಮರಿ ಸ್ಕೂಲು ಉಪಾಧ್ಯಾಯರ ಮನೆಗೆ ಹೋದರು. ಬಾಗಿಲು ಹಾಕಿತ್ತು. ಆ ಉಪಾಧ್ಯಾಯರ ಮಗ ಗಾಂಧಿಕಿ ಜೈ ಎಂಬ ಗುಂಪಿನಲ್ಲಿದ್ದನಂತೆ. ಪೋಲಿಸಿನವರು ಜಬ್ಬುಮಾಡಿ ಉಪಾಧ್ಯಾಯರ ಮನೆ ಬಾಗಿಲು ತೆಗೆಸಿದರು. ಉಪಾಧ್ಯಾಯರು ಬಾಗಿಲು ತೆಗೆದ ಕೂಡಲೇ ಅವರ ದವಡೆಯ ಮೇಲೆ ಒಂದು ಲಾಠಿ ಏಟು ಬಿತ್ತು.

ಅದರಿಂದ ಅವರ ಒಂದು ಹಲ್ಲು ಮುರಿದುಹೋಯಿತು. ಅವರ ಮತ್ತೊಂದು ಹಲ್ಲು ಮೊದಲೇ ಮುರಿದಿತ್ತು. ಈ ರೀತಿ ಪ್ರಥಮ ಉಪಚಾರವಾದಮೇಲೆ ಇನಿಸ್ಪೆಕ್ಟರು "ಎಲ್ಲಿ ನಿಮ್ಮ ಹುಡುಗ" ಎಂದು ಕೇಳಿದರು. ಹುಡುಗ ಮನೆಯಲ್ಲಿ ಇರಲಿಲ್ಲ. ಅವನು ಬಹುಶಃ ಒಕ್ಕಲಿಗರ ಹಾಸ್ಟೆಲ್‌ನಲ್ಲಿ ಇದ್ದ. ಇನಿಸ್ಪೆಕ್ಟರು ಮನೆಯನ್ನು ನುಗ್ಗಿ ಹುಡುಕಿದರು. ಅವರಿಗೆ ಬೇಕಾದುದು ಏನೂ ದೊರೆಯಲಿಲ್ಲ. ಅಲ್ಲಿಂದ ಮುಂದೆ ಇನಿಸ್ಪೆಕ್ಟರೂ ಪೋಲೀಸಿನವರೂ ಜೋಯಿಸರ ಮನೆಬಾಗಿಲಿಗೆ ಬಂದರು. ಜೋಯಿಸರ ಮಗ ವಿದ್ಯಾರ್ಥಿ. ಧೀರ ಯುವಕ, ಗಾಂಧಿ ಎಂಬ ಗುಂಪಿನಲ್ಲಿ ಅವನೂ ಇದ್ದನಂತೆ. ಆದರೆ ಅವನೂ ಮನೆಯಲ್ಲಿರಲಿಲ್ಲ. ಪೋಲಿಸಿನವರು ಮನೆಯನ್ನು ಹುಡುಕಿದರು. ಕೊನೆಯಲ್ಲಿ ಹೇಗಾದರೂ ಆಗಲಿ ಎಂದುಕೊಂಡು ಜೋಯಿಸರನ್ನೇ "ನೀವು ಬಸ್ ಏರಿ. ನಮ್ಮ ಜತೆಯಲ್ಲಿ ಜಿಲ್ಲಾ ಮುಖ್ಯ ಪಟ್ಟಣಕ್ಕೆ ಬರಬೇಕು" ಎಂದರು. ಜೋಯಿಸ ಗಾಬರಿಗೊಳ್ಳದೆ ನಿಧಾನವಾಗಿಯೇ, ಚೀಲಕ್ಕೆ ಶಾಲು ಪಂಚೆ ಹಾಕಿಕೊಂಡು ಚಿಲ್ಲರೆ ದುಡ್ಡನ್ನು ಜೇಬಿಗೆ ಹಾಕಿಕೊಂಡು ಬಂದು ಬಸ್‌ನಲ್ಲಿ ಕುಳಿತರು. ಅಲ್ಲಿಂದ ಮುಂದೆ ಪೋಲಿಸಿನವರು ಶಾಮರಾಯರ ಗುಡಿಸಲಿನ ಹತ್ತಿರ ಹೋದರು. ಅವರ ಮಗನ ಕೈಲಿ ಒಂದು ಬಾವಟವಿದ್ದಿತಂತೆ. ಆದರೆ ಅವನೂ ಅವರ ಕಣ್ಣಿಗೆ ಬೀಳಲಿಲ್ಲ. ಶಾಮರಾಯನನ್ನು ಸ್ವಲ್ಪ ಹೆದರಿಸಿ, ಬಸ್ಸನ್ನು ಮಲ್ಲಿಗೆಹಳ್ಳಿ ಅಯ್ಯನವರ ಮನೆಗೆ ತೆಗೆದುಕೊಂಡುಹೋದರು. ಹೋದವರೇ ಅಯ್ಯನವರ ಮಗ ಎಲ್ಲಿ ಎಂದು ವಿಚಾರಿಸಿದರು. ಹುಡುಗರೆಲ್ಲಾ ಹೆಂಡದ ಲಾರಿ ಒಡೆಯಲು ಕುಮ್ಮಕ್ಕು ಕೊಟ್ಟಿದ್ದರು. ಇನಿಸ್ಪೆಕ್ಟರು, "ಮನೆ ಹುಡುಕಬೇಕು" ಎಂದರು. ಅಯ್ಯನವರು ಹುಡುಕುವ ವಾರೆಂಟ್ ಇದೆಯೇ ಎಂದರು. ಇನಿಸ್ಪೆಕ್ಟರು ಇದು 'ಡಿಫೆನ್ಸ್' ಬೇಕಾದ ಕಡೆ ಹೋಗುತ್ತೇನೆ ಎಂದರು.

ಅಯ್ಯನವರು "ಒಂದುಗಳಿಗೆ ತಡೆಯಿರಿ" ಎಂದು ಹೇಳಿ ಒಳಕ್ಕೆ ಹೋದರು. ಅವರಿಗೆ ತೋಟದಲ್ಲಿ ಕಾವಲಿಗೂ ಕಾಡು ಮೃಗಗಳನ್ನು ಹೊಡೆಯುವುದಕ್ಕೂ ಆತ್ಮರಕ್ಷಣೆಗೂ ರಿವಾಲ್ವರ್ ಲೈಸೆನ್ಸ್ ಇದೆ. ಆದರೆ ಆ ರಿವಾಲ್ವರನ್ನು ಹೀಗೆ ನಮ್ಮ ಅಧಿಕಾರಿಗಳ ಕೈಯಿಂದ ಆತ್ಮರಕ್ಷಣೆ ಮಾಡಿಕೊಳ್ಳಲು ಉಪಯೋಗಿಸಬೇಕಾದೀತೆಂದು ಅವರು ಎಣಿಸಿರಲಿಲ್ಲ.

ಐಯ್ಯನವರು ರಿವಾಲ್ವರನ್ನು ಹಿಡಿದುಕೊಂಡು ಹೊರಗೆ ಬಂದು " ಸ್ವಾಮಿ ಇದರಲ್ಲಿ ಆರು ತೋಟ ಇದೆ. ನನ್ನ ಗುರಿ ಬಹಳ ಚೆಂದ. ನೀವು ಸರ್ಚ್ ವಾರಂಟು ತಂದರೆ ಮನೆಯೊಳಗೆ ಬೇಕಾದ ಕಡೆ ಹೋಗಬಹುದು. ಇಲ್ಲ ವಾದರೆ ಈ ಆರು ತೋಟ ಹಾರಿಸಿದ ಮೇಲೆಯೇ ನೀವು ಹೋಗುವುದು" ಎಂದರು. ಇನಿಸ್ಪೆಕ್ಟರು ಬಹು ಧೈರ್ಯಶಾಲಿ. ಇಂತಹ ಪ್ರಸಂಗದಲ್ಲಿ ಹೇಗೆ ಮಾಡಬೇಕೆಂಬುದೆಲ್ಲಾ ಅವರಿಗೆ ' ಟ್ರೈನಿಂಗ್ ' ಕಾಲದಲ್ಲಿ ಚೆನ್ನಾಗಿ ಪಾಠವಾಗಿದ್ದಿತು. ಆದರೆ ಬಲಾತ್ಕಾರವಾಗಿ ಹಿಡಿದುಕೊಂಡು ಹೋಗಿ ಬಲಿ ಕೊಟ್ಟರೇ ಕುರಿಯಂತೆ ಸಾಯುವವನೇ ಹೊರತು ಈ ಆರು ತೋಟದ ಪಿಶಾಚಿಯ ಮೇಲೆ ನುಗ್ಗುವುದು ಅವನಿಗೆ ಅಷ್ಟು ವಿವೇಕವಾಗಿ ತೋರ ಲಿಲ್ಲ. ಅಲ್ಲದೆ ನಮ್ಮ ವೀರರ ಶೌರ್ಯವನ್ನು ಅವರ ನಿಜವಾದ ಯುದ್ಧ ಭೂಮಿಗಳಾದ, ತಮ್ಮಲ್ಲಿ ರಿವಾಲ್ವರ್ ಲಾಠಿ ಇರುವಾಗ ಜನರಲ್ಲಿ ಏನೂ ಇಲ್ಲದೆ ಜನರು ಶಾಂತಿಯಿಂದ ಇರುವಾಗ, ನೋಡಬೇಕು. ಒಬ್ಬೊಬ್ಬನೂ ಎಷ್ಟೋ ತಲೆಗಳನ್ನು ಒಡೆಯುತ್ತಾನೆ. ಇನಿಸ್ಪೆಕ್ಟರು ಮಾತನಾಡಲಿಲ್ಲ. ತಮ್ಮ ಸ್ವಂತ ರಿವಾಲ್ವರ್ ಮೇಲೆ ಕೈ ಇಟ್ಟುದನ್ನು ತೆಗೆದು ಬಸ್ಸನ್ನು ಮುಂದಕ್ಕೆ ಬಿಟ್ಟುಕೊಂಡು ಜಿಲ್ಲೆಯ ಮುಖ್ಯ ಪಟ್ಟಣಕ್ಕೆ ಹೊರಟರು. 6-7 ಮೈಲಿ ಹೋದನಂತರ ಬಸ್ಸು ನಿಲ್ಲಿಸಿ ಜೋಯಿಸರನ್ನು ಅರ್ಧರಾತ್ರಿ ನಡುರಸ್ತೆಯಲ್ಲಿ ಇಳಿಸಿ ಮುಂದೆ ಹೋದರು. ಜೋಯಿಸ ಬೆಳಗಾಗುವ ವೇಳೆಗೆ ಮನೆ ತಲಪಿದ. ಜಿಲ್ಲಾಧಿಕಾರಿಗಳಿಗೆ ವಿಷಯ ತಿಳಿಯಿತು. ಪೋಲಿಸಿನವರು ಮಾಡಿದುದು ತಪ್ಪು ಎಂದು ಅವರಿಗೆ ಚನ್ನಾಗಿ ಮುಂದ ಟ್ಟಾಯಿತು. ಬರಿಯ ಮುಂದಟ್ಟಾದರೆ ಏನು ಪ್ರಯೋಜನ. ' ತಾಖತ್ ' ಇರಬೇಕಲ್ಲ. ಪೋಲೀಸಿನವರು ತಾವು ಮಾಡಿದುದನ್ನು ಮುಚ್ಚಿಕೊಳ್ಳಲು ನಾಲ್ಕು ಸಣ್ಣ ಹುಡುಗರ ಮೇಲೆ ಡಿಫೆನ್ಸ್ ಕಾನೂನು ಮೊಖದ್ದಮೆ ಹೂಡಿ ದರು. ಹುಡುಗರು ಯಾವುದಕ್ಕೂ ಹೆದರಲಿಲ್ಲ.

ಸುದರ್ಶನ ಹಾಸ್ಯಪುರಿ ಸಬ್ ಜೈಲಿನಲ್ಲಿ ದಾಖಲಾದ. ಈ ಸಂದರ್ಭ ದಲ್ಲಿ ನಮ್ಮವರೆನ್ನಿಸಿಕೊಂಡ ಅಧಿಕಾರಿಗಳ ವರ್ತನೆ ಕಂಡು ದೇಶಕ್ಕೆ ದೇಶವೇ ಜಿಗುಪ್ಸೆಪಟ್ಟಿತು. ಮುಖ್ಯವಾಗಿ ಅಧಿಕಾರಿಗಳ ಕೈವಾಡ ವಿದ್ಯಾರ್ಥಿಗಳ ಮೇಲೆಯೇ ಪ್ರಾರಂಭವಾಯಿತು. ಹಾಸ್ಯಪುರಿಯ ಹೈಸ್ಕೂಲು ವಿದ್ಯಾರ್ಥಿಗಳ ವಿಚಾರವನ್ನೇ ತೆಗೆದುಕೊಳ್ಳೋಣ. ಸರ್ಕಾರ

ದವರು ಮುಖಂಡರನ್ನು ದಸ್ತಗಿರಿ ಮಾಡಿದುದರಿಂದ ವಿದ್ಯಾರ್ಥಿಗಳು ಅಸಮಾಧಾನಗೊಂಡು ಸ್ಕೂಲಿಗೆ ಹೋಗಲಿಲ್ಲ. ಪೋಲೀಸಿನವರು ಸ್ಕೂಲಿನ ಹತ್ತಿರ ಲಾಠಿಗಳನ್ನೂ ಬಂದೂಕಗಳನ್ನೂ ಹಿಡಿದುಕೊಂಡು ಗಸ್ತು ಪ್ರಾರಂಭಿಸಿದರು. ಸ್ಕೂಲಿನ ಸುತ್ತಾ ಹೀಗೆ ಗಸ್ತು ಪ್ರಾರಂಭಿಸಲು ವಿದ್ಯಾರ್ಥಿಗಳು ಮುದ್ದುಗುಂಡೇ. ಮಹಿಷಪುರಿಯಿಂದ 300 ವಿದ್ಯಾರ್ಥಿಗಳು ರೈಲಿನಲ್ಲಿ ಬಂದು ಹಾಸ್ಯಪುರಿಯಲ್ಲಿ ಇಳಿದರು. ಅವರು ಟಿಕೆಟ್ ತಂದಿರಲಿಲ್ಲ. ಇಳಿಯುವಾಗಲೂ ಹತ್ತುವಾಗಲೂ ಅವರನ್ನು ಯಾರೂ ಮಾತನಾಡಿಸಲಿಲ್ಲ. ಅದನ್ನು ನೋಡಿಕೊಂಡು ಹಾಸ್ಯಪುರಿಯ ಸ್ಕೂಲಿನ ವಿದ್ಯಾರ್ಥಿಗಳೂ ರೈಲಿನಲ್ಲಿ ಅರಸಿಯಕೆರೆಗೆ ಹೋಗುವುದಾಗಿ ಹೇಳಿದರು. ಆ ವೇಳೆಗೆ ವಿದ್ಯಾರ್ಥಿಗಳಿಗೆ ಒಂದು ಅನುಭವವಾಗಿದ್ದಿತು. ಪೋಲೀಸಿನವರು ಹೆಚ್ಚು ವಿದ್ಯಾರ್ಥಿಗಳಿದ್ದರೆ ಮಾತನಾಡಿಸುವುದಿಲ್ಲ. ಕಡಿಮೆ ಇದ್ದರೆ ಸುಮ್ಮನೆ ಬಿಡುವುದಿಲ್ಲ. ಆದರೆ ವಿದ್ಯಾರ್ಥಿಗಳಲ್ಲಿ ಕೆಲವರು ಇದನ್ನು ಸರಿಯಾಗಿ ತಿಳಿದುಕೊಳ್ಳಲಿಲ್ಲ. ಬೇಕು ಬೇಡ ಎನ್ನುವುದಕ್ಕಿಂತ ಮುಂಚೆಯೇ 25-30 ವಿದ್ಯಾರ್ಥಿಗಳು ಒಂದುದಿನ ರೈಲಿನಲ್ಲಿ ಟಿಕೆಟ್ ಇಲ್ಲದೆ ಅರಸಿಯಕೆರೆಗೆ ಹೋಗಿಬಿಟ್ಟರು. ಅವರೆಲ್ಲಾ 12, 13 ವಯಸ್ಸಿನವರೇ. ಆ ವಿಚಾರ ಪೋಲೀಸಿನವರಿಗೆ ತಿಳಿಯಿತು. ಅರಸಿಯಕೆರೆಯಿಂದ ಮಾರನೆ ದಿನ ಟಿಕೆಟ್ ಇಲ್ಲದೆ ಬರುವವರಿಗೆಲ್ಲಾ ಲಾಠಿ ಛಾರ್ಜು ಎಂದು ತೀರ್ಮಾನಿಸಿದರು. ಈ ವಿಚಾರ ಕೇಳಿ ಗರಡಣ್ಣಯ್ಯನೆಂಬ ವಿದ್ಯಾರ್ಥಿಗೆ ಬಹಳ ಭಯವಾಯಿತು. ಪಾಪ ಸಣ್ಣ ಮಕ್ಕಳು. ಮೊದಲು ಅವರನ್ನು ಟಿಕೆಟ್ ಇಲ್ಲದೆ ರೈಲಿನಲ್ಲಿ ಹೋಗಲು ಬಿಟ್ಟುದು ರೈಲ್ವೆ ಅಧಿಕಾರಿಗಳ ತಪ್ಪು. ಬಿಟ್ಟಮೇಲೆ ಅವರು ವಾಪಸು ಬರಲು ಅವಕಾಶ ಕೊಡಬೇಕು. ಇಲ್ಲದಿದ್ದರೆ ಅರಸಿಯಕೆರೆಯಲ್ಲಿ ಅವರು ರೈಲು ಹತ್ತಲು ಅವಕಾಶ ಕೊಡಕೂಡದು. "ಅಲ್ಲಿ ರೈಲು ಏರಿಸಿ ಇಲ್ಲಿ ಹೊಡೆಯುವುದು ಇದ್ಯಾವ ಹತ್ಯಾಕಾಂಡ. ಈ ಜನಕ್ಕೆ ಯಾವತ್ತು ಬುದ್ಧಿ ಬರುತ್ತೆ" ಎಂದುಕೊಂಡ ಗರಡಣ್ಣಯ್ಯ.

ಆ ಸಾಯಂಕಾಲ ಎರಡು ಲಾರಿ ಪೋಲಿಸಿನವರು ಲಾಠಿಯೊಂದಿಗೆ ಸಿದ್ಧರಾಗಿ ರೈಲ್ವೆ ಸ್ಟೇಷನ್ನಿಗೆ ಬಂದರು. ಅವರ ಜತೆಯಲ್ಲಿ ಕಬ್ಬಿಣದ ಟೋಪಿಯ ರಿಜರ್ವ್ ಐದು ಜನ ಬಂದೂಕದೊಂದಿಗೆ ಸಿದ್ಧರಾಗಿದ್ದರು.

ಇಂತಿಂತಹ ಹುಡುಗರು ಹೋಗಿದ್ದಾರೆ ಎಂಬುದು ಇನ್ನೂ ಆಗತಾನೆ ಕೆಲವು ಪೋಷಕರಿಗೆ ತಿಳಿದು ಅವರು "ಡಬ್ಬಲ್ ಛಾರ್ಜು ಅಲ್ಲದಿದ್ದರೆ ಟ್ರಿಬಲ್ ಛಾರ್ಜು ಕೊಡೋಣ. ಆರು ತಿಂಗಳಲ್ಲದಿದ್ದರೆ ಒಂದು ವರುಷ ಸಜಾ ಹಾಕಲಿ. ಆದರೆ ಈ ಮಾರಿಜಾತ್ರೆ ಹೇಗೆ ತಡೆಯೋಣ" ಎಂದು ನಡುಗುತ್ತಾ ಸ್ಟೇಷನ್ ಹೊರಗೆ ನಿಂತಿದ್ದರು. ಆ ದಿನ ಪೋಲೀಸಿನವರು ಪ್ಲಾಟ್ ಫಾರಂನೆಲ್ಲಾ ಆಕ್ರಮಿಸಿದುದರಿಂದ ಇತರರಾರಿಗೂ ಅಲ್ಲಿ ಅವಕಾಶ ದೊರೆಯಲಿಲ್ಲ. ಪೋಲೀಸಿನವರು ಜನರನ್ನು ಸ್ಟೇಷನ್ನಿನ ಹತ್ತಿರಕ್ಕೆ ಬರಗೊಡದೆ ತಳ್ಳುತ್ತಿದ್ದರು. ಗರಡಣ್ಣಯ್ಯನು ಸೂಪರಿಂಟೆಂಡೆಂಟ್ ಬಂದರೆ "ಈ ಲಾಠಿ ಛಾರ್ಜು ಮಾಡಿಸಬೇಡಿ. ಕಾನೂನಿನಂತೆ ಶಿಕ್ಷಿಸಿ' ಎಂದು ಹೇಳೋಣವೆಂದು ಕಾಯುತ್ತಿದ್ದ. ಆದರೆ ಒಂದು ನಾಲ್ಕು ಹುಡುಗರ ತಲೆ ಒಡೆಯುವುದಕ್ಕೆ ಸೂಪರಿಂಟೆಂಡೆಂಟ್ ಯಾಕೆ ಬರಬೇಕು? ಸಬ್ ಇನಿಸ್ಪೆಕ್ಟರು ಒಳ್ಳೆಯ ಠೀವಿಯಿಂದ ಮೀಸೆ ಹುರಿಮಾಡುತ್ತಾ ತಮ್ಮ ಕೈಯಲ್ಲಿದ್ದ ಸ್ವಲ್ಪ ಮೋಟಾದ ಲಾಠಿಯನ್ನು ತಿರುಗಿಸುತ್ತಾ ನಿಂತಿದ್ದರು. ಉಳಿದ ಪೋಲೀಸ್‌ನವರೆಲ್ಲಾ ಉದ್ದುದ್ದವಾದ ಹಿತ್ತಾಳೆ ಕಟ್ಟು ಹಾಕಿದ್ದ ಲಾಠಿಗಳನ್ನು ಆಸೆಯಿಂದ ಹಿಡಿದು ತಿರುಗಿಸುತ್ತಾ ನಿಂತಿದ್ದರು. ಸ್ಟೇಷನ್ನಿನ ಹೊರಗೆ ಸುಮಾರು ಎರಡು ಸಾವಿರ ಜನ ಪುರಜನರು ನಿಂತಿದ್ದರು. ಪ್ರಶ್ನೆ ಈ ಪೋಲಿಸರ ಕೈಗೆ ಸಿಕ್ಕುವ ಹುಡುಗರ ಗತಿಯೇನು? ಎಂಬುದು ಒಂದು ಕಡೆ; ಮತ್ತೊಂದು ಕಡೆ ಈ ಜನ ಏನಾದರೂ ತಿರುಗಿಬಿದ್ದರೆ ಈ ಪೋಲೀಸರ ಗತಿಯೇನು? ಎಂಬುದು. ಗರಡಣ್ಣಯ್ಯ ಒಂದು ಸಲ ಆ ಉದ್ರೇಕಗೊಂಡ ಜನರನ್ನೂ ಮತ್ತೊಂದು ಸಲ ಆ ಲಾಠಿ ಪೋಲೀಸನ್ನೂ ನೋಡಿದ. ಒಬ್ಬ ಪೋಲೀಸಿನವನಿಗೆ ತನ್ನ ಲಾಠಿ ಎತ್ತುವುದೇ ಭಾರವಾಗಿದ್ದಿತು. ಮತ್ತೊಬ್ಬನಿಗೆ ಗೂನುಬೆನ್ನು. ಮೊಣಕಾಲಿನವರೆಗೆ ಬೆಳೆದಿದ್ದ ಹೊಟ್ಟೆ. ಅಯ್ಯೋ ಎನ್ನಿಸಿತು. ರೈಲು ದೂರದಲ್ಲಿ ಕೂಗಿತು. ಪೋಲೀಸಿನವರು ಸಿದ್ಧರಾದರು. ಜನರು ಮುಂದೆ ನುಗ್ಗಲು ಹವಣಿಸುತ್ತಿದ್ದರು. ಗರಡಣ್ಣಯ್ಯನು ಅವರನ್ನು ತಡೆದ. ರೈಲುಪ್ಲಾಟ್ ಫಾರಂಗೆ ಬಂತು. ಆವತ್ತು ಏನು ಕಾರಣವೋ ಹುಡುಗರು ಅರಸಿಯಕೆರೆಯಿಂದ ಬರಲಿಲ್ಲ. ನೆರೆದ ಜನರಿಗಂತೂ ಅತಿ ಸಂತೋಷವಾಯಿತು. ಪೋಲೀಸಿನವರಿಗೂ ಸಂತೋಷವಾದಂತೆಯೇ ತೋರಿತು.

ಆ ದಿನ ಗರಡಣ್ಣಯ್ಯನು ಜಿಲ್ಲಾಧಿಕಾರಿಗಳಲ್ಲಿ ಹೋಗಿ "ನಾಳೆಯಂತೂ ಹುಡುಗರು ಹಿಂದಿರುಗುವುದು ಖಂಡಿತ. ಸ್ವಸ್ಥವಾಗಿ ಮನೆ ಸೇರಲಿ. ಲಾಠಿ ಪೋಲೀಸನ್ನು ಸ್ಟೇಷನ್ನಿಗೆ ಕಳುಹಿಸಬೇಡಿ" ಎಂದನು. ಅಧಿಕಾರಿಗಳು ನೋಡಿದರೆ ಸಾತ್ವಿಕರಾಗಿ ಕರುಣಾಶಾಲಿಗಳಂತೆ ಕಾಣುತ್ತಾರೆ. ಆದರೆ ದರ್ಪದ ಕುದುರೆ ಏರಿ ಮದದ ಕೈಯಲ್ಲಿ ಕಡಿವಾಣವನ್ನು ಬಿಟ್ಟರೆ ಅದು ಯಾವ ಅಧಃಪಾತಾಳಕ್ಕೆ ಬೇಕಾದರೂ ತೆಗೆದುಕೊಂಡು ಹೋಗಿ ಎಸೆಯಬಹುದು. ಜಿಲ್ಲಾಧಿಕಾರಿಗಳು 'ಅವರು ಮಾಡಿದುದನ್ನು ಅವರು ಅನುಭವಿಸಲೇಬೇಕು' ಎಂದರು. ಗರಡಣ್ಣಯ್ಯನು "ಆದರೆ ನೀವು ಮಾಡಿದುದನ್ನು ದೇಶ ಅನುಭವಿಸಬೇಕೆಲ್ಲ ಸ್ವಾಮಿ" ಎಂದ. ಆ ರಾತ್ರಿ ಮಕ್ಕಳ ಪೋಷಕರು ವಿದ್ಯಾರ್ಥಿಗಳ ಮುಖಂಡನಾದ ಕರಡಣ್ಣಯ್ಯನಲ್ಲಿ ಬಂದು ಮೊರೆಯಿಟ್ಟರು. ಅರಸಿಯಕೆರೆಗೆ ರಾತ್ರಿ ರೈಲು ಆಗ ಇರಲಿಲ್ಲ ಗರಡಣ್ಣಯ್ಯ ಏನೋ ಸಾಹಸಮಾಡಿ ರಾತ್ರಿ ಅರಸಿಯಕೆರೆಗೆ ಹುಡುಗರಿಗೆ ಸುದ್ದಿ ಮುಟ್ಟಿಸಿದ. ಮರು ದಿವಸವೂ ಎರಡು ಲಾರಿ ಪೋಲೀಸರು ಸ್ಟೇಶನ್ನಿನಲ್ಲಿ ಲಾರಿಗಳೊಂದಿಗೆ ಕಾಯುತ್ತಿದ್ದರು ಹುಡುಗರು ಬರಲಿಲ್ಲ. ಅವರು ನಿಧಾನವಾಗಿ 30 ಮೈಲಿ ನಡೆದುಕೊಂಡೇ ಮೂರನೆಯ ಸಾಯಂಕಾಲ ಹಿಂದಿರುಗಿದರು. ಸಾರ್ವಜನಿಕ ಸಭೆಯಲ್ಲಿ ಈ ವಿಚಾರಗಳನ್ನೆಲ್ಲಾ ಗರಡಣ್ಣಯ್ಯ ತಿಳಿಸಿ "ಇವರು ನಿಜವಾಗಿಯೂ ನಮ್ಮವರೇ ನಮ್ಮ ಅಧಿಕಾರಿಗಳೇ?" ಎಂದ. ಅದರಿಂದ ಭಾರತದ ರಕ್ಷಣೆಗೆ ವಿರೋಧವಾಯಿತು. ಅವನನ್ನೂ ಸೆರೆಮನೆಗೆ ಕಳುಹಿಸಿದರು.

ನಲ್ವತ್ತೆರಡನೆಯ ಆಗಸ್ಟಿನಿಂದ ಪೋಲೀಸರಿಗೆ ಎಲ್ಲಿ ಎಂದರೆ ಅಲ್ಲಿ ಲಾಠಿ ಬಾರಿಸುವುದೇ ಕೆಲಸವಾಯಿತು. ಸಣ್ಣ ಮಗಳೂರಿನಲ್ಲಿ ಬಾಲಕ ಬಾಲಕಿಯರ ಮೇಲೆ ಲಾಠಿ ಛಾರ್ಜು. ಕಲ್ಯಾಣ ನಗರಿಯ ಬಾಲಕಿಯರ ಮೇಲೆ ಲಾಠಿ ಛಾರ್ಜು ಆಗಲಿಲ್ಲವೆ? ಬಾಲಕ ಬಾಲಕಿಯರು ಬೇಕಾದರೆ ಸ್ಕೂಲಿಗೆ ಹೋಗುತ್ತಾರೆ. ಇಲ್ಲವಾದರೆ ಬಿಡುತ್ತಾರೆ. ಪೋಲೀಸರಿಗೆ ಸ್ಕೂಲುಗಳನ್ನು ಕಾಯುವುದು ರಸ್ತೆಗಳನ್ನು ಕಾಯುವುದು ಇವುಗಳ ಹೊರತು ಮತ್ತೇನೂ ಕೆಲಸವೇ ಇಲ್ಲವೆ? ಹುಡುಗರೇನು ಮೃಗಗಳೇ. "ಸ್ಕೂಲಿಗೆ ಹುಡುಗ ಹುಡುಗಿಯರು ಹೋಗಲಿಲ್ಲ. ಭಾರತದ ಸಂರಕ್ಷಣೆಗೆ ವಿರೋಧ; ಅವರ ದಸ್ತಗಿರಿ. ಹುಡುಗರು ಮೆರವಣಿಗೆ ಹೊರಟರು; ದಸ್ತ

ಗಿರಿ. ಸ್ಕೂಲಿಗೆ ಹೋಗಬೇಡಿ ಎಂದರು; ದಸ್ತಗಿರಿ.'' ಜಗತ್ತಿನ ಯಾವ ಭಾಗದಲ್ಲಿಯೂ ವಿದ್ಯಾರ್ಥಿಗಳನ್ನು ವಿದ್ಯಾರ್ಥಿಗಳ ಚಟುವಟಿಕೆಗಳಿಗಾಗಿ ಬಂಧಿಸಿದುದೂ ಚಿತ್ರಹಿಂಸೆ ಮಾಡಿದುದೂ ಇಲ್ಲ. ಈ ಕಾರಣಗಳಿಂದ ಅವರ ರಾಷ್ಟ್ರಗಳ ಸಂರಕ್ಷಣೆ ಆಗದೆ ಉಳಿಯಲಿಲ್ಲ. ಆದರೆ ಇಲ್ಲಿ ಇದನ್ನೆಲ್ಲಾ ಮಾಡಿದೆವು. ಆದರೂ ಬರ್ಮಾದ ಸಂರಕ್ಷಣೆ ಆಗಲೇ ಇಲ್ಲ.

---

## ೪೦. ಪ್ರವೇಶ—ಪರಿಚಯ

---

ಆ ಸಮಯದಲ್ಲಿ ಒಂದು ಕಡೆಯಿಂದ ಜಿಲ್ಲಾ ಲಾಕ್‌ಅಪ್‌ಗಳನ್ನೆಲ್ಲಾ ಸಬ್ ಜೈಲು ಮಾಡಿದರು. ಈಗ ಆಹಾರದ ಪ್ರಶ್ನೆ ಹೇಗೆಯೋ ಆಗ ಜೈಲುಗಳನ್ನು ಒದಗಿಸುವ ಪ್ರಶ್ನೆ ಅಷ್ಟೇ ಪ್ರಾಮುಖ್ಯವಾಯಿತು. ಮೊದಲು ಬರಿಯ ಲಾಕ್‌ಅಪ್ ಆಗಿದ್ದ ಹಾಸ್ಯಪುರಿ ಜೈಲಿಗೆ ಒಬ್ಬ ಸೂಪರಿಂಟೆಂಡೆಂಟರು ಬಂದರು. ಆಗ ಒಬ್ಬ ಹೊಸಬ ಸತ್ಯಾಗ್ರಹಿ—ಡಿಟೆನ್ಯು ಒಳಕ್ಕೆ ಬರುತ್ತಾರೆ ಎಂದರೆ ಸೆರೆಮನೆಯಲ್ಲಿರುವವರಿಗೆಲ್ಲಾ ಬಹಳ ಉತ್ಸಾಹ. ಜೈಲುಗಳಿಗೆ ದೊಡ್ಡ ಬಾಗಿಲುಗಳ ನಡುವೆ ಒಂದು ಚಿಕ್ಕ ಬಾಗಿಲು ಇರುತ್ತದೆ. ಸಾಧಾರಣವಾಗಿ ದೊಡ್ಡ ಬಾಗಿಲನ್ನು ಖೈದಿಗಳಿಗೆ ತೆಗೆಯುವುದಿಲ್ಲ. ಎತ್ತಿನ ಗಾಡಿ ಕುದುರೆ ಗಾಡಿ ಗೊಬ್ಬರದ ಗಾಡಿ ಬಟ್ಟೆ ಮೂಟೆಗಳನ್ನು ಹೇರಿಕೊಂಡು ಬರುವ ಅಗಸರ ಕತ್ತೆ ಮುಂತಾದ ದನಗಳಿಗೆ ಮಾತ್ರ ಈ ದೊಡ್ಡ ಬಾಗಿಲುಗಳನ್ನು ತೆಗೆಯುತ್ತಾರೆ. ಜಿಲ್ಲಾಧಿಕಾರಿಗಳು ಬಂದರೂ ಈ ದೊಡ್ಡ ಬಾಗಿಲನ್ನು ತೆಗೆಯುತ್ತಾರೆ. ಆದರೆ ಖೈದಿಗಳೇ ಆಗಲಿ ಡಿಟೆನ್ಯೂಗಳೇ ಆಗಲಿ ಅವರು ಎಷ್ಟೇ ದೊಡ್ಡವರಾಗಲಿ ಅವರಿಗೆ ಈ ಬಾಗಿಲನ್ನು ತೆರೆಯುವುದಿಲ್ಲ. ದೊಡ್ಡ ಬಾಗಿಲಿನ ಮಧ್ಯದಲ್ಲಿ ಸುಮಾರು ನಾಲ್ಕು ಅಡಿ ಎತ್ತರದ ಮತ್ತೊಂದು ಚಿಕ್ಕ ಬಾಗಿಲನ್ನು ಕೊರೆದಿರುತ್ತಾರೆ. ಜೈಲಿನೊಳಕ್ಕೆ ಮಹಾತ್ಮಾಗಾಂಧಿ ಬಂದರೂ ಮೈಸೂರು ಕಾಂಗ್ರೆಸ್ ಅಧ್ಯಕ್ಷರು ಬಂದರೂ ಆ ಬಾಗಿಲಿನಲ್ಲಿಯೇ ಬಗ್ಗಿಕೊಂಡು ಒಳಕ್ಕೆ ಹೋಗಬೇಕು. ಹೊಸಬರು ಸೆರೆಯಾಳಾಗಿ ಒಳಕ್ಕೆ ಬರುತ್ತಾರೆ ಎಂದು ತಿಳಿದ ಕೂಡಲೆ ಒಳಗಿರುವವರೆಲ್ಲ ಉತ್ಸಾಹದಿಂದ ಆ ಸಣ್ಣ ಬಾಗಿಲಿನ ಹತ್ತಿರ ಬಂದು ನಿಂತು

ಕೊಳ್ಳುತ್ತಾರೆ. ಬಂದವರ ಹೆಸರನ್ನು ಕೇಳಿ, ಇಂಥಾವರಿಗೆ ಜೈ, ಗಾಂಧಿಯವರಿಗೆ ಜೈ ಎಂದು ಕೂಗುತ್ತಾರೆ. ಅಲ್ಲಿಂದ 'ವೀರಬನೊ, ವೀರಬನೊ ಸಬ್ ಭಾರತವಾಸೀ ವೀರಬನೊ' ಎಂದು ಹಾಡುತ್ತಾ ಅವರನ್ನು ಒಳಕ್ಕೆ ಕರೆದುಕೊಂಡು ಹೋಗುತ್ತಾರೆ.

ಸಾಧಾರಣವಾಗಿ ಸೆಂಟ್ರಲ್ ಜೈಲುಗಳಲ್ಲಿ ಕ್ವಾರೆಂಟೈನ್ ಎಂಬ ಒಂದು ಭಾಗವಿದೆ. ಬಂದ ಸೆರೆಯಾಳುಗಳನ್ನು ಅಲ್ಲಿ ಕೊನೆಯ ಪಕ್ಷ ಹತ್ತು ದಿನ ನಿಲ್ಲಿಸಿ ಅವರಲ್ಲಿರಬಹುದಾದ ರೋಗಾದಿಗಳು ಇತರ ಖೈದಿಗಳಿಗೆ ಬರದಂತೆ ಮಾಡಿ ಅನಂತರ ಆ ಖೈದಿಯನ್ನು ಉಳಿದವರ ಜತೆಯಲ್ಲಿ ಸೇರಿಸುವುದು ಪದ್ಧತಿ. ರಾಜಕೀಯರಲ್ಲದ ಖೈದಿಗಳಿಗೆ ಈಗಲೂ ಕಲ್ಯಾಣ ನಗರಿಯ ಜೈಲಿನಲ್ಲಿ ಹೀಗೆಯೇ ನಡೆಯುತ್ತಿದೆ. ಒಬ್ಬರು ಇಬ್ಬರು ಮಾತ್ರ ರಾಜಕೀಯ ಖೈದಿಗಳು ಬಂದರೂ ಹಾಗೆಯೇ ಮಾಡುತ್ತಾರೆ. ಆದರೆ ಖೈದಿಗಳ ಸಂಖ್ಯೆ ತುಂಬ ಹೆಚ್ಚಲು ಪ್ರಾರಂಭಿಸಿದರೆ ಆಗ ಖೈದಿಗಳಿಗೆ ಕ್ವಾರೆಂಟೈನು ಇಲ್ಲ. 1937, 1939 ಮತ್ತು 1942 ರ ಚಳುವಳಿಗಳಲ್ಲಿ ಸರ್ಕಾರದವರು ಯಾರು ಯಾರನ್ನು ಅಸಂಖ್ಯಾತವಾದ ಲೆಕ್ಕದಲ್ಲಿ ಸೆರೆಹಿಡಿದರೋ ಅವರಿಗೆ ಕ್ವಾರೆಂಟೈನು ಮುಂತಾದುವು ಇರಲಿಲ್ಲ. ಯಾಕೆಂದರೆ ಸರ್ಕಾರ ದಸ್ತಗಿರಿ ಮಾತ್ರ ಮಾಡಬಲ್ಲದೇ ಹೊರತು ಸರಿಯಾದ ಸೌಕರ್ಯಗಳನ್ನು ಕಲ್ಪಿಸುವುದಿಲ್ಲ. ಈ ಸಂದರ್ಭದಲ್ಲಿ ರಾಜಕೀಯ ಖೈದಿಗಳು ಸೆರೆಮನೆಗೆ ಬಂದಾಗ ಅವರಿಗೆ ಮಾತ್ರ ಕ್ವಾರೆಂಟೈನ್ ಇಲ್ಲವೆಂಬುದಿಲ್ಲ. ಆ ಸಮಯದಲ್ಲಿ ಇತರ ಖೈದಿಗಳಿಗೂ ಕ್ವಾರೆಂಟೈನ್ ಇಲ್ಲ. ಯಾಕೆಂದರೆ ಕ್ವಾರೆಂಟೈನನ್ನೂ ಆಸ್ಪತ್ರೆಯನ್ನೂ ನೆಯ್ಗೆ, ಬಡಗಿ, ದರ್ಜಿ ರಾಗಿಬೀಸುವುದು ಮುಂತಾದ ಎಲ್ಲಾ ಭಾಗಗಳನ್ನೂ ರಾಜಕೀಯ ಬಂದಿಗಳೇ ತುಂಬುತ್ತಾರೆ. ಜೈಲಿನಲ್ಲಿ ಹೀಗೆ 'ಕ್ವಾರೆಂಟೈನು' ಇಲ್ಲದಿರುವುದು ಕಾನೂನಿಗೆ ವಿರೋಧ. ಆದರೆ ಹಾಗೆ ಅಸಂಖ್ಯಾತ ಸಂಖ್ಯೆಯಲ್ಲಿ ಜನರನ್ನು ಬಂಧಿಸುವುದೂ ಕಾನೂನಿಗೆ ವಿರೋಧ.

ಸಬ್ ಜೈಲುಗಳಲ್ಲಿ ಕ್ವಾರೆಂಟೈನ್ ಇಲ್ಲವೇ ಇಲ್ಲ. ನಮ್ಮ ದೇಶದಲ್ಲಿ ಮಹಿಷಪುರಿ, ಕಲ್ಯಾಣನಗರ ಹೊರತು ಉಳಿದ ಎಲ್ಲಿಯೂ ಸಬ್ ಜೈಲಿನ ಆವಶ್ಯಕತೆ ಇಲ್ಲ. ಒಂದು ತಿಂಗಳಿಗಿಂತ ಹೆಚ್ಚು ಶಿಕ್ಷೆಗೆ ಒಳಗಾದವರನ್ನು ಮಹಿಷಪುರಿ ಅಥವ ಕಲ್ಯಾಣನಗರಿಗೆ ಕಳುಹಿಸುತ್ತಾರೆ. ಮೊದಲು ಜೈಲು

ಗಳನ್ನು ಮಾಡಿದಾಗ ಇದೇ ಉದ್ದೇಶದಿಂದ ಕಲ್ಯಾಣನಗರ ಮಹಿಷಪುರಿ ಎರಡು ಕಡೆಗಳಲ್ಲಿಯೇ ಜೈಲುಗಳನ್ನು ಮಾಡಿದರು. ಆದರೆ ಆಡಳಿತ ನೀತಿ ಸಡಿಲವಾಗಿ ಮನಸ್ಸು ಬಂದಾಗ ಮನಸ್ಸು ಬಂದವರನ್ನು ದಸ್ತಗಿರಿ ಮಾಡಲು ಪ್ರಾರಂಭಿಸಿದುದರಿಂದ ಲಾಕ್‌ಅಪ್‌ಗಳೂ ಜೈಲುಗಳಾದವು. ಛತ್ರಗಳೂ ಜೈಲುಗಳಾದವು; ದನಗಳ ಕೊಟ್ಟಿಗೆಗಳೂ ಜೈಲುಗಳಾದವು. ಕಿವುಡ ಮೂಗರ ಪಾಠಶಾಲೆಗಳೂ, ಅನಾಥ ಅಶಕ್ತರ ಆಶ್ರಯ ಸ್ಥಾನಗಳೂ ಸೆರೆಮನೆಗಳಾದವು. ಒಂದು ಅರಮನೆಯನ್ನು ಸಹ ಸೆರೆಮನೆ ಮಾಡುತ್ತಾರೆಂದು ವದಂತಿ ಹೊರಟಿತ್ತು. ಆ ಅರಮನೆ ಸೆರೆಮನೆ ಎಂಬ ಮಾತುಗಳನ್ನು ಕೇಳಿ ಡಿಟೆನ್ಯುಗಳ ಮನಸ್ಸಿನಲ್ಲಿ ವಿಧ ವಿಧಗಳಾದ ಭಾವಗಳುಂಟಾದವು.

ಸುದರ್ಶನ ಹಾಸ್ಯಪುರಿ ಜೈಲನ್ನು ಪ್ರವೇಶಿಸಿದ ಕೂಡಲೇ ಜೈಲಿನ ಹೆಡ್ ವಾರ್ಡರ್ ಅವನಿಗಾಗಿ ಒಂದು ಈಚಲ ಚಾಪೆಯನ್ನೂ ಕಂಬಳಿಯನ್ನೂ ತೆಗೆದುಕೊಂಡು "ಬಾರಕೋಸ್" ನೊಳಕ್ಕೆ ಹೊರಟನು. ಒಂದೊಂದು ಜೈಲಿನಲ್ಲಿಯೂ ಸೆರೆಯಾಳುಗಳು ಇರಲು 2-3-4 ಬ್ಯಾರಕ್‌ಗಳು ಅವೆ. ಇವುಗಳಲ್ಲಿ ಒಬ್ಬೊಬ್ಬ ಸೆರೆಯಾಳಿಗೂ ಒಂದೊಂದು ಆಸನ. ಈ ಆಸನ ಸುಮಾರು ಮುಕ್ಕಾಲು ಅಡಿ ಎತ್ತರವಾಗಿ ಎರಡುವರೆ ಅಡಿ ಅಗಲವಾಗಿ 5½—6 ಅಡಿ ಉದ್ದವಾಗಿದೆ. ಒಂದೊಂದರ ಮೇಲೆ ಒಬ್ಬೊಬ್ಬ ಸೆರೆಯಾಳಿಗೆ ವಾಸ. ಅವನು ಅದರ ಮೇಲೆಯೇ ತನ್ನ ಹಾಸಿಗೆಯನ್ನು ಹಾಸಿಕೊಂಡು ಮಲಗುವುದು. ಸೆರೆಯಾಳುಗಳು ಈ ಆಸನವನ್ನು ಸಾಧಾರಣವಾಗಿ ಸಮಾಧಿ ಎನ್ನುತ್ತಾರೆ. ಜೈಲನ್ನು ಮೊದಲನೆಯ ಸಲ ನೋಡುವವರಿಗೆ ಈ ಸಮಾಧಿಗಳು ಇಲ್ಲಿ ಯಾಕೆ ಎಂದು ತೋರುತ್ತದೆ. ಆದರೆ ಜೈಲಿನಲ್ಲಿ ವಾಸಮಾಡಲು ಪ್ರಾರಂಭಿಸಿದರೆ, ಇಂತಹ ಸಮಾಧಿಯಿಂದ ಆ ಸ್ಥಳವನ್ನು ಪರಿಶುದ್ಧವಾಗಿ ಇಡಲು ಸಹಾಯಕವಾಗುವುದೆಂಬುದು ಗೊತ್ತಾಗುತ್ತದೆ. ಬೆಂಗಳೂರು ಮೈಸೂರು ಜೈಲುಗಳಲ್ಲಿಯೂ ಇತರ ಡಿಸ್ಟ್ರಿಕ್ಟ್ ಮುಖ್ಯ ನಗರದ ಲಾಕಪ್‌ಗಳಲ್ಲಿಯೂ ಈ ಬಗೆಯ ಸಮಾಧಿಗಳು ಇದ್ದೇ ಇವೆ. ಆದರೆ ಈಚೆಗೆ ಯಾವ ಜೈಲುಗಳಲ್ಲಿ ಡಿಟೆನ್ಯುಗಳ ಸಂಖ್ಯಾಧಿಕ್ಯದಿಂದ ಬೇಗ ಬೇಗ ಹಸಿ ಇಟ್ಟಿಗೆ ಕೆಸರುಗಳಿಂದ ಬ್ಯಾರಕ್‌ಗಳನ್ನು ಕಟ್ಟಿರುವರೋ, ಅಲ್ಲಿ, ಮಾಮೂಲು ಲಾಕಪ್ ಭಾಗದಲ್ಲಿ ಸಮಾಧಿಗಳು ಇದ್ದರೂ ಈ ಹೊಸ ಬ್ಯಾರಕ್‌ಗಳಲ್ಲಿ ಇರುವುದಿಲ್ಲ.

ಆಗ ಹಾಸ್ಯಪುರಿಯ ಸೆರೆಮನೆಯಲ್ಲಿ ನಮ್ಮ ದೇಶದ ಮುಖಂಡರನ್ನೆಲ್ಲಾ ಇಟ್ಟಿದ್ದರು. ಹಾಸ್ಯಪುರಿ ಸೆರೆಮನೆಯನ್ನು ಪ್ರವೇಶಿಸಿದ ಕೂಡಲೇ ಸುದರ್ಶನನ ಕಣ್ಣಿಗೆ ಮೊದಲು ಬಿದ್ದವರು ಡಿಟೆನ್ಯು ನಂಬರ್ ೧ ಚಾಣಕ್ಯರು. ನಮ್ಮ ಮಹಾ ಸಭೆಯ ಬೆಳವಣಿಗೆಗೆ, ಸಂಸ್ಥೆಗೆ ಇವರೇ ಕಾರಣ. ಪ್ರಾಯಶಃ ಇವರು ಇಲ್ಲದಿದ್ದರೆ ಮಹಾ ಸಭೆ ಈಗ ಹೊಂದಿರುವಷ್ಟು ಅನುಯಾಯಿಗಳನ್ನು ಹೊಂದುತ್ತಿರಲಿಲ್ಲ. ಇವರು ಇಲ್ಲಿ ಮಾತ್ರವೇ ಅಲ್ಲ. ಹೊರಗೂ ಪ್ರಸಿದ್ಧರಾದವರು. ಚಾಣಕ್ಯರವರು ಇಲ್ಲಿ ಭಾರತ ರಾಷ್ಟ್ರೀಯ ಮಹಾಸಭೆ ಚಟುವಟಿಕೆ ನಡೆಸುತ್ತಿದ್ದ ಕಾಲದಿಂದಲೂ ಕಾಂಗ್ರೆಸ್ ಕೆಲಸಗಾರರು. ಪ್ರಬಲರಾಗಿ ಒಳ್ಳೆಯ ಸಂಪಾದನೆಯುಳ್ಳ ಅಡ್ವಕೇಟ್ ಆಗಿದ್ದವರು. ಒಬ್ಬ ಡಿಸ್ಟ್ರಿಕ್ ಮೆಜಿಸ್ಟ್ರೇಟರು ಇವರನ್ನು ಅಡ್ವಕೇಟ್ ಸನ್ನದಿನಿಂದ ಬೇರೆ ಮಾಡುವವರೆಗೆ, ಇವರ ಮನೆ ಕಕ್ಷಿಗಾರರ ಜಾತ್ರೆಯೇ ಆಗಿದ್ದಿತು. ಈಚೆಗೆ "ಇವರು ನಾನು ಅಡ್ವಕೇಟ್ ಅಲ್ಲ. ನಿಮ್ಮ ಕೋರ್ಟುಗಳಲ್ಲಿ ವಾದಿಸುವುದಿಲ್ಲ. ಸರ್ಕಾರದವರು ನನ್ನ ಸನ್ನದನ್ನು ಕಿತ್ತುಕೊಂಡಿದ್ದಾರೆ" ಎಂದು ಎಷ್ಟು ಹೇಳಿದರೂ ಕಕ್ಷಿಗಾರರ ತಂಡ ಇವರನ್ನು ಬಿಟ್ಟಿಲ್ಲ. ಇವರು ಒಬ್ಬರನ್ನೇ ಯಾಕೆ? ಹೀಗೆ ಸನ್ನದು ಕಳೆದುಕೊಂಡ ಯಾವ ಅಡ್ವಕೇಟರನ್ನೂ ಕಕ್ಷಿಗಾರರ ಗುಂಪು ಬಿಟ್ಟಿಲ್ಲ. ಆದರೆ ಹಿಂದೆ ಬರುತ್ತಿದ್ದ ಕಕ್ಷಿಗಾರರಿಗೂ ಈಗ ಬರುತ್ತಿರುವವರಿಗೂ ಒಂದು ವ್ಯತ್ಯಾಸವಿದೆ. ಹಿಂದೆ ಬರುತ್ತಿದ್ದವರು ಶುಲ್ಕವನ್ನು ತರುತ್ತಿದ್ದರು. ಈಗಿನವರು ಬರಿಯ ಕೈಯಲ್ಲಿ ಬರುತ್ತಿದ್ದಾರೆ. ಆ ಕಾರಣದಿಂದಲೇ ಈಗಲೂ ಸನ್ನದು ಕಳೆದುಕೊಂಡ ಅಡ್ವಕೇಟರುಗಳಿಗೆ ಕೆಲಸ ಜಾಸ್ತಿ.

ಚಾಣಕ್ಯರು ಮಹಾ ಸಭೆಯಲ್ಲಿ ಅತ್ಯಂತ ಬುದ್ಧಿವಂತರೆಂದು ಹೇಳಬಹುದು. ಇವರು ಇಲ್ಲದೆ ಯಾವ ವರ್ಕಿಂಗ್ ಕಮಿಟಿ ತೀರ್ಮಾನವೂ ಠರಾವೂ ಆಗಿಲ್ಲ. ಇವರು ಕೂಲಿಕಾರ ಸಮಸ್ಯೆಯಲ್ಲಿ ಬಹಳ ನುರಿತವರು. ಅವರ ಮನೆಯಲ್ಲಿ ಕಲ್ಯಾಣ ನಗರಿಯಲ್ಲಿ ಹೋಗಿ ನೀವು ಹದಿನೈದು ನಿಮಿಷ ಕುಳಿತಿದ್ದರೆ ಸಾಕು. ನಿಮಗೆ, ಅವರಿಗೂ ಕೂಲಿಕಾರರಿಗೂ ಇರುವ ಬಾಂಧವ್ಯ ಗೊತ್ತಾಗುತ್ತದೆ. ಅವರ ಸಲಹೆ ಸಂಬಂಧವಿಲ್ಲದೆ ಕೂಲಿಕಾರರ ಯಾವ ಪ್ರಶ್ನೆಯೂ ತೀರ್ಮಾನವಾಗುವಂತೆ ಇಲ್ಲ ಎಂಬುದಂತೂ ಇರಲಿ. ಕೂಲಿಗಳು ತಮ್ಮ ನಿತ್ಯ ವ್ಯವಹಾರದ ಸಣ್ಣ ಸಣ್ಣ ಪ್ರಶ್ನೆಗಳನ್ನು ಸಹ ಇವರ

ಮುಂದೆಯೇ ಇಟ್ಟು ಸಲಹೆ ತೆಗೆದುಕೊಳ್ಳುತ್ತಾರೆ. ಒಬ್ಬ ಕೂಲಿಗೆ ವೈದ್ಯ ಶಾಲೆಯಿಂದ ಔಷಧಿಬೇಕು; ಅದಕ್ಕೂ ಇವರ ಚೀಟಿ ಬೇಕು. ಮತ್ತೊಬ್ಬ ರೋಗಿಯ ಮನೆಯಲ್ಲಿ ಪಥ್ಯಕ್ಕೆ ದುಡ್ಡಿಲ್ಲ. ಯಾರಿಂದಲಾದರೂ ಸಹಾಯ ಹೊಂದಲು ಅದಕ್ಕೂ ಇವರ ಚೀಟಿ ಬೇಕು. ಕೂಲಿಗೆ ರಜಾ ಚೀಟಿ ಬರೆದುಕೊಡುವುದರಿಂದ ಹಿಡಿದು 20-30 ಸಾವಿರ ಕೂಲಿಗಳ ಹಿತದ ಪ್ರಶ್ನೆಯನ್ನು ಕುರಿತು ಸರ್ಕಾರದವರಲ್ಲಿ ಮಿಲ್‌ಗಳಲ್ಲಿ ಅಸೆಂಬ್ಲಿ ಕೌನ್ಸಿಲ್‌ಗಳಲ್ಲಿ ಚರ್ಚೆ ನಡೆಸುವವರೆಗೆ, ಮಹಾತ್ಮಾ ಗಾಂಧಿಯವರೊಂದಿಗೆ ಈ ವಿಚಾರದಲ್ಲಿ ಮಾತುಕತೆಯಾಡುವವರೆಗೆ, ಭಾರತದ ಇತರ ಭಾಗಗಳಲ್ಲಿ ಮೈಸೂರಿನ ಕೂಲಿಯ ಸ್ಥಿತಿಗತಿಗಳನ್ನು ಪ್ರಚಾರ ಮಾಡುವವರೆಗೆ ಸಣ್ಣದರಿಂದ ದೊಡ್ಡದವರೆಗೆ ಎಲ್ಲಾ ಪ್ರಶ್ನೆಗಳ ವ್ಯವಸ್ಥೆಯನ್ನೂ ಅವರೇ ಮಾಡಬೇಕು. ಕಲ್ಯಾಣನಗರಿಯ ಕೂಲಿಕಾರರಿಗೆ ಚಾಣಕ್ಯ ಎಂದರೆ ಪ್ರಾಣವೆಂದೇ ಹೇಳಬೇಕು.

ಇವರ ಮುಖ್ಯ ಗುಣ ಇವರ ತ್ಯಾಗ. ಸುಖವಾಗಿ ಹೈಕೋರ್ಟು ಜಡ್ಜಿಗಳಾಗಬಹುದಾಗಿದ್ದಿತು. ಇಲ್ಲದಿದ್ದರೆ ದಿವಾನರಾಗಬಹುದಾಗಿದ್ದಿತು. ಇವರಷ್ಟು ಶಕ್ತರು ಹೆಚ್ಚು ಜನ ಆ ಹುದ್ದೆಗಳಲ್ಲಿ ಇಲ್ಲ. ಪ್ರಾರಂಭದಲ್ಲಿ ಅಠಾರಾ ಕಛೇರಿಯಲ್ಲಿ ಅರವತ್ತೊ ಎಂಭತ್ತೋ ರುಪಾಯಿನ ಒಂದು ನೌಕರಿಗೂ ಸೇರಿದ್ದರಂತೆ. ಆದರೆ ಪ್ರಜಾ ಸೇವಕನಾಗಿ ಕಿರೀಟ ಧಾರಣೆ ಮಾಡದ ಪ್ರಜೆಗಳ ರಾಜನಾಗಿ ದೇಶವೆಲ್ಲಾ ಗೌರವಿಸುವ ಸಂಸ್ಥೆಯ ತಲೆಯಾಗಿ ಇರುವ ಯೋಗವಿರುವವರಿಗೆ ಸುಮ್ಮನೆ ದೊಡ್ಡ ಸಂಬಳದಿಂದ ಮಾತ್ರ ಸಮಾಧಾನವಾಗುತ್ತದೆಯೆ? ಇವರು ಕಾಂಗ್ರೆಸ್ ಅಧ್ಯಕ್ಷರಾದಾಗ, ಈ ಸ್ಥಾನಕ್ಕೆ ಅರ್ಹರಾದವರನ್ನು ಚುನಾಯಿಸಿದ್ದೇವೆ ಎಂದು ದೇಶವೆಲ್ಲಾ ಭರವಸೆಗೊಂಡಿತು. ಅವರವರ ಸ್ಥಾನದಲ್ಲಿರುವ ಇತರರೆಲ್ಲರ ವಿಷಯದಲ್ಲಿಯೂ ದೇಶ ಹೀಗೆ ಭರವಸೆ ಹೊಂದಿದೆ ಎಂದು ಹೇಳುವುದು ಸಾಧ್ಯವಿಲ್ಲ.

ಚಾಣಕ್ಯರನ್ನು ನೋಡಿದ ಕೂಡಲೇ, ನೋಡಿದವರಿಗೆ ಮೊದಲು ಹೊಳೆಯುವುದು ಅವರ ತ್ಯಾಗ; ಎರಡನೆಯದಾಗಿ ಅವರ ತೀಕ್ಷ್ಣ ಬುದ್ಧಿ. ಬುದ್ಧಿಯಲ್ಲಿ ಇವರು ಬ್ರಹ್ಮರಾಕ್ಷಸ. ಇವರ ಬುದ್ಧಿ ಮದರಾಸಿನ ಸಿ. ಆರ್. ರವರ ಬುದ್ಧಿಯಷ್ಟೇ ತೀಕ್ಷ್ಣ. ಇವರ ವಾಗ್ಜಾಲ ಝರಿ ಅದ್ಭುತವಾ

ದುದು. ಮಾತುಗಳು ನಿರರ್ಗಳವಾಗಿ ಒಂದೇಸಮನೆ ಹೊರಕ್ಕೆ ಬರುತ್ತಿರುತ್ತವೆ. ಸುಲಭವಾಗಿ ಶ್ರಮವಿಲ್ಲದೆ ಒಂದೇ ವಿಷಯವನ್ನು ಕುರಿತು ಇವರು ಏಕಕಾಲದಲ್ಲಿ 3-4 ಗಂಟೆ ಮಾತನಾಡುತ್ತಾರೆ. ಇವರ ಮಾತಿನ ಗಾರುಡಿ ಮಾಟ ಬಲು ಜಾಸ್ತಿ. ಎದುರಿಗೆ ಇರುವವರ ಮುಖಭಾವ ಗಳನ್ನು ನೋಡಿಕೊಂಡು ಇಂಗ್ಲಿಷ್ ತಮಿಳು ಕನ್ನಡ ಮಧ್ಯೆ ಮಧ್ಯೆ ವಿನೋದದ ಹಿಂದಿ ಇವುಗಳಲ್ಲಿ ಮಾತಿನ ಮಾಲಿಕೆಯನ್ನು ಪೋಣಿಸುತ್ತಾರೆ. ಕೇಳುವವರು ಅವರ ಮಾತು. ಕೇಳುತ್ತಾ ಕೇಳುತ್ತಾ ಅದರಲ್ಲಿಯೇ ಲೀನರಾಗಿ ಹೋಗುತ್ತಾರೆ. ಒಂದು ವಿಧವಾದ ಸ್ಟ್ರಾಂಗ್ ಕಾಫಿಯನ್ನೋ, ಸ್ಟ್ರಾಂಗ್ ಅಲ್ಲದ ಮದ್ಯವನ್ನೋ ಕುಡಿದಂತೆ ಮತ್ತು ಬರುತ್ತದೆ. ಚಾಣಕ್ಯರ ಮೋಹನಾಸ್ತ್ರ ಅದೆಂದು ಸುಲಭವಾಗಿ ಗೊತ್ತಾಗುತ್ತದೆ. ಅವರು ಹೇಳುತ್ತಿರುವಾಗ ಅವರ ಮಾತೆಲ್ಲಾ ಸರಿಯಾಗಿಯೇ ಕಾಣುತ್ತದೆ. ಒಂದೊಂದು ಸಲ ಅವರ ಮಿತ್ರರು "ಗಾಂಧಿ ಸಹ ಈ ವಾದದಲ್ಲಿ ಮರುಳಾದರು. ಇನ್ನು ನಾವು ಯಾವ ಕಡೆ" ಎಂದು ಗೇಲಿ ಮಾಡುತ್ತಾರೆ. ಕಾಂಗ್ರೆಸ್ ಕಾರ್ಯಕಾರಿ ಮಂಡಲದ ಮೇಲೆ, ಒಂದೊಂದು ಸಲ ಯುವಕರು ಉಗ್ರವಾಗಿ ಟೀಕೆ ಆರಂಭಿಸಿಬಿಡುತ್ತಾರೆ. ವರ್ಕಿಂಗ್ ಕಮಿಟಿ ಬಹಳ ಹೊತ್ತು ಚರ್ಜೆ ಮಾಡುತ್ತಾರೆ; ವಾದಿಸುತ್ತಾರೆ; ಪ್ರತ್ಯುತ್ತರ ಸಮಾಧಾನ ಕೊಡುತ್ತಾರೆ. ಕೊನೆಗೆ ತಮ್ಮಿಂದ ಏನೂ ಸಾಧ್ಯವಾಗದಿದ್ದರೆ ಚಾಣಕ್ಯರನ್ನು ಮುಂದಕ್ಕೆ ಬಿಡುತ್ತಾರೆ. ಚಾಣಕ್ಯರು ತೊಟ್ಟಿಲನ್ನು ತೂಗಿ ಮಕ್ಕಳನ್ನು ಸಮಾಧಾನಪಡಿಸುವಂತೆ ತಮ್ಮ ವಾದದ ನೌಕಾವಿಹಾರದಲ್ಲಿ ಪ್ರೇಕ್ಷಕರನ್ನು ಕೂರಿಸಿಕೊಂಡು ತೇಲಿಸಿಕೊಂಡು ಹೋಗಿಬಿಡುತ್ತಾರೆ. ಜನರು ಇಂದ್ರಜಾಲ ಮಹೇಂದ್ರಜಾಲ ವಿದ್ಯೆಯಲ್ಲಿ ಸಿಕ್ಕಿಕೊಳ್ಳುವಂತೆ ಅವರ ಮಾತಿನಲ್ಲಿ ಸಿಕ್ಕಿಕೊಳ್ಳುತ್ತಾರೆ.

ಒಂದೊಂದು ಸಲ ಚಾಣಕ್ಯರು "ನಾನು ನನ್ನ ಅಡ್ವಕೇಟ್ ಕಸಬಿನಲ್ಲಿಯೇ ಇದ್ದಿದ್ದರೆ 3-4 ಲಕ್ಷ ರುಪಾಯಿ ಸಂಪಾದಿಸಿರುತ್ತಿದ್ದೆ. ಆದರೆ ಆಗ ನನ್ನನ್ನು ಕೇಳುತ್ತಿದ್ದವರು ಯಾರು? 3-4 ಲಕ್ಷ ಸಂಪಾದಿಸಿದ ಅನಾಮಧೇಯರುಗಳು ಈ ಜಗತ್ತಿನಲ್ಲಿ ಎಷ್ಟು ಇಲ್ಲ. ನನಗೆ ಜನ ತೋರಿಸುವ ಗೌರವದಲ್ಲಿ ಸಾವಿರದಲ್ಲೊಂದು ಪಾಲಿಗಾಗಿ ಅವರು ಆ ಲಕ್ಷಗಳನ್ನು ಕೊಡಲು ಸಿದ್ಧರಾಗಿದ್ದಾರೆ" ಎನ್ನುತ್ತಾರೆ. ಚಾಣಕ್ಯರು "ನಾನು

ರಾಜಕೀಯಕ್ಕೆ ಬಂದುದು ಆಕಸ್ಮಿಕ. ನನ್ನ ಸ್ವಭಾವ ವಿರಾಮವಾಗಿ ಯಾವುದಾದರೂ ಒಂದು ತೋಟದಲ್ಲಿ ಸುಖವಾಗಿ ರಾಮಾಯಣ ಪಾರಾಯಣ ಮಾಡಿಕೊಂಡು ರಾಮ ಕೃಷ್ಣ ಎಂಬುದಾಗಿ ಇರುವುದು. ಈ ಆಕಸ್ಮಿಕವಾದ ಚಟುವಟಿಕೆ ನನ್ನನ್ನು ಹೇಗೋ ಎಳೆದಿದೆ" ಎನ್ನುತ್ತಾರೆ. ಆದರೆ ಈ ಚಟುವಟಿಕೆಯಲ್ಲಿ ಅವರು ವಹಿಸುವ ಪಾತ್ರವನ್ನು ನೋಡಿದರೆ ಪ್ರಾಯಶಃ ರಾಜಕೀಯ ಕಾರ್ಯವಿಲ್ಲದಿದ್ದರೆ ಇವರು ಒಂದು ಗಳಿಗೆಯೂ ಉಸಿರಾಡುವುದೇ ಕಷ್ಟವೇನೊ ಎಂಬಂತೆ ಅನುಭವವಾಗುವುದು.

ಈ ದೇಶದಲ್ಲಿ ಕೂಲಿಕಾರರ ಚಳುವಳಿಗೆ ಇವರೇ ಮೂಲ ಪುರುಷರು. ಇಲ್ಲಿಯ ಕೂಲಿಗಾರರ ಇತಿಹಾಸ, ಕೂಲಿಗಳೊಂದಿಗೆ ಇವರಿಗೆ ಇರುವ ಸಂಬಂಧವೇ ಎಂದು ಧಾರಾಳವಾಗಿ ಹೇಳಬಹುದು. ಹಿಂದಲ ಮಹಾಯುದ್ಧದ ನಂತರ (ಒಂದು ತಲೆಮಾರಿನಲ್ಲಿ ನಾವು ಎರಡು ಯುದ್ಧವನ್ನು ಕಂಡೆವು. ಈಗ ಜಗತ್ತಿನಲ್ಲಿ ಆಳ್ವಿಕೆ ನಡೆಸುತ್ತಿರುವವರಿಗೆ ತಾವು ವಹಿಸಿಕೊಂಡ ಕೆಲಸಕ್ಕೆ ಅರ್ಹತೆಯಿಲ್ಲವೆಂಬುದಕ್ಕೆ ಇದೇ ಸಾಕ್ಷಿ) ಮೈಸೂರು ದೇಶದ ಮಿಲ್ ಮಾಲಿಕರು ಇದ್ದಕ್ಕಿದ್ದಂತೆ ಬಟ್ಟೆಯ ಧಾರಣೆ ಕಡಿಮೆಯಾಗಿರುವುದರಿಂದ ನಿಮ್ಮ ಕೂಲಿಗಳನ್ನೂ ಕಡಿಮೆ ಮಾಡುತ್ತೇವೆ, ಎಂದು ಹೇಳಿ ಕಡಿಮೆಮಾಡಿಬಿಟ್ಟರು. ಕೂಲಿಗಳು "ನಿಮಗೆ ಯುದ್ಧ ಕಾಲದಲ್ಲಿ ಬೇಕಾದಂತೆ ಲಾಭ ಬಂದಿದೆ. ಆಗ ನಮಗೆ ಹೆಚ್ಚಿಗೆ ಕೊಟ್ಟಿರಾ? ಒಂದು 'ಷೇರ್'ಗೆ ಅದರ ಬಂಡವಾಳದಷ್ಟೇ ನಫೆ ಕೊಟ್ಟಿದ್ದೀರಿ" ಎಂದು ವಾದಿಸಿದರು. ಈ ವಾದಕ್ಕಾಗಿ ಕೂಲಿಗಳು ಸೇರಿದಾಗ ಮಿಲ್ ಅಧಿಕಾರಿಗಳು ಪೋಲೀಸ್ ಅಧಿಕಾರಿಗಳನ್ನು ಕರೆಸಿದರು. ಅವರು ಬಂದುದೇ ಯಾವ ಎಚ್ಚರಿಕೆಯನ್ನು ಕೊಡದೆ ಬಂದೂಕವನ್ನು ಹಾರಿಸಿದರು. ಮೂರು ಜನ ಸತ್ತರು. ಕೂಲಿಗಾರ ಸಂಸ್ಥೆಯಲ್ಲಿ ಚಾಣಕ್ಯರ ಕುತೂಹಲ ಆಗಿನಿಂದಲೇ ಪ್ರಾರಂಭವಾಯಿತೆನ್ನಬಹುದು. ಮೈಸೂರಿನಲ್ಲಿ ಭಾರತ ರಾಷ್ಟ್ರೀಯ ಮಹಾಸಭೆಯ ಚಟುವಟಿಕೆಗಳು ಹುರುಪಿನಿಂದ ಪ್ರಾರಂಭವಾದುದೂ ಅದೇ ಕಾಲದಲ್ಲಿ. ಆದರೆ ಕೂಲಿಗಳ ಸ್ಥಿತಿ ಸುಧಾರಿಸಲಿಲ್ಲ.

ಕೂಲಿಗಾರರ ಆವಶ್ಯಕತೆಗಳು ಮೂರು ತೆರನಾಗಿದ್ದವು. ಮೊದಲನೆಯದು ಕೂಲಿಯು ಹೆಚ್ಚಬೇಕೆಂಬುದು; ಎರಡನೆಯದು ರಜಾಕ್ಕೆ ಸಂ

ಬಂಧಪಟ್ಟುದು. ಮೂರನೆಯದು ಕೂಲಿಗಳನ್ನು ಅನವಶ್ಯಕವಾಗಿ, ಇತರ ಕಾರಣಗಳಿಗಾಗಿ ಶಿಕ್ಷಿಸುವುದು. ಈ ಮೂರು ಕೊರತೆಗಳನ್ನು ನಿವಾರಿಸಲು ಕೆಲಸಮಾಡುವುದು ಚಾಣಕ್ಯರಿಗೆ ಅನಿವಾರ್ಯವಾಯಿತು. ಭಂಡವಾಳಗಾರರು ಇವುಗಳು ಯಾವುದನ್ನೂ ಸಹಿಸುವುದಿಲ್ಲ. ಭದ್ರಾವತಿಯಂತಹ ಸರ್ಕಾರಿ ಸಂಸ್ಥೆಯೇ ಸಹಿಸುವುದಿಲ್ಲ. ಇನ್ನು ಭಂಡವಾಳಗಾರರ ಮಾತೇನು? 1929ನೆ ಇಸವಿಯ ಸುಮಾರಿನಲ್ಲಿ ಚಾಣಕ್ಯರೇ ಮೊದಲಾದ ಹದಿಮೂರು ಜನರ ಮೇಲೆ ಸರ್ಕಾರ ಪ್ರತಿಬಂಧಕಾಜ್ಞೆಗಳನ್ನು ಜಾರಿ ಮಾಡಿತು. ಕೋರ್ಟಿನಲ್ಲಿ ಚಾಣಕ್ಯರಿಗೂ ಅವರ ಜತೆಯ ಹದಿಮೂರು ಜನ ಕೂಲಿಗಾರ ಮುಖಂಡರಿಗೂ ಮೂರು ತಿಂಗಳು ಶಿಕ್ಷೆ ಕಾರಾಗೃಹವನ್ನು ವಿಧಿಸಿದರು. ಅದು ಯಾರ ಸ್ವಾಭಾವಿಕವಾದ ವಕ್ರಗತಿಯೋ ತೀರ್ಮಾನವನ್ನು ಶನಿವಾರ ಸಾಯಂಕಾಲ ಹೇಳಿದುದರಿಂದ ಹದಿಮೂರು ಜನರೂ ಜಾಮೀನು ಕೊಟ್ಟು ಹೈಕೋರ್ಟಿಗೆ ಅಪೀಲ್ ಮಾಡಲು ಸೋಮವಾರದವರೆಗೆ ಅವಕಾಶ ಸಿಕ್ಕಲಿಲ್ಲ. ಭಾನುವಾರ ರಜಾ ಆದುದರಿಂದ ಅವರೆಲ್ಲಾ ಸೆರೆಮನೆಯಲ್ಲಿಯೇ ಆ ದಿನವನ್ನು ಕಳೆಯಬೇಕಾಯಿತು. ಹೈಕೋರ್ಟಿನಲ್ಲಿ ಶಿಕ್ಷೆ ವಜಾ ಆಯಿತು. ಆದರೆ ಕೂಲಿಗಾರರ ಯಾವ ಕುಂದುಕೊರತೆಗಳೂ ನಿವಾರಣೆಯಾಗಲಿಲ್ಲ.

1936ನೆ ಇಸ್ವಿಯಲ್ಲಿ ಕೂಲಿಗಳ ಮತ್ತೊಂದು ಸಮಸ್ಯೆ ಎದ್ದಿತು. ಕಲ್ಯಾಣನಗರದ ಕೂಲಿಗಳು ಮನೆಬಾಡಿಗೆ ತಮ್ಮ ಮೇಲೆ ಹಾಕಿರುವುದು ಹೆಚ್ಚು; ಕಡಿಮೆ ಮಾಡಿ ಎಂದು ಪೌರಸಭೆಯನ್ನು ಪ್ರಾರ್ಥಿಸತೊಡಗಿದರು. ಆ ಉದ್ದೇಶದಿಂದ ಮೆರವಣಿಗೆಗಳನ್ನೂ ಹೊರಡಿಸಿದರು. ಯಾವಾಗಲೂ ಇಂತಹ ಚಳುವಳಿಗಳು ಬೆಳೆಯುವುದು ಸರ್ಕಾರದಿಂದಲೇ. ಸರ್ಕಾರ 45ನೇ ಸೆಕ್ಷನ್ ಎಂದು ಹೇಳಿ ಅದಾವುದೋ ಒಂದು ಅರ್ಥವಿಲ್ಲದ ಬಾಣವನ್ನು ಪ್ರಯೋಗಿಸಿದರು. ಆಗ ವಿದ್ಯಾರ್ಥಿಗಳು ಮೊದಲುಗೊಂಡು ಆ ಅಸ್ತ್ರವನ್ನು ವಿರೋಧಿಸಿದರು. ಕೆಲವರು ಸೆರೆಮನೆ ಸೇರಿದರು. ಆಗ ಸೇರಿದ್ದವರು ಅನೇಕರು ಈಗಲೂ ಮತ್ತೆ ಸೇರಿದ್ದಾರೆ. ಮುಂದಲ ವರುಷದ ಚುನಾವಣೆಗೆ ಉಮೇದುವಾರರಾಗಿ ಅನೇಕರು ಕಾಂಗ್ರೆಸ್ ಪರವಾಗಿ ನಿಂತರು. ಆಗ ಇನ್ನೂ ಮೈಸೂರು ಕಾಂಗ್ರೆಸ್ ಸ್ಥಾಪನೆಯಾಗಿರಲಿಲ್ಲ. ಶ್ರೀಮತಿ ಕಮಲಾದೇವಿ, ಕರಮರ್ಕರ್, ಹರಡಿಕರ್, ಮುಂತಾದವರು

ಪ್ರಚಾರಕಾರ್ಯಕ್ಕಾಗಿ ಬಂದರು. ಸರ್ಕಾರದವರು ಅವರ ಮೇಲೆ ಪ್ರತಿ ಬಂಧಕಾಜ್ಞೆಗಳನ್ನು ಹಾಕಿದರು. ಚಾಣಕ್ಯರ ಮೇಲೂ ಪ್ರತಿಬಂಧಕಾಜ್ಞೆ ಬಿತ್ತು. ಅವರು ಎಲ್ಲೂ ಮಾತನಾಡುವಂತೆ ಇರಲಿಲ್ಲ. ಸಭೆಗಳಲ್ಲಿ ಬಂದು ಕುರ್ಚಿಗೆ ಭೂಷಣವಾಗಿ ಕುಳಿತುಕೊಳ್ಳುತ್ತಿದ್ದರು. ಜನರು ಅವರ ದರ್ಶನ ಕ್ಕಾಗಿಯೇ ಗುಂಪು ಗುಂಪಾಗಿ ನೆರೆಯುತ್ತಿದ್ದರು. ಜನರಿಗೆ ಬೇಕಾಗಿರು ವುದು ಮನುಷ್ಯನ ದರ್ಶನ. ಮಾತು ಏನು ಬೇಕಾಗಿದೆ? ಈ ಲೋಕ ದಲ್ಲಿ ಇದುವರೆಗೆ ಮಾತನಾಡದೆ ಉಳಿದಿರುವುದೇನು? ಯಾರು ತಾನೇ ಯಾವ ಹೊಸ ಮಾತನ್ನು ಆಡಬಹುದು? ಭಾರತ ರಾಷ್ಟ್ರೀಯ ಮಹಾ ಸಭೆಯ ಸಂದೇಶ ಹೀಗೆ. ದೇಶದ ಮೂಲೆ ಮೂಲೆಗಳಲ್ಲಿಯೂ ಪ್ರಚಾರ ವಾಯಿತು. ಅನೇಕರ ಬಂಧನವಾಯಿತು. 'ಕಾಂಗ್ರೆಸ್ ಸಂಸ್ಥೆಯ' ಜನನವಾಯಿತು. ಚಾಣಕ್ಯರಿಗೂ ತಿಮ್ಮಯ್ಯನವರಿಗೂ 1½ ವರುಷ ಕಾರಾ ಗೃಹವಾಸ ಲಭಿಸಿತು. 'ಕೌನ್ಸಿಲ್ ಆಫ್ ಆಕ್ಷನ್' ಸ್ಥಾಪನೆಯಾಯಿತು. ಅದರ ಸದಸ್ಯರಿಗೆ ಒಂದೊಂದು ವರ್ಷ ಕಠಿಣಶಿಕ್ಷೆಯಾಯಿತು. ಸ್ವಾತಂತ್ರ್ಯ ದಿನಾಚರಣೆಯ ಪ್ರತಿಜ್ಞೆ ಉಚ್ಚರಿಸಿದುದಕ್ಕೆ ಮಹಿಳೆಯರಿಗೂ ಸಹ ಶಿಕ್ಷೆ ಯಾಯಿತು. ದೇಶದಲ್ಲಿ ದಬ್ಬಾಳಿಕೆ ವಾತಾವರಣದ ದುರ್ವಾತವು ಹರಡಿತು.

ಇರಲಿ. ಹಾಸ್ಯಪುರಿ ಸೆರೆಮನೆಯಲ್ಲಿ ಸುದರ್ಶನನ ಕಣ್ಣಿಗೆ ಬಿದ್ದ ಎರಡನೆಯ ಪ್ರಸಿದ್ಧ ವ್ಯಕ್ತಿ ಅಭಿರಾಮನ್. ಮಹಾಸಭೆ ಸ್ಥಾಪನೆಯಾ ದಂದಿನಿಂದ ಆ ಸಂಸ್ಥೆಗೆ ಅಭಿರಾಮನ್‌ರ ಸಂಬಂಧವಿದೆ. ಅಭಿರಾಮನ್ ಆ ಸಂಸ್ಥೆಯ ಕಾನ್‌ಸ್ಟಿಟ್ಯೂಶನಲ್ ಪಂಡಿತ್. ಅದರ ಅಂಗ ರಚನೆ ಯನ್ನು ಕ್ರಮಪಡಿಸಿದವರು ಇವರೂ, ಚಾಣಕ್ಯರೂ. ಒಂದೊಂದು ಬದ ಲಾವಣೆಯನ್ನೂ ಯಾಕೆ ಯಾವ ಉದ್ದೇಶಕ್ಕಾಗಿ ಮಾಡಿದೆ ಎಂಬುದು ಇವರಿಗೆ ಗೊತ್ತು. ಇವರ ಬುದ್ಧಿಯೂ ಚುರುಕು. ಚಾಣಕ್ಯರು ಕಾಂಗ್ರೆಸ್ ಅಧ್ಯಕ್ಷರಾಗಿ ಇವರು ಕಾರ್ಯದರ್ಶಿಗಳಾಗಿದ್ದಾಗ ಅಧ್ಯಕ್ಷರಿಗೆ ಸರಿಯಾದ ಕಾರ್ಯದರ್ಶಿ ಎಂದು ದೇಶಕ್ಕೆ ತಿಳಿಯಿತು. ಕ್ರಿಮಿನಲ್ ವ್ಯವ ಹಾರ ನಡೆಸುವುದರಲ್ಲಿ ಇವರು ಗಟ್ಟಿಗರು. ಇವರು ಎಲ್ಲಿ ಅಡ್ವಕೇಟರೋ ಅದೇ ಜಿಲ್ಲಾ ಮ್ಯಾಜಿಸ್ಟ್ರೇಟರೇ ಇವರ ಸನ್ನದನ್ನು ಕೀಳಲು ಏರ್ಪಾಡು ಮಾಡಿದವರು. ಸನ್ನದು ಕಿತ್ತ ದಿನ ಪೋಲೀಸ್ ಇನಿಸ್ಪೆಕ್ಟರು ಜಿಲ್ಲಾಧಿ

ಕಾರಿಗಳಿಗೆ ಒಂದು ಸತ್ಕಾರ ಕೂಟವನ್ನು ಏರ್ಪಡಿಸಿ "ಸ್ವಾಮಿ ಸದ್ಯ ನೀವು ನಮ್ಮ ಪ್ರಾಣ ಉಳಿಸಿದಿರಿ; ಸಾಕ್ಷಿ ಪೆಟ್ಟಿಗೆಯಲ್ಲಿ ಆ ಲಾಯರ ಕೈಲಿ, ಕರಡಿ ಕೈಯಲ್ಲಿ ಸಿಕ್ಕಿದಂತೆ ಸಿಕ್ಕಿಕೊಂಡು ಪ್ರಾಣ ಹೋಗುತ್ತಿತ್ತು. ಇನ್ನು ನನ್ನ ಕೆಲಸ ಅರ್ಧ ಹಗುರವಾಯಿತು" ಎಂದರಂತೆ. ಜಿಲ್ಲಾಧಿಕಾರಿಗಳು ನಿನಗಿಂತ ಹೆಚ್ಚಾಗಿ ನನಗೆ ಕಿರುಕುಳವಾಗುವ ಹೊತ್ತಿಗೇ ಹೀಗೆ ಮಾಡಿದೆ ಎಂದರಂತೆ. ಇಂತಹ ಸಿಂಹ ಸ್ವಪ್ನ. ಇವರಿಗೆ ಸಾಧಾರಣವಾಗಿ ಕುಳಿತಲ್ಲಿ ತಿಂಗಳಿಗೆ 500 ರುಪಾಯಿ"ಗಿಟ್ಟುತ್ತಿದ್ದಿತು.

ಸೆರೆಮನೆಯಲ್ಲಿದ್ದ ಮೂರನೆಯ ಪ್ರಸಿದ್ಧ ವ್ಯಕ್ತಿ ಗುರುಗಳು. ಇವರೂ ಮಹಾಸಭೆ ಸ್ಥಾಪನೆಯಾಗುವುದಕ್ಕೆ ಅನೇಕ ದಿನಗಳ ಮುಂಚೆ ಅಖಿಲಭಾರತ ರಾಷ್ಟ್ರೀಯ ಸಭೆಯ ಕಾರ್ಯಕಲಾಪಗಳನ್ನು ಇಲ್ಲಿ ನಡೆಸುತ್ತಿದ್ದವರಲ್ಲಿ ಮುಖ್ಯರು ಪ್ರಚಂಡ ವ್ಯಕ್ತಿ; ಇವರು ಮಹಾಸಭೆಯ ಅಧ್ಯಕ್ಷರಾಗಿ ಆರಿಸಲ್ಪಟ್ಟಾಗ ಅವರ ಪರಿಚಯವನ್ನು ಮಾಡಿಕೊಡುತ್ತಾ ಶ್ರೀಮಾನ್ ಅರ್ಜುನರು " ಇವರು ಭೀಮನಂತಹ ಪರಾಕ್ರಮಿಗಳು " ಎಂದರು. ಇವರನ್ನು ಸೆರೆಮನೆಯಲ್ಲಿ ಯಜಮಾನರು ಎಂದು ಕರೆಯುತ್ತಿದ್ದರು. ಯಜಮಾನರು ನೋಡುವುದಕ್ಕೇನೋ ಭೀಮನಂತೆ ಇದ್ದರೂ ಬಹು ಸೌಮ್ಯವಾದ ಸಾಧುಪ್ರಾಣಿ. ಧರ್ಮರಾಯನೆಂದು ಹೇಳಬಹುದು. ಇವರಿಗೆ ಉಪನಿಷತ್ತು ವೇದಗಳಲ್ಲಿ ಶ್ರದ್ಧೆ ಹೆಚ್ಚು. ಸ್ವಭಾವದಿಂದ ಬಹಳ ಸಾತ್ವಿಕರು, ಆರ್ಯಧರ್ಮ ಸಂಸ್ಕೃತಿಗಳಲ್ಲಿ ಪ್ರೀತಿ ನಂಬಿಕೆಯುಳ್ಳವರು. ಪೂರ್ಣ ಅಹಿಂಸಾವಾದಿಗಳಾಗಿ, ಮಹಾತ್ಮರ ಪಟ್ಟಭಕ್ತರು. " ಯಾವ ಕಾಲದಲ್ಲಿಯೂ ಅಹಿಂಸೆಯನ್ನು ಬಿಡಲೇಕೂಡದು. ಅದು ನಮ್ಮ ಒಂದು ಅಸ್ತ್ರ ಮಾತ್ರವಲ್ಲ. ಅದೇ ನಮ್ಮ ಧರ್ಮ. ಕಾಯಾ ವಾಚಾ ಮನಸಾ ಅಹಿಂಸೆಯನ್ನು ಅನುಸರಿಸಬೇಕು" ಸೆರೆಮನೆಯಲ್ಲಿ. ಹಿಂಸೆ ಅಹಿಂಸೆಗಳ ಚರ್ಚೆ ಬಂದಾಗ ಯಜಮಾನರು ಪೂರ್ಣವಾದ ವಿದ್ವತ್ ಪ್ರತಿಭೆಯಿಂದ ಭಾಷಣ ಮಾಡುತ್ತಿದ್ದರು.

ಸೆರೆಮನೆಯಲ್ಲಿ ಕಣ್ಣಿಗೆ ಬೀಳುತ್ತಿದ್ದ ನಾಲ್ಕನೆಯ ವ್ಯಕ್ತಿ ಪ್ರಚಂಡ ಪರಶುರಾಮ. ಈ ಪ್ರಾಣಿ ಯಾವಾಗಲೂ ಚಟುವಟಿಕೆಯೇ. ಇವರಿಗೆ ಒಂದು ಗಳಿಗೆಯೂ ಒಂದೇ ಸ್ಥಳದಲ್ಲಿ ಕುಳಿತಿರಲು ಸಾಧ್ಯವಿಲ್ಲ. ಒಂದು ಗಳಿಗೆಯೂ ಯಾವುದಾದರೂ ಕೆಲಸಮಾಡದೆ ಇರಲು ಸಾಧ್ಯವಿಲ್ಲ

ಒಂದು ಗಳಿಗೆಯೂ ಮಾತನಾಡದೆ ಇರಲೂ ಸಾಧ್ಯವಿಲ್ಲ. ನಮ್ಮ ದೇಶ ದಲ್ಲಿ ನಡೆದಿರುವ ಎಲ್ಲಾ ರಾಷ್ಟ್ರೀಯ ಕೆಲಸಗಳಲ್ಲಿಯೂ ಇವರ ಪಾತ್ರ ಹೆಚ್ಚಾದುದು. ಇವರು ಪ್ರವೇಶಿಸದ ದೇಶ ಕಾರ್ಯಗಳು ಈ ದೇಶದಲ್ಲಿ ಇಲ್ಲ. ಖಾದಿ, ಗ್ರಾಮೋದ್ಧಾರ, ಮಾದರಿ ತಾಲ್ಲೂಕು, ಕ್ರೈಸ್ತರ ಶುದ್ಧಿ, ಗ್ರಾಮಕೈಗಾರಿಕೆ, ವಾರ್ಧಾ ಶಿಕ್ಷಣ, ಹರಿಜನೋದ್ಧಾರ ಎಲ್ಲವುಗಳಲ್ಲಿಯೂ ಇವರ ಕೈ ಮುಂದು. ಇವರೇ ಒಂದು ಸಂಸ್ಥೆ. ಇವರು ನಮ್ಮ ಮಹಾ ಸಭೆಗಿಂತ ಹಿಂದಲವರು. ಕೌನ್ಸಿಲ್ ಆಫ್ ಆಕ್ಷನ್ ಸದಸ್ಯರು. ಸಾರ್ವ ಜನಿಕ ಕೆಲಸದಲ್ಲಿ ಎಂತಹ ಕಷ್ಟ ಬಂದರೂ, ಎದುರಿಸಬಲ್ಲ ಧೀರರು. ತಮ್ಮ ಮನಸ್ಸಿಗೆ ಸರಿ ಎಂದು ತೋರಿದುದನ್ನು ಎಷ್ಟು ಜನ ಪ್ರತಿಭಟಿಸಿ ದರೂ ಮಾಡತಕ್ಕವರು. ಇವರೂ ಎಲ್ಲಿದ್ದರೂ ಸರಿ. ಯಾವುದಾದರೂ ಒಂದು ಸಮಸ್ಯೆ ಎಬ್ಬಿಸಿಯೇ ಎಬ್ಬಿಸುತ್ತಾರೆ. ವಾತಾವರಣವನ್ನು ಕಲಕು ತ್ತಾರೆ. ಇವರಿಗೆ ಎಷ್ಟು ಮಾತನಾಡಿದರೂ ಆಯಾಸವಾಗುವಂತೆಯೇ ತೋರುವುದಿಲ್ಲ. ಸೆರೆಮನೆಯಲ್ಲಿರುವಾಗ ಅವರ ಮಾತುಗಳನ್ನು ಕೇಳಿದ ಕೆಲವರು "ಇವರ ತುಟಿ ಮರದ ತುಟಿಯಾಗಿದ್ದರೆ ಒಡೆದುಹೋಗುತ್ತಿ ದ್ದಿತು. ಆದರೆ ಚರ್ಮದ ತುಟಿಯೇ ಆದುದರಿಂದ ಇನ್ನೂ ಉಳಿದು ಕೊಂಡಿದೆ" ಎಂದು ಹೇಳುತ್ತಿದ್ದರು. ಇವರಿಗೆ ಉಪವಾಸ ಮಾಡು ವುದು ನೀರು ಕುಡಿದಂತೆ. ಈಗಾಗಲೇ 3-4 ಸಲ ಉಪವಾಸಮಾಡಿದ್ದಾರೆ. ಒಂದು ಸಲ 21 ದಿನ ಸಹ ಉಪವಾಸ ಮಾಡಿದ್ದಾರೆ. ಇವರನ್ನು ನೋಡಿದ ಕೂಡಲೇ "ಒಳ್ಳೆ ಛಾತಿಗಾರ ಛಲಗಾರ. ಹಿಡಿದ ಕೆಲಸ ಮಾಡತಕ್ಕವನು ಸ್ತುತಿ ನಿಂದೆಗಳನ್ನು ಒಂದಾಗಿ ತೆಗೆದುಕೊಳ್ಳತಕ್ಕವನು" ಎಂದು ತೋರು ವುದು. ಸರ್ಕಾರ ಇವರ ಆದೇಷ್ಟೋ ಪ್ರೆಸ್‌ಗಳನ್ನು ದಕ್ಕುಹಾಕಿ ಕೊಂಡಿದೆ. ಇಂಗ್ಲಿಷ್ ಬರದಿದ್ದರೂ ಭಾರತವೆಲ್ಲಾ ತಿಳಿದಿರುವ ಮನುಷ್ಯ ಇವರೊಬ್ಬರೇ.

ಸುದರ್ಶನ ಹಾಸ್ಯಪುರಿ ಸೆರೆಮನೆ ಒಳಗೆ ಪ್ರವೇಶಿಸಿದ ಕೂಡಲೇ ಸುರಪುರಿ ಪುಡಾರಿ, ಕಾಂಗ್ರೆಸ್ ಸಂಸ್ಥೆಯ ಒಬ್ಬ ಪ್ರಧಾನಿ ಅವನನ್ನು ಕಾಫಿ ಬೇಕೆ ಎಂದು ಕೇಳಿದರು. ಜೈಲಿನಲ್ಲಿ ಕಾಫಿ! ಓ ನಾನು ಯೋಚಿ ಸಿದಷ್ಟು ಸೆರೆಮನೆ ಕೆಟ್ಟಿಲ್ಲ" ಎಂದ ಸುದರ್ಶನ. ಕೂಡಲೇ ಆ ಪುಡಾರಿ "ನೀವು ಈಗ ಡಿಟೆನ್ಯು. ಅಲ್ಲಿ ಚರ್ಚಿಲ್ ಕೂಗುತ್ತಾ ಇರುವುದು ಗೊತ್ತಿ

ಲ್ಲವೆ? ಭಾರತದಲ್ಲಿ ಡಿಟೆನ್ಯುಗಳಾಗಿರುವವರಿಗೆ ಯಾವ ಕಷ್ಟವೂ ಇಲ್ಲ. ಅವರನ್ನು ಒಳ್ಳೆಯ ರಾಜಭೋಗದಲ್ಲಿ ಇಟ್ಟಿದ್ದೇವೆ. ಅವರಿಗೆ ಯಾವು ದಕ್ಕೂ ಕೊರತೆಯಿಲ್ಲ ಕುರ್ಚಿ, ಮೇಜ, ಬರೆಯುವ ವಸ್ತು ಎಲ್ಲಾ ಒದ ಗಿಸಿದ್ದೇವೆ. ಆದರೆ ಅವರಿಗೆ ಸ್ವಾತಂತ್ರ್ಯ ಮಾತ್ರವಿಲ್ಲ'' ಎಂದು. ಆ ರಾಜ ಭೋಗ ಅನುಭವಿಸಿ ಎಂದರು ಕಲ್ಯಾಣನಗರಿಯ ಸೀಮಯ್ಯನವರು (ಇವರು ಒಳ್ಳೆಯ ವ್ಯವಹಾರಜ್ಞರು. ಖಂಡಿತವಾದಿ. ಯಾವ ವಿಷಯ ವನ್ನೂ ಚೆನ್ನಾಗಿ ಕೂಲಂಕಷವಾಗಿ ಎಲ್ಲಾ ದೃಷ್ಟಿಯಿಂದಲೂ ಆಲೋಚಿಸಿ ತೀರ್ಮಾನಕ್ಕೆ ಬರುತ್ತಾರೆ. ಒಂದು ತೀರ್ಮಾನಕ್ಕೆ ಬಂದ ಮೇಲೆ ಯಾರ ನಿಷ್ಠುರವಾದರೂ ಆ ತೀರ್ಮಾನವನ್ನು ಬದಲಾಯಿಸುವುದಿಲ್ಲ. ಇವರ ಮಾತಿಗೆ ಪುಡಾರಿಗಳೂ ಬೆಲೆ ಕೊಡುತ್ತಾರೆ. ಒಂದುಸಲ ತಮ್ಮ ಅಭಿ ಪ್ರಾಯವನ್ನು ಪ್ರಚಾರಪಡಿಸಲು ಇವರು ಒಂದು ಪತ್ರಿಕೆಯನ್ನೇ ಹೊರ ಡಿಸಿದರು. ನಮ್ಮ ಮಹಾಸಭೆ ಸ್ಥಾಪನೆಯಾದಂದಿನಿಂದ ಇವರು ಅದರಲ್ಲಿ ಒಂದಿಲ್ಲ ಒಂದು ರೂಪದಲ್ಲಿ ಭಾಗವಹಿಸಿ 1937-39 ಎರಡು ವರುಷವೂ ಸೆರೆವಾಸವನ್ನು ಅನುಭವಿಸಿದ್ದಾರೆ. ಇವರು ಹಿಂದೆ ಹರಿಕತೆ ಸಹ ಮಾಡುತ್ತಿದ್ದರು. ಕನ್ನಡ ಭಾರತ ರಾಮಾಯಣಗಳನ್ನು ರಾಗವಾಗಿ ಓದುತ್ತಾರೆ. ಒಳ್ಳೆಯ ರಸಜ್ಞರು. ಮತ್ತು ಒಳ್ಳೆಯ ಪಾಕ ಶಾಸ್ತ್ರಜ್ಞರು. ಸೆರೆಮನೆಯಲ್ಲಿ ಸಾವಿರ ಜನ ಸೆರೆಯಾಳುಗಳಿರುವಾಗಲೂ ಇವರು ಅಡಿಗೆಮನೆಯ ವ್ಯವಸ್ಥೆ ನಡೆಸಿಯೇ ನಡಿಸಿದ್ದಾರೆ. ಇವರಿಗೆ ಅಡಿಗೆ ಮನೆಯ ಸೀಮಯ್ಯನವರು ಎಂದೂ ಹೆಸರು)—ಈಗೇನೊ ನೀವು ಡಿಟೆನ್ಯು. ಆದರೆ ನೀವು 1939ರ ಚಳುವಳಿಯಲ್ಲಿ ಬರಬೇಕಾಗಿತ್ತು. ಆಗ ಗೊತ್ತಾಗುತ್ತಿದ್ದಿತು. ಅಷ್ಟು ಯಾಕೆ ಈಗಲೂ ನೀವು ಕಠಿಣ ಸಜದಲ್ಲಿ ಬಂದಿದ್ದರೆ ಗೊತ್ತಾಗುತ್ತಿದ್ದಿತು ಎಂದರು. ಸುದರ್ಶನ "ಹಾಗೆ ಕಠಿಣಸಜ ಹಾಕುವುದಕ್ಕೆ ನನ್ನ ಮೇಲೆ ಏನೂ ತಪ್ಪು ಸಿಕ್ಕಿಲ್ಲವಲ್ಲ'' ಎಂದ. ಸೀಮ ಯ್ಯನವರು "ತಪ್ಪು ಯಾಕೆ ಸಿಕ್ಕಬೇಕು. ನೀವು ಇರುವುದೇ ತಪ್ಪು. ಆದರೆ ಹೀಗೆ ಇಡುವುದು ಅವರಿಗೆ ಸುಲಭವಾಗಿದೆ'' ಎಂದರು.

ಬೆಳಗಿನ ಜಾವದಲ್ಲಿ ಇದ್ದಕ್ಕಿದ್ದಂತೆ ಗೌಡರು ತಲೆ ಕೆಳಗೆಮಾಡಿ ಎರಡು ಕಾಲುಗಳನ್ನೂ ಮೇಲಕ್ಕೆ ಎತ್ತಿ ಶೀರ್ಷಾಸನ ಮಾಡುತ್ತಿರುವುದು ಕಣ್ಣಿಗೆ ಬೀಳುತ್ತಿದ್ದಿತು. ಸುಮಾರಾಗಿ ಮಬ್ಬು ಕತ್ತಲೆ. ಹೊರಗಡೆಯ

ದೀಪ ಮಾತ್ರ ಕಿಟಕಿಯಿಂದ ಒಳಕ್ಕೆ ಮಿನುಗುತ್ತಿರುತ್ತಿತ್ತು. ಗೌಡರು ಕಪ್ಪಾಗಿ ಕಟ್ಟುಮಸ್ತಾದ ಆಳು. ಇವರು ತಮ್ಮ ವ್ಯಾಯಾಮದಲ್ಲಿ ಬಹಳ ನಿಯಮ. ಸೂರ್ಯ ಒಂದು ವೇಳೆ ಉದಯವಾಗುವುದು ಒಂದು ಗಳಿಗೆ ಹೆಚ್ಚು ಕಡಿಮೆಯಾದರೂ ಆಗಬಹುದು. ಆದರೆ ಗೌಡರ ವ್ಯಾಯಾಮ ಹೆಚ್ಚು ಕಡಿಮೆಯಾಗುವಂತೆ ಇಲ್ಲ. ಈ ವಿಚಾರದಲ್ಲಿ ಗೌಡರು ಮಹಾತ್ಮಾ ಗಾಂಧಿಯವರಂತೆ. ಅವರ 'ಸಮಾಧಿ'ಯ ಸುತ್ತ 10-6 ಜನ ಮಾತನಾಡುತ್ತಾ ಕುಳಿತಿದ್ದರೂ, ಗೌಡರು ಗಡಿಯಾರ ನೋಡಿ ತಮ್ಮ ಕಾಲಕ್ಕೆ ತಕ್ಕಂತೆ ಕಾಲು ಮೇಲಕ್ಕೆ ಎತ್ತುತ್ತಾರೆ. ಬೆಳಗಿನ ಜಾವ ಅವರನ್ನು ಆ ಮಬ್ಬುಗತ್ತಲೆಯಲ್ಲಿ ನೋಡಿದಾಗ ಇವರು ಇಂತಹವರು ಎಂದು ತಿಳಿಯದೆ ಇದ್ದರೆ, ಅರನಿದ್ದೆಯ ಮಬ್ಬು ಕಣ್ಣಿಗೆ ಸಾಧಾರಣವಾಗಿ ಭಯವಾಗುತ್ತದೆ. ಎರಡು ಕಾಲುಗಳನ್ನೂ ಮೇಲಕ್ಕೆತ್ತಿದ್ದ ಕರಿಯ ವಾಮನಾವತಾರ. ಅವರ ಆ ನಿಲುವು ವಾಮನಾವತಾರವೇ ಹೊರತು ಗೌಡರ ಆಕಾರ ವಾಮನವಲ್ಲ. ಇವರು ಒಳ್ಳೆಯ ಆಜಾನುಬಾಹು. ಇವರ ಹುಚ್ಚು ಎಲ್ಲಾದಕ್ಕೂ ಆಸನವೇ. ತಲೆನೋವು, ಮೂಗು ನೋವು, ಹಲ್ಲು ನೋವು ಹೊಟ್ಟೆ ನೋವು, ಹಸಿವು, ಮಲಬದ್ಧತೆ, ಪಿತ್ಥವಿಕಾರ ಕೃಶವಾಗಿರುವುದು ಅತಿ ಪುಷ್ಟವಾಗಿರುವುದು, ಎಲ್ಲಾದಕ್ಕೂ ಗೌಡರ ಔಷಧಿ ಆಸನಗಳೇ. ಗೌಡರು 15 ವರುಷಗಳಿಂದ ಕಾಂಗ್ರೆಸ್ ಕೆಲಸಗಾರರು; ಒಳ್ಳೆಯ ಖಂಡಿತವಾದಿ. ನಿರ್ದಾಕ್ಷಿಣ್ಯ ನಿರ್ಭಯದಿಂದ ಮಾತನಾಡುತ್ತಾರೆ. ಇವರನ್ನು ಪೋಲೀಸಿನವರೂ ಜೈಲು ಅಧಿಕಾರಿಗಳೂ ಅನೇಕ ಸಲ ಜಜ್ಜಿದ್ದಾರೆ. ಸೆರೆಮನೆಯಲ್ಲಿ ಸರಿಯಾದ ಉಡುಪುಗಳನ್ನು ಕೊಡದುದರಿಂದ ಹಿಂದೆ ಇವರು ಒಂದುಸಲ ಬರಿಯ ಕೌಪೀನ ಧಾರಿಗಳಾಗಿಯೇ ಹತ್ತು ದಿನಗಳನ್ನು ಕಳೆದರು.

ಬೆಳಗಾದ ಕೂಡಲೇ ಆರೋಗ್ಯ ಹುಚ್ಚಿನವರು ಹಾಸಿಗೆಯಿಂದ ದಡದಡನೆ ಓಡಿಬಂದು ಕಾಂಪೌಂಡಿನಲ್ಲಿರುವ ಬೇವಿನ ಮರವನ್ನು ಏರಿ ಹಲ್ಲುಜ್ಜುವ ಕಡ್ಡಿಗಳನ್ನು ಕೀಳುವುದು ದೃಷ್ಟಿಗೆ ಬೀಳುತ್ತದೆ. ತಾವೂ ಆರೋಗ್ಯದ ಹುಚ್ಚರೇ ಆದರೂ ಮರದ ಮೇಲಕ್ಕೆ ಏರಲಾರದ ಹೊಟ್ಟೆದಪ್ಪನಾದ ಸ್ವಲ್ಪ ವಯಸ್ಸಾದವರು ಮೇಲಿನಿಂದ ಬೀಳುವ ಕಡ್ಡಿಗಳನ್ನು ನಿರೀಕ್ಷಿಸಿಕೊಂಡು ಕೆಳಗೆ ನಿಂತಿರುತ್ತಾರೆ. ಬೆಳಗಿನ ಜಾವದ ಕಾಫಿ ಆಗಿಯೇ

ತೀರಬೇಕಾದವರು ಏನೇನೋ ಉಪಾಯದಿಂದ ಅದಕ್ಕೂ ದಾರಿಮಾಡಿ ಕೊಂಡಿರುತ್ತಾರೆ. ಅದಕ್ಕೆ ಪರಶುರಾಮರು "ಕಣ್ಣು ತೆರೆಯುವುದು" Eye opener ಎಂದು ಹೆಸರಿಟ್ಟಿದ್ದರು. ಇದು ಒಂದೇ ಒಂದು ನಿಮಿಷದಲ್ಲಿ ಮುಗಿದುಹೋಗುತ್ತಿದ್ದಿತು. ಕಣ್ಣು ಮುಚ್ಚಿ ತೆರೆಯುವುದರೊಳಗಾಗಿ ಈ "ಕಣ್ಣು ತೆರೆಯುವುದು" ಮುಗಿದು ಹೋಗುತ್ತಿದ್ದಿತು. ಇದನ್ನು ಮಾಡುತ್ತಿದ್ದವರು ಯಾರು? ಇದಕ್ಕೆ ಪುಡಿ ಹಾಲು ಎಲ್ಲಿಂದ ಬಂತು? ಯಾವುದೂ ಗೊತ್ತಾಗುತ್ತಿರಲಿಲ್ಲ. ಈ ವಸ್ತು ಪ್ರತಿದಿನವೂ ಚೆನ್ನಾಗಿರುತ್ತದೆ ಎಂದು ಹೇಳುವುದಕ್ಕೂ ಆಗುತ್ತಿರಲಿಲ್ಲ. ಅಂತಹ ದಿವಸಗಳಲ್ಲಿ ಕುಡಿದವರು ಇದು ಕಣ್ಣು ತೆರೆಯುವುದಲ್ಲ. ಕಣ್ಣು ಮುಚ್ಚುವುದು ಎಂದು ಹೇಳುತ್ತಿದ್ದರು. ಅನೇಕ ದಿನ ಅದರಲ್ಲಿ ಬಿಸಿ ಒಂದರ ಹೊರತು ಮತ್ತೇನೂ ತೋರುತ್ತಿರಲಿಲ್ಲ.

ಬೆಳಗಿನ ಹೊತ್ತು, ಎಲ್ಲರಿಗಿಂತ ಹೆಚ್ಚು ಸಾವಕಾಶವಾಗಿ ಏಳುತ್ತಿದ್ದವರು ಸಂಪತ್‌ರವರು. ಇವರು ಕಾಂಗ್ರೆಸ್‌ನವರು; ಸೋಷಿಯಲಿಸ್ಟು, ಫಾರ್‌ವರ್ಡ್ ಬ್ಲಾಕ್ ಎಲ್ಲವೂವೇ. ಇವರನ್ನು "ಹೊತ್ತಾಗಿ ಏಳುವ ಸಂಘದ ಅಧ್ಯಕ್ಷ ಎಂದೇ ಕರೆಯುತ್ತಿದ್ದರು. ಸಾಧಾರಣವಾಗಿ ಸೀಮಯ್ಯನವರೂ ಇವರ ಜತೆಯಲ್ಲಿ ಏಳುತ್ತಿದ್ದರು. ಸೀಮಯ್ಯನವರದು ಒಂದು ತರಹ. ಅವರದು ಯಾವುದೂ ಒಂದು ಯೋಗ. ನಿದ್ರೆ ಮಾಡಲು ಪ್ರಾರಂಭಿಸಿದರೆ ಅದೇ ಒಂದು ಯೋಗ. ಹಗಲು ರಾತ್ರಿ 24 ಗಂಟೆಯೂ ನಿದ್ರೆ ಮಾಡುತ್ತಾರೆ. ಅವರಿಗೆ ನಿದ್ರೆ ಬಂದೂ ಬರುತ್ತದೆ. ಹಗಲು ನಿದ್ರೆ ಮಾಡುವುದರಿಂದ ರಾತ್ರಿಯ ನಿದ್ರೆಗೆ ಏನೂ ತೊಂದರೆ ಇಲ್ಲ. ಒಂದೊಂದು ಜೈಲಿನಲ್ಲಿ ಬಂದು ಅವರು ಒಂದು ಸ್ಥಳದಲ್ಲಿ ಹಾಸಿಗೆ ಹಾಸಿಬಿಟ್ಟರೆ ಮತ್ತೆ ಆ ಜೈಲಿನಿಂದ ಬೇರೆ ಜೈಲಿಗೆ ವರ್ಗವಾಗುವವರೆಗೆ ಆ ಹಾಸಿಗೆಯನ್ನು ಎತ್ತುವುದು ಅವರ ಪದ್ಧತಿಯಲ್ಲ. ಯಾವುದಾದರೂ ಒಂದು ಕಾರಣದಿಂದ ಅವರು ಹಾಸಿಗೆ ಒಂದು ದಿನ ಎತ್ತಿ ಬಿಸಿಲಿನಲ್ಲಿ ಹಾಕಿದರೆ ಆ ದಿನ ಸೆರೆಮನೆಯಲ್ಲಿರುವವರೆಲ್ಲಾ "ಇವತ್ತು ಏನೋ ನಡೆಯುತ್ತೆ. ಬಿಡುಗಡೆ ಆಗಬಹುದು. ಸೀಮಯ್ಯನವರು ಹಾಸಿಗೆ ಬಿಸಿಲಿಗೆ ಹಾಕಿದ್ದಾರೆ" ಎಂದು ಹೇಳುವುದು ಪದ್ಧತಿ. ಸೀಮಯ್ಯನವರು ಒಂದು ದಿನವೂ (ಸೆರೆಮನೆಯಲ್ಲಿದ್ದ 14 ತಿಂಗಳೂ) ಬೆಳಗಿನ ಜಾವದ ಕಾಫಿ ಕುಡಿ

ದವರಲ್ಲ. ಅವರೇನಾದರೂ ಒಂದೊಂದು ದಿನ ಹೊತ್ತಿಗೆ ಮುಂಚೆ ಅಂದರೆ ಸಂಪತ್ ಏಳುವುದಕ್ಕೆ ಅರ್ಧ ನಿಮಿಷ ಒಂದು ನಿಮಿಷ ಮುಂಚೆ ಎದ್ದರೆ ಕೂಡಲೇ ಸಂಪತ್‌ರವರು "ಯಾಕೆ ಇವತ್ತು ಮಾಮೂಲಿಗೆ ವಿರೋಧ ವಾಗಿ ನಡೆದಿರಿ" ಎಂದು ಕೇಳುತ್ತಿದ್ದರು. ಸೋಷಿಯಲಿಸ್ಟ್‌ಗಳನ್ನು ಸಾಧಾರಣವಾಗಿ ಹಾಸ್ಯಮಾಡುತ್ತಿದ್ದ ಗಗ್ಗಯ್ಯ ರೆಡ್ಡಿಗಾರು ಸೋಷಿಯ ಲಿಸ್ಟ್‌ಗಳನ್ನು ಹೀಗೆ ವರ್ಣಿಸುತ್ತಿದ್ದರು "ಹೊತ್ತಾಗಿ ಏಳುವುದು; ಯಾವಾಗಲೂ ಸಿಗರೇಟು ಸೇದುತ್ತಿರುವುದು; ಖಾದಿಯಲ್ಲಿ ನಂಬಿಕೆ ಇಲ್ಲ. ಸಾಮಾನ್ಯವಾಗಿ ಎರಡು ತೆಂಗಿನ ಮರದ ಬೊಡ್ಡೆ ನುಸಿಯಬಹು ದಾದ ಪಾಯಿಜಾಮು; ದೇವರು ಪ್ರಾರ್ಥನೆಗಳಲ್ಲಿ ನಂಬಿಕೆ ಇಲ್ಲ. ಉಪ ವಾಸಕ್ಕೆ ಒಪ್ಪುವುದಿಲ್ಲ. ಎಲ್ಲವನ್ನೂ—ಅದರಲ್ಲೂ ಮುಖ್ಯವಾಗಿ ಗಾಂಧಿ ಯನ್ನು ಟೀಕೆಮಾಡುವುದು" ಈ ವಿವರ ಸ್ವಲ್ಪ ವಿನೋದವಾಗಿದ್ದರೂ ಸತ್ಯವೆಂಬುದು ಸಂಪತ್‌ರವರಿಗೂ ಗೊತ್ತಾಯಿತು. ಯಾವ ಕಾರಣ ದಿಂದಲೇ ಆಗಲಿ ಸೆರೆಮನೆಯಲ್ಲಿ ಉಪವಾಸಮಾಡುವುದನ್ನು ಪ್ರತಿಭಟಿಸಿ ದವರಲ್ಲಿ ಮೊದಲನೆಯವರು ಇವರು.

ಕ್ಯಾಪ್ಟನ್ ಸ್ವಾಮಿಯುವರು ಮತ್ತೊಬ್ಬ ಡಿಟೆನ್ಯು. ಇವರಿಗೆ ಕ್ಯಾಪ್ಟನ್ ಎಂಬ ಹೆಸರನ್ನು ಡಿಟೆನ್ಯುಗಳು ಕೊಟ್ಟದು. ಕ್ಯಾಪ್ಟನ್‌ರು ಬೆಳಗಿನ ಜಾವ ವ್ಯಾಯಾಮ ಮಾಡಿಸುತ್ತಿದ್ದರು. ಆಗ ಅತಿ ಛಳಿ. ವ್ಯಾಯಾಮಕ್ಕೆ ಬರಲು ಅನೇಕರಿಗೆ ಇಷ್ಟವೇ ಇರುತ್ತಿರಲಿಲ್ಲ. ಆದರೆ ಜೈಲಿನಲ್ಲಿ ವ್ಯಾಯಾಮ ಮಾಡದಿದ್ದರೆ ದೇಹಾರೋಗ್ಯ ಸರಿಯಾಗಿರುವುದಿಲ್ಲ ವೆಂದು ಸೆರೆವಾಸವನ್ನು ಅನುಭವಿಸಿದವರಿಗೆಲ್ಲಾ ಗೊತ್ತು. ಕ್ಯಾಪ್ಟನ್ ಸ್ವಾಮಿಯುವರು ಕಳೆದ ಯುದ್ಧದಲ್ಲಿ ಸೈನ್ಯದಲ್ಲಿ ಸಿಪಾಯಿಯಾಗಿ ಸೇರಿ ಮೆಸೊಪೊಟೇಮಿಯ ಇಟಲಿ ಮುಂತಾದ ಕಡೆಗಳಿಗೆಲ್ಲಾ ಹೋಗಿದ್ದರು. ಇವರು ಹೋದ ಕಡೆಯಲ್ಲೆಲ್ಲಾ ಇಂಗ್ಲೀಷರಿಗೇ ಜಯವಾಗುತ್ತಿದ್ದಿತು ಈ ಯುದ್ಧದಲ್ಲಿ ಇವರು ಇಂಗ್ಲಿಷರೊಂದಿಗೆ ಸೇರಲಿಲ್ಲ. ಇವರು ಹಿಂದೆ ಮಾಡಿದ ಸೇವೆ ಯಾರಿಗೂ ಜ್ಞಾಪಕವಿಲ್ಲ. ಈಗ ಇವರು ಹೊರಗಿದ್ದರೆ ಭಾರತವನ್ನು ಸಂರಕ್ಷಿಸುವುದು ಕಷ್ಟವೆಂದು ಸೆರೆಮನೆಯಲ್ಲಿ ಹಾಕಿದರು. ಕ್ಯಾಪ್ಟನ್ ಸ್ವಾಮಿಗಳು ಜೈಲಿನಲ್ಲಿಯೂ ಡಿಟೆನ್ಯುಗಳನ್ನು ತರಪೇತುಮಾಡ ತೊಡಗಿದರು. ಬೆಳಗಿನ ಜಾವದ ವ್ಯಾಯಾಮದ ಸದ್ದು ಕೇಳಿ ಅಧಿ

ಕಾರಿಗಳು ನಡುಗುತ್ತಿದ್ದರು. ಹೀಗೆ ವ್ಯಾಯಾಮ, ಸಾವಿರ ಜನ 1939 ನೆಯ ಇಸವಿಯಲ್ಲಿ ಕಲ್ಯಾಣನಗರಿಯ ಸೆರೆಮನೆಯಲ್ಲಿ ಮಾಡುತ್ತಿರುವಾಗ ಅಧಿಕಾರಿಗಳು ಅದನ್ನೂ ವಿರೋಧಿಸಿದರು. ಕ್ಯಾಪ್ಟನ್ ಸ್ವಾಮಿಯವ ರದು ಸ್ವಲ್ಪ ಹಾಸ್ಯ ಸ್ವಭಾವ. ಆದರೆ ವ್ಯಾಯಾಮದಲ್ಲಿ ಬಹಳ ಖರಾರು. ಎರಡನೆಯ ಶಿಳ್ಳು ಊದಿದ ಮೇಲೆ ವ್ಯಾಯಾಮಕ್ಕೆ ಬರದವರಿಗೆ ಶಿಕ್ಷೆ. ಶಿಕ್ಷೆ, ಜೈಲು ಆವರಣವನ್ನು ಮೂರು ಸುತ್ತು ಓಡಿ ಸುತ್ತುವುದು, ಮತ್ತು ವ್ಯಾಯಾಮ ಮಾಡುತ್ತಿದ್ದ ಸ್ಥಳದಲ್ಲಿ ಗೋಡೆಯ ಕಡೆ ನೋಡುತ್ತಾ ಸುಮ್ಮನೆ ಐದು ನಿಮಿಷ ನಿಲ್ಲುವುದು. ಒಂದೊಂದು ಸಲ ಬಹಳ ದೊಡ್ಡ ವರಿಗೂ ಈ ಶಿಕ್ಷೆ ಕೊಡಬೇಕಾದ ಪ್ರಸಂಗ ಬರುತ್ತಿದ್ದಿತು. ಅದರಲ್ಲಿಯೂ ರಾಮಯ್ಯನವರಂತಹ ಗಾತ್ರದವರಿಗೆ ಮೂರು ಸಲ ಓಡುವ ಶಿಕ್ಷೆ ಎಂದರೆ ಬಾಕಿಯವರಿಗೆ ಬಹಳ ವಿನೋದ. ರಾಮಯ್ಯನವರು ಒಳ್ಳೆಯ ಮದ್ದಾನೆ. ಸರಸಿ ವಿನೋದಿ. ಅವರನ್ನು ನೋಡಿದರೆಯೇ ಒಂದು ಬಗೆಯ ನಗು ಬರುತ್ತೆ. ಅವರು ಹಾಗೆ ಓಡುತ್ತಿರುವಾಗ ವ್ಯಾಯಾಮ ಮಾಡುತ್ತಿದ್ದವ ರೆಲ್ಲ ಒಂದೇ ಸಮನೆ ನಗುತ್ತಿದ್ದರು. ರಾಮಯ್ಯನವರು "ನಗಬೇಡ ಮಗು. ನಿನಗೂ ಇದೆ. ನೀನು ಒಂದು ಗಳಿಗೆ ಹೆಚ್ಚಾಗಿ ಮಲಗಿದರೆ ನಿನಗೂ ಇದೇ ಬಹುಮಾನ" ಎನ್ನುತ್ತಿದ್ದರು.

ವ್ಯಾಯಾಮಕ್ಕೆ ಬರುತ್ತಿದ್ದವರು ಮಧ್ಯೆ ಬರುವುದನ್ನು ನಿಲ್ಲಿಸಿದರೆ ಕ್ಯಾಪ್ಟನ್ "ಸಾಹೇಬರು" ಎರಡು ಮೂರು ದಿನ ನೋಡಿ ನಾಲ್ಕನೆಯ ದಿನ ಬೆಳಗಿನ ಜಾವ ಅವರನ್ನು ಎತ್ತಿಕೊಂಡು ಬರಲು ನಾಲ್ಕು ಆಳುಗ ಳನ್ನು ಕಳುಹಿಸುತ್ತಿದ್ದರು. ಆ ನಾಲ್ಕು ಆಳುಗಳು ಡಿಟೆನ್ಯುಗಳೇ. ಅಲ್ಲಿ ಬೇರೆ ಆಳು ಎಲ್ಲಿಂದ ಬರಬೇಕು? ಅವರು ಹೋಗಿ ಮಲಗಿದ್ದ ಡಿಟೆನ್ಯು ವನ್ನು ಆಚೆ ಇಬ್ಬರು ಈಚೆ ಇಬ್ಬರು ಎತ್ತಿಕೊಂಡು ಬರುತ್ತಿದ್ದರು. ಮೂರು ದಿನ ತಪ್ಪಿಸಿಕೊಂಡವರಿಗೆ—ನಾಳೆ ಬೆಳಿಗ್ಗೆ ನಿಮಗೆ ನಾಲ್ಕು ಆಳು, ಎಂಬು ದಾಗಿ ಕ್ಯಾಪ್ಟನ್ ಹೇಳಿದ ಕೂಡಲೇ ಮರು ದಿನ ಅವರು ಎಲ್ಲರಿಗಿಂತ ಮುಂಚೆ ಹಾಜರಾಗುತ್ತಿದ್ದರು. ಈ ವ್ಯಾಯಾಮ ಮಾಡುತ್ತಿದ್ದವರು 'ಮಾರ್ಚಿಂಗ್' ಹಾಡುಗಳಾದ "ಮಾತೃಭೂಮಿ ಜನನಿ ನಿನ್ನ ಚರಣ ಸೇವೆ ಮಾಡುವ ಅಥವ ಜೈಲುಖಾನೆಗೆ ಹೆದರುವುದಿಲ್ಲ ಫಾಸಿಗೂ ಹೆದರುವು ದಿಲ್ಲ. ಶತ್ರುಗಳನ್ನು ನಾವು ಎದುರಿಸುತ್ತೇವೆ" ಎಂದು ಹೇಳುತ್ತಿರುವಾಗ

ಆ ಧ್ವನಿಗಳು ಬಹಳ ಬಹಳ ಎತ್ತರಕ್ಕೆ ಹೋಗುತ್ತಿದ್ದುವು. ವ್ಯಾಯಾ ಮಕ್ಕೆ ಬರದ ಧೀರರು "ಏನಪ್ಪ ಇದು ನಿಮಗೆ ಬಾಯಿಗೆ ವ್ಯಾಯಾಮ ವೆಂಬಂತೆ ತೋರುತ್ತೆ. ಒಂದಷ್ಟು ಹಾಡು ಹಾಡುವುದು, ಒಳಕ್ಕೆ ಬರು ವುದು ಇದೇ ನಿಮ್ಮ ವ್ಯಾಯಾಮ" ಎಂದು ಹಾಸ್ಯಮಾಡುತ್ತಿದ್ದರು. ಆದರೆ ಹೀಗೆ ಹಾಸ್ಯ ಮಾಡುತ್ತಿದ್ದವರು ಒಂದು ದಿನ ಬಂದು ಕೈಕಾಲು ಸೊಂಟ ಬಗ್ಗಿಸಿದ ಕೂಡಲೇ ಅಲ್ಲಿಂದ ಮುಂದೆ ಅಂತಹ ಮಾತನ್ನು ಆಡುತ್ತಿರ ಲಿಲ್ಲ.

ಬೆಳಗಿನ ಎಂಟು ಗಂಟೆಗೆ ಡಿಟೆನ್ಯುಗಳೆಲ್ಲಾ ತಮ್ಮ ತಮ್ಮ ಲೋಟಗ ಳನ್ನು ಹಿಡಿದುಕೊಂಡು ಕಾಫಿಗಾಗಿ ಅಡಿಗೆಮನೆ ಮುಂದೆ ನಿಂತಿರುವುದು ಕಾಣುತ್ತಿದ್ದಿತು. ಆಗ ಸುರಪುರಿಯ ರಾಯರು ಅಡಿಗೆಮನೆಯ ಯಾಜ ಮಾನ್ಯದಲ್ಲಿದ್ದರು. ಗಂಟೆ ಹೊಡೆದ ನಂತರ ಎಲ್ಲರೂ ಒಳಗೆ ಬಂದು ಕೂರುವವರೆಗೆ ರಾಯರು ಯಾರಿಗೂ ಕಾಫಿ ಕೊಡುತ್ತಿರಲಿಲ್ಲ. ಅಲ್ಲಿ ಅವ ರಿಗೆ ಯಾರ ದಾಕ್ಷಿಣ್ಯವೂ ಸ್ನೇಹವೂ ಇಲ್ಲ. ಹೆಚ್ಚು ಕಡಿಮೆಯೂ ಇಲ್ಲ. ಹರಿಜನ ಎಂ. ಎಲ್. ಸಿ. ಗೂ ರಿಯಾಯ್ತಿಯಿಲ್ಲ. ಸಂಪತ್‌ರವರಿಗೆ ಕಾಫಿ ಸಾಧಾರಣವಾಗಿ ಬಿಸಿಯಾಗಿರಬೇಕು. ಆದರೆ ಅವರಿಗೆ ಯಾವಾಗಲೂ ಕಾಫಿ ಆರಿದುದೇ ಸಿಗುತ್ತಿದ್ದಿತು. ಒಂದೊಂದು ದಿನ ಅವರೂ ಗಂಟೆ ಹೊಡೆಯುವುದಕ್ಕೆ ಮುಂಚೆ ಬರುತ್ತಿದ್ದರು. ಇವತ್ತಾದರೂ ಸ್ವಲ್ಪ ಕಾಫಿ ಬಿಸಿಯಾದದ್ದು ಕುಡಿಯೋಣ ಎಂದು. ರಾಯರು, ಸ್ವಾಮಿ ಸೆಂಟ್ರಲ್ ಜೈಲು ಕಾಫಿ ಜ್ಞಾಪಿಸಿಕೊಳ್ಳಿ. ಆಗ ಈ ಕಾಫಿ ರುಚಿ ಗೊತ್ತಾಗುತ್ತೆ ಎಂದು ಗದರಿಸುತ್ತಿದ್ದರು. ಆ ಮಾತನ್ನು ಕೇಳಿದ ಕೂಡಲೆ ಸಂಪತ್ ಸುಮ್ಮನಾಗುತ್ತಿದ್ದರು.

---

## ೪೧. ಮಕ್ಕಳು, ತೊಟ್ಟಿಲು

---

ನಲವತ್ತೆರಡನೆಯ ಆಗಸ್ಟ್ ಸೆಪ್ಟಂಬರ್ ಅಕ್ಟೋಬರ್ ನವಂಬರ್ ತಿಂಗಳುಗಳಲ್ಲಿ ಅಧಿಕಾರಿಗಳ ತಲೆ ಕೆಟ್ಟಿದ್ದಿತೆಂಬುದಕ್ಕೆ ಯಾವ ಅಭ್ಯಂತ ರವೂ ಇಲ್ಲ. ಆಗ ಅವರು ಯಾವ ಯಾವ ರೂಪದ ದಬ್ಬಾಳಿಕೆಗಳನ್ನು ನಡೆಸ

ಬಹುದಾಗಿದ್ದಿತೋ ಒಂದನ್ನೂ ಬಿಡದೆ ನಡೆಸಿಯೇ ನಡೆಸಿದರು. ಸುದರ್ಶನನ ಸ್ವಂತ ಜಿಲ್ಲೆಯಲ್ಲಿ ಈ ಕರಾಳ ನರ್ತನ ತನ್ನ ಪೂರ್ಣ ಕುರೂಪದಲ್ಲಿ ಮೆರೆಯಲಾರಂಭಿಸಿತು. ಆ ಜಿಲ್ಲಾಧಿಕಾರಿಗಳು 1939 ನೇ ಚಳುವಳಿಯಲ್ಲಿ ಒಂದು ಜಿಲ್ಲೆಯಲ್ಲಿದ್ದು ಒಬ್ಬೊಬ್ಬ ರಾಜಕೀಯ ಖೈದಿಗೆ ಬೇರೆ ಬೇರೆ ತಪ್ಪುಗಳಿಗಾಗಿ ಎರಡೆರಡು ವರುಷ ಕಠಿಣ ಶಿಕ್ಷೆ ಕೊಟ್ಟಿದ್ದರು. ಅನೇಕರನ್ನು ಸೆಶನ್ಸ್‌ಗೆ ಕಮಿಟ್ ಮಾಡಿದ್ದರು. ಅಖಿಲ ಕರ್ನಾಟಕದಲ್ಲೆಲ್ಲ ಆಗ ರಾಜದ್ರೋಹದ ಆಪಾದನೆ ಮೊಕದ್ದಮೆ ಒಂದು; ಆದರೆ ಇಲ್ಲಿ 15 ಆಯಿತು. ಪೋಲೀಸಿನವರ ಮಾತನ್ನು ಸ್ವಲ್ಪವೂ ಮೀರದ ಜಿಲ್ಲಾಧಿಕಾರಿಗಳ ಪೈಕಿ ಇವರೂ ಒಬ್ಬರು. ಸುದರ್ಶನ ಸೆರೆಮನೆಯನ್ನು ಪ್ರವೇಶಿಸಿದ ನಾಲ್ಕಾರು ದಿನಗಳಲ್ಲಿಯೇ 12-14 ವಯಸ್ಸಿನ ಮಾಧ್ಯಮಿಕ ಮತ್ತು ಹೈಸ್ಕೂಲು ವಿದ್ಯಾರ್ಥಿಗಳು ಸೆರೆಮನೆ ತುಂಬಿದರು. ವಯಸ್ಕರಾದ ಕಾಲೇಜು ವಿದ್ಯಾರ್ಥಿಗಳನ್ನು ಕಲ್ಯಾಣನಗರಿಯ ಜಿಲ್ಲಾಧಿಕಾರಿಗಳು ಹಿಡಿಯುತ್ತಿದ್ದುದರಿಂದ ಈ ಮಾಧ್ಯಮಿಕ ಸ್ಕೂಲು ವಿದ್ಯಾರ್ಥಿಗಳನ್ನೇ ಹಾಸ್ಯಪುರಿ ಜಿಲ್ಲೆಯ ಮ್ಯಾಜಿಸ್ಟ್ರೇಟರು ಹಿಡಿಯಬೇಕಾಯಿತು. ಒಂದು ದಿನವಂತೂ ಎಂಟು ವಯಸ್ಸಿನ 4 ಬಾಲಕರನ್ನು ಜೈಲಿನೊಳಕ್ಕೆ ಹಿಡಿದುಕೊಂಡು ಬಂದರು. ಅವರು ಮಾಧ್ಯಮಿಕ 1ನೇ ತರಗತಿಯವರಂತೆ.

ಅವರನ್ನು ಜೈಲಿನೊಳಕ್ಕೆ ಕರೆದುಕೊಂಡು ಒರುತ್ತಿರುವಾಗ ಪರುಶುರಾಮ್, ಅವರ ಕಾವಲಿಗೆ ಇದ್ದ ಯಮದೂತರಂತಹ ರಿಸರ್ವ್ ಪೋಲೀಸನ್ನು ನೋಡಿ "ಅಯ್ಯೊ ನಿಮ್ಮ ಹಣೆಬರಹವೇ" ಎಂದರು. ಅಧಿಕಾರಿಗಳಿಗೆ ಯುಕ್ತಾಯುಕ್ತ ವಿವೇಕಜ್ಞಾನ ಹೊರಟೇ ಹೋಯಿತು. "ಇದು ಮಗು; ಇವನು ನಮ್ಮವನು; ಇವನು ಶತ್ರು ಇವನು ತೋರಿಸುತ್ತಿರುವ ವರ್ತನೆ ಧೀರತನ. ನಮಗೂ ಇವನಿಗೂ ಅಭಿಪ್ರಾಯ ಭೇದವಿದ್ದರೂ ಇವನನ್ನು ಗೌರವಿಸಬೇಕು" ಎಂಬುದೊಂದೂ ಅವರ ತಲೆಗೆ ಹತ್ತುತ್ತಲೇ ಇರಲಿಲ್ಲ. 8 ವರುಷದ ಹುಡುಗರನ್ನು ಒಳಕ್ಕೆ ಹಿಡಿದುಕೊಂಡು ಬಂದ ದಿನ ಜೈಲಿನಲ್ಲಿದ್ದ ಡಿಟೆನ್ಯುಗಳೆಲ್ಲಾ ಆ ಮಕ್ಕಳನ್ನು ಹೆಗಲ ಮೇಲೆ ಕೂರಿಸಿಕೊಂಡು ತಿರುಗಲು ಪ್ರಾರಂಭಿಸಿದರು. ಕೆಲವರಿಗಂತೂ ಆ ಬಾಲಕರನ್ನು ನೋಡಿ ಮನೆಯಲ್ಲಿದ್ದ ತಮ್ಮ ಮಕ್ಕಳ ನೆನಪು ಬಂದಿತು. ಆ ಸಾಯಂಕಾಲ ಜಿಲ್ಲಾಧಿಕಾರಿಗಳು ಸೆರೆಮನೆಗೆ ಬಂದಾಗ, ಪರುಶುರಾಮ್‌ರವರು

"ಸ್ವಾಮಿ. ಈ ಮಕ್ಕಳನ್ನೇನೋ ಕರೆತಂದಿರಿ. ಆದರೆ ದಯವಿಟ್ಟು ಇವರಿಗೆ ನಾಲ್ಕು ತೊಟ್ಟಿಲುಗಳನ್ನೂ ಕಳುಹಿಸಿಬಿಡಿ. ಬಹಳ ಅಳುತ್ತವೆ. ಇಟ್ಟು ತೂಗುತ್ತೇವೆ" ಎಂದರು. ಜಿಲ್ಲಾಧಿಕಾರಿಗಳಿಗೆ ಬಹಳ ನಾಚಿಕೆಯಾಯಿತೆಂದೆನೆ? ಇಲ್ಲ. ಬಹಳ ಸಿಟ್ಟು ಬಂತು. ಆ ಸಿಟ್ಟು ಆ ಬಾಲಕರನ್ನು ಹಿಡಿದುಕೊಂಡು ಬಂದವರ ಮೇಲೆ ಬರಲಿಲ್ಲ. ತೊಟ್ಟಿಲು ಕೇಳಿದವರ ಮೇಲೆ ಬಂತು. ಮೂರು ನಾಲ್ಕು ದಿನಗಳ ನಂತರ ಆ ಮಕ್ಕಳನ್ನು ಬಿಡುಗಡೆ ಮಾಡಿದರು. ಮತ್ತೆ ಪಿತ್ಥವಿಕಾರ; ಮತ್ತೆ ಒಂದು ವಾರದ ನಂತರ ಆ ಬಾಲಕರ ಬಂಧನ! ಎಳೆದುಕೊಂಡು ಬಂದರು.

ಆಗ ಸ್ಪೆಷಲ್ ಕೋರ್ಟುಗಳು ಇಲ್ಲಿ ಇನ್ನೂ ಸ್ಥಾಪನೆಯಾಗಿರಲಿಲ್ಲ. ಇಲ್ಲಿ ಸ್ಪೆಷಲ್ ಕೋರ್ಟುಗಳ ಆವಶ್ಯಕತೆಯೇ ಇರಲಿಲ್ಲ. ಆದರೆ ಮೇಲಿನವರು "ಹೇಳಿ ಬರೆಯಿಸಿದುದನ್ನು" ಇವರು ಬರೆಯಲೇ ಬೇಕಷ್ಟೆ. ಆಗ ಮಾಧ್ಯಮಿಕ ಸ್ಕೂಲು ಹೈಸ್ಕೂಲು ವಿದ್ಯಾರ್ಥಿಗಳನ್ನು ಸಾಮಾನ್ಯ ಕೋರ್ಟುಗಳಿಗೇ ವಿಚಾರಣೆಗಾಗಿ ಕಳುಹಿಸುತ್ತಿದ್ದರು. ನ್ಯಾಯಸ್ಥಾನಕ್ಕೆ ವಿಚಾರಣೆಗಾಗಿ ಸೆರೆಮನೆಯಿಂದ ಹೋದ ಆ ವಿದ್ಯಾರ್ಥಿಗಳ ಬಾಲ್ಯ ವಯಸ್ಸನ್ನು ನೋಡಿ ಡಿಟೆನ್ಯುಗಳು "ಇವರಿಗೆ ಬಿಡುಗಡೆ ಆಗಬಹುದೆಂದು" ಯೋಚಿಸಿದ್ದರು. ಮ್ಯಾಜಿಸ್ಟ್ರೇಟ್‌ರ ಹೆಸರು ಅನಾದಿ ಮೂರ್ತಿ. ನೋಡಿದರೆ ಸಾಧು ಸಾತ್ವಿಕರಾಗಿ ಕಾಣುತ್ತಿದ್ದರು. ಈಗಿನ ಇಂಗ್ಲಿಷ್ ಕಲಿತ ವಿದ್ಯಾವಂತರಿಗೆ ಸಾಧಾರಣವಾಗಿರುವಂತೆ, ಬ್ರಹ್ಮ ವಿಷ್ಣು ಮಹೇಶ್ವರರಲ್ಲದೆ ಯಾವುದೋ ಗಿರಿನಾಥ, ಯಾವುದೋ ಬಾಬ ಇವರೆಲ್ಲಾ ಇವರಿಗೆ ದೇವರು; ಗುರು. ಈ ಹೊಸ ದೇವರುಗಳಲ್ಲಿ ಇವರಿಗೆ, ಜಾತಿ ಭ್ರಷ್ಟರಿಗೆ ಹೊಸದಾಗಿ ಸೇರಿದ ಜಾತಿಯಲ್ಲಿರುವಂತೆ ಅತಿ ಪ್ರೀತಿ ಅಭಿಮಾನ ಅಂಧಃಶ್ರದ್ಧೆ. "ಹಿಂದಿನ ದೇವರುಗಳನ್ನೆಲ್ಲಾ ನೂಕು ಆಚೆ, ಆದರೆ ಆ ದೇವರ ಕಾಲೂ ಅಲ್ಲ ಬಾಲವೂ ಅಲ್ಲ ಅಂತಹ ಠಕ್ಕರಿಗೆಲ್ಲಾ ಗುಲಾಮನಾಗು" ಇದೇ ಇವರ ನೀತಿ. ಇದು ಈಗಿನ ಒಂದು ಫ್ಯಾಶನ್. ಹೀಗೆ ಈ ಬಾಬಗಳನ್ನೂ ನಾಥ್‌ಗಳನ್ನೂ, ಪುಷ್ಪಹರನಾಥ, ಲೀಲಾಹರನಾಥ, ಹಿರಣ್ಯಹರನಾಥ, ಸಮಸ್ತ ಹರನಾಥ ಇವರನ್ನೂ ಪೂಜಿಸುವುದರಿಂದ ನಿಜವಾದ ದೇವರನ್ನು ತಾವು ತಿರಸ್ಕರಿಸಿದಂತೆ ಆಗುವುದೆಂದು ಅವರಿಗೆ ತಿಳಿಯುವುದಿಲ್ಲ. ಆದರೆ ಚಾಣಕ್ಯರು ಹೇಳಿದಂತೆ "ನಮ್ಮ ದೇವರನ್ನೂ ದೇವಸ್ಥಾನ

ಗಳನ್ನೂ ಬಿಟ್ಟಮೇಲೆ ಆ ಸ್ಥಳದಲ್ಲಿ ಯಾರನ್ನಾದರೂ ಸ್ಥಾಪಿಸಲೇ ಬೇಕಲ್ಲ.'' ಈ ಹೊಸ ದೇವರುಗಳ ಭಕ್ತರು ಸಾಧಾರಣವಾಗಿ ಸ್ವಲ್ಪ ತಲೆ ಕೆಟ್ಟವರೆ. ಒಬ್ಬರು ಬಾಬನ ಪಟದ ಮುಂದೆ ಒಂದು ಊದುಕಡ್ಡಿ ಹತ್ತಿಸಿಕೊಂಡು ಎಡಗಡೆಯಿಂದ ಬಲಗಡೆಗೆ 4-5 ಸರ ಆರತಿ ಆಡಿಸುತ್ತಾನೆ. ಮತ್ತೊಬ್ಬ ಇದ್ದಕ್ಕಿದ್ದಂತೆ ತಿಂಗಳಿಗೆ ಒಂದು ಸಲ 2 ದಿನ 3 ದಿನ ಒಟ್ಟಿಗೆ ಪೂಜೆ ಎಂದು ಪ್ರಾರಂಭಿಸಿಬಿಡುತ್ತಾನೆ. ಇವರ ಸೇವೆಗೆ ಇಬ್ಬರು ಮೂವರು ಸ್ತ್ರೀಯರು ಎಲ್ಲೆಲ್ಲಿಯುವರೋ ಸೇರಿಬಿಡುತ್ತಾರೆ. ಊರೆಲ್ಲಾ ಬಿಕ್ಷ ಎತ್ತಿ ಸಮಾರಾಧನೆ ಮಾಡಿಬಿಡುತ್ತಾರೆ. ಮತ್ತೊಬ್ಬ, ಹೋದವನಿಗೆಲ್ಲಾ ಬಾಬನ ಒಂದು ಪುಸ್ತಕ ಕೊಡುತ್ತಾನೆ. ಅದರಲ್ಲಿರುವುದೆಲ್ಲಾ "ಬಾಬ ಒಬ್ಬಳಿಗೆ ಒಂದು ನಿಂಬೆಹಣ್ಣು ಕೊಟ್ಟ, ಮತ್ತೊಬ್ಬಳಿಗೆ ಹೂವಿನ ಹಾರ ಕೊಟ್ಟ. ಇನ್ನೊಬ್ಬಳಿಗೆ ಬೆಂಕಿಪೊಟ್ಣ ಕೊಟ್ಟ" ಇವುಗಳೇ. ರಾಮಾಯಣ ಭಾರತದ ಕಥೆಯಲ್ಲಿ ಬರುವ ಸನ್ನಿವೇಶಗಳನ್ನು ನಾವು ಅನುಮಾನದಿಂದ ಪ್ರಶ್ನಿಸುವಂತೆ ಇದನ್ನೂ ಪ್ರಶ್ನಿಸಿದರೆ, ಕಾಪಾಲಿಕರಂತೆ ನಮ್ಮ ಖೂನಿಯನ್ನೇ ಮಾಡಿಬಿಡುತ್ತಾರೆ. ಈ ಭಕ್ತರು, ಈ ಹೊಸ ದೇವರುಗಳಾದ ಬಾಬನಾಥ ಗಿರಿನಾಥ ಹರನಾಥರ ಮುಂದೆ ನಿಂತುಕೊಂಡು ಊದು ಕಡ್ಡಿ ತಿರುಗಿಸುತ್ತಿರುವುದನ್ನು ನೋಡಿದರೆ ಸಾಧಾರಣವಾಗಿ, ಆರೋಗ್ಯವಂತರಾಗಿರುವವರಿಗೆಲ್ಲಾ ನಗು ಬರುತ್ತದೆ. ಹಾಗೆ ಏನಾದರೂ ನಾವು ನಕ್ಕೆವಾದರೆ, ಆ ಮತಾಂಧರು ಕೈಯಲ್ಲಿರುವ ಊದು ಕಡ್ಡಿಯನ್ನು ಎಸೆದು, ಕತ್ತಿಯಿಂದ ಮತ ಪ್ರಚಾರ ಮಾಡಬೇಕೆಂಬ ಜನರಂತೆ ಕೈಗೆ ಸಿಕ್ಕಿದ ದೊಣ್ಣೆ ಎತ್ತಿಕೊಂಡು ನಮ್ಮನ್ನು ಹೊಡೆಯಲು ಓಡಿಸಿಕೊಂಡು ಬರುತ್ತಾರೆ. ಆದರೂ ಈ ಆಧುನಿಕ ವಿದ್ವಾಂಸರು ನಾವು ರಾಮ ಕೃಷ್ಣ ಎಂದರೆ, ಸಂಧ್ಯಾವಂದನೆ ಮಾಡಿದರೆ, ದೇವಸ್ಥಾನಕ್ಕೆ ಹೋದರೆ, ಇವನದು ಮೂಢಭಕ್ತಿ ಎನ್ನುತ್ತಾರೆ. ಮ್ಯಾಜಿಸ್ಟ್ರೇಟ್ ಅನಾದಿ ಮೂರ್ತಿ ಈ ಪಂಗಡಕ್ಕೆ ಸೇರಿದವರು.

ಇರಲಿ. ಈ ಮಿಡಲ್ ಸ್ಕೂಲು ವಿದ್ಯಾರ್ಥಿಗಳ ವಿಚಾರಣೆ ನಡೆಸಿದ ಮ್ಯಾಜಿಸ್ಟ್ರೇಟ್ ಅನಾದಿ ಮೂರ್ತಿಗಳು ಇಂತಹ ಅನೇಕ ಬಾಬ, ಅನೇಕ ನಾಥರ ಶಿಷ್ಯರು. ವಿದ್ಯಾರ್ಥಿಗಳು 12-13 ವಯಸ್ಸಿನವರು. ಅವರ ಅಪರಾಧ ಸ್ಕೂಲಿಗೆ ಹೋಗಿರಲಿಲ್ಲವೆಂಬುದು. ಆದುದರಿಂದ ಮ್ಯಾಜಿಸ್ಟ್ರೇ

ಟರು ಅವರನ್ನು ಬಿಡುಗಡೆ ಮಾಡಬಹುದೆಂದೂ, ಅವರ ಬಂಧನದಲ್ಲಿ ಪೋಲೀಸರು ಮಾಡಿದ ಅಚಾತುರ್ಯವನ್ನು ಸರಿಪಡಿಸಬಹುದೆಂದೂ ಡಿಟೆನ್ಯು ಗಳು ನಂಬಿದ್ದರು. ಒಬ್ಬ ವಿದ್ಯಾರ್ಥಿಯಂತೂ 12 ವಯಸ್ಸಿಗಿಂತ ಕಡಿಮೆ ಯವನು. ನಮ್ಮ ದೇಶದ ಅನೇಕ ಬಾಲಕರಂತೆ ಅವನ ಆಕಾರ ಬಹು ಚಿಕ್ಕದಾಗಿ ಅವನು ಒಂದು ಮೊಗುವಿನಂತೆ ಕಾಣುತ್ತಿದ್ದ. ಆ ಮೊಗು ವನ್ನು ಕಣ್ಣಾಲ್ಲಿ ನೋಡಿದರೆ, ಬಾಬ, ನಾಥರ ಪಿತ್ಥವಿಕಾರವನ್ನು ಹೊಂದದ ಯಾವ ಮ್ಯಾಜಿಸ್ಟ್ರೇಟರೂ ಅವನಿಗೆ ಶಿಕ್ಷೆ ವಿಧಿಸುತ್ತಿರಲಿಲ್ಲ. ವಿಧಿಸಿ ದ್ದರೂ ಒಂದು ವಾರ ಎರಡು ವಾರ ಸಾಧಾರಣ ಶಿಕ್ಷೆ ವಿಧಿಸುತ್ತಿದ್ದರು. ಆದರೆ ಆಗಿನ ಕಾಲದಲ್ಲಿ ಮ್ಯಾಜಿಸ್ಟ್ರೇಟರುಗಳು ಎಲ್ಲೆಲ್ಲಿಯೂ ಭಾರತದ ರಕ್ಷಣೆಗೇ ನಿಂತಿದ್ದರು. ಸ್ಕೂಲಿನ ವಿದ್ಯಾರ್ಥಿಗಳೆಲ್ಲಾ ಅವರ ಪಿತ್ಥವಿಕಾ ರದ ದೃಷ್ಟಿಗೆ ಜಪಾನರಾಗಿಯೇ ತೋರುತ್ತಿದ್ದರು. ಆದರೆ ಆ ವಿದ್ಯಾರ್ಥಿ ಗಳು ನಿಜವಾದ ಜಪಾನರಾಗಿಲ್ಲದುದರಿಂದ ಅವರನ್ನು ಕಂಡರೆ ಮ್ಯಾಜಿ ಸ್ಟ್ರೇಟುಗಳಿಗೆ ಭಯವಿರಲಿಲ್ಲ. ಬರಿಯ ಸೇಡಿನ ಮನೋಭಾವ ಮಾತ್ರ ಇತ್ತು. ಮ್ಯಾಜಿಸ್ಟ್ರೇಟರು ಎಲ್ಲಾ ವಿದ್ಯಾರ್ಥಿಗಳಿಗೂ ನಾಲ್ಕು ತಿಂಗಳು ಕಠಿಣ ಸಜ ವಿಧಿಸಿದರು. ಬಾಲಕರಿಗೆ ಕಠಿಣ ಸಜ! ವಿಧಿಸಿದವರು ನಮ್ಮ ವರೇ. ಇವರು ಯಾವ ಹೊರಗಿನ ದೇಶದಿಂದಲೂ ಬಂದವರಲ್ಲ. ಶಿಕ್ಷೆಗೆ ಒಳಗಾದ ಮಕ್ಕಳು ವಿನೋದವಾಗಿ ನಗುತ್ತಾ "ಮ್ಯಾಜಿಸ್ಟ್ರೇಟು ನಿಜ ವಾಗಿಯೂ ಕ್ರ್ಯಾಕ್" ಎಂದುಕೊಂಡು ಸೆರೆಮನೆಯೊಳಕ್ಕೆ ಬಂದರು.

---

## ೪೨. ಹಿನ್ನೆಲೆ

---

ಸೆರೆಮನೆಯ ಶಿಸ್ತನ್ನು ಸರಿಯಾಗಿ ತಿಳಿಯಬೇಕಾದರೆ ಸೆಂಟ್ರಲ್ ಜೈಲಿಗೇ ಹೋಗಬೇಕು. ಆದರೆ ರಾಜಕೀಯ ಖೈದಿಗಳ ಸಂಖ್ಯೆ 1939-42 ರಲ್ಲಿ ಏರಿದಂತೆ ಮೂರು ನಾಲ್ಕು ಸಾವಿರಗಳಿಗೆ ಏರಿದಾಗ ಸೆಂಟ್ರಲ್ ಜೈಲಿ ನಲ್ಲಿಯೂ ನಿಯಮಗಳು ಸಡಿಲವಾಗಿಬಿಡುತ್ತವೆ. 1939ನೇ ಇಸವಿಯಲ್ಲಿ ಸುದರ್ಶನನ್ನು ಮೊದಲು ದಸ್ತಗಿರಿ ಮಾಡಿದಾಗ ಸೆರೆಮನೆಯಲ್ಲಿ ಜಾಗವೇ ಇರಲಿಲ್ಲ. ಕಲ್ಯಾಣನಗರಿಯ ಜೈಲಿನಲ್ಲಿ ಫಾಸಿಗೆ ಗುರಿಯಾದವರನ್ನು

ಇಡಲು (ಸೆಲ್) ಗಳು ಬೋನಿನಂತಹ ಸಣ್ಣ ಕೊಠಡಿಗಳು ಇವೆ. ಅವು ಯಾವಾಗಲೂ ಭರ್ತಿಯಾಗಿರುವುದಿಲ್ಲ. ಸುದರ್ಶನನನ್ನು ತೆಗೆದು ಕೊಂಡು ಹೋಗಿ ಆ ಒಂದು "ಸೆಲ್"ನಲ್ಲಿ ಇಟ್ಟರು. ಆ 'ಸೆಲ್'ಗೆ ಕೈಗೆ ಎಟಕದ ಜಾಗದಲ್ಲಿ ಒಂದು ಸಣ್ಣ ಕಿಟಕಿ. ಕಬ್ಬಿಣದ ಸಲಾಕಿಯ ಬಾಗಿಲು. ಒಳಗೆ ದೀಪವಿಲ್ಲ. ಹೊರಗೆ ಅಂಗಳದಲ್ಲಿ ಹತ್ತಿಸಿದ ದೀಪವೇ ಒಳಕ್ಕೂ ಕಾಣುತ್ತದೆ. ಆಗ ಸುದರ್ಶನನಿಗೆ ಹನ್ನೊಂದು ತಿಂಗಳು ಕಠಿಣ ಸಜ ಹಾಕಿದ್ದರು. ರಾತ್ರಿ ಆ 'ಸೆಲ್'ಗೆ ಬೀಗ ಹಾಕಬೇಕಾದಾಗ ಸುದ ರ್ಶನ ನಾನು ವರಾಂಡದಲ್ಲಿ ಮಲಗುತ್ತೇನೆ. ಇಲ್ಲಿ ಶಖೆ ಹೆಚ್ಚು ಎಂದ. ರಾಜಕೀಯ ಸೆರೆಯಾಳುಗಳನ್ನು ಮರಣದ ಕೊಠಡಿಯಲ್ಲಿ ಇಡಲು ಜೈಲು ಅಧಿಕಾರಿಗಳಿಗೆ ಅಧಿಕಾರವಿಲ್ಲ. ಆದರೆ ಕಳ್ಳರು ಸುಳ್ಳರಿಗಾಗಿ ಮಾಡಿರುವ ಸೆರೆಮನೆಯಲ್ಲಿ ರಾಜ್ಯದ ಸದ್ಗೃಹಸ್ಥರನ್ನೆಲ್ಲಾ ಇಡಲು ಪ್ರಾರಂಭಿಸಿದರೆ ಅಲ್ಲಿ ಸ್ಥಳ ಎಲ್ಲಿ ಸಾಕಾಗುತ್ತದೆ? ಈ ಕಾರಣದಿಂದ ಸೆರೆಮನೆ ಅಧಿಕಾರಿ ಗಳು ಜನ ಸಂಖ್ಯೆ ಹೆಚ್ಚಾದಾಗ ಎಲ್ಲಿ ಸ್ಥಳವಿದ್ದರೆ ಅಲ್ಲಿ ಜನರನ್ನು ಕೂಡು ತ್ತಾರೆ.

ಅವರಿಗೆ ಬೇಕಾದರೆ ಯಾವ ಕಾನೂನನ್ನೂ ಒಂದೇ ಏಟಿಗೆ ಬದ ಲಾಯಿಸುತ್ತಾರೆ. ಸುದರ್ಶನರು "ವರಾಂಡದಲ್ಲಿ ಮಲಗುತ್ತೇನೆ. ಈ ಸೆಲ್‌ನಲ್ಲಿ ಶಖೆ" ಎಂದು ಹೇಳಿದಾಗ ಜೈಲು ಅಧಿಕಾರಿಗಳು "ಇದು ರೂಲ್ಸಿಗೆ ವಿರುದ್ಧ" ಎಂದರು. ಬೀಗ ಹಾಕಿದರು. ಮರುದಿನದಿಂದಲೇ ಖೈದಿಗಳ ಸಂಖ್ಯೆ ನಿತ್ಯಾ ನೂರು ಬರುವುದು ಪ್ರಾರಂಭವಾಯಿತು. ಆಗ ಸೆಂಟ್ರಲ್ ಜೈಲಿನಲ್ಲಿ ಎಲ್ಲಿಯೂ ಸ್ಥಳ ಸಾಕಾಗಲಿಲ್ಲ. ಇದ್ದ ಜಾಗಗಳ ಲ್ಲೆಲ್ಲಾ, ವರಾಂಡ ಕಾರಿಡರ್ ನೆಯ್ಗೆ ಬ್ಯಾರಕ್, ಯುರೋಪಿಯನ್ ಬ್ಯಾರಕ್, ಸಿವಿಲ್ ಬ್ಯಾರಕ್, ಎಲ್ಲಾ ಕಡೆಯೂ ಸೆರೆಯಾಳುಗಳನ್ನು ತುಂಬಲು ಪ್ರಾರಂಭಿಸಿದರು. ಬೀಗ ಹಾಕಲು ಅವಕಾಶವಾಗುತ್ತಿರಲಿಲ್ಲ. ಕಾನೂನಿಗೆ ವಿರೋಧವಾದರೂ ಸುಮ್ಮನಿರುತ್ತಿದ್ದರು. ಸಾಧಾರಣವಾಗಿ ಲಾಕಪ್‌ಗಳಲ್ಲಿ ಒಂದು ತಿಂಗಳಿಗಿಂತ ಹೆಚ್ಚು ದಿನ ಸೆರೆಯಾಳುಗಳನ್ನು ಇಡುವ ಪದ್ಧತಿಯಿಲ್ಲ. ಹಾಗೆ ಇಡಬೇಕಾದರೆ ಅದನ್ನು ಸಬ್ ಜೈಲು ಮಾಡಬೇಕು. ಆದರೆ ಆ ಲಾಕಪ್ಪಿನಲ್ಲಿಯೇ ಸುದರ್ಶನನ್ನು ಏಳು ತಿಂಗಳು ಇಟ್ಟಿದ್ದರು. ಜೈಲುಗಳಲ್ಲಿ ಮಲಗುವ ಬ್ಯಾರಕ್ ಒಳಗಡೆಯೇ ರಾತ್ರಿ

ಮಲಮೂತ್ರ ವಿಸರ್ಜನೆಗೆ ಜಾಗ ಮಾಡಿರುತ್ತಾರೆ. ಅದರಲ್ಲಿ ಒಂದು ಎರಡು ಇಟ್ಟಿಗೆ ಹೆಚ್ಚಾಗಿ ಇಟ್ಟು ಒಂದು ತೂತು ಮಾಡಿದ್ದರೆ ರಾತ್ರಿಯು ಕೊಳಕು ಹೊರಕ್ಕೆ ಹೋಗಿ ಅಲ್ಲಿ ಮಲಗುವವರಿಗೆ ಸ್ವಲ್ಪ ಅನುಕೂಲವಾಗುತ್ತಿದ್ದಿತು. ಆದರೂ ಜಿಲ್ಲಾಧಿಕಾರಿಗಳು ಆ ಸಣ್ಣ ಕೆಲಸವನ್ನು ಮಾಡಿಕೊಡಲಿಲ್ಲ. ಅದು ಕಾನೂನಿಗೆ ವಿರುದ್ಧವೆಂದರು.

ಹೀಗೆ 1939ನೆ ಚಳುವಳಿಯಲ್ಲಿ ಕಲ್ಯಾಣನಗರಿ ಸೆಂಟ್ರಲ್ ಜೈಲಿನಲ್ಲಿ ಸುಮಾರು 3 ಸಾವಿರ ರಾಜಕೀಯ ಖೈದಿಗಳ ಜಾತ್ರೆ ಸೇರಿಬಿಟ್ಟಿತ್ತು. ಆಗ ನಮ್ಮ ಅಧಿಕಾರಿಗಳಿಗೆ ಭಾರತದ ರಕ್ಷಣೆ ಇರಲಿಲ್ಲ. ನಮ್ಮ ರಕ್ಷಣೆಯಲ್ಲಿ ಮಾತ್ರವೇ ಅವರು ತೊಡಗಿದ್ದರು. ಹದಿಮೂರು ಮುಖಂಡರನ್ನು ಚೆನ್ನಪುರಿಯ ಜಿಲ್ಲಾ ಮ್ಯಾಜಿಸ್ಟ್ರೇಟರು ದಸ್ತಗಿರಿ ಮಾಡಿದನಂತರ ಚಳುವಳಿ ನಡೆಸುವ ಭಾರ ಸುದರ್ಶನನಮೇಲೆ ಬಿತ್ತು. ಸುದರ್ಶನ ಹಳ್ಳಿಯಲ್ಲಿ ಒಂದು ಮನೆಯಲ್ಲಿ ಆಶ್ರಮ ಸ್ಥಾಪಿಸಿದ್ದನು. ಅಲ್ಲಿಂದ ನಿತ್ಯ ಸತ್ಯಾಗ್ರಹಿಗಳು ಅರಣ್ಯ ಸತ್ಯಾಗ್ರಹ ಹೂಡುತ್ತಿದ್ದರು. ಕಾಡಿನಲ್ಲಿ ಹೋಗಿ ಈಚಲಮರಗಳನ್ನು ಕಡಿಯುತ್ತಿದ್ದರು; ಪೋಲಿಸಿನವರು ಅವರನ್ನು ಲಾರಿಗಳಲ್ಲಿ ತುಂಬಿಕೊಂಡು ಮುವತ್ತು ನಲವತ್ತು ಮೈಲಿ ಕರೆದುಕೊಂಡು ಹೋಗಿ ಅರ್ಧ ರಾತ್ರಿಯಲ್ಲಿ ಅವರನ್ನು ನಡುಕಾಡಿನಲ್ಲಿ ಅರ್ಧರ್ಧಮೈಲಿಗೆ ಒಬ್ಬೊಬ್ಬರಂತೆ ಇಳಿಸಿ ವಾಪಸು ಬರುತ್ತಿದ್ದರು. ಅನಂತರ ಅವರ ಪಾಡು ಅವರಿಗೆ; ಆ ಸ್ವಯಂ ಸೇವಕರು ಕಾಡಿನಲ್ಲಿ ಕತ್ತಲೆಯಲ್ಲಿ ಅಲೆದು ಹೊಟ್ಟೆಗೆ ಅನ್ನಕಾಣದೆ ಬೆಳಗಿನ ವೇಳೆಗೆ ಯಾವುದೋ ಊರನ್ನು ಸೇರಿ ಅನಂತರ ತಮ್ಮ ಗ್ರಾಮಕ್ಕೆ ತೆರಳುತ್ತಿದ್ದರು. ಹೀಗಾದರೂ ಸ್ವಯಂಸೇವಕರ ಸಂಖೆ ಕಡಿಮೆಯಾಗಲಿಲ್ಲ. ಆಗ ಸುದರ್ಶನ ಒಂದು ವ್ಯವಸ್ಥೆ ಮಾಡಿದನು. ಸ್ವಯಂ ಸೇವಕರ ಹಾಸಿಗೆ ಗಂಟಿನಲ್ಲಿ ಸ್ವಲ್ಪ ತಿಂಡಿ. ಒಂದು ಮೇಣದ ಬತ್ತಿ ಬೆಂಕಿಪೊಟ್ಣ ಇವುಗಳನ್ನು ಕಟ್ಟಿ ಇಟ್ಟಿದ್ದು, ಬಸ್ಸಿನಿಂದ ನಡುದಾರಿಯಲ್ಲಿ ಇಳಿದ ಕೂಡಲೆ ಕೊನೆಯ ಸ್ವಯಂ ಸೇವಕ ಹಿಂದು ರಸ್ತೆಯಲ್ಲಿ ಹಿಂದಕ್ಕೆ ನಡೆದುಕೊಂಡು ಹೋಗಬೇಕೆಂದೂ ಎಲ್ಲರೂ ಒಟ್ಟಿಗೆ ಸೇರಿ ತಮ್ಮಲ್ಲಿದ್ದ ತಿಂಡಿಯನ್ನು ತಿಂದು ಅನಂತರ ನಿಧಾನವಾಗಿ ಹೊರಟ ಸ್ಥಳವನ್ನು ಸೇರಿ ಮತ್ತೆ ಮಾರನೆ ದಿನವೇ ಸತ್ಯಾಗ್ರಹ ಮಾಡಬೇಕೆಂದೂ ಏರ್ಪಡಿಸಿದರು. ಇದರಿಂದ ಅಧಿಕಾರಿಗಳ ಪಿತ್ಥ ಪೂರ್ಣವಾಗಿ ಕೆರಳಿತು. ಅವರು ಯಾರನ್ನು ಮೊದಲ

ದಿನ ರಾತ್ರಿ 10—15—20 ಮೈಲಿ ಕರೆದುಕೊಂಡುಹೋಗಿ "ಹಾಳುಪ್ರಾಣಿ ಸದ್ಯಕ್ಕೆ ಸತ್ತ" ಎಂದು ಬಿಟ್ಟು ಬರುತ್ತಿದ್ದರೋ ಅವರು ಮರುದಿನ ಮೊದಲಿದ್ದ ಸ್ಥಳದಲ್ಲಿಯೇ ನಿಂತಿರುತ್ತಿದ್ದರು. ಜಿಲ್ಲಾಧಿಕಾರಿಗಳು ಸುದರ್ಶನನನ್ನು ಕರೆಸಿ ವಿಧವಿಧವಾಗಿ ಬೋಧಿಸಿದರು. ಆ ಜಿಲ್ಲಾಧಿಕಾರಿಗಳು ಸಾಹಸಿಗಳು. ಅವರು ತಮ್ಮ ಆಯುಸ್ಸನ್ನೆಲ್ಲಾ ಇತರರ ಹುಳುಕು ರಂಧ್ರಗಳನ್ನು ಕಂಡುಹಿಡಿಯುವುದರಲ್ಲಿಯೇ ಕಳೆದಿದ್ದಾರೆ. ಯಾವ ಯಾವ ಮನುಷ್ಯನ ದೌರ್ಬಲ್ಯಗಳೇನು ? ಇವನಿಗೆ ಇರುವ ಅನುಕೂಲ ಅನಾನುಕೂಲಗಳು ಯಾವುವು? ಇವನ ಶಕ್ತಿಯನ್ನು ಕಡಿಮೆಮಾಡಬೇಕಾದರೆ ಇವನ ಸಂಸಾರದಲ್ಲಿ ಯಾವ ವಿಷಬೀಜವನ್ನು ಬಿತ್ತಬಹುದು. ಅಣ್ಣ ತಮ್ಮಂದಿರು, ತಂದೆ ಮಕ್ಕಳು ದಾಯಾದಿಗಳು ಇವರೆಲ್ಲ ಮತ್ತೆ ಸೇರದಂತೆ ಪರಸ್ಪರ ಕಾದಾಡುತ್ತಲೇ ಸಾಯುವಂತೆ ಹೇಗೆ ಮಾಡಬಹುದು ? ಇದರಲ್ಲಿ ಅವರು ಬಹಳ ತಂತ್ರಜ್ಞರು. ಆ ಜಿಲ್ಲೆಯಲ್ಲಿ ಅವರು ಎಷ್ಟೋ ಸಂಸಾರಗಳನ್ನು ನಾಶಮಾಡಿದ್ದಾರೆ. ಅನೇಕ ಮನೆಗಳಲ್ಲಿ ಇನ್ನು 3 ತಲೆ ಕಾದಿದರೂ ಕೋರ್ಟಿಗೆ ಅಲೆದರೂ ಮುಗಿಯದ ವ್ಯಾಜ್ಯಬೀಜವನ್ನು ಬಿತ್ತಿಬಿಟ್ಟಿದ್ದಾರೆ. ಇವರ ಕಿತ್ತಾಟದಿಂದ ಸಂಸಾರದಲ್ಲಿ ಕಲಹಗಳುಂಟಾಗಿ ಅನೇಕ ಲಕ್ಷ ರೂ. ಗಳ ಆಸ್ತಿಗಳು ವ್ಯರ್ಥವಾಗಿವೆ. ಜಿಲ್ಲಾಧಿಕಾರಿಗಳು ಇಂತವರಾದ ಮೇಲೆ ಪ್ರಜೆಗಳ ಸುಖ ಹೇಳಿ ತೀರಬೇಕೆ? ಭಗವಂತ ತಮ್ಮ ಕೈಯಲ್ಲಿ ಅಧಿಕಾರವನ್ನು ಕೊಟ್ಟಿರುವುದು ಮಹಾಸಭೆ ಸಂಸ್ಥೆಯನ್ನು ಧ್ವಂಸಮಾಡುವುದಕ್ಕಾಗಿಯೇ ಎಂದು ಅವರು ತಿಳಿದರು. ಅವರು ಸುದರ್ಶನನನ್ನು ಕರೆಸಿ ಕಾಂಗ್ರೆಸ್ ಎಂಬುದು ಬ್ರಾಹ್ಮಣೇತರರ ಸಂಸ್ಥೆ. ನೀವು ಯಾಕೆ ಅದರಲ್ಲಿ ಸಾಯುತ್ತೀರಿ. ನಿಮ್ಮನ್ನು ಉಪಯೋಗಿಸಿಕೊಂಡು ಅವರು ತಮಗೆ ಬೇಕಾದುದನ್ನು ಹೊಂದಿಬಿಡುತ್ತಾರೆ ಎಂದು ಹೇಳಿದರು. ಹಾಗೆಯೇ ಮತ್ತೊಬ್ಬ ಕೆಲಸಗಾರರನ್ನು ಕರೆಸಿ "ಕಾಂಗ್ರೆಸ್ ಬ್ರಾಹ್ಮಣರ ಸಂಸ್ಥೆ. ನಾಲ್ಕಾರು ಬ್ರಾಹ್ಮಣರು ತಮ್ಮ ಸ್ವಾರ್ಥಸಾಧನೆಗಾಗಿ ಈ ವೇಷಹಾಕಿದ್ದಾರೆ ಎಂದರು. ಅವರ ಛಿದ್ರಗಳನ್ನೂ ದೋಷಗಳನ್ನೂ ಹುಡುಕಿ ಇವರಿಗೂ, ಇವರದನ್ನು ಹುಡುಕಿ ಅವರಿಗೂ, ಹೇಳಿದರು. ಭಾರತದಲ್ಲಿ ಲಾರ್ಡ್ ವಿಲ್ಲಿಂಗ್ಡನ್ ಕಾಂಗ್ರೆಸ್ ಮಟ್ಟಹಾಕುತ್ತೇನೆಂದು ಹೊರಟಂತೆ ಇವರೂ ಕಾಂಗ್ರೆಸ್ ಮಟ್ಟಹಾಕಲು ಹೊರಟರು. ಈ ಸಂಸ್ಥೆ ನಮ್ಮ

ಸರ್ಕಾರದ ಕೃಪಾಶ್ರಯದಲ್ಲಿ ಬೆಳೆಯುತ್ತಿರುವ ಪ್ರಜೆಗಳ ಸಂಸ್ಥೆ, ತಾವೂ ಆ ಪ್ರಜೆಗಳ ಪೈಕಿ ಒಬ್ಬರು ಎಂಬುದು ಅವರಿಗೆ ಪೂರ್ಣವಾಗಿ ಮರೆತು ಹೋಯಿತು. ಸಂಸ್ಥೆಯನ್ನು ನಾಶಮಾಡಿ ತಮ್ಮ ಉನ್ನತಿಯನ್ನೂ ಪ್ರತಿಷ್ಠೆಯನ್ನೂ ಬೆಳೆಸಲು ಹವಣಿಸಿದರು. ತಮ್ಮ ಕಾರ್ಯಗಳಿಗೆ ಭಗವದ್ಗೀತೆಯ ಆಧಾರವನ್ನೂ ಉಪಯೋಗಿಸಲು ಅವರು ಹಿಂದೆಗೆಯಲಿಲ್ಲ

ಪರಿತ್ರಾಣಾಯ ಸಾಧೂನಾಂ ವಿನಾಶಾಯಚ ದುಷ್ಕೃತಾಂ
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೆಯುಗೇ
ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ

ನಾವು ಧರ್ಮ ಸಂಸ್ಥಾಪನೆಗೇ ಇರುವವರು. ಅಧರ್ಮ ತಲೆಹಾಕಿದರೆ ಪೂರ್ಣವಾಗಿ ನಾಶಮಾಡುತ್ತೇವೆ. ನಾಶಾಯಚ ಎಂದು ಹೇಳಿಲ್ಲ ವಿನಾಶಾಯಚ ಪೂರ್ಣವಾಗಿ ನಾಶಮಾಡುತ್ತೇವೆ ಎನ್ನುತ್ತಿದ್ದರು. ಇಂಗ್ಲಿಷಿನಲ್ಲಿರುವ ಗಾದೆ "ಪಿಶಾಚಿ ತನಗೆ ಬೇಕಾದರೆ ವೇದವನ್ನೂ ಉಚ್ಚರಿಸುತ್ತದೆ." ಇಂತಹ ಜಿಲ್ಲಾಧಿಕಾರಿಗಳು ದೊರೆತಮೇಲೆ ಪ್ರಜೆಗಳ ಭಾಗ್ಯಕ್ಕೆ ಎಣೆಯೇ ಇಲ್ಲ.

ಸುದರ್ಶನ ಜಿಲ್ಲಾಧಿಕಾರಿಗಳು ಪುಸಲಾಯಿಸಿದುದನ್ನು ಗಮನಿಸಲಿಲ್ಲ. "ನಿಮ್ಮ ಚರ್ಮ ಸುಲಿಸುತ್ತೇನೆ" ಎಂದರು ಅವರು. ಈ ಜಿಲ್ಲಾಧಿಕಾರಿಗಳು, ಪೋಲೀಸರು ಏನುಮಾಡಿದರೂ ಸುಮ್ಮನಿರುತ್ತಿದ್ದರು. ಯಾರಾದರೂ ದೂರು ತೆಗೆದುಕೊಂಡು ಹೋದರೆ "ನೀವು ಕಾಂಗ್ರೆಸ್ಸೋ. ಐಯ್ಯಂಗಾರ್ಯರಲ್ಲಿ ಹೋಗಿ" ಎನ್ನುತ್ತಿದ್ದರು. ಒಂದು ಮಧ್ಯಾಹ್ನ ಆಶ್ರಮದಲ್ಲಿ ಸತ್ಯಾಗ್ರಹಿಗಳು ಊಟಕ್ಕೆ ಕುಳಿತಿದ್ದಾಗ ಪೋಲೀಸಿನವರು ಬಂದು ಮನೆ ಮುತ್ತಿದರು. ಒಳಗೆ ಸುಮಾರು 20 ಸತ್ಯಾಗ್ರಹಿಗಳಿದ್ದರು. ಮುತ್ತಿದ ಪೋಲಿಸರ ಸಂಖೆ 40 ಕ್ಕೆ ಕಮ್ಮಿ ಇರಲಿಲ್ಲ. ಅವರ ಕೈಯಲ್ಲಿ ಲಾಠಿ ಇತ್ತು. ಅಂತಹ ವೇಳೆಯಲ್ಲಿ ನೀವು ನಮ್ಮ ಪೋಲೀಸರ ಶೌರ್ಯ ನೋಡಬೇಕು. ಪೋಲಿಸಿನವರು ಬಾಗಿಲನ್ನು ಒದ್ದು ಒಳಕ್ಕೆ ನುಗ್ಗಿದರು. ಸಿಕ್ಕಿದವರನ್ನೆಲ್ಲಾ ಬಡಿದರು. ಎಲೆಯ ಮುಂದೆ ಊಟಕ್ಕೆ ಕುಳಿತಿದ್ದ ಒಬ್ಬನ ಅನ್ನವನ್ನೇ ಇನಿಸ್ಪೆಕ್ಟರು ಒದ್ದರು. ಮತ್ತೊಬ್ಬ ಪೋಲೀಸಿನವನ ಬೂಟ್ಸು ಏಟು ಒಬ್ಬ ಸತ್ಯಾಗ್ರಹಿಯ ಮುಂಡಿಗೆ ಬಿದ್ದು ಮುಂಡಿ ಚಿಪ್ಪೇ ಹಾರಿಹೋಯಿತು. ಇನ್ನೊಬ್ಬನ ಕೆನ್ನೆಗೆ ಇನಿಸ್ಪೆಕ್ಟರು

ಫಳಾರ್ ಫಳಾರನೆ ಕೊಟ್ಟರು. ಹೀಗೆ ನುಗ್ಗುವುದಕ್ಕೆ ಪೋಲೀಸರಿಗೆ ಯಾರು ಅಧಿಕಾರ ಕೊಟ್ಟಿದ್ದರೋ ತಿಳಿಯದು. ಜಿಲ್ಲಾಧಿಕಾರಿಗಳಲ್ಲಿ ದೂರು ಹೇಳಿದಾಗ ಅವರು ಸಿನಿಮಾ ಕತೆಗಳಲ್ಲಿ ಬರುವ ನವಾಬರಂತೆ "ನಿಮ್ಮ ತಲೆ ಒಡೆಯುತ್ತೇನೆ ಹೋಗಿ" ಎಂದು ಗದರಿಸಿದರು. ಮುಂದೆ ಪೋಲಿಸಿನವರ ಅತ್ಯಾಚಾರ ಅನ್ಯಾಯಗಳನ್ನು ಕುರಿತು ವಿಚಾರಣೆ ನಡೆಸಲು ಮಹಾತ್ಮರ ಅನುಮತಿಯಮೇಲೆ ಶ್ರೀ ಮಹದೇವ ದೇಸಾಯಿಯವರು ಬಂದಾಗ ಈ ಜಿಲ್ಲಾಧಿಕಾರಿಗಳ ಮೇಲೆ ಅವರ ಎದುರಿಗೇ ಕೆಲವರು ಬಂದು ತಮ್ಮ ಮೈಮೇಲಿದ್ದ ಒಡವೆಗಳನ್ನು ಪೋಲೀಸರು ಅಪಹರಿಸಿದ ರೆಂದು ದೂರು ಕೊಟ್ಟರು. 'ಈ ಪರಿತ್ರಾಣಾಯ ಸಾಧೂನಾಂ' ಅದನ್ನು ಕೇಳಿಕೊಂಡು ಸುಮ್ಮನೆಯೇ ನಿಂತಿದ್ದರು.

ಹೀಗೆ ಆಗ ಮೂರು ಸಾವಿರ ಸತ್ಯಾಗ್ರಹಿಗಳು ಕೇಂದ್ರ ಸೆರೆಮನೆ ಯಲ್ಲಿ ಸೇರಿದರು ದುರ್ಗ ಜಿಲ್ಲೆಯಿಂದ ಅನೇಕ ಗಂಡ ಹೆಂಡರು ಬಂದಿ ದ್ದರು. ಕೆಲವರಿಗೆ 4—5 ವರುಷ ಶಿಕ್ಷೆ ವಿಧಿಸಿದ್ದರು. ಸಾಮಾನ್ಯ ಪರಿಸ್ಥಿತಿಯಲ್ಲಿ 1945 ರ ವರೆಗೆ ಅವರ ಬಿಡುಗಡೆಯಾಗುವಂತೆ ಇರಲಿಲ್ಲ. ಆದರೆ ಭಗವಂತನ ಇಚ್ಛೆ ಬೇರೆ ರೀತಿಯಾಗಿದ್ದಿತು. 1938 ರಲ್ಲಿ ಪಟೇಟರ ಬಂದು ಬಾವುಟದ ಪ್ರಕರಣ ರಾಜಿಯಾದುದರಿಂದ ಬಿಡುಗಡೆ ಆಯಿತು. 1939 ರ ಚಳುವಳಿಯವರು ಮಹಾರಾಜರ ಪಟ್ಟಾಭಿಷೇಕ ಸಮಾರಂಭದಲ್ಲಿ ಬಿಡುಗಡೆ ಹೊಂದಿದರು.

ಹಾಸ್ಯವು ಿ ಸೆರೆಮನೆಗೆ 1942 ನೆಯ ಚಳುವಳಿಯಲ್ಲಿ ಬಂದ ಸೀಮ ಯ್ಯನವರು 39 ರಲ್ಲಿ ಕೇಂದ್ರ ಕಾರಾಗಾರದಲ್ಲಿ ಅಡಿಗೆಯ ಮನೆಯ ವ್ಯವ ಸ್ಥಾಪಕರಾಗಿದ್ದರು. ಒಬ್ಬ ಸೆರೆಯಾಳು ಸಾಧಾರಣವಾಗಿ ಸಾವಿರಾರು ಜನ ಖೈದಿಗಳ ಅಡಿಗೆ ವ್ಯವಸ್ಥೆಯನ್ನು ಎರಡು ಹೊತ್ತೂ ಮಾಡುವುದು ಎಂದರೆ ಎಷ್ಟು ಜವಾಬ್ದಾರಿ ಕಷ್ಟ ತಲೆತಿನ್ನುವ ಕೆಲಸ ಎಂಬುದು ಊಹನೆ ಯಿಂದ ಮಾತ್ರ ಗೊತ್ತಾಗುತ್ತದೆ. ಜೈಲಿನಲ್ಲಿ ಬುತ್ತಿ ಬಿಚ್ಚಿದ ಹಾಗೆ ಎಂಬುದು ಒಂದು ಗಾದೆ. 1938 ನೆಯ ಚಳುವಳಿಯಲ್ಲಿ ಸತ್ಯಾಗ್ರಹಿಗಳು ಬಂದಾಗ, ಕಾಂಗ್ರೆಸ್ ಖೈದಿಗಳಿಗೂ ಕ್ರಿಮಿನಲ್ ಖೈದಿಗಳಿಗೂ ಕಬ್ಬಿಣದ ಪಾತ್ರೆಗಳಲ್ಲಿ ಅಡಿಗೆ ಮಾಡುತ್ತಿದ್ದರು. ಆ ಅನ್ನ ಹುಳಿ ಎರಡೂ ಕಪ್ಪಾಗಿ ಅನ್ನಕ್ಕೆ ಹುಳಿ ಹಾಕಿ ಕಲಿಸಿಬಿಟ್ಟರೆ ಶಾಯಿನ ಬಣ್ಣ ಬರುತ್ತಿದ್ದಿತು. ಸೆರೆ

ಮನೆ ಐಜಿ ಸೆರೆಮನೆಗೆ ಬಂದಾಗ ಕೇಳಿದರೆ ಅವರು ಎದುರಿಗೆ ನಿಂತು ಕೇಳು ತ್ತಿರುವವನು ಎಂ. ಎಲ್. ಸಿ., ಬಿ. ಎ. ಬಿ. ಎಲ್. ವೈದ್ಯ, ಬಿ. ಎಸ್. ಸಿ. ಸೈನ್ಸ್ ಗ್ರಾಜುಯೇಟ್, ಪತ್ರಿಕಾಕರ್ತ ಗ್ರಂಥಕರ್ತ ಎಂಬುದಾವುದನ್ನೂ ಗಣಿಸದೆ ಇದೇ ಆರೋಗ್ಯ ಎನ್ನುತ್ತಿದ್ದರು. ಸೀಮಯ್ಯನವರು "ಕಣ್ಣಿಗೆ ಇಂಪಾದರೆ ಕರುಳಿಗೆ ಇಂಪು. ಇದು ನೋಡುವುದಕ್ಕೆ ಚೆನ್ನಾಗಿಲ್ಲ. ಸಾರು ಕಪ್ಪು ಬಣ್ಣವಾಗುತ್ತದೆ" ಎಂದು ಎಷ್ಟು ಹೇಳಿಕೊಂಡರೂ ಪ್ರಯೋಜನವಾಗಿರಲಿಲ್ಲ. ಆಗ ಊಟಕ್ಕೆ ಮಣ್ಣಿನ ತಟ್ಟೆಗಳನ್ನು ಕೊಡು ತ್ತಿದ್ದರು. ಕಂಟ್ರಾಕ್ಟರೂ ಜೈಲು ಅಧಿಕಾರಿಗಳೂ ಮಾತನಾಡಿಕೊಂಡೇ ಎಲ್ಲಾ ಸಾಮಾನುಗಳನ್ನೂ ತರಿಸುತ್ತಿದ್ದುದರಿಂದ, ಆ ಮಣ್ಣಿನ ತಟ್ಟೆಗಳು ಚೆನ್ನಾಗಿ ಬೆಂದಿರುತ್ತಿರಲಿಲ್ಲ. ಅರ್ಧ ಹಸಿಯಾಗಿಯೇ ಇರುತ್ತಿದ್ದವು. ಅದರಲ್ಲಿ ಅನ್ನಾ ಹಾಕಿಕೊಂಡು ಹುಳಿಯೊಡನೆ ಕಲಸುವಾಗ ತಟ್ಟೆ ಹುಳಿಯ ಸ್ವಲ್ಪ ಭಾಗವನ್ನು ಹೀರುತ್ತಿದ್ದಿತು. ಬಿರುಕುಗಳಿಗೆ ಅನ್ನದ ಅಗುಳು ಅಂಟಿಕೊಳ್ಳುತ್ತಿದ್ದಿತು. ಆ ಅಗಳು ಎಷ್ಟು ತೊಳೆದರೂ ಏನು ಮಾಡಿದರೂ ಹೋಗುತ್ತಿರಲಿಲ್ಲ. ದಿನ ದಿನಕ್ಕೆ ಹುಳಿವಾಸನೆ ಬರುತ್ತಿದ್ದಿತು. ಆಗ ಅನುಭವಶಾಲಿಯಾದ ಕ್ರಿಮಿನಲ್ ಖೈದಿಯೊಬ್ಬನು ತಟ್ಟೆಗೆ ಸ್ವಲ್ಪ ಎಣ್ಣೆ ಜಿಡ್ಡು ಸವರಿದರೆ ಅನ್ನದ ಅಗಳು ಅಂಟುವುದಿಲ್ಲ ಎಂದು ರಾಜಕೀಯ ಖೈದಿಗಳಿಗೆ ಹೇಳಿದನು. ಅದು ನಿಜ. ಆದರೆ ಎಣ್ಣೆ ಎಲ್ಲಿಂದ ತರ ಬೇಕು!

1939 ನೆಯ ಇಸವಿಯಲ್ಲಿಯೂ ಕೇಂದ್ರ ಕಾರಾಗಾರದಲ್ಲಿ ಕಬ್ಬಿಣದ ಪಾತ್ರೆಗಳೇ ಇದ್ದವು. ಆಗ ಅಧಿಕಾರಿಗಳು ಯಾವ ರಿಯಾಯ್ತಿಯನ್ನೂ ತೋರಿಸುವ ಮನೋಭಾವವುಳ್ಳವರಾಗಿರಲಿಲ್ಲ. ಸಾರ್ವಜನಿಕ ಮುಖಂಡ ರನ್ನು ಒಂದು ಸೆರೆಯಿಂದ ಒಂದು ಸೆರೆಗೆ ಬದಲಾಯಿಸುವಾಗ ಅವರಿಗೆ ಕೈಕೋಳ ತೊಡಿಸುವ ನಾಚಿಕೆಗೇಡು ವರ್ತನೆಗೂ ಹಿಂದೆಗೆಯಲಿಲ್ಲ. ಇಂತಹ ದೊಡ್ಡ ಸರ್ಕಾರದ ಗಾಂಭೀರ್ಯ ಯೋಗ್ಯತೆಗೆ ಅರ್ಹವಾದುದಾವು ದೆಂಬುದನ್ನು ಸರ್ಕಾರ ಮರೆತಿತ್ತು. ಅದೂ ಅಲ್ಪ ಮನುಷ್ಯನಂತೆ ಸೇಡು ತೀರಿಸಿಕೊಳ್ಳುವ ವ್ಯಾಪಾರದಲ್ಲಿ ತೊಡಗಿದ್ದಿತು. ಆಗ ಸೆರೆಮನೆಯಲ್ಲಿ ಅಧಿ ಕಾರಿಗಳನ್ನೂ ಸೆರೆಯಾಳುಗಳನ್ನೂ ಸಮಾಧಾನಪಡಿಸಿಕೊಂಡು ಹೋಗು ವುದು ಮುಖ್ಯವಾಗಿ ಅಡಿಗೆಮನೆಯವರಿಗೆ ದೊಡ್ಡ ಪ್ರಶ್ನೆಯಾಗಿದ್ದಿತು.

ಸೆರೆಮನೆಯಲ್ಲಿ ಸಾಧಾರಣವಾಗಿ ಇರುವ ಪ್ರಶ್ನೆ ಆಹಾರದ್ದೇ. ಅಲ್ಲಿ ಸೆರೆಯಾಳುಗಳಲ್ಲಿ ಒಬ್ಬರಿಗೊಬ್ಬರಿಗೆ ಬೇಸರಿಕೆ ಉಂಟಾಗುವುದೂ ಈ ಆಹಾರದ ಪ್ರಶ್ನೆಯಿಂದಲೇ. ಮೊದಲನೆಯದಾಗಿ ಕಂಟ್ರಾಕ್ಟರು ಕೊಡುವಾಗಲೇ ಸಾಧ್ಯವಾದಷ್ಟು ಕಡಿಮೆ ಮತ್ತು ಕೆಟ್ಟ ಸಾಮಾನನ್ನು ಕೊಡುತ್ತಾನೆ. ಸೆಂಟ್ರಲ್ ಜೈಲಿನಲ್ಲಿ ಸಾಧಾರಣವಾಗಿ ಸಾವಿರ ಕ್ರಿಮಿನಲ್ ಖೈದಿಗಳು ಇರುತ್ತಾರೆ. ರಾಜಕೀಯ ಚಳುವಳಿ ಬಂದಾಗ 1938 ರಲ್ಲಿ ನೂರಾರು ಜನರೂ 39-42 ರಲ್ಲಿ ಮೂರು ಸಾವಿರ ಜನರೂ ಸೆರೆಯಾಳುಗಳಾದರು. ಅಂತಹ ಸಂದರ್ಭಗಳಲ್ಲಿ ಒಬ್ಬ ಮನುಷ್ಯನ ಆಹಾರ ಸಾಮಗ್ರಿಯಿಂದ ದಿನಕ್ಕೆ ಒಂದಾಣೆ ಕಡಿಮೆ ಹಾಕಿದರೂ ಅದರ ಮೊತ್ತ ಅಗಾಧವಾಗುತ್ತದೆ. ಕ್ರಿಮಿನಲ್ ಖೈದಿಗಳಂತೂ ಹೇಗಾದರೂ ಈ ವಿಚಾರದಲ್ಲಿ ಚರ್ಚಿಸುವುದೇ ಇಲ್ಲ. ಚರ್ಚಿಸುವುದು ಅವರ ಹಕ್ಕು ಎಂದು ಅವರು ತಿಳಿದೂ ಇಲ್ಲ. ಹಾಗೂ ಅವರು ಮಾತನಾಡಿದರೆ ಅವರನ್ನು ತಹಬಂದಿಗೆ ತರಲು ಜೈಲು ಅಧಿಕಾರಿಗಳಿಗೆ ಲಾಠಿಛಾರ್ಜು, ತಿಕ್ಕಡಿ ಸಾದಾಬೇಡಿ ನಿಲುಬೇಡಿ ಜೈಲು ಹಿಟ್ಟು ಉಪ್ಪು, ಸೆಲ್, ಕೊನೆಗೆ ಫೈರಿಂಗ್‌ವರೆಗೆ ಅವಕಾಶವಿದೆ. ಆದುದರಿಂದ ಕ್ರಿಮಿನಲ್ ಖೈದಿಗಳಿಂದ ಜೈಲು ಅಧಿಕಾರಿಗಳಿಗೆ, ಆಹಾರ ವಸ್ತು ಸರಬರಾಜು ಸರಿಯಾಗಿಲ್ಲವೆಂದು ತೊಂದರೆಯುಂಟಾಗುವುದಿಲ್ಲ. ಆದರೆ ಸದ್ಗೃಹಸ್ಥರಾದ ರಾಜಕೀಯ ಖೈದಿಗಳ ವಿಷಯ ಹಾಗಲ್ಲ. ಅವರು ಸಾಧಾರಣವಾಗಿ ಯಾವುದಕ್ಕೂ ಚರ್ಚಿಸುತ್ತಾರೆ.

39 ನೆಯ ಚಳುವಳಿಯಲ್ಲಿ ಸಾವಿರಾರು ದೇಶಭಕ್ತರಿಗೆ ಕಠಿಣ ಶಿಕ್ಷೆ ಕೊಟ್ಟು ಕಲ್ಯಾಣನಗರಿ ಸೆರೆಯಲ್ಲಿ ಕೊಳೆಸಿದರು. ಕಠಿಣ ಶಿಕ್ಷೆಯವರಿಗೆ ನಿಯಮ ಬಹು ಹೆಚ್ಚು. ಜೈಲಿನ ಎಲ್ಲಾ ನಿಯಮಗಳನ್ನು ಪಾಲಿಸಬೇಕೆಂದು ಗಾಂಧಿಯವರು ಬೇರೆ ಪದೇ ಪದೆ ಹೇಳುತ್ತಾರೆ. ಆದರೆ ಎಷ್ಟೇ ನಿಯಮಗಳನ್ನು ಪಾಲಿಸುವುದಾದರೂ ಆಹಾರದ ಪ್ರಶ್ನೆಬಂದಾಗ ಮನುಷ್ಯ ಮೃಗವೇ. ಸೀಮಯ್ಯನವರ ಸಹನೆ ಅದಕ್ಕೆ ಸಾಕಾಗುತ್ತಿದ್ದಿತು. ಅಧಿಕಾರಿಗಳು ಕೊಡುತ್ತಿದ್ದ ಆಹಾರ ವಸ್ತುಗಳು ಅನ್ನ ಮತ್ತು ಸಾರು. ಆ ಸಾರಿನಲ್ಲಿ ಬೇಳೆಯೂ ತರಕಾರಿಯೂ ಇರಬೇಕೆಂದು ನಿಯಮವಿದೆ. ಇಷ್ಟು ಔನ್ಸು ಬೇಳೆ ಇಷ್ಟು ಔನ್ಸು ತರಕಾರಿ. ಸರ್ಕಾರದವರು ಅದರಂತೆ ನಿಯಮಿಸಿದ್ದಾರೆ; ಅದೇ ಲೆಕ್ಕದಲ್ಲಿ ಕಂಟ್ರಾಕ್ಟರ್ ಟೆಂಡರ್ ಕೊಟ್ಟು ಸಾಮಾನು

ಆ ರೀತಿ ಕೊಟ್ಟುದಕ್ಕೆ ಸೆರೆಮನೆಯ ಅಧಿಕಾರಿಗಳಿಂದ ಒಪ್ಪಿಗೆ ಪಡೆದು ಆ ತಿಂಗಳಿನಲ್ಲಿ ಯಾವುದಾದರೂ ಪದಾರ್ಥದ ಬೆಲೆ ಏರಿದ್ದರೆ ಅದನ್ನು ಸೇರಿಸಿ ಸರಿಯಾಗಿ ಬಿಲ್‌ಮಾಡಿ ತನಗೆ ಬರಬೇಕಾದ ಹಣ ತೆಗೆದುಕೊಳ್ಳುತ್ತಾನೆ. ಅಲ್ಲಿಗೆ ಎಲ್ಲರ ಕೆಲಸವೂ ಮುಗಿಯಿತು. ಆದರೆ ಸಾಮಾನು ಮಾತ್ರ ಸರಿಯಾಗಿ ಸೆರೆಯಾಳುಗಳಿಗೆ ತಲಪುವುದಿಲ್ಲ. ತರ್ಕಾರಿಯಲ್ಲಿ ಮೂಲಂಗಿ ಎಂದು ಇರುವ ದಿನ ಮೂಲಂಗಿ ಮೇಲಿನ ಸೊಪ್ಪು 4-5 ಸಾರಿನಲ್ಲಿ ತೇಲಾಡುತ್ತಿರುತ್ತದೆ. ಇನ್ನು ಕೆಲವು ದಿನ ಬರಿಯ ಹಸಿಯ ಹುಲ್ಲು ತೇಲಾಡುತ್ತಿರುತ್ತದೆ. ಇಷ್ಟಾದರೂ ಸೆರೆಮನೆಯ ಅಧಿಕಾರಿಗಳು ತಮ್ಮ ಭಾಗದ ಕಾನೂನನ್ನು ಚಲಾಯಿಸುವುದರಲ್ಲಿ ಬಹು ಖಂಡಿತ. ಅನ್ನ ಸಾರು ಎರಡರ ಹೊರತು ಮೂರನೆಯದು ಅಡಿಗೆಯಲ್ಲಿ ಇರಕೂಡದು. ಅಥವ ಅನ್ನ ಹುಳಿ, ಅಂತು ಎರಡೇ ಪದಾರ್ಥಗಳು. ಇದು ಸೆರೆಮನೆಯಲ್ಲಿ ಕಠಿಣ ಶಿಕ್ಷೆ ಹೊಂದಿದವರಿಗೆ ನಿಯಮ. ಯಾವುದಾದರೂ ಒಂದು ದಿನ ತರ್ಕಾರಿ ಉಳಿಸಿ ಸಾರು, ಪಲ್ಯ ಮಾಡಿದರೆ, ಅಧಿಕಾರಿಗಳು ಬಂದು ಆ ಪಲ್ಯವನ್ನು ಸಾರಿಗೇ ಹಾಕಿಸಿಬಿಡುತ್ತಾರೆ. ಒಂದು ದಿನ ಸೀಮಯ್ಯನವರು ಹುಳಿಗೆ ಕೊಟ್ಟಿದ್ದ ಆಲೂಗೆಡ್ಡೆಯನ್ನು ಬೇರೆ ಪಲ್ಯಮಾಡಿಸಿ ಸಾರು ಮಾಡಿದ್ದರು. ಸೆರೆಯಾಳುಗಳಿಗೆಲ್ಲಾ ಆ ದಿನ ಬಹಳ ಖುಷಿ. ಸಾರು, ಪಲ್ಯ ಎಂದು. ಊಟವಾಗುವುದಕ್ಕೆ ಮುಂಚೆ ಜೈಲಧಿಕಾರಿ ಬಂದು ಪಲ್ಯವನ್ನು ಸಾರಿಗೆ ಹಾಕಿಸಿಬಿಟ್ಟರು. ಹಾಗೆಯೇ ಮತ್ತೊಂದು ದಿನ, ಸೆರೆಯಾಳುಗಳ ಅನ್ನದಲ್ಲಿ ಸ್ವಲ್ಪ ಭಾಗಕ್ಕೆ ಖಾರದ ಪುಡಿ ಹಾಕಿ ಚಿತ್ರಾನ್ನದಂತೆ ಕಲಿಸಿಟ್ಟಿದ್ದರು. ಅದನ್ನೂ ಅಧಿಕಾರಿಗಳು ಬಿಳಿಯ ಅನ್ನದ ಜತೆಗೆ ಬೆರಸಿಸಿದರು.

ಅಡಿಗೆಮನೆಯ ವ್ಯವಸ್ಥೆಯಲ್ಲಿ ಸ್ವಲ್ಪ ಬುದ್ಧಿವಂತರಾದವರು ಇದ್ದರೆ ಸೆರಮನೆಯ ಅಧಿಕಾರಿಗಳು ಹೆದರುತ್ತಾರೆ. ಕಾನೂನಿನಂತೆ ಒಬ್ಬ ಕಠಿಣ ಶಿಕ್ಷೆಯುವನಿಗೆ ಇಷ್ಟು ಬೇಳೆಕಾಳು ಬರಬೇಕು. ಎಲ್ಲರಿಂದ ಇಷ್ಟಾಯಿತು ಕೊಡಿ ಎಂದರೆ '' ಸೆರೆಮನೆಯ ಅಧಿಕಾರಿಗಳಿಗೆ ಕೋಪಬರುತ್ತೆ. ಕ್ರಿಮಿನಲ್ ಖೈದಿಗಳಿಂದ ಅವರಿಗೆ ಈ ಬಗೆಯ ಕೇಳಿಕೆ ಬರುವುದೇ ಇಲ್ಲ. ಬಂದರೇ ಅಲ್ಲೇ ಅವನ ಬೆನ್ನಿನ ಮೇಲೆ ಒಂದು ಇಡಿಯುತ್ತಾರೆ. ಗುಟ್ಟಾಗಿ ಎರಡು ಬೀಡಿ ಕೊಡುತ್ತಾರೆ. ಸೆಂಟ್ರಲ್ ಜೈಲಿನಲ್ಲಿ ಬೀಡಿಗೆ ಪ್ರಾಣಬಿಡು

ವವರು ಇದ್ದಾರೆ. ಆದರೆ ಕಾಂಗ್ರೆಸ್ ಖೈದಿ ಸೀಮಯ್ಯನವರು ಬೀಡಿ ಯಿಂದ ಸಮಾಧಾನ ಹೊಂದುವರೆ? ಅಧಿಕಾರಿಗಳು ಕೊಡುತ್ತಿದ್ದ ಸಾಮಾ ನುಗಳಿಂದ ಒಬ್ಬೊಬ್ಬರಿಗೆ ಒಂದು ಹೊತ್ತಿಗೆ ಒಂದುವರೆ ಸೌಟು ಸಾರು ಚೆನ್ನಾಗಿ ಮಾಡಲು ಸಾಧ್ಯವಾಗುತ್ತಿದ್ದಿತು. ಆ ಸಾರಿನ ವಿಚಾರ ಸಾವಿ ರಾರು ಜನಕ್ಕೂ ಸಾವಿರಾರು ಅಭಿಪ್ರಾಯವೇ. ಸಾರು ಒಂದುವರೆ ಸೌಟು ಸಾಲದು. ಎರಡು ಸೌಟು ಬೇಕು ಎಂದು ಒಂದು ಮತ. ಎರಡು ಸೌಟು ಆದರೆ ನೀರಾಗುತ್ತೆ. ಇಷ್ಟು ಚೆನ್ನಾಗುವುದಿಲ್ಲ. ಹೀಗೇ ಇರಲಿ ಎಂದು ಮತ್ತೆ ಕೆಲವರ ಮತ. ನೀರಾದರೆ ಆಗಲಿ ಎರಡು ಸೌಟು ಬೇಕು ಎಂದು ಕೆಲವರು. ಆದರೆ ಹೀಗೆಯೇ ಚೆನ್ನಾಗಿ ರುಚಿಯಾಗಿ ಇರಬೇಕು ಎರಡು ಸೌಟು ಬೇಕು ಎಂಬುದಕ್ಕೆ ಎಲ್ಲರೂ ಒಮ್ಮತದಿಂದ ಒಪ್ಪುವವರಾಗಿ ದ್ದರು. ಅಭಿಪ್ರಾಯಗಳು ಹೀಗಿದ್ದರೂ ಬಡಿಸುವಾಗ ಪ್ರತಿಯೊಬ್ಬರೂ ಎರಡು ಸೌಟನ್ನು ಹೊಡೆಯಲು ಸಾಹಸಮಾಡುತ್ತಿದ್ದರು. "ಬಡಿಸು ವವರು ತಮಗೆ ದೊರೆತ ಅಪ್ಪಣೆ, ಶಿಸ್ತಿನಂತೆ ಬಡಿಸುತ್ತಾರೆ" ಎಂಬುದನ್ನು ಮರೆತು ಅವರ ಮೇಲೆ ಬೀಳುತ್ತಿದ್ದರು. "ನನಗೆ ಒಬ್ಬನಿಗೆ ಅರ್ಧ ಸೌಟು ಹೆಚ್ಚಾಗಿ ಹಾಕಿದರೆ ನಿನ್ನ ಗಂಟು ಹೋಗುತ್ತೊ" ಎಂದು ಗರ್ಜಿ ಸುತ್ತಿದ್ದರು. ಸೀಮಯ್ಯನವರ ಬೆನ್ನು ವಿಶಾಲವಾಗಿದೆ. ಚರ್ಮ ಒರ ಟಾಗಿದೆ. ತಲೆಯೂ ದಪ್ಪವಾಗಿದೆ. ಅವರು ಇದನ್ನೆಲ್ಲಾ ಹಚ್ಚಿಕೊಳ್ಳು ತ್ತಿರಲಿಲ್ಲ ಒಬ್ಬೊಬ್ಬರಿಗೆ ಅರ್ಧ ಸೌಟು ಹುಳಿ ಹೆಚ್ಚಾದರೆ ಇನ್ನು ಸಾವಿರ ಸೌಟು ಈಗ ಹೆಚ್ಚಾಗಿಬೇಕು. ಎಲ್ಲಿಂದ ತರಲಿ" ಎನ್ನುತ್ತಿದ್ದರು. ಆದರೂ ಬೇಜಾರಾಗುತ್ತಿದ್ದಿತು.

ಸ್ಥಳ ಮಹಾತ್ಮ್ಯೆಯಿಂದ ಸೆರೆಮನೆಯಲ್ಲಿ ಪ್ರತಿಯೊಂದು ಪದಾರ್ಥ ವೂ ಬೆಲೆಯಾದುದಾಗಿ ಅಪರೂಪವಾಗಿ ಕಾಣುತ್ತದೆ. ಕೇಂದ್ರ ಕಾರಾ ಗಾರದಲ್ಲಿ ಮುಖ್ಯ ಕಳವು ಉಪ್ಪು. ಅನ್ನ ಸಾರು, ಹಿಟ್ಟು ಸಾರು ತಿಂದು ಸೆರೆಯಾಳುಗಳಿಗೆ ಬಾಯಿ ಕೆಟ್ಟಿರುತ್ತದೆ. ಅನೇಕ ದಿನ ಸಾರಿಗೆ ಉಪ್ಪು ಸಾಕಾಗಿರುವುದಿಲ್ಲ. ಕೆಲವರಿಗೆ ಸ್ವಭಾವದಿಂದಲೇ ಉಪ್ಪು ಸ್ವಲ್ಪ ಹೆಚ್ಚಾಗಿ ಬೇಕಾಗಿರುತ್ತದೆ. ಸೀಮಯ್ಯನವರು ಯಾರನ್ನೂ ಅಡಿಗೆಮನೆಗೆ ಸೇರಿಸು ತ್ತಿರಲಿಲ್ಲ. ಸೇರಿಸಿದರೂ ಅವರು ಹೋಗುವಾಗ ಎಚ್ಚರಿಕೆಯಿಂದ ಕಾಯು ತ್ತಿದ್ದರು. ತರಕಾರಿ ಬರುವ ದಿನ ಈರುಳ್ಳಿಯ ನಿಗಾ ಬಲು ಹೆಚ್ಚು.

ಕಂಟ್ರಾಕ್ಟರು ಅಗ್ಗವಾಗಿ ಸಿಕ್ಕುವ ಸಣ್ಣ ಈರುಳ್ಳಿಯನ್ನೇ ಹುಡುಕಿ ತರುತ್ತಾನೆ. ಅದನ್ನು ಸುಲಿಯಬೇಕಾದರೆ ನೂರಾರು ಜನವಾದರೂ ಒಟ್ಟಿಗೆ 3-4 ಗಂಟೆ ಕುಳಿತುಕೊಳ್ಳಬೇಕು. ಆದರೆ ರಾಜಕೀಯ ಬಂದಿಗಳೂ ಕಠಿಣ ಸೆರೆಯಲ್ಲಿರುವಾಗ ಈರುಳ್ಳಿ ಕದಿಯುತ್ತಾರೆ. ಸೀಮಯ್ಯನವರ ಮಾತಿನಲ್ಲಿ ಒಬ್ಬೊಬ್ಬರು ಒಂದೊಂದು ಈರುಳ್ಳಿ ಕದ್ದರೆ ಸಾವಿರ ಗಡ್ಡೆ ಕಡಿಮೆಯಾಯಿತು. ರಾಜ ಬಂದಿಗಳು ಸಾಲಾಗಿ ಕುಳಿತು ಈರುಳ್ಳಿ ಬಿಡಿಸುತ್ತಿರುವಾಗ ಸೀಮಯ್ಯನವರು ಗಸ್ತು ಹೊಡೆಯುತ್ತಿದ್ದರು. ಆದರೂ ಕೆಲವರು ಒಂದೊಂದು ಎರಡೆರಡು ಸಂಗ್ರಹಿಸಿಯೇ ಬಿಡುತ್ತಿದ್ದರು.

ಆಗ ಜೈಲಿನಲ್ಲಿ ರಾತ್ರಿ ರಾತ್ರಿ ಅನ್ನಮಾಡಿ ಬೆಳಗಿನ ಆರುಗಂಟೆ ವೇಳೆಗೆ ಒಂದು ತೊಟ್ಟಿಲಿನಲ್ಲಿ ಅನ್ನವನ್ನೂ ದೊಡ್ಡ ಕೊಳದಪ್ಪಲೆಯಲ್ಲಿ ಸಾರನ್ನೂ ತೆಗೆದುಕೊಂಡು ಬಂದು ಪ್ರತಿ ಬ್ಯಾರಕ್‌ನಲ್ಲಿಯೂ ಬಡಿಸುತ್ತಿದ್ದರು. ತೊಟ್ಟಿಲಿನ ಆಚೆ ಈಚೆ ಹಗ್ಗಹಾಕಿ ಮೇಲಕ್ಕೆ ಕಟ್ಟಿ ಆ ಹಗ್ಗದ ಸಂದಿಯಲ್ಲಿ ಗಳು ತೂರಿಸಿ ಎರಡು ಕಡೆಯೂ ಒಬ್ಬೊಬ್ಬರು ಎತ್ತಿಕೊಂಡು ಹೊರಡುತ್ತಾರೆ. ಅನ್ನದ ತೊಟ್ಟಿಲಿನ ಮೇಲೆ ಒಂದು ತಕ್ಕಡಿ ಮತ್ತು ಅಳತೆ ಕಲ್ಲು. ಸಾರಿನ ಕೊಳದಪ್ಪಲೆಯಲ್ಲಿ ಅಳತೆ ಸೌಟು. ಈ ಮೆರವಣಿಗೆಗೆ ಖೈದಿಗಳ ಮಾತಿನಲ್ಲಿ ಫೈಲು ಎಂದು ಹೆಸರು. ರಾಜಕೀಯ ಬಂದಿಗಳು ಬಂದ ಕೆಲವು ದಿನಗಳ ನಂತರ ಒಂದು ದಿನ ಸೆರೆಮನೆಯ ಅಧಿಕಾರಿಗಳಿಗೂ ಅವರಿಗೂ ಸಂಭಾಷಣೆ ನಡೆದು, ಮಣ್ಣಿನ ಮಡಕೆಗೆ ಬದಲಾಗಿ ಅಲ್ಯುಮಿನಿಯಂ ಕೊಡಿ ಎಂದು ಕೇಳಿದರು. ಅಧಿಕಾರಿಗಳು ಮೊದಲು ಮೊದಲು ಕಾನೂನು ಇಲ್ಲ ಎಂದರು. ಅನಂತರ ಮಣ್ಣಿನ ಮಡಕೆಗಳಿಗೆ ಆಗಿರುವ ಖರ್ಚನ್ನು ಲೆಕ್ಕಾಚಾರ ಹಾಕಿದುದರಲ್ಲಿ ಅದು ಅಲ್ಯುಮಿನಿಮ್‌ನ ನಾಲ್ಕರಷ್ಟು ಆಗಿರುವುದು ಗೊತ್ತಾಯಿತು. ಅನಂತರ ಅವರು ಅಲ್ಯುಮಿನಿಯಂ ತಟ್ಟೆ ಚೊಂಬುಗಳನ್ನು ಒದಗಿಸಿದರು. ಸಾಮಾನ್ಯವಾಗಿ ಒಂದು ಸಲ ರಾಜಕೀಯ ಖೈದಿಗಳು ಬಂದು ಒದಗಿಸುವ ಸೌಕರ್ಯಗಳು ಅನಂತರ ಕ್ರಿಮಿನಲ್ ಖೈದಿಗಳಿಗೆ ಆಗುತ್ತವೆ. ಈಚೆಗೆ ಎಲ್ಲಾ ಖೈದಿಗಳಿಗೂ ರಾಜ್ಯದ ಎಲ್ಲಾ ಭಾಗದಲ್ಲಿಯೂ ಅಲ್ಯುಮಿನಿಯಂ ತಟ್ಟೆ ಚೊಂಬುಗಳನ್ನೇ ಕೊಟ್ಟಿದ್ದಾರೆ. 'ಫೈಲು' ಬಂದ ಕೂಡಲೇ ಎಲ್ಲಾ ಬಂದಿಗಳೂ ತಮ್ಮ ತಮ್ಮ ಭಾಗದ ಅನ್ನ ಸಾರನ್ನು ಬಿಡಿಸಿಕೊಂಡು ಊಟಮಾಡಿಬಿಡು

ತ್ತಾರೆ. ಊಟಮಾಡಿ ಬಿಡಬೇಕು. ಅಥವ ಚೆಲ್ಲಿಬಿಡಬೇಕು. ಆಹಾರ ವನ್ನು 'ಡಿಪಾಜಿಟ್' ಮಾಡಿಟ್ಟುಕೊಂಡಿದ್ದು ಆಮೇಲೆ ತಿನ್ನಕೂಡದು. ಜೈಲ್ ಕಾನೂನಿನಲ್ಲಿ ಅದೂ ತಪ್ಪು. ಅದಕ್ಕೂ ಶಿಕ್ಷೆ. ಜೈಲಿಗೆ ಹೋದ ಮೇಲೆ ಅಲ್ಲಿಯೂ ಶಿಕ್ಷೆ ತಪ್ಪಿದುದಲ್ಲ.

ಕ್ರಿಮಿನಲ್ ಖೈದಿಗಳೇನೋ ಬೆಳಗ್ಗೆ 6 ಗಂಟೆಗೆ ಊಟಮಾಡಿಬಿಡು ತ್ತಿದ್ದರು. ಆದರೆ ರಾಜಕೀಯ ಬಂದಿಗಳೋ. ಇವರಿಗೆ ಆ ಹೊತ್ತಿಗೆ ಮುಂಚೆ ಆ ಅನ್ನ ಸಾರು ಸೇರುತ್ತದೆಯೆ? ಉಡುಪಿ ಹೋಟಲುಗಳ ಲ್ಲಿಯೂ ಬೊಂಬಾಯಿ ಮೈಸೂರು ಆನಂದಭವನಗಳಲ್ಲಿಯೂ ಡಜನ್‌ಗಟ್ಲೆ ದೋಸೆ ಇಡ್ಲಿ ನುಂಗುವವರು ಗಡಿಗೆ ಗಡಿಗೆ ಕಾಫಿ ಸೇದುವವರು. ಪಾಪ! ಅವರು ಸೇರಿದಷ್ಟನ್ನು ತಿಂದು ಉಳಿದುದನ್ನು ಕ್ರಿಮಿನಲ್‌ಗಳಿಗೆ ಕೊಟ್ಟು ಬಿಡುತ್ತಿದ್ದರು. ರಾತ್ರಿ ರಾತ್ರಿ ಅಡಿಗೆ ಮಾಡುತ್ತಿದ್ದ ಅಡಿಗೆ ಮನೆಯವರಿ ಗಂತೂ ಸೇರುತ್ತಲೇ ಇರಲಿಲ್ಲ. ರಾಜಕೀಯ ಬಂದಿಗಳು ಬೆಳಿಗ್ಗೆ 6 ಗಂಟೆಗೆ ಊಟಮಾಡಿದ ಕೂಡಲೆ ಕೆಲಸಕ್ಕೆ ಹೋಗಬೇಕಾಗಿದ್ದಿತು. ಕಲ್ಯಾಣ ನಗರಿಯ ಜೈಲಿನಲ್ಲಿರುವ ಎಲ್ಲಾ ಬಂದಿಗಳಿಗೂ ಕೆಲಸಮಾಡಲು ಅಲ್ಲಿ ಸ್ಥಳವಿಲ್ಲ. ಆದುದರಿಂದ ಮುಕ್ಕಾಲು ಜನ ಕ್ರಿಮಿನಲ್ ಖೈದಿಗಳು ಕೆಲಸವಿಲ್ಲದೆಲೆ ಇರುತ್ತಾರೆ. ಒಂದೊಂದು ಸಲ ಹೊರಗೆ ಹೋಗಿ ಜೈಲು ಅಧಿಕಾರಿಗಳಿಗೆ ಇಷ್ಟ ಬಂದ ಯಾವುದಾದರೂ ದೊಡ್ಡ ಮನುಷ್ಯರ ಕಾಂ ಪೌಂಡನ್ನು ಅಗೆದು ಪರಿಶುದ್ಧಮಾಡಿ ಬರುತ್ತಾರೆ. ಆದರೆ 1939 ರಲ್ಲಿ ರಾಜಕೀಯ ಬಂದಿಗಳ ಪ್ರಶ್ನೆ ಹಾಗಾಗಲಿಲ್ಲ. ಅವರು ದೇಶದ ಮುಖ್ಯ ಶತ್ರುಗಳಾದುದರಿಂದ ಸೆರೆಮನೆಯ ಅಧಿಕಾರಿಗಳು ಅವರಿಂದ ಕೆಲಸ ತೆಗೆದುಕೊಂಡೇ ತೆಗೆದುಕೊಂಡರು. ಕಾಂಗ್ರೆಸ್ ಅಧ್ಯಕ್ಷರ ಕೈಯಿಂದಲೂ ಇಪ್ಪತ್ತೈದು ಸೇರು ರಾಗಿ ಬೀಸಿಸಿಯೇ ಬೀಸಿಸಿದರು. ತಾವು ಮಾಡಿದ ಅವಿವೇಕವೆಲ್ಲಾ ಅದರಿಂದಲೇ ಸರಿಯಾಯಿತೆಂದು ಅಧಿಕಾರಿಗಳು ಭಾವಿ ಸಿದರು. ಕೇಂದ್ರ ಕಾರಾಗೃಹದ ರಾಗಿ ಬೀಸುವ ಮನೆ, ದುಂಡಾಗಿ ಸುತ್ತಾ ರಾಗಿ ಕಲ್ಲುಗಳನ್ನು ಹೂಳಿದೆ. ಆ ಕಲ್ಲುಗಳನ್ನು, ರಾಗಿ ಅದರಿಂದ ಹಿಟ್ಟಾಗ ಬೇಕೆಂಬ ಉದ್ದೇಶಕ್ಕಿಂತ ಹೆಚ್ಚಾಗಿ, ಅದನ್ನು ಬೀಸುವವರಿಗೆ ಅದರಿಂದ ಶಿಕ್ಷೆಯಾಗಬೇಕೆಂಬ ಉದ್ದೇಶದಿಂದಲೇ ಹೂಳಿದೆ. ಕಲ್ಲುಗಳು ಬಹಳ ದಪ್ಪ. ಗೂಟದಲ್ಲಿ ಮುಳ್ಳಿದೆ. ಇಪ್ಪತ್ತೈದು ಸೇರು ರಾಗಿ ಬೀಸುವ ವೇಳೆಗೆ

ಕೈಯ್ಯಲ್ಲಿ ರಕ್ತ ಬರುತ್ತದೆ. ರಾಗಿ ಮನೆಯ ಮಧ್ಯದಲ್ಲಿ ಒಬ್ಬ ವಾರ್ಡರ್ ಕುಳಿತಿರುತ್ತಾನೆ. ರಾಜಕೀಯ ಬಂದಿಗಳು ರಾಗಿ ಬೀಸುತ್ತಿರುವಾಗ ಸೂಪರಿಂಟೆಂಡೆಂಟ್‌ರಿಂದ ಹಿಡಿದು ವಾರ್ಡರ್‌ವರೆಗೆ ಗಳಿಗೆಗೆ ಒಂದುಸಲ ಅಧಿಕಾರಿಗಳು ಅಲ್ಲಿ ಬರುತ್ತಿರುತ್ತಾರೆ. ಉಳಿದ ಸಮಯದಲ್ಲಿ ಅವರು ಅಲ್ಲಿ ಬರುವುದೇ ಇಲ್ಲ. ಬೀಸಿದ ರಾಗಿಯನ್ನು ಒಂದರಿ ಆಡಿ ಬಂದ ತರಿಯನ್ನು ಮತ್ತೆ ಬೀಸಬೇಕು. ಅನಂತರ ಅದನ್ನು ಎತ್ತಿಕೊಂಡು ಹೋಗಿ ಉಗ್ರಾಣದಲ್ಲಿ ತುಂಬಬೇಕು. ಹನ್ನೆರಡು ಗಂಟೆ ಒಂದು ಗಂಟೆ ಹೊತ್ತಿಗೆ ಸುಮಾರು ಅರ್ಧ ಗಂಟೆ ವಿರಾಮ. ಆ ವಿರಾಮದಲ್ಲಿ ಕೆಲವು ರಾಜಕೀಯ ಬಂದಿಗಳು ಬೆಳಗ್ಗೆ ಅಲ್ಯುಮಿನಿಯಂ ಚೆಂಬಿನಲ್ಲಿ ಹಾಕಿ ಇಟ್ಟುಕೊಂಡಿದ್ದ ಅನ್ನ ಸಾರನ್ನು ತಿನ್ನುತ್ತಿದ್ದರು. ಅಷ್ಟು ಹೊತ್ತು ಅಲ್ಯುಮಿನಂನಲ್ಲಿ ಇದ್ದುದರಿಂದ ಅದಕ್ಕೆ ಒಂದು ತರಹ ವಾಸನೆ ಕಪ್ಪುಬಣ್ಣ ಬಂದಿರುತ್ತಿದ್ದಿತು. ಆ ಅರ್ಧ ಗಂಟೆಯನಂತರ 4½ ಗಂಟೆವರೆಗೆ ಮತ್ತೆ ಬೀಸಿ, ಅನಂತರ ಸ್ನಾನಮಾಡುವ ವೇಳೆಗೆ "ಫೈಲು" ಊಟ ಬರುತ್ತಿದ್ದಿತು. ಆರುಗಂಟೆಗೆ ಬ್ಯಾರಕ್‌ಗಳಲ್ಲಿ ಎಲ್ಲರನ್ನೂ ಬೀಗ ಹಾಕುತ್ತಿದ್ದರು.

ಆಗ ಕೇಂದ್ರ ಕಾರಾಗೃಹದಲ್ಲಿದ್ದ ಬ್ಯಾರಕ್‌ಗಳು ಸಾಕಾಗುತ್ತಿರಲಿಲ್ಲ. ಕಲ್ಯಾಣನಗರದ ಹುಚ್ಚರ ಆಸ್ಪತ್ರೆಯನ್ನು ಕೆಡವಿದಾಗ ಅದರ ಕಿಟಕಿ ಹೆಂಚುಗಳನ್ನು ತಂದು ಜೈಲಿಗೆ ಹಾಕಿದರು. ಅಲ್ಲಿ ರಾಜಬಂದಿಗಳಿಂದಲೇ ಇಟ್ಟಿಗೆ ಹೊರಿಸಿ ಕೆಲಸಮಾಡಿಸಿ ದೊಡ್ಡ ದೊಡ್ಡವಾದ ನಾಲ್ಕು ಬ್ಯಾರಕ್‌ಗಳನ್ನು ಕಟ್ಟಿದರು. ಹೀಗೆ ಹುಚ್ಚಾಸ್ಪತ್ರೆಯನ್ನು ಜೈಲಿಗೆ ವರ್ಗಾಯಿಸಿದುದು ವಿಧಿಯ ಒಂದು ವಿಕಟ ನರ್ತನವಾಗಿಯೇ ತೋರುತ್ತಿದ್ದಿತು. ಬೇಸಿಗೆ ಕಾಲದಲ್ಲಿ ಸಾಧಾರಣವಾಗಿ ಸಂಧ್ಯಾಕಾಲ ಆರರ ಮೇಲೂ, ಮಾಗಿ ಛಳಿಗಾಲದಲ್ಲಿ 6ರರ ಒಳಗೂ ಲಾಕ್‌ಅಪ್ ಮಾಡಿಬಿಡುತ್ತಾರೆ. ಹೀಗೆ ಮೊದಲ ದಿನದ ಸಾಯಂಕಾಲ 6 ರಿಂದ ಮಾರನೆ ಬೆಳಿಗ್ಗೆ 6 ಗಂಟೆವರೆಗೆ ಬಂದಿಗಳೆಲ್ಲಾ ಲಾಕ್‌ಅಪ್‌ನಲ್ಲಿ ಇರಬೇಕು. ವಾರ್ಡರುಗಳು ಬೀಗ ಹಾಕಿ ತಾವು ಎಲ್ಲಿಯೋ ಹೋಗಿ ಬಿದ್ದುಕೊಳ್ಳುತ್ತಾರೆ.

ಬೀಗ ಹಾಕುವುದಕ್ಕೆ ಮುಂಚೆ ವಾರ್ಡರು (ಕಾವಲುಗಾರ) ಪ್ರತಿ ಬ್ಯಾರಕ್‌ಗೂ ಬಂದು ಅಲ್ಲಿರುವ ಬಂದಿಗಳನ್ನು ಲೆಕ್ಕಹಾಕಿ ಇಷ್ಟು ಜನ ಇದ್ದಾರೆ ಎಂದು "ಜೈಲರ್" ಗೆ ಹೇಳಿ ಬೀಗ ಹಾಕಬೇಕು. ಅನಂತರ

ಆ ಬೀಗದ ಕೈಯ್ಯನ್ನು ತೆಗೆದುಕೊಂಡು ಹೋಗಿ ಡೆಪುಟಿ ಜೈಲರಲ್ಲಿ ಕೊಡು ತ್ತಾನೆ. ಈ ಬಂದಿಗಳನ್ನು ಲೆಕ್ಕಮಾಡುವುದೇ 'ವಾರ್ಡರಿಗೆ' ದೊಡ್ಡ ಕಷ್ಟ. ಸಾಧಾರಣವಾಗಿ ಜೈಲುವಾರ್ಡರುಗಳಿಗೆ ಓದುವುದು ಬರೆಯು ವುದು ತಿಳಿದಿರುವುದಿಲ್ಲ. ಡೆಪುಟಿ ಜೈಲರೇ ಸ್ವಲ್ಪ ಮಬ್ಬು ಮಬ್ಬಾಗಿ ಬರೆ ಯುತ್ತಾನೆ. ಜೈಲು ವಾರ್ಡರಿಗೆ, ಪೋಲೀಸಿನವರಿಗೆ ಕೊಡುವಂತೆ ಟ್ರೇ ನಿಂಗ್ ಮುಂತಾದುವನ್ನೂ ಕೊಡುವುದಿಲ್ಲ. ಸಿಕ್ಕಿದವರನ್ನು ಸೇರಿಸಿ ಕೊಂಡುಬಿಡುತ್ತಾರೆ. ಇವರಿಗೆ ಕೊಡುವ ಸಂಬಳ 16. ಮನಸ್ಸು ಬಂದಾಗ ಅವರನ್ನು ಕಿತ್ತುಹಾಕಬಹುದು. ಇಂತಹ ಹುದ್ದೆಗೆ ಎಂತಹ ಜನ ಬರ ಬಹುದು? ಬಂದಿಗಳನ್ನು ಲೆಕ್ಕಮಾಡಿ ಇಷ್ಟು ಜನ ಇದ್ದಾರೆ ಎಂದು ಡೆಪುಟಿ ಜೈಲರಿಗೆ ಹೇಳಬೇಕಾದರೆ ವಾರ್ಡರುಗಳಿಗೆ 25 ಕ್ಕಿಂತ ಹೆಚ್ಚಾಗಿ ಲೆಕ್ಕಮಾಡಲು ತಿಳಿಯುತ್ತಿರಲಿಲ್ಲ. ಒಂದೊಂದು ಬ್ಯಾರಕ್‌ಗಳಲ್ಲಿ 60-70 ಜನ ಇರುತ್ತಿದ್ದರು. ನೆಯ್ಗೆ ಬ್ಯಾರಕ್‌ನಲ್ಲಿ ವೈದ್ಯಶಾಲೆಗಾಗಿ ಮಾಡಿದ್ದ ಬ್ಯಾರಕ್‌ನಲ್ಲಿ, ಚಳುವಳಿಯ ಕಾಲದಲ್ಲಿ ರಾಜಕೀಯ ಬಂದಿಗಳನ್ನು ತುಂಬಿ ದ್ದರು; 250 ಜನ ಇರುತ್ತಿದ್ದರು. ಬಂದಿಗಳು ವಿನೋದವಾಗಿ ಒಬ್ಬರ ಮಗ್ಗುಲಲ್ಲಿ ಒಬ್ಬರು ಕುಳಿತು ಮಾತನಾಡುತ್ತಾ ಇರುವಾಗ ತಮ್ಮ ಹಾಸಿಗೆ ಮೇಲೆ (ಗೋಣಿತಾಟು ಕಂಬಳಿ ಇಷ್ಟೆ. ಬೇರೆ ಹಾಸಿಗೆಯಿಲ್ಲ) ಮನುಷ್ಯನ ಆಕಾರದಲ್ಲಿ ಸುತ್ತಿ ಇಟ್ಟಿರುತ್ತಿದ್ದರು. ವಾರ್ಡರ್ ಇಪ್ಪತ್ತೈದರವರೆಗೆ ಲೆಕ್ಕಾಮಾಡಿ, ಅನಂತರ ಎರಡನೆಯ ಇಪ್ಪತ್ತೈದು ಮೂರನೆಯ ಇಪ್ಪ ತ್ತೈದರಲ್ಲಿ ಹನ್ನೊಂದು ಎಂದುಕೊಂಡು ಬೀಗ ಹಾಕಿಕೊಂಡು ಡೆಪುಟಿ ಜೈಲರಲ್ಲಿ ಹೋಗಿ ಹೇಳುತ್ತಿದ್ದನು. ಎಲ್ಲಾ ಬ್ಯಾರಕ್ ವಾರ್ಡರುಗಳೂ ಹೀಗೆಯೇ ಬಂದು ಹೇಳುತ್ತಿದ್ದರು. ಎಲ್ಲರೂ ಇಂತಹ ದಿಗ್ಧಂತಿಗಳೇ. ಪ್ರತಿಯೊಬ್ಬರಿಗೂ ಎರಡು ಇಪ್ಪತ್ತೈದರ ಮೇಲೆ ಹದಿನಾಲ್ಕು ಮೂರು ಇಪ್ಪತ್ತೈದರ ಮೇಲೆ 11 ಹೀಗೆ ಹೇಳುವುದು ಮಾತ್ರ ಬರುತ್ತಿದ್ದಿತು.

ಹೀಗೆ ಕ್ರಿಮಿನಲ್ ಖೈದಿಗಳು ರಾಜಕೀಯ ಖೈದಿಗಳು ಸಿವಿಲ್ ಖೈದಿ ಗಳು ಎಲ್ಲರ ಸಂಖೆಯೂ ಸೇರಿ ಮೂರುಸಾವಿರ "ಮೂರುವರೆ ಸಾವಿರ. ಜತೆಗೆ ವಿಚಾರಣೆಯಾಗುತ್ತಿರುವವರು. ಈ ಸಂಖೆಗಳನ್ನೆಲ್ಲಾ ಸರಿಪಡಿಸ ಬೇಕಾದರೆ ಏನಾದರೂ ಆ ವಿದ್ಯಾವಾಚಸ್ಪತಿಗಳಿಗೆ ಸಾಧ್ಯವಾಗುತ್ತಿರಲಿಲ್ಲ. ನೆಯ್ಗೆ ಬ್ಯಾರಕ್‌ನಲ್ಲಿ ಒಬ್ಬ ಬಂದಿ ನೆಯ್ಗೆ ಮಗ್ಗದ ಸಂಜಿಯಲ್ಲಿ ಕುಳಿತು

ಬಿಟ್ಟಿರುತ್ತಿದ್ದನು. ಕೊನೆಯಲ್ಲಿ ಲೆಕ್ಕ ಒಂದು ಕಡಿಮೆ ಬರುತ್ತಿದ್ದಿತು. ಸರಿ ಮುಪ್ಪತ್ತೆರಡು ವಾರ್ಡರುಗಳೂ ಮತ್ತೆ ಬ್ಯಾರಕ್‌ಗಳಲ್ಲಿ ಲೆಕ್ಕಮಾಡಲು ಹೊರಡುತ್ತಿದ್ದರು. ಆಗ ಒಂದು ಹೆಚ್ಚು ಬರುತ್ತಿದ್ದಿತು. ಹೀಗೆ ಅರ್ಧ ರಾತ್ರಿಯವರೆಗೆ ಬೀಗ ಹಾಕಿಯಾದ ಮೇಲೆ ಬಂದಿಗಳೆಲ್ಲ ಮಲಗಿದ ಎಷ್ಟೋ ಹೊತ್ತಿನವರೆಗೆ ಕೂಡಿ ಕಳೆದು ಕೊನೆಗೂ ಲೆಕ್ಕ ಸರಿಹೋಗದೆ ವಾರ್ಡರುಗಳು ಮಲಗಿಕೊಳ್ಳುತ್ತಾರೆ. ಇಂತಹ ಸಂದರ್ಭದಲ್ಲಿ ಧೀರನಾದ ಕ್ರಿಮಿನಲ್ ಖೈದಿ ಯಾವನಾದರೂ ತಪ್ಪಿಸಿಕೊಂಡರೂ ವಾರ್ಡರಿಗೆ ತಿಳಿಯುವುದಿಲ್ಲ. ಇಂತಹ ದಿನವೇ ತಪ್ಪಿಸಿಕೊಂಡ ಎಂಬುದು ಡೆಪುಟಿ ಜೈಲರಿಗೂ ಛೀಪ್ ಜೈಲರಿಗೂ ತಿಳಿಯುವುದಿಲ್ಲ. ತಿಳಿದ ದಿನ ಅವರು, ಅವನು ಯಾವ ದಿನ ತಪ್ಪಿಸಿಕೊಂಡರೆ ತಮಗೆ ಅನುಕೂಲವೋ ಅಂತಹ ರಜಾ ದಿನವನ್ನೋ, ಮೇಲಧಿಕಾರಿಗಳು ಆಕ್ಷೇಪಿಸಿದರೆ—ಜೈಲಿಗೆ ಮೇಲಧಿಕಾರಿಗಳು ಇಲ್ಲ. ಅವರು ಆಕ್ಷೇಪಿಸುವುದೂ ಇಲ್ಲ. ಅದೊಂದು ಮನುಷ್ಯನೂ ದೇವರೂ ಬಹಿಷ್ಕರಿಸಿರುವ ಪ್ರದೇಶ—ಸರಿಯಾಗಿ ಸಬೂಬು ಹೇಳಲು ಅನುಕೂಲವಾಗುವ ದಿನ, ಅವನು ತಪ್ಪಿಸಿಕೊಂಡನೆಂದು ಪ್ರಕಟಿಸುತ್ತಾರೆ.

ಸೆರೆಮನೆಯ ಅಧಿಕಾರಿಗಳ ನಿಜವಾದ ದರ್ಪವನ್ನು ಪ್ರತಿ ಸೋಮವಾರವೂ ನೋಡಬೇಕು. ಸಾಮಾನ್ಯವಾಗಿಯೇ ಜೈಲಿಗೆ ತಾವು ಸರ್ವಾಧಿಕಾರಿಗಳು ಎಂಬ ಭಾವವಿರುವ ಆ ಜನರಿಗೆ, ಸೋಮವಾರ ತಾವು ಪ್ರಪಂಚಕ್ಕೇ ಸರ್ವಾಧಿಕಾರಿ ಎಂಬ ಭಾವ ಉಂಟಾಗುತ್ತದೆ. ಇದಕ್ಕೆ ಸೋಮವಾರದ ಫೈಲು ಎಂದು ಹೆಸರು. ಜೈಲಿನ ವಾರ್ಡರುಗಳೂ, ಡೆಪುಟಿ, ಛೀಫ್ ಜೈಲರುಗಳೂ, ಸೂಪರಿಂಟೆಂಡೆಂಟರೂ ಭಾನುವಾರ ಸಾಯಂಕಾಲವೇ ತಮ್ಮ ಬೆಲ್ಟುಗಳನ್ನೂ ಕತ್ತಿಗಳನ್ನೂ ಚೆನ್ನಾಗಿ ಉಜ್ಜಿ ಹೊಳಪುಮಾಡಿಕೊಳ್ಳುತ್ತಾರೆ. ಹೆಡ್ ವಾರ್ಡರ್ ಮತ್ತು ಛೀಪ್ ವಾರ್ಡರುಗಳ ಕತ್ತಿ ಬಹಳ ಉದ್ದ. ಛೀಪ್ ವಾರ್ಡರು ಕುಳ್ಳನಾದುದರಿಂದ ಕತ್ತಿ ಒರೆಯೊಂದಿಗೆ ನೆಲದ ಮೇಲೆ ಜೋತಾಡುತ್ತದೆ. ಆಗ ಅವನು ಅದನ್ನು ಕೈಯ್ಯಲ್ಲಯೇ ಎತ್ತಿ ಹಿಡಿದುಕೊಂಡು ಹೋಗುತ್ತಾನೆ. ಬೆಲ್ಟಿನಿಂದ ಹೆಗಲಿಗೆ ಕತ್ತಿಯ ಒರೆಯನ್ನು ಕಟ್ಟಿರುವುದು ಅವನಿಗೆ ಪ್ರಯೋಜನವಾಗುವುದಿಲ್ಲ. ಹೆಡ್ ವಾರ್ಡರು ಕತ್ತಿಯ ಒರೆಯನ್ನು ಕಟ್ಟಿಕೊಳ್ಳುವುದು ಸೋಮ

ವಾರ ಮಾತ್ರ. ಅವನಿಗೆ, ಅದನ್ನು ಕಟ್ಟಿಕೊಳ್ಳಲು, ಬಿಚ್ಚಲು ಬರುವುದಿಲ್ಲ. ಒಂದೊಂದು ಸಲ ಉದ್ದವಾದ ಕತ್ತಿ ಕಾಲುಗಳ ಸಂದಿಗೆ ಸಿಕ್ಕಿಕೊಂಡು ಅವನು ಮುಗ್ಗರಿಸಿ ಬೀಳುವುದೂ ಉಂಟು. ಸೋಮವಾರ ಬೆಳಿಗ್ಗೆ ಜೈಲಿನ ಬ್ಯಾಂಡು ಮುಂದೆ, ಅದರ ಹಿಂದೆ ಎಲ್ಲಾ ವಾರ್ಡರುಗಳು; ಅವರ ಹಿಂದೆ ಡೆಪುಟಿ ಜೈಲರ್ ಛೀಫ್ ಜೈಲರ್, ಜೈಲಿನ ಡಾಕ್ಟರು ಜೈಲು ಸೂಪ ರಿಂಟೆಂಡೆಂಟ್ ಎಲ್ಲರೂ ಠೀವಿಯಿಂದ ಹೊರಡುತ್ತಾರೆ. ಖೈದಿಗಳೆಲ್ಲಾ (ರಾಜಕೀಯ ಮತ್ತು ಕ್ರಿಮಿನಲ್) ತಮ್ಮ ತಮ್ಮ ಬಟ್ಟೆಗಳನ್ನೂ ಜೈಲು ಟೋಪಿಯನ್ನು ಹಾಕಿಕೊಂಡು ಸಿದ್ಧರಾಗಿ, ಸಾಲಾಗಿ ನಿಂತಿರಬೇಕು. ಪ್ರತಿಯೊಬ್ಬ ಖೈದಿಯೂ ತನ್ನ ಕತ್ತಿನ ಬಿಲ್ಲೆಯನ್ನು ಜೋಪಾನವಾಗಿ ಕತ್ತಿಗೆ ನೇತುಹಾಕಿಕೊಂಡಿರಬೇಕು. ಈ ಬಿಲ್ಲೆ ಸುಮಾರು ಒಂದುವರೆ ಅಂಗುಲ ಅಗಲ, ಎರಡುವರೆ ಅಂಗುಲ ಉದ್ದ, ಕಾಲು ಅಂಗುಲ ದಪ್ಪ ನಾದ ಮರದ ತುಂಡು. ಅದರಲ್ಲಿ ಖೈದಿಯ ಸಂಖ್ಯೆ ಇವನು ಸೆರೆಗೆ ದಾಖ ಲಾದ ತಾರೀಖು ಬಿಡುಗಡೆಯ ತಾರೀಖು ಇವುಗಳನ್ನು ಗುರುತಿಸಿರು ತ್ತಾರೆ. ಈ ಬಿಲ್ಲೆ ಸೆರೆಯಾಳಿನ ಹತ್ತಿರ ಯಾವಾಗಲೂ ಇರಬೇಕು. ಅಧಿ ಕಾರಿಗಳು ಕೇಳಿದಾಗ ತೋರಿಸಬೇಕು. ಅದನ್ನು ಹಾಳುಮಾಡಿಕೊಂಡರೆ ಅವನಿಗೆ ಶಿಕ್ಷೆ ಕೊಡುತ್ತಾರೆ. ಇದು ರಾಜಕೀಯ ಖೈದಿಗಳಿಗೂ ಅನ್ವಯಿ ಸುತ್ತದೆ. ರಾಜಕೀಯ ಖೈದಿಗಳ ವಿಚಾರದಲ್ಲಿ ಎಲ್ಲಾ ನಿಯಮಗಳನ್ನೂ ಇನ್ನೂ ಹೆಚ್ಚು ಕಠಿಣವಾಗಿಯೇ ಪ್ರಯೋಗಿಸುತ್ತಾರೆ. ಹೀಗೆ ಸಾಲಾಗಿ ನಿಂತುಕೊಂಡಿರುವ ಖೈದಿಗಳ ಮುಂದೆ, ವಾದ್ಯಸಹಿತವಾದ ಸೂಪರಿಂಟೆಂ ಡೆಂಟರ ದರ್ಬಾರು, ಯುದ್ಧದ ಮಟ್ಟಿನ ಗೀತಗಳೊಂದಿಗೆ ಹೋಗುತ್ತದೆ. ಈ ದರ್ಬಾರಿನಲ್ಲಿ ಸಾಧಾರಣವಾಗಿ ಸೆರೆಯಾಳುಗಳು ಸೂಪರಿಂಟೆಂಡೆಂಟ ರಿಗೆ ತಮ್ಮ ಅಹವಾಲುಗಳನ್ನು ಹೇಳಿಕೊಳ್ಳಬಹುದೆಂದು ಕಾನೂನಿದೆ. ಆದರೆ ಅಧಿಕಾರಿಗಳು ಅಹವಾಲನ್ನು ಕೇಳುವುದು ನಿಜವಾದರೂ ಅವರು ಹೆಚ್ಚಾಗಿ, ತಮ್ಮ ಠೀವಿಯನ್ನು ತೋರಿಸುವುದಕ್ಕಾಗಿಯೂ ಹಿಂದಲಿಂದ ಬಂದ ಪದ್ಧತಿಯನ್ನು ಅನುಸರಿಸುವುದಕ್ಕಾಗಿಯೂ ಈ ಮೆರವಣಿಗೆಯನ್ನು ಇಟ್ಟುಕೊಂಡಿರುತ್ತಾರೆ.

ಸೆರೆಯಾಳುಗಳು ಹೇಳುವ ಅಹವಾಲುಗಳನ್ನು ಅಧಿಕಾರಿಗಳು ಅಲ್ಲೇ ಮರೆಯುತ್ತಾರೆ. ಈ ಕಾರಣದಿಂದ ಸೋಮವಾರದ ಫೈಲು

ನಡೆದರೂ ಅಹವಾಲು ಹೇಳಿ ಹೇಳಿ ಬೇಜಾರಾದ ಖೈದಿಗಳು ಮತ್ತೆ ಅಹ ವಾಲು ಹೇಳುವುದಿಲ್ಲ. ಖೈದಿಗಳ ಅಹವಾಲು ಮುಖ್ಯವಾಗಿ ಆಹಾರ ಪ್ರಶ್ನೆಗೆ ಸಂಬಂಧಿಸಿರುತ್ತದೆ. ಆ ಪ್ರಶ್ನೆಯಲ್ಲಿ ಕಂಟ್ರಾಕ್ಟರನಿಗೂ ಜೈಲು ಅಧಿಕಾರಿಗಳಿಗೂ ಮಿತ್ರತ್ವವುಂಟಾಗಿರುವುದರಿಂದ ಖೈದಿಯ ಅಹವಾಲಿಗೆ ಏನೂ ಸಮರ್ಪಕವಾದ ಪ್ರತ್ಯುತ್ತರ ದೊರೆಯುವುದಿಲ್ಲ. ಒಂದು ಸಲ ಸೆಂಟ್ರಲ್ ಜೈಲು ಖೈದಿಗಳಿಗೆ ಕೋಪ ಬಂದು ಒಬ್ಬನು ಡೆಪುಟಿ ಜೈಲರ್ ಮೂಗನ್ನೇ ಕಡಿದುಬಿಟ್ಟ. ಒಬ್ಬ ಖೈದಿ ಹೇಳಿದಂತೆ ಅದು ಕಳ್ಳರ ಪಟ್ಣ. ಈಚೆಗೆ ಸೋಮವಾರದ 'ಫೈಲು' ಹೋಗುವಾಗ, ಅಧಿಕಾರಿಗಳು ಪ್ರತಿ ಯೊಬ್ಬ ಸೆರೆಯಾಳಿನ ಮುಂದೆ ಬಂದಾಗಲೂ, ಹಿಂದೆ ಇಬ್ಬರು ಸೆರೆ ಮನೆಯ ವಾರ್ಡರುಗಳು ಕಾವಲಾಗಿ ಅದೇ ನೇರದಲ್ಲಿ ಬರುತ್ತಿರುತ್ತಾರೆ. ಸೆರೆಯಾಳು ಅಧಿಕಾರಿಯ ಮೇಲೆ ಕೈಎತ್ತಿದರೆ ಕೂಡಲೆ ಅವರು ಹಿಂದ ಲಿಂದ ಖೈದಿಯನ್ನು ಬಡಿಯುತ್ತಾರೆ. ಅನಂತರ ಸೆರೆಮನೆಯ ಶಿಕ್ಷೆಗಳು ನಾಡಾಬೇಡಿ ನಿಲುಬೇಡಿ ಒಂಟಿಸೆಲ್ ಉಪ್ಪು ಹಿಟ್ಟು ಇವೆಲ್ಲಾ ಇದ್ದೇ ಇವೆ.

ಜೈಲು ಖೈದಿಗಳ ಊರು. ಅಲ್ಲಿ ಖೈದಿಗಳದೇ ಅಧಿಕಾರ. ಅವರದೇ ಕಾನೂನು, ಸಾಧಾರಣವಾಗಿ ಅವರ ಇಚ್ಛೆಗೆ ವಿರೋಧವಾಗಿ ಸೆರೆಮನೆಯ ಅಧಿಕಾರಿಗಳು ಹೋಗುವುದಿಲ್ಲ. ಹಾಗೆ ಹೋದರೆ ಡೆಪುಟಿ ಜೈಲರಿಗೆ ಎಚ್ಚರಿಕೆ ಕೊಟ್ಟಂತೆ ಖೈದಿಗಳು ಅಧಿಕಾರಿಗಳಿಗೆ ಎಚ್ಚರಿಕೆ ಕೊಡುತ್ತಾರೆ. ಅಂದಿನಿಂದ ಅಧಿಕಾರಿಗಳು "ಇವರು ಯಾತಕ್ಕೂ ಹೇಸುವವರಲ್ಲ" ಎಂದು ಹೆದರಿಕೊಂಡು ಸುಮ್ಮನಾಗುತ್ತಾರೆ. ಆದರೆ ಗಾಂಧಿ ಅನುಯಾಯಿ ರಾಜಕೀಯ ಖೈದಿಗಳು ಅಹಿಂಸಾವಾದಿಗಳು, ಕ್ರಿಮಿನಲ್ ಖೈದಿಗಳಂತೆ ಡೆಪುಟಿ ಜೈಲರ್ ಮೂಗನ್ನು ಕುಯ್ಯುವುದಿಲ್ಲ. ಕ್ರಿಮಿನಲ್ ಖೈದಿ ಭಂಗಿ ನಿಂಗನಂತೆ, ಜೈಲ್ ಸೂಪರಿಂಟೆಂಡೆಂಟ್‌ರನ್ನು "ಎಲೊ ಗುಲಾಮ" ಎಂದು ಕರೆಯುವುದಿಲ್ಲ. ಆದುದರಿಂದ ಸೆರೆಯ ಅಧಿಕಾರಿಗಳು ಸಾಧಾರಣ ವಾಗಿ ತಮ್ಮ ದರ್ಪವನ್ನು ರಾಜಕೀಯ ಖೈದಿಗಳ ಮೇಲೆಯೇ ತೋರಿ ಸುತ್ತಾರೆ. ಜೈಲಿನಲ್ಲಿ ತಪ್ಪುಮಾಡಿದರೆ ಛಡಿ ಏಟು ಕೊಡುವುದು ಒಂದು ಶಿಕ್ಷೆ. ಆ ನರಕದಲ್ಲಿ ತಪ್ಪು ಯಾವುದು ಎಂದು ನಿರ್ಣಯಿಸುವವನು ಹದಿನಾರು ರುಪಾಯಿ ವಾರ್ಡರ್. ಮೊದಲು ಸೆಂಟ್ರಲ್ ಜೈಲಿನಲ್ಲಿ

ಕಂಟೋನ್ಮೆಂಟ್ ರಾಜಕೀಯ ಖೈದಿಗಳು ಇದ್ದಾಗ ಇದು ಬಹಳ ಪ್ರಬಲ ವಾಯಿತು. ಈಗ ಎಲ್ಲೋ ಜಿಲ್ಲಾಧಿಕಾರಿಗಳಾಗಿರುವ ಆಗಿನ ಸೂಪರಿಂ ಟೆಂಡೆಂಟರು ರಾಜಕೀಯ ಖೈದಿಗಳಿಗೆ ಛಡಿ ಏಟು ಕೊಡಿಸಿದರು. ಜೈಲಿನ ಸೂಪರಿಂಟೆಂಡೆಂಟ್ ಆಫೀಸಿನ ಮುಂದೆ ಮೂರು ಕಾಲಿನ ಒಂದು ತಿಕಡಿ. ಆ ತಿಕಡಿಯ ಮೇಲೆ ಏಟು ತಿನ್ನಬೇಕಾದವನನ್ನು ಬೆನ್ನು ಮೇಲಕ್ಕೆಮಾಡಿ ಬಿಗಿಯುತ್ತಾರೆ. ಅವನ ಬಟ್ಟೆಗಳನ್ನೆಲ್ಲಾ ತೆಗೆಯುತ್ತಾರೆ. ಆಸನದ ಭಾಗಕ್ಕೆ ಒಂದು ಒದ್ದೆ ಬಟ್ಟೆ ಹಾಕುತ್ತಾರೆ. ಉದ್ದವಾಗಿರುವ ಬೆತ್ತವನ್ನು, ಹೊಡೆ ಯುವ ವಾರ್ಡರರು ಮೊದಲನೆಯ ದಿನವೇ ಉಪ್ಪು ನೀರಿನಲ್ಲಿ ಕಲಸಿ ನೆನೆಸಿ ಅದು ಸರಿಯಾಗಿ ಬಾಗುವಂತೆ ಹದಮಾಡಿರುತ್ತಾನೆ. ಸೂಪರಿಂ ಟೆಂಡೆಂಟರೂ ಇತರ ಅಧಿಕಾರಿಗಳೂ ಕುರ್ಚಿಗಳ ಮೇಲೆ ಕುಳಿತುಕೊಳ್ಳು ತ್ತಾರೆ. ಸೂಪರಿಂಟೆಂಡೆಂಟರು ನಿಧಾನವಾಗಿ ಒಂದು ಹೊಗೆ ಬತ್ತಿಯನ್ನು ಹತ್ತಿಸುತ್ತಾರೆ. ಎಲ್ಲಾ ಖೈದಿಗಳೂ ತಮ್ಮ ತಮ್ಮ ಬ್ಯಾರಕ್‌ನ ಆವರಣ ದಲ್ಲಿ ನಿಂತುಕೊಂಡು ನೋಡುತ್ತಿರುತ್ತಾರೆ. ಡಾಕ್ಟರು ಹೂ ಎಂದ ಕೂಡಲೆ ಹೊಡೆಯುವವನು ಬೆತ್ತವನ್ನು ಎತ್ತಿ ತಿಕಡಿಗೆ ಕಟ್ಟಿರುವವನ ಆಸನದ ಮೇಲೆ ಹೊಡೆಯುತ್ತಾನೆ. ಏಟು ತಿನ್ನುವವನು 2-3-4 ಏಟಿನ ವರೆಗೆ ಜೈಲು ಹಾರಿಹೋಗುವಂತೆ ಕಿರೋ ಎಂದು ಕಿರಚುತ್ತಾನೆ. ಅಷ್ಟು ಹೊತ್ತಿಗೆ ಅವನಿಗೆ ನೋವನ್ನು ಅನುಭವಿಸುವ ಶಕ್ತಿ ಹೋಗಿರುತ್ತದೆ. ಹೊಡೆಯುವವನು ತನ್ನ ಕ್ರೂರ ಕರ್ಮವನ್ನು ಮುಂದುವರಿಸುತ್ತಾನೆ ಏಟು ತಿಂದನಂತರ ಆ ದುರದೃಷ್ಟದವನನ್ನು ಉಳಿದ ಸೆರೆಯಾಳುಗಳ ಜತೆ ಸೇರಿಸುವುದಿಲ್ಲ. ಅವನನ್ನು ಒಂಟಿ ಗವಿಯಲ್ಲಿ ಮೂರು ದಿನ "ಹಿಟ್ಟು ಉಪ್ಪಿನಲ್ಲಿ" ಹಾಕಿರುತ್ತಾರೆ. ಜೈಲಿನಲ್ಲಿ ಖೈದಿಗಳೂ ಅಧಿಕಾರಿಗಳೂ ಈ ತಿಕ್ಕಡಿಗೆ ಮೂರುಕಾಲಿನ ಕುದುರೆ ಎನ್ನುತ್ತಾರೆ. "ಅವನನ್ನು ಮೂರು ಕಾಲಿನ ಕುದುರೆ ಮೇಲೆ ಏರಿಸಿದರು; ನಿನ್ನನ್ನು ಮೂರು ಕಾಲಿನ ಕುದುರೆ ಮೇಲೆ ಏರಿಸುತ್ತೇನೆ" ಎಂಬುದು ವಾಡಿಕೆ. ಬ್ರಿಟಿಷ್ ಭಾರತದ ಸೆರೆಮನೆಗಳಲ್ಲಿ ಛಡಿ ಏಟನ್ನು ಕೊಡಲು ಯಾವ ವಾರ್ಡರುಗಳೂ ಒಪ್ಪ ದುದರಿಂದ ಕ್ರಿಮಿನಲ್ ಖೈದಿಗಳ ಪೈಕಿಯೇ ಒಬ್ಬ ಕೊಡುತ್ತಾನೆ. ಮೊದಲೇ ಖೈದಿಯಾಗಿರುವವನನ್ನು, ತಿಕಡಿಗೆ ಕಟ್ಟಿ ಹೊಡೆಯುವ ನರ ಮೇಧಕ್ಕೆ ಆತ್ಮ ಗೌರವವುಳ್ಳ ಬ್ರಿಟಿಷ್ ಭಾರತದ ವಾರ್ಡರುಗಳು ಒಪ್ಪ

ದುದು ಆಶ್ಚರ್ಯವಲ್ಲ. ಆದರೆ ಮನುಷ್ಯನಿಗೆ ಗುಲಾಮಗಿರಿ ಹೆಚ್ಚಿದಂತೆ
ಕೆಳಗಿನವರ ಮೇಲೆ ಕ್ರೌರ್ಯವೂ ಹೆಚ್ಚಾಗುತ್ತದೆ. ದಯೆ ದಾಕ್ಷಿಣ್ಯ ಸಮಾ
ನತೆ ಘನತೆಗಳು ಸ್ವಾತಂತ್ರ್ಯದಲ್ಲಿ ಬೆಳೆದವರಿಗೆ ಮಾತ್ರ ಸಾಧ್ಯ. ಕೇಂದ್ರ
ಕಾರಾಗಾರದಲ್ಲಿ ನಮ್ಮ ವಾರ್ಡರೇ ನಮ್ಮವರಿಗೆ ಛಡಿಏಟು ಕೊಡುತ್ತಾನೆ.
ಹಿಂದೆ ರಾಜಕೀಯ ಖೈದಿಗಳಿಗೆ ಛಡಿ ಏಟು ಬಿದ್ದಾಗ ನಮ್ಮ ಕಲ್ಯಾಣನಗ
ರಿಯ ನಾಗರಿಕರು ಅವರಿಗೆ ಹಣ್ಣುಗಳನ್ನೂ ಘಾಯದ ಔಷಧಗಳನ್ನೂ
ತೆಗೆದುಕೊಂಡು ಹೋಗಿ ಕೊಟ್ಟುದು ವಾಚಕರಿಗೆ ಜ್ಞಾಪಕ ಬರಬಹುದು.

ಮನುಷ್ಯ ಮನುಷ್ಯನಿಗೆ ತೋರಿಸುವ ಕ್ರೌರ್ಯಗಳಲ್ಲಿ ಸೆರೆಮನೆಯಲ್ಲಿ
ಛಡಿ ಏಟು ಕೊಡುವುದು ಅತ್ಯಂತ ಹೀನವಾದುದು. ಇದನ್ನು ಒಪ್ಪುವ
ಸರ್ಕಾರವೂ, ಇದನ್ನು ಆಚರಣೆಗೆ ತರುವ ಅಧಿಕಾರಿಗಳೂ ಮಾನವತೆಗೆ
ಕಳಂಕವನ್ನೇ ತರುವವರೆಂದು ಹೇಳದೆ ವಿಧಿಯಿಲ್ಲ. ಸರ್ಕಾರ ಮಾಡುವ
ಯಾವ ಕೆಲಸಕ್ಕೂ ಒಂದು ಸಬೂಬು ಇರುವಂತೆ ಇದಕ್ಕೂ ಒಂದು
ಇದ್ದೇ ಇದೆ. ಒಂದು ಸಲ ಛಡಿ ಏಟು ಬಿದ್ದ ಮೇಲೆ ಆ ಮನುಷ್ಯ,
ಮನುಷ್ಯತ್ವವನ್ನೇ ಕಳೆದುಕೊಂಡು ಮೃಗವಾಗುತ್ತಾನೆಂದು ವೈದ್ಯರು
ಹೇಳುತ್ತಾರೆ. ಕೆಲವು ವೇಳೆ ಅವನ ಪೌರುಷ ನಾಶವಾಗುತ್ತದೆ. ಮನುಷ್ಯ
ಸ್ವಭಾವದಲ್ಲಿರುವ ನಂಬಿಕೆ ಅವನಿಗೆ ಪೂರ್ಣವಾಗಿ ಹೋಗುತ್ತದೆ. ಇದು
ಖೈದಿಯನ್ನು ತಿದ್ದುವ ಉದ್ದೇಶದಿಂದ ಕೊಡುವ ಶಿಕ್ಷೆಯಲ್ಲ. ಸರ್ಕಾರವೂ ಈ
ಶಿಕ್ಷೆಯನ್ನು ಕೊಡು ಎಂದು ಹೇಳುವುದಿಲ್ಲ. ಇದು ಜೈಲು ಅಧಿಕಾರಿಗಳು
ತಮ್ಮ ಅಮಾನುಷವಾದ ಅನೈಸರ್ಗಿಕವಾದ ಮನೋಭಾವವನ್ನು ಕಡಿ
ವಾಣವಿಲ್ಲದೆ ಸಡಿಲಬಿಡುವ ಚಾಪಲ್ಯತೆಗೆ ಒಂದು ಉದಾಹರಣೆಯಾಗಿದೆ.
ಆ ಶಿಕ್ಷೆಗಳನ್ನು ವಿಧಿಸುವ ಸಂದರ್ಭಗಳಲ್ಲಿ ಅವರ ಅಧಿಕಾರಿಗಳ ಮುಖ
ಗಳನ್ನು ನೋಡಿದುದಾದರೆ, ಚಲನಚಿತ್ರಗಳಲ್ಲಿ ಬರುವ ಕ್ರೂರಿಗಳ ಜ್ಞಾಪಕ
ಬರುತ್ತದೆ. ಇಷ್ಟಾದರೂ ಈ ಶಿಕ್ಷೆಯಿಂದ ಸೆರೆಯಾಳಿನ ಸ್ವಭಾವ ಬದಲಾ
ವಣೆಯಾಗುವುದಿಲ್ಲ. ಅವನ ದೌಷ್ಟ್ಯ ಕಡಿಮೆಯಾಗುವುದಿಲ್ಲ. ಅವನು
ಯಾವುದಕ್ಕೂ ಹೆದರದ ಮೊಂಡನಾಗುತ್ತಾನೆ. "ಇಷ್ಟು ತಾನೆ ಇವ
ಮಾಡೋದು ಇನ್ನೇನು" ಎಂದು ಮೊದಲಿಗಿಂತ ಹೆಚ್ಚು ಘಟಿಂಗನಾಗು
ತ್ತಾನೆ. ಒಂದುಸಲ ಭಂಗಿ ನಿಂಗನೆಂಬ ಖೈದಿಗೆ 20 ಛಡಿ ಏಟನ್ನು ವಿಧಿ
ಸಿದರು. ಏಟು ಬಿದ್ದನಂತರ ಅವನು ಸೆರೆಯ ಅಧಿಕಾರಿಗೆ "ಆಯಿತೇನೊ.

ಇನ್ನೇನೋ ಮಾಡಬಲ್ಲೆ'' ಎಂದನು. ಅಧಿಕಾರಿಗೆ ಕೋಪ ಬಂತು. "ಇನ್ನೂ ಹತ್ತು ಛಡಿ ಏಟು ಹಾಕು'' ಎಂದ. ಆ ಹತ್ತು ಏಟಿಗೂ ನಿಂಗ ಜಗ್ಗಲಿಲ್ಲ ಆಮೇಲೂ ಮೀಸೆ ತಿರುಗಿಸಿದ. ಸೂಪರಿಂಟೆಂಡೆಂಟರು ಅಲ್ಲೇ ಹಜಾಮನನ್ನು ಕರೆಸಿ ಅವನ ಮೀಸೆಯನ್ನು ಬೋಳಿಸಿದರು.

ಕೇಂದ್ರ ಕಾರಾಗಾರದಲ್ಲಿ ಮೀಸೆ ಬೋಳಿಸುವುದು ಅಷ್ಟು ಸುಲಭವಲ್ಲ. ಕ್ಷೌರ ಮಾಡಿಕೊಳ್ಳುವುದೂ ಸುಲಭವಲ್ಲ. ಖೈದಿಗಳಿಗೆ ಕ್ಷೌರ ಮಾಡುವವರು ಖೈದಿಗಳೇ. ಕ್ಷೌರ ಮಾಡುವುದನ್ನು ಕಲಿತ ಖೈದಿಗೆ ತಿಂಗಳಿಗೆ ಒಂದು ದಿನ ಹೆಚ್ಚಾಗಿ ರೆಮಿಶನ್ (ರಿಯಾಯ್ತಿ) ಸಿಕ್ಕುತ್ತದೆ. ಆದುದರಿಂದ ಖೈದಿಗಳಲ್ಲಿ ಅನೇಕರು ಜೈಲಿಗೆ ಬಂದನಂತರ ಕ್ಷೌರ ಮಾಡುವುದನ್ನು ಕಲಿಯುತ್ತಾರೆ. ಕೆಲವರಿಗೆ ಕತ್ತಿ ಸಿಕ್ಕದಿದ್ದರೆ ಬೇಲ್ ಕಟ್ಟನ್ನೇ ಮಸೆದು ಅದರಲ್ಲಿಯೇ ಖೈದಿಗಳಿಗೆ ಕ್ಷೌರ ಮಾಡಿಬಿಡುತ್ತಾರೆ. ಕ್ಷೌರ ಮಾಡುವವನಿಗೆ ಬೀಡಿ ಅಥವ ಒಂದು ಎರಡು ಕಾಸು ಕೊಟ್ಟರೆ, ನಿಧಾನವಾಗಿ ಬಿಸಿನೀರು ಹಾಕಿ ಕ್ಷೌರ ಮಾಡುತ್ತಾನೆ. ಇಲ್ಲದಿದ್ದರೆ ಮನಸ್ಸು ಬಂದಂತೆ ಬೇಲ್ ಪಟ್ಟಿಯಲ್ಲಿಯೇ ಹೆರೆದು ಕೆನ್ನೆಯಮೇಲೆ ಮಾರಿ ಜಾತ್ರೆ ಮಾಡಿಬಿಡುತ್ತಾನೆ. ಅಂತಹ ಕ್ಷೌರಕರ ಮುಂದೆ ಕೂರಲು ಖೈದಿಗಳು ಹೆದರುತ್ತಾರೆ. ಕೆಲವು ಖೈದಿಗಳು ಸೆರೆಮನೆಯ ಒಳಗೂ ಅಸಾಧ್ಯವಾದ ಚುರುಕನ್ನು ಅಭ್ಯಾಸ ಮಾಡಿಕೊಳ್ಳುತ್ತಾರೆ. ಸೇಫ್ಟಿ ರೇಜರ್ ಬ್ಲೇಡಿನ ಒಂದೇ ಒಂದು ಚೂರು ಕಾಲು ಅಂಗುಲ ಸಿಕ್ಕಿದರೂ ಅದನ್ನು ಚೆನ್ನಾಗಿ ಮಸೆದು, ರೇಜರ್ ಇಲ್ಲದೇನೆ ಗಡ್ಡವನ್ನು ಪೂರ್ಣವಾಗಿ ನಯವಾಗಿ ಬೋಳಿಸಿಕೊಳ್ಳುತ್ತಾರೆ. ಕ್ಷೌರ ಇಷ್ಟು ಕಷ್ಟವಾಗಿರುವ ಕಾಲದಲ್ಲಿ ಮೀಸೆಯನ್ನು ಬೋಳಿಸಿದುದರಿಂದ ಭಂಗಿ ನಿಂಗನಿಗೆ ಅಂತಹ ನಷ್ಟವೇನೂ ಆಗಲಿಲ್ಲ.

ಸೋಮವಾರದ ಅಧಿಕಾರಿಗಳ ಮೆರೆವಣಿಗೆ ಫೈಲ್‌ನಿಂದ ಖೈದಿಗಳಿಗೆ ಯಾವ ಪ್ರಯೋಜನವೂ ಆಗುವುದಿಲ್ಲವೆಂಬುದು ಅವರಿಗೆ ಮುಂದಟ್ಟಾಗುತ್ತಲೇ ಖೈದಿಗಳು ಫೈಲಿಗೆಬರುವುದನ್ನೇ ನಿಲ್ಲಿಸಿಬಿಟ್ಟರು. ಒಂದೊಂದು ಸಾಲಿನಲ್ಲಿ 400-500 ಜನರಂತೆ ಎರಡು ಸಾಲು ನಿಂತುಕೊಳ್ಳುತ್ತಿದ್ದವರ ಸಂಖ್ಯೆ ಸಾಲಿಗೆ 30-40 ಆಯಿತು. ಡೆಪ್ಯುಟಿ ಜೈಲರ್ ಕಾರಣವನ್ನು ವಿಚಾರಿಸಿದಾಗ ಖೈದಿಗಳು "ನಾವು ಏನು ಬಡಕೊಂಡರೂ ನೀವು ಕೇಳೊಲ್ಲ. ಫೈಲಲ್ಲಿ

ಯಾಕೆ ನಿಂತುಕೊಬೇಕು'' ಎಂದರು. ಆಗ, ಎರಡನೆಯ ನಮ್ಮ ಸತ್ಯಾಗ್ರಹದ ಖೈದಿಗಳು ಕೇಂದ್ರ ಕಾರಾಗಾರದಲ್ಲಿದ್ದರು. ಆಹಾರವಸ್ತು ಅವರಿಗೆ ಸರಿಯಾಗಿ ದೊರೆಯದೆ ಇದ್ದುದರಿಂದ ಅಧಿಕಾರಿಗಳಿಗೂ ರಾಜಕೀಯ ಬಂದಿಗಳಿಗೂ ಘರ್ಷಣೆ ನಡಿಯುತ್ತಲೇ ಇದ್ದಿತು. ರಾಜಕೀಯ ಖೈದಿಗಳು ವಿದ್ಯಾವಂತರು. ಸಾಮಾನ್ಯವಾಗಿ ಬಿ ಎ., ಬಿ.ಎಲ್. ಗಳು. ಗ್ರಂಥಕರ್ತರು ಪತ್ರಿಕಾಕರ್ತರು ಡಿಸ್ಟ್ರಿಕ್ಟ್ ಬೋರ್ಡು ಪೌರಸಭೆಗಳ ಅಧ್ಯಕ್ಷರು; ನ್ಯಾಯವಿಧಾಯಕ ಪ್ರಜಾಪ್ರತಿನಿಧಿ ಸದಸ್ಯರು. ಒಬ್ಬರು ವಿನೋದವಾಗಿ ಹೇಳುತ್ತಿದ್ದಂತೆ ಈ ರಾಜಕೀಯ ಸಂಸ್ಥೆ, ಇದೊಂದು ಅಠಾರಾ ಕಛೇರಿ, ಅದೊಂದು ಅಠಾರಾಕಛೇರಿ ಎಂಬುದು ನಿಜ. ಇಂತಹ ಖೈದಿಗಳಿಗೆ ಆಹಾರವನ್ನು ಕೊಡುವಾಗ ಕಂಟ್ರಾಕ್ಟರ್ ಲೆಕ್ಕದಲ್ಲಿ ತಪ್ಪಿದಂತೆ ನಟಿಸಿದರೆ ಅವರು ಸುಮ್ಮನೆ ಇರುವುದಿಲ್ಲ. ಇದಕ್ಕೆ ಸೆರೆಮನೆಯ ಅಧಿಕಾರಿಗಳೂ ಒಪ್ಪಿದ್ದಾರೆ ಎಂಬುದರಿಂದ ಏನೂ ಹೆಚ್ಚು ಕಡಿಮೆ ಆಗುವುದಿಲ್ಲ. ಅಧಿಕಾರಿಗಳು ಅಡಿಗೆ ಮನೆಯಲ್ಲಿರುವ ರಾಜಕೀಯ ಖೈದಿಗಳನ್ನು ಪುಸಲಾಯಿಸುತ್ತಾರೆ. ಅವರಿಗೆ ಖಾಸಗಿಯಾಗಿ ಒಂದೆರಡು ಅನುಕೂಲಗಳನ್ನು ತೋರಿಸುತ್ತಾರೆ. ಆದರೆ ಖೈದಿಗಳು ಯಾವುದಕ್ಕೂ ಬಗ್ಗದೆ ಇದ್ದರೆ ಲಾಠಿ ಛಾರ್ಜು ಮಾಡುತ್ತಾರೆ. ಅಧಿಕಾರಿಗಳಿಗೆ ಉಂಟಾಗಬಹುದಾದ ಪ್ರಯೋಜನ ಅವರಿಗೆ ಸರಿಯಾಗಿ ಉಂಟಾಗಬೇಕು. ಅದಕ್ಕೆ ಎಲ್ಲಿಯವರೆಗೆ ಅಪಾಯವಿಲ್ಲವೋ ಅಲ್ಲಿಯವರೆಗೆ ಯಾರು ಏನು ಹೇಳಿದರೂ ಕೇಳಿಕ್ಕೊಂಡೇ ಇರುತ್ತಾರೆ. ಒಬ್ಬ ಖೈದಿಗೆ ದಿನಕ್ಕೆ ಇಷ್ಟು ಬೇಳೆ ಬರಬೇಕು. ಎಂಟುನೂರು ಜನಕ್ಕೆ ಇಷ್ಟು ಬೇಳೆ ಎಲ್ಲಿ? ಎಂದರೆ ಅಲ್ಲಿ ಬೇಳೆ 14 ಸೇರು ಕಡಿಮೆ ಇರುತ್ತದೆ. ಅದು ಟೆಂಡರ್ ಒಪ್ಪಿಗೆಯಾಗುವ ಕಾಲದಲ್ಲಿಯೇ ಸಂಬಂಧಪಟ್ಟವರ ಉದರದಲ್ಲಿ ಜೀರ್ಣವಾಗಿ ಎಷ್ಟೋ ದಿನಗಳಾಗಿರುತ್ತವೆ. ಸೆರೆಯಾಳುಗಳು ಒಂದು ಸಲ ಎರಡು ಸಲ ಕೇಳಿದರೂ ಅಧಿಕಾರಿಗಳು ಸುಮ್ಮನೆಯೇ ಇರುತ್ತಾರೆ. ಮತ್ತೂ ಮತ್ತೂ ಒತ್ತಿ ಒತ್ತಿ ಕೇಳಿದರೆ ಲಾಠಿಯ ಪ್ರವೇಶವಾಗುತ್ತದೆ.

ರಾಜಕೀಯ ಖೈದಿಗಳಿಗೆ ನಿಲುಬೇಡಿ, ನಾಡಾ ಬೇಡಿ ಛಡಿ, ಏಟು ಇವುಗಳನ್ನೆಲ್ಲ ಕೊಡಲು ಅವರ ಮೇಲೆ ಅಧಿಕಾರಿಗಳಿಗೆ ಇರುವ ಅಸಮಾಧಾನ ಕಾರಣವೇ ಹೊರತು ಸರ್ಕಾರ ಹಾಗೆ ಮಾಡಿ ಎಂದು ಎಲ್ಲಿಯೂ

ಹೇಳಿಲ್ಲ. ಇದು ಸಾಮಾನ್ಯವಾಗಿ ನಡೆಯುವುದು ಕೇಂದ್ರ ಕಾರಾಗಾರ ದಲ್ಲಿ ಮಾತ್ರ. ಯಾವ ಸೆರೆಮನೆಗೆ ಹೊರಗಿನ ಪ್ರಪಂಚದೊಂದಿಗೆ ಸಂಬಂಧವುಳ್ಳ ಅಮಲ್ದಾರರು ಸಬ್‌ಡಿವಿಜನ್ ಅಧಿಕಾರಿ ಪೋಲೀಸ್ ಸೂಪರಿಂಟೆಂಡೆಂಟ್ ಮುಂತಾದ ಅಧಿಕಾರಿಗಳನ್ನು ಒಂದು ವರುಷ ಎರಡು ವರುಷದ "ಸರ್ವಿಸ್‌ಗಾಗಿ" ಹಾಕುತ್ತಾರೋ ಅಂತಹ ಸೆರೆಮನೆ ಯಲ್ಲಿ ಇವು ನಡೆಯುವುದಿಲ್ಲ. ಆದರೆ ಒಂದೇ ಸೆರೆಮನೆಯಲ್ಲಿ ಹೆಗ್ಗಣ ಗಳಂತೆ ಪಳಗಿ, ಎಷ್ಟು ವರುಷವಾದರೂ ಅಲ್ಲೇ ವಾರ್ಡರ್, ಹೆಡ್ ವಾರ್ಡರ್, ಛೀಪ್ ವಾರ್ಡರು. ಡೆಪ್ಯುಟಿ ಜೈಲರ್ ಛೀಪ್ ಜೈಲರ್ ಆಗಿ ಹೊರಗಿನ ಪ್ರಪಂಚದೊಂದಿಗೆ ವ್ಯವಹಾರವನ್ನು ಮರೆತು, ಕ್ರಿಮಿನಲ್ ಖೈದಿಗಳೊಂದಿಗೆ ವ್ಯವಹರಿಸಿ ಕ್ರೌರ್ಯ ದುರ್ಭಾಷೆಗಳನ್ನೇ ಉಪಯೋಗಿ ಸುವ ಶಾಶ್ವತವಾದ ಸೆರೆಮನೆಗಳಲ್ಲಿ ಮಾತ್ರ, ರಾಜಕೀಯ ಖೈದಿಗಳ ಮೇಲೆ ಲಾಠಿ ಛಾರ್ಜು ಆಗುತ್ತದೆ. 1942 ನೆ ಇಸವಿಯಲ್ಲಿ ಸರ್ಕಾರ ದೇಶ ದಲ್ಲಿ ಕಣ್ಣಿಗೆ ಕಂಡವರನ್ನೆಲ್ಲಾ ದಸ್ತಗಿರಿ ಮಾಡಿ ಊರು ಊರಿನಲ್ಲಿ ಒಂದೊಂದು ಕಾರಾಗ್ರುಹವನ್ನು ಸ್ಥಾಪಿಸಿತಷ್ಟೆ. ಆಗ ಆ ಹಂಗಾಮಿ ಕಾರಾಗ್ರುಹಗಳಿಗೆ ಅಮಲ್ದಾರರನ್ನೇ ಹೊಸದಾಗಿ ಚುನಾಯಿಸಿ ಸೂಪ ರಿಂಟೆಂಡೆಂಟ್‌ರಾಗಿ ಹಾಕಿದರು. ಯಾವ ಕಾರಾಗ್ರುಹದಲ್ಲಿಯೂ ಖೈದಿ ಗಳ ಮೇಲೆ ಲಾಠಿ ಛಾರ್ಜು ಮಾಡುವ ಧೀರತೆ ನಡೆಯಲಿಲ್ಲ. ಹದಿನಾರು ರುಪಾಯಿ ವಾರ್ಡರ್ ದೇಶದ ನಾಯಕರ ತಲೆ ಒಡೆದುದನ್ನು, ಸರ್ಕಾರದ ಸಮಸ್ತ ಘನತೆ ಗಾಂಭೀರ್ಯದೊಂದಿಗೆ ನ್ಯಾಯಾಂಗ ಸಚಿವರು ದೇಶದ ಎದುರಿಗೆ ಸರಿ ಎಂದು ಸ್ಥಾಪಿಸಬೇಕಾದ ಕಾರಣ ಉಂಟಾಗಲಿಲ್ಲ. ಆದರೆ ಶಾಶ್ವತವಾದ ಸೆರೆಮನೆಯಾದ ಕೇಂದ್ರ ಕಾರಾಗಾರದಲ್ಲಿ ಲಾಠಿ ಛಾರ್ಜು ಆಗಿಯೇ ಆಯಿತು.

ಆಹಾರದ ಪ್ರಶ್ನೆಯು ದೆಸೆಯಿಂದ ಲಾಠಿಛಾರ್ಜು ಆಗುವುದಕ್ಕೆ ಮುಂಚೆ ಅಧಿಕಾರಿಗಳು ಅದರ ಸೂಚನೆಕೊಡುತ್ತಾರೆ. ಒಂದು ಸಲ ಕೇಂದ್ರ ಕಾರಾಗಾರದ ಪರಿಚಯವುಂಟಾಗಿರುವವರಿಗೆ ಆ ಬಗೆಯು ದುರ್ಗಂಧದ ಗಾಳಿ ಬೀಸುತ್ತಿರುವುದು ಗೊತ್ತಾಗುತ್ತದೆ. 1942ನೇ ಇಸವಿ ಯಲ್ಲಿ ಪಂಚಾಚಾರ್ಯರ ಮೇಲೆ 50 ರುಪಾಯಿ ಬೆಲೆ ಇಟ್ಟು ಸರ್ಕಾರ ಅವ ರನ್ನು ಹಿಡಿದುಕೊಟ್ಟವರಿಗೆ ಆ ಬಹುಮಾನವನ್ನು ಕೊಡುವುದಾಗಿ ಪ್ರಕಟಿಸಿ

ದರು. ಅವರು ಹಿಂದಲ ಚಳುವಳಿಯಲ್ಲಿ ಕೇಂದ್ರ ಕಾರಾಗಾರದಲ್ಲಿ ದ್ದರು. ಒಂದು ದಿನ ಆ ಕಾರಾಗಾರದ ಯಾವುದೋ ಒಂದು ಮೂಲೆ ಯಲ್ಲಿ ಒಂದು ಕಟ್ಟು ಕಾಗದ ಸಿಕ್ಕಿತು. ಅದನ್ನು ಬಿಚ್ಚಿ ನೋಡುವುದ ರಲ್ಲಿ ಅದು ರಾಜಕೀಯ ಬಂದಿಗಳು ತಮಗೆ ಬೇಕಾದವರಿಗೆ ಬರೆದಿದ್ದ ಕಾಗದ ಕವರುಗಳಾಗಿದ್ದವು. ಆ ಕಾಗದಗಳು ಟಪಾಲಿಗೆ ಹೋಗಬೇ ಕೆಂದು, ಬಂದಿಗಳು ಸೆರೆಮನೆಯ ಅಧಿಕಾರಿಗಳಿಗೆ ಅವುಗಳನ್ನು ಕೊಟ್ಟಿ ದ್ದರು. ಆ ವೇಳೆಗೆ ಅಧಿಕಾರಿಗಳಿಗೆ ಅಸಮಾಧಾನವಾಗಿದ್ದುದರಿಂದ ಅವರು ಆ ಕಾಗದಗಳನ್ನು ಟಪಾಲಿಗೆ ಹಾಕದೆ ಎಲ್ಲೋ ಎಸೆದಿದ್ದರು. ರಾಜಕೀಯ ಬಂದಿಗಳಿಗೆ ತಾವು ಬರೆದ ಕಾಗದಗಳು ತಲಪುವುದಿಲ್ಲವೆಂದು ಹೀಗೆ ತಿಳಿದ ಕೂಡಲೇ ಅವರು, ತಾವು ಕಾಗದ ಬರೆದುಕೊಟ್ಟ ಮೇಲೆ ಮತ್ತೆ ಸೆರೆಮನೆಯ ಅಧಿಕಾರಿಗಳನ್ನು ಕೇಳಿ ಖಾತರಿ ಮಾಡಿಕೊಳ್ಳಬೇ ಕೆಂದು ಬಯಸಿದರು. ಒಂದು ಸಲ ಪಂಚಾಚಾರ್ಯರು ಒಂದು ಕಾಗದ ಬರೆದಿದ್ದರು. ಅದು ಟಪಾಲಿಗೆ ಹೋಯಿತೋ ಇಲ್ಲವೋ ಎಂದು ಅವರಿಗೆ ಸಂಶಯ. ಆದರೆ ಸೂಪರಿಂಟೆಂಡೆಂಟರನ್ನು ಕೇಳಬೇಕಾದರೆ ಸೋಮ ವಾರದ ಫೈಲುವರೆಗೆ ಕಾಯಬೇಕು. ಹಾಗೂ ಕಾದರು. ಸೋಮ ವಾರದ ದಿನ ಸೂಪರಿಂಟೆಂಡೆಂಟ್ ಸಾಹೇಬರ ದರ್ಬಾರು ಪಂಚಾಚಾರ್ಯರ ಮುಂದೆ ಬಂದಾಗ ಅವರು " ಸ್ವಾಮಿ. ನಾನು ಈ ವಾರ ಬರೆದ ಕಾಗದ ಟಪಾಲಿಗೆ ಹೋಯಿತೇ " ಎಂದರು. ಸೂಪರಿಂಟೆಂಡೆಂಟ್ ಸಾಹೇಬ ಬರನ್ನು ಚೇಳು ಮುಟ್ಟಿಸಿದಂತೆ ಆಯಿತು. ಅವರು ಪಂಚಾಚಾರ್ಯರಿಗೆ " ನೀವು ಆಫೀಸಿಗೆ ಬನ್ನಿ " ಎಂದು ಹೇಳಿದರು. ಆಫೀಸಿಗೆ ಬನ್ನಿ ಎಂದರೆ ಗೊತ್ತು. ಏನೋ ಶಿಕ್ಷೆ ಎಂದು. ಪಂಚಾಚಾರ್ಯನಿಗೆ " ನಿಲು ಬೇಡಿ ಮೂರು ದಿನ " ಎಂದು ಅಪ್ಪಣೆಯಾಯಿತು.

ನಿಲು ಬೇಡಿ ಎಂದರೆ ಏನೆಂಬುದು ಅದನ್ನು ಅನುಭವಿಸಿದವರಿಗೆ ಮಾತ್ರ ಗೊತ್ತು. ಒಂದು ಮಾತಿನಲ್ಲಿ ಹೇಳಬೇಕಾದರೆ ಅದೊಂದು ನರಕ ಯಾತನೆ. ಒಂಟಿ ಕೊಠಡಿಯ ಬಾಗಿಲಿನ ಮೇಲುಗಡೆ ಗೋಡೆಗೆ ಎರಡು ಬಳೆ ಬಡಿದಿದ್ದಾರೆ. ಅದಕ್ಕೆ ಶಿಕ್ಷೆ ಹೊಂದುವನ ಕೈಯನ್ನು ಸಿಕ್ಕಿಸಿ ಅವ ನನ್ನು ನಿಲ್ಲಿಸುತ್ತಾರೆ. ಆ ಬಳೆ ಅವನ ಕತ್ತಿನಿಂದ ಸುಮಾರು ಒಂದುವರೆ ಒಂದು ಮುಕ್ಕಾಲು ಅಡಿ ಎತ್ತರದಲ್ಲಿರುತ್ತದೆ. ಕೈಯನ್ನು ಮೇಲಕ್ಕೆ

ಎತ್ತಿ ಅದಕ್ಕೆ ಸಿಗಹಾಕುತ್ತಾರೆ. ಕಾಲು ನೆಲದ ಮೇಲೆ ಅರ್ಧ ನಿಲ್ಲು ತ್ತದೆ. ಒಂಟಿ ಕೊಠಡಿಯ ಬಾಗಿಲಿನಲ್ಲಿ ಶಿಕ್ಷೆ ಅನುಭವಿಸುತ್ತಿರುವವನ ಮುಖ ಹೊರಕ್ಕೆ ಕಾಣುತ್ತದೆ. ಹೀಗೆ ಬೆಳಗಿನಿಂದ ಸಾಯಂಕಾಲದವರೆಗೆ ನಿಲ್ಲಿಸಿ ರಾತ್ರಿ ಮಲಗುವಾಗ ನಿಲು ಬೇಡಿ ತೆಗೆಯುತ್ತಾರೆ. ಮಾರನೆ ದಿನ ಮತ್ತೆ ಬೆಳಿಗ್ಗೆ ಹಾಕುತ್ತಾರೆ. ಪಂಚಾಚಾರ್ಯರು ಸ್ವಲ್ಪ ಕುಳ್ಳ. ಕಾಲು ನೆಲದ ಮೇಲೆ ಸರಿಯಾಗಿ ನಿಲ್ಲುತ್ತಿರಲಿಲ್ಲ. ಬರಿ ಅಂಗಾಲಿನ ಮೇಲೆ ನಿಲ್ಲ ಬೇಕಾಯಿತು. ಹೀಗೆ ನಿಲು ಬೇಡಿಗೆ ಒಳಗಾದ ಖೈದಿಗೆ ಬೆನ್ನು ಮೊಣ ಕಾಲು ಬಹಳ ನೋವು ಬರುತ್ತದೆ. ಕೆಲವು ಖೈದಿಗಳು "ರಕ್ತ ಹೆಜ್ಜೆಗೆ ಇಳಿದುಬಿಡುತ್ತದೆ" ಎನ್ನುತ್ತಾರೆ. ಪಂಚಾಚಾರ್ಯರಲ್ಲದೆ ಇನ್ನೂ ಕೆಲವು ರಾಜಕೀಯ ಖೈದಿಗಳು ಈ ಶಿಕ್ಷೆಯನ್ನು ಅನುಭವಿಸಿದ್ದಾರೆ. ರಾಜಕೀಯ ಖೈದಿಯಾದ ಈಶ್ವರಪ್ಪನಿಗೆ ಅನ್ನದಲ್ಲಿ ಹುಳುವಿದ್ದುದನ್ನು ತೋರಿಸಿದುದ ರಿಂದ ಸಾಡಾ ಬೇಡಿ ಮತ್ತು ಛಡಿ ಏಟು ಬಿತ್ತು. ಸಾಡಾಬೇಡಿ ಎಂದರೆ ಮಂಡಿಯಿಂದ ಕೆಳಗೆ ಎರಡು ಮೊಣಕಾಲುಗಳಿಗೂ ನಡುವೆ ಸ್ವಲ್ಪ ಅಗಲ ವಾದ ಒಂದು ಪಟ್ಟಿ ಹಾಕಿಬಿಡುತ್ತಾರೆ. ಅದು ಮೊಣಕಾಲುಗಳನ್ನು ಅವು ಸ್ವಾಭಾವಿಕವಾಗಿರುವುದಕ್ಕಿಂತ ಸ್ವಲ್ಪ ಹೆಚ್ಚಾಗಿ ಅಗಲಮಾಡುತ್ತವೆ. ಖೈದಿ ನಡೆಯಬೇಕಾದರೆ ಕಾಲನ್ನು ಅಗಲಿಸಿಕೊಂಡು ಎತ್ತಿ ಎತ್ತಿ ನಡೆಯಬೇಕು.

1939 ನೇ ವರುಷ ಕೇಂದ್ರ ಕಾರಾಗಾರದಲ್ಲಿ ಮಂಗಳವಾರ ಗುರು ವಾರ ಶನಿವಾರ ಮಜ್ಜಿಗೆ ಕೊಡುತ್ತಿದ್ದರು. ಇದಕ್ಕೆ ಮೊಸರು ಎಂದು ಹೆಸರು. ಸೆರೆಮನೆಯ ನಿಯಮದಂತೆ ಆ ಮೊಸರನ್ನು ಆಯಾ ದಿನವೇ ಮುಗಿಸಿಬಿಡಬೇಕು. ಆದರೆ ಕೆಲವು ರಾಜಕೀಯ ಬಂದಿಗಳು ತಮ್ಮ ಅಲುಮಿನಂ ಚೊಂಬಿನಲ್ಲಿ ಆ ಮೊಸರನ್ನು ಇಟ್ಟುಕೊಂಡು ನಿತ್ಯಾ ತುಪ್ಪ ದಂತೆ ಎರಡೆರಡು ಚಮಚ ಹಾಕಿಕೊಂಡು ಎರಡು ಮೂರು ದಿನ ಅನು ಭವಿಸುತ್ತಿದ್ದರು. ಒಂದು ದಿನ ಸೆರೆಮನೆಯಲ್ಲಿ ಕೊಟ್ಟ ಮೊಸರು ಸ್ವಲ್ಪವೂ ಚೆನ್ನಾಗಿರಲಿಲ್ಲ. ಅದರಲ್ಲಿ ಕೆಟ್ಟ ವಾಸನೆ ಬೇರೆ ಇತ್ತು. ಸಂಪತ್‌ರವರು ಡಾಕ್ಟರರಿಗೆ ಮೊಸರನ್ನು ತೋರಿಸಿ "ಇದನ್ನು ಕುಡಿಯುವುದಕ್ಕಾಗುತ್ತ ದೆಯೇ" ಎಂದು ಕೇಳಿದರು. ಡಾಕ್ಟರರು ಮೊಸರಿನ ವಾಸನೆ ನೋಡಿ "ಖಂಡಿತ ಇದನ್ನು ಕುಡಿಯಬೇಡಿ. ಇದನ್ನು ತೆಗೆದುಕೊಂಡರೆ ರೋಗ ಖಂಡಿತ" ಎಂದರು. ಸರಿ, ಸಂಪತ್‌ರವರು ಈ ಮೊಸರು ಕುಡಿಯುವು

ದಿಲ್ಲವೆಂದ ಕೂಡಲೇ ಎಲ್ಲರೂ ತಿರಸ್ಕರಿಸಿದರು. ಸೆರೆಮನೆಯ ಅಧಿಕಾರಿಗಳು ಸಂಪತ್‌ರಿಗೆ ಹೇಳಿ ಕಳುಹಿಸಿದರು. ಪಾಪ ಆ ಪ್ರಾಣಿ ನೋಡುವುದಕ್ಕೆ ತೆಳ್ಳಗೆ ಇದ್ದಾರೆ. ಆಳು ಶಕ್ತನಲ್ಲ. ಹಿಂದೆ ಕಲ್ಯಾಣ ನಗರಿಗೆ ನಾರಿಮನ್ ಬಂದಿದ್ದ ಕಾಲದಲ್ಲಿ ಅಧಿಕಾರಿಗಳು ಭೂಕಂಪವೂ ಆಕಾಶ ವಿಮಾನ ದಾಳಿಯೂ ಏಕಕಾಲದಲ್ಲಿ ಉಂಟಾದಂತೆ ಗಾಬರಿಗೊಂಡರಷ್ಟೆ. ತತ್‌ಕ್ಷಣ ಮಿಲಿಟರಿಯವರು ಬಂದು ನಗರದಲ್ಲಿ ಯಾವ ಯಾವ ಭಾಗಗಳನ್ನೋ ಆಕ್ರಮಿಸಿಕೊಂಡು ನಿಂತರು. ಈ ಬಡಪಾಯಿ ಸಂಪತ್ ಆಗ ಬಳೆಪೇಟೆಯಲ್ಲಿ ಒಂದು ಕೊಠಡಿಯಲ್ಲಿ ಇದ್ದರು. ಬಳೆಪೇಟೆ ಹತ್ತಿರ ಮಿಲಿಟರಿಯವರು ಬಂದೂಕುಗಳನ್ನು ಹಿಡಿದುಕೊಂಡು ಕಾಯುತ್ತಿದ್ದರು. ಆಗ ಇನ್ನೂ ಭಾರತದ ರಕ್ಷಣೆ ಪ್ರಾರಂಭವಾಗಿರಲಿಲ್ಲ. ಸಂಪತ್ ಆ ಮಾರ್ಗದಲ್ಲಿ ತಮ್ಮ ಕೊಠಡಿಗೆ ಹೋಗಲು ಬಂದ ಕೂಡಲೇ ಒಬ್ಬ ಮಿಲಿಟರಿಯವನು ಅವರ ತಲೆಯ ಮೇಲೆ ಕೈಯ್ಯಲ್ಲಿದ್ದ ಲಾಠಿಯಿಂದ ಒಂದು ಏಟು ಬಿಟ್ಟನು. ಅನಂತರ ಅವರನ್ನು ದರದರನೆ ತಳ್ಳಿಕೊಂಡು ಹೋಗಿ ಬಳೆಪೇಟೆ ಪೋಲೀಸ್ ಠಾಣೆಗೆಹಾಕಿದರು. ಆ ವೇಳೆಗಾಗಲೆ ಅಲ್ಲಿ ಅಂತಹ ಇನ್ನೂ 10-15 ಯುವಕರನ್ನು ಮಿಲಿಟರಿಯವರು ಹಿಡಿದು ಹಾಕಿ ತಮ್ಮ ಸಾಹಸವನ್ನು ಪ್ರದರ್ಶಿಸಿದ್ದರು. ಅನಂತರ ಪೋಲೀಸ್ ಅಧಿಕಾರಿಗಳು ಬಂದು ಒಬ್ಬೊಬ್ಬರೂ ಅವರವರಿಗೆ ಇಷ್ಟಬಂದಂತೆ ಈ ಯುವಕರನ್ನು ಒದ್ದರು. ಆಮೇಲೆ ಅಧಿಕಾರಿಗಳು ತಮ್ಮ ಮಾನ ಉಳಿಸಿಕೊಳ್ಳಲು ಅವರೆಲ್ಲರ ಮೇಲೂ ಮೊಖದ್ದಮೆ ದಾಖಲ್ಮಾಡಿ ಸರಿಯಾದ ಸಾಕ್ಷ್ಯಗಳು ದೊರಕದುದರಿಂದ ಆ ಮೊಖದ್ದಮೆಗಳನ್ನು ವಾಪಸು ತೆಗೆದುಕೊಂಡರು.

ಅಲ್ಲಿಂದ ಈಚೆಗೆ ಸಂಪತ್‌ರಿಗೆ ಏಟು ಬಿದ್ದಿರಲಿಲ್ಲ. ಆದರೆ ಒಂದು ಭಾಷಣಕ್ಕೇ ಎರಡುವರೆ ವರುಷ ಸಜ ಆಗಿತ್ತು. ಈಗ ಮೊಸರಿನ ನೆಪದಲ್ಲಿ ಖಂಡಿತ ಛಡಿ ಏಟು ಎಂದು ಅವರಿಗೆ ನಂಬಿಕೆಯಾಯಿತು. ಸಂಪತ್‌ರವರು ಸ್ವಭಾವತಹ ಸುಖಜೀವಿ. ಸಮತಾವಾದಿ. ದೇಹವನ್ನು ಶೋಷಿಸಲು ಇಷ್ಟಪಡುವವರಲ್ಲ. ಏಟು ಎಂದರೆ ಸಾಧಾರಣವಾಗಿ ಹೆದರುವ ಕೋಮಲವಾದ ಶರೀರ. ಸೂಪರಿಂಟೆಂಡೆಂಟರ ಆಫೀಸಿಗೆ ಹೋಗುವ ದಾರಿಯಲ್ಲಿಯೇ ಅವರು ತಮ್ಮ ಆಸನವನ್ನು ಸವರಿಕೊಳ್ಳುತ್ತಾ ಹೋದರು. ಎಲ್ಲಾ ಖೈದಿಗಳೂ ಕನಿಕರ ದೃಷ್ಟಿಯಿಂದ ಅವರನ್ನೇ ನೋಡುತ್ತಿದ್ದರು.

ಸೂಪರಿಂಟೆಂಡೆಂಟರ ಆಫೀಸಿಗೆ ಸಂಪತ್ ಹೋದ ಕೂಡಲೆ ಸೂಪರಿಂಟೆಂ ಡೆಂಟರು "ನೀವು ಖೈದಿಗಳಲ್ಲಿ ಅಸಮಾಧಾನವನ್ನು ಉಂಟುಮಾಡುತ್ತಿದ್ದೀರಿ. ಮೊಸರು ಚೆನ್ನಾಗಿದ್ದರೂ ಎಲ್ಲರೂ ಮೊಸರು ತಿರಸ್ಕರಿಸುವಂತೆ ಮಾಡಿದ್ದೀರಿ. ನಿಮಗೆ ಛಡಿ ಏಟು ಕೊಡುತ್ತೇನೆ" ಎಂದರು. ಬುದ್ಧಿವಂತರಾದ ಸಂಪತ್‌ರವರಿಗೆ ಸೂಪರಿಂಟೆಂಡೆಂಟರ ಕೋಪದ ಕಾರಣ 'ಆಹಾರ ಸಮಸ್ಯೆ' ಎಂಬುದು ತಿಳಿಯದೇ ಇರಲಿಲ್ಲ. ಆದರೆ ಅದಕ್ಕೆ ಪ್ರತೀಕಾರ ಅವರ ಕೈಯ್ಯಲ್ಲಿ ಇರಲಿಲ್ಲ. ಅವರು "ಸ್ವಾಮಿ, ಡಾಕ್ಟರ್‌ರಿಗೆ ತೋರಿಸಿದೆ. ಅವರು ಮೊಸರು ಚೆನ್ನಾಗಿಲ್ಲವೆಂದರು. ಅವರು ಒಪ್ಪಿದ್ದರೆ ತೆಗೆದುಕೊಳ್ಳುತ್ತಿದ್ದೆ" ಎಂದರು. ಸೂಪರಿಂಟೆಂಡೆಂಟರು ಕೂಡಲೇ ಡಾಕ್ಟರರಿಗೆ ಹೇಳಿಕಳುಸಿದರು. ಅದಾವ ಉಚ್ಚಾರಣೆಯಿಲ್ಲದ ಭಾಷೆಯಲ್ಲಿ ಸೆರೆಮನೆಯಲ್ಲಿ ಸುದ್ದಿಗಳು ಒಬ್ಬರಿಂದ ಒಬ್ಬರಿಗೆ ತಿಳಿಯುವುವೊ! ಡಾಕ್ಟರು ಬಂದವರೇ ಸೂಪರಿಂಟೆಂಡೆಂಟರ ಪ್ರಶ್ನೆಗೆ ಉತ್ತರವಾಗಿ "ಮೊಸರು ಚೆನ್ನಾಗಿದೆ. ನಾನು ಚೆನ್ನಾಗಿಲ್ಲವೆಂದು ಹೇಳಲಿಲ್ಲ" ಎಂದರು. ಸಂಪತ್‌ರವರಿಗೆ ತಲೆ ತಿರುಗುವಂತಾಯಿತು. ಆ ವೇಳೆಗೆ, ಶಿಕ್ಷೆಗಳನ್ನು ಕೊಡುವಾಗ ಆ ಶಿಕ್ಷೆಗಳನ್ನು ಬರೆಯುವ ಪುಸ್ತಕವನ್ನೂ ಹಿಡಿದುಕೊಂಡು ಛೀಫ್ ವಾರ್ಡರು ಪ್ರವೇಶಿಸಿದನು.

ಒಂದು ಗಳಿಗೆಯ ನಂತರ ಸೂಪರಿಂಟೆಂಡೆಂಟರು "ನಿಮ್ಮ ಹೆಂಡತಿ ಬಹಳ ವಿದ್ಯಾವಂತೆ, ಕಲ್‌ಚರ್ಡ್ ಲೇಡಿ ಇಂಗ್ಲಿಷ್ ಕೂಡ ಬಹು ಚೆನ್ನಾಗಿ ಮಾತನಾಡುತ್ತಾರೆ" ಎಂದರು. ಸಂಪತ್‌ರವರು ಬೆಚ್ಚಿಬಿದ್ದರು. "ನಿತ್ಯಾ ಜೈಲು ತಿರುಗುವ ನನಗೆ ಮದುವೆ ಯಾಕೆ" ಎಂದು ಅವರು ಇನ್ನೂ ಬ್ರಹ್ಮಚಾರಿಯಾಗಿಯೇ ಇದ್ದರು. ಸೆರೆಮನೆಯಲ್ಲಿ "ಬ್ರಹ್ಮಚಾರಿಗಳಿಂದ ಲೋಕಕ್ಕೆ ಪ್ರಯೋಜನವಿಲ್ಲ. ಬ್ರಹ್ಮಚಾರಿಗಳು ಸಂಸಾರದ ಭಾರವನ್ನು ಹೊರುವ ಧೈರ್ಯವಿಲ್ಲದುದರಿಂದ ಒಬ್ಬಂಟಿಗರಾಗಿ ಬೇಜವಾಬ್ದಾರರಾಗಿರುತ್ತಾರೆ. ಸಮಾಜಕ್ಕೆ ಇವರು, ಆಡಿನ ಕತ್ತಿನ ಮೊಲೆಯಂತೆ. ಬ್ರಹ್ಮಚಾರಿಗಳಿಗೆಲ್ಲಾ ದಂಡವಿಧಿಸಿ ಆ ದಂಡವನ್ನು ಗ್ರಹಸ್ಥರ ಉಪಯೋಗಕ್ಕೆ ಕೊಡಬೇಕು" ಎಂದು ಜನ ಇವರನ್ನು ಹಾಸ್ಯಮಾಡುತ್ತಿದ್ದರು. ಸೂಪರಿಂಟೆಂಡೆಂಟರ ಮಾತನ್ನು ಕೇಳಿ ಬೆಚ್ಚಿಬಿದ್ದರೂ ಸಂಪತ್‌ರವರು "ನನ್ನ ಹೆಂಡತಿ ವಿದ್ಯಾವತಿಯಲ್ಲ, ಕಲ್‌ಚರ್ಡ್" ಅಲ್ಲ ಎಂದು ಹೇಳಲಿಲ್ಲ.

ಅಂತಹ ಪತ್ನೀದ್ರೋಹಿ ಜೈಲಿಗೆ ಹೋದವರಲ್ಲಿ ತಾನೆ ಯಾರು ಇರುತ್ತಾರೆ! ಅವರು ಮನಸ್ಸಿನಲ್ಲಿ "ಮಹಾರಾಯಿತ್ತಿ ಕಲ್‌ಚರ್ಡ್ ಲೇಡಿ ವಿದ್ಯಾವಂತೆ ಇಂಗ್ಲಿಷ್ ಚೆನ್ನಾಗಿ ಮಾತನಾಡುವವಳೇ ನೀನು ಯಾರೇ ಆಗಿರು, ನಿನ್ನ ದಯೆಯಿಂದ ಈ ಸಲ ಪಾರಾದರೆ ಸಾಕು" ಎಂದುಕೊಳ್ಳುತ್ತಿದ್ದರು. ಸ್ವಲ್ಪ ಹೊತ್ತಾದ ನಂತರ ಸೂಪರಿಂಟೆಂಡೆಂಟರು ಸಂಪತ್‌ರನ್ನು ಬ್ಯಾರಕ್‌ಗೆ ಕಳುಹಿಸಿದರು. ಅಂದು ಛಡಿ ಏಟು ಬೀಳಲಿಲ್ಲ, ಅನಂತರ ನಿಧಾನವಾಗಿ ಸಂಪತ್‌ರಿಗೆ ಗೊತ್ತಾಯಿತು ಇದೇ ಕಲ್ಯಾಣನಗರಿಯ ಕೇಂದ್ರ ಕಾರಾಗಾರಕ್ಕೆ ಡಿಟೆನ್ಯುಗಳಾಗಿ ರಾಮುವೂ ಅವನ ಹೆಂಡತಿಯೂ ಬಂದಿದ್ದರು. ವಾಸುವಿನ ಹೆಂಡತಿ ಚೆನ್ನಾಗಿ ಇಂಗ್ಲಿಷ್ ಕಲಿತ "ಕಲ್‌ಚರ್ಡ್ ಲೇಡಿ" ಸೂಪರಿಂಟೆಂಡೆಂಟರು ಆಕೆಯನ್ನು ಸಂಪತ್‌ರವರ ಹೆಂಡತಿ ಎಂದು ತಿಳಿದು ಸಂಪತ್‌ರವರಲ್ಲಿ ರಿಯಾಯಿತಿ ತೋರಿಸಿದರು. ಸಂಪತ್‌ರನ್ನು ನೀನು ಬೇಗ ಮದುವೆಯಾಗಬೇಕೆಂದು ಡಿಟೆನ್ಯುಗಳು ಹೇಳುವುದಕ್ಕೆ ಇದೂ ಒಂದು ಕಾರಣವಾಯಿತು.

ಕ್ರಿಮಿನಲ್ ಖೈದಿಗಳ ಮೇಲೆ ಲಾಠಿಛಾರ್ಜು ಮಾಡಿಸುವ ಧೈರ್ಯ ಸೆರೆಮನೆಯ ಅಧಿಕಾರಿಗಳಿಗೆ ಯಾವಾಗಲೂ ಉಂಟಾಗಲಿಲ್ಲವೆಂದು ಹೇಳಿದ್ದೇವೆ. ಸೆರೆಮನೆಯಲ್ಲಿ ನಡೆಯುವ ಲಾಠಿಛಾರ್ಜು ಯಾವಾಗಲೂ ರಾಜಕೀಯ ಬಂದಿಗಳ ಮೇಲೆಯೆ. ಹೊನ್ನಯ್ಯ ಎಂಬುವವರನ್ನು ಗಡೀಪಾರು ಮಾಡಿದರಷ್ಟೆ. ಈ ದೇಶದಲ್ಲಿ ಯಾವ ದೇಶದವರು ಬೇಕಾದರೂ ಬಂದು ಇರಬಹುದು. ಇದು ಎಲ್ಲರಿಗೂ ಪೂರ್ಣಯ್ಯನವರ ಛತ್ರ ಜರ್ಮನಿ ಜಪಾನ್ ಹಾಲೆಂಡ್ ಆಫಘಾನಿಸ್ಥಾನ ಇಟಲಿ ದೇಶಗಳವರೆಲ್ಲ ಇರಬಹುದು. ಯಹೂದಿಗಳು ಬಂದು ಇಲ್ಲಿ ಉದ್ಯೋಗವನ್ನೂ ಸಂಪಾದಿಸಬಹುದು. ಇಂಗ್ಲಿಷಿನವರಂತೂ ಸರಿಯೇ ಸರಿ. ಆದರೆ ಈ ದೇಶದಲ್ಲಿ ಹುಟ್ಟಿ ಬೆಳೆದ ಈ ದೇಶದ ಭೂಮಿಯನ್ನು ಉಳುವ ಈ ಸರ್ಕಾರದ ಪ್ರಜೆಗಳಿಗೆ ಗಡೀಪಾರು; ಪ್ರತಿಬಂಧಕಾಜ್ಞೆ. ಅವನು ನಮ್ಮ ದೇಶದ ಪ್ರಜೆಯಾಗಿರುವುದೇ ಸಾಕು; ಅವನ ಮೇಲೆ ಗಡಿಪಾರು ಆಜ್ಞೆಗೆ. ರಾಬರ್ಟ್ ಬ್ರೂಸ್‌ನ ಕಥೆಯನ್ನು ನೀವು ಕೇಳಿದ್ದೀರಿ. ಸ್ಕಾಟ್ಲೆಂಡು ದೇಶ ಸ್ವಾತಂತ್ರ್ಯಕ್ಕಾಗಿ ಇಂಗ್ಲಿಷರಿಗೆ ಎದುರಾಗಿ ಹೋರಾಡುತ್ತಿದ್ದಾಗ, ಮೊದಲು ರಾಬರ್ಟ್‌ಬ್ರೂಸ್ ಸ್ಕಾಟ್ಲೆಂಡಿನವರಿಗೆ ಎದುರಾಗಿ ಇಂಗ್ಲಿಷರ ಪರವಾಗಿ ಕಾದಾಡಿ ತನ್ನ ದೇಶದವರನ್ನೇ

ಕತ್ತರಿಸಿಹಾಕಿದನು ಅದು ಕೈಗೆ ಕೈ ಮಿಲಾಯಿಸಿ ಕತ್ತಿ ಗುರಾಣಿಗಳನ್ನು ಹಿಡಿದುಕೊಂಡು ಕಾದಾಡುತ್ತಿದ್ದ ಕಾಲ. ಹೀಗೆ ತನ್ನ ದೇಶದವರನ್ನು ಕೊಂದನಂತರ ಧೀರನಾದ ರಾಬರ್ಟ್ ಬ್ರೂಸ್, ಕೈ ರಕ್ತವಾಗಿದ್ದರೂ ಅದನ್ನು ತೊಳೆದುಕೊಳ್ಳದೆ ಹೊಸದಾಗಿ ಮಿತ್ರರಾದ ಇಂಗ್ಲಿಷಿನವರೊಂದಿಗೆ ಊಟಕ್ಕೆ ಕುಳಿತನು. ಆಗ ಆ ಹೊಸ ಸ್ನೇಹಿತರ ಪೈಕಿ ಒಬ್ಬ ಮತ್ತೊಬ್ಬನೊಂದಿಗೆ "ನೋಡು. ನೋಡು ರಾಬರ್ಟಬ್ರೂಸನು ತನ್ನ ರಕ್ತವನ್ನೇ ತಾನು ಕುಡಿಯುತ್ತಿದ್ದಾನೆ" ಎಂದನು. ಅವರು ಬ್ರೂಸನನ್ನು ನೋಡಿ ಹಾಸ್ಯಮಾಡುತ್ತಿದ್ದರು. ಆ ಮಾತನ್ನು ಕೇಳಿ ಬ್ರೂಸನಿಗೆ ಜ್ಞಾನೋದಯವಾಯಿತು. ಅವನು ಸರ್ರನೆ ಎದ್ದು ನಿಂತನು. ತನ್ನ ದೇಶದವರನ್ನು ಕೊಂದುದಕ್ಕಾಗಿ ತಲೆ ಚಚ್ಚಿಕೊಂಡನು. ನಾಚಿಕೆಯೂ ದುಃಖವೂ ಹೆಚ್ಚಾಯಿತು. ಊಟವನ್ನು ಬಿಟ್ಟು ಎದ್ದುಹೋಗಿ ಮಗ್ಗುಲಲ್ಲಿದ್ದ ಚರ್ಚಿನಲ್ಲಿ ಬಹಳ ಹೊತ್ತು ದೇವರ ಮುಂದೆ ಇನ್ನು ಮುಂದೆ ಸ್ಕಾಟ್ಲೆಂಡಿನ, ತನ್ನ ದೇಶದ ಸ್ವಾತಂತ್ರ್ಯಕ್ಕೆ ವಿರೋಧವಾಗಿ ಕಾದುವುದಿಲ್ಲವೆಂದು ಶಪಥ ಮಾಡಿದನು. ಅಲ್ಲಿಂದ ಮುಂದೆ ಅವನು ಇಂಗ್ಲಿಷರ ಮೇಲೆಯೇ ಯುದ್ಧವನ್ನು ಹೂಡಿದನು. ಇವತ್ತಿಗೂ ಇಂಗ್ಲೆಂಡಿನ ಹುಡುಗರ ಪುಸ್ತಕಗಳಲ್ಲಿ ರಾಬರ್ಟ್ ಬ್ರೂಸ್‌ನ ಕತೆಯನ್ನು ಸ್ವಾತಂತ್ರ ಪ್ರಿಯನ ಕತೆಯೆಂದು ಬೋಧಿಸುತ್ತಾರೆ. ಇದು ಆತ್ಮಗೌರವವುಳ್ಳ ದೇಶಗಳ ಮಾತಾಯಿತು. ಇರಲಿ.

ಕೇಂದ್ರ ಕಾರಾಗಾರದಲ್ಲಿ ಹೊನ್ನಯ್ಯನಿಗೆ ಗಡೀಪಾರು ಆಜ್ಞೆ ಜಾರಿಯಾಯಿತು. ಆಗ ರಾಜಬಂದಿಗಳೆಲ್ಲಾ ಒಟ್ಟಾಗಿ ಊಟಕ್ಕೆ ಕುಳಿತಿದ್ದರು. ಸೆರೆಮನೆಯ ವಾರ್ಡರ್‌ಗಳು ತಾವು ಧರಿಸಿದ್ದ ಬೂಟ್ಸ್ ಸಮೇತರಾಗಿ ಗಡಿಪಾರು ಆಜ್ಞೆಯನ್ನೂ ಕೈಯ್ಯಲ್ಲಿ ಹಿಡಿದುಕೊಂಡು ಹೊನ್ನಯ್ಯನನ್ನು ಹೊರಡಿಸಲು ಬಂದರು. ಊಟಕ್ಕೆ ಕುಳಿತಿದ್ದ ರಾಜಬಂದಿಗಳು "ಸ್ವಲ್ಪ ತಾಳಿ. ಎಲ್ಲರೂ ಊಟಮಾಡುತ್ತಿರುವಾಗ ಬೂಟ್ಸು ಕಾಲಿನೊಂದಿಗೆ ಬರಬೇಡಿ. ಊಟಮಾಡಿದ ಮೇಲೆ ಬನ್ನಿ" ಎಂದರು. ಸೆರೆಮನೆಯ ಅಧಿಕಾರಿಗಳಿಗೆ ಉಂಟಾಗಿದ್ದ ಕೋಪ ಪರಮಾವಧಿಯನ್ನು ಏರಿತು. ಅವರು ಕೂಡಲೆ ಲಾಠಿಛಾರ್ಜಿಗೆ ಅಪ್ಪಣೆ ಮಾಡಿದರು. ಸೆರೆಮನೆಯಲ್ಲಿ ಒಂದೊಂದು ಬ್ಯಾರಕ್‌ನಲ್ಲಿಯೂ 50-60 ಜನ ಹಿಡಿಯುತ್ತದೆಯಷ್ಟೆ. ಬ್ಯಾರಕ್ ಸುತ್ತ ಮರದ ತೀರುಗಳನ್ನು ನೆಟ್ಟು ಒಂದು ಬಾಗಿಲು (ಗೇಟ್) ಇಟ್ಟಿರುತ್ತಾರೆ. ಬಾಗಿ

ಲಿಗೆ ಬೀಗ ಹಾಕಿದರೆ ಆಚೆಗೆ ಹೋಗಲು ಸಾಧ್ಯವಾಗುವುದಿಲ್ಲ. ಲಾಠಿ ಛಾರ್ಜು ಮಾಡುವಾಗ ಬಾಗಿಲಿಗೆ ಬೀಗ ಹಾಕಿಬಿಡುತ್ತಾರೆ. ಬ್ಯಾರಕ್ ಬಾಗಿಲು ಮೊಧಲೇ ಮುಚ್ಚಿರುತ್ತದೆ. 1940 ನೇ ಇಸವಿಯ ಲಾಠಿಛಾರ್ಜು ಬಹು ಕ್ರೂರವಾಗಿದ್ದಿತು. ಅಧಿಕಾರಿಗಳೆಲ್ಲಾ ಆಗ ತಮ್ಮ ಲಾಠಿ ಅಭ್ಯಾಸ, ಮರೆತುಹೋಗಿದ್ದುದನ್ನು ಅಭ್ಯಾಸಕ್ಕೆ ತಂದುಕೊಂಡರು. ರಾಜಕೀಯ ಬಂದಿಗಳು ಯಾವ ಮೂಲೆಯಲ್ಲಿ ಅವಿತುಕೊಂಡರೂ ಬಿಡಲಿಲ್ಲ. ಕೆಲವ ರಂತೂ ಧೀರರಾಗಿ "ಎಲ್ಲಿ ನೋಡೋಣ ಗಾಂಧಿಕಿ ಜೈ ಎನ್ನು" ಎನ್ನು ವುದು. ಬಂದಿಯು ಗಾಂಧಿಕಿ ಜೈ ಎಂದರೆ ತಲೆಯ ಮೇಲೆ ಲಾಠಿಯಲ್ಲಿ ಬಿಡುವುದು, ಹೀಗೆ ಆನಂದಗೊಂಡರು. ಅನೇಕರ ತಲೆಯಿಂದ ರಕ್ತ ಸೋರಿತು. ವಾಸಪ್ಪನವರಿಗೆ ಏಟು ಬಿದ್ದ ಕೂಡಲೆ ಜ್ಞಾನಹೋಯಿತು. ಆಗ ಇಬ್ಬರು ವಾರ್ಡರು ಅವರನ್ನು ದರದರನೆ ತಲೆ ಕತ್ತರಿಸಿದ ಆಡು ಕುರಿ ಗಳನ್ನು ಎಳೆದುಕೊಂಡು ಹೋಗುವಂತೆ ಎಳೆದುಕೊಂಡು ಹೋದರು. ವಾಸಪ್ಪನಿಗೆ ಏಟು ಬಿದ್ದಕೂಡಲೇ ಅವನ ತಲೆಯಿಂದ ರಕ್ತದ ಕಾಲುವೆ ಹರಿಯತೊಡಗಿತು. ಒಬ್ಬ ವಾರ್ಡರ್‌ನು ಅವನ ಎರಡು ಕಾಲುಗಳನ್ನೂ ಹಿಡಿದುಕೊಂಡನು. ಮತ್ತೊಬ್ಬನು ಅವನ ಒಂದು ತೋಳನ್ನು ಹಿಡಿದು ಕೊಂಡನು, ರಕ್ತದೊಂದಿಗೆ ತಲೆ ನೆಲದ ಮೇಲೆ ಎಳೆಯುತ್ತಿದ್ದಿತು, ಹಾಗೇ ಎಳೆದುಕೊಂಡು ಹೋಗಿ ಹಾಕಿದರು. ಆಗ ಮತ್ತೊಬ್ಬ ರಾಜಕೀಯ ಬಂದಿ ಶ್ರೀನಿವಾಚಾರ್ಯರು "ಏನ್ರಿ ನೀವು ಕಟುಕರೆಲ್ರಿ—ಅನ್ಯಾಯವಾಗಿ ಸಾಯುತ್ತಾನೆಲ್ರಿ ಇಲ್ಲಿಗಾದರೂ ಕರೆದುಕೊಂಡು ಬನ್ನಿ" ಎಂದರು. ಎದು ರಿಗಿದ್ದ ಮತ್ತೊಬ್ಬ ವಾರ್ಡರು 'ಮುಚ್ಚು ಬಾಯಿ' ಎಂದು ಅವರ ತಲೆಗೆ ಒಂದು ಬಿಟ್ಟನು.

ಜನವರಿ ತಿಂಗಳು ಸೆರೆಮನೆಯ ರಾಜಕೀಯ ಬಂದಿಗಳಿಗೆ ಕೆಟ್ಟ ತಿಂಗಳು. 1940 ನೇ ಜನವರಿ ತಿಂಗಳಿನಲ್ಲಿ ಕಲ್ಯಾಣನಗರಿಯ ಸೆರೆಮನೆಯಲ್ಲಿ ರಾಜ ಬಂದಿಗಳ ಮೇಲೆ ಲಾಠಿಛಾರ್ಜು ಆಯಿತು. 1943 ನೇ ಜನವರಿಯ ಲ್ಲಿಯೂ ಲಾಠಿಛಾರ್ಜು ಆಯಿತು. 1942 ನೇ ಇಸವಿ ಚಳುವಳಿಯಲ್ಲಿ ಕಲ್ಯಾಣ ನಗರಿಯ ಕೇಂದ್ರ ಕಾರಾಗಾರದಲ್ಲಿ ರಾಜಬಂದಿಗಳು ಎರಡು ಸಾವಿರಕ್ಕೆ ಹೆಚ್ಚಾಗಿ ಸೇರಿದರು. ಅವರಿಗೆ ನಿಲ್ಲುವುದಕ್ಕೆ ಸಹ ಸ್ಥಳವಿರುತ್ತಿರಲಿಲ್ಲ. ಎಲ್ಲಿಂದ ಎಲ್ಲಿಯವರೆಗೆ ನೋಡಿದರೂ ಅಷ್ಟು ಜನರ ದೊಂಬಿ. ಇಷ್ಟೊಂದು

ಜನರ ಊಟ ತಿಂಡಿ ವ್ಯವಸ್ಥೆ ಮಾಡುವುದು ಸರ್ಕಾರಕ್ಕೆ ಸುಲಭವಾದ ಕೆಲಸವೇ? ಸರಿ, ಅವರು ಒಬ್ಬನಿಗೆ ಕಂಟ್ರಾಕ್ಟ್ ಕೊಟ್ಟರು. ಪ್ರತಿ ದಿನವೂ ಎರಡು ಹೊತ್ತು ಎರಡು ಸಾವಿರ ಜನಕ್ಕೆ ಅಡಿಗೆ ಒದಗಿಸುವುದು ಯಾವ ಕಂಟ್ರಾಕ್ಟರಿಗೂ ಸಾಧ್ಯವಿಲ್ಲ. ಅದರಲ್ಲಿಯೂ ಹೋಟಲು ಇಟ್ಟ ಕಂಟ್ರಾಕ್ಟರಾದರೆ ದೇವರೇ ಗತಿ. ಹೋಟಲಿಗೆ ಊಟಕ್ಕೆ ಒಂದು ಗಳಿಗೆ ಹೊತ್ತಾಗಿ ಬಂದವರಿಗೇ ಪಲ್ಯ ಇಲ್ಲ ಹುಳಿ ಇಲ್ಲ. ಇನ್ನು ಸೆರೆಮನೆಯ ಖೈದಿಗಳಿಗೆ ಕೇಳಬೇಕು! ಆ ಕಾಲದಲ್ಲಿ ಕಲ್ಯಾಣನಗರಿಯ ಸೆರೆಮನೆಯಲ್ಲಿ ಎಲ್ಲಾ ರಾಜಬಂದಿಗಳಿಗೂ ಅರ್ಧ ಹೊಟ್ಟೆಯೇ. ಮಜ್ಜಿಗೆಯಂತೂ ನೀರೆ. ಆ ತುಪ್ಪ ಎಂಬ ಪದಾರ್ಥ ಒಂದು ಮಾರಿನಿಂದಲೇ ದುರ್ವಾಸನೆ ಹೊಡೆಯುತ್ತಿದ್ದಿತು. ತರಕಾರಿ ಬೇಳೆ ಹಾಕುವುದಿಲ್ಲವೆಂದು ಕಂಟ್ರಾಕ್ಟರ್ ಪ್ರತಿಜ್ಞೆ ಮಾಡಿದ್ದನು. ಮುಖ್ಯ ತಪ್ಪು ಕಂಟ್ರಾಕ್ಟರದಲ್ಲ. ಅವನಿಗೆ ಆಗುವ ಖರ್ಚು ಆಗುತ್ತಿದ್ದಿತು. ಖೈದಿಗಳಿಗೆ ತಲಪುತ್ತಿರಲಿಲ್ಲ.

ರಾಜಬಂದಿಗಳ ಕಾಟ ಹೆಚ್ಚಾಯಿತು. ಸೆರೆಮನೆಯ ಅಧಿಕಾರಿಗಳು ಮತ್ತೊಂದು ಸಲ ಲಾಠಿ ಪ್ರಯೋಗಿಸಬೇಕೆಂದು ಯೋಚಿಸುತ್ತಿದ್ದರು. ಕಂಟ್ರಾಕ್ಟರು ಯಾರೋ ದೊಡ್ಡ ಅಧಿಕಾರಿಯ ಸಂಬಂಧ, ಅವರಿಗೆ, " ಸೆರೆಮನೆಯ ರಾಜಬಂದಿಗಳು ಕಂಟ್ರಾಕ್ಟರಿಗೆ ಕೊಡುವ ಕಿರುಕುಳದಿಂದ ಬೇಜಾರಾಗಿದೆ. ಸೆರೆಮನೆಯ ಅಧಿಕಾರಿಗಳಿಗೆ ಶಿಸ್ತು ಇಲ್ಲವೆಂದು ಆ ಮೇಲಧಿಕಾರಿಗಳು ಕೂಗಾಡುತ್ತಿದ್ದಾರೆ" ಎಂದು ಸುದ್ದಿ ಹರಡಿತು. ಆಗಸ್ಟ್ 9 ನೇ ತಾರೀಖಿನಿಂದ ಈಚೆಗೆ ಪ್ರತಿ ತಿಂಗಳೂ 9 ನೇ ತಾರೀಖು ಸೆರೆಮನೆಯಲ್ಲಿಯೂ ರಾಜಬಂದಿಗಳು ರಾಷ್ಟ್ರ ಬಾವುಟನ್ನು ಏರಿಸುತ್ತಿದ್ದರು. ರಾಜಬಂದಿಗಳಿರುವ ಎಲ್ಲಾ ಸೆರೆಮನೆಗಳಲ್ಲಿಯೂ ಇದು ನಡೆಯುತ್ತಾ ಬರುತ್ತಿದ್ದಿತು. ಕೇಂದ್ರ ಕಾರಾಗಾರದಲ್ಲಿಯೂ ಆಗಸ್ಟ್‌ನಿಂದ ಇದು ಒಂದೇ ಸಮನೆ ನಡೆದಿದ್ದಿತು. ಆದರೆ ಸೆರೆಮನೆಯ ಅಧಿಕಾರಿಗಳಿಗೆ ಇದರಿಂದ ಕಿರುಕಿಳವಾಗಿರಲಿಲ್ಲ. ೪೩ ನೆಯ ಜವನರಿ ತಿಂಗಳು ಪದ್ಧತಿಯಂತೆ ಬಂದಿಗಳು ರಾಷ್ಟ್ರಧ್ವಜವನ್ನು ಏರಿಸಿದಾಗ ಛೀಫ್ ಜೈಲರ್ ಇದ್ದಕ್ಕಿದ್ದಂತೆ ಲಾಠಿಛಾರ್ಜಿಗೆ ಆರ್ಡರು ಕೊಟ್ಟರು. ಛೀಫ್ ಜೈಲರ್ ಮಾತಿನಲ್ಲಿ ಮೃದು; ಒಳ್ಳೆಯ ಥಳಕಿನವರು; ಸಾಹಿತಿ. ಅವರೇ ಆ ದಿನದ ಶೂರರು. ಸೆರೆಮನೆಯ ವಾತಾವರಣ ಅಂತಹುದು. ಅದು ಎಂತಹವನನ್ನೂ ಪಶು

ವನ್ನಾಗಿ ಮಾಡುತ್ತದೆ. ಸರ್ಕಾರಿ ಅಧಿಕಾರ, ಸಾಹಿತ್ಯವನ್ನು ಪೂರ್ತ ಜೀರ್ಣಿಸಿಕೊಳ್ಳುತ್ತದೆ. ಸೆರೆಮನೆಯ ಅಧಿಕಾರ, ಮನುಷ್ಯತ್ವವನ್ನು ನುಂಗುತ್ತದೆ. ವಾರ್ಡರುಗಳು ಬಂದಿಗಳನ್ನು ಓಡಿಸಿಕೊಂಡು ಹೋಗಿ ಅವರು ಎಲ್ಲಿ ಅವಿತುಕೊಂಡರೂ ಬಿಡದೆ ಹೊಡೆದರು. ಪ್ರಾಣಾಚಾರ್ಯ ಪಂಡಿತರು "ಅಯ್ಯೋ ಛೀಪ್ ಜೈಲರ್; ಎಲ್ಲಿ ನಿಲ್ಲಿಸು; ಪಾಪ ಹುಡು ಗರ ತಲೆ ಒಡೆಯುತ್ತೆ" ಎಂದು ಕೂಗಿದರು. ಪ್ರಾಣಾಚಾರ್ಯರು ಛೀಪ್ ಜೈಲರ್‌ನ ಕೈ ಹಿಡಿದುಕೊಂಡಿರುವಾಗಲೇ ಪ್ರಾಣಾಚಾರ್ಯರ ತಲೆಗೆ ಒಂದು ಲಾಠಿ ಬಿತ್ತು. ರಕ್ತ ಚಿಲ್ಲೆಂದು ಹೊರಟಿತು. ಪ್ರಾಣಾಚಾರ್ಯರು ಜ್ಞಾನ ತಪ್ಪಿ ಕೆಳಕ್ಕೆ ಬಿದ್ದರು. ಇನ್ನೂ ಒಬ್ಬರು ಇಬ್ಬರು ಸಿಕ್ಕಲಿಲ್ಲವೆಂದು ವಾರ್ಡರುಗಳು ಎಲ್ಲೆಲ್ಲೂ ಹುಡುಕಾಡಿದರು. ಕೊನೆಗೆ ದೂರದಲ್ಲಿ ನಲ್ಲಿಯ ಬಳಿ ಸ್ನಾನಮಾಡುತ್ತಾ ನಿಂತಿದ್ದ ದೇವಪ್ಪನವರ ತಣ್ಣೀರು ಹರಿಯುತ್ತಿದ್ದ ಬೆನ್ನಿನ ಮೇಲೆ ಒಂದು ಬಿಟ್ಟರು.

ಸಾಧಾರಣವಾಗಿ ಲಾಠಿಯಲ್ಲಿ ಸೊಂಟದಿಂದ ಕೆಳಕ್ಕೆ ಹೊಡೆಯ ಬೇಕೆಂದು ಹೇಳಿದೆ. ಆದರೆ ಪಿಶಾಚಿಗಳಂತೆ ನುಗ್ಗುತ್ತಿರುವ ಆ ವಾರ್ಡರು ಗಳಿಗೆ ಅದು ಅರಿವಾಗುತ್ತದೆಯೇ. ಅವರು ಯಾವಾಗಲೂ ತಲೆಯ ಮೇಲೆಯೇ ಕೊಡುತ್ತಾರೆ. ಸಾಯಿಸಬೇಕೆಂಬ ಉದ್ದೇಶದಿಂದಲೇ ಕೊಡುತ್ತಾರೆಯೋ ಎಂಬಂತೆ ಕಾಣುತ್ತದೆ. ಪ್ರತಿ ಸಲವೂ ಲಾಠಿ ಆದ ಮೇಲೆ ಆಸ್ಪತ್ರೆಗೆ ಸೇರುವ ಘಾಯಗೊಂಡವರ ಪೈಕಿ ತಲೆಯ ಘಾಯ ದವರೇ ಹೆಚ್ಚು. ನ್ಯಾಯವಾಗಿ ಸೂಪರಿಂಟೆಂಡೆಂಟರು ಇಂತಹ ಹತ್ಯಗಳಿಗೆ ಆರ್ಡರು ಕೊಡಬೇಕು. ಒಂದು ಸಲ ಛೀಪ್ ಜೈಲರೇ ಕೊಟ್ಟ. ಇನ್ನೊಂದು ಸಲ ಒಬ್ಬ ವಾರ್ಡರ್ ಸಹ ಕೊಡಬಹುದು! ಇಂತಹವರು ಮಾಡಿದ ಈ ಕೆಲಸಗಳನ್ನು ನ್ಯಾಯವಿಧಾಯಕ ಸಭೆಗಳಲ್ಲಿ 'ಸರಿ' ಎಂದು ತೋರಿ ಸಲು ತಮ್ಮ ಅದ್ಭುತವಾದ ಬುದ್ಧಿಯನ್ನೆಲ್ಲಾ ಉಪಯೋಗಿಸಬೇಕಾಗಿರು ವುದು. ದೇಶದ ಆಡಳಿತದ ಹೊರೆಯನ್ನು ಹೊತ್ತವರ ದುರದೃಷ್ಟ. ಇಂತಹ ಸಂದರ್ಭಗಳಲ್ಲಿ ಅವರು ಎಳೆ ಮಗು ಸಹ ನಗಬಹುದಾದ ಹಾಸ್ಯಾಸ್ಪದವಾದ ಹೇಳಿಕೆಗಳನ್ನು ಕೊಡುವರು. ಕೈಯ್ಯಲ್ಲಿ ಪಿಸ್ತೂಲನ್ನು ಹಿಡಿದುಕೊಂಡು ಲಾಠಿ ಪೋಲೀಸ್ ಮತ್ತು ರಿಸರ್ವ್ ಪೋಲೀಸ್ ದಳಗ ಳಿಂದ ಸುತ್ತಲ್ಪಟ್ಟಿರುವ ಛೀಪ್ ಜೈಲರ ಮೇಲೆ, ಕಂಟ್ರಾಕ್ಟರು ಅರೆ

ಹೊಟ್ಟೆಗೆ ಹಾಕುವ ಬೂದಿ ಮಣ್ಣು ಬೆರಸಿದ ಅನ್ನವನ್ನೂ ಹುಳು ಈಜುತ್ತಿರುವ ಸಾರನ್ನೂ ತಿಂದ ರಾಜಕೀಯಬಂದಿ ಕೈ ಮಾಡಲು ಪ್ರಯತ್ನಿಸಿದನೆಂದೂ, ಅದರ ಫಲವಾಗಿ ಲಾಠಿಛಾರ್ಜು ಆಯಿತೆಂದೂ ಹೇಳುವುದಕ್ಕೆ ಸಹ ಅವರಿಗೆ ನಾಚಿಕೆಯಾಗುವುದಿಲ್ಲ. ತಮ್ಮ ಬುದ್ಧಿ ಶಕ್ತಿಯನ್ನೇ ತಾವು ಈ ರೀತಿ ಅವಮಾನಗೊಳಿಸುತ್ತಿರುವೆನೆಂಬುದು ಅವರಿಗೆ ತಿಳಿಯುವುದಿಲ್ಲ. ಎಲ್ಲಿಯವರೆಗೆ ಮೇಲಧಿಕಾರಿಗಳು, ಕೆಳಗಿನವರಲ್ಲಿ ತೋರುವ ನೀಚತನವನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸುವುದನ್ನು ಅಭ್ಯಾಸಮಾಡಿಕೊಳ್ಳುವುದಿಲ್ಲವೋ ಅಲ್ಲಿಯವರೆಗೆ, ಕೆಳಗಿನವರಿಗೆ ತಾವು ಏನು ಮಾಡಿದರೂ ನಡೆಯುತ್ತೆ ಎಂಬ ಧೈರ್ಯ ತಪ್ಪುವುದಿಲ್ಲ.

ಈಚೆಗೆ ರಾಜಕೀಯ ಬಂದಿಗಳ ವಿಚಾರದಲ್ಲಿ ಸೆರೆಮನೆಯ ಅಧಿಕಾರಿಗಳಿಗೆ ಲಾಠಿಛಾರ್ಜು ಒಂದೇ ಔಷಧಿಯಾಗಿ ತೋರುತ್ತಿದೆ. 15-16 ವರುಷದ ಹುಡುಗರು ಕೆಲವರು, ಇನ್ನೂ ವಿಚಾರಣೆಯಾಗದವರು, ಒಂದು ಸಲ ಕಾಫಿ ಕೇಳಿದರೆ ಸೆರೆಮನೆಯ ಅಧಿಕಾರಿ ಕೊಡಲಿಲ್ಲ. ಇವರು ಪಾಠಶಾಲೆಯ ವಿದ್ಯಾರ್ಥಿಗಳು ಹುಡುಗರು ಎಂಬ ಜ್ಞಾನ ಸೆರೆಮನೆಯ ಸೂಪರಿಂಟೆಂಡೆಂಟರಿಗೆ ಬರಲಿಲ್ಲ. ಇಪ್ಪತ್ತು ಲೋಟ ಕಾಫಿಗೆ ಹತ್ತು ಆಣೆ. ಅಧಿಕಾರಿ ಆ ಹತ್ತು ಆಣೆ ಕೈಯಿಂದ ಕೊಟ್ಟಿದ್ದರೂ ಆಗಿದ್ದಿತು. ಮನುಷತ್ವವಿರುವ ಯಾವ ಅಧಿಕಾರಿತಾನೇ ವಿದ್ಯಾರ್ಥಿಗಳ ಮೇಲೆ ಕೈಮಾಡಿಸಲು ಮನಸ್ಸು ಮಾಡಿಯಾನು? ಹತ್ತು ಲೋಟ ಕಾಫಿ, ದೇಶ ಸೇವೆಗಾಗಿ ಸೆರೆ ಸೇರಿರುವ, ನಿಷ್ಕಾರಣವಾಗಿ ಸರ್ಕಾರದವರು ಬಂಧಿಸಿರುವ ರಾಜಬಂದಿ ವಿದ್ಯಾರ್ಥಿಗಳಿಗೆ ಸಲ್ಲಕೂಡದೇ? ಸೆರೆಮನೆಯ ಅಧಿಕಾರಿಗಳ ವಿವೇಕ ಬುದ್ಧಿ ಎಲ್ಲಿ ಹೋಗಿದೆ! ಈ ಸೂಪರಿಂಟೆಂಡೆಂಟರು ರಿಜರ್ವ್ ಪೋಲೀಸರನ್ನು ಕರೆಸಿ ಕಾಫಿ ಕೇಳಿದ ಹುಡುಗರ ಮೇಲೆ ಲಾಠಿಛಾರ್ಜು ಮಾಡಿಸಿದರು. ಅದರ ಫಲವಾಗಿ ಅನೇಕ ವಿದ್ಯಾರ್ಥಿಗಳ ತಲೆ ಒಡೆಯಿತು. ಒಬ್ಬ ವಿದ್ಯಾರ್ಥಿ ಸತ್ತನು. ಆಮೇಲೆ ಅವನು ಸತ್ತುದು ಬೇರೆ ಕಾರಣದಿಂದ ಎಂಬುದನ್ನು ಸ್ಥಾಪಿಸಲು ಪತ್ತುಕೋಟಿ ಉತ್ಪತ್ತಿಯ ಸರ್ಕಾರದ ಪೂರ್ಣ ಬಲವೂ ವಿನಿಯೋಗವಾಗುತ್ತಿದೆ. ಸರ್ಕಾರದವರು ಯಾವಾಗ ಕೇಳಲಿ ಒಂದೇ ಗಿಳಿಪಾಠ; ಮೃದುವಾಗಿ ಲಾಠಿಛಾರ್ಜು. ಯಾವಾಗ ತಲೆ ಒಡೆದರೂ ಲಾಠಿಛಾರ್ಜು ಮೃದುವೆ! ತಲೆಯ ಮೇಲೆ ಯಾಕೆ

ಹೊಡೆದಿರಿ ಎಂದು ಸರ್ಕಾರ ಕೆಳಗಿನ ಅಧಿಕಾರಿಗಳನ್ನು ಕೇಳುವುದಿಲ್ಲ. ಇವರು ಏನೋ ಕೇಳುತ್ತಾರೆ. ಅವರು ಯಾವುದೋ ಸುಳ್ಳಿನ ಬುರುಡೆ ಹೇಳುತ್ತಾರೆ. ಅದನ್ನೇ ಸರ್ಕಾರ ಮಕ್ಕಿಕಾ ಮಕ್ಕಿ ಪ್ರಜೆಗಳ ಮುಂದೆ ಒಪ್ಪಿಸುತ್ತಾರೆ.

ಸೆರೆಮನೆಯ ಶಿಸ್ತನ್ನು ಪಾಲಿಸುವುದು ಅಧಿಕಾರಿಗಳ ಕರ್ತವ್ಯ. ಲಾಠಿ ಛಾರ್ಜ್, ಫೈರಿಂಗ್ ಇವುಗಳನ್ನು ಮಾಡಿಯೂ ಸೆರೆಮನೆಯ ಶಿಸ್ತನ್ನು ಪಾಲಿಸಬೇಕಾದುದೇ. ಆದರೆ ಈ ಕಾನೂನುಗಳನ್ನೆಲ್ಲಾ ಕ್ರಿಮಿನಲ್ ಖೈದಿಗಳನ್ನು ಲಕ್ಷ್ಯದಲ್ಲಿಟ್ಟುಕೊಂಡೇ ಮಾಡಿದ್ದಾರೆ. ಆದರೆ ಅವುಗಳನ್ನು ರಾಜಕೀಯ ಖೈದಿಗಳಿಗೆ ವಿರೋಧವಾಗಿ ಮಾತ್ರವೇ ಉಪಯೋಗಿಸುತ್ತಾರೆ. ಕ್ರಿಮಿನಲ್ ಖೈದಿಗಳನ್ನು ಕಂಡರೆ ಅಧಿಕಾರಿಗಳು ಹೆದರುತ್ತಾರೆ. ಸೆರೆಮನೆಯನ್ನು ಪ್ರವೇಶಿಸಿದ ಎರಡು ನಿಮಿಷಗಳೊಳಗಾಗಿ ಇದು ಗೊತ್ತಾಗುತ್ತದೆ.

1940ನೆ ಇಸವಿಯಲ್ಲಿ ಕೇಂದ್ರ ಕಾರಾಗಾರದಲ್ಲಿ ಲಾಠಿಛಾರ್ಜು ಆದ ಕೂಡಲೇ ರಾಜಕೀಯ ಬಂದಿಗಳನ್ನು ಬೇರೆ ಬೇರೆ ಬದಲಾಯಿಸಲು ಪ್ರಾರಂಭಿಸಿದರು. ಇದು ಯಾವಾಗಲೂ ಲಾಠಿಛಾರ್ಜಿನ ಉತ್ತರ ಅಂಕ. ಒಂದೊಂದು ಲಾಠಿಛಾರ್ಜು, ಜೈಲಿನ ವಾತಾವರಣವನ್ನು ಕೆಡಿಸುತ್ತದೆ. ಅನಂತರ ಕೆಲವುಕಾಲ ಬಂದಿಗಳ ಮುಖವನ್ನು ಧೈರ್ಯವಾಗಿ ನೋಡಲು ಅಧಿಕಾರಿಗಳಿಗೆ ಎದೆ ಇರುವುದಿಲ್ಲ. ಅವರ ಹೇಡಿತನವೂ ಹೆಚ್ಚಾಗುತ್ತದೆ. ದೊಣ್ಣೆಗಳಿಂದ ಖಾದಿ ಟೋಪಿಗಳವರನ್ನು ಹೊಡೆಯುವ ವಾರ್ಡರುಗಳ ಪಶುತ್ವ ಪ್ರತಿಯೊಂದು ಲಾಠಿ ಛಾರ್ಜಿನೊಂದಿಗೂ ಹೆಚ್ಚುತ್ತದೆ. ಹೀಗೆ ಈ ಅಮಾನುಷ ಕೃತ್ಯದಿಂದ ಏಟು ಹೊಡೆಸುವವರ ಹೊಡೆಯುವವರ ಏಟು ತಿಂದವರ ಮೂವರ ನೀತಿಗಳೂ ನಾಶವಾಗುತ್ತದೆ. ಆದರೂ ಸಂಬಂಧಪಟ್ಟ ಅಧಿಕಾರಿಗಳು ಇದು ನಡೆದುದು ತಪ್ಪು ಎಂದು ಹೇಳುವ ಧೈರ್ಯವನ್ನು ಹೊಂದಲಾರದವರಾಗಿದ್ದಾರೆ.

ಹೀಗೆ ಕೇಂದ್ರ ಕಾರಾಗಾರದಲ್ಲಿ ಲಾಠಿ ಛಾರ್ಜು ಆದನಂತರ ಸರ್ಕಾರ ಬಂದಿಗಳನ್ನು ಎರಡು ಭಾಗಮಾಡಿ ಒಂದು ಭಾಗವನ್ನು ತೆಪ್ಪಗಿನ ಹಳ್ಳಿಗೆ ಕಳುಹಿಸಿತು. ರಾಜಬಂದಿಗಳೆಲ್ಲ ಕಠಿಣ ಶಿಕ್ಷೆಗೆ ಒಳಗಾಗಿದ್ದುದರಿಂದ ಅವರಿಗೆ ಅಲ್ಲಿ ಮಣ್ಣು ಹೊರುವ ಕೆಲಸ. ಆ ಜಾಗದಲ್ಲಿ ಒಂದೇ ಒಂದು ಮರ ಸಹ ಇರಲಿಲ್ಲ. ಬಿಸಿಲು ಅಸಾಧ್ಯವಾಗಿದ್ದಿತು. ಸೆರೆಮನೆ

ಯೆಂದು ಒಂದು ಮಣ್ಣಿನ ಮನೆಯನ್ನು ಕಟ್ಟಿದ್ದರು. ಆ ಮನೆ ಸ್ವಲ್ಪ ಗಾಳಿ ಬಂದರೂ ಬೀಳುವಂತೆ ಕಾಣುತ್ತಿದ್ದಿತು. ಮಳೆ ಬಂದಾಗ ಸೆರೆ ಮನೆಯಲ್ಲಿರಲು ಭಯವಾಗುತ್ತಿದ್ದಿತು. ಒಂದೊಂದು ಹಂಚು ಕೆಳಕ್ಕೆ ಉದುರುತ್ತಿದ್ದಿತು. ಇಂತಹ ಸೆರೆಯಿಂದ ಪ್ರತಿದಿನವೂ ರಾಜ ಬಂದಿಗಳು ಅವರನ್ನು ಕೆಲಸಮಾಡಲು ಗೊತ್ತುಮಾಡಿದ್ದ ಸ್ಥಳಕ್ಕೆ ಹೋಗುತ್ತಿದ್ದರು. ಅವರ ಆಚ ಈಚೆ ಹನ್ನೆರಡು ಹನ್ನೆರಡು ಬಂದೂಕದ ಶಿಪಾಯಿಗಳು ಕಾವಲು. ಕಾಂಗ್ರೆಸ್‌ನವರು ಕೆಲಸಮಾಡುತ್ತಿದ್ದ ಸ್ಥಳದಲ್ಲಿಯೇ ಇತರ ಸಾಧಾರಣ ಕೂಲಿಗಳೂ ಕೆಲಸಮಾಡುತ್ತಿದ್ದರು. ಆದರೆ ರಾಜಕೀಯದವರಿಗೂ ಅವರಿಗೂ ಸಂಬಂಧವೇ ಇರಲಿಲ್ಲ. ಅವರು ಇವರು ಬೆರೆಯದಂತೆ ನೋಡಿಕೊಳ್ಳುವುದೇ ಬಂದೂಕದ ಸಿಪಾಯಿ ಕರ್ತವ್ಯವಾಗಿದ್ದಿತು. ದೂರದ ಹಳ್ಳಿಗಳವರು ರಾಜ ಬಂದಿಗಳು ಮಣ್ಣು ಹೊರುತ್ತಿರುವುದನ್ನು ನೋಡಿ "ಕಾಂಗ್ರೆಸ್ಸಿನವರು ಕೆಲಸಮಾಡುತ್ತಿದ್ದಾರೆ" ಎಂದು ಮಾತನಾಡಿಕೊಳ್ಳುತ್ತಿದ್ದರು.

ಆಗ—ಈಗಲೂ—ನಮ್ಮ ದೇಶದಲ್ಲಿ ಆಂಗ್ಲೋ ಇಂಡಿಯನ್ ಸಾರ್ಜೆಂಟರ ಅಧಿಕಾರ ಹೆಚ್ಚು. ಒಂದು ಸಲ ಹುಚ್ಚು ಹತ್ತಿದಂತೆ ಅವರನ್ನು ಒಂದೇ ಸಮನಾಗಿ ಸಂಬಂಧಪಟ್ಟ ಮುಖ್ಯಾಧಿಕಾರಿ ನಿಯಮಿಸುತ್ತಾ ಬಂದರು. ಸರಿ. ಸಂಬಂಧಪಟ್ಟ ಮಂತ್ರಿಗಳು ಶಾಸನ ಸಭೆಯಲ್ಲಿ ನಮ್ಮ ಪೋಲೀಸಿನವರಿಗಿಂತ ಬಿಳಿಯ ಪೋಲೀಸಿನವರು ದಕ್ಷರು ಎಂದು ಕೂಡ ಹೇಳಿ ಪೋಲೀಸ್ ಅಧಿಕಾರಿ ಮಾಡಿದ ಕೆಲಸವನ್ನು ಪುಷ್ಟೀಕರಿಸಿದರು. ಅಂತಹ ಮಾತುಗಳನ್ನು ಹೇಳುವಾಗ ತಮ್ಮ ಆತ್ಮ ಗೌರವ ಎಷ್ಟು ಕಡಿಮೆಯಾಗುತ್ತದೆ ಎಂಬುದೂ ಅವರಿಗೆ ಹೊಳೆಯಲಿಲ್ಲ. ತೆಪ್ಪಗಿನಹಳ್ಳಿಯಲ್ಲಿ ಇಂತಹ ಒಬ್ಬ ದಕ್ಷನಾದ ಬಿಳಿಯ ಪೋಲೀಸ್ ಅಧಿಕಾರಿಯನ್ನು ರಾಜಕೀಯ ಬಂದಿಗಳ ಮೇಲೆ ಕಾವಲು ಹಾಕಿದ್ದರು. ಆ ಸಾರ್ಜೆಂಟಿಗೆ ಪ್ರೇಮ, ಪ್ರೇಮದ ಮಾತು ಪ್ರೇಮದ ಪತ್ರ ಎಂದರೆ ಬಹಳ ಇಷ್ಟ. ರಾಜ ಬಂದಿಗಳ ಪೈಕಿ ಸುದರ್ಶನ ಇಂಗ್ಲಿಷಿನಲ್ಲಿ ಗಟ್ಟಿಗ. ಒಳ್ಳೆ ರಸವಾಗಿ ಮಾತನಾಡುತ್ತಾನೆ. ಈ ದಕ್ಷನಾದ ಸಾರ್ಜೆಂಟಿನ ದೌರ್ಬಲ್ಯ ಅವನಿಗೆ ಗೊತ್ತಾಯಿತು. ಅವನು ಪ್ರೇಮ, ಅದರ ಸ್ವಭಾವ, ಪ್ರೇಮಕ್ಕಾಗಿ ಒಬ್ಬ ಮನುಷ್ಯ ಹೇಗೆ ತನ್ನ ಪ್ರಾಣವನ್ನಾದರೂ ಕೊಡಬೇಕು. "ಕೋಟಿ ಯೋಜನ

ಇರಲಿ ದಾಟಿ ಬರುವೆನು" ಎಂದು ಹೇಳುತ್ತಾನೆ; ಪ್ರೇಯಸಿಯರನ್ನು ಒಲಿಸಿಕೊಳ್ಳುವ ಮಾರ್ಗ ಯಾವುದು; ಪ್ರೇಮ ಪತ್ರವನ್ನು ಹೇಗೆ ಬರೆಯಬೇಕು" ಈ ಮಾತುಗಳನ್ನು ಸಾರ್ಜೆಂಟನೊಂದಿಗೆ ಪ್ರಾರಂಭಿಸಿದ ಕೂಡಲೇ ಸಾರ್ಜಂಟು ಸಿಗರೇಟು ಹತ್ತಿಸಿ ಬ್ರಹ್ಮಾನಂದದಲ್ಲಿ ಹೊಗೆ ಬಿಡುತ್ತಾ, ತಾನು ಮಾಡುತ್ತಿರುವುದು ಕಾನೂನಿಗೆ ವಿರೋಧ ಎಂಬುದನ್ನೂ ಮರೆತು ಸುದರ್ಶನನಿಗೂ ಒಂದು ಸಿಗರೇಟು ಕೊಡುತ್ತಿದ್ದನು. ಸೆರೆಮನೆಯಲ್ಲಿ ಕಠಿಣ ಸಜಾ ಅನುಭವಿಸುವ ಖೈದಿಗಳಿಗೆ ಬೀಡಿ ಸಿಗರೇಟು ಎಂದರೆ ಎಷ್ಟು ಪಾವನ ಎಂಬುದು ಅದರ ಅಭ್ಯಾಸವಿರುವ ಖೈದಿಗಳಿಗೆ ಗೊತ್ತು. ಚಟದಲ್ಲಿ ಮಾದಕ ಪದಾರ್ಥ ಎಷ್ಟೆಷ್ಟು ಹೆಚ್ಚೊ ಅದನ್ನು ಬಿಡುವುದು ಅಷ್ಟಷ್ಟೆ ಕಷ್ಟ. ಅನೇಕ ಖೈದಿಗಳು ಬೀಡಿಗಾಗಿ ಸೆರೆಮನೆಯಲ್ಲಿ ತಮ್ಮ ಪಾಲಿನ ಅನ್ನವನ್ನು ಗುಟ್ಟಾಗಿ ಮಾರುತ್ತಾರೆ. ಬೀಡಿ ಇಟ್ಟುಕೊಂಡಿದ್ದರೆ, ಸೇದಿದರೆ, ಶಿಕ್ಷೆ ಒಂಟಿ ಕೋಠಡಿ ಬಂಧನ, ಹಿಟ್ಟು ಉಪ್ಪು, ಎಂಬುದು ಗೊತ್ತಿದ್ದರೂ ಖೈದಿಗಳು ಅದನ್ನು ಸೇದುತ್ತಾರೆ ಖೈದಿಗಳು ಇತರ ಬಂದಿಗಳ ಮೇಲೆ ಚಾಡಿ ಹೇಳಿ ಅದಕ್ಕೆ ಪ್ರತಿಫಲವಾಗಿ ಅಧಿಕಾರಗಳಿಂದ ಬೀಡಿ ತೆಗೆದುಕೊಳ್ಳುತ್ತಾರೆ. ಕೇಂದ್ರ ಕಾರಾಗಾರದಲ್ಲಿ ಬೀಡಿ ವ್ಯಾಪಾರಮಾಡುವ ಸೆರೆಯಾಳುಗಳೇ ಇದ್ದಾರೆ. ಅವರು ಸೆರೆಮನೆಗೆ ಹೋದವರಿಗೆ ಮಾತ್ರ ಗೊತ್ತಾಗುವ ದಾರಿಯಿಂದ ಬೀಡಿ ತರಿಸಿಟ್ಟುಕೊಂಡಿದ್ದು, ಖೈದಿಗಳಿಗೆ ಒಂದಾಣೆಗೆ ಒಂದು ಬೀಡಿಯಂತೆ ಮಾರುತ್ತಾರೆ.

ಸುದರ್ಶನ ಆ ದಕ್ಷನಾದ ಬಿಳಿಯ ಸಾರ್ಜೆಂಟ್‌ನೊಂದಿಗೆ ಮಾತನಾಡುತ್ತಿದ್ದುದು ತನಗೆ ಪ್ರೇಮದ ಮಾತಿನ ಚಟ ಹೆಚ್ಚು ಎಂಬುದರಿಂದಲ್ಲ. ಪ್ರೇಮದ ಮತ್ತನ್ನು ತಪ್ಪಿಸಿಕೊಂಡವರು ಜಗತ್ತಿನಲ್ಲಿ ಯಾರಿದ್ದಾರೆ? ಎಲ್ಲರೂ ಅದರ ಬಲೆಗೆ ಅದರ ಮೋಹಕ್ಕೆ ಅದರ ಮಾಟಕ್ಕೆ ಒಳಗಾದವರೇ. ಸುದರ್ಶನನಂತಹ ಬ್ರಹ್ಮಚಾರಿಗಳಿಗಂತೂ ಅದರ ಆಶ್ಚರ್ಯ ಅದ್ಭುತ ಕನಸುಗಳು ಹೆಚ್ಚೇಯೆ. ಹೆಣ್ಣು ದೇವರನ್ನು ನಿತ್ಯಾ ಜಪಿಸುವ ಬ್ರಹ್ಮಚಾರಿಗಳ ಪೈಕಿ ಸುದರ್ಶನನೂ ಒಬ್ಬ. ಆದರೆ ತಮ್ಮ ಪ್ರೇಮ ಮೀಮಾಂಸೆಯನ್ನು ಆತ ದಕ್ಷನಾದ ಆ ಬಿಳಿಯ ಕಾಕಿ ಉಡುಪಿನವನೊಂದಿಗೆ ಹೇಳಬೇಕಾದುದು ಇರಲಿಲ್ಲ. ಹೇಳುವುದು ಅಪ್ರಾಸಂಗಿಕ ಎಂಬುದೂ ಆತನಿಗೆ ತಿಳಿದಿದ್ದಿತು. ಆದರೆ ಸುದರ್ಶನನ ಆಚರಣೆಗೆ ಒಂದು ಕಾರಣವಿತ್ತು. ಒಂದು

ಸ್ವಾರ್ಥವಿತ್ತು. ತೆಪ್ಪಗಿನಹಳ್ಳಿಯ ಅಸಾಧ್ಯವಾದ ಬಿಸಿಲಿನಲ್ಲಿ ಮಣ್ಣು ಹೊರುತ್ತಿದ್ದ ರಾಜ ಬಂದಿಗಳಲ್ಲಿ ಅನೇಕರಿಗೆ ಬೀಡಿ ಮತ್ತು ಎಲೆ ಅಡಿಕೆ ಚಪಲ ಹೆಚ್ಚಾಗಿದ್ದಿತು. ಆ ಬಿಸಿಲು ಮತ್ತು ಕೆಲಸ ಇವುಗಳ ಬೇಗೆ ಯಿಂದಲೋ ಏನೋ ಆ ಚಟಗಳೂ ಚಪಲಗಳೂ ಇನ್ನೂ ಹೆಚ್ಚಾಗುತ್ತಿದ್ದವು. ಪುಢಾರಿಗಳಾದವರು ಸರ್ಕಾರಕ್ಕೆ ತಿಳಿಯದಂತೆ ಯಾವ ಪದಾರ್ಥ ವನ್ನೂ ತರಿಸಕೂಡದೆಂದು ಹೇಳುತ್ತಿದ್ದರು ಹುಡುಗರಾದವರಿಗೆ ಸರ್ಕಾರ ಯಾವುದು ಎಂಬುದು ಇನ್ನೂ ತಿಳಿದಿರಲಿಲ್ಲ. ತಮ್ಮ ಮೇಲೆ ಕಾವಲಿದ್ದು ತಮ್ಮನ್ನು ಲಾಠಿಯಿಂದ ಬಡಿಯುವ ವಾರ್ಡರ್ ಸರ್ಕಾರವೋ, ಸೆರೆಮನೆಯ ಸೂಪರಿಂಟೆಂಡೆಂಟ್ ಸರ್ಕಾರವೋ ಅಥವಾ ಇವರು ಮಾಡುವುದನ್ನೆಲ್ಲಾ ಸರಿ ಎಂದು ಸ್ಥಾಪಿಸಬೇಕಾಗಿರುವ ಆ ದುರದೃಷ್ಟದ ಮಂತ್ರಿಗಳು ಸರ್ಕಾರವೋ ಅವರಿಗೆ ಇನ್ನೂ ಚೆನ್ನಾಗಿ ಮನದಟ್ಟಾಗಿರಲಿಲ್ಲ. ಸರ್ಕಾರ ನ್ಯಾಯವಾದ ಬೇಡಿಕೆಗಳನ್ನು ತಿರಸ್ಕರಿಸುವುದಿಲ್ಲ. ಈ ಕಿರುಕುಳಗಳೆಲ್ಲಾ ಕೆಳ ಅಧಿಕಾರಿಗಳದು ಎಂಬ ನಂಬಿಕೆಯುಳ್ಳ ಯುವಕರು, ಅದೇ ಕೆರೆಗೆ ಕೂಲಿ ಕೆಲಸಕ್ಕೆ ಬರುತ್ತಿದ್ದ ರೈತರಿಂದ ಎಲೆ ಅಡಿಕೆ ಬೀಡಿ ವಗೈರೆ ತರಿಸುತ್ತಿದ್ದರು. ಆದರೆ ರಾಜ ಬಂದಿಗಳ ಕಾವಲಿಗೆ ಬಂದೂಕದ ಸಿಪಾಯಿಗಳು ಇದ್ದುದರಿಂದ ಅವರ ಸಮೀಪಕ್ಕೆ ಬರಲು ಹಳ್ಳಿಯವರು ಹೆದರುತ್ತಿದ್ದರು. ಬಂದೂಕದ ಸಿಪಾಯಿಗಳೂ ಶೌರ್ಯದಲ್ಲಿ ಕಡಿಮೆಯಾಗಿರಲಿಲ್ಲ. ಒಂದು ದಿನ ಒಬ್ಬ ಹಳ್ಳಿಯವನು, ರೋಗಿಷ್ಟನಾದ ರಾಜಕೀಯ ಬಂದಿಯೊಬ್ಬನಿಗೆ ಸ್ವಲ್ಪ ತಿಂಡಿಯನ್ನು ತಂದು ಕೊಟ್ಟುದನ್ನು ಕಂಡ ಸಿಪಾಯಿಗಳು ಹಳ್ಳಿಯವನನ್ನು ಚೆನ್ನಾಗಿ ಗುದ್ದಿ ಸಾಯಂಕಾಲದವರೆಗೆ ಬಿಸಲಿನಲ್ಲಿ ಕೂರಿಸಿದ್ದರು. ಆ ತಿಂಡಿಯನ್ನು ತಾವೇ ತಿಂದರು. ಈ ಕಾರಣದಿಂದ ವಾರ್ಡರ್‌ಗಳ ಕಣ್ಣು ತಪ್ಪಿಸಿ ಬಂದ ಎಲೆ ಅಡಿಕೆ ಬೀಡಿ ಪೇಪರ್‌ಮೆಂಟುಗಳನ್ನು ತೆಗೆದುಕೊಳ್ಳುವ ಉಪಾಯಕ್ಕಾಗಿ ಸುದರ್ಶನ ಸಾರ್ಜೆಂಟ್‌ನೊಂದಿಗೆ ಪ್ರೇಮದ ವಿಷಯವನ್ನು ಕುರಿತು ಸಂಭಾಷಣೆ ನಡೆಸುತ್ತಿದ್ದನು. ಅವನಿಗೆ ಅವನ ಪ್ರೇಯಸಿಗಾಗಿ ಪ್ರೇಮ ಪತ್ರವನ್ನು ಬರೆದುಕೊಡುತ್ತಿದ್ದನು. ಸಾರ್ಜೆಂಟರು ಆ ಸಂಭಾಷಣೆಯಲ್ಲಿ ಮಗ್ನರಾಗಿರುವಾಗ ರಾಜಕೀಯ ಖೈದಿಗಳು ಒಂದು ಗಳಿಗೆ ಅವನ ಕಣ್ಣು ತಪ್ಪಿಸಿ ತಮಗೆ ಬಂದಿದ್ದ ಸಾಮಾನನ್ನು ತರುತ್ತಿದ್ದರು. ಆದರೂ ಹಿರಿಯವರಾದ ಪುಢಾರಿಗಳಿಂದ ಇದು ತಪ್ಪು ಎಂದು ಬೈಗಳವಾಗುತ್ತಲೇ ಇದ್ದಿತು.

ತೆಪ್ಪಗಿನಹಳ್ಳಿಯಲ್ಲಿ ಒಂದು ಕಡೆ ಕಂಟ್ರಾಕ್ಟರ್‌ನ ಕೂಲಿಗಳೂ ಮತ್ತೊಂದು ಕಡೆ ರಾಜಕೀಯ ಬಂದಿಗಳೂ ಕೆಲಸ ಮಾಡುತ್ತಿದ್ದರು. ಆ ಸ್ಥಳದಿಂದ ಸುಮಾರು $\frac{1}{4}$ ಮೈಲು ದೂರದಲ್ಲಿ ರೈಲ್ವೆ ಮಾರ್ಗವಿದ್ದುದರಿಂದ ಒಂದು ರೈಲು ಇವರು ಕೆಲಸ ಬಿಡುವವೇಳೆಗೆ ಸರಿಯಾಗಿ ಆ ಮಾರ್ಗದಲ್ಲಿ ಹೋಗುತ್ತಾ ಕೂಗುತ್ತಿದ್ದಿತು ವಾರ್ಡರುಗಳ ಬಳಿಯಾಗಲಿ ಸಾರ್ಜೆಂಟ್ ಬಳಿಯಾಗಲಿ ಗಡಿಯಾರವಿರಲಿಲ್ಲ. ಕೆಲಸ ಕೈಬಿಡುವುದಕ್ಕೆ ಆ ರೈಲು ಬರುವುದನ್ನೇ ಸಾರ್ಜೆಂಟು ಗುರುತಾಗಿ ಇಟ್ಟುಕೊಂಡಿದ್ದನು. ಆ ಹಾಳು ರೈಲು ನಿತ್ಯಾ ಅರ್ಧ ಗಂಟೆ ಮುಕ್ಕಾಲು ಗಂಟೆ ಸಾವಕಾಶವಾಗಿ ಬರುತ್ತಿದ್ದಿತು. ರಾಜಕೀಯ ಬಂದಿಗಳು ಅಲ್ಲಿರುವವರೆಗೆ ರೈಲಿನ ಆಗಮನ ಕಾಲ ನಿತ್ಯಾ ಹೆಚ್ಚು ಕಡಿಮೆಯಾಗುತ್ತಲೇ ಇರುತ್ತಿದ್ದಿತು. ತೆಪ್ಪಗಿನಹಳ್ಳಿ ಬಿಸಿಲನ್ನು ಅನುಭವಿಸಿದವರಿಗೆ ಮಾತ್ರ ಗೊತ್ತಾಗುತ್ತದೆ ಅದರ ಕಾವಿನ ಬೆಂಕಿ. ನೆಲದ ಕಾದ ಧೂಳು ಕಾಲಿಗೆ ಬರೆ ಹಾಕುತ್ತದೆ. ಒಂದು ಸಲ ಬೆಂಗಳೂರಿನ ಸದ್ಗೃಹಸ್ಥರೊಬ್ಬರು ಆ ಮಾರ್ಗವಾಗಿ ಬಂದರು. ವಾರ್ಡರುಗಳು ಕಾಲಿಗೆ ಎಕ್ಕಡ ಬೂಟ್ಸು ಧರಿಸಿ ಛತ್ರಿ ಹಿಡಿದುಕೊಂಡು, ಬರಿಯ ಕಾಲಿನ ರಾಜಬಂದಿಗಳಿಂದ ಮಣ್ಣು ಹೊರಿಸುತ್ತಿದ್ದುದು ಅವರ ಕಣ್ಣಿಗೆ ಬಿದ್ದಿತು. ಆ ಬಿಸಿಲಿನ ಬೇಗೆಯನ್ನು ನೋಡಿ ಅವರು ಇದು ನಿಜವೇ ಎಂದು ಬೆಚ್ಚಿಬಿದ್ದರು. ಸಂಬಂಧಪಟ್ಟ ಮುಖ್ಯಾಧಿಕಾರಿಗಳಲ್ಲಿ ಹೋಗಿ ರಾಜಕೀಯ ಬಂದಿಗಳಿಗೆ ಪಾದರಕ್ಷೆ ಕೊಡದಿದ್ದರೆ ಅವರ ಕಾಲಿನ ಚರ್ಮ ಸುಲಿದುಹೋಗುತ್ತದೆ ಎಂದರು. ಅಧಿಕಾರಿಗಳು ಪಾದರಕ್ಷೆ ಕೊಡಲು ಹಣ 'ಅಲಾಟ್‌ಮೆಂಟ್' ಇಲ್ಲ ಎಂದರು. ಆಗ ಆ ಸದ್ಗೃಹಸ್ಥರು ತಾವೇ ನೂರಾರು ಜತೆ ಪಾದರಕ್ಷೆಗಳನ್ನು ಕೊಂಡುಕೊಂಡು ತೆಪ್ಪಗಿನಹಳ್ಳಿಗೆ ಕಳುಹಿಸಿದರು. ರಾಜ ಬಂದಿಗಳಿಗೆ ಅವನ್ನು ಕೊಡಬೇಕೆ ಬೇಡವೆ ಎಂಬ ವಿಷಯದಲ್ಲಿ ಸೆರೆಮನೆಯ ಅಧಿಕಾರಿಗಳಿಗೂ ಸರ್ಕಾರಕ್ಕೂ ಅನಂತರ ಪತ್ರವ್ಯವಹಾರ ಪ್ರಾರಂಭವಾಯಿತು. ಕೊನೆಗೂ ಪಾದರಕ್ಷೆಗಳು ಸೆರೆಯಾಳುಗಳಿಗೆ ದೊರೆಯಲಿಲ್ಲ.

ತೆಪ್ಪಗಿನಹಳ್ಳಿಯಲ್ಲಿ ರಾಜಕೀಯ ಬಂದಿಗಳಿಗೆ ಕುಡಿಯುವ ನೀರಿನ ವ್ಯವಸ್ಥೆ ಸರಿಯಾಗಿರಲಿಲ್ಲ. ಭಾವಿಯಿಂದ ಬಗ್ಗಡವಾದ ನೀರನ್ನು ಸೇದಿ ಪ್ರತಿ ರಾತ್ರಿಯೂ ಒಂದು ತೊಟ್ಟಿಯಲ್ಲಿ ತುಂಬಿಕೊಳ್ಳುತ್ತಿದ್ದರು. ಅದಕ್ಕೆ

ಹಾಕಲು ಸೆರೆಮನೆಯ ಅಧಿಕಾರಿಗಳು ಸ್ವಲ್ಪ ಪಟಿಕವನ್ನು ಕೊಡುತ್ತಿದ್ದರು. ಆ ರಾತ್ರಿ ಆ ಪಟಿಕವನ್ನು ನೀರಿಗೆ ಹಾಕಿದರೆ ಅದು ಬೆಳಗಿನ ವೇಳಗೆ ನೀರಿನ ಬಗ್ಗಡವನ್ನೆಲ್ಲಾ ಹೀರಿಕೊಂಡು ತಳದಲ್ಲಿ ಕುಳಿತುಕೊಳ್ಳುತ್ತಿದ್ದಿತು. ಆ ನೀರನ್ನೇ ಅಡಿಗೆಗೂ ಕುಡಿಯುವುದಕ್ಕೂ ಉಪಯೋಗಿಸುತ್ತಿದ್ದರು. ಭಾವಿಯ ನೀರು ಕುಡಿಯುವುದಕ್ಕೆ ಅಸಾಧ್ಯವಾದಾಗ ದೂರದ ಕೆರೆಗೆ ಹೋಗಿ ನೀರನ್ನು ತರುತ್ತಿದ್ದರು. ಅಲ್ಲಿಗೆ ಗ್ರಾಮಸ್ಥರು ಬಿಂದಿಗೆಗಳಲ್ಲಿ ಮಜ್ಜಿಗೆ ಅಥವಾ ಪಾನಕ ತಂದುಕೊಡುತ್ತಿದ್ದರು. ನೀರಿನ ಜತೆಯಲ್ಲಿ ಅವೂ ಸೆರೆಮನೆಯನ್ನು ಪ್ರವೇಶಿಸುತ್ತಿದ್ದವು. ಹಿರಿಯರು ಹೀಗೆ ಗುಟ್ಟಾಗಿ ತರಿಸಕೂಡದೆಂದು ಹೇಳುತ್ತಿದ್ದರು. ಬಂದ ಮಜ್ಜಿಗೆ ಪಾನಕ ತಿರಸ್ಕರಿಸುತ್ತಿದ್ದರು

ಆಗ ರಾಜಕೀಯ ಬಂದಿಗಳಿಗೆ ವಿಧಿಗಳು ಬಹು ಕಠಿಣವಾಗಿದ್ದುವು. ಬಹಿರ್ಭೂಮಿಗೂ ಅಡಿಗೆ ಮನೆಗೂ ಒಂದೇ ಮಣ್ಣಿನ ಪಾತ್ರೆಗಳನ್ನು ಕೊಟ್ಟಿದ್ದರು. ಅಡಿಗೆ ಮನೆಗೆ ಬೇರೆ, ಹೂರಗಡೆಗೆ ಬೇರೆ ಎಂಬುದಾಗಿ ಎರಡು ಮಡಿಕೆಗಳನ್ನು ತೆಗೆದುಕೊಳ್ಳಬೇಕಾದರೆ ರಾಜಕೀಯ ಬಂದಿಗಳು ಮೂರು ದಿನ ಉಪವಾಸ ಮಾಡಬೇಕಾಯಿತು. ಸೆರೆಮನೆಯ ಗೋಡೆಗಳೆಲ್ಲಾ ಬಿರುಕುಬಿಟ್ಟಿದ್ದವು. ವಾರ್ಡರುಗಳು ರಾಜಕೀಯ ಬಂದಿಗಳನ್ನು ಅವರ ಬ್ಯಾರಕ್‌ನಲ್ಲಿ ಕೂಡಿ ಬೀಗಹಾಕಿ ಬೀಗದ ಕೈಯನ್ನು ಛೀಫ್ ವಾರ್ಡರ್ ಕೈಲಿ ಕೊಟ್ಟು ಎಲ್ಲಿಯೋ ಮಲಗಿದ್ದರು. ಬೀಗ ಹಾಕುವ ಒಂದು ವಿಷಯ ಮಟ್ಟಿಗೆ ಸೆರೆಮನೆಯಲ್ಲಿ ಬಹು ಶಿಸ್ತಾಗಿ ಮಾಡುತ್ತಾರೆ. ಸ್ವಲ್ಪ ಗಾಳಿ ಒಳಕ್ಕೆ ಬಿಟ್ಟರೆ ಅದೇನು ಅವರಪ್ಪನ ಮನೆಯ ಗಂಟು ಹೋಗುತ್ತೊ ! ಮನುಷ್ಯರನ್ನು ಮೃಗಗಳಂತೆ ಯಾಕೆ ನಡೆಸಿಕೊಳ್ಳುತ್ತಾರೋ ಅರ್ಥವೇ ಆಗುವುದಿಲ್ಲ. ತೆಪ್ಪಗಿನಪಳ್ಳಿ ಹಂಗಾಮಿ ಸೆರೆಮನೆಯಲ್ಲಿ ಉಳಿದ ಸೆರೆಮನೆಗಳಂತೆ ಬ್ಯಾರಕ್ ಒಳಗೇ ಒಂದು ಭಾಗದಲ್ಲಿ ಜಲಸ್ಪರ್ಶ ಮತ್ತು ಕಕ್ಕಸು ಇತ್ತು. ಅರ್ಧ ರಾತ್ರಿಯಲ್ಲಿ ಅರಕೆರೆ ರಾಮಸ್ವಾಮಿ ಕಕ್ಕಸ್ಸಿನ ಹತ್ತಿರ ಹೋದಾಗ ಭುಸ್ ಎಂದು ಸದ್ದಾಯಿತು. ರಾಮಸ್ವಾಮಿ ಒಂದೇ ಏಟಿಗೆ 4 ಮಾರು ಹಿಂದಕ್ಕೆ ಹಾರಿದರು. ಸಣ್ಣಗೆ ಮಿನುಗುತ್ತಿದ್ದ ಲಾಂದ್ರವನ್ನು ದಪ್ಪಮಾಡಿ ನೋಡಿದಾಗ ಒಳ್ಳೆ ಭರ್ಜರಿ ನಾಗರಹಾವು ದೀಪದ ಕಡೆ ಕಣ್ಣನ್ನು ಹೊಳೆಸುತ್ತಾ, ಕಕ್ಕಸ್ಸಿನ ಬಾಗಿಲಿ

ನಲ್ಲಿಯೇ ಆಡುತ್ತಿದ್ದಿತು. ಬಾಗಿಲನ್ನು ಹಾಕಿಕೊಳ್ಳುವಂತೆಯೂ ಇರಲಿಲ್ಲ. ರಾಮುಸ್ವಾಮಿಯು ಒಂದೇ ಏಟಿಗೆ ಕೂಗಿ ಮಲಗಿದ್ದವರನ್ನೆಲ್ಲಾ ಎಬ್ಬಿಸಿದರು. ಹಾವನ್ನು ಹೊಡೆದು ಹಾಕಲು ಆ ಬ್ಯಾರಕ್‌ನಲ್ಲಿ ಒಂದು ದೊಣ್ಣೆ ಸಹ ಇರಲಿಲ್ಲ. ಯಾವ ಸಾಮಾನೂ ಇರಕೂಡದೆಂಬುದು ನಿಯಮ—ವಾರ್ಡರನ್ನು ಕೂಗಲು ಪ್ರಾರಂಭವಾಯಿತು ಅವನು ಎಲ್ಲಿಯೋ ಮಲಗಿದ್ದವನು ಎಂದ. ಆದರೆ ಬೀಗದಕ್ಕೆ ಇಲ್ಲ. ಅದಕ್ಕೆ ಛೀಫ್ ವಾರ್ಡರಲ್ಲಿ ಹೋಗಬೇಕಾಯಿತು. ಛೀಫ್ ವಾರ್ಡರಿಗೂ ಸಿಟ್ಟು ಬಂತು ಹಾವಿನ ಮೇಲೆ ಅಲ್ಲ ರಾಜಕೀಯ ಬಂದಿಗಳ ಮೇಲೆ. ಛೀಫ್ ವಾರ್ಡರು ನಾಗರಹಾವಿನ ಭಕ್ತರಂತೆ. ಅಂತೂ ಹಾವನ್ನು ಹೊಡೆದು ಹಾಕಿದರು. ಹೀಗೆ ಕೂಗಿ ಗದ್ದಲಮಾಡಿದುದಕ್ಕೆ ರಾಮುಸ್ವಾಮಿಗೆ ಮೂರು ದಿನ ಶಿಕ್ಷೆ ಕೊಟ್ಟರು. ಹಿಟ್ಟು ಮತ್ತು ಉಪ್ಪು!

ತೆಪ್ಪಗಿನಹಳ್ಳಿ ಸೆರೆಮನೆಯಲ್ಲಿ ಹಾವು ಹೆಚ್ಚಾಗಿದ್ದಂತೆ ಮಂಡರಗಪ್ಪೆ ಮತ್ತು ಅಪ್ಪೆ ಎಂಬ ಮತ್ತೆರಡು ವಿಷಜಂತುಗಳೂ ಹೆಚ್ಚಾಗಿದ್ದವು. ಮಂಡರಗಪ್ಪೆ ನೀವೆಲ್ಲ ನೋಡಿದ್ದೀರಿ. ಆದರೆ 1939ನೇ ಇಸವಿಯ ಮೂರು ಸಾವಿರ ರಾಜ ಬಂದಿಗಳಲ್ಲಿ ತೆಪ್ಪಗಿನಹಳ್ಳಿಗೆ ಹೋಗಿದ್ದವರು ಮಾತ್ರ ಅಪ್ಪೆಯನ್ನು ನೋಡಿದ್ದಾರೆ. ಅಪ್ಪೆ ಒಂದು ಹುಳ. ಇದು ಸಾಧಾರಣವಾಗಿ ಜೈಲಿನ ಗೋಡೆಯ ಬಿರುಕಿನಿಂದ ಹೊರಕ್ಕೆ ಬಂದು ಜನಗಳಿಗೆ ಮುಟ್ಟಿಸಿ ಮತ್ತೆ ಅದೇ ಬಿರುಕಿನೊಳಕ್ಕೆ ಹಿಂದಿರುಗುತ್ತಿದ್ದಿತು. ಕಡಿಸಿಕೊಂಡವರಿಗೆ ಮೈ ಕೈ ಕಾಲು ಊದಿಕೊಂಡು ಅವರು ಬದುಕುವುದೇ ಕಷ್ಟವಾಗುತ್ತಿದ್ದಿತು. ರಾಜಕೀಯ ಖೈದಿಗಳು ಸರದಿವಾರಾಗಿ ರಾತ್ರಿ ರಾತ್ರಿಯೆಲ್ಲಾ ಎಚ್ಚರವಾಗಿದ್ದು ಈ ಅಪ್ಪೆಯನ್ನು ಕಾಯುತ್ತಿದ್ದರು. ಆದರೆ ಹಾಸಿಗೆ ಮೇಲಕ್ಕೆ ಸರ್ರನೆ ಬೀಳುತ್ತಿದ್ದ ಅಪ್ಪೆಯನ್ನು ಹೊಡೆಯಲು ಬ್ಯಾರಕ್‌ನಲ್ಲಿ ದೊಣ್ಣೆ ಮುಂತಾದವು ಇರಲಿಲ್ಲ. ಕ್ರಿಮಿನಲ್ ಖೈದಿಗಳು ಇರುವ ಸ್ಥಳದಲ್ಲಿ ಅವರು ಒಬ್ಬರೊಂದಿಗೆ ಒಬ್ಬರು ಹೊಡೆದಾಡಿಯಾರೆಂದೂ ಆತ್ಮಹತ್ಯೆ ಮಾಡಿಕೊಂಡಾರೆಂದೂ ದೊಣ್ಣೆ ಹಗ್ಗ ಗಾಜು ಮುಂತಾದ ಯಾವ ಪದಾರ್ಥಗಳನ್ನೂ ಇಡುವುದಿಲ್ಲ. ಕಾನೂನನ್ನು ಅನ್ವಯಿಸುವುದೆಂದರೆ ಅದರ ಮೂಲಕ ಆದಷ್ಟು ಕಿರುಕುಳವನ್ನೇ ಕೊಡುವುದೆಂದು ಭಾವಿಸಿರುವವರು, ವಿವೇಕಶೂನ್ಯರಾಗಿ, ಬಂದಿರುವ ಸೆರೆಯಾಳುಗಳ ಸ್ವಭಾವವನ್ನೇ

ಪರಿಗಣಿಸದೆ ಕಾನೂನು ಜಾರಿ ಮಾಡುತ್ತಾರೆ ತೆಪ್ಪಗಿನಹಳ್ಳಿ ಸೆರೆಮನೆಯ ರಾಜಬಂದಿಗಳಲ್ಲಿ, ಒಬ್ಬರು ಗುಟ್ಟಾಗಿ ಒಂದು ಜತೆ ಪಾದರಕ್ಷೆಯನ್ನು ಸೆರೆಮನೆಯೊಳಕ್ಕೆ ಸಾಗಿಸಿದ್ದರು. ಈಗ ಅಪ್ಪೆ ಹೊಡೆಯುವುದಕ್ಕೆ ಅದು ಸಹಾಯಕವಾಯಿತು. ಸರದಿಯ ಮೇಲೆ ಕಾವಲು ಕಾಯುತ್ತಿರುವವರು ಕೈಯ್ಯಲ್ಲಿ ಪಾದರಕ್ಷೆಯನ್ನು ಹಿಡಿದುಕೊಂಡು ರಾಜಕೀಯ ಬಂದಿಗಳು ಮಲಗಿರುವ ಹಾಸಿಗೆಗಳನ್ನು ಕಾವಲುಕಾಯುತ್ತಾ ಒಂದು ಕಡೆಯಿಂದ ಮತ್ತೊಂದು ಕಡೆಗೆ ಗಸ್ತು ಹೊಡೆಯುತ್ತಿದ್ದರು ಇದ್ದಕ್ಕಿದ್ದಂತೆ ಒಂದು ಅಪ್ಪೆ ಹಾಸಿಗೆ ಮೇಲೆ ಬೀಳುತ್ತಿದ್ದಿತು. ಕಾವಲುಗಾರನು ಕೈಯ್ಯಲ್ಲಿದ್ದ ಚಪ್ಪಲಿಯಿಂದ ಅದಕ್ಕೆ ಫಟಾರನೆ ಒಂದು ಕೊಟ್ಟು ಅದನ್ನು ಸಾಯಿಸುತ್ತಿದ್ದನು ಒಂದೊಂದು ಸಮಯದಲ್ಲಿ ಚಪ್ಪಲಿಯ ಏಟು ಮಲಗಿದ್ದವನಿಗೂ ಬೀಳುತ್ತಿದ್ದಿತು. ಆದರೆ ರಾಜಕೀಯ ಬಂದಿಗಳಾದವರಿಗೆ ಎಲ್ಲಿಯವರೆಗೆ ಪೋಲೀಸಿನವರ ಮತ್ತು ಜೈಲು ವಾರ್ಡರುಗಳ ವಿದ್ಯಾ-ಯೋಗ್ಯತೆ ಈಗಿರುವಂತೆ ಎರಿಯ ಅವರ ಉಡುಪಿನ ಜಬ್ಬರ್ ಮಾತ್ರವೋ ಅಲ್ಲಿಯವರೆಗೆ ಬೂಟ್ಸ್ ಏಟು ತಮಗೆ ಅಪರೂಪವಲ್ಲನೆಂಬುದು ಚೆನ್ನಾಗಿ ಗೊತ್ತಾಗಿದೆ. ಅಪ್ಪೆ ಮೈ ಮೇಲೆ ಬಂದಾಗ ಅದನ್ನು ಹೊಡೆಯಲು ಎತ್ತಿದ ಚಪ್ಪಲಿ ಏಟು ತನಗೂ ಬಿದ್ದಿತೆಂದು ಯಾವ ರಾಜಕೀಯ ಬಂದಿಯೂ ಆಕ್ಷೇಪಣೆ ಮಾಡಲಿಲ್ಲ.

42ನೆಯ ಚಳುವಳಿಯಲ್ಲಿ ಬಾಯಿ ಜೋರು ಮಾಡಿದವರಿಗೆ ಅಥವಾ ತಾವು ಡಿಟೆನ್ಯು ಎಂದು ಹೆಚ್ಚು ಸೌಲಭ್ಯಗಳನ್ನು ಅಪೇಕ್ಷಿಸಿದವರಿಗೆ ಸೀಮಯ್ಯನವರು ಈ ಉದಾಹರಣೆಗಳನ್ನೆಲ್ಲಾ ಹೇಳಿ " ಈಗ ದೊರೆತಿರುವ ಸೌಕರ್ಯಗಳು ಆಗಿನ ಕಷ್ಟದ ಫಲ ಸೆರೆಮನೆಯಲ್ಲಿ ಅಧಿಕಾರಿಗಳೊಂದಿಗೆ ಹೆಜ್ಜೆ ಹೆಜ್ಜೆಗೂ ಕಾದಾಡಬೇಕು. ಒಂದು ಸಲಕ್ಕಿಂತ ಮತ್ತೊಂದು ಸಲದ ಹೊತ್ತಿಗೆ ಅನುಕೂಲಗಳು ಹೆಚ್ಚು ಹಿಂದಿನ ಚಳವಳಿಗಳಲ್ಲಿ ಬಂದಿದ್ದವರಾರೂ ಈ ಸಲ ಸೌಕರ್ಯಗಳು ಸಾಲವೆಂದು ಹೇಳುವುದಿಲ್ಲ ಈಗ ಮಾತ್ರ ಬಂದಿರುವವರಿಗೆ ನಿಜವಾಗ ಹಿಂದೆ ಅಂದರೆ ಈಗ ಮೂರು ವರುಷದಲ್ಲಿ ಸೆರೆಮನೆ ಹೇಗಿದ್ದಿತೆಂಬುದು ತಿಳಿಯುವುದಿಲ್ಲ" ಎನ್ನುತ್ತಿದ್ದರು.

# ೪೩. ಪ್ರಾರ್ಥನೆ

42ನೆಯ ಚಳುವಳಿಯ ಪ್ರಾರಂಭದಲ್ಲಿ ಹಾಸ್ಯಪುರಿಯ ಸೆರೆಮನೆಯಲ್ಲಿ ನಮ್ಮ ದೇಶದ ಮುಂದಾಳುಗಳನ್ನೆಲ್ಲಾ ಇಟ್ಟರಷ್ಟೆ. ಸುದರ್ಶನನನ್ನೂ ಪ್ರಾರಂಭದಲ್ಲಿ ಈ ಸೆರೆಮನೆಯಲ್ಲಿಯೇ ಇಟ್ಟರು. ಈ ಸೆರೆಮನೆಯ ಒಂದು ಮುಖ್ಯ ಕಾರ್ಯ ಪ್ರಾತಃಕಾಲದ ಆಹ್ನಿಕ ಪ್ರಾರ್ಥನೆ. ಇದರ ಆಚಾರ್ಯರು ಚಾಣಕ್ಯ; ಆಚಾರ್ಯರು ಎಂದರೆ ಅವರು ಇದಕ್ಕೆ ಮುಖ್ಯಸ್ಥರು ಎಂಬ ಅರ್ಥದಲ್ಲಿ ಅಲ್ಲ. ಭಗವಂತನ ಪ್ರಾರ್ಥನೆಗೆ ಮುಖ್ಯಸ್ಥರು ಎಲ್ಲಿ ಬಂತು. ಅದು ಪ್ರತಿಯೊಬ್ಬ ವ್ಯಕ್ತಿಗೂ ಬೇರೆ ಬೇರೆಯಾಗಿ ಸಂಬಂಧಪಟ್ಟ ವಿಷಯ. ಆ ಮಾರ್ಗದಲ್ಲಿ ಒಬ್ಬನನ್ನು ಒಬ್ಬ ಹೆಚ್ಚು ದೂರ ಕೈಹಿಡಿದು ಕರೆದು ಕೊಂಡು ಹೋಗಲು ಸಾಧ್ಯವಿಲ್ಲ. ಅಂದರೆ ಪ್ರಾರ್ಥನೆಯಲ್ಲಿ ಚಾಣಕ್ಯರ ಶ್ರದ್ಧೆ ಹೆಚ್ಚು. ಉಳಿದವರಲ್ಲಿ ಕೆಲವರಿಗೆ ಕೆಲವು ದಿನ ಅದರಲ್ಲಿ ಉತ್ಸಾಹ ವಿರುತ್ತಿದ್ದಿತು. ಸಂಪತ್ ಮುಂತಾದ ಸಮತಾವಾದಿಗಳಿಗೆ ಅದರಲ್ಲಿ ತಿರಸ್ಕಾರವೇ ಇದ್ದಿತು. ಪ್ರಾರ್ಥನೆಯ ಕಾಲ ಎಂದ ಕೂಡಲೇ ಸಂಪತ್ ರವರು ಕುಳಿತ ಜಾಗವನ್ನು ಬಿಟ್ಟು ಎದ್ದೇ ಓಡಿಬಿಡುತ್ತಿದ್ದರು. ಅದಕ್ಕಾಗಿ ಅವರನ್ನು ಅನೇಕವೇಳೆ ಹಾಸ್ಯಮಾಡುವ ಪ್ರಸಂಗ ಸಹ ಬರುತ್ತಿದ್ದಿತು.

ನಮ್ಮಲ್ಲಿ ಸಾರ್ವಜನಿಕ ಪ್ರಾರ್ಥನೆಗಳು ಸಾಮಾನ್ಯವಲ್ಲ. ಇದು ಮಹಾತ್ಮಾ ಗಾಂಧಿಯವರಿಂದಲೇ ಪ್ರಾರಂಭವಾದ ಸಂಪ್ರದಾಯವೆನ್ನ ಬಹುದು. ಗಾಂಧಿ ಅನುಯಾಯಿಗಳು ಸಾಧಾರಣವಾಗಿ ತಾವು ಸೇರಿದ ಕಡೆಗಳಲ್ಲಿ ಇದನ್ನು ಅನುಸರಿಸುತ್ತಾರೆ. ಭಗವದ್ಗೀತೆಯ ಎರಡನೆಯ ಅಧ್ಯಾಯದ ಸ್ಥಿತಪ್ರಜ್ಞನಾರು ಅವನ ಸಮಾಧಿ ಎಂಥಾದ್ದು? ಅವನ ಬುದ್ಧಿ ಎಂಥಾದ್ದು ಅವನು ಹೇಗೆ ಇರುತ್ತಾನೆ; ಅವನ ಗಮನವೇನು ಎಂಬುದರಿಂದ ಪ್ರಾರಂಭವಾಗುವ ಹದಿನೆಂಟು ಶ್ಲೋಕಗಳು ಮಹಾತ್ಮಾ ಗಾಂಧಿಯವರಿಗೆ ಬಹಳ ಪ್ರಿಯವಾದುವು. ಈ ಶ್ಲೋಕಗಳು ಅವರ ಸ್ವಭಾವಕ್ಕೆ ಅನುಸಾರವಾಗಿಯೂ ಇವೆ. "ಯಾರು ಮನಸ್ಸಿನಲ್ಲಿರುವ ಸಮಸ್ತವಾದ ಕಾಮಗಳನ್ನೂ ತೊರೆದು ತನ್ನಲ್ಲಿಯೇ ತಾನು ತುಷ್ಟನಾಗುತ್ತಾನೆಯೋ ಅವನೇ ಸ್ಥಿತಪ್ರಜ್ಞ. ದುಃಖದಲ್ಲಿ ವ್ಯಾಕುಲ

ವಿಲ್ಲದ, ಸುಖದಲ್ಲಿ ಬಯಕೆ ಆಶೆ ಇಲ್ಲದ, ವಿಷಯಾಭಿಲಾಷೆ ಭಯ ಕ್ರೋಧಗಳು ಸ್ಥಿಮಿತವನ್ನು ಹೊಂದಿದವನೇ ಸ್ಥಿತಪ್ರಜ್ಞ; ಯಾರಿಗೆ ಯಾವುದರಲ್ಲಿಯೂ ಅಭಿಲಾಷೆಯೇ ಇಲ್ಲವೋ, ಬಂದ ಶುಭಾ ಶುಭಗಳನ್ನು ಹೊಂದಿ ಸಂತೋಷ ದ್ವೇಷಗಳನ್ನು ಹೊಂದುವುದಿಲ್ಲವೋ ಅವನೇ ಸ್ಥಿತಿಪ್ರಜ್ಞ; ಆಮೆಯು ತನ್ನ ಸರ್ವಾಂಗಗಳನ್ನೂ ಒಳಕ್ಕೆ ಎಳೆದುಕೊಳ್ಳುವಂತೆ ಯಾರು ವಿಷಯಗಳಿಂದ ಇಂದ್ರಿಯಗಳನ್ನು ಮುದುರಿಕೊಳ್ಳುತ್ತಾನೋ ಅವನೇ ಸ್ಥಿತಪ್ರಜ್ಞನು. ನಿರಾಹಾರಿಯಾದವನಿಗೆ ವಿಷಯಗಳಲ್ಲಿ ಆಸೆ ಇರುವುದಿಲ್ಲ. ವಿಷಯಾಭಿಲಾಷೆ ಸಹ ಪರಮಾತ್ಮನ ದರ್ಶನ ಮಾಡುವುದರಿಂದ ತೊಲಗುವುದು.

**ಅರ್ಜುನ ಹೇಳಿದನು**

ಸ್ಥಿತಿ ಪ್ರಜ್ಞನನು ಸಮಾಧಿಸ್ತನನು
ಕುರಿತೇನೆಂಬರು ಕೇಶವನೆ
ನಿಶ್ಚಲ ಬುದ್ಧಿಯ ನುಡಿಯೆಂತಿರುವುದು
ನಡೆಯೆಂತಿರುವುದು ಎಂತಿಹನು

**ಭಗವಂತನು ಹೇಳಿದನು**

ಬಗೆಹೊಗುವಾಸೆಗಳೆಲ್ಲವ ತೊರೆಯುತ
ಆತ್ಮದಿಂದಲೇ ಆತ್ಮನೊಳು
ತುಷ್ಟಿಯ ನೆಂದಿಗೆ ಪಡೆವನೊ ಪ್ರಾರ್ಥನೆ
ಸ್ಥಿತ ಪ್ರಜ್ಞನೆಂದವ ನೆನಿಪಂ

ದುಃಖದಿ ದುಃಖಿತನಾಗನೋ ತೋರನೊ
ಸುಖಗಳೊಳಾಸಕ್ತಿಯ ನಾವಂ
ರಾಗ ಭಯ ಕೋಪವಾವನಿಗಿಲ್ಲವೋ
ಸ್ಥಿತಿ ಧೀ ಎಂಬರು ಆ ಮುನಿಯ

ಏತರೊಳುಂ ಮನ ವಂಟದಂತಿಹನು
ಕೇಡೊದಗಲ್ಕದ ಬೇಡೆನನು
ಶುಭವಾಗಲು ಸಂತೋಷವ ಗೊಳ್ಳನು
ಸುರಸ್ಥಿ ಮಾಡುದು ತಿಳಿವವನ

ಇಂದ್ರಿಯಾರ್ಥಗಳಿ ಮೆಲ್ಲಿಡೆಯಿಂದಲು
ತನ್ನಂಗಗಳನು ಆಮೆಯೊಲು
ಎಂದಿಂದ್ರಿಯಗಳ ತನ್ನೊಳ ಕೆಳೆವನೋ
ಅಂದಿಗೆ ಸುಸ್ಥಿರ ಮಾವ ನರಿವು

ನಿರಾಹಾರಿಯಹ ದೇಹಿಯು ಬಿಡುವುವು
ರಸವೋನಿಲ್ಲನೆ ವಿಷಯಗಳು
ವಿಷಯ ದೊಳಾತನ ರುಚಿಯೂ ಅಳಿವುದು
ಪರ ಬ್ರಹ್ಮವನು ಕಾಣಲವಂ

ಸಾಧಕನಾದರು ವಿವೇಕಿಯಾದರು
ಅಂಕೆಗಳ ಪಡದೆ ಅಂಡಲೆದು
ಬಲಾತ್ಕಾರದೊಳು ಮನವಂ ಸೆಳೆವುವು
ನರನಿಂದ್ರಿಯಗಳು ಕೌಂತೇಯ

ಅವನೆಲ್ಲವ ತನ್ನಂಕೆಗೆ ಸಲ್ಲಿಸಿ
ಮತ್ಪರನಾಗುವನಾಯೋಗಿ
ಆವನಿಗಿಂದ್ರಿಯ ವಶವಾಗಿರುವವೊ
ಅವನರಿ ವಲ್ಲವೆ ಸುಸ್ಥಿರವು

ವಿಷಯಗಳೊಳು ಮನಮಾಡುವ ಮನುಜನಿ
ಗಾದರ ಮವುಗಳೊಳುದಿಸುವುದು
ಆದರದಿಂದಲಿ ಮೂಡುವುದಾಸೆಯು
ಆಸೆಯು ಕೋಪಕೆ ತೌರಹುದು

ಕೋಪಕೆ ಬಗೆಗೆಡುವುದು, ಬಗೆಕೆಟ್ಟೊಡೆ
ನೆನಪಳಿದೆಚ್ಚರ ತಪ್ಪುವುದು
ಸ್ಮೃತಿ ತಪ್ಪಿದವಗೆ ವಿವೇಕ ಮಳಿವುದು
ವಿವೇಕ ಮಳಿದೊಡನೆ ಅಳಿವನವಂ

ಒಲುಮೆ ಹಗೆತೊರೆದ ತನ್ನಂಕೆಗೆ ಸಂ
ದಿಂದ್ರಿಯಗಳು ವಿಷಯಂಗಳೊಳು
ಓಡಾಡಿಸಿದರು ಪ್ರಸಾದ ಪಡೆವನು
ಮನವಂ ಬಿಗಿಹಿಡಿದಿರುವಾತಂ

ಪ್ರಸನ್ನತೆಯನಿಂತ್ಯೆದಿರುವಾತಗೆ
ದುಃಖಿಗಳೆಲ್ಲವು ಮಳಿಯುವುವು
ಪ್ರಸನ್ನವಾದರೆ ಮನವಂದಾತಗೆ
ಬೇಗನೆ ಸ್ಥಿರವಾಗುವುದರಿವು

ಯೋಗವಿಲ್ಲದಗೆ ವಿವೇಕವಾಗದು
ವಿವೇಕ ವಿರದಗೆ ಭಾವನೆಯು
ಭಾವನೆಯಿರದವಗಾಗದು ಶಾಂತಿಯು
ಶಾಂತಿಯಿರದವಗೆ ಸುಖವೆಲ್ಲಿ

ವಿಷಯಗಳೊಳಾಡುತಲಿರು ವಿಂದ್ರಿಯ
ಗಳೆಮನ ಹಿಂಬಾಲಿಸಿ ನಡೆಯೆ
ಈತನ ಬುದ್ಧಿಯು ತುಯ್ದೊಯ್ಯುವುದದು
ನೀರೊಳು ನಾವೆಯ ಗಾಳಿಯೊಲು

ಅದರಿಂದಾವನು ಹಿಂದೆಟ್ಟಿರುವನು
ಇಂದ್ರಿಯಾರ್ಥಗಳಿ ಮೆಲ್ಲೆಡೆಯಿಂ
ತನ್ನಿಂದ್ರಿಯಗಳ ನೆಲೆ ಮಹಾ ಬಾಹು
ಅವನರಿವಹುದೈ ಸುಸ್ಥಿರವು

ಜೀವಿಗಳೆಲ್ಲರು ಮೇನಿರುಳೆಂಬರೋ
ಅಂದೆಚ್ಚರುವನು ಸಂಯಮಿಯು
ಆವಾಗೆಚ್ಚತ್ತಿರವರೋ ಜೀವಿಗ
ಳಂದಿರುಳೈ ನೋಡ ಮುನಿಗೆ

ನೆರೆ ತುಂಬುತಿದ್ದರೂ ಎಲ್ಲೆಗೆಟ್ಟಲೆಯದಿಹ
ಕಡಲ ನೈದುವುವೆಂತೊ ನದನದಿಗಳು
ಅಂತೆಯೆ ಕಾಮಗಳು ಮಾವನಂ ಸೇರುವುವೋ
ಶಾಂತಿಯಹುದಾತನಿಗೆ ಕಾಮದಾಳ್ಗಲ್ಲ

ಆಸೆಗಳೆಲ್ಲವ ತೊರೆಯುತಲಾವನು
ನಿಸ್ಪೃಹನಾಗುತ ನಡೆಯುವನೋ
ತಾನೆಯನ್ನದು ತನಗೆಂದೆನ್ನದೆ
ಶಾಂತಿಗೆ ಸಲ್ಲುವನಾಪುರುಷಂ

ಇದುವೆ ಪ್ರಾರ್ಥನೆ ಬ್ರಾಹ್ಮೀಸ್ಥಿತಿಯು
ಇದ ನಡೆದವಗಾಗದು ಮೋಹಂ
ಸಾವವೇಳೆಯೊಳುಮೀ ಸ್ಥಿತಿಯಿದ್ದೊಡೆ
ಬ್ರಹ್ಮಕೆ ಸಲ್ಲುವು ದವನಾತ್ಮಂ

ಶ್ರೀಮಾನ್ ಪು. ತಿ. ನರಸಿಂಹಾಚಾರ್ಯರ ಅನುವಾದ.

ಹೀಗೆ ಸ್ಥಿತಪ್ರಜ್ಞನು ಯಾರೆಂಬುದರ ಧ್ಯಾನವಾದ ಮೇಲೆ ಆವರಣವೆಲ್ಲಾ ರಘುಪತಿ ರಾಘವ ರಾಜಾರಾಮ್ ಪತಿತಪಾವನ ಸೀತಾರಾಮ್ ಎಂಬ ಘೋಷದಿಂದ ಪವಿತ್ರವಾಗುತ್ತಿದ್ದಿತು. ಮೂರ್ತಿಗಳು—ಇವರನ್ನು ಮತ್ತೊಂದು ಕಡೆ ಮುದ್ದಾನೆ ಮರಿ ಎಂದು ಹೇಳಿದ್ದೇನೆ. ಇವರದು ಹಾಸ್ಯದ ಸ್ವಭಾವ. ಗುರುತು ಇಲ್ಲದವರಿಗೆ ಸಾಹೇಬರಂತೆ ತೋರುತ್ತಾರೆ. ಬಣ್ಣ ಬಿಳಿಯ ಜಾತಿ ಕಪ್ಪು, ಆದರೆ ಪ್ರಾಣಿ ಬಹು ಕೋಮಲ; ಸಾಧು ಇವರೂ ಪ್ರಾಣಾಚಾರ್ಯರೂ ಸೇರಿದರೆ ಸಾಕು. ಎಂತಹ ಮಂಕು ಪ್ರೇಕ್ಷಕರನ್ನೂ ಗಂಟೆ ಗಟ್ಟಲೆ ನಗಿಸುತ್ತಾರೆ. ಇವರ ಹಾಸ್ಯ ವೈವಿಧ್ಯ. ಇವರು ಕತ್ತೆಯಂತೆ ಕಿರಚಿದರೆ ಪ್ರಾಣಾಚಾರ್ಯರು ಕುದುರೆಯಂತೆ ಅರಚುತ್ತಾರೆ. ನಾಯಿ ಬೆಕ್ಕು ಕಾಗೆ ಹುಲಿ ಸಿಂಹ ಹಸು ಹಲ್ಲಿ ಹಂದಿ ಕಿರುಬ ಕಡವೆ ಈ ಯಾವ ಪ್ರಾಣಿಗಳಂತೆ ಬೇಕಾದರೂ ಇವರಿಬ್ಬರೂ ಕೂಗುತ್ತಾರೆ. ಇವರಿಬ್ಬರೂ ಸೇರಿದ ಕಡೆ ಒಂದು ಮೃಗಾಲಯದಿಂದ ಹೊರಡುವಂತೆ ಧ್ವನಿ ಹೊರಡುತ್ತದೆ ಸೆರೆಮನೆಯಲ್ಲಿ ಇವರು ಎಲ್ಲಿ ಇರಲಿ ಇವರ ಸುತ್ತಾ ಹತ್ತು ಜನ ನಗುತ್ತಲೇ ಇರುತ್ತಾರೆ. ಆದರೆ ಪ್ರಾರ್ಥನಾ ಮಂದಿರಕ್ಕೆ ಬಂದನಂತರ ಮೂರ್ತಿಗಳ ಸ್ವಭಾವ ಬಹು ಗಂಭೀರ ತಮ್ಮ ಬಣ್ಣವನ್ನು ಅವರು ಬದಲಾಯಿಸಿಕೊಳ್ಳಲು ಸಾಧ್ಯವಿಲ್ಲವಾದರೂ ಉಳಿದ ಎಲ್ಲ ದೃಷ್ಟಿಗಳಿಂದಲೂ ಅವರು ಸಾತ್ವಿಕರೆ. ರಘುಪತಿ ರಾಘವ ರಾಜರಾಮ್ ಹೇಳಿಕೊಡುವವರು ಅವರು. ಅನಂತರ ಉಳಿದವರು ನೂರಾರು ಕಂಠಗಳಿಂದ ಅದನ್ನು ಹಾಡುತ್ತಾರೆ. ರಘುಪತಿ ರಾಘವ ರಾಜಾರಾಮ್ ಪತಿತಪಾವನ ಸೀತಾರಾಮ್ ಎಂಬ ಸಾಮಾನ್ಯವಾದ ಮಾತುಗಳಿಗೆ ಅದ್ಭುತವಾದ ಮಾರ್ದವವನ್ನೂ ಭಕ್ತಿರಸವನ್ನೂ ತುಂಬುವ ಶಕ್ತಿ ಮೂರ್ತಿಯವರಿಗೆ ಇದೆ. ಅವರು ಇಲ್ಲದಿದ್ದರೆ ಪ್ರಾರ್ಥನೆ ರುಚಿಸುತ್ತಲೇ ಇರಲಿಲ್ಲ. ಒಂದೊಂದು ಸಲ ಮೂರ್ತಿಯವರಿಗೆ ಖಾಯಿಲೆ ನೆಗಡಿ ಬಂದು ಅವರು

ಪ್ರಾರ್ಥನೆಗೆ ಬರುವುದು ನಿಂತ ದಿನ ಆ ಮನುಷ್ಯನ ಶ್ರದ್ಧಾಭಕ್ತಿಗಳು ಇಲ್ಲದುದರಿಂದ ಪ್ರಾರ್ಥನೆಯಲ್ಲಿ ದೊಡ್ಡ ಕೊರತೆ ಕಾಣುತ್ತಿದ್ದಿತು. ಆ ವೇಳೆಗಳಲ್ಲಿ ಪ್ರಾರ್ಥನೆಯ ಬೆಲೆಯನ್ನು ಮಾಡುವವರಲ್ಲಿ ಶ್ರದ್ಧೆ ಎಂಬುದು ಗೊತ್ತಾಗುತ್ತಿದ್ದಿತು. ಮೂರ್ತಿಗಳು ಒಳ್ಳೆಯ ಸಾಹಿತಿ. ಗಾಂಧಿಯವರ ಮೂಲ ಮಂತ್ರವನ್ನೇ ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಕನ್ನಡ ಸಂಘಗಳಿಗೆ ಒಳ್ಳೆಯ ಜೀವದಂತೆ ಇರುವವರು. ಇವರ ಕನ್ನಡ ಸಂಘ ಈ ದೇಶದಲ್ಲಿ ಮತ್ತಾವ ಸಂಘವೂ ಮಾಡದಷ್ಟು ಜನಸೇವೆ ಗ್ರಂಥ ಪ್ರಚಾರ ಸಾಹಿತ್ಯಸೇವೆ ಮಾಡಿದೆ. ಇಂತಹವರನ್ನು ಸೆರೆಮನೆಯಲ್ಲಿ ತಂದು ಕೂರಿಸುವ ಸರ್ಕಾರದ ಬುದ್ಧವಂತಿಕೆಯನ್ನು ಏನು ಹೇಳೋಣ.

ರಘುಪತಿರಾಘವ ರಾಜಾರಾಮ್ ಆದಮೇಲೆ ಮೂರ್ತಿಗಳು ಸಾಮಾನ್ಯವಾಗಿ ಒಂದು ಕನ್ನಡದ ಭಾವಗೀತೆ ಹಾಡುತ್ತಿದ್ದರು. ಈ ಗೀತೆಯ ಮೋಹ ಸೆರೆಮನೆಯ ವಾತಾವರಣದಲ್ಲಿ ಅದ್ಭುತವಾಗಿದ್ದಿತು. ಅದನ್ನು ಹಾಡುವ ಮೂರ್ತಿಯವರ ಭಾವಾವೇಶವೂ ಹಾಗೆಯೇ ಇತ್ತು. ಭಕ್ತನಾದವನು ತನ್ನ ಹೃದಯವನ್ನು ತೆರೆದು ಹೊರಕ್ಕೆ ಭಕ್ತಿಯನ್ನು ತೋರುತ್ತಿರುವಂತಿದೆ ಈ ಗೀತೆ. ಮೂರ್ತಿಯವರ ಬಾಯಿಂದ ಈ ಗೀತೆಯನ್ನು ಕೇಳುವವರಿಗೆ ಕನ್ನಡದಲ್ಲಿ ಇಂತಹ ಗೀತೆ ಇದೆ ಎಂದೇ ಅನೇಕರು ನಂಬಿರಲಿಲ್ಲ. ಇದು ಯಾವುದೋ ದಾಸರ ಪದವೆಂದು ಕೊಂಡಿದ್ದವರಿಗಂತೂ ಇವರ ಕರ್ತೃ ನಮ್ಮ ಎದುರಿಗೇ ಓಡಾಡುತ್ತಿರುವ ಇಂಗ್ಲಿಷ್ ವಿದ್ವಾನ್ ಎಂದ ಕೂಡಲೇ ಆಶ್ಚರ್ಯ ಇನ್ನೂ ಹೆಚ್ಚಾಗುತ್ತಿದ್ದಿತು. ಆದರೆ ಚಾಣಕ್ಯ ಈ ಗೀತೆ ಹಾಡಿದಾಗಲೆಲ್ಲ ಹೇಳುತ್ತಿದ್ದಂತೆ ಇಲ್ಲಿ ಇಂಗ್ಲಿಷಿನ ಪ್ರಾಬಲ್ಯ ಏನೂ ಇಲ್ಲ. ಇದು ಪೂರ್ಣವಾಗಿ ಭಾರತ ಸಂಸ್ಕೃತಿಯೇ. ಇಂಗ್ಲಿಷ್ ತಂದಿದ್ದರೆ ಇದೂ ಹಾಳಾಗಿ ಜಾತಿಕೆಟ್ಟು ಹೋಗುತ್ತಿದ್ದಿತು" ಎಂಬುದು ನಿಶ್ಚಯ. ಈಗಲೂ ಈ ಗೀತೆಯನ್ನು ಜ್ಞಾಪಿಸಿಕೊಂಡರೆ ಮೈ ರೋಮಾಂಚವಾಗುತ್ತದೆ.

ಬಲ್ಲವನು ನಾನೆಂದು<br>
ಬಲು ಮೆರೆದೆನೈಯ್ಯಾ—<br>
ಎಲ್ಲ ಬಲವನತೆಂದು ಮೈಮರೆತೆ<br>
ನೀ ಎನ್ನ ಸಲಹಬೇಕಯ್ಯಾ

ಎನ್ನ ಮಾನಸದಾಸೆ ಆಗಸಕೆ ಕೈ ನೀಡಿ
ನಿನ್ನ ಸಂಕಲ್ಪಗಳ ಲೆಕ್ಕಿಸದೆ ಚೀರೀಡೆ ಸಂ
ಪನ್ನ ಬಲ ದಯೆತೋರ್ದೆ ದಾರಿವೆಳಗಾದೆ
ಎನ್ನಹಂಕೃತಿ ತೊಲಗೆ ನೆರವಾದೆ ನಿಜವನೊರೆದೆ—
ಎನ್ನ ಸಾಸಕೆ ಜಗವು ಅಡಿಯಾಳುತನವಾಂತಿ
ಮನ್ನಣೆಯು ತೋರುವುದು ತಾನೆಂದು ಬಗೆದೆ
ಇನ್ನು ಮೇಲಿನ ಕಾರ್ಯ ವೆನ್ನಧೀನಪ್ಪೆಂದು
ಭಿನ್ನತತ್ವಕೆ ನಾನು ಶರುಣುವೋದೆ, ನಿರ್ಬೋಧನಾದೆ—
ವಿಶ್ವ ಸಾಮ್ರಾಜ್ಯದಧಿಕಾರ ನಿನಗಿರಲು
ಅಸ್ವತಂತ್ರನು ಅದನು ಅಣಕಿಸುತ ಮರೆತೆ
ನಿಸ್ಸೀಮ ಸಾಹಸದ ಬೆಡಗಿನಾತ್ಮನೆ ಪಿತನೆ
ವತ್ಸನೆಂತಾದೊಡಂ ಬೇಡಿ ಬಂದಿಹೆನಯ್ಯ, ಕರುಣದೋರಯ್ಯಾ

[ಶ್ರೀಮಾನ್ ವೀ. ಸೀ. ಯವರ ಗೀತೆ]

ಮೂರ್ತಿಗಳದು ಭಾವಗೀತಗಳನ್ನು ಹಾಡುವುದರಲ್ಲಿ ನುರಿತ ಕೈ. ತಮ್ಮ ಈ ಶಕ್ತಿಯನ್ನು ಅವರು ಸೆರೆಮನೆಗೆ ಒಂದೇ ಕಂಡುಕೊಂಡರೆಂದು ಭಾವಿಸುತ್ತೇನೆ. ಅಂತೂ ಅವರ ಈ ಶಕ್ತಿ ಇತರರಿಗೆ ಕಂಡುದು ಸೆರೆ ಮನೆಯಲ್ಲಿಯೆ.

ಇಂತಹ ಸಾಮೂಹಿಕ ಪ್ರಾರ್ಥನೆ ನಮ್ಮಲ್ಲಿ ಸಾಧಾರಣವಲ್ಲದಿದ್ದರೂ ಅದರ ಪರಿಣಾಮ ಬಹಳ ಸುಖಕರವಾಗುತ್ತದೆ. ಸೆರೆಮನೆಯಲ್ಲಿ ವಿಚಾರಣೆ ಯಿಲ್ಲದೆ ತಪ್ಪು ಏನು ಎಂದು ತಿಳಿಸದೆ ಈ ಸಲ ಮಾಡಿದಂತೆ 12 ತಿಂಗಳು 15 ತಿಂಗಳು 16 ತಿಂಗಳು ಜನರನ್ನು ಕೂಡಿದಾಗ ಸೆರೆಯಾಳುಗಳಿಗೆ ಮೊದಲು ತೋರುವ ಅರಕೆಯೇ ಸ್ತ್ರೀಯರು. ಸ್ತ್ರೀ ಎಂಬ ಮಾತಿನಲ್ಲಿ ಸಂಸಾರ, ಪ್ರೇಮ, ಅಚ್ಚುಕಟ್ಟು, ಕಲೆ, ಸಾಹಿತ್ಯ, ಸಂಗೀತ, ಪುಷ್ಪ, ಪ್ರಪಂಚದ ಕಿರುಕುಳಗಳನ್ನು ಮೃದು ಮಾಡತಕ್ಕ ಸ್ತ್ರೀ ಪ್ರಭಾವ ಇವೆಲ್ಲಾ ಅಡಕವಾಗಿವೆ. ಯಾವ ಯಾವ ಪ್ರಭಾವಗಳು ಮನುಷ್ಯನನ್ನು ಮೃದುವಾಗಿ ಮಾಡಬಲ್ಲವೋ, ಬಾಳಿಗೆ ಒಂದು ಅರ್ಥವನ್ನೂ ಸಾರ್ಥಕ್ಯ ವನ್ನೂ ಕೊಡಬಲ್ಲವೋ, ಜೀವನದ ಎಲ್ಲಾ ಕಷ್ಟಗಳಿಗೂ ಎದೆಯೊಡ್ಡುವ ಕೆಚ್ಚನ್ನು ಕೊಡಬಲ್ಲುದೋ ಆ ಪ್ರಭಾವವೇ ಸ್ತ್ರೀ ಪ್ರಭಾವ. ಅದು ಸೆರೆ ಮನೆಯ ದುರದೃಷ್ಟಶಾಲಿಗೆ ಇಲ್ಲವಾಗುತ್ತದೆ. ಈ ಅರಕೆಯನ್ನು ಧೀರರಾದ ಅವರು ಸಾಮಾನ್ಯವಾಗಿ ಹೊರಗೆ ತೋರಿಸುವುದಿಲ್ಲ. ಆದರೆ

ಇದು ಸೆರೆಯಾಳುಗಳನ್ನು ಜರ್ಝರಿತ ಮಾಡುವಂತೆ, ಅವರನ್ನು ಮೆತ್ತಗೆ ಮಾಡುವಂತೆ ಮತ್ತಾವುದೂ ಮಾಡುವುದಿಲ್ಲ. ಸೆರೆಮನೆಯಲ್ಲಿ ಎರಡನೆಯ ಅರಕೆ ಗಾಳಿಯಂತೆ ಒಡಾಡುವ ಮಕ್ಕಳ ಅಭಾವ. ಇವೆರಡೂ ಇಲ್ಲದ ಸೆರೆಯಾಳು ಎಂತಹ ರಾಜಕೀಯ ಸೆರೆಯಾಳೇ ಆಗಲಿ ತನ್ನ ಬಂಧನಕ್ಕೆ ಕಾರಣವಾದವರನ್ನು ಪ್ರೀತಿಸುವುದು ಸಾಧ್ಯವಲ್ಲ. ಅದರಲ್ಲೂ ಸಂಬಂಧ ಪಟ್ಟವರು ಈ ಪರಿಸ್ಥಿತಿಯನ್ನು ಎದುರಿಸಲು ಶಕ್ತರಲ್ಲ. ಹೇಡಿಗಳು ಎಂದು ತೋರಿದ ಕೂಡಲೇ ಅವರಲ್ಲಿ ತಿರಸ್ಕಾರ ಇನ್ನೂ ಹೆಚ್ಚಾಗುತ್ತದೆ. ಆಗ ಉಳಿದಿರುವುದು ವೈರಾಗ್ಯವೊಂದೆ. ಆದರೆ ದಬ್ಬಾಳಿಕೆಯ ಜಗತ್ತಿನಲ್ಲಿ ಹೇಡಿತನದ ಅರ್ಥರಹಿತವಾದ ಒಣ ವೈರಾಗ್ಯದಿಂದ ಪ್ರಯೋಜನವಿಲ್ಲ. ಸ್ಥಿತಿಪ್ರಜ್ಞನ ವೈರಾಗ್ಯವೇ ಬೇಕು. ಮೂರ್ತಿಯವರು ಹಾಡುತ್ತಿದ್ದ

ಆರು ಒಲಿದರೇನು ನಮಗಿನ್ನಾರು ಮುನಿದರೇನು ||
ಕ್ಷೀರಸಾಗರ ಶಾಯಿಯಾದವನ ಸೇರಿದಂಥ ಹರಿದಾಸರಿಗೆ ||
ಊರನಾಳುವ ದೊರೆಗಳು ನಮ್ಮನು ದೂರ ಅಟ್ಟಿದರೇನು
ಘೋರಾರಣ್ಯದಿ ತಿರುಗುವ ಮೃಗಗಳು । ಅಡ್ಡಗಟ್ಟಿದರೇನು
ಮಾರಿ ಹಿಂಡು ಮತ್ತೆ ಮುಸುಕಿನ ದಂಡು । ಮೈಗೆ ಮುತ್ತಿದರೇನು
ಹಡೆದ ತಾಯಿ ತಂದೆ ನಮ್ಮೊಳು ಅಹಿತವ ಮಾಡಿದರೇನು
ಮಡದಿ ಮಕ್ಕಳು ಮನೆಯು ನೆಂಟರು ಮುನಿಸುಗೊಂಡರಿನ್ನೇನು
ಒಡನೆ ಆಡುವ ಗೆಳೆಯರು ನಮ್ಮೊಳು ವೈರವ ಬಳಸಿದರೇನು
ಕಡಲ ಶಯನ ಕರುಣಾನಿಧಿ ನಾಮವು ಒಡಲೊಳಗಿಹ ಹರಿದಾಸರಿಗೆ
ಕಾನನದೊಳು ಹರಿದಾಡುವ ಸರ್ಪವು ಕಾಲಿಗೆ ಸುತ್ತಿದರೇನು
ಜೇನಿನಂದದಲಿ ಕ್ರಿಮಿಕೀಟಂಗಳು ಚರ್ಮಕೆ ಮುತ್ತಿದರೇನು
ಭಾನುನಂದನ ಬುಧ ಮಂಗಳತಾ ಬಲವು ತಪ್ಪಿದರೇನು
ದೀನನಾದ ಶ್ರೀ ಪುರಂದರ ವಿಟ್ಠಲನ ಧ್ಯಾನವುಳ್ಳ ಹರಿದಾಸರಿಗೆ

ಈ ಹಾಡನ್ನು ಪುರಂದರದಾಸರು ನಮಗೋಸ್ಕರವೇ ಮಾಡಿದರೋ ಅಥವಾ ಅವರೂ ಕುರುಡು ನ್ಯಾಯದ ಕೈಯ್ಯಲ್ಲಿ ಸಿಕ್ಕಿಹೊಂದಿದ ಅನುಭವ ಇದೋ ಎಂದು ನಮಗೆ ಅನುಮಾನ ಬರುತ್ತಿದ್ದಿತು.

ಸೆರೆಮನೆಯಲ್ಲಿ, ರಾಜಕೀಯ ಖೈದಿಯೇ ಆದರೂ ನಾನಾ ವಿಕಾರಗಳು ಹುಟ್ಟುತ್ತವೆ. ಒಬ್ಬ ಮೂಗು ಹಿಡಿದುಕೊಂಡು ತಪಸ್ವಿಯೇ ಆಗಬೇಕೆಂದು ಕೂತುಬಿಡುತ್ತಾನೆ. ಅಚ್ಚಾಗಿರುವ ಪುಸ್ತಕದಿಂದ ವೇದವನ್ನು ಕರ್ಣಕಠೋರವಾಗಿ ಹೇಳಲು ಪ್ರಾರಂಭಿಸುತ್ತಾನೆ. ವೇದ ಸ್ವಲ್ಪ

ಗೊತ್ತಿದ್ದವರಿಗೂ ಅದು ಕಿವಿಯಲ್ಲಿ ಸೀಸ ಕಾಯಿಸಿ ಹುಯ್ದಂತೆ ಆಗುತ್ತದೆ. ಬಕಪಕ್ಷಿಯಂತೆ ಕಣ್ಣನ್ನು ಮಿಟಕಿಸುತ್ತಾ ಕುಳಿತುಬಿಡುತ್ತಾನೆ. ಶೂದ್ರನ ತಪಸ್ಸಿಗೆ ಬ್ರಾಹ್ಮಣ್ಯವು ಶರಣಾಗುವುದು ನ್ಯಾಯವೇ ಆದರೂ ಅಪದ್ಧವಾದ ವೇದ ಯಾರ ಬಾಯಿಂದ ಹೊರಟರೂ ಅದಕ್ಕೆ ಶರಣಾಗುವುದು ಸಾಧ್ಯವಿಲ್ಲ. ಅದು ಬರಿಯ ಬಾಹ್ಯಾಡಂಬರವೆಂಬುದು ನೋಡಿದವರಿಗೆ ಕೂಡಲೇ ಗೊತ್ತಾಗುತ್ತಿದ್ದಿತು. ಆಗ ಸೆರೆಯಾಳುಗಳಲ್ಲಿ "ಇದೇನೊ ಇವನು ವೇಷ ಹೂಡಿದ್ದಾನೆ" ಎಂಬ ಭಾವ ಮೂಡುತ್ತಿದ್ದಿತು. ಅಂದಿನ ಪ್ರಾರ್ಥನೆಯಲ್ಲಿ ಜನರ ಆ ಮನೋಭಾವವನ್ನು ಮೂರ್ತಿಯವರು ಅರಿತು ಈ ಹಾಡನ್ನು ಹಾಡುತ್ತಿದ್ದರು.

ಬಿಡು ಬಾಹ್ಯದೊಳು ಡಂಭವ—ಮಾನಸದೊಳು
ಎಡೆವಿಡಿದಿರು ಶಂಭುವ
ಒಡಲೊಳು ವಂಚಿಸಿ ಹೊರಗೆ ನೀ ಕೀರ್ತಿಯ
ಪಡೆದರೆ ಶಿವನಿನಗೊಲಿವನೆ ಮರುಳೆ ||

ಜನಮೆಚ್ಚಿ ನಡೆಕೊಂಡರೇನುಂಟು ಲೋಕದಿ
ಮನಮೆಚ್ಚಿ ನಡೆಕೊಂಬುವುದೆ ಚೆನ್ನವು
ಜನರೇನು ಬಲ್ಲರು ಒಳಗಾಗೊ ಕೃತ್ಯವ
ಮನವರಿಯದ ಕಳ್ಳತನ ವಿಲ್ಲವಲ್ಲ ||

ಜನರು ಮೆಚ್ಚುತೆ ನಿನ್ನ ಕೈಲಾಸಕೊಯ್ವರೆ
ಜನ ಮೆಚ್ಚದಿರೆ ಶಿವ ಬಿಡುತಿಪನೆ
ಜನರಲ್ಲಿ ನಿನ್ನನು ದೊಡ್ಡಾತನೆಂದರೆ
ಚಿನುಮಯ ಶಿವನೇನಲ್ಲರಿಯನೆ ಮರುಳೆ

ಮನದೊಳು ಶಿವತಾನೆ ಮನೆಮಾಡಿಕೊಂಡಿಹ
ಮನ ಮೆಚ್ಚಿ ನಡೆದರೆ ಶಿವ ಮೆಚ್ಚುವ
ಮನ ಕಂಜಿ ನಡೆಯದೆ ಜನ ಕಂಜಿ ನಡೆದರೆ
ಮನದಾಣ್ಮ ಗುರುಸಿದ್ಧ ಮರೆಯಾಗುವನಲ್ಲ ||

ಮಹನೀಯರ ಸಹವಾಸ ಎಲ್ಲಿದ್ದರೂ ಉಪಕಾರವೇ ಆಗುತ್ತದೆ. ಹಾಸ್ಯಪುರಿಯ ಸೆರೆಮನೆಯಲ್ಲಿ ಚಾಣಕ್ಯರ ಪ್ರೇರಣೆಯಂತೆ ವಾಲ್ಮೀಕಿ ರಾಮಾಯಣವನ್ನು ಪಠನ ಮಾಡಲು ಪ್ರಾರಂಭಿಸಿದುದಾಯಿತು. ಇದರ ಮುಖ್ಯ ಪುರೋಹಿತರು ರಘುಪತಿಯವರು. ರಘುಪತಿಯವರಿಗೆ ರಾಗ ಚೆನ್ನಾಗಿ ಬರುವುದಿಲ್ಲ. ಆದರೆ ರಾಮಾಯಣ ಓದುವುದರಲ್ಲಿ ಅವರು

ತಮ್ಮದೇ ಆದ ಒಂದು ಬಗೆಯಿಂದ ಬಹಳ ಹಿತವಾಗಿ ಓದುತ್ತಿದ್ದರು. ಸೆರೆಮನೆಯ ಪ್ರಾರಂಭದ ಬೇಸರಿಕೆಗಳಲ್ಲಿ ರಾಮಾಯಣದ ವ್ಯಾಸಂಗವೇ ಒಂದು ದೊಡ್ಡ ಔತಣವಾಯಿತು. ರಸಿಕರಾದವರಿಗೆ ಅದಕ್ಕಿಂತ ದೊಡ್ಡ ಔತಣ ಯಾವುದುಬೇಕು. ಕೆಲವರು ಭಕ್ತಿಯಿಂದಲೇ ಕೇಳುತ್ತಿದ್ದರೆ ಕೆಲವರು ವಿಮರ್ಶಾ ಬುದ್ಧಿಯಿಂದಲೇ ಕೇಳುತ್ತಿದ್ದರು. ಕೆಲವರು ತಾವು ಸರ್ವಜ್ಞರೆಂದು ತಿಳಿದುಕೊಂಡು ರಾಮಾಯಣಕ್ಕೇ ಉಪಕಾರ ಮಾಡುವ ಮನೋಭಾವದಿಂದ ಕೇಳಲು ಪ್ರಾರಂಭಿಸಿದರೂ ಒಂದೆರಡು ಘಳಿಗೆಗಳೊಳಗಾಗಿ ತಮ್ಮ ಸರ್ವಜ್ಞತ್ವವನ್ನು ಮರೆತು ತಾವೂ ಇತರರಂತೆ ತಲ್ಲೀನರಾಗಿ ತಲೆಯಾಡಿಸಲು ಪ್ರಾರಂಭಿಸುತ್ತಿದ್ದರು. ಅಯ್ಯನವರು ತಮ್ಮದು ವಿಮರ್ಶಾಬುದ್ಧಿ ಎಂದು ಖಂಡಿತವಾಗಿ ಅರಿತವರೇ ಆದರೂ, ವಾಲ್ಮೀಕಿಯ ಮೋಡಿಯ ಗಾಡಿಯನ್ನು ಸಹಿಸಲು ಶಕ್ತರಾಗದೆ ದಾಸರಾಗಿ ಬಿಡುತ್ತಿದ್ದರು. ರಾಮಾಯಣ ಎಷ್ಟು ಕಾಲದಿಂದ ತಮ್ಮ ಜನರ ಹೃದಯ ತಂತಿಯನ್ನು ಮಿಡಿಯುತ್ತಿದೆ. ಅದನ್ನು ನಾವು ಎಷ್ಟುಸಲ ಓದಿ ಆಯಿತು. ಇನ್ನೂ ಇನ್ನೂ ಓದಬೇಕೆಂಬ ಆಸೆ ಹೆಚ್ಚುತ್ತಲೆ ಇದೆಯಲ್ಲ. ಪ್ರತಿಯೊಬ್ಬ ವಾಚಕ ರಾಮನೂ ತನ್ನ ಸೀತೆಯನ್ನು ಹುಡುಕುತ್ತಲೇ ಇರುತ್ತಾನೆ. ಪ್ರತಿಯೊಬ್ಬ ಸೀತೆಯೂ ತನ್ನ ರಾಮನನ್ನು ಹುಡುಕುತ್ತಲೇ ಇದ್ದಾಳೆ. ಅವರು ಸಿಕ್ಕದೆ ಇರುವ ಕೊರತೆಯನ್ನು ರಾಮಾಯಣದ ಪಠನದ ಆನಂದ ದಿಂದ ಪೂರೈಸಿಕೊಳ್ಳುತ್ತಾರೆ.

ಒಂದೊಂದು ವೇಳೆ ಕಾವ್ಯವನ್ನು ಅನುಭವಿಸುವ ನಿಜವಾದ ರಸಿಕತೆ ಮಾಯವಾಗಿ ರಾಮಾಯಣವೂ ಕೂಡ ತಮ್ಮ ತಮ್ಮ ವಾದದ ಸಮರ್ಥನೆಗೆ ಸಾಧಕವಾದ ಗ್ರಂಥವಾಗುತ್ತಿದ್ದಿತು. ಇದು ಅತಿಬುದ್ಧಿವಂತಿಕೆಯ ರೋಗವೆಂಬುದು ಆ ವಾದಗಳನ್ನು ಕೇಳಿದ ಕೂಡಲೆ ಗೊತ್ತಾಗುತ್ತಿದ್ದಿತು. ಒಬ್ಬರು ಇದ್ದಕ್ಕಿದ್ದಂತೆ ರಾಮಾಯಣ ದ್ರಾವಿಡ ಮತ್ತು ಆರ್ಯ ಸಂಸ್ಕೃತಿಗಳ ತಿಕ್ಕಾಟವೆಂದುಬಿಡುತ್ತಿದ್ದರು. ಕೂಡಲೆ ಮೂರ್ತಿಯವರು ಹೋ ರಾಮಸ್ವಾಮಿ ನಾಯಕರ್ ಬಂದರು ಎನ್ನುತ್ತಿದ್ದರು. ಮತ್ತೊಬ್ಬ ಪ್ರಾಜ್ಞರು ಸುಗ್ರೀವನು ವಾಲಿಯ ಹೆಂಡತಿಯನ್ನು, ತನ್ನ ಹೆಂಡತಿಯಾಗಿ ಇಟ್ಟುಕೊಂಡ ಎಂದು ರಾಮಾಯಣಲ್ಲಿ ಹೇಳಿರುವುದು ದ್ರಾವಿಡ ಸಂಸ್ಕೃತಿಯನ್ನು ತೆಗಳುವುದಕ್ಕೆ

ಎನ್ನುವರು. ಅಯ್ಯನವರು ಯಾವಾಗಲು ರಾಮಾಯಣವನ್ನು ವಿಮರ್ಶಾ ಬುದ್ಧಿಯಿಂದಲೇ ನೋಡುತ್ತಿದರು. ಒಂದೊಂದು ವೇಳೆ ಈ ವಿಮರ್ಶೆಯು ಅತಿಯಾಗಿ ಅವರಿಗೆ ರಾಮಾಯಣ ಪಠನದಿಂದ ದೊರಕ ಬೇಕಾದ ನಿಜವಾದ ಆನಂದ ಮರೆಯಾಗುತ್ತಿದ್ದಿತು. ಮನುಷ್ಯ ಜೀವನಕ್ಕೆ ಸಮರಸವಿಲ್ಲದಿದ್ದರೆ, ರಾಜಕೀಯ ಪ್ರಪಂಚವೂ ಅಸ್ವಾಭಾವಿಕ ವಾಗುತ್ತದೆ. ಸಮತೆಯನ್ನು ಅಭ್ಯಾಸಮಾಡಿಕೊಳ್ಳದವರಿಗೆ ರಾಜಕೀಯ ಕ್ಷೇತ್ರದಲ್ಲಿ ಸೆರೆಮನೆ ಹೊಕ್ಕ ಕೂಡಲೇ ತಲೆ ಕೆಡುತ್ತದೆ. ತಾವು ಎಲ್ಲಾ ವಿಧದಲ್ಲಿಯೂ ಪ್ರಾಜ್ಞರೇ ಇರಬಹುದೇನೋ ಎಂಬ ನಂಬಿಕೆ ಉಂಟಾಗು ತ್ತದೆ. ಅಂತಹ ಸಂದರ್ಭದಲ್ಲಿ ಆನಂದದ ಸಂದೇಶವನ್ನು ಮಾತ್ರ ಕೊಡಲು ಹೊರಟ ರಸಋಷಿ ವಾಲ್ಮೀಕಿ ಸಹ ಅವರಿಗೆ ಒಬ್ಬ ಒಡ ಪ್ರಚಾರಕನಾಗಿಯೇ ತೋರುತ್ತಾನೆ. ಇದುವರೆಗೆ ವಾಲ್ಮೀಕಿ ಜಗತ್ತಿನ ಎಷ್ಟೊಂದು ಜನಕ್ಕೆ ಆನಂದವನ್ನು ಉಂಟುಮಾಡಿದ್ದಾನೆಯೋ; ಮುಂದೆ ಎಷ್ಟು ಜನಕ್ಕೆ ಮಾಡ ಬೇಕೊ ಹಾಸ್ಯಪುರಿಯ ಸೆರೆಯಲ್ಲಿ ಅವನು ಇಲ್ಲದೆ ಇದ್ದಿದ್ದರೆ ಜನಕ್ಕೆ ಹುಚ್ಚು ಹತ್ತುತ್ತಿದ್ದುದರಲ್ಲಿ ಸಂದೇಹವಿಲ್ಲ.

ಬೆಳಗಿನ ಸ್ನಾನವಾದ ಕೂಡಲೇ ಮೂರ್ತಿಯವರು ರಾಘವಾಂಕನ ಹರಿಶ್ಚಂದ್ರ ಕಾವ್ಯವನ್ನು ಓದಲು ಪ್ರಾರಂಭಿಸುತ್ತಿದ್ದರು. ರಘುಪತಿ ಅದಕ್ಕೆ ಬೇಕಾದ ಅರ್ಥ ವಿವರಣೆ ಕಟ್ಟುತ್ತ ಜನರನ್ನು ರಂಜಿಸುತಿದ್ದ. ಹರಿಶ್ಚಂದ್ರ ಕಾವ್ಯವನ್ನು ವಾಲ್ಮೀಕಿ ರಾಮಾಯಣದ ಜತೆಯಲ್ಲಿ ಓದ ಬೇಕೆಂದು ಹೂಡಿದುದು ಮುಖ್ಯವಾಗಿ ಮೂರ್ತಿ ಮತ್ತು ರಘುಪತಿಯ ಕನ್ನಡಿಗತನ.

ಹರಿಶ್ಚಂದ್ರ ಕಾವ್ಯವನ್ನು ಓದುವುದರಲ್ಲಿ ಅವರಿಗೆ ಕಥೆಗಿಂತಲೂ ಹೆಚ್ಚಾಗಿ ರಾಘವಾಂಕನ ಗಂಡು ಶೈಲಿಯನ್ನು ತೋರಿಸುವ ಚಪಲ, ಹೆಮ್ಮೆ, ಮುಂದಾಗಿದ್ದಿತು. ಹರಿಶ್ಚಂದ್ರನ ಕಥೆ ಕೇಳುವುದಕ್ಕೆ ಈ ಕಾಲ ದಲ್ಲಿ ಯಾರು ಒಪ್ಪುತ್ತಾರೆ? ಸಮತಾವಾದಿ ಸಂಪತ್‌ರವರು ಹೇಳಿದಂತೆ “ಒಬ್ಬ ಹರಿಶ್ಚಂದ್ರನಿದ್ದುದರಿಂದಲೇ ಭಾರತದ ಅವಸ್ಥೆ ಈ ಅವಸ್ಥೆಗೆ ಬಂತು ಇನ್ನು ಇವರ ಸಂಖ್ಯೆ ಹೆಚ್ಚಿದರೆ ನಾವು ಉಳಿಯುವಂತೆಯೇ ಇಲ್ಲ” ಎನ್ನುವವರ ಸಂಖ್ಯೆಗೆ ಕಡಮೆ ಇರಲಿಲ್ಲ. ಚಲನಚಿತ್ರದಲ್ಲಿ ಸುಂದರಿಯರಾದ ನಟಿಯರ ನರ್ತನದೊಂದಿಗೆ ಹರಿಶ್ಚಂದ್ರ ಬಂದರೆ ನೋಡ

ಬಹುದು. ಇಲ್ಲದಿದ್ದರೆ ಹರಿಶ್ಚಂದ್ರನನ್ನು ಬಹಿಷ್ಕರಿಸಿದ್ದೇವೆ ಎಂದರು ಕಮ್ಯೂನಿಸ್ಟ್ ದೊರೆಗಳು. ಆದರೂ ಮೂರ್ತಿಯವರು ಬಿಡಲಿಲ್ಲ. ಈ ಕತೆ ಹೇಳಿರುವ ಕ್ರಮ ನೋಡಿ; ಇದರ ಸಂಭಾಷಣೆಯ ಮಾರ್ಗ ಉಪಮಾನ, ಮಾತಿನ ಧಾಟಿ ಶೈಲಿಯ ಮಾಟ ಇದೇ ಒಂದು ಹೊಸಕತೆ ಎಂದು ಪುಸಲಾಯಿಸಿದರು. ಮೊದಲನೆಯ ಪದ್ಯ

> ಶ್ರೀಪತಿಗೆ ಸೊಬಗನುಡುಪತಿಗೆ ಶಾಂತಿಯನಂಬು
> ಜೇಪತಿಗೆ ಚಾತುರ್ಯಮಂ ದಿಕ್ಪತಿಗೆ ಕೃ
> ತಾಪಮಂ ಸುರಪತಿಗೆ ಭೋಗಮಂ ರತಿಪತಿಗೆ ಮಾಲೋಕವಾವರಿಸುವ
> ರೂಪಂ ಸರಿತ್ಪತಿಗೆ ಗಂಭೀರತೆಯನು ಸ್ವಾ
> ಹಾಪತಿಗೆ ತೇಜಮಂ ಕೊಟ್ಟ ಗುರುಮೂರ್ತಿ ಕರು
> ಣಾಪರಿರೂಪಾಕ್ಷನೆಮಗಿಷ್ಟಸಿದ್ಧಿಯ ಮಾಳ್ಕೆ ಸಂತೋಷದಿಂದ

ಪಠಿಸಿದ ಕೂಡಲೇ ಕಮ್ಯೂನಿಸ್ಟರೂ ಸಹ "ನಿಜ. ಇದೊಂದು ಹೊಸ ದಾರಿಯೇ" ಎಂದರು. ರಘುಪತಿಯ ಅರ್ಥವಿವರಣೆ ಆ ಕಾವ್ಯದ ಗಾಂಭೀರ್ಯಕ್ಕೆ ಅನುಸಾರವಾಗಿಯೇ ಇದ್ದಿತು. ವಿಮರ್ಶಕರು ಹರಿಶ್ಚಂದ್ರನನ್ನೂ ಸುಮ್ಮನೆ ಬಿಡಲಿಲ್ಲ. ಒಂದು ಕಡೆ "ಇಷ್ಟು ಗೊಡ್ಡು ಸತ್ಯ ಬೇಡ" ಎಂದು. ಮತ್ತೊಂದೆಡೆ "ಅವನ ಸತ್ಯ ಸಾಲದೆಂದು." ಹರಿಶ್ಚಂದ್ರನಿಗೆ ಮಕ್ಕಳಿರಲಿಲ್ಲ. ಅದರಿಂದ ಅವನು ನಾರದರ ಮಾತಿನಂತೆ ವರುಣನನ್ನು ಪ್ರಾರ್ಥಿಸಿ ತನಗೆ ಗಂಡು ಮಗುವಾದರೆ ಅದನ್ನು ವರುಣನಿಗೆ ಬಲಿಕೊಡುವುದಾಗಿ ಹರಕೆಮಾಡಿಕೊಂಡನು. ಮಗುವಾಯಿತು ಅದಕ್ಕೆ ರೋಹಿತನೆಂದು ಹೆಸರಿಟ್ಟನು. ಆದರೆ ಕೂಡಲೇ ಅವನನ್ನು ಹರಕೆಯಂತೆ ಬಲಿಕೊಡಲಿಲ್ಲ. ಹತ್ತು ದಿನ ಕಳೆಯಲಿ, ಹಲ್ಲು ಹುಟ್ಟಲಿ ಹಲ್ಲು ಬೀಳಲಿ ಬಿದ್ದ ಹಲ್ಲು ತಿರುಗಿ ಹುಟ್ಟಲಿ ಬಿಲ್ಲನ್ನು ಹಿಡಿಯುವಂತಾಗಲಿ ಎಂದು ಕಾಲ ತಳ್ಳಿದನು. ವರುಣನಿಗೆ ಹರಿಶ್ಚಂದ್ರನ ಮೇಲೆ ಕೋಪ ಬಂತು. ಅವನು ಹರಿಶ್ಚಂದ್ರನನ್ನೇ ಹಿಡಿದುಕೊಂಡನು. ಅವನಿಗೆ ಜಲೋದರ ರೋಗ ಬಂತು" ಈ ಭಾಗದಲ್ಲಿ ಹರಿಶ್ಚಂದ್ರನಿಗೆ ಸತ್ಯ ಸಾಲದೆಂದು ನಮ್ಮ ವಿಮರ್ಶಕರ ಮತ. ವಿಶ್ವಾಮಿತ್ರ ವಸಿಷ್ಠರಿಗೆ ಚರ್ಚೆ ಬಂದಾಗ ಇಂದ್ರನ ನಡವಳಿಕೆ ಬಹಳ ವಿವೇಕಪೂರ್ಣವಾಗಿದೆ

> ಒಂದಕ್ಕೆ ಹಿತನುಡಿಯೆ ಪಕ್ಷವೆಂದೆಂಬುವಂ
> ಹಿಂದುಗಳೆದಿರಲುಪೇಕ್ಷಿತನೆಂದು ಜರೆದಡೆ

ಮಿಕ್ಕಿಂದಧಿಕನೇ ಎಂದು, ಹೊಗಳ್ದಡುಪಚಾರವೆಂದು ಎತ್ತಿದಡೆ
ಧೂರ್ತನೆಂದು

ಇದ್ದಕ್ಕಿದ್ದಂತೆ ರಾಘವಾಂಕ ಹರಿಶ್ಚಂದ್ರನ ಕತೆಯನ್ನೂ ಬಹಳ ಹಿತ ಮಾಡಿದನು. ಶೈಲಿಯ ಚಮಕ ಓದುವವರನ್ನೂ ಕೇಳುವವರನ್ನೂ ಪೂರ್ಣವಾಗಿ ಆಕರ್ಶಿಸಿತು.

ಎಂದು ಭೂವರನಂ ಪರೀಕ್ಷಿಸುವೆ ? ಮನ ಬಂದ ದಿನ
ಎನಿತು ಸೂಳ್--ಆತನೀ ಧರೆಯೊಳಿಪ್ಪಂದು ತನಕ
ಆವಾವ ಪರಿಯೊಳು ? ಸಾಹಸ್ರ ವಿಧದೊಳು
ದಿಟವೇ ? ದಿಟ
ಸಿಡಿಲು ಹೊಡೆವಡೆ ಹಿಡಿದ ಕೊಡೆ ಕಾವುದೇ ? ಮುನಿದು
ಪೊಡವಿ ನುಂಗುವಡೆ ಮನೆ ತಾಂಗುವುದೇ ? ಕಪಿದುಹೆ
ಹೆಗ್ಗಡಲುಕ್ಕಿ ಜಗವ ಮೊಗೆವಡೆ ಮೆಳೆಗಳಡ್ಡ ಬಹವೇ ? ಹೇಳು ಮುನಿಪನಿನ
ಬಡ ಬೋಧೆ ಗೀಧೆಗಳು ರಕ್ಷಿಸುವುವಲ್ಲ

ಹೀಗೆ ವಿಶ್ವಾಮಿತ್ರ ವಸಿಷ್ಟರು ಹೋರಾಡಿದರು. ಹರಿಶ್ಚಂದ್ರನಿಗೆ ಅದರಿಂದ ಕಷ್ಟವಾಯಿತು ಎಂಬುದನ್ನು ಕವಿ ಎರಡು ಕೋಣಗಳು ಹೋರಾಡಿದರೆ ಗಿಡಕ್ಕೆ ಮೃತ್ಯು ಎಂದು ಹೇಳಿದ್ದಾನೆ. ಅಂತೂ ರಾಘವಾಂಕನ ಹರಿಶ್ಚಂದ್ರ ಜನರನ್ನು ಪೂರ್ಣವಾಗಿ ಆಕರ್ಶಿಸಿದನು ಅವನ ಸ್ಫುಟವಾದ ವರ್ಣನೆಗಳು ಚಮತ್ಕಾರವಾದ ಮಾತುಗಳು ಕಥಾ ನಿರೂಪಣೆಯನ್ನು ಲಂಬಿಸದಿರುವುದು, ಮುಖ್ಯವಾಗಿ ಹೊಲತಿಯರಿಗೂ ಹರಿಶ್ಚಂದ್ರನಿಗೂ ನಡೆದ ಸಂಭಾಷಣೆ ಇವೆಲ್ಲಾ ಹರಿಶ್ಚಂದ್ರನ ಹಳೆಯ ಕತೆ ಹೊಸದಾಗಿ ತೋರುವಂತೆ ಮಾಡಿದವು. ರಾತ್ರಿ ವೇಳೆ ಕುಮಾರ ವ್ಯಾಸ ಭಾರತ ಪಠನೆ. ರಾಮಯ್ಯನವರು ಪಠಿಸುತ್ತಿದ್ದರು. ರಘುಪತಿಯವರೇ ಇದಕ್ಕೂ ವ್ಯಾಖ್ಯಾನಮಾಡುತ್ತಿದ್ದರು. ಹೀಗೆ ಸೆರೆಮನೆಯಲ್ಲಿ ವಾಲ್ಮೀಕಿ ರಾಘವಾಂಕ ಕುಮಾರ ವ್ಯಾಸರು ಬಂದಿಗಳ ಬುದ್ಧಿಗೆ ಆಹಾರವನ್ನು ಒದಗಿಸುತ್ತಿದ್ದರು. ಮಧ್ಯೆ ಮಧ್ಯೆ ಲಕ್ಷ್ಮೀಶನ ರಸಾಯನ ಸುಧನ್ವ ಹಂಸ ಧ್ವಜರ ವೃತ್ತಾಂತ ಸೀತಾ ವನವಾಸ ಚಂಡಿಯ ಕತೆ ಇವುಗಳು ಮನವನ್ನು ರಂಜಿಸುತ್ತಿದ್ದವು. ಆ ರಸರುಚಿಗಳ ಸಹಾಯವಿಲ್ಲದೆ ಹೋಗಿದ್ದರೆ ಈ ಸಲದಂತಹ ದೀರ್ಘಕಾಲದ ಸೆರೆಮನೆಯ ಪ್ರವಾಸ ಜನರನ್ನು ಜರ್ಝರಿತ ಮಾಡುವುದರಲ್ಲಿ ಸಂದೇಹವಿರುತ್ತಿರಲಿಲ್ಲ.

---

# ೪೪. ವ್ಯಾಯಾಮ

ಸೆರೆಮನೆಗೆ ಬಂದಿಯಾಗಿ ಹೋದವನಿಗೆ ತಾನು ಅಲ್ಲಿ ಹೋದ ನಾಲ್ಕಾಲು ದಿನಗಳಲ್ಲಿಯೇ ಗೋಚರವಾಗುವ ಮತ್ತೊಂದು ದೊಡ್ಡ ಕೊರತೆ ವ್ಯಾಯಾಮದ ಕೊರತೆ. ಕೇಂದ್ರ ಕಾರಾಗಾರದ ಹೊರತು ಉಳಿದ ಕಡೆಯ ಕಾರಾಗಾರದಲ್ಲಿ ಗಾಳಿ ಬೆಳಕು ಸಹ ಸರಿಯಾಗಿ ಬರುವುದಿಲ್ಲ. ಅದರಲ್ಲಿಯೂ ಸಮಯಾನುಸಾರ ಹಿಂದೆ ಇದ್ದ ಕಟ್ಟಡಕ್ಕೆ ಮುಂದೆ ಮುಂದೆ, ಆಚೆ ಈಚೆ ಸುತ್ತಾ ಹೆಚ್ಚಿಸುತ್ತಾ ಹೊಸ ಹೊಸ ಕಟ್ಟಡಗಳನ್ನೂ ಕೊಠಡಿಗಳನ್ನೂ ಕಟ್ಟುತ್ತಿರುವ ಹಂಗಾಮಿ ಸೆರೆಮನೆಗಳಲ್ಲಿ ಗಾಳಿ ಬೆಳಕುಗಳ ಅಭಾವ ಹೆಚ್ಚು. ಸೆರೆಮನೆಯ ಸುತ್ತಲೂ ಸಾಧಾರಣವಾಗಿ ಎತ್ತರವಾದ ಗೋಡೆಯನ್ನು ಹಾಕಬೇಕಾಗಿರುವುದರಿಂದ ಆ ಗೋಡೆ ಹಾಕುವ ಆವರಣ ಎಷ್ಟು ಕಡಿಮೆಯಾದರೆ ಅಧಿಕಾರಿಗಳ ಅಭಿಪ್ರಾಯದಲ್ಲಿ ಅಷ್ಟು ಒಳ್ಳೆಯದು. ಆದುದರಿಂದ ಅವರು ಸೆರೆಮನೆಯ ಒಳಗಡೆ ಹೆಚ್ಚು ವಿಶಾಲ ಪ್ರದೇಶಗಳನ್ನು ಇಟ್ಟುಕೊಳ್ಳದೆ ತಿರುಗಾಡುವುದಕ್ಕೂ ಓಡಾಡುವುದಕ್ಕೂ ಇರುವ ಸ್ಥಳವನ್ನು ಆದಷ್ಟು ಕಡಿಮೆ ಮಾಡುತ್ತಾರೆ. ಹೊಸದಾಗಿ ಸೆರೆಯಾಳಾದವನಿಗೆ ನಾಲ್ಕಾರು ದಿನಗಳಲ್ಲಿಯೇ ಈ ಸೆರೆಯೊಳಗಿನ ಸೆರೆ ಅನುಭವವಾಗುತ್ತದೆ. ಭಾರತ ದೇಶವೇ ದೊಡ್ಡ ಜೈಲು. ಅದರಲ್ಲಿ ಸೆರೆಮನೆಗಳು ಸಣ್ಣ ಜೈಲು, ಎಂದುಕೊಂಡರೆ ಸೆರೆಮನೆಯೊಳಗಿನ ಈ ಗಾಳಿ ಬೆಳಕು ತಿರುಗಾಡುವ ಸ್ಥಳಾಭಾವ ಮತ್ತೊಂದು ಜೈಲು.

ಸೆರೆಮನೆಗೆ ಸೇರಿದ 3-4 ದಿನಗಳೊಳಗಾಗಿ ಸೆರೆಯಾಳಿಗೆ ನಿಧಾನವಾಗಿ ಬೆನ್ನುನೋವು ತಲೆನೋವು ತಲೆಭಾರ ಪ್ರಾರಂಭವಾಗುತ್ತದೆ. ರಾತ್ರಿ ಹೊತ್ತು ಊಟ ಮಾಡಿದರೂ ತಲೆ ನೋಯುತ್ತಿರುತ್ತದೆ. ಊಟ ಮಾಡದಿದ್ದರೂ ತಲೆನೋಯುತ್ತದೆ. ಹೇಗೆಮಾಡಿದರೂ ನಿದ್ರೆ ಬರುವುದಿಲ್ಲ. ಇದಕ್ಕೆ ಮುಖ್ಯ ಕಾರಣ ವ್ಯಾಯಾಮವಿಲ್ಲದುದು. ಮತ್ತು ಸೆರೆಯಲ್ಲಿ ಗಾಳಿಯೇ ಇಲ್ಲದುದು. ಇರುವ ಸ್ವಲ್ಪ ಭಾಗ ಸ್ಥಳದಲ್ಲಿಯೂ, ತಿರುಗಾಡದಂತೆ ಒಂದು ವಿಕೆಟ್, ವಾರ್ಡರ್ ವಗೈರೆ ನಿಲ್ಲಿಸಿ ಸಾಧ್ಯವಾದಷ್ಟು ಸ್ಥಳವನ್ನು ಅಧಿಕಾರಿಗಳು ರಕ್ಷಣೆಮಾಡಿಕೊಳ್ಳುತ್ತಾರೆ. ಹಾಸ್ಯಪುರಿಯ ಸೆರೆಮನೆ

ಯಲ್ಲಿಯೂ ಮಹಿಷಪುರಿಯಲ್ಲಿಯೂ ಈ ಸಲ ಸ್ಥಳದ ಅಭಾವ ಅತ್ಯಂತ ಹೆಚ್ಚಾಯಿತು ಸುಮಾರು 10 ಅಡಿ ಅಗಲ 200 ಅಡಿ ಉದ್ದದ ಸ್ಥಳದಲ್ಲಿ 8-10 ತಿಂಗಳು ಕಾಲ ನೂರಾರು ಸೆರೆಯಾಳುಗಳು ಸಂಚಾರಮಾಡಬೇಕಾಗಿದ್ದಿತು. ಬೆಳಗಿನಿಂದ ರಾತ್ರಿಯವರೆಗೆ ಕಾಯ್ದರೂ ಸಂಚರಿಸಲು 1 ಅಡಿ ಸ್ಥಳ ಸಹ ಅನೇಕ ದಿನ ದೊರೆಯುತ್ತಿರಲಿಲ್ಲ. ಅಧಿಕಾರಿಗಳು ಸುಮಾರು 10 ತಿಂಗಳ ಕಾಲವೂ ಸಂಚರಿಸುವ ಸ್ಥಳವನ್ನು ವಿಸ್ತರಿಸುತ್ತೇವೆನ್ನುತ್ತಲೇ ಕಾಲ ಹಾಕಿದರು.

ಇಂತಹ ಪರಿಸ್ಥಿತಿಯಲ್ಲಿ ಸೆರೆಮನೆ ಸೇರಿದವರು ಆರೋಗ್ಯವಾಗಿ ಹೊರಗೆ ಬರುವುದು ಅಪರೂಪ. ಈ ಯಮನ ದವಡೆಯಲ್ಲಿ ಜನ ಸುಲಭವಾಗಿ ಜೀರ್ಣವಾಗಿ ಹೋಗುತ್ತಾರೆ. ಹಿಂದೆ ಪ್ರಾಂತ ಸರ್ಕಾರವನ್ನು ಕಾಂಗ್ರೆಸ್ ಮಂತ್ರಿಗಳು ನಡೆಸುತ್ತಿದ್ದ ಕಾಲದಲ್ಲಿ ಒಬ್ಬರು ಗಾಂಧಿಯವರಿಗೆ "ಈ ಮಂತ್ರಿಗಳು ಇಪ್ಪತ್ತು ನಾಲ್ಕು ಗಂಟೆಯೂ ಕೆಲಸ ಮಾಡುತ್ತಾರೆ. ಇವರೊಂದಿಗೆ ದುಡಿಯುವದು ನಮಗೆ ಸಾಧ್ಯವಿಲ್ಲ. ನಮ್ಮ ಆರೋಗ್ಯವೂ ಕೆಡುತ್ತದೆ. ಅವರ ಆರೋಗ್ಯವೂ ಕೆಡುತ್ತದೆ" ಎಂದು ಒರೆದರು. ಗಾಂಧಿಯವರು "ಹೌದು. ನಮ್ಮವರು ಆಂಗ್ಲೇಯರಂತೆ ಕ್ಲಿಪ್ತವಾದ ಕಾಲದಲ್ಲಿ ವ್ಯಾಯಾಮ, ಕ್ಲಿಪ್ತವಾದ ಕಾಲದಲ್ಲಿ ಕೆಲಸ ಮಾಡುವುದನ್ನು ಕಲಿಯುವುದು ಒಳ್ಳೆಯದು. ಆದರೆ ಮಂತ್ರಿಗಳ ಆತ್ಮಸಾಕ್ಷಿ ಅವರನ್ನು, ವಿಶ್ರಾಂತಿ ತೆಗೆದುಕೊಳ್ಳಲು ಬಿಡುವುದಿಲ್ಲ" ಎಂದರು. ಹೀಗೆ ಸ್ವತಂತ್ರವಾಗಿರುವಾಗಲೇ ವ್ಯಾಯಾಮ ಮಾಡದ ಜನ ಇನ್ನು ಸೆರೆಯಲ್ಲಿರುವಾಗ ವ್ಯಾಯಾಮ ಮಾಡುತ್ತಾರೆಯೇ ? ಆದರೆ ಜವಹರ್‌ಲಾಲರೇನೋ ಇತರ ಕಾರ್ಯಕಾರಿ ಸಮಿತಿಯ ಸದಸ್ಯರೊಂದಿಗೆ ಈ ಸಲ ಸ್ವಲ್ಪ ವ್ಯಾಯಾಮ ಮಾಡುತ್ತಿದ್ದಾರೆಂದು ತಿಳಿಯಿತು

ಹಾಸ್ಯಪುರಿಯ ಸೆರೆಮನೆಯಲ್ಲಿ ಅಧ್ಯಕ್ಷರು ಮೊದಲು ಕೊಕ್ ಆಟವನ್ನು ಏರ್ಪಡಿಸಿದರು. ಸೆರೆಯ ನಿರುತ್ಸಾಹೀ ಬಾಳಿನಲ್ಲಿ ಅದೇ ದೊಡ್ಡ ಉತ್ಸವವಾಯಿತು. ಎಲ್ಲರಿಗಿಂತ ಹೆಚ್ಚಾಗಿ ಅಯ್ಯನವರು ಈ ಆಟದಲ್ಲಿ ಮುಂದಾಳಾಗಿದ್ದರು. ಐಯ್ಯನವರು ಒಳ್ಳೆ ತೆಳ್ಳಗೆ ಇದ್ದಾರೆ. ಹುಡುಗರಂತೆ ಒಡುತ್ತಾರೆ. ವಯಸ್ಸು 45 ಕ್ಕೆ ಮೀರಿದರೂ ಕ್ಷೌರ ಮಾಡಿಸಿಕೊಂಡು ದಟ್ಟಿ ಪಂಜೆಯುಟ್ಟುಕೊಂಡು ಓಡಲು ಪ್ರಾರಂಭಿಸಿದರೆ ಹದಿ

ನಾರು ವರುಷದ ಹುಡುಗನಂತೆ ಕಾಣುತ್ತಾರೆ. ಕೊಕ್ ಆಟದಲ್ಲಿ ಇವ ರದು ಯಾವಾಗಲೂ ಉತ್ಸಾಹ. ಇವರನ್ನು ಬಿಟ್ಟರೆ ಎರಡನೆಯ ಉತ್ಸಾಹಿ ಗಳು ಪ್ರಾಣಾಚಾರ್ಯರು ಪ್ರಾಣಾಚಾರ್ಯರ ದೇಹ ಮಿತಿಮೀರಿ ಟಿಕ್ಕಾಪಾಲಾಗಿ ಬೆಳೆದಂತೆ ತೋರುತ್ತಿದ್ದರೂ ಆ ದೇಹ ಹಕ್ಕಿಯಂತೆ ಹಗುರ. ಪ್ರಾಣಾ ಚಾರ್ಯರು ರಬ್ಬರ್ ಚೆಂಡಿನಂತೆ. ಅವರ ಬರಿಯ ಇರುವಿಕೆಯೇ ನಗುವಿಗೆ ಆಕರ. ಅವರು ಏನೂ ಮಾಡಬೇಕಾದುದೇ ಇಲ್ಲ. ಸುಮ್ಮನೆ ನಿಂತಿ ದ್ದರೂ ಸಾಕು. ಅದೇ ನಗುವನ್ನುಂಟುಮಾಡುತ್ತದೆ. ಕೊಕ್ ಆಟದಲ್ಲಿ ಮೊದಲು ಮೂರು ಸುತ್ತು ಓಡಬೇಕಷ್ಟೆ. ಅಧ್ಯಕ್ಷರು ಪ್ರಾಣಾಚಾರ್ಯರಿಗೆ ರಿಯಾಯ್ತಿ ಕೊಟ್ಟು ಅವರು ಎರಡು ಸುತ್ತು ಮಾತ್ರ ಓಡಿದರೆ ಸಾಕೆಂದು ಗೊತ್ತುಮಾಡಿದರು ಆಡುವವರು ಹತ್ತು ಹನ್ನೆರಡು ಜನಗಳೇ ಆದರೂ ನೋಡುವವರು ನೂರಾರು ಜನರಾಗುತ್ತಿದ್ದರು. ವಿಚಾರಣಾ ಖೈದಿಗಳಿ ಗಂತೂ ಅದೊಂದು ಹಬ್ಬವೇ ಆಗಿದ್ದಿತು.

ಕೊಕ್ ಆಟ ಪ್ರಾರಂಭವಾದ ದಿನದಿಂದಲೇ ಒಳ್ಳೆಯ ತೀವ್ರಪ್ರೀತಿ ಯಲ್ಲಿ ಪ್ರಾರಂಭವಾಯಿತು. ನಮ್ಮ ಗೌಡರು ಪ್ರತಿಯೊಬ್ಬರಿಗೂ ನಿತ್ಯಾ ಕಾಲಿಗೋ ಕೈಗೋ ಸೊಂಟಕ್ಕೋ ಒಂದೊಂದು ಬಿಗಿಯುತ್ತಿದ್ದರು. ಅವರ ಕೈ ಕಾಲು ತಗಲಿದರೆ ಸಾಕು. ತಗಲಿಸಿಕೊಂಡವರಿಗೆ ಬರೆ ಬಿದ್ದಂತೆ ಆಗುತ್ತಿದ್ದಿತು ಅವರು ಸೊಂಟವನ್ನೋ ಮಂಡಿಯನ್ನೋ ಮುರಿದು ಕೊಂಡು ತೆಪ್ಪಗೆ ಒಳಕ್ಕೆ ಹೋಗುತ್ತಿದ್ದರು ಮರುದಿನ ಆಸ್ಪತ್ರೆಗೆ ಹೋಗಿ ಚಿಕಿತ್ಸೆಮಾಡಿಕೊಳ್ಳುತ್ತಿದ್ದರು. ಬರಬರುತ್ತಾ ಇದು ನಿತ್ಯಾ ಒಂದು ಮಾಮೂಲಾಯಿತು. ಗೌಡರಿಗೆ ಕನ್ನಡಕವಿಲ್ಲದೆ ಕಣ್ಣು ಕಾಣಿಸುವುದಿಲ್ಲ. ಸ್ವಲ್ಪ ಮಂಜು. ಕನ್ನಡಕ ಹಾಕಿಕೊಂಡರೆ ಕೊಕ್ಕಿನಲ್ಲಿ ಯಾರಾದರೂ ಮೇಲೆ ಬೀಳಬಹುದಾದುದರಿಂದ ಒಡೆಯುವ ಭಯ. ಆದುದರಿಂದ ಅವರು ಕನ್ನಡಕವಿಲ್ಲದೆ ಕೊಕ್ ಆಡುತ್ತಿದ್ದರು. ಬೆದರಿದ ಹೋರಿಯಂತೆ ಮುಖಮಾಡಿಕೊಂಡು ಅವರು ಓಡುತ್ತಿರುವಾಗ ಯಾರಿಗಾದರೂ ಒಬ್ಬರಿಗೆ ಒಂದು ಕೊಡುತ್ತಿದ್ದರು. ಹೀಗೆ ಏಟುತಿಂದು ಒಬ್ಬೊಬ್ಬರಾಗಿ ಆಟದಿಂದ 8-10 ದಿನ ನಿವೃತ್ತರಾಗುತ್ತಿದ್ದರು. ಬರಬರುತ್ತಾ ಇದು ಎಷ್ಟರಮಟ್ಟಿಗೆ 'ಮಾಮೂಲ್' ಆಯಿತೆಂದರೆ ಸೆರೆಯಾಳುಗಳು "ಇನ್ನು ಉಳಿದಿರುವವರು ಇವರು. ಇವತ್ತು ಇವರಿಗೆ ಬೀಳುತ್ತೆ ಎಂದು ನಿರೀಕ್ಷಿಸಿದರೆ ಅವತ್ತಿಗೆ

ಸರಿಯಾಗಿ ಅವರಿಗೆ ಏಟು ಬೀಳುತ್ತಿದ್ದಿತು! ಪಾಪ ರಾಮುಸೆಟ್ಟರಿಗೆ ಗೂಟ ಕೂತಿದ್ದರೂ ಕೂಡ ಗೌಡರ ಮುಂಡಿ ತಗಲಿ 20 ದಿನ ಆಸ್ಪತ್ರೆಯಲ್ಲಿರಬೇಕಾಯಿತು. ಪ್ರತಿಯೊಬ್ಬರೂ ಆಟದಲ್ಲಿ ಬೀಳುತ್ತಿದ್ದುದೂ ಪ್ರೇಕ್ಷಕರಿಗೆ ಒಂದು ವಿನೋದವಾಗಿದ್ದಿತು. ಪ್ರಾಣಾಚಾರ್ಯರು ಬಿದ್ದರೆ ಒಂದು ವಿಧವಾದ ಆಟದ ಬೊಂಬೆಯಂತೆ ತಣ್ಣನೆ ಹಾರಿ ನಿಲ್ಲುತ್ತಿದ್ದರು. ಅವರ ಮೈಗೆ ಏಟು ಬೀಳುತ್ತಲೇ ಇರಲಿಲ್ಲ. ರೆಡ್ಡಿಯವರು ಒಂದು ಸಲ ಬಿದ್ದಾಗ ಎಷ್ಟು ಚೆನ್ನಾಗಿ ಬಿದ್ದೆ ಕಲಾಮಯನಾಗಿ ಎಂದರು. ಅಂತೂ ಪ್ರತಿದಿನವೂ ಕೊಕ್ ಒಂದು ಗಂಟೆ ಜನರಿಗೆ ಸಂತೋಷದ ಕಾಲವಾಗಿದ್ದಿತು.

---

## ೪೪. ಜಲೀಲ್ ಸಾಹೇಬರ ಕೋರ್ಟು

---

ಈ ವೇಳೆಗೆ ಸ್ಪೆಷಲ್ ಕೋರ್ಟು ಕಾನೂನು ಜಾರಿಗೆ ಬಂದಿತು ಇದು ಇಲ್ಲಿ ಜಾರಿಗೆ ಬಂದುದು "ಮುಕ್ಕಿಕಾ ಮುಕ್ಕಿ ಹೇಳಿ ಬರೆಯಿಸಿ" ನ್ಯಾಯದಂತೆ. ಹೊಸೂರು ಮೊಖದ್ದಮೆ ಸಂಬಂಧದಲ್ಲಿ ಈ ಸ್ಪೆಷಲ್ ಕೋರ್ಟು ಕಾನೂನು ಸರಿಯೇ ಎಂದು ಹೈ ಕೋರ್ಟಿನವರೆಗೆ ಪ್ರಶ್ನೆ ಹೋಯಿತು. ಆದರೆ ಭಾರತದಲ್ಲಿ ಆದಷ್ಟು ಚರ್ಚೆ ಇಲ್ಲಿ ಆಗಲೇ ಇಲ್ಲ ಸುಲಭವಾಗಿ 'ಸರಿ' ಎಂದಾಯಿತು.

ಈ ಸ್ಪೆಷಲ್ ಕೋರ್ಟು ಭಾರತಕ್ಕೇ ಬೇಕಿರಲಿಲ್ಲವೆಂದೂ ಭಾರತದಲ್ಲಿ ಅಂತಹ ಪರಿಸ್ಥಿತಿಯೇ ಇರಲಿಲ್ಲವೆಂದೂ ಮುಖಂಡರು ವಾದಿಸುತ್ತಿರುವಾಗ, ನ್ಯಾಯವಾದಿಗಳು ಚರ್ಚಿಸುತ್ತಿರುವಾಗ ಸಾಧು ಪ್ರಾಣಿಗಳ ಈ ದೇಶದಲ್ಲಿ ಕುದುರೆಗಿಂತ ಲದ್ದಿ ಬಲವೆಂಬಂತೆ ಸ್ಪೆಷಲ್ ಕೋರ್ಟು ಆರ್ಡಿನೆನ್ಸ್ ಕಾನೂನೇ ಆಗಿ ಹೋಯಿತು. ಈ ಸ್ಪೆಷಲ್ ಕೋರ್ಟುಗಳಲ್ಲಿ ನಡೆಯುವ ಅವಿವೇಕಗಳನ್ನು ಕುರಿತು ಭಾರತದ ನ್ಯಾಯಾಧೀಶರು ಏನು ಹೇಳಿದ್ದಾರೆ. ಎಂಬುದು ನಮ್ಮ ಗಮನಕ್ಕೆ ಬರುವುದು ಅರ್ಹವಾದುದು. ಭಾರತದ ಸ್ಪೆಷಲ್ ಕೋರ್ಟುಗಳನ್ನು ಕುರಿತು ಅವರು ಹೇಳಿರುವ ಮಾತುಗಳು, ಇಲ್ಲಿಯ ಸ್ಪೆಷಲ್ ಕೋರ್ಟುಗಳಿಗೂ ಅನ್ವಯಿಸಿದುವು.

ನಮ್ಮ ಜಿಲ್ಲೆಯಲ್ಲಿ ಜಲೀಲ್ ಸಾಹೇಬರು ಸ್ಪೆಷಲ್ ಮ್ಯಾಜಿಸ್ಟ್ರೇಟ ರಾದರು. ಇವರು ವಿಚಾರಣೆ ಮಾಡುತ್ತಿದ್ದುದು ಪೋಲೀಸಿನವರು ಇವರ ಮುಂದೆ ಹಾಜರ್ಮಾಡಿದ ಮೊಖದ್ದಮೆಗಳು. ಮಾಜಿಸ್ಟ್ರೇಟಿಗಾಗಿಯೇ ಮೊಖದ್ದಮೆಗಳಾದುವೋ ಮೊಖದ್ದಮೆಗಳಿಗಾಗಿಯೇ ಮ್ಯಾಜಿಸ್ಟ್ರೇಟ ರಾದರೋ ನಮಗೆ ಸರಿಯಾಗಿ ಗೊತ್ತಾಗಿರಲಿಲ್ಲ. ಈ ಸ್ಪೆಷಲ್ ಮ್ಯಾಜಿಸ್ಟ್ರೇಟರ ಕೋರ್ಟು ಜಿಲ್ಲಾ ಸೆರೆಮನೆಯ ಆವರಣದಲ್ಲಿಯೇ ನಡೆಯುತ್ತಿದ್ದಿತು. ನಮ್ಮ ದೃಷ್ಟಿಗೆ ಬಿದ್ದ ಒಂದೆರಡು ಮೊಖದ್ದಮೆಗಳನ್ನು ಇಲ್ಲಿ ವಿವರಿಸುವುದು ಅರ್ಹವಾಗಿದೆ.

ನಮ್ಮ ಸೆರೆಮನೆಯಲ್ಲಿ ಜಲೀಲ್ ಸಾಹೇಬರು ವಿಚಾರಣೆ ನಡೆಸಿದ ಮೊದಲನೆಯ ಮೊಖದ್ದಮೆ ಟಪಾಲು ಪೆಟ್ಟಿಗೆಗೆ ಬೆಂಕಿಬಿದ್ದ ಮೊಖದ್ದಮೆ. ಅಪರಾಧಿ ಸರ್ಕಾರದ ಹೊಗಳುಭಟ್ಟನಲ್ಲದ ಒಂದು ಪತ್ರಿಕೆಯ ಸುದ್ದಿಗಾರ. ಸಾಕ್ಷಿಗಳು ಪೋಲೀಸಿನವರು. ಅಪರಾಧಿಯನ್ನು, ಪೋಲೀಸಿನವನು ಪೆಟ್ಟಿಗೆಗೆ ಬೆಂಕಿ ಹಾಕುತ್ತಿರುವಾಗ ನೋಡಿದನಂತೆ. ಆದರೆ ಅವನು ಅವನನ್ನು ಆಗ ತಡೆಯಲಿಲ್ಲವಂತೆ. ಕೆಲವು ಗಂಟೆಗಳನಂತರ ಅಪರಾಧಿ ಮನೆಗೆ ಹೋಗಿ ಸತ್ಯನಾರಾಯಣ ವ್ರತವನ್ನು ಮಾಡುತ್ತಾ ಕುಳಿತಿರುವಾಗ ಹಿಡಿದನು. ಅಪರಾಧಿಪರ ವಕೀಲರು "ಹೀಗೆ ಯಾಕೆ ಮಾಡಿದೆ. ಬೆಂಕಿ ಹಾಕಿದುದನ್ನು ಕಂಡಾಗ ಯಾಕೆ ತಡೆಯಲಿಲ್ಲ." ಎಂದು ಕೇಳಿದುದಕ್ಕೆ ಪೋಲೀಸಿನವನು ಸರಿಯಾದ ಪ್ರತ್ಯುತ್ತರ ಕೊಡಲಿಲ್ಲ. ತನ್ನ ಸಾತ್ವಿಕತೆಯನ್ನು ಸ್ಥಾಪಿಸಲು ಅಪರಾಧಿ, ಸ್ಪೆಷಲ್ ಮ್ಯಾಜಿಸ್ಟ್ರೇಟರಿಗಿಂತಲೂ ಹೆಚ್ಚು ಗಣ್ಯರಾದ ಅನೇಕ ಸಾಕ್ಷಿಗಳನ್ನು ಕರೆತಂದನು. ಜಲೀಲ್ ಸಾಹೇಬರಿಗೆ ಕನ್ನಡ ಬರದು. ಸ್ಪೆಷಲ್ ಅಧಿಕಾರಗಳು ಬೇರೆ. ಅವರು ಸಾಕ್ಷ್ಯಗಳೊಂದನ್ನೂ ಬರೆದುಕೊಳ್ಳಲೇ ಇಲ್ಲ. ಕಾನೂನು ಬುಕ್ಕು ನೋಡಲೇ ಇಲ್ಲ. ಇವುಗಳಿಗೆಲ್ಲಾ ಪ್ರತಿಯಾಗಿ ಕಾನಸ್ಟೆಬಲ್ ಹೇಳುವ ಮಾತನ್ನೇ ನಂಬುತ್ತೇನೆ ಎಂದು ಹೇಳಿ ತಮ್ಮ ಪೂರ್ಣ ಅಧಿಕಾರವನ್ನು ಪ್ರಯೋಗಿಸಿ 2 ವರುಷ ಕಠಿಣ ಶಿಕ್ಷೆ ಬರೆದರು. ಈ ಅಲ್ಪವಾದ ತಪ್ಪಿಗೆ, ಸಾಕ್ಷಿಗಳೇ ಇಲ್ಲದಿರುವ ತಪ್ಪಿಗೆ ಎರಡು ವರುಷ ಕಠಿಣ ಶಿಕ್ಷೆ ಬರೆದುದನ್ನು ನೋಡಿ ನಮಗೆ ಆಶ್ಚರ್ಯವಾಯಿತು. ನ್ಯಾಯಸ್ಥಾನಕ್ಕೆ ಬರುವುದಕ್ಕೆ ಮುಂಚೆ ಸ್ಪೆಷಲ್ ಮ್ಯಾಜಿಸ್ಟ್ರೇಟರು ಜಿಲ್ಲಾಧಿಕಾರಿಗಳ ಮನೆಗೆಹೋಗಿದ್ದರು.

ನಾವು ಮೊದಲೇ ಹೇಳಿದ್ದಂತೆ ಆ ಕಾಲದಲ್ಲಿ ಜಿಲ್ಲಾಧಿಕಾರಿಗಳು ಮಿಲಿಟರಿ ಸರ್ವಾಧಿಕಾರಿಗಳಾಗಿದ್ದರು. ನಮ್ಮ ಜಿಲ್ಲೆಯಲ್ಲಿ ಕೆಲವರಿಗೆ ತಮ್ಮ ಊರುಗಳನ್ನು ಬಿಟ್ಟು ಹೋಗಬೇಕೆಂದು ಹುಕುಂ ಕೊಟ್ಟರು. ಪ್ರಜೆಗಳ ನ್ಯಾಯವಾದ ನಾಗರಿಕ ಹಕ್ಕುಬಾಧ್ಯತೆಗಳಿಗೆ ಕುಂದಕ ಬರುವಂತಹ ಅಪ್ಪಣೆಗಳನ್ನು ಜಾರಿಮಾಡಲೂ ಅವರು ಹಿಂಜರಿಯಲಿಲ್ಲ. ಹೀಗೆ ಆಜನ್ಮಸಿದ್ಧವಾದ ಹಕ್ಕುಗಳಿಗೆ ವಿರೋಧ ಬರಲು ಅವುಗಳಿಗೆ ಗುರಿಯಾದವರು ತಮ್ಮ ನಾಗರಿಕ ಹಕ್ಕು ಸ್ಥಾಪನೆಗಾಗಿ ಕಷ್ಟವನ್ನು ಅನುಭವಿಸಬೇಕಾಯಿತು. ಪ್ರಜೆಯಾದವನು ತನ್ನ ಜಿಲ್ಲೆ ಬಿಟ್ಟು, ತನ್ನ ಮನೆ ಮಠ ಬಿಟ್ಟು, ಅಧಿಕಾರಿಗೆ ಸಿಟ್ಟು ಬಂದುದರ ಮಾತ್ರಕ್ಕೆ ತಾನು ಎಲ್ಲಿಗೆ ಹೋಗಲು ಸಾಧ್ಯ? ಅದನ್ನು ಮೀರಿದರೆಂದು ಶಿಕ್ಷಿಸುವುದಕ್ಕೆ ಸ್ಪೆಷಲ್ ಕೋರ್ಟು ಜಲೀಲ್ ಸಾಹೇಬರು! ಒಂದು ವರುಷ ಕಠಿಣ ಶಿಕ್ಷೆ 500 ರೂ. ಜುಲ್ಮಾನೆ; ಅಪ್ಪಣೆ ಮಾಡುವವರು ಜಿಲ್ಲಾಧಿಕಾರಿ; ಶಿಕ್ಷೆ ವಿಧಿಸುವವರು ಅವರ ಅಪ್ಪಣೆಯಂತೆ ಸ್ಪೆಷಲ್ ಮ್ಯಾಜಿಸ್ಟ್ರೇಟ್ ಜಲೀಲ್; ಸೆರೆಮನೆಯಲ್ಲಿ ಅವರನ್ನು ಕಾಯುವವರು ಮತ್ತೆ ಅದೇ ಜಿಲ್ಲಾಧಿಕಾರಿ. ಅವರ ಅವಧಿ ಮುಗಿಯುವುದಕ್ಕೆ ಮುಂಚೆ ಅವರನ್ನು ಬಿಡುಗಡೆ ಮಾಡಬಹುದೇ ಎಂಬುದನ್ನು ಮತ್ತೆ ಪರಿಗಣಿಸುವವರು ಜಿಲ್ಲಾಧಿಕಾರಿ. ಈ ಗೊಂದಲದಲ್ಲಿ ತಪ್ಪನ್ನು ಆರೋಪಿಸುವವನೂ ಶಿಕ್ಷಿಸುವವನೂ ಒಂದೇ ಆಗಿರುವಾಗ ನ್ಯಾಯ ದೊರೆಯುವುದುಂಟೆ?

ಜಲೀಲ್ ಸಾಹೇಬರು ವಿಚಾರಿಸಿದ ಮತ್ತೊಂದು ಮೊಖದ್ದಮೆಯನ್ನು ಕುರಿತು ಇಲ್ಲಿ ಒಂದೆರಡು ಮಾತುಗಳನ್ನು ಹೇಳಬೇಕಾಗಿದೆ. ಸ್ಪೆಷಲ್ ಮ್ಯಾಜಿಸ್ಟ್ರೇಟ್ ಎನ್ನಿಸಿಕೊಂಡವರು ಆಕಾಲದಲ್ಲಿ ನ್ಯಾಯದೇವತೆಗೆ ಹೇಗೆ ದ್ರೋಹ ಮಾಡಿದರೆಂಬುದಕ್ಕೆ ಇದೊಂದು ಉದಾಹರಣೆ. ಆ ಕಾಲದಲ್ಲಿ ಪೋಲೀಸಿನವರು ಯಾರ ಮೇಲೆ ಬೇಕಾದರೂ ತಂತಿ ಕತ್ತರಿಸಿದ ಎಂದು ಹೇಳುತ್ತಿದ್ದರು. ಅದೇ ರೀತಿ ನಮ್ಮ ಜಿಲ್ಲೆಯ ಒಬ್ಬ ಮುರಿದ ಕೈಯಿನವನ ಮೇಲೆ ತಂತಿ ಕತ್ತರಿಸಿದನೆಂದು ಪೋಲೀಸಿನವರು ಜಲೀಲ್ ಸಾಹೇಬರ ಮುಂದೆ ಮೊಖದ್ದಮೆ ಹೂಡಿದರು. ಸ್ಪೆಷಲ್ ಮ್ಯಾಜಿಸ್ಟ್ರೇಟ್ ಹುದ್ದೆಯಿಲ್ಲದ ಯಾವ ಮನುಷ್ಯನಿಗಾದರೂ ಅಪರಾಧಿಗೆ ಕೈ ಮುರಿದಿರುವುದರಿಂದ ಅವನಿಂದ ತಂತಿ ಕತ್ತರಿಸುವುದು ಸಾಧ್ಯವಿಲ್ಲವೆಂದು ಗೊತ್ತಾಗುತ್ತಿದ್ದಿತು. ಆ ಮೊಖದ್ದಮೆಯ ವಿಚಾರಣೆಯೂ ಸೆರೆಮನೆಯಲ್ಲಿಯೇ

ನಡೆಯಿತು. ಖಂಡಿತ ಅಪರಾಧಿಯು ಬಿಡುಗಡೆಯಾಗುವುದೆಂದೂ ಜಲೀಲ್ ಸಾಹೇಬರೂ ಸಹ ಬಿಡುಗಡೆ ಮಾಡಲೇಬೇಕಾದ ಒಬ್ಬ ಅಪರಾಧಿ ದೊರೆತನೆಂದು ಜನ ನಂಬಿದರು. ಡಿಸ್ಟ್ರಿಕ್ಟ್ ಮೆಡಿಕಲ್ ಆಫೀಸರವರು ಬಂದು ಈ ಮುರಿದ ಕೈಯಿನವನಿಂದ ಖಾಡಿ ಕಂಬವನ್ನು ಹತ್ತಿ ತಂತಿ ಕತ್ತರಿಸುವುದು ಸಾಧ್ಯವಿಲ್ಲನೆಂದು ಪ್ರಮಾಣಪೂರ್ವಕ ಸಾಕ್ಷಿ ನುಡಿದರು. ಆದರೆ ಜಲೀಲ್ ಸಾಹೇಬರು ಆ ಕೈದಿಯನ್ನುಳಕ ಬಡಪ್ರಾಣಿಯನ್ನೂ ಬಿಡಲಿಲ್ಲ. ನ್ಯಾಯ ದೇನತೆ ಧೂ ಛೀ ಎಂದುಕೊಂಡು ಕಣ್ಣಿರಿಯಾಯಿತು.

ಸುದರ್ಶನ ಹಾಸ್ಯಪುಂಯ ಸೆರೆಮನೆಯಲ್ಲಿರುವಾಗ ಹೊಸೂರಿನ ದುರಂತ ನಡೆಯಿತು. ಮಹಾತ್ಮಾ ಗಾಂಧಿಯವರು ಹೇ. ಜ. ಸರ್ಕಾರದ ಅತ್ಯಾಚಾರದಿಂದಲೇ ಜನರು ಉದ್ರೇಕಗೊಂಡರು ಎಂಬ ಮಾತು ಇಲ್ಲಿಯೂ ನಿಜವೇ ಆಯಿತು. ಕೆಲವು ಹುಡುಗರು ರಾಷ್ಟ್ರಧ್ವಜ ಹಿಡಿದುಕೊಂಡು ಪ್ರಭಾತ ಭೇರಿ ಮಾಡುತ್ತ ಊರ ಮೆರವಣಿಗೆ ಮಾಡಿದರು. ಹುಡುಗರು ಆಟವಾಡುವಂತೆ "ನಮ್ಮದೇ ಸರ್ಕಾರ ಇವನು ಶ್ಯಾನುಭೋಗ ಇವನು ಶೇಕದಾರ ಇವನು ಪಟೇಲ ಹಳೆ ಶ್ಯಾನುಭೋಗ ಪಟೇಲರು ವಜಾ" ಎಂದರು. ದೇವಸ್ಥಾನದ ಗೋಡೆಯ ಮೇಲೆ ನಮ್ಮ ಸರ್ಕಾರ ಎಂದು ಬರೆದರು. ಊರ ಮುಂದೆ ಎರಡು ಮುರಕಲು ಗಳುವನ್ನು ನೆಟ್ಟು "ನಮ್ಮ ಸರ್ಕಾರ. ಬೇರೆ ಸರ್ಕಾರದವರು ಒಳಕ್ಕೆ ಬರಕೂಡದು" ಎಂದರು. ಸಾಧಾರಣ ಕಾಲದಲ್ಲಿಯಾದರೆ ಸರ್ಕಾರದ ಅಧಿಕಾರಿಗಳು ಇದನ್ನೆಲ್ಲಾ ವಿನೋದವಾಗಿ ನೋಡುತ್ತಿದ್ದರು. ಆದರೆ 42ನೇ ಆಗಸ್ಟ್ ಸೆಪ್ಟಂಬರ್ ಅಕ್ಟೋಬರ್ ತಿಂಗಳುಗಳಲ್ಲಿ ಪ್ರತಿಯೊಬ್ಬ ಸರ್ಕಾರಿ ಅಧಿಕಾರಿಯೂ ತಾನೇ ಒಬ್ಬೊಬ್ಬ ವೇವಲ್ ಎಂದುಕೊಂಡನು. ಆಗ ವೇವಲ್ಲರು ಕಮ್ಯಾಂಡರ್ ಇನ್ ಛೀಫ್ ಆಗಿದ್ದರು. ಬರ್ಮಾ ಸದ್ಯಕ್ಕೆ ಕೈಬಿಟ್ಟು ಹೋಗಿದ್ದಿತು—ಇದು ಹುಡುಗಾಟವೆಂದು ನಕ್ಕು ಸುಮ್ಮನಾಗುವುದರ ಬದಲು ಅವರು ಭಾರತ ರಕ್ಷಣೆಯನ್ನೇ ಪ್ರಾರಂಭಿಸಿದರು. ಅಮಲ್ದಾರರೂ ಸಬ್ ಇನಿಸ್ಪೆಕ್ಟರೂ ಶೇಕದಾರರೂ ಪೋಲೀಸ್ ಕಾನಸ್ಟೇಬಲ್ ರಿವಾಲ್ವರುಗಳನ್ನು ತೆಗೆದುಕೊಂಡರು. ವಿಚಾರಣೆಯಲ್ಲಿ ಒಬ್ಬರು ರಿವಾಲ್ವರನ್ನು ತೆಗೆದುಕೊಂಡುದು ಮತ್ತೊಬ್ಬರಿಗೆ ಗೊತ್ತಿಲ್ಲವೆಂದು ಹೊರಹೊರಟಿತು. ಅವರು ರಿವಾಲ್ವರನ್ನು ಯಾಕೆ ತೆಗೆದು

ಕೊಂಡು ಹೋದರೋ ಗೊತ್ತಿಲ್ಲ. ಮುಂದೆ ಸ್ಪೆಷಲ್ ಕೋರ್ಟಿನಲ್ಲಿ ವಿಚಾರಣೆಯಾದಾಗಲೂ ಅವರು ಸಮರ್ಪಕವಾದ ಉತ್ತರವನ್ನು ಕೊಡಲಿಲ್ಲ.

ಅಮಲ್ದಾರರೂ ಪೋಲೀಸ್ ಇನಿಸ್ಪೆಕ್ಟರೂ ಹಳ್ಳಿಗೆ ಹೋದಾಗ ಹಳ್ಳಿಯಲ್ಲಿ ಯಾರೂ ಗಂಡಸರು ಇರಲಿಲ್ಲ. ಅವರೆಲ್ಲಾ ತಮ್ಮ ವ್ಯವಸಾಯದ ಕಸಬಿಗಾಗಿ ಹೊಲ ಗದ್ದೆಗಳಿಗೆ ಹೋಗಿದ್ದರು 8-9-10 ವರುಷದ ಮಕ್ಕಳು "ಸರ್ಕಾರದ" ಆಟವನ್ನಾಡುತ್ತಿದ್ದರು. ಅಧಿಕಾರಿಗಳನ್ನು ಅವರು ಕಂಡಕೂಡಲೆ ಎಲ್ಲರಿಗೂ ಹೇಳುತ್ತಿದ್ದಂತೆ "ಎಲ್ಲಿ ಗಾಂಧಿ ಟೋಪಿ ಹಾಕಿಕೊಳ್ಳಿ" ಎಂದರು. ಅಮಲ್ದಾರರು ನಗುತ್ತಾ ಗಾಂಧಿ ಟೋಪಿ ಹಾಕಿಕೊಳ್ಳುವುದರಲ್ಲಿದ್ದರು. ಗಾಂಧಿ ಎಂಬ ಹೆಸರನ್ನು ಗೌರವಿಸದಷ್ಟು ಅವರ ತಲೆ ಕೆಟ್ಟಿರಲಿಲ್ಲ. ಆದರೆ ಸಬ್ ಇನಿಸ್ಪೆಕ್ಟರು ರಿವಾಲ್ವರು ತೆಗೆದು ಹುಡುಗರ ಮೇಲೆ ಹಾರಿಸಿಯೇಬಿಟ್ಟರು. ಅವರು ರಿವಾಲ್ವರು ತಂದಿದ್ದುದನ್ನು ಕಂಡಿದ್ದರೆ ಹುಡುಗರು ಅವರ ಹತ್ತಿರಕ್ಕೇ ಬರುತ್ತಿರಲಿಲ್ಲ.

ಸರಿ. ಗುಂಪಿನಲ್ಲಿ ಭಯವುಂಟಾಯಿತು. ಶೇಕದಾರರ ರಿವಾಲ್ವರು ಹೊರಗೆ ಬಂತು. ಕಾನಸ್ಟೇಬಲ್ಲಿನ ರಿವಾಲ್ವರು ಹೊರಕ್ಕೆ ಬಂತು. ಸಬ್ ಇನಿಸ್ಪೆಕ್ಟರರ ಹತ್ತಿರ 30-40 ತೋಟ ಇದ್ದಿತು. ಅವರುಗಳ ಮುಖದಲ್ಲಿ ಸ್ವಲ್ಪವಾಗಲಿ ಕರುಣೆ ತೋರಲಿಲ್ಲ. ಒಂದಾದ ಮೇಲೊಂದು ಗುಂಡುಗಳು ಹಾರತೊಡಗಿದವು. ಬೆಂಕಿಯಾಡಿತು, ರಕ್ತ ಹರಿಯಿತು. ಮದ್ದು ಸುರಿಯಿತು. ಜನರು ಉದ್ರೇಕಗೊಂಡರು. ಕಲ್ಲು ದೊಣ್ಣೆ ಹಾರಾಡಿಗವು. ಇಬ್ಬರು ಅಧಿಕಾರಿಗಳು ಸತ್ತರು. ಜನರು, ಸತ್ತವರೆಷ್ಟೋ ಘಾಯಗೊಂಡವರೆಷ್ಟೋ. ಸತ್ತವರಿಗಾಗಿ ದೇಶವೆಲ್ಲಾ ಮರುಗಿತು.

ಅನಂತರ ಸೇಡು ತೀರಿಸಿಕೊಳ್ಳುವುದು ಪ್ರಾರಂಭವಾಯಿತು. ಪಿಶಾಚಿ ನರ್ತನ ನರಮೇಧ ನರಕ ಲೀಲೆ ಅಮಾನುಷ ದೌರ್ಜನ್ಯ ದರ್ಪ ಸಾಮ್ರಾಜ್ಯ, ಕತೆಗಳಲ್ಲಿ ಶಾಕಿಣಿ ಢಾಕಿಣಿಯರು ನರ ರಕ್ತಪಾನ ಮಾಡಿಯೂ ಮಾಡಿಯೂ ತೃಪ್ತರಾಗಲಿಲ್ಲವೆಂದು ಕೇಳಿದ್ದೇವೆ. ಹೊಸೂರಿನಲ್ಲಿಯೂ ಹಾಗೆಯೇ ಪ್ರಾರಂಭವಾಯಿತು. ಸರ್ಕಾರ ತನ್ನ ಜವಾಬ್ದಾರಿಯನ್ನು ಮಿಲಿಟರಿಗೆ ವಹಿಸಿತು. ಅವರು ಶತ್ರುಗಳನ್ನು ಮಟ್ಟಹಾಕುವಂತೆ ಆ ಹಳ್ಳಿಯ ಬಡಪಾಯಿಗಳನ್ನು ಚಿತ್ರಹಿಂಸೆಗೊಳಿಸಿದರು. ಕೋಳಿ ಕುರಿ ಆಡು ಹಂದಿ ದನಗಳನ್ನು ಸುಲಿದು ತಿಂದರು. ಪ್ರತಿ ಮನೆಗೂ ನುಗ್ಗಿ

ಇದ್ದುದನ್ನೆಲ್ಲಾ ಲೂಟಿ ಮಾಡಿದರು. ಬೇಕಾದವರಿಗೆ ಬೇಕಾದುದನ್ನು ಸೂರೆಮಾಡಿದರು. ಮನೆಯಲ್ಲಿದ್ದ ಪೆಟ್ಟಿಗೆಗಳನ್ನು ಒಡೆದು ಇದ್ದ ಹಣ ಕಾಸು ನಗ ಒಡವೆಗಳನ್ನೆಲ್ಲಾ ಹಂಚಿಕೊಂಡರು. ಸ್ತ್ರೀಯರ ಮಾನಭಂಗ ಸಹ ಮಾಡಲ್ಪಟ್ಟಿತೆಂದು ಹೇಳೋಣವಾಯಿತು. ಊರು ಪೂರ್ಣವಾಗಿ ನಿರ್ನಾಮವಾಯಿತು.

ಅನಂತರ ಪೋಲೀಸರ ಪಿಕಟ ನರ್ತನ ಪ್ರಾರಂಭವಾಯಿತು. ಒಂದು ಸ್ಪೆಷಲ್ ಕೋರ್ಟನ್ನು ಸ್ಥಾಪಿಸಿದರು. ಮನಸ್ಸು ಬಂದವರನ್ನು ದಸ್ತಗಿರಿ ಮಾಡಿದರು. ಪೋಲೀಸಿನವರು ಅಪರಾಧಿಗಳನ್ನೂ ಸಾಕ್ಷಿಗಳನ್ನೂ ಎಲ್ಲರನ್ನೂ ಒಟ್ಟಿಗೇ ಬಂಧಿಸಿದ್ದರು. ಸ್ಪೆಷಲ್ ಕೋರ್ಟು ಆದುದರಿಂದ ಅಪರಾಧಿಗಳಿಗೆ ಸಾಕ್ಷಿ ಮುಂತಾದುವನ್ನು ಒದಗಿಸಿಕೊಳ್ಳುವ ಸೌಕರ್ಯ ಗಳು ಕೊಡಲ್ಪಡಲಿಲ್ಲ. ತಮ್ಮ ಪರವಾಗಿ ಸಾಕ್ಷಿ ಹೇಳಬೇಕಾದವರಿಗೆ ಪೋಲೀಸಿನವರು ಚೆನ್ನಾಗಿ ತರಪೇತು ಮಾಡುತ್ತಿದ್ದರು. ಸಾಕ್ಷಿ ಹೇಳಲು ಹಿಂದೆಗೆಯುವವರಿಗೆ, ಅಪರಾಧಿ ಸ್ಥಾನದಲ್ಲಿ ಸೇರಿಸುತ್ತೇವೆಂದು ಹೆದರಿ ಸುತ್ತಿದ್ದರು. ಗುಂಡು ಹಾಕಿ ಸುಡುತ್ತೇವೆನ್ನುತ್ತಿದ್ದರು. ಆ ಕಾಲದಲ್ಲಿ ಆ ರಾಕ್ಷಸರು ಏನು ಮಾಡುವುದಕ್ಕೂ ಹೇಸುತ್ತಿರಲಿಲ್ಲ. ರಾವಣನ ದರ್ಬಾರಿನ ದೇವತೆಗಳಂತೆ ಜನ ಪೋಲೀಸು ಎಂದರೆ ಗಡಗಡನೆ ನಡಗುತ್ತಿ ದ್ದರು. ಪೋಲೀಸಿನವರ ಹೊರತು ಮತ್ತೆಲ್ಲಿಯೂ ಯಾವ ಸರ್ಕಾರವೂ ಇದ್ದಂತೆಯೇ ಕಾಣಲಿಲ್ಲ. ಪೋಲೀಸಿನವರು ಆ ಕಾಲದಲ್ಲಿ ಸಾಕ್ಷಿ ಗಳನ್ನೂ ಅಪರಾಧಿಗಳನ್ನೂ ಮನಸ್ಸಿಗೆ ತೃಪ್ತಿಯಾಗುವವರೆಗೆ ಬಡಿಯುತ್ತಿ ದ್ದರು. ಯಾವನಾದರೂ ಸಾಕ್ಷಿ, ಸತ್ಯದ ಮೇಲೆ ದೃಷ್ಟಿಯಿಟ್ಟು ಇದ್ದ ದ್ದನ್ನು ಇದ್ದಂತೆ ಹೇಳಿದರೆ ಅವನಿಗೆ ಬಂತು! ಲಾಕಪ್ಪಿಗೆ ಬಂದಕೂಡಲೆ ಪೋಲೀಸಿನವರು ಅವನನ್ನು ಚೆನ್ನಾಗಿ ಬೂಟ್ಸು ಕಾಲಿನಲ್ಲಿ ಒದ್ದು "ಕೋರ್ಟು ಅನ್ನೋದನ್ನ ಮರೆತು ಇದ್ದದ್ದು ಇದ್ದಂತೆ ಹೇಳೋಕೆ ಹೋಗ್ತೀಯ" ಎಂಬುದಾಗಿ ಬಡಿಯುತ್ತಿದ್ದರು. ವಿಚಾರಣೆ ನಡೆದಷ್ಟು ದಿನವೂ ಪೋಲೀಸಿನವರು ಅಪರಾಧಿಗಳನ್ನೂ ಸಾಕ್ಷಿಗಳನ್ನೂ ಲಾಕಪ್ಪಿ ನಲ್ಲಿಯೇ ಇಟ್ಟಿದ್ದರು ಅಪರಾಧಿಗಳಿಗೆ ಒಂದು ದಿನವೂ ದಿನಕ್ಕೆ 3-4 ಸಾರಿ ಲಾಠಿ ಏಟು ತಪ್ಪುತ್ತಿರಲಿಲ್ಲ. ಮಧ್ಯಾಹ್ನದ ಊಟ ಮಾಡುವಾಗ, ಸಾಯಂಕಾಲದ ಊಟ ಮಾಡುವಾಗ ಪೋಲೀಸಿನವರು ತಪ್ಪದೆ ಪ್ರತಿ ಯೊಬ್ಬ ಅಪರಾಧಿಗೂ ದೊಣ್ಣೆಯಲ್ಲಿ ಬಿಡುತ್ತಿದ್ದರು.

ನಿರಪರಾಧಿಗಳಾದ ಕೆಲವು ಅಪರಾಧಿಗಳಿಗೆ ಲಾಯರುಗಳ ಸಹಾಯ ಏರ್ಪಡಿಸಬೇಕೆಂದು ಒಬ್ಬಿಬ್ಬರು ಪುಣ್ಯಾತ್ಮರು ಹೊರಟುದು ಪೋಲೀಸಿನವರಿಗೆ ತಿಳಿದಕೂಡಲೇ ಅವರ ಮೇಲೆ ಭಾರತ ರಕ್ಷಣಾ ಕಾನೂನನ್ನು ಪ್ರಯೋಗಿಸಿ ಅವರನ್ನು ಡಿಟೆನ್ಯುಗಳಾಗಿ ತಂದಿಟ್ಟರು. ಸ್ಪೆಷಲ್ ಕೋರ್ಟು ಆದುದರಿಂದ ಜಡ್ಜಿ ತಮಗೆ ಬೇಕಾದ ಸಾಕ್ಷ್ಯಗಳನ್ನು ಬರೆದುಕೊಂಡರು, ಬೇಡವಾದುದನ್ನು ಒತ್ತಿಹಾಕಿದರು. ೧೧ ಜನಕ್ಕೆ ಮರಣದಂಡನೆ ಕೊಟ್ಟರು. 13 ಜನಕ್ಕೆ ಆಜನ್ಮ ಕಾರಾಗೃಹ ಕೊಟ್ಟರು. ಈ ಮಾರಿಯ ಹಸಿವನ್ನು ನೋಡಿ ದೇಶ ಬೆಚ್ಚಿತು.

ನ್ಯಾಯಾಧಿಪತಿಗಳು, ಜನರ ಉದ್ರೇಕದ ಸ್ಥಿತಿ, ದೊಂಬಿ ಕೂಟದಲ್ಲಿ ಯಾರಿಗೂ ಕೊಲೆಮಾಡುವ ಉದ್ದೇಶ ಇರದುದು, ಇದಾವುದನ್ನೂ ಗಮನಿಸಲೇ ಇಲ್ಲ. ಸ್ಪೆಷಲ್ ಕೋರ್ಟು ಕಾನೂನು ರೀತ್ಯಾ ಬೇಕಾದ ಸಾಕ್ಷ್ಯ ಒದಗಿಸಲು ಅಪರಾಧಿಗಳಿಗೆ ಅವಕಾಶವಿಲ್ಲದುದನ್ನೂ ಪರಿಗಣಿಸಲೇ ಇಲ್ಲ. ತೀರ್ಮಾನವನ್ನೂ ಅದರ ಕ್ರೌರ್ಯವನ್ನೂ ನೋಡಿ ಜನ "ಇದು ಕೋರ್ಟು ನ್ಯಾಯ ಅಲ್ಲ. ಕಾನೂನಿನ ಬಲದಿಂದ ಮಾಡುವ ಕೊಲೆ" ಎಂದುಕೊಂಡಿತು. ಅಪೀಲು ಮಾಡಿದುದರಲ್ಲಿ ಐದು ಜನರಿಗೆ ಮರಣ ದಂಡನೆ ಖಾಯಂ ಆಯಿತು. ಆದರೂ ಜನಕ್ಕೆ ಅವರ ಜೀವ ಉಳಿಸಿಕೊಳ್ಳುವ ಆಸೆ ಇನ್ನೂ ಇದ್ದಿತು. ದೇಶದ ಆದ್ಯಂತವೂ ಪ್ರಾರ್ಥನೆಗಳು ಹೊರಟವು. ದೇವರು ಕಣ್ಣು ಬಿಟ್ಟು ನೋಡಿದ ಎಂಬುದಾಗಿಯೂ ಒಂದು ಪತ್ರಿಕೆ ಪ್ರಕಟಿಸಿತು. ಆದರೆ ಬಹು ಕಾಲದಿಂದ ಗುಲಾಮಗಿರಿಯಲ್ಲಿ ಬೆಳೆದ ಈ ದೇಶದ ಜನ ಸ್ವತಂತ್ರವಾದ ಯೋಚನೆಗಳನ್ನೂ ಧೀರಗಾಂಭೀರ್ಯ ಔದಾರ್ಯ ಮುಂತಾದ ಸ್ವತಂತ್ರ ಜನಾಂಗದ ಗುಣಗಳನ್ನೂ ಕಳೆದುಕೊಂಡಿದೆ. ಎಷ್ಟೋ ಹತ್ಯೆಗಳು ಈ ದೇಶದಲ್ಲಿ ನಿತ್ಯಾ ಮಿಲಿಟರಿಯಿಂದ ಆಗುತ್ತಿವೆ. ಅವರನ್ನು ಯಾರೂ ಏನೂ ಮಾಡಿಲ್ಲ.

ಹೊಸೂರಿನವರನ್ನು ಗಲ್ಲಿಗೇರಿಸುವ ದಿನ ಬಂತು. ಐದು ಜನರನ್ನೂ ಒಂದೇ ದಿನ ಏರಿಸಲಿಲ್ಲ. ನಿತ್ಯಾ ಎರಡು ಎರಡರಂತೆ ಮೂರು ದಿನ ಏರಿಸಿದರು. ಆ ಮೂರು ದಿನವೂ ಕೇಂದ್ರ ಕಾರಾಗಾರದಲ್ಲಿ ದುಃಖದ ಕಾರ್ಮೋಡ. ಮರಣ ದಂಡನೆಗೆ ಗುರಿಯಾದವರ ಪೈಕಿ ಒಬ್ಬರೂ ಕೊಲೆಗೆ ಕಾರಣರಲ್ಲ. ಒಬ್ಬನಿಗೆ ಸಬ್ ಇನಿಸ್ಪೆಕ್ಟರರ ರಿವಾಲ್ವರಿನ ಮದ್ದು

ತಗಲಿತ್ತು. ಒಬ್ಬ ಆ ದಿನ ಆ ಊರಲ್ಲಿಯೇ ಇರಲಿಲ್ಲ, ಒಬ್ಬ ಈಶ್ವರಪ್ಪ ನನ್ನು ಹಿಡಿಯುವ ಬದಲು ತಪ್ಪಿಸಿಂದ ಮತ್ತೊಬ್ಬ ಈಶ್ವರಪ್ಪನನ್ನು ಹಿಡಿದರು. ತಪ್ಪು ಗೊತ್ತಾದ ಮೇಲೆ 'ಚಿಂತೆಯಿಲ್ಲ. ಇವನೇ ಆಗುತ್ತೆ' ಎಂದು ಸುಮ್ಮನಾದರು. ನಿರಪರಾಧಿಗಳಾದುದರಿಂದಲೋ ಏನೋ ಆ ಮರಣೋನ್ಮುಖರಿಗೆ ಸ್ವಲ್ಪವಾಗಲಿ ಭಯ ನಿರುತ್ಸಾಹವಿದ್ದಂತೆ ಕಾಣಲಿಲ್ಲ. ಸೆರೆಮನೆಯ ಇತರ ಸೆರೆಯಾಳುಗಳು ಅವರಿಗೆ ಧೈರ್ಯ ಹೇಳಲು ಪ್ರಯತ್ನಿಸಿದರೆ ಅವರು "ಅಯ್ಯೋ ಸ್ವಾಮಿ ಈ ಲೋಕದಲ್ಲಿ ಐದು ಪ್ರಾಣಿ ಹೆಚ್ಚಾಗಿ ಇದ್ದರೇನು ಸತ್ತರೇನು? ಆದರೆ ವಿಚಾರಣೆ ಸರಿಯಾಗಿ ನಡೆಯಲಿಲ್ಲ" ಎನ್ನುತ್ತಿದ್ದರು. ಜನ, ಅವರನ್ನು ಗಲ್ಲಿಗೇರಿಸುವುದು ಇನ್ನೂ ಬಹಳ ಕಾಲವಾಗುತ್ತೆ ಎಂದು ತಿಳಿದಿದರು ಆಷ್ಟಿ ಚೀಮೂರು ಮುಂತಾದ ಕಡೆ ಮರಣ ದಂಡನೆಗೆ ಗುರಿಯಾದವರನ್ನು ಇನ್ನೂ ಗಲ್ಲಿಗೆ ಏರಿಸಿಯೆ ಇಲ್ಲ. ಆದರೆ ಸರ್ಕಾರಕ್ಕೆ ಅದೇನು ಅವಸರವಾಗಿದ್ದಿತೋ, ಯಾವ ಕೆಲಸಕ್ಕೂ ಇಲ್ಲದ ಚುರುಕಿನಿಂದ ಐವರ ಪ್ರಾಣಗಳನ್ನೂ ಸರ್ಕಾರ ಹೀರಿಬಿಟ್ಟಿತು

ಕೇಂದ್ರ ಕಾರಾಗಾರದಲ್ಲಿ ಅದಕ್ಕೆ ಹಿಂದೆ 'ಫಾಸಿ' ಯಾದವರು ಅನೇಕರನ್ನು ಸೆರೆಯಾಳುಗಳು ನೋಡಿದ್ದರು ಆದರೆ ಹೊಸೂರಿನವರಂತಹ ಧೀರರು ಈವರೆಗೆ ಬರಲಿಲ್ಲ ಸಾಮಾನ್ಯವಾಗಿ ಮರಣ ದಂಡನೆಗೆ ಗುರಿಯಾದವರು, 'ಫಾಸಿ'ಯ ಹತ್ತಿರಕ್ಕೆ ಹೋಗುವ ವೇಳೆಗೆ ಜ್ಞಾನವನ್ನು ಕಳೆದುಕೊಳ್ಳುತ್ತಾರೆ. ಅರ್ಧ ದಾರಿಯಿಂದಲೇ ಅವರನ್ನು ಎಳೆದುಕೊಂಡು ಹೋಗಿ ಬರಿಯ 'ಹೆಣ'ವನ್ನೇ ನೇತುಹಾಕುತ್ತಾರೆ. ಆದರೆ ಹೊಸೂರಿನ ಧೀರರು ಧೀರರೇ. ಫಾಸಿಗೆ ಹೋಗುವಾಗ ಇತರರ ಎದೆ ನಡುಗುತ್ತಿದ್ದರೂ ಅವರು ಗೆಲುವಾಗಿಯೇ ದೇವರ ಪೂಜೆ ಮಾಡಿ ನಮಸ್ಕರಿಸಿದವರೆಲ್ಲರಿಗೂ ಆಶೀರ್ವಾದ ಮಾಡಿ ಭಾರತಮಾತೆಯ ಹೆಸರನ್ನು ಹೇಳಿಕೊಂಡು ಧೈರ್ಯವಾಗಿ ಫಾಸಿಗೆ ಹೋದರು. "ನಮಗಾಗಿ ಯೋಚಿಸಬೇಡಿ. ಅಹಿಂಸೆ ನಮ್ಮ ವ್ರತ. ನಮ್ಮ ಪ್ರಾಣ ಹೋದರೆ ಚಿಂತೆಯಿಲ್ಲ. ದೇಶಕ್ಕೆ ಒಳ್ಳೆಯದಾಗಲಿ" ಎಂದರು ಈಶ್ವರಪ್ಪನಂತೂ ಫಾಸಿಯ ಮೇಲೆ ನಿಂತುಕೊಂಡು ಸಹ "ಭಾರತಮಾತೆಗೆ ಜಯವಾಗಲಿ" ಎಂದನು. ಇಂತವರ ತ್ಯಾಗದಿಂದಲೇ ಈ ಭೂಮಿ ಪವಿತ್ರವಾಗಿರುವುದು. ಇಂತಹವರ ಸ್ಮರಣೆ ನಮಗೆ

ಎಂದೆಂದಿಗೂ ತಪ್ಪದಿರಲಿ. ನಮ್ಮ ಕರುಣೆಯನ್ನು ನಮ್ಮ ಹೇಡಿತನ ಬತ್ತಿಸದೆ ಇರಲಿ. ನಮ್ಮ ಕ್ಷಾತ್ರ ಬರಿಯ "ಶೃಂಗಾರ ಶೇಖರ"ನಾಗದೆ ನಿಜವಾದ ಕ್ಷಾತ್ರವಾಗಲಿ ಈ ದೇಶ ಸ್ವತಂತ್ರವಾಗಲಿ.

ಹೊಸೂರಿನವರನ್ನು ಅಷ್ಟು ಬೇಗ ಗಲ್ಲಿಗೆ ಏರಿಸಿದುದು ತಪ್ಪು ಎಂಬುದಕ್ಕೆ ಎರಡನೆಯ ಹೊಸೂರು ಮೊಖದ್ದಮೆಯೇ ಸಾಕ್ಷಿ. ಮೊದಲನೆಯ ಸ್ಪೆಷಲ್ ಜಡ್ಜ್ ಮಾರಿಗೆ ದೊರೆಯದಿದ್ದ ಕೆಲವು ಅಪರಾಧಿಗಳನ್ನು ಎರಡನೆಯ ಸ್ಪೆಷಲ್ ಜಡ್ಜರು ವಿಚಾರಣೆ ನಡೆಸಿದರು. ಅವರು ತಮ್ಮ ತೀರ್ಪಿನಲ್ಲಿ ನೆರೆದಿದ್ದ ಜನಕ್ಕೆ ಖೂನಿ ಮಾಡಬೇಕೆಂಬ ಉದ್ದೇಶವಿರಲಿಲ್ಲವೆಂದು ಸ್ಪಷ್ಟವಾಗಿ ಹೇಳಿದರು. ಆ ದೃಷ್ಟಿಯಿಂದ ಅವರು ಯಾರಿಗೂ ಫಾಸಿ ವಿಧಿಸಲೇ ಇಲ್ಲ ಒಂದೇ ಮೊಖದ್ದಮೆಯಲ್ಲಿ ಇಬ್ಬರು ನ್ಯಾಯಾಧಿಪತಿಗಳು, ಮೊಖದ್ದಮೆಯ ತಿರುಳಾದ ಅತ್ಯಂತ ಮುಖ್ಯವಾದ ವಿಚಾರದಲ್ಲಿಯೇ ಭಿನ್ನಾಭಿಪ್ರಾಯವುಳ್ಳವರಾದರು ಗಲ್ಲಿಗೇರಿಸುವುದು ಸ್ವಲ್ಪ ಸಾವಕಾಶವಾಗಿದ್ದರೆ ಎರಡನೆಯ ಜಡ್ಜರ ಅಭಿಪ್ರಾಯದ ಲಾಭ ಆ ಮೊದಲಿನ ಅಪರಾಧಿಗಳಿಗೂ ಸಿಕ್ಕುತ್ತಿದ್ದಿತೇನೋ. ಆದರೆ ಯಾವುದಕ್ಕೂ ಸಂಬಂಧಪಟ್ಟವರಿಗೆ ಧೈರ್ಯ ಎಂಬುದು ಇರಬೇಕಲ್ಲ. ಆ ಕಾಲದಲ್ಲಿ ನಡೆದ ಕೆಲಸಗಳೆಲ್ಲಾ ಎಲ್ಲಿಯೋ ಇದ್ದ ಯಾರನ್ನೋ ತೃಪ್ತಿಪಡಿಸಲು ನಡೆಯುತ್ತಿದ್ದಂತೆ ತೋರಿದುವು.

ಸ್ಪೆಷಲ್ ಕೋರ್ಟುಗಳಲ್ಲಿ ಮರಣದಂಡನೆಯಂತಹ ಶಿಕ್ಷೆ ಕೊಡುವಾಗ ಸಹ ಅಪರಾಧಿಗೆ ಸರಿಯಾದ ಸಾಕ್ಷ್ಯವನ್ನು ಒದಗಿಸಲು ಅವಕಾಶ ಕೊಡಲಿಲ್ಲ. ಎಲ್ಲಾ ತೀರ್ಮಾನಕ್ಕೂ ಪೋಲೀಸಿನವರ ಸಾಕ್ಷ್ಯವೇ ಆಧಾರವಾಯಿತು. ಪೋಲೀಸಿನವರನ್ನು ಕುರಿತು ದಿವಂಗತ ಗೋಪಾಲಕೃಷ್ಣ ಗೋಖಲೆಯವರು ಹೇಳಿದ ಮಾತು ಎಲ್ಲಾ ಪೋಲೀಸಿಗೂ ಯಾವಾಗಲೂ ಅನ್ವಯಿಸುತ್ತದೆ. "ಪೋಲೀಸ್ ಇಲಾಖೆಯವರು ಮಾಡಬಾರದ ಅನೇಕ ಕೆಲಸಗಳನ್ನು ಮಾಡಿದ್ದಾರೆ. ವರದಿ ಮಾಡಕೂಡದಾಗಿದ್ದ ಅನೇಕ ವಿಚಾರಗಳನ್ನು ವರದಿ ಮಾಡಿದ್ದಾರೆ. ಅನೇಕ ವ್ಯಕ್ತಿಗಳ ಮೇಲೆ ಕಾವಲು ಕಾದು ಕಿರುಕುಳ ಕೊಟ್ಟು ಅವರ ಮೇಲೆ ಸುಳ್ಳು ವರದಿಗಳನ್ನು ಕೊಟ್ಟಿದ್ದಾರೆ. ಹೀಗೆ ಎಂದಿಗೂ ಮಾಡಬಾರದಾಗಿದ್ದಿತು. ಈ ಇಲಾಖೆ, ಜನರಿಗೆ ಅಸಾಧ್ಯವಾದ ಕಿರುಕುಳಗಳನ್ನು ಕೊಡುತ್ತಿದೆ. ಅದರಲ್ಲಿಯೂ ವಿದ್ಯಾವಂತರಿಗೆ

ಬಹಳ ಹಿಂಸೆಯಾಗುತ್ತಿದೆ. ಪೋಲೀಸ್ ಇಲಾಖೆ ಜನರಿಗೆ ಕೊಡುತ್ತಿರುವ ಹಿಂಸೆ ಎಷ್ಟು ಎನ್ನುವುದರ ಅರಿವು ಸರ್ಕಾರಕ್ಕೆ ಇರುವಂತೆ ತೋರುವುದಿಲ್ಲ. ನಾನು ಬೊಂಬಾಯಿ ಪ್ರಾಂತದಲ್ಲಿ ಒಂದು ಭಾಷಣ ಮಾಡಿದ್ದೆ. ಕೆಲವು ಕಾಲದ ನಂತರ ಒಂದು ಸತ್ಕಾರ ಕೂಟದಲ್ಲಿ ಅಧಿಕಾರಿಯನ್ನು ಕಂಡಾಗ ಅವರು ಮರುದಿವಸ ನನ್ನನ್ನು ತಮ್ಮ ಕಛೇರಿಗೆ ಬರುವಂತೆ ಹೇಳಿದರು. ಮರುದಿವಸ ನಾನು ಅವರನ್ನು ನೋಡಲು ಹೋದಾಗ ಅವರು ನನ್ನ ಕೈಗೆ ಒಂದು ಪೋಲೀಸ್ ವರದಿಯನ್ನು ಕೊಟ್ಟು "ಇದೇನು ನೀವು ಹೇಳುತ್ತಿರುವುದು" ಎಂದರು. ಆ ವರದಿಯನ್ನು ಓದಲು ನನಗೆ ಬಹಳ ವಿನೋದವಾಯಿತು. ಆ ವರದಿಯಲ್ಲಿ ಇದ್ದುದೇನನ್ನೂ ನಾನು ಹೇಳಿಯೇ ಇರಲಿಲ್ಲ. ವಿಚಾರ ಇಷ್ಟು. ಅವಿದ್ಯಾವಂತರೂ ಅಸೀತವಂತರೂ ಆದ ಅನೇಕರು ಪೋಲೀಸ್ ಇಲಾಖೆಯಲ್ಲಿ ಕೆಲಸದಲ್ಲಿದಾರೆ. ಸ್ವಾಭಾವಿಕವಾಗಿ ಇದು ಮರ್ಯಾದೆ ರಹಿತವಾದ ವೃತ್ತಿ. (1) ಯಾವ ಸಮಾಜದಲ್ಲಿಯೂ ಇದಕ್ಕೆ ತಿರಸ್ಕಾರ ಹೆಚ್ಚು. ಜನ ಏನು ಮಾಡುತ್ತಾರೆಂದು ಅವರ ಹಿಂದೆ ಗುಟ್ಟಾಗಿ ತಿರುಗುತ್ತಾ ಅವರ ರಹಸ್ಯಗಳನ್ನೆಲ್ಲಾ ಬರೆದುಕೊಳ್ಳುವವನನ್ನು ಸಮಾಜ ತಿರಸ್ಕರಿಸುವುದು ಸ್ವಾಭಾವಿಕ. ಆದುದರಿಂದ ಈ ಕೆಲಸಕ್ಕೆ ಒಳ್ಳೆಯವರೂ ಯೋಗ್ಯರೂ ಸಿಕ್ಕುವುದು ಕಷ್ಟ. ಇವರನ್ನು ನಿಯಮಿಸುವವರು ಯಾರು? ಇವರ ಯೋಗ್ಯತೆಗಳೇನು? ಇವರು ತಮ್ಮ ಕರ್ತವ್ಯ ಹೇಗೆ ನೆರವೇರಿಸುತ್ತಾರೆ; ಇವರ ಮೇಲಿರುವ ಮೇಲ್ವಿಚಾರಣೆ ಏನು, ಅವರು ಕೊಡುವ ವರದಿಗಳನ್ನು ಎಷ್ಟರಮಟ್ಟಿಗೆ ನಂಬಬಹುದು, ಇವನ್ನೆಲ್ಲಾ ವಿಚಾರಿಸಬೇಕು. ಇದು (2) ಕೆಳ ಪೋಲೀಸಿನವರ ಕೈಗೆ ಮತ್ತೊಂದು ಬಹಳ ಅಪಾಯದ ಆಯುಧವನ್ನು ಕೊಟ್ಟಂತೆ. ಆ ಇಲಾಖೆಯ ಯೋಗ್ಯತೆಯನ್ನು ಕುರಿತು ಎಷ್ಟು ಕಡಿಮೆ ಹೇಳಿದರೆ ಅಷ್ಟು ಒಳ್ಳೆಯದು.

ಮರಣದಂಡನೆಗೆ ಗುರಿಯಾದವರನ್ನು ಕುರಿತು ಯೋಚಿಸುವಾಗ ಸ್ಪೆಷಲ್ ಕೋರ್ಟುಗಳಲ್ಲಿ ಎಷ್ಟರಮಟ್ಟಿಗೆ ನ್ಯಾಯ ದೊರೆಯುತ್ತದೆ ಎಂಬ

---

(1) Necessarily regarded disreputable and is looked down in every society.

(2) The Officials Secrets Act:
"Gokhale's Speech at the Imperial Legislative Council."

ಪ್ರಶ್ನೆ ಸ್ವಾಭಾವಿಕವಾಗಿ ಉದ್ಭವಿಸುತ್ತದೆ ನಮ್ಮ ಸ್ಪೆಷಲ್ ಕೋರ್ಟುಗಳ ನ್ಯಾಯಾಧೀಶರು ಬ್ರಿಟಿಷ್ ಇಂಡಿಯಾದ ಸ್ಪೆಷಲ್ ಕೋರ್ಟುಗಳ ನ್ಯಾಯಾಧೀಶರುಗಳಿಗಿಂತ ಏನೂ ಹೆಚ್ಚು ಪ್ರಾಜ್ಞರಲ್ಲ ನಮ್ಮ ಹೈಕೋರ್ಟು ಫೆಡರಲ್ ಕೋರ್ಟಿಗಿಂತ ಹೆಚ್ಚಾದುದಲ್ಲ ಅಲ್ಲಿಗೆ ಅನ್ವಯಿಸುವ ನ್ಯಾಯ ಸ್ವಾಭಾವಿಕವಾಗಿ ಇಲ್ಲಿಗೂ ಅನ್ವಯಿಸುತ್ತದೆ.

ಸೆರೆಮನೆಯಲ್ಲಿ, ಸೆರೆಯಾಳುಗಳು, ಒಬ್ಬರಿಗೆ ನಮ್ಮ ಸರ್ಕಾರ ಎಂದು ಹೆಸರಿಟ್ಟಿದ್ದರು. ಆ ಹೆಸರಿನವರು ಯಾವಾಗಲೂ "ನಮ್ಮ ಸರ್ಕಾರಕ್ಕೂ ಬ್ರಿಟಿಷ್ ಇಂಡಿಯಾದ ಸರ್ಕಾರಕ್ಕೂ ವ್ಯತ್ಯಾಸವಿದೆ. ಇವರು ಯಾವತ್ತು ನಮ್ಮವರು. ಬ್ರಿಟಿಷ್ ಇಂಡಿಯಾದಲ್ಲಿ ಅವರು ಯಾವತ್ತೂ ಪರಕೀಯರು" ಎಂದು ಹೇಳುತ್ತಿದ್ದರು. ಭಾರತದಲ್ಲಿ ಸರ್ಕಾರಕ್ಕೆ ಗುಂಡಿನೇಟು ಕೊಟ್ಟಂತೆ, ಸರ್ ಮಾರಿಸ್ ಗ್ವಾಯರ್‌ರಂತಹ ನ್ಯಾಯಾಧಿಪತಿ ಭಾರತ ರಕ್ಷಣಾ ಕಾನೂನು 26 ಕ್ರಮಬದ್ಧವಲ್ಲ ಎಂದು ತೀರ್ಪು ಕೊಟ್ಟಾಗ ವೈಸರಾಯಿ ಸಹ ಅದರ ತಿದ್ದುಪಡಿಗಾಗಿ ಮತ್ತೊಂದು ಆರ್ಡಿನೆನ್ಸ್ ಹೊರಡಿಸಬೇಕಾಯಿತು. ಕೆಲವರನ್ನು ಬಿಡುಗಡೆಯೂ ಮಾಡಬೇಕಾಯಿತು. ಆಗ ನಮ್ಮ ಶಾಸನಸಭೆಗಳಲ್ಲಿಯೂ ಫೆಡರಲ್ ಕೋರ್ಟಿನ ತೀರ್ಪಿನ ಪ್ರತಿಕ್ರಿಯೆ ಏನು ಎಂದು ಕೇಳಿದಾಗ ಏನೂ ಇಲ್ಲ ಎಂದರು. ಇಂತಹ ಸಂದರ್ಭದಲ್ಲಿ ಜನರು "ನಮ್ಮ ಸರ್ಕಾರ" ಎಂಬುವರನ್ನು ಬಹಳ ವಿನೋದ ಮಾಡುತ್ತಿದ್ದರು.

ಸ್ಪೆಷಲ್ ಕೋರ್ಟು ಕ್ರಮಬದ್ಧವಲ್ಲವೆಂದು ಫೆಡರಲ್ ಕೋರ್ಟು ಹೇಳಿಬಿಟ್ಟ ಮೇಲೆ ಭಾರತದಲ್ಲಿ ಆ ಮೊಕದ್ದಮೆಗಳೆಲ್ಲಾ ಪುನರ್ವಿಚಾರಣೆಗೆ ಬಂದವು. ಆದರೆ ಇಲ್ಲಿ ಹೈಕೋರ್ಟಿನಲ್ಲಿ ತತ್‌ಕ್ಷಣವೇ ಅದು ಕ್ರಮಬದ್ಧ ಎಂದು ಆಗಿಹೋಯಿತು. ಇಲ್ಲಿಯ ಶಾಸನ ಸಭೆಯಲ್ಲಿ "ಫೆಡರಲ್ ಕೋರ್ಟಿನ ತೀರ್ಮಾನದ ಪ್ರತಿಕ್ರಿಯೆ ಇಲ್ಲ ಏನು. ಪುನರ್ವಿಚಾರಣೆ ನಡೆಸುತ್ತೀರಾ ಎಂದು ಕೇಳಿದಾಗ ಸರ್ಕಾರ ಸುಲಭವಾಗಿ ಇಲ್ಲ ಅದು ಶಾಸನವಾಗಿದೆ ಎಂದರು. ಸೆರೆಯಾಳುಗಳು "ಏನ್ರಿ ನಮ್ಮ ಸರ್ಕಾರ. ನೋಡಿ" ಎಂದು ಆ ಪ್ರಾಣಿಯ ಜೀವ ತೆಗೆಯುತ್ತಿದ್ದರು.

ಸ್ಪೆಷಲ್ ನ್ಯಾಯಸ್ಥಾನದ ಕಾನೂನು ಪ್ರಕಾರ ನ್ಯಾಯಾಧೀಶರು ಎಷ್ಟು ಬೇಕಾದರೂ ಜುಲ್ಮಾನೆ ವಿಧಿಸಬಹುದು. ಅದಕ್ಕೆ ಮೇಲಿನ

ಅಪೀಲು ಇಲ್ಲ. ಎರಡು ವರುಷಕ್ಕಿಂತ ಹೆಚ್ಚಿಲ್ಲದ ಸಜಾಗಳಿಗೆ ಅಪೀಲು ಇಲ್ಲ. ಫೆಡರಲ್ ಕೋರ್ಟಿನಲ್ಲಿ ಈ ವಿಚಾರ ಚರ್ಚೆಗೆ ಬಂದಾಗ ಛೀಫ್ ಜಡ್ಜರು—ಭಾರತದಲ್ಲಿ ಫಾಸಿಯನ್ನು ಬೇಗ ಬೇಗ ಮಾಡಬೇಕಲ್ಲವೆ? ಎಂದರು.

ಜಸ್ಟಿಸ್ ರೋಲಂಡ್—ಈ ದೇಶದಲ್ಲಿ ಒಂದು ಅಪೀಲನ್ನಾದರೂ ಮಾಡುವುದು ಜನರ ಅಭ್ಯಾಸ.

ಛೀಫ್ ಜಡ್ಜ್—ಈ ದೇಶದಲ್ಲಿ ಜನರ ಪ್ರಾಣ ಬಹು ಅಗ್ಗ. ಅಷ್ಟು ಹೇಳಿದರೆ ಎಲ್ಲವನ್ನೂ ಹೇಳಿದಂತೆ ಆಯಿತು. ಎರಡು ವರುಷ ಸಜ. ಅಪೀಲಿಗೆ ಅವಕಾಶವಿಲ್ಲ. ಇದನ್ನು ಅಪರಾಧಿ ಮಹದುಪಕಾರವೆಂದು ಪರಿಗಣಿಸಬೇಕಲ್ಲವೆ? ಅದಾದರೂ ಸ್ಪಷ್ಟವಾಗಿ ಬಿಡಲಿ.

ಮಿ|| ಬ್ಯಾನರ್ಜಿ; ಸರ್ಕಾರದ ಪರವಾಗಿ—ಭಾರತದ ಈ ಕಾನೂನಿನಲ್ಲಿ ಅಪರಾಧಿಗೆ ಹೆಚ್ಚು ಸೌಕರ್ಯವಿದೆ. ಇಲ್ಲಿ ರೆವ್ಯು ಪುನರ್ವಿಚಾರಣೆಗೆ ಅವಕಾಶವಿದೆ.

ಜಫರುಲ್ಲಾಖಾ—ಈ ಪುನರ್ವಿಚಾರಣೆ ಅಪೀಲಿಗಿಂತ ಕಡಿಮೆಯೋ ಹೆಚ್ಚೋ? ಶಿಕ್ಷೆ ಏಳು ವರುಷಕ್ಕಿಂತ ಹೆಚ್ಚಾದರೆ ಪುನರ್ವಿಚಾರಣೆಗೆ ಅವಕಾಶ ವಿದೆಯೆಂದು ಹೇಳಿದೆ....ಭಾರತದಲ್ಲಿಯ ಪೋಲೀಸ್ ಮ್ಯಾಜಿಸ್ಟ್ರೇಟರಿಗೂ ಇಂಗ್ಲೆಂಡಿನ ಮ್ಯಾಜಿಸ್ಟ್ರೇಟರಿಗೂ ಸಂಬಂಧವಿಲ್ಲ. ಇಲ್ಲಿ ಹೈಕೋರ್ಟಿಗೆ ಪುನರ್ವಿಚಾರಣೆ ಮಾಡುವ ಅಧಿಕಾರವಿಲ್ಲ. ಪುನರ್ವಿಚಾರಣೆ ಮಾಡುವವರು ಹೈಕೋರ್ಟು ನ್ಯಾಯಾಧಿಪತಿಯಾಗಿರಬಹುದು ಅಷ್ಟೆ. ಹೈಕೋರ್ಟು ಜಡ್ಜಿಯಾಗಿ ಅವನನ್ನು ನಂಬುವುದಕ್ಕೆ ಆಗುವುದಿಲ್ಲ. ಅವನು ಒಬ್ಬ ವ್ಯಕ್ತಿಯಾಗಿ ಪುನರ್ವಿಚಾರಣೆ ನಡೆಸಬಹುದು.

ಬ್ಯಾನರ್ಜಿ—ಹೈಕೋರ್ಟು ನ್ಯಾಯಾಧಿಪತಿಗಳ ಯೋಗ್ಯತೆಯೇ ಅಪರಾಧಿಗೆ ಸರಿಯಾದ ರಕ್ಷಣೆ.

ಜಫರುಲ್ಲಾಖಾನ್—ಪಂಜಾಬ್‌ನಲ್ಲಿ ಮಾರ್ಶಲ್ ಲಾ ಕಾಲದಲ್ಲಿ ಹೈಕೋರ್ಟು ನ್ಯಾಯಾಧೀಶರ ಯೋಗ್ಯತೆಯ ಅನುಭವ ನನಗೆ ಚೆನ್ನಾಗಿ ಆಗಿದೆ. ಈ ಸ್ಪೆಷಲ್ ಕೋರ್ಟು ಕಾನೂನಿನ ಎಂಟನೆಯ ಸೆಕ್ಷನ್ ಅರ್ಥ ಯಾರಿಗೂ ತಿಳಿದೇ ಇಲ್ಲ.

ಬ್ಯಾನರ್ಜಿ—ಪುನರ್ವಿಚಾರಣೆ ಮಾಡುವ ನ್ಯಾಯಾಧಿಪತಿಗೆ ಅಧಿಕಾರ ಹೆಚ್ಚಾಗಿದೆ. ಅಪೀಲ್‌ನಲ್ಲಿ ಕೆಲಸ ಹೆಚ್ಚು.

ಛೀಫ್ ಜಸ್ಟಿಸ್—ಅಪರಾಧಿಗೆ ಪ್ರಾಣ ಹೋಗುತ್ತೆ—ಉಳಿಯುತ್ತೆ ಎಂಬುದು ಇರುವಾಗ ಕೆಲಸ ಹೆಚ್ಚು ಎಂದರೆ ಅರ್ಥವೇನು?

ಛೀಫ್ ಜಸ್ಟಿಸ್—ಸ್ಪೆಷಲ್ ಕೋರ್ಟು ಪ್ರಾರಂಭವಾಗುವುದು ಯಾವಾಗ?

ಬ್ಯಾನರ್ಜಿ—ಬೆಂಚು ಕುರ್ಚಿ ಲಾ ಪುಸ್ತಕ ಸಿದ್ಧವಾದಾಗ.

ಜಫರುಲ್ಲಾ ಖಾನ್—ಬೆಂಚು ಕುರ್ಚಿ ಎಂದು ಬೇಕಾದರೆ ಹೇಳಿ. ಲಾ ಪುಸ್ತಕಗಳಿಗೂ ಅವರಿಗೂ ಏನೇನೂ ಸಂಬಂಧವಿಲ್ಲ.

ಛೀಫ್ ಜಡ್ಜರು ಹೀಗೆ ಹೇಳಿದರು. "ಸ್ಪೆಷಲ್ ಕೋರ್ಟು ಕಾನೂನು ಆಗಿರುವ ರೀತಿಯಲ್ಲಿ ಇದು ಯಾವ ಮೊಖದ್ದಮೆಗೆ ಬೇಕಾದರೂ ಅನ್ವಯಿಸುತ್ತದೆ. ಇದು ಭಾರತ ರಕ್ಷಣಾ ಕಾನೂನಿಗಿಂತ ಕ್ರೂರವಾಗಿದೆ. ಈ ಕಾನೂನಿನಂತೆ ಒಬ್ಬ ಅಪರಾದಿಗೆ ಜುಲ್ಮಾನೆ ಅಥವಾ ಎರಡು ವರುಷ ಸಜಾ ಬಿದ್ದರೆ ಅವನಿಗೆ ಅಪೀಲಿಗೆ ಅವಕಾಶವೇ ಇಲ್ಲ. ದಯೆಯನ್ನು ಮಾತ್ರ ಪ್ರಾರ್ಥಿಸಬಹುದು.

ಬ್ಯಾನರ್ಜಿ—ಪುನರ್ವಿಚಾರಣೆ ಮಾಡುವ ನ್ಯಾಯಾಧೀಶನಿಗೆ ಬೇಕಾದ ಅಧಿಕಾರವಿದೆ. ಅಪೀಲು ಎಂದರೆ ರಗಳೆಯ ಕೆಲಸ.

ಛೀಫ್ ಜಸ್ಟಿಸ್—ಇದು ಅಪರಾಧಿಯ ಜೀವಸಾವಿನ ಪ್ರಶ್ನೆಯಾಗಿರುವಾಗ, ಇದು ಹೇಗೆ ರಗಳೆಯಾಗುತ್ತದೆ? ಇದಕ್ಕಾಗಿ ಕಾಲವನ್ನು ವೆಚ್ಚ ಮಾಡುವುದು ನ್ಯಾಯವಲ್ಲವೆ?" ಈ ಕೆಲಸಕ್ಕೆ ನ್ಯಾಯಾಧೀಶರು ಬೇಕಾದರೆ ಹೈಕೋರ್ಟಿನ ಮುಖ್ಯ ನ್ಯಾಯಾಧೀಶರು ಒಬ್ಬ ನ್ಯಾಯಾಧೀಶರನ್ನು ಸಂತೋಷದಿಂದ ಕೊಡುವರು.

ಜಫರುಲ್ಲಾ ಖಾನ್—ಪ್ರಾಂತ ಸರ್ಕಾರ ಒಬ್ಬ ನ್ಯಾಯಾಧೀಶನನ್ನು ಆರಿಸುತ್ತದೆ. ಅವನನ್ನು ಪುನರ್ವಿಚಾರಣೆಗೆ ನಿಯಮಿಸಬೇಕೆಂದು ಹೈಕೋರ್ಟನ್ನು ಕೇಳುತ್ತದೆ—ಅದರ ಬದಲು ವಿಚಾರವನ್ನೆಲ್ಲಾ ಯಾಕೆ ಹೈಕೋರ್ಟಿಗೇ ಒಪ್ಪಿಸಕೂಡದು?

ಸರ್ ಬಿ. ಎಲ್. ಮಿತ್ರ—ಗವರ್ನರ್ ಜನರಲ್‌ಗೆ ಸೆಂಟ್ರಲ್ ಲೆಜಿಸ್ಲೆಚರ್‌ಗೆ ಇರುವ ಅಧಿಕಾರವೇ ಇದೆ. ಪ್ರಾಂತ ಸರ್ಕಾರಕ್ಕೆ ಉಳಿದಿರುವುದು ಏನೆಂದರೆ ವಿಚಾರಣೆಯ ಕ್ರಮ.

ಜಫರುಲ್ಲಾ ಖಾನ್—ಮತ್ತು ವಿಚಾರಣೆಗೆ ಗುರಿಯಾಗಬೇಕಾದ ಅಪರಾಧಿಯನ್ನು ನಿರ್ಣಯಿಸುವುದು.

ಬಿ. ಎಲ್. ಮಿತ್ರ—ಯಾವ ಮೊಖದ್ದಮೆ ಅಂತಹ ಸ್ಪೆಶಲ್ ಕೋರ್ಟು ಮುಂದೆ ಬರಬೇಕು ಎಂಬುದನ್ನು ಪ್ರಾಂತ ಸರ್ಕಾರ ತೀರ್ಮಾನಿಸುತ್ತದೆ.

ಜಫರುಲ್ಲಾ ಖಾನ್—ಒಬ್ಬ ಹೆಡ್ ಕಾನ್‌ಸ್ಟೇಬಲ್ ಈ ಅಧಿಕಾರ ವನ್ನು ಚಲಾಯಿಸಬಹುದು.

ಮಿತ್ರ—ಸರ್ಕಾರದ ಛೀಫ್ ಸೆಕ್ರಟರಿ ಯಾಕೆ ಆಗಬಾರದು ?

ಜಫರುಲ್ಲಾ ಖಾನ್—ಯಾವ ಅಧಿಕಾರಿ ಈ ಅಧಿಕಾರಗಳನ್ನು ಚಲಾಯಿಸಬಹುದೆಂದು ಗವರ್ನರ್ ಜನರಲ್‌ರೇ ವ್ಯಕ್ತಪಡಿಸಿಲ್ಲ. ಹೆಡ್ ಕಾನ್‌ಸ್ಟೇಬಲ್ ಸಹ ಆಗಬಹುದು. ನಿಮಗೆ ಏಕೆ ನಾಚಿಕೆ? ಪ್ರಾಂತೀಯ ಅಧಿಕಾರಿಯು, ಒಂದು ಮೊಖದ್ದಮೆ ಯಾಕೆ ಒಂದು ನ್ಯಾಯಸ್ಥಾನಕ್ಕೆ ಹೋಗಬೇಕು; ಮತ್ತೊಂದು ಏಕೆ. ಮತ್ತೊಂದು ನ್ಯಾಯಸ್ಥಾನಕ್ಕೆ ಹೋಗಬೇಕು ? ಎಂಬುದಕ್ಕೆ ಕಾರಣವನ್ನು ಕೊಡಬೇಕಾದುದಿಲ್ಲ. ಮೊಖದ್ದಮೆಗಳಿಗೆಲ್ಲಾ ನಂಬರ್ ಕೊಟ್ಟು—ಸರಿ ಬೆಸ, ಸರಿಯಾದವು ಗಳೆಲ್ಲಾ ಒಂದು ಕೋರ್ಟಿಗೆ, ಬೆಸವಾದವುಗಳೆಲ್ಲಾ ಒಂದು ಕೋರ್ಟಿಗೆ ಎಂದು ಹೇಳಿ ತೀರ್ಮಾನಿಸಬಹುದು.

ಬಿ. ಎಲ್. ಮಿತ್ರ—ನಾವು ಅಧಿಕಾರಿಗಳ ವಿವೇಕದ ಮೇಲೆ ಅವ ಲಂಬಿಸಬೇಕು. ಆಸ್ಟ್ರೇಲಿಯದಲ್ಲಿ ಗವರ್ನರ್ ಜನರಲ್ ಹೀಗೆ ಹೀಗೆಯೇ ಮಾಡಬೇಕೆಂದು ಕಾನೂನು ಇಲ್ಲ. ಗವರ್ನರ್ ಜನರಲ್ ವಿವೇಕದಿಂದ ನಡೆದಿಲ್ಲವೆಂದು ಪಾರ್ಲಿಮೆಂಟಿಗೆ ನಂಬಿಕೆಯಾದರೆ, ಮುಂದಲ ಸಭೆಯಲ್ಲಿ ಪಾರ್ಲಿಮೆಂಟು ಗವರ್ನರ್ ಜನರಲ್‌ರವರ ಅಧಿಕಾರವನ್ನು ಕಿತ್ತುಹಾಕ ಬಹುದು.

ಛೀಫ್ ಜಸ್ಟಿಸ್—ಇಲ್ಲಿ ಹಾಗೆ ಮಾಡಲು ಸಾಧ್ಯವಿಲ್ಲ.

ಜಫರುಲ್ಲಾ ಖಾನ್—ಆ ದೇಶಗಳಲ್ಲಿ ನ್ಯಾಯವಿಧಾಯಕ ಸಭೆಯಲ್ಲಿ ಪ್ರಜಾಪ್ರತಿನಿಧಿಗಳು ಆಡಳಿತ ಸೂತ್ರವನ್ನು ನಡೆಸುತ್ತಾರೆ.

ಮಿತ್ರ—ಆ ವಿಷಯದಲ್ಲಿ ನಾವಾಗಲಿ, ನೀವಾಗಲಿ, ಏನೂ ಮಾಡಲು ಸಾಧ್ಯವಿಲ್ಲ.

ಫೆಡರಲ್ ಕೋರ್ಟು ನ್ಯಾಯಾಧೀಶರೇ, "ಸ್ಪೆಷಲ್ ಕೋರ್ಟುಗಳಲ್ಲಿ ಇರುವುದು ಬರಿಯ ಬೆಂಚು ಕುರ್ಚಿ; ಕಾನೂನು ಪುಸ್ತಕಗಳಿಗೂ ಆ

ನ್ಯಾಯಾಧಿಪತಿಗಳಿಗೂ ಸಂಬಂಧವಿಲ್ಲವೆಂದ ಮೇಲೆ ಇಲ್ಲಿಯ ಸ್ಪೆಷಲ್ ಕೋರ್ಟು ಜಡ್ಜಿಗಳ ಕಾನೂನು ಜ್ಞಾನವನ್ನು ಕೇಳಬೇಕೆ?

ಹೀಗೆ ಭಾರತದಲ್ಲಿ, ಯಾವ ನ್ಯಾಯ ಸಂಸ್ಥೆಗಳಿಗೆ ನ್ಯಾಯವನ್ನು ಕೊಡಲು ಅರ್ಹತೆಯಿಲ್ಲವೆಂದು ದೇಶದ ಉನ್ನತ ನ್ಯಾಯಸ್ಥಾನ ಸಾರಿತೋ ಅಂತಹ ಸಂಸ್ಥೆಗಳು ಕೊಟ್ಟ ನ್ಯಾಯಗಳನ್ನೆಲ್ಲಾ ತೀರ್ಪುಗಳನ್ನೆಲ್ಲಾ ಮತ್ತೆ ಸಾಮಾನ್ಯ ನ್ಯಾಯಸ್ಥಾನದಲ್ಲಿ ವಿಚಾರಿಸಬೇಕೆಂದು ಅಲ್ಲಿ ಅಪ್ಪಣೆ ಯಾಯಿತು. ಅಲ್ಲಿ ಅಂತಹ ತೀರ್ಮಾನ ದೊರೆತ ಮೇಲೂ ಇಲ್ಲಿ ಒಂದು ವಿಧವಾದ ಚಂಡಿ ಹಿಡಿಯುವ ಮೊಂಡು ಹುಡುಗರಂತೆ ಸರ್ಕಾರ ತಾನು ಮಾಡಿದುದನ್ನೇ ಸಾಧಿಸುವ ಮನೋಭಾವದಿಂದ ಸ್ಪೆಷಲ್ ಕೋರ್ಟು ಆರ್ಡಿನೆನ್ಸು ಇಲ್ಲಿ ಕಾನೂನಾಗಿದೆ ಎಂದಿತು. ಇಲ್ಲಿ ಅದು ಕಾನೂನಾಗ ಬೇಕಾದರೆ ಅಲ್ಲಿ ಮಾಡಿದ ಆರ್ಡಿನೆನ್ಸ್‌ನಿಂದ. ಆದರೆ ಆ ಆರ್ಡಿನೆನ್ಸ್ ಅಲ್ಲಿ ರದ್ದಾದರೂ ಇಲ್ಲಿ ಮಾತ್ರ ಅದೂ ಕಾನೂನೇ.

---

## ೪೬. ನೀರಿಲ್ಲದ ಸಮುದ್ರಪುರಿ

---

ಸಾಮಾನ್ಯವಾಗಿ ಡಿಟೆನ್ಯುಗಳಲ್ಲಿ ಅಧಿಕಾರಿಗಳಿಗೆ ಅಸಮಾಧಾನ ವುಂಟಾದರೆ ಅವರನ್ನು ಬೇರೆ ಸೆರೆಮನೆಗೆ ವರ್ಗಾಯಿಸುತ್ತಿದ್ದರು. ಹೀಗೆ ವರ್ಗಾಯಿಸುವಾಗ ಆ ಮತ್ತೊಂದು ಸೆರೆಮನೆಯಲ್ಲಿ ಈ ಹೆಚ್ಚು ಸೆರೆ ಯಾಳುಗಳಿಗೆ ಸ್ಥಳವಿದೆಯೇ ಇಲ್ಲವೇ ಎಂಬುದನ್ನೂ ನೋಡುತ್ತಿರಲಿಲ್ಲ. ಹೊರಡಬೇಕು ಎಂದು ಗೊತ್ತುಮಾಡಿದ ದಿನ ಯಾವಾಗಲೂ ಪೋಲೀಸ್ ಕಾವಲು ದೊರೆಯುತ್ತಿರಲಿಲ್ಲ. ಯಾವತ್ತು ಹೊರಡಬೇಕೆಂದು ಸೆರೆ ಮನೆಯ ಅಧಿಕಾರಿಗಳು ಮೊದಲು ಹೇಳುತ್ತಿದ್ದರೋ, ಅಲ್ಲಿಂದ ಮುಂದೆ ಮೂರು ದಿನ ನಾಲ್ಕು ದಿನ ಐದು ದಿನ ಕಳೆದ ಹೊರತು ಪೋಲೀಸ್ ಕಾವಲು ದೊರೆಯುತ್ತಿರಲಿಲ್ಲ. ಮತ್ತೇನೂ ಕೆಲಸವಿಲ್ಲದೆ ಈ ಪ್ರಯಾಣ ವನ್ನೇ ಒಂದು ಬದಲಾವಣೆ ಎಂದು ಸಂತೋಷದಿಂದ ಎದುರು ನೋಡು ತ್ತಿದ್ದ ಸೆರೆಯಾಳುಗಳಿಗೆ ಪ್ರತಿದಿನವೂ ಗಂಟುಕಟ್ಟಿ ಪೋಲೀಸ್ ಕಾವಲನ್ನು ಕಾದು ಕಾದು ಸಾಕಾಗುತ್ತಿದ್ದಿತು. "ಪೋಲೀಸ್ ಕಾವಲು ಒದಗಲಿಲ್ಲ

ಆದುದರಿಂದ ಪ್ರಯಾಣ ಇಲ್ಲ''. ಹೀಗೆ 5-6 ದಿನ ಆ ವಿಧವಾದ ಕಿರುಕುಳ ಮನಸ್ಸಿಗೆ ಆದ ಮೇಲೆ ಪೋಲೀಸ್ ಕಾವಲು ದೊರೆಯುತ್ತಿದ್ದಿತು. ಹಾಗೆ ಹೊರಡುವಾಗ ದಾರಿಯಲ್ಲಿ ಬಂದಿಗಳು ಹಸಿದುಕೊಂಡಿರಬೇಕೆ? ಇವರಿಗೆ ತಿಂಡಿ ಕಾಫಿ ಏನಾದರೂ ದೊರಕಬೇಕೆ? ಇದು ಬಹಳ ಚರ್ಚೆಯಾದ ಮೇಲೆ—ಪ್ರಯಾಣ.

ಹೊಸದಾಗಿ ಸ್ಥಾಪನೆಯಾದ ಒಂದು ಮಲೆನಾಡು ಸೆರೆಮನೆಯಾದ ಸಮುದ್ರಪುರಿಗೆ, ಹಾಸ್ಯಪುರದಿಂದ 26 ಡಿಟೆನ್ಯುಗಳನ್ನು ವರ್ಗಾಯಿಸಿದರು. ಆ ಸೆರೆಮನೆ ಮೊದಲು ಸೆರೆಮನೆಯಾಗಿರಲಿಲ್ಲ. ಸರ್ಕಾರದ ಗಂಧದ ಕೋಟೆಯಾಗಿದ್ದಿತು. ಯಾರೋ ಅಧಿಕಾರಿಗಳು ಆ ಸ್ಥಳವನ್ನು ನೋಡಿ ಇದು ಸೆರೆಮನೆಗೆ ಅನುಕೂಲವಾಗಿದೆ ಎಂದರು. ಆಗ ಡಿಟೆನ್ಯುಗಳನ್ನು ಒಳಗೆ ಕೂಡುವುದರ ಕಡೆಗೆ ಸರ್ಕಾರದ ಲಕ್ಷ್ಯವಿದ್ದೀತೆ ಹೊರತು ಅವರ ಸೌಕರ್ಯದ ಕಡೆಗಲ್ಲ. ಆ ಮಲೆನಾಡಿನ ಸೆರೆಮನೆಯಲ್ಲಿ ನೀರಿಗೆ ಅನುಕೂಲವಿರಲಿಲ್ಲ. ಯಾವ ಭಾವಿಯಲ್ಲಿರುವ ನೀರೂ ಊರಿನವರಿಗೇ ಸಾಕಾಗುತ್ತಿರಲಿಲ್ಲ. ಆದರೆ ಊರಿನವರು ಡಿಟೆನ್ಯುಗಳಲ್ಲವಾದುದರಿಂದ ಸ್ವತಂತ್ರವಾಗಿ ಎಲ್ಲಿ ಬೇಕಾದರೂ ಹೋಗಿ ತರುವ ಅವಕಾಶವಿದ್ದಿತು. ಡಿಟೆನ್ಯುಗಳು ಹೊರಗೆ ಹೋಗುವಂತಿಲ್ಲ. ಅವರಿಗೆ ಮತ್ತೇನಿಲ್ಲದಿದ್ದರೂ ಸರ್ಕಾರದ ಕಾವಲಿಗೆ ಚಿಂತೆಯಿಲ್ಲ. ಆ ಸೆರೆಮನೆಗೆ ಡಿಟೆನ್ಯುಗಳು ಬಂದ ದಿನ ಅಧಿಕಾರಿಗಳು "ಕಾಂಪೌಂಡ್" ಗೋಡೆಯ ಮೇಲೆ ಎತ್ತರವಾದ ಬಿದುರು ತಡಿಕೆಗಳನ್ನು ನಿಲ್ಲಿಸುವುದರಲ್ಲಿಯೂ ಕಿಟಿಕಿಗಳ ಕೆಳಗಡೆ ಬಾಗಿಲುಗಳಿಗೆ ಮೊಳೆಗಳನ್ನು ಬಡಿಯುವುದರಲ್ಲಿಯೂ "ಕಾಂಪೌಂಡ್" ಗೋಡೆಯನ್ನು ಕೆಲವು ಕಡೆ ಎತ್ತರಿಸುವುದರಲ್ಲಿಯೂ "ಕಾಂಪೌಂಡಿನಲ್ಲಿರುವ" ಮರಗಳನ್ನು ಕಡಿಯುವುದರಲ್ಲಿಯೂ ನಿರತರಾಗಿದ್ದರು. ಮೊದಲೇ ಆ ಸೆರೆಮನೆಯಲ್ಲಿ 25 ಡಿಟೆನ್ಯುಗಳಿದ್ದರು. ಅಲ್ಲಿ ನಾಲ್ಕು ಅಡಿ ಆಳ ನೀರಿನ ಒಂದು ಭಾವಿ ಇದ್ದಿತು. ಅದರಿಂದ ನೀರು ಸೇದಲು ಬಿಂದಿಗೆ ಇರಲಿಲ್ಲ. ಬಕೆಟ್‌ನಲ್ಲಿ 10 ಬಕೆಟ್ ಎತ್ತುವವೇಳೆಗೆ ನೀರು ಕೆಸರಾಗುತ್ತಿದ್ದಿತು. ಇನ್ನು ಕಾಲುಗಂಟೆ ಸೇದುವವೇಳೆಗೆ ಆ ಕೆಸರೂ ಇಲ್ಲವಾಗುತ್ತಿದ್ದಿತು. ಸರಿ. ಮರುದಿನದವರೆಗೆ ಆ ಭಾವಿಯಲ್ಲಿ ನೀರಿಲ್ಲ. ಇಂತಹ ಸೆರೆಮನೆಗೆ ಹೊಸದಾಗಿ 26 ಜನ ಬಂದಕೂಡಲೇ ಸುಮಾರು 50

ಜನ ಡಿಟೆನ್ಯುಗಳಿಗೆ ಕುಡಿಯುವ ನೀರಿಗೇ ಮೊದಲು ಅಭಾವವಾಯಿತು. ಹೊಸದಾಗಿ ಡಿಟೆನ್ಯುಗಳು ಬಂದಕೂಡಲೇ ಭಾವಿಗೆ ಹಗ್ಗವನ್ನೂ ಬಕೆಟ್ಟನ್ನೂ ಬಿಟ್ಟರು. ಕೆಂಪು ಕೆಸರು ಮೇಲೆ ಬಂತು.

ಆಗ ಡಿಟೆನ್ಯುಗಳನ್ನು ಪೋಲಿಸ್ ಅಧಿಕಾರಿಗಳು ರೈಲುಗಳಲ್ಲಿ ಕರೆದು ಕೊಂಡು ಹೋಗುತ್ತಿರಲಿಲ್ಲ. ಆಹಾರ ಪದಾರ್ಥಗಳನ್ನು ಸಾಗಿಸುವುದಕ್ಕೂ ಜನರ ಪ್ರಯಾಣ ಸೌಕರ್ಯಗಳಿಗೂ ಪೆಟ್ರೋಲ್ ಇಲ್ಲದಿದ್ದರೂ ಡಿಟೆನ್ಯು ಗಳನ್ನು ಸಾಗಿಸುವ ಈ ಭಾರತ ರಕ್ಷಣೆಯ ಕೆಲಸಕ್ಕೆ ಎಷ್ಟು ಬೇಕಾದರೂ ಬಸ್, ಪೆಟ್ರೋಲ್ ದೊರೆಯುತ್ತಿದ್ದಿತು. ರೈಲು ಇರುವ ಕಡೆಗಳಲ್ಲಿಯೂ ಡಿಟೆನ್ಯುಗಳನ್ನು ಬಸ್‌ನಲ್ಲಿಯೇ ಸಾಗಿಸುತ್ತಿದ್ದರು. ಅಂತಹ ಬಸ್ ಪ್ರಯಾಣದಲ್ಲಿ 15-20 ಪೋಲೀಸರ ಜತೆಯಲ್ಲಿ ನೂಕು ನುಗ್ಗಲಿನಲ್ಲಿ ಕೂರು ವುದಕ್ಕೂ ಸ್ಥಳವಿಲ್ಲದೆ ಹೋಗುತ್ತಿರುವಾಗ ಕೈಕಾಲು ಮಂಡಿಯೆಲ್ಲಾ ಧೂಳಾಗಿ ಗಂಟಲು ಒಣಗಿ, "ಮತ್ತೇನೂ ಬೇಡ. ನಾಲ್ಕು ಚೊಂಬು ನೀರು ಸಿಕ್ಕಿದರೆ ಸಾಕು. ಕೈಕಾಲು ಮುಖ ತೊಳೆದುಕೊಳ್ಳೋಣ" ಎನ್ನಿಸುತ್ತಿದ್ದಿತು. ಮಲೆನಾಡಿನ ಆ ಹೊಸ ಸೆರೆಮನೆಗೆ ಹೋದ ದಿನ ಡಿಟೆನ್ಯುಗಳಿಗೆ ಹಾಗೆ ಎನ್ನಿಸಿತು. ಆದರೆ ಕುಡಿಯುವುದಕ್ಕೇ ನೀರಿಗೆ ಗತಿ ಇಲ್ಲದಿರುವಾಗ, ಇನ್ನು ಕೈಕಾಲು ತೊಳೆಯಲು ಎಲ್ಲಿಂದ ಬರಬೇಕು? ಹಿಂದೆ ಅಲ್ಲಿದ್ದ ಡಿಟೆನ್ಯುಗಳು, ಇದ್ದ ಒಂದೆರಡು ಚೊಂಬು ನೀರನ್ನು ಅವರಿಗೆ ಕೊಟ್ಟರು. ಕರೆದುಕೊಂಡು ಬಂದ ಪೋಲೀಸ್ ಕಾವಲುಗಾರರು ಲೆಕ್ಕ ಮಾಡಿ ದನಗಳನ್ನು ದೊಡ್ಡಿಗೆ ಕೂಡುವಂತೆ ಕೂಡಿ ಹೊರಟು ಹೋದರು. ಆ ದಿವಸ ಸೆರೆಮನೆಯ ಸೂಪರಿಂಟೆಂಡೆಂಟ್ ಇರಲಿಲ್ಲ. ಛೀಫ್ ವಾರ್ಡರ್ ಇದ್ದನು. ನೀರು ಇಲ್ಲ. ಡಿಟೆನ್ಯುಗಳು ನೀರು ನೀರು ಎಂದು ಬಡಕೊಳ್ಳುತ್ತಿದ್ದಾರೆ. ಛೀಫ್ ವಾರ್ಡರ್ ಏನು ಮಾಡುತ್ತಾನೆ! ಅವನ ಅಧಿಕಾರದಲ್ಲಿ ಬರುತ್ತಿದ್ದ ಕ್ರಿಮಿನಲ್ ಖೈದಿಗಳು ಸಾಧಾರಣವಾಗಿ ಯಾವಾಗಲೂ ಹೀಗೆ ಏನನ್ನೂ ಕೇಳುತ್ತಿರಲಿಲ್ಲ. ಅವನು ತೆಪ್ಪಗೆ ಮನೆಗೆ ಹೋಗಿಬಿಟ್ಟ. ಹೊಸದಾಗಿ ಮಾಡಿ ನಿಲ್ಲಿಸಿದ್ದ ಜಾಯಿಕಾಯಿ ಚೂರುಗಳ ಕಾಂಪೌಂಡಿನ ಬಾಗಿಲಿನಲ್ಲಿ, ಆ ಒದ್ದರೆ ಮುರಿಯುವ ಬಾಗಿಲಿನ ಬೀಗ ವನ್ನು ಕಾಯುತ್ತಾ ಒಬ್ಬ ಕಾವಲುಗಾರ ನಿಂತಿದ್ದ. ಉಳಿದ ಕಾವಲು ಗಾರರು "ಕಾಂಪೌಂಡ್" ಗೋಡೆ ಎತ್ತರಿಸುವ ಕೆಲಸದಲ್ಲಿ ತೊಡಗಿದ್ದರು.

ನೀರು ಎಲ್ಲಿ ಎಂದು ಚರ್ಚಿಸುವುದರಲ್ಲಿಯೇ, 12 ಗಂಟೆಗೆ ಆ ಸೆರೆಮನೆಯಲ್ಲಿ ಇಳಿದ ಡಿಟೆನ್ಯುಗಳು 4 ಗಂಟೆ ಕಂಡರು. ಆ ವೇಳೆಗೆ ಅಲ್ಲಿಗೆ ಸ್ಥಳದ ಡಾಕ್ಟರು ಬಂದರು. ಸಾಮಾನ್ಯವಾಗಿ ಸೆರೆಮನೆಯು ಆಡಳಿತ ಡಾಕ್ಟರಿಗೂ ಸಂಬಂಧಪಟ್ಟಿದೆ. ವೈದ್ಯದ ಮುಖ್ಯಾಧಿಕಾರಿಗೆ ಸೆರೆಮನೆಗಳ ಮುಖ್ಯಾಧಿಕಾರಿ ಎಂದೂ ಹೆಸರು. ವೈದ್ಯಕ್ಕೂ ಸೆರೆಮನೆಗೂ ಯಾಕೆ ಹೊಂದಿಸಿಕೊಂಡಿದ್ದಾರೆಯೋ ತಿಳಿಯದು. ಸೆರೆಮನೆಯ ನರಕ ಕಟುಕ ಆಡಳಿತಕ್ಕೂ ವೈದ್ಯದಂತಹ ಜನಜೀವ ರಕ್ಷಣೆಯ ಕರುಣೆಯ ಕೆಲಸಕ್ಕೂ ಸಂಬಂಧವೇ ಇಲ್ಲ. ಅಥವಾ ಸೆರೆಯಾಳುಗಳ ಆರೋಗ್ಯ ರಕ್ಷಣೆಗೆ ವೈದ್ಯ ಸಂಬಂಧ ಈ ರೀತಿ ಇರಬೇಕು ಎನ್ನುವುದಾದರೆ ಯಾವ ವೈದ್ಯನೂ ಸೆರೆಮನೆಯ ಅಧಿಕಾರಿಗೆ ಇಚ್ಛೆಯಿಲ್ಲದ ರೀತಿಯಲ್ಲಿ, ಸೆರೆಯಾಳಿಗೆ ಅವಶ್ಯಕವಾಗಿದ್ದರೂ ಯಾವ ಆಹಾರ ವೈದ್ಯನಿಯಮವನ್ನೂ ಮಾಡಲಾರ. ತನ್ನ ವಿದ್ಯಕ್ಕೆ ತಾನು ದ್ರೋಹಿಯಾಗದೆ "ಈ ರೋಗಿ ಗುಣಹೊಂದ ಬೇಕಾದರೆ, ಈ ಔಷಧಿ, ಈ ಆಹಾರ, ಬೇಕು. ಇಲ್ಲವಾದರೆ ಇವನ ಪ್ರಾಣದ ಜವಾಬ್ದಾರಿ ನನ್ನದಲ್ಲ" ಎಂದು ಹೇಳಿದ ಧೀರರಾದ ವೈದ್ಯರು, ಡಿಟೆನ್ಯುಗಳ ಅನುಭವದಲ್ಲಿ ಒಬ್ಬಿಬ್ಬರು ಮಾತ್ರ ಕಂಡರು. ಉಳಿದ ವೈದ್ಯರು, ಸೆರೆಮನೆಯ ವೈದ್ಯರಾದುದರಿಂದ ಸೆರೆಮನೆಯ ಆಡಳಿತವೂ ಸ್ವಲ್ಪಮಟ್ಟಿಗೆ ತಮಗೆ ಸೇರಿತು ಎಂದು ಭಾವಿಸಿ ಸೂಪರಿಂಟೆಂಡೆಂಟ್ ರವರ ಅಭಿಪ್ರಾಯಕ್ಕೆ ವಿರೋಧವಿಲ್ಲದಂತೆ ನಡೆಯುತ್ತಿದ್ದರು. ಒಂದು ಆಹಾರವಸ್ತು ಒಂದು ವೈದ್ಯ ಚಿಕಿತ್ಸೆ ಡಿಟೆನ್ಯುವಿಗೆ ಅವಶ್ಯಕವೆಂದು ತೋರಿದರೂ, ಇದನ್ನು ಡಿಟೆನ್ಯುವಿಗೆ ಕೊಟ್ಟರೆ ಅವನಿಗೆ ಗೊತ್ತು ಮಾಡಿರುವ ಭತ್ಯಕ್ಕಿಂತ ಇದು ಹೆಚ್ಚುವುದೇ ಎಂದು ವೈದ್ಯರೂ ಲೆಕ್ಕ ಹಾಕುತ್ತಿದ್ದರು. ವೈದ್ಯನಾದವನು ಈ ಔಷಧಿ ಈ ಆಹಾರ ಈ ರೋಗಿಗೆ ಅವಶ್ಯಕವೇ ಎಂಬುದನ್ನು ಕುರಿತು ಯೋಚಿಸಬೇಕೇ ಹೊರತು ಈ ಬಗೆಯ ಚಿಕಿತ್ಸೆ ಯಿಂದ ಡಿಟೆನ್ಯುವಿಗೆ ಖರ್ಚು ಎಷ್ಟು ಬೀಳುತ್ತೆ ಎಂಬುದನ್ನು ಯೋಚಿಸು ವುದು ಅವನ ಶಾಸ್ತ್ರಕ್ಕೆ ಮರ್ಯಾದೆ ಕೊಡುವ ಮಾರ್ಗವಲ್ಲ. ಆದರೆ ಧೈರ್ಯ ಶಾಲಿಗಳು ಯಾವೆಡೆಯೂ ವಿರಳ. "ನಿನಗೆ ರಾತ್ರಿ ಊಟ ಮಾಡಿದರೆ ಜೀರ್ಣವಾಗುವುದಿಲ್ಲ. ನಿದ್ರೆ ಬರುವುದಿಲ್ಲ. ಬಾಳೆಹಣ್ಣು ಹಾಲು ತೆಗೆದು ಕೊಂಡರೆ ಒಳ್ಳೆಯದು. ಆದರೆ ಅದು ನಿನ್ನ ಭತ್ಯಕ್ಕಿಂತ ಹೆಚ್ಚಾಗುತ್ತೆ.

ಹೇಗೆ ಮಾಡುವುದು" ಎನ್ನುವ ವೈದ್ಯರೇ ಹೆಚ್ಚು. ಆದರೂ ಸೆರೆಮನೆಯಲ್ಲಿ ಸ್ವಲ್ಪವಾದರೂ ಮನುಷ್ಯತ್ವ ಇನ್ನೂ ಉಳಿದಿರುವುದು ಅಲ್ಲಿಯ ವೈದ್ಯ ರಿಂದಲೇ. ಆ ವೈದ್ಯರೂ ಸಹ ಅಲ್ಲಿ ಇಲ್ಲದೆ ಹೋಗಿದ್ದರೆ ಅದು ಬರಿಯ ಮನುಷ್ಯತ್ವವಿಲ್ಲದ ಕಠಿಣಶಿಕ್ಷೆ ಛಡಿ ಏಟು ರೊಟ್ಟಿ ನೀರು, ಸೆಲ್, ನಿಲು ಬೇಡಿ ನಾಡಾಬೇಡಿ ಫಾಸಿಗಳ ಯಮದೂತರ ನರಕವಾಗಿರುತ್ತಿದ್ದಿತು.

ನೀರಿಲ್ಲದ ಹೊಸ ಸೆರೆಮನೆಗೆ, ಸ್ಥಳದ ವೈದ್ಯರು ಬಂದರು. "ಸೂಪ ರಿಂಟೆಂಡೆಂಟ್ ಊರಲ್ಲಿ ಇಲ್ಲ. ಭಾವಿಯ ನೀರು ಸಾಲದು ಎಂಬುದು ನಮಗೆಲ್ಲಾ ತಿಳಿದಿದ್ದರೂ ಯಾರೊ ಸರ್ಕಾರಕ್ಕೆ ಇಲ್ಲಿ ಎಲ್ಲಾ ಅನುಕೂಲ ವಾಗಿದೆ ಎಂದು ಹೇಳಿದುದರಿಂದ ನಿಮ್ಮನ್ನು ಇಲ್ಲಿ ಕಳುಹಿಸಿ ಬಿಟ್ಟಿದ್ದಾರೆ. ಈ ಭಾವಿಯ ನೀರು ಹತ್ತು ಜನಕ್ಕೆ ಸಹ ಸಾಕಾಗುವುದಿಲ್ಲ. ಮಗ್ಗುಲಲ್ಲಿ ರುವ ಹೈಸ್ಕೂಲು ಭಾವಿಯಿಂದ ತರಿಸುತ್ತೇನೆ" ಎಂದರು. ಆ ರಾತ್ರಿಯ ವರೆಗೆ ಸೆರೆಮನೆಯ ವಾರ್ಡರ್‌ಗಳಿಗೆಲ್ಲಾ ಭಾವಿಯಿಂದ ನೀರು ಹೊರು ವುದೇ ಸಾಕಾಯಿತು. ಐವತ್ತು ಜನಕ್ಕೆ ಸ್ನಾನ ಊಟ ಮುಂತಾದ ಸಮಸ್ತ ಕೆಲಸಗಳಿಗೂ ಹೊರಗಿನಿಂದ ಎಷ್ಟು ನೀರನ್ನು ಹೊತ್ತು ತಂದು ಹಾಕುವುದು ಸಾಧ್ಯ ? ವಾರ್ಡರ್‌ಗಳೆಲ್ಲಾ ಏದುತ್ತಿದ್ದರು. ಅವರ ಮೈ ಬೆವತು ಹರಿಯುತ್ತಿದ್ದಿತು. ಅವರನ್ನು ನೋಡಿ ಡಿಟೆನ್ಯುಗಳಿಗೆ ಕನಿಕರ ಸಹ ಉಂಟಾಯಿತು. ಅಂತೂ ರಾತ್ರಿಯ ವೇಳೆಗೆ ಎಲ್ಲರಿಗೂ ಒಂದೊಂದು ಚೊಂಬು ನೀರು ಕೈಕಾಲು ತೊಳೆಯಲು ಸಿಕ್ಕಿತು. ಲಾಂದ್ರದ ಬೆಳಕಿನಲ್ಲಿ ಊಟಮಾಡಿ ಬಿದ್ದುಕೊಂಡರು. ಒಂದೊಂದು ಬ್ಯಾರಕ್‌ಗೆ ಒಂದೊಂದು ದೀಪ ಕೊಟ್ಟಿದ್ದರು.

ಬೆಳಗಿನ ಝಾವವೇ ಡಿಟೆನ್ಯುಗಳ ಓಡಾಟ ಪ್ರಾರಂಭವಾಯಿತು. ಮೊದಲು ಮೊದಲು ಎದ್ದವರು ಭಾವಿಯ ನೀರನ್ನು ಸೇದಿ ತಮ್ಮ ಕರ್ಮ ಗಳನ್ನು ತೀರಿಸಿಕೊಂಡರು. ಆದರೆ ಮೊದಲ ದಿನ ಅರ್ಧ ರಾತ್ರಿಯ ವರೆಗೆ ನೀರು ಸೇದಿದ್ದುದರಿಂದ, ಬೆಳಗಾಗುವ ವೇಳೆಗೆ ಹೆಚ್ಚು ನೀರು ದೊರೆಯಲಿಲ್ಲ. ಡಿಟೆನ್ಯುಗಳು ಒಬ್ಬೊಬ್ಬರಾಗಿ ಎದ್ದರು. ದೇಹ ಬಾಧೆ ಗಳನ್ನು ತೀರಿಸಿಕೊಳ್ಳಬೇಕು. ನೀರಿಗೆ ಗತಿ ಇಲ್ಲ. ಗಂಟೆ ಎಂಟು ಆಯಿತು. ಒಂಭತ್ತು ಆಯಿತು. ಸೂಪರಿಂಟೆಂಡೆಟ್ ಇಲ್ಲ. ಡಾಕ್ಟರೂ ಇಲ್ಲ. ಚೀಫ್ ವಾರ್ಡರೂ ಇಲ್ಲ. ಒಬ್ಬ ವಾರ್ಡರ್ ಮಾತ್ರ, ತಲೆದಪ್ಪ ಬೀಗ

ವನ್ನು ಕಾಂಪೌಂಡ್ ಬಾಗಿಲಿಗೆ ಹಾಕಿಕೊಂಡು, ನೀರು ಹೊತ್ತ ಶ್ರಮ ವನ್ನು ಪರಿಹರಿಸಿಕೊಳ್ಳುತ್ತಾ ನಿಂತಿದ್ದಾನೆ. ಕೇಳುವವರೂ ಹೇಳುವವರೂ ಯಾರೂ ಇಲ್ಲ. ಸೆರೆಮನೆ ಸೆರೆಮನೆಯಾಗಿ ಕಾಣಲೇ ಇಲ್ಲ. ಬಾಗಿಲನ್ನು ಹಿಡಿದು ಬಲವಾಗಿ ಅಳ್ಳಾಡಿಸಿದ ಕೂಡಲೇ, ಬೀಗ ಹಾಕಿದಂತೆಯೇ ಇದ್ದರೂ ಚಿಲಕವನ್ನು ಹಾಕಿದ್ದ ಜಾಯಿಕಾಯಿ ಪಟ್ಟಿಯ ಚೂರು, ಬೀಗ ದೊಂದಿಗೆ ಕೆಳಕ್ಕೆ ಬಿದ್ದುಹೋಯಿತು. ಅವಸರದಲ್ಲಿ ನೆಪಮಾತ್ರಕ್ಕೆ ಮಾಡಿದ್ದ ಬಾಗಿಲು ಅದು. ಪ್ರಕೃತಿಯ ಒದೆತವನ್ನು ಯಾವುದು ತಾನೇ ತಡಿಯಬಲ್ಲದು. ಡಿಟೆನ್ಯುಗಳೆಲ್ಲಾ ಒಬ್ಬೊಬ್ಬರಾಗಿ ಊರ ಹೊರಗಿನ ಕೆರೆಗೆ ಹೋಗಿ ತಮ್ಮ ನಿತ್ಯ ಕರ್ಮಗಳನ್ನು ತೀರಿಸಿಕೊಂಡು ಬಂದರು. ಅವರಿಗೆ ಯಾವ ಕಾವಲೂ ಬೇಕಿರಲಿಲ್ಲ. ತಾವೇ ಹೋದರು. ತಾವೇ ಬಂದರು. ಪ್ರಕೃತಿಯ ಈ ಬಲಾತ್ಕಾರವಿಲ್ಲದಿದ್ದರೆ ಅವರು ಹೊಟ್ಟೆಗೆ ಇಲ್ಲ ದಿದ್ದರೂ ಉಪವಾಸವಿರುತ್ತಿದ್ದರು. ಹುಡುಗರಾದ ಕೆಲವರು ಹೋಟಲಿಗೆ ಹೋಗಿ ಕಾಫಿಯನ್ನು ಸಹ ಕುಡಿದು ಬಂದರು. ಸೆರೆಮನೆಯ ಅಧಿಕಾರಿ ಗಳು ಒಂದು ನಿಮ್ಮ ಮೇಲೆ ಮೊಖದ್ದಮೆ ದಾಖಲ್ಮಾಡುತ್ತೇವೆ ಎಂದರು. ಡಿಟೆನ್ಯುಗಳು "ಮಾಡಿ. ಮಾಡಿದರೂ ಸೆರೆಮನೆಗಿಂತ ಮತ್ತೇನೂ ಇಲ್ಲವಲ್ಲ" ಎಂದರು. ಆದರೆ ಯಾವ ಸರ್ಕಾರ ತಾನೇ ನಾಚಿಕೆಯಿಲ್ಲದೆ ಇಂತಹ ಮೊಖದ್ದಮೆ ದಾಖಲ್ಮಾಡುತ್ತದೆ! ಅದೇ ದಿನ ಇಂಜನಿಯರಿಂಗ್ ಇಲಾಖೆಯವರು ಬಂದು ನೋಡಿ, ಭಾವಿಯಲ್ಲಿ ನೀರು ಪೂರ್ಣವಾಗಿ ಸಾಲದು ಎಂದು ಹೇಳಿದುದರಿಂದ, ಡಿಟೆನ್ಯುಗಳನ್ನು ಮತ್ತೆ ಸುರಪುರಿಯ ಸೆರೆಮನೆಗೆ ವರ್ಗಾಯಿಸಿದರು.

---

## ೪೭. ಕೆಲವು ಮಾದರಿಗಳು

---

ಸುರಪುರದಲ್ಲಿ, ಯಾವ ಕಾರಣವೂ ಇಲ್ಲದೆ ದಸ್ತಗಿರಿ ಮಾಡಲ್ಪಟ್ಟಿದ್ದ ವರ ಸಂಖ್ಯೆ ಹೆಚ್ಚಾಗಿಯೇ ಇದ್ದಿತು. ಶ್ಯಾನುಭೋಗ ರಾಜಾರಾಯರು ಸಾಧು ಪ್ರಾಣಿ. ಒಳ್ಳೆಯ ದಕ್ಷನಾದ ಮನುಷ್ಯ. ಕಸಬು ಶ್ಯಾನುಭೋಗ ತನವಾದರೂ ಆ ಅಧಿಕಾರದಲ್ಲಿಯೂ ಯಾವ ಸರ್ಕಾರಕ್ಕೂ ಗೌರವ

ಬರುವಂತೆ ನಡೆದಿದ್ದ. ಜಿಲ್ಲಾಧಿಕಾರಿಗಳು ಅವನ ಮೇಲೆ ವಾರಂಟು ಹೊರಡಿಸಿದರು. ಶಾನುಭೋಗನಿಂದ ಭಾರತದ ರಕ್ಷಣೆಗೆ ವಿರೋಧ ಬರುವುದರಿಂದ ಜಿಲ್ಲಾಧಿಕಾರಿಗಳು ಅವನನ್ನು ದಸ್ತಗಿರಿ ಮಾಡಿದರು. ಶ್ಯಾನುಭೋಗನಿಂದ ಜಿಲ್ಲಾಧಿಕಾರಿಗಳಿಗೆ ಭಯವುಂಟಾಗಬಹುದಾದ ಭಾರತದ ರಕ್ಷಣೆಯಾದರೂ ಏನು! ಶುದ್ಧ ನಾಚಿಕೆಗೇಡು. ಪೋಲೀಸಿನವರಿಗೆ ಶಾನುಭೋಗ ರಾಜಾರಾಯ ಸ್ವಲ್ಪ ದಿನ ಸಿಕ್ಕಲೇ ಇಲ್ಲ. "ನೋಡೋಣ ಹಿಡೀತಾರೋ ಅಂತ ಸ್ವಲ್ಪ ದಿನ ಮರೆಸಿಕೊಂಡೆ. ಪಾಪ ಪಾಪ ಎಲ್ಲಿ ಹಿಡಿಯುತ್ತಾರೆ ಎಂದರು." ಕೊನೆಗೆ ರಾಜಾರಾಯರೇ ಪೋಲೀಸರ ವಶರಾದರು. ಭಾರತದ ರಕ್ಷಣೆಯಾಯಿತು. ಸುರಿಪುರದಲ್ಲಿ ಡಿಟೆನ್ಯೂ ವಾಗಿದ್ದ ಮತ್ತೊಬ್ಬ ವ್ಯಕ್ತಿ ಕಾಮನಾಥರು. ಈ ಸದ್ಗೃಹಸ್ಥರು ಆ ಪ್ರಾಂತ್ಯದಲ್ಲಿ ಒಳ್ಳೆಯ ಧನಿಕರು. ಹಿಂದೆ ಒಂದು ಸಲ ಇವರು ಸೆರೆ ಮನೆಯ ಕಂಟ್ರಾಕ್ಟರ್ ಸಹ ಆಗಿದ್ದರು. ಸುಮಾರು 3000 ರುಪಾಯಿ ಕಂದಾಯವನ್ನೇ ಕೊಡುತ್ತಾರೆ. ದೊಡ್ಡ ವ್ಯಾಪಾರಿಗಳೂ ಹೌದು. ಇವರ ಮನೆಯಲ್ಲಿ ಯಾರೋ ಒಂದು ದಿನ ಬಂದು ಊಟ ಮಾಡಿದರಂತೆ. ಅವರು ಕಾಂಗ್ರೆಸ್‌ನವರು. ಆವತ್ತು ಜಿಲ್ಲಾಧಿಕಾರಿಗಳೂ ಅಲ್ಲಿಗೆ ಹೋಗಿದ್ದವರು ಊಟಕ್ಕೆ ಕಾಮನಾಥರ ಮನೆಗೆ ಹೋದರು. ಕಾಂಗ್ರೆಸ್‌ನವರು ಊಟ ಮಾಡಿಕೊಂಡು ಹೋದರು ಎಂಬುದು ತಿಳಿದ ಕೂಡಲೇ ಜಿಲ್ಲಾಧಿಕಾರಿಗಳು "ನೀವು ಅವರಿಗೆ ಯಾಕೆ ಊಟ ಹಾಕಿದಿರಿ ಇನ್ನು ಹಾಕಕೂಡದು" ಎಂದರು. ಕಾಮನಾಥರು "ಸ್ವಾಮಿ ಕಾಂಗ್ರೆಸ್‌ನವರೋ, ಮುಸ್ಲಿಂ ಲೀಗ್‌ನವರೋ, ಪೋಲೀಸರೋ, ಯಾರು ಬಂದರೂ ಊಟ ಹಾಕುವುದು ನನ್ನ ಸ್ವಭಾವ. ಉಳಿದ ವಿಚಾರ ನನಗೆ ಆವಶ್ಯಕ ವಿಲ್ಲ. ಎಲ್ಲಾ ಪೋಲೀಸಿನವರೂ ಬಂದು ಇಲ್ಲೇ ಊಟ ಮಾಡುತ್ತಾರೆ. ಅವರವರ ಕೆಲಸಕ್ಕೆ ಅವರವರು ಹೋಗುತ್ತಾರೆ. ಹಸಿದವರಿಗೆ ಅನ್ನ ಹಾಕುವುದು ನನ್ನ ಧರ್ಮ" ಎಂದರು. ಜಿಲ್ಲಾಧಿಕಾರಿಗಳು ಅಲ್ಲಿಯೇ ತಾವು ಊಟ ಮಾಡಿ, ಮನೆಗೆ ಹೊರಟು ದಾರಿಯಲ್ಲಿ ಯೋಚಿಸಿ ಭಾರತ ರಕ್ಷಣೆಗೆ ಕಾಮನಾಥರು ಊಟ ಹಾಕುವುದರಿಂದ ಕಿರುಕುಳವಾಗುತ್ತದೆ ಎಂದು ಹೇಳಿ ಅವರ ಮೇಲೆ ವಾರಂಟ್ ಹೊರಡಿಸಿದರು. ಕಾಮನಾಥರನ್ನು ನೋಡಿದರೇ ಅಂತಹ ಸಾಧು ಪ್ರಾಣಿ. ಅವರನ್ನು ಹಿಡಿಯಲು

ಮೂರು ಲಾರಿ ಸಶಸ್ತ್ರ ಪೋಲೀಸ್ ಪಡೆ ಹೋಗಿದ್ದಿತು. ನಮ್ಮ ಪೋಲೀಸರು ಶೂರರಲ್ಲವೆಂದು ಯಾರು ಹೇಳುವವರು?

ಆ ಕಾಲದಲ್ಲಿ ಪೋಲೀಸಿನವರು ಪಟಾಸು ಹಾರಿಸಿದವರನ್ನು ಹಿಡಿಯುತ್ತಿದ್ದರು. ಹೋಟಲಿನಲ್ಲಿ ಗಾಂಧಿ ಟೋಪಿಯವರಿಗೆ ತಿಂಡಿ ಕೊಟ್ಟರು ಎಂಬ ಕಾರಣದಿಂದ ಹೋಟಲ್ ರಾಯರನ್ನು ಹಿಡಿದರು. ಒಂದು ಭಾಗದಲ್ಲಿ ಇದ್ದಕ್ಕಿದ್ದಂತೆ ನಿತ್ಯಾ ಈಚಲ ಮರಗಳು ಮರೆಯಾದುವೆಂದು ಮತ್ತೊಬ್ಬರನ್ನು ಹಿಡಿದರು. ಗಟ್ಟಿಯಾಗಿ ತಮಟೆ ಹೊಡೆದುದು ಬಾಂಬ್ ಶಬ್ದದಂತೆ ಕೇಳಿತೆಂದು ಮತ್ತೊಬ್ಬರನ್ನು ಹಿಡಿದರು! ಕತ್ತೆಗಳ ಮೆರವಣಿಗೆ ಹೊರಡಿಸಿ ಆ ಕತ್ತೆಗಳ ನೆತ್ತಿಗೆ ದೊಡ್ಡ ದೊಡ್ಡ ಅಧಿಕಾರಿಗಳ ಹೆಸರಿನ ಪಟ್ಟಿ ಕಟ್ಟಿದ್ದರೆಂದು ಹಿಡಿದರು. ಒಂದು ನಾಯಿಗೆ ನವನೀಚನೆಂದು ಹೆಸರು ಇಟ್ಟನೆಂದು ಒಬ್ಬನನ್ನು ಹಿಡಿದರು. ತಲೆ ಕೆಟ್ಟವರು, ಅರ್ಧ ಬುದ್ಧಿಯವರು ಅಕ್ಷರ ಬರದವರು, ಗಾರೆ ಕೆಲಸದವರು, ಕುರುಬರು, ಕುಂಬಾರರು, ಅಂಗಹೀನರು, ಬುದ್ಧಿಹೀನರು, ಮುದುಕರು, ಹುಡುಗರು, ಮುದುಕಿಯರು, ಹುಡುಗಿಯರು, ಫಿಟ್ಸ್ ಬರುವವರು, ಲೂಕೊಡರ್ಮ ಬಂದವರು, ಎಲ್ಲರನ್ನೂ ಬಂಧಿಸಿ ಭಾರತ ರಕ್ಷಣೆ ಮಾಡಿದರು.

ಹೀಗೆ ಅಂಗಹೀನ ಮತಿಹೀನರನ್ನೆಲ್ಲಾ ಹಿಡಿದುದಲ್ಲದೆ ವಿದ್ಯಾರ್ಥಿಗಳ ತಂಡ ತಂಡವನ್ನೇ ಹಿಡಿದು ಅವರನ್ನು ವಿಚಾರಣಾ ಖೈದಿಗಳಾಗಿಯೇ 6 ತಿಂಗಳು 8 ತಿಂಗಳು 12 ತಿಂಗಳು ಇಟ್ಟು; ಅವರ ಜೀವವನ್ನೇ ಹಾಳು ಮಾಡಿದರು. ನಮ್ಮ ದೇಶದ ಅಧಿಕಾರಿಗಳು ಇಷ್ಟು ಹೃದಯಹೀನರೂ ಬುದ್ಧಿಹೀನರೂ ಆಗಿರುವರೆಲ್ಲಾ, ಹೀಗೆ ಮಾಡುವವರೂ ನಮ್ಮವರೇಯೆಲ್ಲಾ ಎಂದು ಡಿಟೆನ್ಯುಗಳಿಗೆ ನಾಚಿಕೆಯೂ ಪಶ್ಚಾತ್ತಾಪವೂ ಉಂಟಾಗುತ್ತಿದ್ದಿತು. ಡಿಟೆನ್ಯುಗಳು ಸುರಪುರದಲ್ಲಿರುವಾಗ ಹೈಸ್ಕೂಲು ವಿದ್ಯಾರ್ಥಿಗಳಾಕ ನಾಗಪ್ಪ ಮೊದಲಾದ ನಾಲ್ಕು ಹುಡುಗರ ಮೇಲೆ ಒಂದು ವಿನಾಶಕಾರದ ಕೃತ್ಯದ ಮೊಖದ್ದಮೆಯನ್ನು ಪೋಲೀಸಿನವರು ದಾಖಲ್ಮಾಡಿದರು. ಆ ಮೊಖದ್ದಮೆ ನಡೆಯುತ್ತಿರುವಾಗಲೇ, ಶಿಕ್ಷೆಯಾದ ವಿದ್ಯಾರ್ಥಿಗಳನ್ನು ಬಿಡುಗಡೆಮಾಡಬೇಕೆಂದು ಸರ್ಕಾರ ಒಂದು ಅಪ್ಪಣೆ ಹೊರಡಿಸಿತು. ಆ ವ್ಯವಹಾರ ವಿಚಕ್ಷಣೆಯನ್ನು ಏನೆಂದು ಹೇಳೋಣ. ಆ ಅಪ್ಪಣೆ ಆ ವೇಳೆಗಾಗಲೇ ಶಿಕ್ಷೆಯಾಗಿದ್ದವರಿಗೆ ಅನ್ವಯಿಸಿತೇ ಹೊರತು

ಇನ್ನೂ ವಿಚಾರಣೆಯಾಗುತ್ತಿರುವವರಿಗೆ ಅನ್ವಯಿಸಲಿಲ್ಲ. ಈ ಕಾರಣ ದಿಂದ ಆ ನಾಲ್ವರು ವಿದ್ಯಾರ್ಥಿಗಳು ಇನ್ನೂ ಸೆರೆಯಲ್ಲಿಯೇ ಉಳಿದರು. ಒಂದೆ ಭಾರತದಲ್ಲಿ ಪೋಲೀಸರ ನಡತೆಯನ್ನು ಕುರಿತು ಮಾತನಾಡುತ್ತಾ ಕರ್ನಲ್ ವೆಡ್ಜ್‌ವುಡ್ ಎಂಬುವವರು "ನೀತಿ ರಹಿತರಾದ ಪೋಲೀಸಿ ನವರು, ಜೊಕೆ" ಎಂದಿದ್ದರು. ಈ ಮೊಖದ್ದಮೆ ನೋಡಿದರೆ ಆ ಮಾತು ನಿಜ ಎಂಬುದು ಸ್ಪಷ್ಟವಾಗುತ್ತಿದ್ದಿತು.

ಅಪರಾಧಿಗಳು ಸಣ್ಣ ವಿದ್ಯಾರ್ಥಿಗಳು; ನಮ್ಮ ವಿದ್ಯಾರ್ಥಿಗಳ ದೇಹ ದೃಢತೆ ನಮಗೆ ಗೊತ್ತು. ಪುಷ್ಟವಾದ ಆಹಾರವಿಲ್ಲದುದರಿಂದ ಅವರು ಪೆಚ್ಚಾಗಿ ಚೀಕಲಾಗಿರುತ್ತಾರೆ. ಪೋಲೀಸಿನವರು ಆ, ಕೆನ್ನೆ ಜಿಗಟಿದರೆ ಹಾಲು ಬರುವ ಹುಡುಗರು ಕತ್ತರಿಸಿದುದೆಂದು ಸುಮಾರು -4 ಸಾವಿರ ಅಡಿ ತಂತಿಯನ್ನು ಯಾವುದೋ ಒಂದು ಮಡುವಿನಲ್ಲಿ ಪತ್ತೆ ಮಾಡಿದರು. ಆ ಶಿಂಬಿಗಳನ್ನು ಲಾರಿಯಲ್ಲಿ ಹಾಕಿಕೊಂಡು ನ್ಯಾಯಸ್ಥಾನದ ಬಳಿಗೆ ಬಂದರು. ಆ ಶಿಂಬಿಗಳನ್ನು ನೋಡಿದರೆ ಅವು ಆನೆಗಳಿಂದಲೂ ಕದಲಿ ಸಲು ಸಾಧ್ಯವಿಲ್ಲವೆಂಬುದು ಕಾಣುತ್ತಿದ್ದಿತು. ಅಂತಹ ತಂತಿಯನ್ನು ಆ 15-16 ವರುಷದ ಹುಡುಗರು ಕತ್ತರಿಸಿದರಂತೆ. ಆ ಹುಡುಗರಿಗೂ ಆ ಶಿಂಬಿಯನ್ನು ನೋಡಿ ತಮಾಷೆ. "ಹೇಗಿದೆ ನಮ್ಮ ಸಾಹಸ. ಇದನ್ನು ಎಳೆಯಲು ಲಾರಿಗೆ ಸಹ ಕಷ್ಟವಾಗುತ್ತಿದೆ. ನಾವು ಸುಲಭವಾಗಿ ಕತ್ತರಿಸಿ ಮೊಸಳೆ ಮಡುವಿನೊಳಕ್ಕೆ ಎಸೆದೆವಲ್ಲ" ಎಂದು ಅವರು ನಗುತ್ತಿದ್ದರು. ಈ ಸಂದರ್ಭದಲ್ಲಿ ಮಾಡರ್ನ್ ರೆವ್ಯುವಿನಲ್ಲಿ ಬಂದ ಈ ವಿಚಾರ ಗಮನಾರ್ಹ ವಾದುದು.

"ಈ ಹದಿನೈದು ದಿನಗಳೊಳಗಾಗಿ, ಇವತ್ತು ಲಂಡನ್‌ನಲ್ಲಿ ಎರಡ ನೆಯ ಟಪಾಲು ಚೀಲದ ಕಳವು ಆಯಿತು. ವೆಸ್ಟ್ ಮಿನಿಸ್ಟರ್‌ನಲ್ಲಿ ಟಪಾಲಿನವನು ಕಾಗದಗಳನ್ನು ಕೊಡುತ್ತಿದ್ದನು. ಒಬ್ಬ ಮನುಷ್ಯನು ಬೈಸಿಕಲ್ಲಿನ ಮೇಲೆ ಬಂದು ಟಪ್ಪಾಲು ಚೀಲವನ್ನು ಕಿತ್ತುಕೊಂಡು ಮತ್ತೆ ಬೈಸಿಕಲ್ ಏರಿ ವೆಸ್ಟ್ ಮಿನಿಸ್ಟರ್ ಸೇತುವೆ ದಾಟ ಹೊರಟುಹೋದನು. 9 ದಿನಗಳ ಕೆಳಗೆ 63 ವಯಸ್ಸಿನ ಒಬ್ಬ ಮುದಿ ಟಪಾಲಿನವನು ಹೈ ಹಿಲ್ ಬಾರ್ನ್‌ನಲ್ಲಿ 100 ರಿಜಸ್ಟರ್ ಕಾಗದಗಳನ್ನು ಚೀಲದಲ್ಲಿಟ್ಟುಕೊಂಡು ಹೋಗುತ್ತಿದ್ದನು. ಅವನ ಸಮೀಪದಲ್ಲಿ ಒಂದು ಮೋಟಾರ್ ಕಾರು

ಬಂದು ನಿಂತಿತು. ಇಬ್ಬರು ಕೆಳಕ್ಕೆ ನೆಗೆದು ಪೋಲೀಸಿನವನನ್ನು ಬಡಿದು ಚೀಲವನ್ನು ಕಿತ್ತುಕೊಂಡು, ಮತ್ತೆ ಮೋಟಾರು ಏರಿ ಹೊರಟುಹೋದರು.''

ಭಾರತ ಸರ್ಕಾರ ಮಾತ್ರ ಇಂತಹ ಅಪರಾಧಗಳನ್ನೆಲ್ಲಾ ರಾಜಕೀಯ ಮುಖಂಡರು ಮಾತ್ರವೇ ಮಾಡುತ್ತಾರೆಂದೂ ಈ ಅಪರಾಧಗಳು ಭಾರತ ದಲ್ಲಿ ಮಾತ್ರವೇ ನಡೆಯುತ್ತಿವೆಯೆಂದೂ, ಯೋಚಿಸುತ್ತಿದೆ. ''

ಭಾರತ ಸರ್ಕಾರದ ವಿಚಾರವಿರಲಿ. ಅದಂತೂ ಪರದೇಶಿ. ಆದರೆ ಲಾರಿ ಕೂಡ ಎಳೆಯಲು ಏದುವ ಕಂಬಿಗಳನ್ನು ನಮ್ಮ ಹುಡುಗರು ಲಾರಿಯ ಸಹಾಯವಿಲ್ಲದೆ ಮೊಸಳೆ ಮಡುವಿನಲ್ಲಿ ಹಾಕಿದರೆಂದು ಆ ಹುಡು ಗರ ಮೇಲೆ ಮೊಖದ್ದಮೆ ಹೂಡುವ ನಮ್ಮವರಿಗೆ ಏನು ಬಂದಿದೆ!

ಸರ್ಕಾರ ನಾಲ್ಕು ವಿದ್ಯಾರ್ಥಿಗಳ ಮೇಲೆಯೂ ಒಬ್ಬೊಬ್ಬರ ಮೇಲೆ ನಾಲ್ಕು ನಾಲ್ಕು ಐದು ಐದು ಮೊಖದ್ದಮೆಗಳನ್ನು ಹೂಡಿದರು. ಈ ಮೊಖದ್ದಮೆಗಳಿಗೆ ಸಾಕ್ಷಿ ಪೋಲೀಸಿನವರೆ. ಕ್ರಿಮಿನಲ್ ಮೊಖದ್ದಮೆ ಯೊಂದರಲ್ಲಿ ಅಪರಾಧಿ ಸ್ಥಾನದಲ್ಲಿದ್ದ ಮತ್ತೊಬ್ಬನು ಒಬ್ಬ ಸಾಕ್ಷಿ. ಆ ಸಾಕ್ಷಿಗಳನ್ನೂ ಆ ಅಪರಾಧಿ ಫಿರ್ಯಾದಿಗಳನ್ನೂ ನೋಡಿ ಯಾವ ನ್ಯಾಯಾಧಿ ಪತಿಗೂ ನಾಚಿಕೆಯುಂಟಾಗಬೇಕಾದುದೇ. ನಮ್ಮ ನ್ಯಾಯಸ್ಥಾನಗಳು ಜನರನ್ನು ಗಲ್ಲಿಗೇರಿಸಲು ತೋರಿಸುವಷ್ಟು ಆತುರವನ್ನೂ ಉತ್ಸಾಹವನ್ನೂ, ಉಳಿದ ಮೊಖದ್ದಮೆಗಳನ್ನು ಬೇಗ ಬೇಗ ಮುಗಿಸಲು ತೋರಿಸುವುದಿಲ್ಲ. ಆರು ತಿಂಗಳಾಯಿತು, ಏಳು ತಿಂಗಳಾಯಿತು. ವಿದ್ಯಾರ್ಥಿಗಳ ವಿಚಾರಣೆ ನಡೆದುದೂ ನಡೆದುದೇ. ಪೈಕಿ ಒಬ್ಬರ ಮೇಲೆ ಮೊಖದ್ದಮೆಯಲ್ಲಿ ಸಾಕ್ಷಿ ಸರಿಯಾಗಿ ಬರದುದರಿಂದ ಅವರ ಬಿಡುಗಡೆಯಾಯಿತು. ಆದರೆ ಪೋಲೀಸಿನವರು ನ್ಯಾಯಸ್ಥಾನದ ಬಾಗಿಲಿನಲ್ಲಿಯೇ ಅವರನ್ನು ಮತ್ತೆ ಡಿಟೆನ್ಯುವಾಗಿ ಹಿಡಿದರು. ಉಳಿದವರಿಗೆ 3 ತಿಂಗಳು 6 ತಿಂಗಳು ಹಾಕಿದರು. ಮೂರು ತಿಂಗಳ ಶಿಕ್ಷೆ ಕೊಡುವುದಕ್ಕೆ ವಿಚಾರಣೆ 8 ತಿಂಗಳು. ಶಿಕ್ಷೆ ಮೂರು ತಿಂಗಳಾದರೂ ಸೆರೆಮನೆ ವಾಸ 11 ತಿಂಗಳು!

ಜಿಲ್ಲಾಧಿಕಾರಿಗಳಂತಹ ಜವಾಬ್ದಾರಿಯುಳ್ಳವರೂ ಇಂತಹ ವಿಚಾರ ದಲ್ಲಿ ಎಷ್ಟು ನಿರ್ಲಕ್ಷ್ಯದಿಂದ ಇರುತ್ತಾರೆಂಬುದಕ್ಕೆ ಒಂದು ನಿದರ್ಶನ ವನ್ನು ಕೊಡುತ್ತೇನೆ. ಈ ಮೊಖದ್ದಮೆಗಳಲ್ಲಿ ತೀರ್ಮಾನಕ್ಕೆ ತಾ|| 5-6-43ಕ್ಕೆ ಹಿಯರಿಂಗ್ ಇದ್ದಿತು. ವಿದ್ಯಾರ್ಥಿಗಳಿಗೆ ಈ ವರುಷವಾದರೂ

ಸ್ಕೂಲನ್ನು ತಪ್ಪಿಸಿಕೊಳ್ಳಬಾರದು. ಸಕಾಲದಲ್ಲಿ ಸೇರಬೇಕು ಎಂಬ ಕಾತರತೆಯಿದ್ದಿತು. ಮೊದಲು ಅವರನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡುವುದಾಗಿ ಹೇಳಿದ್ದರು. ತಾ|| 31-5-43 ರಲ್ಲಿ ವಿದ್ಯಾರ್ಥಿಗಳು ಜಿಲ್ಲಾಧಿಕಾರಿಗಳಿಗೆ ಮರುದಿವಸ ಸ್ಕೂಲಿಗೆ ತಾವು ಸೇರಬೇಕೆಂದೂ ಆದುದರಿಂದ ಸ್ವಂತ ಜವಾಬ್ದಾರಿಯ ಮೇಲೆ ಬಿಡುಗಡೆ ಮಾಡಬೇಕೆಂದೂ, ತೀರ್ಮಾನ ಹೇಳುವ ದಿನ ತಾವು ಹಾಜರಾಗುವುದಾಗಿಯೂ ಕೇಳಿಕೊಂಡರು. ತಾ|| 17-6-43 ಕ್ಕೆ ಜಿಲ್ಲಾಧಿಕಾರಿಗಳಿಂದ ಪ್ರತ್ಯುತ್ತರ ಬಂತು. ಆಗುವುದಿಲ್ಲವೆಂದು. ಅದಕ್ಕೆ 11 ದಿನಗಳು ಮುಂಚೆಯೇ ಜಡ್ಜ್‌ಮೆಂಟ್ ಆಗಿ ಹೋಯಿತು. ಒಂದುಕಡೆ ಶಿಕ್ಷಣ ಸಚಿವರೂ ನ್ಯಾಯ ಮಂತ್ರಿಗಳೂ ವಿದ್ಯಾರ್ಥಿಗಳನ್ನು ಬಿಡುತ್ತೇವೆ ಎಂದು ಭರವಸೆ ಕೊಟ್ಟುಕೊಂಡೇ ಹೋದರು. ಮತ್ತೊಂದು ಕಡೆ ಪೋಲೀಸರು ಮೊಖದ್ದಮೆಗಳನ್ನು ದಾಖಲ್ಮಾಡುತ್ತಲೇ ನಡೆದರು. ನ್ಯಾಯಾಧಿಪತಿಗಳು ಶಿಕ್ಷೆ ವಿಧಿಸುತ್ತಲೇ ನಡೆದರು. ಸರ್ಕಾರಕ್ಕೆ ಹಲವು ತಲೆ ಹಲವು ನಾಲಗೆಗಳಾದವು. ಒಂದಕ್ಕೊಂದಕ್ಕೆ ಸಂಬಂಧವೂ ಅನ್ವಯವೂ ಇಲ್ಲದೆ ಆಯಾ ಅವಯವಗಳು ಸ್ವೇಚ್ಛೆಯಿಂದಲೇ ತಿರುಗುತ್ತಿದ್ದವು.

ಈ ಹುಡುಗರು ಮಾಡಿದ ನಿಜವಾದ ಅಪರಾಧ ಏನು ಎಂಬುದು ಯಾರಿಗೂ ಸರಿಯಾಗಿ ತಿಳಿಯದು. ಯಾಕೆಂದರೆ ಇಂತಹ ಅಪರಾಧಗಳನ್ನು ವಿಮರ್ಶಿಸಿ ತೀರ್ಪು ಕೊಡುವುದು ನ್ಯಾಯಸ್ಥಾನ. ಆದರೆ ಈಗ ಜನಕ್ಕೆ ನ್ಯಾಯಸ್ಥಾನದ ರಕ್ಷಣೆಯಿಲ್ಲ. ಒಬ್ಬ ನ್ಯಾಯಾಧಿಪತಿ ಆಪಾದಿತರಲ್ಲಿ ತಪ್ಪು ಇಲ್ಲವೆಂದು ಬಿಡುಗಡೆ ಮಾಡಿದರೂ, ಪೋಲೀಸಿನವರ ಹತ್ತಿರ ಜಿಲ್ಲಾಧಿಕಾರಿಗಳ ಡಿಟೆನ್‌ಶನ್ ವಾರಂಟು ಸಿದ್ಧವಾಗಿಯೇ ಇರುತ್ತದೆ. ತೀರ್ಥಪುರಿಯಲ್ಲಿ ಹುಡುಗರು ಹೆಡ್ಮಾಸ್ಟರಿಗೆ ಒಂದು ಸೀರೆಯನ್ನೂ ಬಳೆಯನ್ನೂ ಮುಡಿದುಕೊಳ್ಳುದಕ್ಕೆ ಹೂವನ್ನೂ ಕಳುಹಿಸಿದರು. ಮುಖ್ಯೋಪಾಧ್ಯಾಯರು ನಾಚಿಕೆಯಿಂದ ಹೊಳೆ ಬೀಳುತ್ತೇನೆ ಎಂದು ಓಡಿಹೋಗಿದ್ದರು. ಭಾರತ ಮುಖಂಡರನ್ನು ಸರ್ಕಾರ ನಿಷ್ಕಾರುಣವಾಗಿ ಸೆರೆಹಿಡಿದುದರಿಂದ ಅವರ ಬಿಡುಗಡೆಯಾಗುವವರೆಗೆ ಶಾಲೆಗೆ ಹೋಗುವುದಿಲ್ಲವೆಂದು ಹುಡುಗರು ಮೊಂಡುಬಿದ್ದರು. ಯಾವ ಹುಡುಗರೂ ಶಾಲೆಗೆ ಹೋಗಲಿಲ್ಲ. ಆದರೆ ಒಬ್ಬ ಗೃಹಸ್ಥ ಮಾತ್ರ ಬಲಾತ್ಕಾರವಾಗಿ ತನ್ನ ಮಗಳನ್ನು

ಕರೆದುಕೊಂಡು ಬಂದು ದಾರಿಯನ್ನು ಅಡ್ಡಗಟ್ಟಿಕೊಂಡು ಮಲಗಿದ್ದ ಹುಡುಗರ ಮಧ್ಯೆ ಕಾಲು ಇಟ್ಟುಕೊಂಡು ಹೋಗಿ ಶಾಲೆಗೆ ಸೇರಿಸಿದ. ಆ ಗೃಹಸ್ಥ ಹೋಟಲುಗಳಿಗೆ ಹಾಲುಮಾರಿಕೊಂಡು ಜೀವನ ಮಾಡುತ್ತಿದ್ದ. ಸಾಯಂಕಾಲದ ವೇಳೆಗೆ ಹೋಟಲಿನವರೆಲ್ಲಾ ಅವನನ್ನು ಬಹಿಷ್ಕರಿಸಿದರು. ಅವನ ಹಾಲು ಅವನಿಗೇ ಹಿಂದಕ್ಕೆ ಬಂತು. ಅವನು ಆ ಊರಿನವನಲ್ಲ. ಬೇರೆ ಊರಿನವನು. ಆ ಊರಿನಲ್ಲಿ ಬಾಡಿಗೆ ಮನೆಯಲ್ಲಿ ವಾಸಿಸುತ್ತಿದ್ದ. ಮನೆಯವರು ಬಿಟ್ಟುಹೋಗು ಎಂದರು. ಸಂಧ್ಯಾಕಾಲ ಸಾರ್ವಜನಿಕ ಸಭೆಯಲ್ಲಿ ಹುಡುಗಿಯನ್ನು ಶಾಲೆಗೆ ಕಳುಹಿಸಿದ್ದು ತಪ್ಪಾಯಿತು ನಾಳೆಯಿಂದ ಕಳುಹಿಸುವುದಿಲ್ಲ ಎಂದ. ಇನ್ನೊಬ್ಬ ಗೃಹಸ್ಥರು ವೃತ್ತ ಪತ್ರಿಕೆಗಳ ಏಜೆಂಟರು. ಎಲ್ಲಾ ವಿದ್ಯಾರ್ಥಿಗಳೂ ಶಾಲೆಗಳಿಗೆ ಹೋಗದೆ ಇದ್ದರೂ ತಮ್ಮ ಮಗನೇನೊ ಸ್ಟೇಟ್ ಸೆಕ್ರೆಟರಿ ಆಗುತ್ತಾನೆಂದು ಅವರು ಅವನನ್ನು ಬಲಾತ್ಕಾರವಾಗಿ ಗುದ್ದಿ, ನಾಲ್ಕು ಕಡೆಯೂ ಕಾಯುತ್ತಿದ್ದ ಹುಡುಗರ ಕಣ್ಣಿನಿಂದ ತಪ್ಪಿಸಿ ಶಾಲೆಯೊಳಕ್ಕೆ ಬಿಟ್ಟರು. ಸಂಧ್ಯಾಕಾಲದ ವೇಳೆಗೆ ಹುಡುಗರು ದೊಡ್ಡ ದೊಡ್ಡ ಪಟಗಳಲ್ಲಿ ಈ ಪತ್ರಿಕಾ ಏಜೆಂಟಿನ ಬಗೆ ಬಗೆಯ ಚಲನವಲನಗಳನ್ನೆಲ್ಲಾ ಬರೆದು ಪಟಗಳನ್ನು ಬೀದಿಯ ಸುತ್ತಾ ಮೆರೆವಣಿಗೆ ಮಾಡಿಸಿದರು. ಜನರು ಅವನಿಂದ ಪತ್ರಿಕೆ ಕೊಳ್ಳುವುದನ್ನು ಬಿಟ್ಟರು. ಪತ್ರಿಕಾ ಏಜೆಂಟಿನ ಮನೆಗೆ ಹಾಲು ಮೊಸರು ಯಾವುದೂ ಬರಲಿಲ್ಲ. ಸಾಯಂಕಾಲದ ಸಭೆಯಲ್ಲಿ ಪತ್ರಿಕಾ ಏಜೆಂಟ್ ಕ್ಷಮಾಪಣೆ ಕೇಳಿದ.

ಹುಡುಗರು ತೀರ್ಥಪುರಿಯ ಇಂಜನಿಯರ್ ಆಫೀಸಿನ ಮೇಲೆ ರಾಷ್ಟ್ರೀಯ ಧ್ವಜ ಏರಿಸಿದರು. ಹಳೆಯ ಇಂಜನಿಯರ್ ಸಾಹೇಬರಿಗ ವರ್ಗವಾಗಿದ್ದುದರಿಂದ ಅವತ್ತು ತಾನೆ ಹೊಸಬರು ಬಂದು ಅಧಿಕಾರ ವಹಿಸಿಕೊಂಡಿದ್ದರು. ಅವರು ಆ ಧ್ವಜವನ್ನು ಕಿತ್ತು ಕೆಳಕ್ಕೆ ಎಸೆದರು. ಇಂಜನಿಯರ್ ಆಫೀಸಿನ ಸುತ್ತ ಸಾವಿರಾರು ಸ್ತ್ರೀ ಪುರುಷರು ಮೊಂಡು ಕೂತುಬಿಟ್ಟರು. ಪೋಲೀಸಿನವರು ಕೆಲವರನ್ನು ತುಳಿದುಕೊಂಡೇ ಆಫೀಸಿನೊಳಕ್ಕೆ ಹೋದರು. ಕೆಲವರನ್ನು ದೊಣ್ಣೆಗಳಲ್ಲಿ ಬಡಿದರು. ಆದರೂ ಜನ ಕದಲಲಿಲ್ಲ. ಇಂಜನೀಯರರು ಹೊರಗಡೆ ಬರಲಿಲ್ಲ. ಅವರಿಗೆ ಒಳಕ್ಕೆ ಅನ್ನ ಬರಲಿಲ್ಲ. ಕೊನೆಗೆ ಇಂಜನೀಯರರು ಬಾವುಟವನ್ನು ಮೊದಲಿದ್ದ ಸ್ಥಳಕ್ಕೆ ಏರಿಸಿದರು.

ಆಗ ಜಿಲ್ಲಾಧಿಕಾರಿಗಳು ಪೋಲೀಸ್ ಸೂಪರಿಂಟೆಂಡೆಂಟರು ಮುಂತಾದ ಅಧಿಕಾರಿಗಳಿಗೆಲ್ಲಾ ವಿದ್ಯಾರ್ಥಿಗಳನ್ನು ತೆಗೆದುಕೊಂಡು ಹೋಗಿ ಸ್ಕೂಲಿಗೆ ಸೇರಿಸುವುದೇ ಕೆಲಸವಾಗಿದ್ದಿತು. ತೀರ್ಥಪುರಿಗೆ, ಸ್ವತಃ ಜಿಲ್ಲಾಧಿಕಾರಿಗಳೇ ಎರಡು ಲಾರಿ ಪೋಲೀಸಿನವರೊಂದಿಗೆ ಹೋದರು. ಮುಂದುಗಡೆ ಅವರು ಹೋಗುತ್ತಾ ಪ್ರತಿ ಪೋಷಕರ ಮನೆ ಮುಂದೆಯೂ ಲಾರಿಯನ್ನು ನಿಲ್ಲಿಸಿ ಇಳಿದು "ನಿಮ್ಮ ಹುಡುಗರನು ಶಾಲೆಗೆ ಕಳುಹಿಸಬೇಕು. ಇಲ್ಲದಿದ್ದರೆ ಎಚ್ಚರಿಕೆ" ಎಂದು ಹೆದರಿಸಿ ಹೋಗುತ್ತಿದ್ದರು. ಅವರ ಹಿಂದುಗಡೆ ವಿದ್ಯಾರ್ಥಿಗಳು ಜಾಗಟೆ ಬಡಿದು ಕೊಂಡು ಯಾರೂ ಶಾಲೆಗೆ ಹೋಗಕೂಡದೆಂದು ಕೂಗುತ್ತಾ ಹೋಗು ತ್ತಿದ್ದರು. ಲಾರಿಗಳ ಧೂಳು ಮರೆಯಾದ ಕೂಡಲೆ ಪೋಷಕರಿಗೆ ಜಿಲ್ಲಾ ಧಿಕಾರಿಗಳ ಜ್ಞಾಪಕವೂ ಹೋಗುತ್ತಿದ್ದಿತು. ವಿದ್ಯಾರ್ಥಿಗಳು ಶಾಲೆಗೆ ಹೋಗುತ್ತಿರಲಿಲ್ಲ. ಪೋಲೀಸಿನವರು ಯೋಚನೆ ಮಾಡಿ, ಮುಂದಾಳು ಗಳಾದ ಹುಡುರ ಮೇಲೆ ಎರಡು ಲಾರಿ ತಂತಿ ಕತ್ತರಿಸಿದರೆಂದು ಮೊಖದ್ದಮೆ ಹೂಡಿದ್ದರು.

ಈ ಸಲದ ಚಳುವಳಿಯಲ್ಲಿ ಸಂಸ್ಕೃತ ಮಹಾ ಪಾಠಶಾಲೆಗಳ ವಿದ್ಯಾರ್ಥಿಗಳು ಮುಷ್ಕರ ಹಿಡಿದುದು ಒಂದು ವಿಶೇಷ. ಸಾಧಾರಣ ವಾಗಿ ಸಂಸ್ಕೃತ ಮಹಾ ಪಾಠಶಾಲೆಯ ವಿದ್ಯಾರ್ಥಿಗಳು ಶಾಲೆಗಳನ್ನು ಬಹಿಷ್ಕರಿಸುವುದರಲ್ಲಿ ಭಾಗ ವಹಿಸುವುದಿಲ್ಲ. ಸಂಸ್ಕೃತ ರಾಷ್ಟ್ರವಿದ್ಯೆ. ಪರದೇಶಿ ಶಾಲೆಗಳನ್ನು ಬೇಕಾದರೆ ನೀವು ಬಹಿಷ್ಕರಿಸಿ. ನಮ್ಮ ವಿದ್ಯೆ ನಾವು ಬಿಡುವುದಕ್ಕಾಗುವುದಿಲ್ಲ ಎನ್ನುತ್ತಿದ್ದರು ಅವರು. ಆದರೆ ದೇಶ ಭಕ್ತಿ ಇಲ್ಲದ ಪ್ರಾಣಿ ಯಾವುದಾದರೂ ಇರುವುದೆ? ಸರ್ಕಾರ, ನಾಯಕ ರನ್ನು ಬಂಧಿಸಿದ ದಿನ ಸಂಸ್ಕೃತ ಮಹಾ ಪಾಠಶಾಲೆಯ ವಿದ್ಯಾರ್ಥಿಗಳೂ ಆ ಒಂದು ದಿನದ ಮಟ್ಟಿಗೆ ಶಾಲೆಯನ್ನು ಬಹಿಷ್ಕರಿಸಿದರು. ಮರುದಿನ ಪಾಠಶಾಲೆಗೆ ಹೋಗಬೇಕೆಂಬುದು ಅವರ ಉದ್ದೇಶವಾಗಿದ್ದಿತು. ಆದರೆ ಪಾಠಶಾಲೆಯ ಮುಖ್ಯಾಧಿಕಾರಿಗಳು—ಪರದೇಶಗಳಿಗೆಲ್ಲಾ ಹೋಗಿ ವಿದ್ಯಾರ್ಥಿ ಚಳುವಳಿ ಮುಂತಾದುವನ್ನೆಲ್ಲಾ ನೋಡಿದ್ದಾರೆ—ವಿದ್ಯಾರ್ಥಿ ಗಳ ಈ ಮನೋಭಾವವನ್ನು ತಪ್ಪಾಗಿ ತಿಳಿದುಕೊಂಡು, ಅವರಿಗಾಗಿ ಬಿಟ್ಟಿದ್ದ ವಾಸದ ಕೊಠಡಿಗಳಿಂದ ಅವರ ಹಾಸಿಗೆ ಸಾಮಾನು ಪೆಟ್ಟಿಗೆಗಳ

ನ್ನೆಲ್ಲಾ ಹೊರಕ್ಕೆ ಎಸೆಯಿಸಿ ಪ್ರತಿ ಕೊಠಡಿಯ ಬಾಗಿಲಿನಲ್ಲಿಯೂ ಎರಡೆರಡು ಬಂದೂಕದ ರಿಸರ್ವ್ ಪೋಲೀಸನ್ನು ನಿಲ್ಲಿಸಿದರು. ನಮ್ಮ ಪೋಲೀಸಿನ ಬಂದೂಕಕ್ಕೆ ಉಪಯೋಗ ನಮ್ಮ ಜನಗಳ ಮೇಲೆಯೆ. ಒಂದು ದಿನದ ಮಟ್ಟಿಗೆ ಮುಷ್ಕರ ಹಿಡಿದಿದ್ದ ವಿದ್ಯಾರ್ಥಿಗಳು ಮುಷ್ಕರ ವನ್ನೇ ಮುಂದುವರಿಸಿದರು.

ಆಗ ಸಂಸ್ಕೃತ ವಿದ್ಯಾರ್ಥಿಗಳಿಗೆ ಪರೀಕ್ಷೆಯ ಕಾಲ. ಆದರೆ ವಿದ್ಯಾರ್ಥಿಗಳು ಪರೀಕ್ಷೆಗೆ ಬರಲಿಲ್ಲ. ಉಪಾಧ್ಯಾಯರಿಗೂ ಪೋಲಿಸಿನವರಿಗೂ ಅವರನ್ನು ಹಿಡಿದುಕೊಂಡು ಬಂದು ಪರೀಕ್ಷಾ ಮಂಟಪಕ್ಕೆ ಸೇರಿಸುವುದೇ ಕಸಬಾಗಿ ಹೋಯಿತು. ಸಂಸ್ಕೃತ ವಿದ್ಯಾರ್ಥಿಗಳು—ಅದರಲ್ಲಿಯೂ ಸ್ವಲ್ಪ ವಯಸ್ಸಾದವರು—ಸೆರೆಮನೆ ಎಂದರೆ ಹೆದರುತ್ತಿದ್ದರು. ಪೋಲಿಸಿನವರು ಪ್ರತಿಮನೆಗೂ ಹೋಗಿ ವಿದ್ಯಾರ್ಥಿಯನ್ನು ಹೆಸರು ಹಿಡಿದು ಈಚೆಗೆ ಕರೆಯುವುದು; ಅವನು ಹೊರಗೆ ಬಂದ ಕೂಡಲೇ ಪರೀಕ್ಷೆಗೆ ಹೋಗುತ್ತೀಯಾ ಇಲ್ಲವೇ ಜೈಲಿಗೆ ಹೋಗುತ್ತೀಯ'' ಎಂದು ಕೇಳುವುದು. ಜೈಲಿನ ಭಯ ಹೆಚ್ಚಾಗಿದ್ದ ಅವರನ್ನು ಹೀಗೆ ಪರೀಕ್ಷೆಗೆ ಸೇರಿಸುತ್ತಿದ್ದರು. ಒಂದು ಸಲ ಒಬ್ಬ ವಿದ್ಯಾರ್ಥಿ ತನ್ನ ಉಪಾಧ್ಯಾಯರ ಧ್ವನಿಕೇಳಿ ಮನೆಯಿಂದ ಹೊರಕ್ಕೆ ಬಂದನು. ಬಾಗಿಲಿನಲ್ಲಿ ಇಬ್ಬರು ಪೋಲಿಸಿನವರೂ ಉಪಾಧ್ಯಾಯರೂ ಅವನನ್ನು ಪರೀಕ್ಷೆಗೆ ಕರೆದುಕೊಂಡು ಹೋಗಲು ಬಂದು ನಿಂತಿದ್ದರು. ಅವನಿಗೆ ಜೈಲಿಗೆ ಹೋಗಲೂ ಇಷ್ಟ ವಿರಲಿಲ್ಲ. ಪೋಲಿಸಿನವರನ್ನು ಕಂಡ ಕೂಡಲೆ ಅವನು ಒಂದೇ ಏಟಿಗೆ ಓಟವನ್ನು ಪ್ರಾರಂಭಿಸಿದನು. ಕೊನೆಯಲ್ಲಿ ಸಂಸ್ಕೃತ ವಿಧ್ಯಾರ್ಥಿಗಳನ್ನೂ ಸೆರೆಮನೆಗೆ ಹಾಕಿದರು. ಪ್ರತಿದಿನವೂ ಉಪಾಧ್ಯಾಯರು—ಜರ್ಬಾಗಿ ಕಂಬಿ ಪಂಚೆ ಶಾಲು ನಾಮ ಗಂಧ ಅಕ್ಷತೆ ಧರಿಸಿ—ಸೆರೆಮನೆಗೆ ಹೋಗಿ ವಿದ್ಯಾರ್ಥಿಗಳಿಗೆ 1 ಗಂಟೆ ಎರಡು ಗಂಟೆ ಸಂಸ್ಕೃತ ಶ್ಲೋಕಗಳೊಂದಿಗೆ ಉಪನ್ಯಾಸಮಾಡಿ ಬರುತ್ತಿದ್ದರು. ಸಂಸ್ಕೃತ ವಿದ್ಯಾರ್ಥಿಗಳಲ್ಲಿ 5 ವಯಸ್ಸಿನಿಂದ ಹಿಡಿದು 75 ವಯಸ್ಸಿನವರೆಗೂ ಜನ ಇದ್ದಾರೆ. ಕೆಲವು ಮುದಿ ವಿದ್ಯಾರ್ಥಿಗಳು 'ಇದುವರೆಗೆ ಪರೀಕ್ಷೆಗೆ ಕಟ್ಟಿ ನಮಗೆ ಸಾಕಾಯಿತು. ಈ ಹುಡುಗರ ಜತೆಯಲ್ಲಿ ಕುಳಿತರೆ ನಮಗೆ ಖಂಡಿತ ಪರೀಕ್ಷೆಯಲ್ಲಿ ತೇರ್ಗಡೆ ಯಾಗಿ ಬಹುಮಾನ ದೊರೆಯುವುದಿಲ್ಲ. ಈ ಸಲ ಹುಡುಗರಿಲ್ಲ. ನಾವು

ಪರೀಕ್ಷೆಗೆ ಕುಳಿತುಕೊಳ್ಳಬೇಕೆಂದು ಕುಳಿತೇಬಿಟ್ಟರು. ಅವರಿಗೆಲ್ಲಾ ತೇರ್ಗಡೆ ಆಗಿಯೂ ಆಯಿತು.

ತೀರ್ಥಪುರದ ಹುಡುಗರನ್ನು ವಿಚಾರಣೆ ನಡೆಸುತ್ತಿರುವಾಗ ಇಂತಹ ಮೊಖದ್ದಮೆಗಳಲ್ಲಿ ಪೋಲಿಸಿನವರ ಹೊರತು ಮತ್ತಾರೂ ಸಾಕ್ಷ್ಯಹೇಳಲು ಬರದಿರುವ ಕಾರಣ ಗೊತ್ತಾಯಿತು. ಯಾಕೆಂದರೆ ಈ ಬಗೆಯ ಮೊಖದ್ದಮೆಗಳೆಲ್ಲಾ ಬರಿಯ ಸುಳ್ಳಿನ ಕಂತೆಗಳೇ ಆಗಿರುತ್ತವೆ. ತೀರ್ಥಪುರದ ವಿದ್ಯಾರ್ಥಿಗಳ ಮೊಖದ್ದಮೆಯಲ್ಲಿ ಮೊಸಳೆ ಮಡುವಿನಲ್ಲಿ ಎರಡು ಲಾರಿ ತಂತಿ ಸಿಕ್ಕಿದುದಲ್ಲದೆ ಅವರುಗಳ ಕೊಠಡಿಯನ್ನು ಹುಡುಕಿದಾಗ ಇನ್ನೂ ಏನೇನೊ ಸಿಕ್ಕಿತು. ಕಟಾಂಜನದಲ್ಲಿ ನಿಂತ ಪೋಲಿಸ್ ಜವಾನನನ್ನು ಇನಿಸ್ಪೆಕ್ಟರು ಇವರ ಕೊಠಡಿಯಲ್ಲಿ ಏನೇನು ಸಿಕ್ಕಿತು. ಎಂದು ಕೇಳಿದಾಗ "ಕರ್ನಾಟಕ ವೀರರೇ ಏಳಿರೇಳಿ ಒಂದು ಸಿಕ್ಕಿತು." ಎಂದನು. ನ್ಯಾಯಾಧಿಪತಿಗಳು "ಅದೇನು ಆಯುಧವೇ ಬಂದೂಕವೇ ಬಾಂಬೇ" ಎಂದು ಕೇಳಿದರು. ಸಾಕ್ಷಿಗೆ ಅದು ಸರಿಯಾಗಿ ತಿಳಿದಿರಲಿಲ್ಲ. ಅವನು ಅದೊಂದು ಕಾಗದ" ಎಂದನು. ನ್ಯಾಯಾಧಿಪತಿಗಳು "ಆ ಕಾಗದ ಯಾಕೆ ಇವರ ಕೈಲಿ ಇರಬಾರದು?" ಎಂದರು. ಸಾಕ್ಷಿ ಪೆಚ್ಚಾದನು. ಇನಿಸ್ಪೆಕ್ಟರು ಅಪರಾಧಿಯನ್ನು ತೋರಿಸಿ ಇವರು ಯಾರು ಎಂದರು. ಸಾಕ್ಷಿಯು ಕಾಂಗ್ರೆಸ್‌ನವರು ಎಂದನು. ಇನಿಸ್ಪೆಕ್ಟರು ಇವರು ಏನುಮಾಡಿದರು. ಎಂದು ಕೇಳಿದರು. ಸಾಕ್ಷಿಯು ಲೆಕ್ಚರ್ ಎಂದ. ಇನಿಸ್ಪೆಕ್ಟರು "ಏನೆಂತ."

ಸಾಕ್ಷಿ—ಅದೇ ಲೆಕ್ಚರ್, ಹೆಂಡಕುಡೀಬೇಡಿ ಅಂತ

ಇನಿಸ್ಪೆಕ್ಟರ್—ಆಮೇಲೆ

ಸಾಕ್ಷಿ—ಅದೇ; ಖಾದಿ ಹಾಕ್ಕೊಳಿ

ಇನಿಸ್ಪೆಕ್ಟರ್—ಆಮೇಲೆ

ಸಾಕ್ಷಿ—ಅದೇ ಸಾರ್; ಒಗ್ಗಟ್ಟಾಗಿರಬೇಕು.

ಇನಿಸ್ಪೆಕ್ಟರ್—ಆಮೇಲೆ

ಸಾಕ್ಷಿ—ಆಮೇಲೆ; ಸ್ವರಾಜ್ಯ.

ಅವನ ಕೈಯಿಂದ ಜವಾಬ್ದಾರಿ ಸರ್ಕಾರ ಅಥವ ಕಾನೂನಿಗೆ ವಿರುದ್ಧವಾಗಿ ಏನೋ ಹೇಳಿದ್ದಾನೆ ಎಂದು ಹೇಳಿಸಬೇಕೆಂಬುದು ಇನಿಸ್ಪೆಕ್ಟರ ಇಚ್ಛೆ. ಆದರೆ ಸಾಕ್ಷಿಗೆ ಅದು ತಿಳಿಯಲಿಲ್ಲ. ಇನಿಸ್ಪೆಕ್ಟರಿಗೆ ಬೇಜಾರಾಗಿ "ನಿನ್ನ ವಿದ್ಯೆ ಏನು" ಎಂದು ಕೇಳಿ ಸುಮ್ಮನಾದರು.

ಪೋಲಿಸಿನವರು ಬರಿಯ "ಕರ್ನಾಟಕ ವೀರರೇ ಏಳಿರೇಳಿ" ಮಾತ್ರ ತೆಗೆದುಕೊಂಡು ಹೋಗುತ್ತಿದ್ದರೆಂದಲ್ಲ. ಇಂಜನಿಯರಿಂಗ್ ಕಾಲೇಜ್ ವಿದ್ಯಾರ್ಥಿಯೊಬ್ಬನ ಬಳಿ ಇದ್ದ ಈ ಕೆಳಗಿನ ಮಾಲುಗಳನ್ನೆಲ್ಲಾ ಪೋಲಿಸರು ಜಪ್ತಿಮಾಡಿಕೊಂಡು ಹೋದರು. ಹದಿನೈದು ತಿಂಗಳಕಾಲ ಆ ವಿದ್ಯಾರ್ಥಿಯನ್ನು ಸೆರೆಯಲ್ಲಿಡಲು ಈ ಕೆಳಗಿನ ಸಾಮಾನುಗಳೇ ಸಾಕಾದವು.

1 2 ರೀಮು ಬಿಳಿಯ ಕಾಗದ

2 2 ಡಜನ್ ಸೇಫ್ಟಿ ಪಿನ್‌ಗಳು

3 ಲಾ, ವಾಸು ಗೋಪಿ ಮತ್ತು ಶಂಕರ್ ಅವರ ವ್ಯಂಗ್ಯ ಚಿತ್ರಗಳು

4 ಭಾರತದಿಂದ ತೊಲಗಿ ಎಂಬ ಬಿಲ್ಲೆಗಳು

5 " ಕ್ರಾಂತಿ " ಪತ್ರಿಕೆ

6 ಮಾರ್ಕ್ಸ್ ಮೇಲೆ ಒಂದು ಪುಸ್ತಕ

7 ಚಿಲ್ಲರೆ ದುಡ್ಡು 15 ರೂ. 1 ಆ. 6 ಪೈ

ಇಷ್ಟು ಭಾರತ ರಕ್ಷಣೆಗೆ ವಿರೋಧವಾದ ಸಾಮಾನು ಆ ವಿದ್ಯಾರ್ಥಿಯಲ್ಲಿ ಸಿಕ್ಕಿದಕೂಡಲೇ ಅವನನ್ನು ಡಿಟೆನ್ಯುವಾಗಿ ಮೊದಲು ಹಾಕಿದರು. ಆಮೇಲೆ ಮೊಖದ್ದಮೆ ಹಾಕಿದರು. $1\frac{1}{2}$ ತಿಂಗಳಾದನಂತರ ಮೊಖದ್ದಮೆ ಹಿಂದಕ್ಕೆ ತೆಗೆದುಕೊಂಡರು. ಆ ವಿದ್ಯಾರ್ಥಿ ಹೋಗಿ ಹಳೆಯ ಫೀಜನ್ನೆಲ್ಲಾ ಕೊಟ್ಟು ಕಾಲೇಜು ಸೇರಿದ. ಮತ್ತೆ ಅವನ ಮೇಲೆ ಒಂದು ಮೊಖದ್ದಮೆ ದಾಖಲ್ಮಾಡಿದರು. ಮೊಖದ್ದಮೆ ವಜಾ ಆಯಿತು. ಮತ್ತೆ ಡಿಟೆನ್ಯುವಾಗಿ ಇಟ್ಟರು. ಇನ್ನೂ ಎಂತೆಂತಹ ವಿಕಟನರ್ತನಗಳನ್ನು ನೋಡಿದೆವೋ!

ಒಬ್ಬೊಬ್ಬ ಜಿಲ್ಲಾಧಿಕಾರಿಗಳು ಒಂದೊಂದು ಬಗೆಯ ಸರ್ಕಾರವನ್ನು ನಡೆಸುತ್ತಾರೆ ಎಂಬುದು ಜೈಲಿನಲ್ಲಿರುವಾಗ ಚೆನ್ನಾಗಿ ಅನುಭವಕ್ಕೆ ಬರುತ್ತದೆ. ಡಿಟೆನ್ಯುಗಳನ್ನು ಪೆರೋಲ್‌ಮೇಲೆ ಬಿಡುವುದು ಸರ್ಕಾರ ಅನುಸರಿಸಿದ ಒಂದು ಪದ್ಧತಿ. ಈ ಪದ್ಧತಿಯಲ್ಲಿ ಯಾವ ಯಾವ ರೀತಿ ದರ್ಬಾರು ಮಾಡಬಹುದೋ ಆ ರೀತಿಯೆಲ್ಲಾ ಜಿಲ್ಲಾಧಿಕಾರಿಗಳು ಮಾಡಿದರು. ಸರ್ಕಾರ ಇದಕ್ಕೆ ಯಾವ ರೂಲ್ಸನ್ನೂ ಮಾಡಿದಂತೆ ತೋರುವುದಿಲ್ಲ. ಕೆಲವು ಜಿಲ್ಲಾಧಿಕಾರಿಗಳು ಎಂತಹ ಮುಖಂಡರಿಗೂ ಪೆರೋಲ್ ಕೊಟ್ಟರು. ತಮ್ಮನ ಮಗಳ ಮದುವೆ, ತಂಗಿಯ ಮಗಳ ಮದುವೆ

ಇಂತಹ ಸಮಾರಂಭಗಳಿಗೂ ಪೆರೋಲ್ ಕೊಟ್ಟರು. ಹಾಸ್ಯಪುರಿಯ ಜಿಲ್ಲಾಧಿಕಾರಿಗಳು ರಘುವಿನ ತಾಯಿಯ ಮೊದಲನೆಯ ವರುಷದ ಶ್ರಾದ್ಧಕ್ಕೆ ಸಹ ಪೆರೋಲ್ ಕೊಡಲಿಲ್ಲ. ಕೆಲವು ಜಿಲ್ಲೆಗಳವರಿಗೆ ಕೇಳಿದಾಗ ಲೆಲ್ಲಾ ಪೆರೋಲು. ಕೆಲವು ಜಿಲ್ಲೆಯವರಿಗೆ ಏನುಮಾಡಿದರೂ ಇಲ್ಲ. ಸುರಪುರ ಜಿಲ್ಲೆಯಲ್ಲಿ ಒಬ್ಬ ಪಟೇಲನನ್ನು ಸರ್ಕಾರ ದಸ್ತಗಿರಿ ಮಾಡಿ ಡಿಟೆನ್ಯುವಾಗಿ ತಂದು ಇಟ್ಟರು. ಅವನ ಸ್ಥಳದಲ್ಲಿ ಅವನ ದಾಯಾದಿ ಒಬ್ಬ ಪಟೇಲ್ ಆದ. ಅವನು ಪೋಲಿಸಿನವರನ್ನು ಸರಿಮಾಡಿಕೊಂಡು, "ಪಟೇಲನನ್ನು ಬಿಟ್ಟರೆ ದೇಶ ಹಾಳಾಗುತ್ತದೆ" ಎಂದೇ ಯಾವಾಗಲೂ ವರದಿ ಬರೆಸುತ್ತಿದ್ದ. ಜಿಲ್ಲಾಧಿಕಾರಿಯಂತಹ ಉನ್ನತಾಧಿಕಾರಿಗೂ ತನ್ನ ಅಧಿಕಾರವನ್ನು ಚಲಾಯಿಸುವ ಧೈರ್ಯ ಈ ದೇಶದಲ್ಲಿ ಇಲ್ಲ. ಮನುಷ್ಯನ ಯೋಗ್ಯತೆ ಘನತೆ ಚೆನ್ನಾಗಿ ತಿಳಿದಿದ್ದರೂ, ಪೋಲಿಸ್ ಕಾನಸ್ಟೆಬಲ್‌ನ ವರದಿಯ ಮೇಲೆ ಅವಲಂಬಿಸುವುದೇ ಅವರ ಚಾಲು. ಈ ಪಟೇಲನಿಗೆ ವಯಸ್ಸು 65 ಆಗಿದ್ದಿತು. ಎರಡು ಹೆಣ್ಣು ಹುಡುಗಿಯರು ಮದುವೆಗೆ ನೆರೆದಿದ್ದರು. ಮದುವೆ ಮಾಡುವುದಕ್ಕು ಆತನಿಗೆ ಪೆರೋಲ್ ಸಿಕ್ಕಲಿಲ್ಲ. ಮದುವೆಯೂ ಗೊತ್ತಾಗಿ ಅವನು ಹೋಗದೆ ನಡದೇ ಹೋಯಿತು. ಹಾಸ್ಯಪುರಿಯ ಜಿಲ್ಲಾಧಿಕಾರಿಗಳು, ಒಬ್ಬ ಡಿಟೆನ್ಯುವಿನ ಹೆಂಡತಿಯವರಿಗೆ ಸಿಡಬು ಬಂದಿದೆ ಎಂದು ತಿಳಿದು ಪೆರೋಲಿಗೆ ಬರೆದಾಗ ಸಿಡುಬು ವಾಸಿಯಾದ ಒಂದು ತಿಂಗಳಿನನಂತರ ಪೆರೋಲ್ ಕೊಟ್ಟರು. ರಘು ಎಂಬ ಡಿಟೆನ್ಯುವಿನ ತಂದೆ 89 ವರುಷದ ಮುದುಕರು ವ್ಯಾಧಿಗ್ರಸ್ತರಾಗಿ ಆಸ್ಪತ್ರೆಯಲ್ಲಿ ಬಿದ್ದಿರುವಾಗ ಪೆರೋಲ್‌ಗೆ ಬರೆದುಕೊಂಡುದಕ್ಕೆ, ಪ್ರತ್ಯುತ್ತರ ಬರುವುದು ಹತ್ತು ದಿನವಾಯಿತು. ನಮ್ಮ ದೇಶದ ಅಧಿಕಾರಿಗಳೇ ಆದುದರಿಂದ ಎಷ್ಟೆಷ್ಟು ಸಾಧ್ಯವೋ ಅಷ್ಟೆಲ್ಲಾ ನಮಗೆ ಕಷ್ಟವನ್ನು ಕೊಟ್ಟರು.

ಪೆರೋಲ್ ವಿಚಾರದಲ್ಲಿ ಕೊನೆಯವರೆಗೆ ಸರ್ಕಾರದ ನೀತಿ ಸ್ಪಷ್ಟವಾಗಲೇ ಇಲ್ಲ. ಜಿಲ್ಲಾಧಿಕಾರಿಗಳು "ಪೋಲಿಸಿನವರು ಹೇಳಿದರು" ಎಂದುಕೊಂಡು ಅನೇಕ ಹಳ್ಳಿಯವರನ್ನೆಲ್ಲಾ ಡಿಟೆನ್ಯುಗಳಾಗಿ ತಂದು ಹಾಕಿಬಿಟ್ಟಿದ್ದರು. ಅವರಲ್ಲಿ ಅನೇಕರಿಗೆ ತಾವು ಒಳಕ್ಕೆ ಬರುವವರೆಗೆ ತಾವು ಯಾಕೆ ಒಳಕ್ಕೆ ಹೋಗುತ್ತಿದ್ದೇವೆ ಎಂಬುದೂ ತಿಳಿದಿರಲಿಲ್ಲ.

ಅವರು ಪೆರೋಲ್‌ಮೇಲೆ ಹೋದರೆ ಪೆರೋಲ್ ವಾಯಿದೆಯನ್ನು ಮುಂದು ವರಿಸಿ ಬಿಡುತ್ತಿದ್ದರು. ಸೆರೆಮನೆಯ ಸೂಪರಿಂಟೆಂಡೆಂಟರಿಗೆ "ನಾನು ದೇಹಾರೋಗ್ಯದ ನಿಮಿತ್ತ ಹುಬ್ಬಳ್ಳಿಗೆ ಹೋಗುತ್ತೇನೆ. ಬರುವುದು ಹದಿನೈದು ದಿನವಾಗುತ್ತೆ. ನನ್ನ ರಜ ಮುಂದುವರಿಸಿ ಕೊಡಬೇಕಾಗಿ ಅರಿಕೆ" ಎಂದು ಬರೆದು ಹಾಕಿಬಿಡುತ್ತಿದ್ದರು. ಸೂಪರಿಂಟೆಂಡೆಂಟರಿಗೆ ಏನು ಮಾಡುವುದಕ್ಕೂ ತೋಚುತ್ತಿರಲಿಲ್ಲ. ಆದರೆ ನಮ್ಮ ಜಿಲ್ಲೆ ಪರೋಲ್ ಮೇಲೆ ಹೋದವರನ್ನು ಮತ್ತೆ ದಸ್ತಗಿರಿ ಮಾಡುವುದರಲ್ಲಿಯೂ ಹೆಸರಾಯಿತು. ಈ ಸಲದ ಚಳುವಳಿಯಲ್ಲಿ ಪೆರೋಲ್ ಮೇಲೆ ಹೋದವ ರಿಗೆ, ಅವರ ಪೆರೋಲ್ ಹೆಚ್ಚಿದೆಯೋ ಇಲ್ಲವೇ ಎಂಬ ಪ್ರತ್ಯುತ್ತರ ಕೂಡ ಕೊಡದೆ ದಸ್ತಗಿರಿ ಮಾಡಿದ ಕೀರ್ತಿಯೂ ನಮ್ಮ ಜಿಲ್ಲೆಗೇಯೆ.

ಕೇಂದ್ರ ಕಾರಾಗಾರದಲ್ಲಿ ಹೊರತು ಉಳಿದ ಕಡೆ ಸೆರೆಮನೆಯ ಶುಚಿ ಆರೋಗ್ಯ ಬಹಳ ಹೊಲಸು. ಬರಿಯ ಕ್ರಿಮಿನಲ್ ಅಂಡರ್ ಟ್ರಯಲ್ ಖೈದಿಗಳಿಗಾಗಿ ಸಾಧಾರಣವಾಗಿ ಚಿಕ್ಕದಾಗಿ ಕಟ್ಟಿರುವ ಆ ಸೆರೆಮನೆಗಳಲ್ಲಿ ನೂರಾರು ರಾಜಕೀಯ ಖೈದಿಗಳು ಸೇರಿದ ಕೂಡಲೇ ಅಶುದ್ಧಿ ಹೆಚ್ಚಾಗು ತ್ತಿದ್ದಿತು. ಅಂತಹ ವೇಳೆಗಳಲ್ಲಿ ಸರ್ಕಾರವನ್ನೇ ನೆಚ್ಚಿಕೊಂಡರೆ ಕೆಲಸ ನಡೆಯುತ್ತದೆಯೆ? ಡಿಟೆನ್ಯುಗಳು ಸೆರೆಮನೆಯ ಪರಿಶುದ್ಧಿಯ ಕಡೆ ನೋಡಿಕೊಳ್ಳಲು ತಮ್ಮಲ್ಲಿಯೇ ಒಬ್ಬರನ್ನು ನಿಯಮಿಸುತ್ತಿದ್ದರು. ಈ ಸಲದ ಚಳುವಳಿಯಲ್ಲಿ ಮುಖ್ಯವಾಗಿ ಈ ಕೆಲಸವನ್ನು ನಿರ್ವಹಿಸಿದವರು ಮಾಗಡಿ ಆರಾಜಯ್ಯ. ಈ ಪ್ರಾಣಿ ನೋಡುವುದಕ್ಕೆ ಆರು ಅಡಿ ಎತ್ತರ ವಾಗಿ ಜರ್ಮನಿಯವನಿದ್ದಂತೆ ಕಾಣುತ್ತಾರೆ. ಹಿಂದೆ 1938–39 ಎರಡು ಚಳುವಳಿಗಳಲ್ಲಿಯೂ ಭಾಗವಹಿಸಿ ಸೆರೆವಾಸ ಅನುಭವಿಸಿದರು. ಇದ್ದ ಆಸ್ತಿ ಕಳೆದುಕೊಂಡರು. 42ನೆಯ ಆಗಸ್ಟ್‌ನಲ್ಲಿ, ಸರ್ಕಾರದ ದೃಷ್ಟಿಗೆ ಎಲ್ಲವೂ ತಲೆಕೆಳಗಾಗಿ ಕಾಣುತ್ತಿದ್ದಾಗ ಆರಾಜಯ್ಯನವರೂ ಕರ್ಣಪ್ಪ ನವರೂ ತಾವೇ ಮ್ಯಾಜಿಸ್ಟ್ರೇಟರು ಎಂದುಕೊಂಡರಂತೆ. ಕೂಡಲೇ ಇಬ್ಬರನ್ನೂ ಹಿಡಿದುಹಾಕಿದರು. ಪ್ರತಿದಿನವೂ ಸೆರೆಮನೆಯ ಅಧಿಕಾರಿ ಗಳಿಂದ ಫಿನಾಯಿಲ್ ತೆಗೆದುಕೊಳ್ಳುವುದು; ಎಂಜಲು ಎಲೆಗಳನ್ನು ಎತ್ತಿಸಿ ಹೊರಕ್ಕೆ ಹಾಕಿಸಿ ಫಿನಾಯಿಲ್‌ನಿಂದ ತೊಳೆಸುವುದು. ಸಹಾಯಕ ರಾದ ಕ್ರಿಮಿನಲ್ ಖೈದಿಗಳು ಕೆಲಸಕ್ಕೆ ಬರದೇ ಇದ್ದರೆ ತಾನೇ ಪರಕೆ

ಹಿಡಿದುಕೊಂಡು ಗುಡಿಸುವುದು; ಇವು ಈ ಆರೋಗ್ಯ ಸಚಿವರ ಹುದ್ದೆಯಾಗಿದ್ದವು. ಈ ಸಲ ಸೆರೆಯಲ್ಲಿ ಒಂದು ವಾರ ಉಪವಾಸವಾಡಿದರೂ ಈ ಪ್ರಾಣಿಯು ಶಕ್ತಿ ಕಡಮೆಯಾಗಲಿಲ್ಲ. ಬರಬರುತ್ತಾ ಜೈಲಿನಲ್ಲಿ ಡಿಟೆನ್ಯುಗಳ ಸಂಖೆ ಹೆಚ್ಚಾದಂತೆ, ನಿತ್ಯಾ ಅಡಿಗೆ, ಊಟ, ಬಚ್ಚಲು, ಕೊಟ್ಟಿಗೆ, ಮೂತ್ರಿ, ಪಾಯಖಾನೆ, ಗೃಹಗಳನ್ನು ನಿತ್ಯಾ 4 ಸಲ 5 ಸಲ ತೊಳೆಯುವ ಆವಶ್ಯಕತೆಯುಂಟಾಯಿತು. ಆರಾಜಯ್ಯ ಮೂರು ಹೊತ್ತೂ ಸೆರೆಮನೆಯ ಅಧಿಕಾರಿಗಳ ಹತ್ತಿರ ಫಿನಾಯಿಲ್ ಕುರಿತು ಚರ್ಚಿಸುತ್ತಿದ್ದುದರಿಂದ ಇವರನ್ನು ಫಿನಾಯಿಲ್ ಎಂದೇ ಕರೆಯ ತೊಡಗಿದ್ದೆವು.

ಸೆರೆಮನೆಯಲ್ಲಿ ಡಿಟೆನ್ಯುಗಳ ಆರೋಗ್ಯ ಈಸಲ ಸರಿಯಾಗಿರುವುದಕ್ಕೆ ಮುಖ್ಯ ಕಾರಣ ಆರೋಗ್ಯದ ಅಧಿಕಾರಿಗಳು ಮತ್ತು ರೇಶನ್ ಮತ್ತು ಅಡಿಗೆ ಮನೆಯ ಅಧಿಕಾರಿಗಳು. ಸೆರೆಮನೆಗಳಿಗೆ ಕಂಟ್ರ್ಯಾಕ್ಟರು ಇರುತ್ತಾರಷ್ಟೆ. ಅವರು ಸೆರೆಮನೆಗೆ ಅರ್ಹರಾಗಿಯೇ ಇರುತ್ತಾರೆ. ಅನೇಕ ವೇಳೆ ಸೆರೆ ಮನೆಗಳಲ್ಲಿರುವ ಖೈದಿಗಳಿಗೂ ಅಧಿಕಾರಿಗಳಿಗೂ ವ್ಯತ್ಯಾಸ ತಿಳಿಯುವುದಿಲ್ಲ. ಖೈದಿಗಳಿಗೆ ಬರುವ ಅನೇಕ ಸಾಮಾನುಗಳು ಕಳವಾಗುತ್ತವೆ. ಒಂದು ಬುಟ್ಟಿ ಹಣ್ಣು ಬಂದರೆ ಅರ್ಧ ಕಳವಾಗುತ್ತದೆ. ಖೈದಿ ಸೆರೆಯೊಳಕ್ಕೆ ಬರುವಾಗ ಜತೆಯಲ್ಲಿ ಒಳ್ಳೆಯ ಜರಿಯ ಪಂಚೆ ಶಾಲು ಮುಂತಾದ ಸಾಮಾನು ತಂದರೆ ಅವುಗಳನ್ನೆಲ್ಲಾ ಆಫೀಸಿನಲ್ಲಿಯೇ ಇಡಿಸುತ್ತಾರೆ. ಅವನ ಬಟ್ಟೆ ಅವನಿಗೆ ಕೊಡುವುದಿಲ್ಲ. ರಾಜಕೀಯ ಖೈದಿಗೂ ಕೊಡುವುದಿಲ್ಲ. ಸೆರೆ ವಾಸವನ್ನು ಮುಗಿಸಿಕೊಂಡು ಅವನು ಹೊರಡುವ ವೇಳೆಗೆ ಪಾಪ ಆ ಬಟ್ಟೆಗಳು ಗುರುತೇ ಸಿಕ್ಕದಷ್ಟು ಹಳೆಯುವಾಗಿರುತ್ತವೆ. ಕೆಲವು ಪೂರ್ಣವಾಗಿ ನಶಿಸಿ ಕರಗಿಯೇ ಹೋಗುತ್ತವೆ. ಸ್ವಲ್ಪ ವಿದ್ಯಾವಂತ ಸಾಹಿತ್ಯ ಕಲಾಭಿಜ್ಞನಾದ ಅಧಿಕಾರಿ ಸೆರೆಮನೆಯ ಯಜಮಾನ; ದಯಾದಾಕ್ಷಿಣ್ಯ ಉಂಟು ಎಂದು ಕೊಂಡರೆ ಆ ಲಾಭ ದೊರೆಯುವುದಿಲ್ಲ. ಸೆರೆಯಾಳುಗಳಿಗೆ ಬರುವ ಪುಸ್ತಕ ಸೀಸದ ಕಡ್ಡಿಗಳನ್ನೆಲ್ಲಾ ಅವನೇ ತೆಗೆದು ಇಟ್ಟುಕೊಳ್ಳುತ್ತಾನೆ. ಯಾವ ಒಳ್ಳೆಯ ಪುಸ್ತಕ ಬರಲಿ ತನ್ನ ಸರಸ್ವತೀ ಭಂಡಾರಕ್ಕೇ ಸೇರಿಸಿಕೊಂಡು ಬಿಡುತ್ತಾನೆ. ಹೀಗೆ ತಮಗೆ ಬಂದ ಪುಸ್ತಕಗಳೆಲ್ಲಾ ಮಾಯವಾಗುತ್ತಿದ್ದುದನ್ನು ನೋಡಿದ ಡಿಟೆನ್ಯುಗಳು "ಸದ್ಯ ನಮಗೆ ಸಾಹಿತಿಗಳು ಅಧಿಕಾರಿಗಳಾಗುವುದು ಬೇಡ. ಮೊದಲೇ

ಅಧಿಕಾರದ ಜರಿ ರುಮಾಲಿನ ಹೆಮ್ಮೆ. ಮೇಲೆ ಸಾಹಿತಿ ಎಂಬ ಭೂತ ತಲೆಯ ಮೇಲೆ ಸವಾರಿ. ಇವುಗಳ ಜತೆಗೆ ದೇವರ ದಯದಿಂದ ಸ್ನೇಹಿತ ರಾರಾದರೂ ಒಂದು ಬುಕ್ಕು ಕಳುಹಿಸಿದರೆ ತನ್ನ ಪುಸ್ತಕ ಭಂಡಾರಕ್ಕೆ ಅದನ್ನು ಸೇರಿಸುವ ಸಂಗ್ರಹ ಬುದ್ಧಿ; ಡಿಟೆನ್ಯುಗಳ ಮೇಲೆ ಲಾಠಿಛಾರ್ಜು ಮಾಡಬೇಕಾದಾಗ ತಾನೇ ಮುಂದಾಗಿ ನುಗ್ಗಿ ಅವಿದ್ಯಾವಂತರಾದ ವಾರ್ಡರುಗಳು ಬೆನ್ನಿನ ಮೇಲೆ ದೊಣ್ಣೆಯಿಂದ ಬಿಡುತ್ತಿದ್ದರೆ, ಬಿ.ಎ., ಮಾಡಿ ಸಾಹಿತಿ ಎನ್ನಿಸಿಕೊಂಡ ಈ ಅಧಿಕಾರಿ ತಲೆಯ ಮೇಲೆಯೇ ಬಿಡು ವುದು. ಅಧಿಕಾರದ ಬಣ್ಣದ ಕನ್ನಡಕದ ಜತೆಗೆ ಸಾಹಿತ್ಯದ ಅಹಂಕಾರವೂ ಸೇರಿಕೊಂಡಮೇಲೆ ಕೇಳಬೇಕಾದುದೇ ಇಲ್ಲ. ಅದರಲ್ಲಿಯೂ ತಾನೇ ಸರ್ವಾಧಿಕಾರಿಯಾದ ಸೆರೆಮನೆಯಲ್ಲಿ ಈ ಬಗೆಯ ಅಧಿಕಾರಿಗಳು 'ಹಿಟ್ಲರಿಸಂ' ನಡೆಸುತ್ತಾರೆ. ಸೂಪರಿಂಟೆಂಡೆಂಟ್ ಸೆರೆಮನೆಯಲ್ಲಿಯೇ ಇದ್ದರೂ, ಅವರ ಅಪ್ಪಣೆ ಪಡೆಯದೆ ಅವರ ಕೆಳಗಿನ ಅಧಿಕಾರಿಗಳು ಡಿಟೆನ್ಯುಗಳ ಮೇಲೆ ಲಾಠಿ ಛಾರ್ಜು ಮಾಡಿದುದೂ, ರಾಜ್ಯದ ಮಂತ್ರಿ ಗಳೂ ಕೆಳಗಿನ ಅಧಿಕಾರಿಗಳು ನಡೆಸಿದ ತಲೆ ಕೆಟ್ಟ ಅವಿವೇಕವನ್ನು ಸರಿ ಎಂದು ಸ್ಥಾಪಿಸಲು ಶಾಸನ ಸಭೆಗಳ ಮುಂದೆ ತಮ್ಮ ಘನತೆಯನ್ನೆಲ್ಲಾ ವೆಚ್ಚಮಾಡಿದುದೂ ನಮ್ಮ ದುರದೃಷ್ಟ'' ಎನ್ನುತ್ತಿದ್ದರು.

ಸೆರೆಮನೆಯ ಕಂಟ್ರಾಕ್ಟರಿಂದ ಸಾಮಾನುಗಳನ್ನು ತೆಗೆದುಕೊಂಡು ಅದನ್ನು ಅಡಿಗೆ ಮನೆಗೆ ಒದಗಿಸುವುದು ಕಷ್ಟದ ಕೆಲಸ. ಸಾಧಾರಣ ವಾಗಿ ಕಂಟ್ರಾಕ್ಟರುಗಳು ತಾವು 'ಟೆಂಡರ್'ನಲ್ಲಿ ಒಪ್ಪಿಕೊಂಡಂತೆ, ಒಪ್ಪಿಕೊಂಡ ದರ್ಜೆಯ ಸಾಮಾನು ಒದಗಿಸುವುದಿಲ್ಲ. ಹಾಗೆ ಒದಗಿಸು ವುದಾದರೆ ಅವನು ಸೆರೆಮನೆಯ ಕಂಟ್ರಾಕ್ಟ್ ಯಾಕೆ ಮಾಡಬೇಕು? ಅವನಿಂದ ಸಾಮಾನುಗಳನ್ನು ತೆಗೆದುಕೊಳ್ಳುವುದೇ ದೊಡ್ಡ ಯಾಗ. ಸೆರೆಮನೆಯಲ್ಲಿ ಇದಕ್ಕೆ ರಾಶನ್ (Ration) ಎಂದು ಹೆಸರು. ಏನು ತಪ್ಪು ಅಡಿಗೆಯಲ್ಲಿ ತೋರಿದರೂ ಅದನ್ನು ರಾಶನ್ ಅಧಿಕಾರಿಯ ಮೇಲೆ ಹಾಕುತ್ತಾರೆ. ರಾಶನ್ ಅಧಿಕಾರಿ ಎಂದರೆ ಸರ್ಕಾರದ ಅಧಿಕಾರಿಯಲ್ಲ. ಡಿಟೆನ್ಯುಗಳಾದ ನಾವು ನಿಯಮಿಸಿಕೊಂಡ ನಮ್ಮಲ್ಲಿಯೇ ಒಬ್ಬರಾದ ಅಧಿಕಾರಿ. ನಮ್ಮ ಅದೃಷ್ಟದಿಂದ ನಮಗೆ ಒಳ್ಳೆಯ ದಕ್ಷರಾದ ರೇಷನ್ ಅಧಿಕಾರಿಗಳೇ ದೊರೆತಿದ್ದರು. ಅವರನ್ನು ಮೋಸಗೊಳಿಸಲು ಕಂಟ್ರಾಕ್ಟರ್

ನಿಗೆ ಸಾಧ್ಯವಿರಲಿಲ್ಲ. ಕೆಟ್ಟ ಸಾಮಾನನ್ನು ನಮ್ಮ ಮೇಲೆ ತಳ್ಳಲೂ ಅವಕಾಶವಿರಲಿಲ್ಲ. ಆ ಸಾಮಾನುಗಳನ್ನು ಅಡಿಗೆ ಮನೆಯ ಅಧಿಕಾರಿಗಳು (ಅವರೂ ನಮ್ಮವರಾದ ಡಿಟೆನ್ಯುಗಳೇ) ಬಿಸಿ ಬಿಸಿಯಾಗಿ ಶುಚಿಯಾಗಿ ವ್ಯವಸ್ಥೆಯಿಂದ ಮಾಡಿ ಬಡಿಸುತ್ತಿದ್ದುದರಿಂದಲೇ ಈ ಸಲದ ಚಳುವಳಿಯಲ್ಲಿ ಸಾವಿರಾರು ಸಂಖೆಯಲ್ಲಿ ಡಿಟೆನ್ಯುಗಳು ಸೆರೆಮನೆ ಸೇರಿದರೂ ಅವರ ಆರೋಗ್ಯ ಕೆಡದೆ ಇತ್ತು. ನಾವು ಮೊದಲೇ ಹೇಳಿದಂತೆ ಒಂದೊಂದು ಸೆರೆಮನೆಗೆ ಒಂದೊಂದು ಸರ್ಕಾರ. ಪ್ರಾರಂಭದಲ್ಲಿ ಕೇಂದ್ರ ಕಾರಾಗಾರದಲ್ಲಿ 800ರಿಂದ 1000ದ ವರೆಗೆ ಡಿಟೆನ್ಯುಗಳು ಸೇರಿದರು. ಆಗ ಸರ್ಕಾರ ಯಾವ ಕಾರಣದಿಂದಲೋ ಹೋಟಲು ಮಾಲಿಕರಿಗೆ ಊಟವನ್ನೇ ಬಡಿಸಲು ಕಂಟ್ರಾಕ್ಟು ಕೊಟ್ಟರು. ತಾನು ಊಟ ಮಾಡದ ಅಡಿಗೆ, ಮತ್ತೊಬ್ಬರಿಗೆ ಮಾಡಿ ಬಡಿಸುವಾಗ, ಒಂದೊಂದು ಊಟಕ್ಕೂ ಎಷ್ಟು ಲಾಭ ಹೊಡೆಯಬಹುದೋ ಅಷ್ಟು ಗಿಟ್ಟಿರಬೇಕೆಂಬ ಆಸೆ ಕಂಟ್ರಾಕ್ಟರಿಗೆ ಇರುವುದು ಸ್ವಾಭಾವಿಕ. ಆದರೆ ಕೆಲವು ತಿಂಗಳುಗಳನಂತರ ಯಾವುದೋ ಒಂದು ನೆಪದ ಮೇಲೆ ಡಿಟೆನ್ಯುಗಳಿಗೆ ಮೇಲೆ ಲಾಠಿಛಾರ್ಜು ಸವಿ ಸಹ ಆಗಿ ಸಂಬಂಧಪಟ್ಟ ಅಧಿಕಾರಿಗಳು ಸೇಡು ತೀರಿಸಿಕೊಂಡ ಮೇಲೆ, ಕೇಂದ್ರ ಕಾರಾಗಾರದಲ್ಲಿಯೂ ಡಿಟೆನ್ಯುಗಳೇ ರೇಶನ್ ತೆಗೆದುಕೊಂಡು ಅಡಿಗೆ ಮಾಡಿಸುವ ವ್ಯವಸ್ಥೆಯಾಯಿತು.

ಸೆರೆಮನೆಗಳಲ್ಲೆಲ್ಲಾ ಒಂದೊಂದು ಬ್ಯಾರಕ್‌ನವರಿಗೆ ಒಂದೊಂದು ವಾರ ಅಡಿಗೆ ಎಂದು ಡಿಟೆನ್ಯುಗಳು ವ್ಯವಸ್ಥೆಮಾಡಿದ್ದರು. ಸಾಮಾನು ತೆಗೆದುಕೊಂಡು ಡಿಟೆನ್ಯುಗಳಿಗೂ ಅವರ ಜತೆಯಲ್ಲಿ ನುಸಿಯುತ್ತಿದ್ದ ನೂರಾರು ಕ್ರಿಮಿನಲ್ ಕೈದಿಗಳಿಗೂ ಅಡಿಗೆ ಮಾಡಿ ಬಡಿಸಿ ಸರಿ ಎನ್ನಿಸಿಕೊಳ್ಳುವ ವೇಳೆಗೆ ಪಾಪ ಅಡಿಗೆಯ ಗುಂಪಿನವರಿಗೆ ಸಾಕಾಗಿ ಹೋಗುತ್ತಿದ್ದಿತು. ಅಡಿಗೆ ಮನೆ ವಹಿಸಿಕೊಂಡ ಬ್ಯಾರಕ್ಕಿನ ಎಲ್ಲರಿಗೂ ಒಂದು ವಾರ ಅರ್ಧನಿದ್ರೆಯೇ. ಅಡಿಗೆ ಮನೆಗೆ ಮೊದಲ ದಿನ ಬರುವಾಗ ಅವರು ತಮ್ಮ ಬ್ಯಾರಕ್‌ನಿಂದ ತಮ್ಮ ಟ್ರೇಡ್ ಮಾರ್ಕ್ ಆದ, ಸೌಟು ಬಕ್ಕೆಟ್ಟು ಬಾಂಡ್ಲೆ ಹಾರೆ ಈಳಿಗೆಮಣೆ ಮೊಸರು ಕಡೆಯುವ ಮಂತು (ಕಡೆಗೋಲು) ಇವುಗಳನ್ನು ತೆಗೆದುಕೊಂಡು " ಚಲ್ ಚಲ್‌ರೆ ನೌಜವಾನ್ " ಎಂದು ಹೇಳಿಕೊಂಡು ಉತ್ಸಾಹದಿಂದಲೇ ಬರುತ್ತಿದ್ದರು. ಮೂರ್ತಿ

ಯುವರೂ ಪಂಡಿತರೂ ತಿಂಡಿ ಅಡಿಗೆಗಳ ಹೆಸರನ್ನೆಲ್ಲಾ ಹಿಡಿದು ಕವನ ಕಟ್ಟಿ ಹಾಡುತ್ತಾ "ಪೋಗುವೆವು ಸಮರ ಸಮ್ಮುಖಕೆ ನಾವು. ಬೇಗಲ್ಲೆ ತನ್ನಿರಿ ನಲವಿಂದ ನೀವು" ಎಂದು ಹೇಳಿಕೊಂಡು ಬರುತ್ತಿದ್ದರು. ಆದರೂ ಒಂದು ವಾರ ಮುಗಿಯುವುದರೊಳಗಾಗಿ ಸುಸ್ತಾಗುತ್ತಿದ್ದರು. ಕಲ್ಯಾಣನಗರಿಯ ಸೀಮಯ್ಯನವರಿಗೆ ಯಾವಾಗಲೂ ಅಡಿಗೆ ಮನೆಯುವರು ಎಂದೇ ಹೆಸರು. ಅವರೂ ಮತ್ತು ಮಲ್ಲಿಗೆಹಳ್ಳಿ ಆ ಸೈನ್ಸ್ ಗ್ರಾಡುಯೇಟ್ ಇಬ್ಬರೂ ಅಡಿಗೆ ಮನೆ ಸೇರಿದರೆ ಅವರಿಗೆ ಅದೇ ಒಂದು ಯೋಗ. ಏಳುದಿನ ಕಳೆಯುವವರಿಗೆ ಅಡಿಗೆ ಮನೆಯಲ್ಲಿಯೇ ತಪಸ್ಸು. ಅಲ್ಲೇ ಹಾಸಿಗೆ. ಅನಂತರ ಸೀಮಯ್ಯನವರಿಗೆ ಆ ಶ್ರಮ ಸುಧಾರಣೆಗಾಗಿ ಮೂರು ವಾರ ಹಗಲು ರಾತ್ರೆ ನಿದ್ರೆ. ಸೆರೆಮನೆಯಲ್ಲಿ ಡಿಟೆನ್ಯುಗಳಿಗೆ ತಿಂಡಿ ಚಪಲ ಹೆಚ್ಚು. ಒಂದು ಚೂರು ತೆಂಗಿನಕಾಯಿ ಬೆಲ್ಲ ಸೌತೆಕಾಯಿ ಸಕ್ರೆ ಮೊಸರೆಂಬ ಮಜ್ಜಿಗೆ ಸಿಕ್ಕಿದರೂ ತಿಂದುಹಾಕುತ್ತಾರೆ. ಹೀಗೆ ಪ್ರತಿಯೊಬ್ಬ ಡಿಟೆನ್ಯುವೂ ತಿಂದುಬಿಟ್ಟರೆ ಆಮೇಲೆ ಅಡಿಗೆಗೆ ಉಳಿಯುವುದೇನು? ವಾಸು ಯಾವಾಗಲೂ ಅಡಿಗೆ ಮನೆಯಲ್ಲಿ ಹದ್ದಿನಂತೆ ಕಾಯುತ್ತಲೇ ಕುಳಿತಿರುತ್ತಿದ್ದ. ಆಗ ಅವನು ಗಡ್ಡ ಬೇರೆ ಬಿಟ್ಟಿದ್ದುದರಿಂದ ಒಳ್ಳೆಯ ಜಟಾಯುವಿನಂತೆ ತೋರುತ್ತಿದ್ದ. ಸ್ವಲ್ಪ ಸಕ್ರೆ ಬೇಕಾದರೂ, ಅವನನ್ನು ಕೇಳಲು ಭಯವಾಗುತ್ತಿದ್ದಿತು.

ತೀರ್ಥಪುರದ ಬ್ಯಾರಕ್‌ನ ಗುಂಪಿನಲ್ಲಿ ಯಾವುದೂ ರಹಸ್ಯ. ಅಡಿಗೆ ಏನು ಎಂಬುದು ಎಲೆಗೆ ಬರುವವರೆಗೆ ಗೊತ್ತಾಗುವಂತೆ ಇಲ್ಲ. ಅಲ್ಲಿ ಅಡಿಗೆಯ ಮುಖ್ಯಾಧಿಕಾರಿಗಳೂ ಗಡ್ಡ ಬಿಟ್ಟೇ ಇದ್ದರು. ಆ ಗಡ್ಡದ ಹಿಂದೆ ಅವರು ಯಾವಾಗಲೂ ಏನನ್ನೋ ಮುಚ್ಚಿಕೊಂಡಿರುವಂತೆಯೇ ತೋರುತ್ತಿದ್ದಿತು. ಅವರ ಮೇಲೆ, ಅಡಿಗೆ ಗುಟ್ಟು ಎಂಬ ಆಕ್ಷೇಪಣೆ ಬಲು ಜೋರಾಯಿತು. ಆಗ "ಅವರು ಯಾಕೆ ಹೀಗೆ ಆಕ್ಷೇಪಿಸುತ್ತೀರಿ. ಇವತ್ತು ನೋಟೀಸ್ ಬೋರ್ಡನ್ನೇ ಹಾಕಿಬಿಡುತ್ತೇವೆ" ಎಂದು ಒಂದು ಹಲಗೆಯ ಮೇಲೆ ಮುಂದಲ ನೋಟೀಸ್ ಬೋರ್ಡು ಬರೆದರು.

1. ಮೈಸೂರಲ್ಲಿ ಪಾಕಿಸ್ತಾನ್—ಅಲ್ಲಿ ಸ್ಥಾನ ಇಲ್ಲ.
2. ಅಪೂಪಗೋಳ.
3. ಇಬ್ಬಂದಿ.

4. ಸ್ವದೇಶಿ ಒತ್ತುವ ಕಾಗದ.
5. ಶೇವಾಮೃತ.
6. ಕಾರವೇಲು ಕಾದಿ.
7. ಮುದ್ಗ ಸಾರ ರಸ.
8. ಸಫೇದ್ ಭಾತ್.
9. ತಕ್ರ ವೈಶಿಷ್ಟ್ಯ.
10. ಗುಣಕಪ್ಪನ ತಿಣಕಾಟ.
11. ಗೋಟು—ಗೋಣಿ.

ನೋಟೀಸು ಬೋರ್ಡಿನ ಮುಂದೆ ಒಂದು ದೊಡ್ಡ ಜಾತ್ರೆಯೇ ನೆರೆಯಿತು. ತೀರ್ಥಪುರಿಯವರ ಅಡಿಗೆ ಎಷ್ಟು ರಹಸ್ಯವೋ ಅವರ ಜಾಹೀರಾತೂ ಅಷ್ಟೇ ರಹಸ್ಯ. ಈ ಗ್ರಂಥವನ್ನು ಓದುವವರು ಯಾರೂ, "ಜೈಲಿಗೆ ಜನ ಬರಲಿ" ಎಂದು ನಾನು ಇಷ್ಟು ತಿಂಡಿಗಳ ಹೆಸರು ಹೇಳುತ್ತಿರುವೆನೆಂದು ತಿಳಿಯಬಾರದು. ಇಷ್ಟು ತಿಂಡಿ ಮಾಡಿದ್ದು ಖಂಡಿತ. ಇನ್ನಾದರೂ ಬರುವುದಾದರೆ ಬನ್ನಿ.

ಬಹಳ ಹೊತ್ತು ಚರ್ಚಿಸಿದ ಮೇಲೆ, ಮಾಡಿರಬಹುದಾದ ತಿಂಡಿ ಇವೇ ಎಂಬ ತೀರ್ಮಾನಕ್ಕೆ ಡಿಟೆನ್ಯುಗಳು ಬಂದರು.

1. ಮೈಸೂರು ಪಾಕು.
2. ಲಾಡು.
3. ವಡೆ ಮಾಡುವುದಕ್ಕೆ ಹೋಗಿ ತುಪ್ಪವಿಲ್ಲದುದರಿಂದ ನುಚ್ಚಿನುಂಡೆ.
4. ಆರಿದ ಮೆತ್ತಗಾದ ಹಪ್ಪಳ.
5. ಶಾವಿಗೆ ಪಾಯಸ.
6. ಹಾಗಲಕಾಯಿ ಗೊಜ್ಜು.
7. ಹೆಸರುಬೇಳೆ ಸಾರು.
8. ಅನ್ನ.
9. ಮಜ್ಜಿಗೆ.
10. ಒತ್ತಿದ ಶಾವಿಗೆ—ಅದನ್ನು ಒತ್ತಿದವರು ಗುಣಕಪ್ಪ. ಒತ್ತಲು ಅವರು ಬಹಳ ತಿಣಕಾಡಿದುದರಿಂದ ಆ ಹೆಸರೇ ಅದಕ್ಕೆ ಬಂತು.

11. ಎಲೆ ಅಡಿಕೆ.

ಹೀಗೆ ನಡೆಯುತ್ತಿದ್ದ ಸಮಾರಂಭದಲ್ಲಿ ನಿತ್ಯಾ ಹಗಲು ರಾತ್ರೆ 200-300 ಜನ ಊಟಮಾಡುವ ಸ್ಥಳದಲ್ಲಿ ಆಗಾಗ್ಗೆ ಹೆಚ್ಚು ಕಡಿಮೆಗಳು ಉಂಟಾಗುತ್ತಿದ್ದುದು ಸ್ವಾಭಾವಿಕ. ಅಧಿಕಾರಿಗಳ ವರ್ತನೆಯನ್ನು ಕುರಿತು ಎಷ್ಟೇ ಟೀಕಿಸಿದ್ದರೂ ಕೂಡ ಡಿಟೆನ್ಯುಗಳ ವರ್ತನೆ ಸ್ವಭಾವವನ್ನೂ ಕುರಿತು ಕೆಲವು ಮಾತುಗಳನ್ನು ಹೇಳಬೇಕಾಗಿದೆ. ಜಿಲ್ಲಾಧಿಕಾರಿಗಳು ದಸ್ತಗಿರಿಗಳಿಗಾಗಿ, ತಮ್ಮ ರುಜುವಾದ ವಾರಂಟಗಳನ್ನು ಪೋಲೀಸರಿಗೆ ಕೊಟ್ಟು, ಪೋಲೀಸರು ಅದರಲ್ಲಿ ತಮಗೆ ಮನಸ್ಸು ಬಂದವರ ಹೆಸರನ್ನು ಬರೆಯಲು ಅವಕಾಶ ಕೊಟ್ಟುದರಿಂದ ಪೋಲೀಸಿನವರು ತಮಗೆ ಯಾವ ಯಾವ ಕಾರಣದಿಂದ ಯಾರು ಯಾರ ಮೇಲೆ ಅಸಮಾಧಾನವಿದ್ದಿತೋ ಅಂತಹವರನ್ನೆಲ್ಲಾ ಎಳೆದುಕೊಂಡು ಬಂದುಬಿಟ್ಟರು. ಪ್ರಾರಂಭದ ಗಾಬರಿ ಮುಗಿದ ಮೇಲಾದರೂ, ಏನೂ ಅರಿಯದ ಆ ಸಾಧುಪ್ರಾಣಿಗಳನ್ನು ಬಿಡುಗಡೆ ಮಾಡಬಹುದಾಗಿದ್ದಿತು. ಆದರೆ ಯಾವ ಸರ್ಕಾರವೂ ತಾನು ಮಾಡಿದುದನ್ನೇ ಸರಿ ಎಂದು ಸಾಧಿಸುತ್ತದೆ. ಡಿಟೆನ್ಯುಗಳಲ್ಲಿ ಕೆಲವರು ತಮ್ಮ ಘನತೆ ಗಾಂಭೀರ್ಯಗಳಿಗೆ ಅನುಗುಣವಾಗಿ ನಡೆದುಕೊಳ್ಳುತ್ತಿರ ಲಿಲ್ಲ. ಡಿಟೆನ್ಯುಗಳು ತಮ್ಮಲ್ಲಿ ಮಾಡಿಕೊಂಡಿದ್ದ ಶಿಸ್ತನ್ನು ಅವರು ಯಾವ ಕಾರಣವೂ ಇಲ್ಲದೆ ಮುರಿಯುತ್ತಿದ್ದರು.

---

## ೪೮. ನಮ್ಮ ನಮ್ಮ ವಿಚಾರಗಳು

---

ತೀರ್ಥಪುರದ ಬ್ಯಾರಕ್‌ನವರು ಅಡಿಗೆ ಮನೆಯಲ್ಲಿ ಕೆಲಸ ಮಾಡು ತ್ತಿರುವಾಗ ಇದ್ದಕ್ಕಿದ್ದಂತೆ ಒಬ್ಬ ಡಿಟೆನ್ಯುವಿಗೆ ಪಿತ್ಥ ಕೆರಳಿತು. ಸರ್ಕಾರ ದವರು ಆತನನ್ನು ಡಿಟೆನ್ಯುವಾಗಿ ತಂದುದೇ ತಪ್ಪು. ಏನೂ ತಿಳಿಯದ ಪ್ರಾಣಿ. ಅಡಿಗೆ ಮನೆಯಲ್ಲಿ ಏನನ್ನೋ ಕೇಳಿದ. ಅವರು ಕೊಡಲಿಲ್ಲ. ಮನಸ್ಸಿಗೆ ಬಂದಂತೆ ಬೈದ. ಇಂತಹ ಚರ್ಚೆಗಳು ಸುರಪುರಿ ಸೆರೆಮನೆ ಯಲ್ಲಿ ಆಗಾಗಲೇ ಉಂಟಾಗುತ್ತಲೇ ಇದ್ದವು. ಸರ್ಕಾರ ಮತ್ತೊಬ್ಬ ಗಾರೆ ಕೆಲಸದ ಕೂಲಿಯನ್ನು ತಂದು ಡಿಟೆನ್ಯು ಮಾಡಿದ್ದರು. ಅವನು,

ಸೆರೆಮನೆಯಲ್ಲಿ ಇಬ್ಬರೂ ಡಿಟೆನ್ಯುಗಳು ಯಾವದಾದರೂ ವಿಚಾರವನ್ನು ಕುರಿತು ಗಟ್ಟಿಯಾಗಿ ಚರ್ಚಿಸಿದರೇ ಸಾಕು. ಇವರೇನೋ ವ್ಯಾಜ್ಯ ಮಾಡುತ್ತಿದ್ದಾರೆ ಎಂದುಕೊಂಡು ಇನ್ನು ನಾನು ಸತ್ಯಾಗ್ರಹ ಹೂಡುತ್ತೇನೆ ಎನ್ನುತ್ತಿದ್ದನು. ಅವನು ಸತ್ಯಾಗ್ರಹ ಹೂಡುವುದೆಂದರೆ, ಮಾತನಾಡುತ್ತಿದ್ದ ಇಬ್ಬರಿಗೂ ಒಂದೊಂದು ಗುದ್ದು ಕೊಡುವುದು. ತೀರ್ಥಪುರದವರು ಅಡಿಗೆ ಛಾರ್ಜಿನಲ್ಲಿರುವಾಗ, ಹೋಗಿ ಏನನ್ನೋ ಕೇಳಿದ ಡಿಟೆನ್ಯು ಸಮಾಧಾನದಿಂದ ಹಿಂದಿರುಗಲಿಲ್ಲ. ಯಾಕೆ ಕೊಡಬಾರದು ಎಂದು ಚರ್ಚಿಸುತ್ತಾ ಅಲ್ಲೇ ನಿಂತ. ಸ್ವಲ್ಪ ಗಟ್ಟಿಯಾಗಿಯೇ ಮಾತನಾಡಿದ. ನಾವು ಮೊದಲೇ ತಿಳಿಸಿದಂತೆ ಗಾಂಭೀರ್ಯ ಮರ್ಯಾದೆ ತಿಳಿಯದ ಡಿಟೆನ್ಯುಗಳ ಪೈಕಿ ಅವನೂ ಒಬ್ಬ. ಕಣ್ಣಿಗೆ ಬಿದ್ದವರನ್ನೆಲ್ಲಾ ಸರ್ಕಾರ ಹಿಡಿದುಕೊಂಡು ಬರುವಾಗ ಇಂಥಾದ್ದು ಎಷ್ಟೋ ನಡೆಯುತ್ತದೆ. ಈ ಅಡಿಗೆ ಮನೆಯ ಚರ್ಚೆಯಲ್ಲಿ ನಾಲ್ಕಾರು ಜನ ಭಾಗವಹಿಸಿದ್ದರು. ಮಾತುಗಳು ಬಿರುಸಾಗಿ ನಡೆಯುತ್ತಿದ್ದುವು. ಆಗ ಸತ್ಯಾಗ್ರಹ ಮಾಡುವ ನಮ್ಮ ಡಿಟೆನ್ಯು, ಒಬ್ಬರಿಗೆ ಬೆನ್ನಿನ ಮೇಲೆ ಎತ್ತಿ ಒಂದು ಕೊಟ್ಟರು. ಏ ಏ ಎಂದು ಅವನನ್ನು ಬಿಡಿಸುವುದಕ್ಕೆ ಬಂದ ಮತ್ತೊಬ್ಬನಿಗೂ "ನಿನ್ನ ಮೇಲೂ ಸತ್ಯಾಗ್ರಹ ಮಾಡುತ್ತೇನೆ" ಎಂದು ಒಂದು ಕೊಟ್ಟರು. ನಮ್ಮ ಡಾಕ್ಟರು ಪಾಪ ಯಾವಾಗಿನ ಪದ್ಧತಿಯಂತೆ ಯುದ್ಧದ ಮ್ಯಾಪನ್ನು ಕುರಿತು ಯೋಚಿಸುತ್ತಾ ಆಕಾಶ ನೋಡುತ್ತಾ ಹೋಗುತ್ತಿದ್ದರು. ಈ ಸತ್ಯಾಗ್ರಹದ ಡಿಟೆನ್ಯು ಅವರಿಗೂ ಒಂದು ಕೊಟ್ಟನು. ಡಾಕ್ಟರು ಯಾವುದನ್ನೂ ವಿನೋದವಾಗಿ ತೆಗೆದುಕೊಳ್ಳುವ ಪ್ರಾಣಿ. ಅವರು ಆ ಸತ್ಯಾಗ್ರಹಿಯನ್ನು ಕುರಿತು "ಅಪ್ಪಾ, ಸ್ವಲ್ಪ ತಡೆ. ಜೈಲಿನಲ್ಲಿರುವ ನನ್ನ ಕನ್ನಡಕಕ್ಕೆ ಏಟು ಬಿದ್ದರೆ ಈಗ ಮತ್ತೆ ತರಲು ಆಗುವುದಿಲ್ಲ. ಆದುದರಿಂದ ಇದನ್ನು ಕೈಯ್ಯಲ್ಲಿ ಹಿಡಿದುಕೊಳ್ಳುತ್ತೇನೆ. ಇನ್ನು ಎಷ್ಟು ಬೇಕಾದರೂ ಸತ್ಯಾಗ್ರಹ ಮಾಡು" ಎಂದರು. ಭಾರತದ ರಕ್ಷಣೆ ಇವರು ಹೊರಗಡೆ ಇದ್ದರೆ ಆಗುವುದಿಲ್ಲವೆಲ್ಲಾ! ಇಂಥವರನ್ನೆಲ್ಲಾ ಕಂಡರೂ ಚರ್ಚಿಲ್ ವೇವಲ್ ಮತ್ತು ನಮ್ಮ ಸರ್ಕಾರಕ್ಕೆ ಭಯವೆಲ್ಲಾ; ಏನು ಹೇಳೋಣ.

ಸೆರೆಮನೆಯಲ್ಲಿ ಈ ಸಲ ಡಿಟೆನ್ಯುಗಳಲ್ಲಿ ಕೆಲವರು ತಮ್ಮ ಗಾಂಭೀರ್ಯಕ್ಕೆ ಅನುಸಾರವಾಗಿ ನಡೆದುಕೊಳ್ಳದೆ ಇದ್ದಂತೆ ತೋರಲು ಎರಡು

ಮೂರು ಕಾರಣಗಳನ್ನು ಹೇಳಬಹುದು. ಮೊದಲನೆಯದು ಮಹಾತ್ಮಾ ಗಾಂಧಿಯವರು ಹಿಂದೆ ವ್ಯಕ್ತಿ ಸತ್ಯಾಗ್ರಹದಲ್ಲಿ ಮಾಡಿದಂತೆ ಆರಿಸಿ ಪರೀಕ್ಷಿಸಿದ ಜನರೇ ಜೈಲಿಗೆ ಬಂದಿರಲಿಲ್ಲ. ಯಾವ ಯಾವ ಕಾರಣಗಳಿಗಾಗಿ ಸ್ಥಳದ ಅಧಿಕಾರಿಗಳಿಗೆ ಯಾರು ಯಾರ ಮೇಲೆ ಅಸಮಾಧಾನವಿದ್ದಿತೋ ಅವುಗಳಿಗಾಗಿ ಎಲ್ಲಾ ಅಧಿಕಾರಿಗಳೂ ಜನರನ್ನು ಸೆರೆ ತುಂಬಿಸಿದರು. ಈ ಯುದ್ಧ ಕಾಲದಲ್ಲಿ ಭಾರತದ ರಕ್ಷಣೆಯ ಹೆಸರಿನಲ್ಲಿ ರಾಷ್ಟ್ರದಲ್ಲಿ ಬೇಕಾದ ದಬ್ಬಾಳಿಕೆ ನಡೆಸುತ್ತಿರುವಂತೆ, ಅಧಿಕಾರಿಗಳು ಚಳುವಳಿಯ ಹೆಸರಿನಲ್ಲಿ ತಮ್ಮ ಅನೇಕ ದಿನಗಳ ಅಸಮಾಧಾನವನ್ನೂ ದರ್ಪಲಾಲಸೆಯನ್ನೂ ಪ್ರಜೆಗಳ ಮೇಲೆ ತೋರಿಸಿದರು. ಸೆರೆಮನೆಯ ವಾತಾವರಣ ಸಾಧಾರಣವಾಗಿ ಅಸ್ವಾಭಾವಿಕವಾದುದು. ಅಲ್ಲಿ ಎಂತಹ ಸಹನೆಯುಳ್ಳವನೂ ಪಿಶಾಚಿಯೇ ಆಗುತ್ತಾನೆ. ಅಧಿಕಾರಿಗಳ ಮೇಲೆ ಅಸಮಾಧಾನ ತೋರಿಸಲು ಅವಕಾಶವಿಲ್ಲದಿದ್ದರೆ ಸೆರೆಯಲ್ಲಿರುವ ಉಳಿದ ಡಿಟೆನ್ಯುಗಳ ಮೇಲೆಯೇ ತೋರಿಸುತ್ತಾನೆ. ಸೆರೆಮನೆಯ ಸಂಕುಚಿತ ವಾತಾವರಣದಲ್ಲಿಯೂ ಒಂದೊಂದು ಸಲ ಕೋಮುವಾರು ಭೂತ ಎದ್ದು ಕಾಣುತ್ತದೆ. ಮಹಾತ್ಮಾ ಗಾಂಧಿಯವರು ವಿನೋಬಾ ನಗರದ ಕಾಂಗ್ರೆಸ್ಸಿಗೆ, ತಿರುವಾಂಕೂರಿನ ಒಬ್ಬ ಮಹಿಳೆಯೊಡನೆ ಒಂದು ಸಂದೇಶ ಕಳುಹಿಸಿದ್ದರು. ಅದರಲ್ಲಿ ಮೈಸೂರು ಕಾಂಗ್ರೆಸ್ ಕೋಮುವಾರು ಸಂಸ್ಥೆ ಎಂದು ನನಗೆ ಬಹಳ ದೂರು ಬಂದಿದೆ. ಎಚ್ಚರಿಕೆ ಎಂದು ಹೇಳಿ ಕಳುಹಿಸಿರುವರೆಂದು ಆ ಮಹಿಳೆ ಬಹಿರಂಗ ಅಧಿವೇಶನದಲ್ಲಿ ಹೇಳಿದರು. ಕೆಲವು ಸಮಯಗಳಲ್ಲಿ ಕೆಲವು ಪ್ರಶ್ನೆಗಳು ಕೋಮುವಾರು ಅಲ್ಲದಿದ್ದರೂ ಕೋಮುವಾರು ರೂಪವನ್ನು ತಾಳುತ್ತಿದ್ದುವು. ಈ ಸಲ ಡಿಟೆನ್ಯುಗಳಿಗೆ ಸರ್ಕಾರದವರು ಹೊರಗಿನಿಂದ ತಿಂಡಿ ತರಿಸಲು ಅನುಮತಿಯಿತ್ತಿದ್ದರು. ಮೊದಲು ಮೊದಲು ಸಸ್ಯಾಹಾರವೇ ಬರುತ್ತಾ ಇದ್ದುದು ಬರಬರುತ್ತಾ ಮಾಂಸಹಾರಿಗಳಿಗೆ ಮಾಂಸಾಹಾರಕ್ಕೆ ಪ್ರಾರಂಭವಾಯಿತು. ಇದನ್ನು ಜನ ಪಾಕಿಸ್ತಾನ್ ಎಂದು ಕರೆಯುತ್ತಿದ್ದರು. "ಇವತ್ತು ಪಾಕಿಸ್ಥಾನ್ ಬಂದಿತ್ತು. ರಾತ್ರಿ ಇವರು ನನ್ನ ಮಗ್ಗುಲಲ್ಲಿ ಮಲಗಿರುವಾಗ, ಇವರ ಹೊಟ್ಟೆಯಲ್ಲಿ ಕುರಿ ಬ್ಯಾಬ್ಯಾ ಎಂದು ಅರಚುತ್ತಿದ್ದಿತು ಎಂದು ರಾಮಯ್ಯನವರು ಹಾಸ್ಯ ಮಾಡುತ್ತಿದ್ದರು. ಇದು ಮೊದಲ ನೋಟಕ್ಕೆ ಬ್ರಾಹ್ಮಣ

ವೀರಶೈವ ವೈಶ್ಯ ಇವರಿಗೆ ಎದುರಾಗಿ ಒಕ್ಕಲಿಗ ರೆಡ್ಡಿ ಇವರ ಪ್ರಶ್ನೆಯಾಗಿ ತೋರಿದರೂ, ಸಾವಧಾನವಾಗಿ ವಿಮರ್ಶಿಸುವಾಗ ಇದು ಒಬ್ಬೊಬ್ಬ ಮನುಷ್ಯನ ವ್ಯಕ್ತಿಗೆ ಸಂಬಂಧಪಟ್ಟ ಆಹಾರದ ಪ್ರಶ್ನೆಯೇ ಆಗುತ್ತಿದ್ದಿತು. ಅಣ್ಣ ತಮ್ಮಂದಿರಲ್ಲಿಯೇ ಒಬ್ಬರು ಪಾಕಿಸ್ತಾನ; ಮತ್ತೊಬ್ಬರು ಮಾಂಸಾಹಾರ ದ್ವೇಷಿ; ಒಂದೇ ಮನೆಯಲ್ಲಿಯೇ ಮಾಂಸಾಹಾರವನ್ನು ಪೂರ್ಣವಾಗಿ ಬಹಿಷ್ಕರಿಸಿರುವವರು ಒಬ್ಬರು. "ಸೆರೆಮನೆಯಲ್ಲಿ ಬೇಡ. ಇಲ್ಲಿ ಮಾಂಸಾಹಾರ ವಿರೋಧಿಗಳು ಇದ್ದಾರೆ" ಎಂದು ಬಿಟ್ಟಿರುವವರು ಕೆಲವರು. ಇದು ಸ್ವಂತ ಆಹಾರದ ಪ್ರಶ್ನೆಯಾದುದರಿಂದ ಇದು ಮಹಾತ್ಮಾ ಗಾಂಧಿಯವರ ಅನುಯಾಯಿಗಳಿಗೆ ನ್ಯಾಯವೇ ಅಲ್ಲವೇ ಎಂಬ ವಿಚಾರ ಇದರಲ್ಲಿ ಏಳುತ್ತಿರಲಿಲ್ಲ. "ಇವರು ಆಯಿತು ಎಂದರೆ ವಾರ್ಧಾ ಆಶ್ರಮಕ್ಕೆ ಹೋಗಿ ಬಿಡುತ್ತಾರೆ. ಗಾಂಧಿ ಮುರುಕೇಯೆ. ಇವರಿಗಾಗಿಯೇ ಗಾಂಧಿ ಹರಿಜನದ ಒಂದು ಸಂಚಿಕೆ ಬೇಕಾದರೂ ಹೊರಡಿಸುತ್ತಾರೆ. ಆದರೆ ಇಲ್ಲಿ ಒಂದು ಹಸಿಯ ಕುರಿಯನ್ನೇ ತಿಂದು ಬಿಡುತ್ತಾರೆ" ಎಂಬ ಒಬ್ಬರ ಆಕ್ಷೇಪಣೆಯ ಮಾತು, ಮಾಂಸಾಹಾರ ವಿರೋಧಿಗಳ ದೃಷ್ಟಿಯಿಂದ ಭೇಷ್ ಎಂಬಂತೆ ಕಂಡರೂ, ವ್ಯಕ್ತಿಗೆ ಇರುವ ಆಹಾರ ಸ್ವಾತಂತ್ರ್ಯವನ್ನು ಯಾರೂ ಅಪಹರಿಸಲಾರರು ಎಂಬುದನ್ನು ಮರೆತಂತೆ ಕಾಣುತ್ತದೆ. ಆದರೆ ಮನುಷ್ಯ ತನ್ನ ಸ್ವಭಾವವನ್ನು ತಾನು ಬದಲಾಯಿಸುವುದು ಸಾಧ್ಯವಿಲ್ಲ. ಮಾಂಸಾಹಾರ ವಿರೋಧಿಗಳು ಯಾರು ಮಾಂಸಾಹಾರಿಗಳು ಯಾರು ಎಂಬುದನ್ನು ಪರಿಗಣಿಸುವಾಗ ಸಂಕುಚಿತ ದೃಷ್ಟಿಗೆ ಅದು ಕೋಮುವಾರು ಪ್ರಶ್ನೆಯಾಗಿ ತೋರುತ್ತಿದ್ದಿತು. ಯಾಕೆಂದರೆ ಹಳೆಯ ಸಂಪ್ರದಾಯ ಶರಣವಾದ ಈ ದೇಶದಲ್ಲಿ, ಆಹಾರದ ವಿಚಾರದಲ್ಲಿ ಎಷ್ಟೇ ಕ್ರಾಂತಿಯುಂಟಾಗಿದ್ದರೂ, ಹತ್ತು ಜನರ ಎದುರಿಗೆ ಮಾಂಸಾಹಾರಿಯಲ್ಲದವನು ಮಾಂಸಾಹಾರವನ್ನು ಸ್ವೀಕರಿಸುವ ಪದ್ಧತಿ ಇನ್ನೂ ಪ್ರಚಾರಕ್ಕೆ ಬಂದಿಲ್ಲ. ಜೈಲಿನಲ್ಲಿ ಸಾವಿರಾರು ಜನ ಒಟ್ಟಿಗಿದ್ದು ಒಂದು ಶಿಸ್ತು ಒಂದು ನಿಯಮ ಇವುಗಳನ್ನು ಪಾಲಿಸಬೇಕಾದುದು ಇಲ್ಲದೆ ಹೋಗಿದ್ದರೆ, ಆಹಾರದ ಪ್ರಶ್ನೆ ವ್ಯಕ್ತಿಗೆ ಸಂಬಂಧಪಟ್ಟ ಪ್ರಶ್ನೆ ಎಂಬುದನ್ನು ಯಾರೂ ಮರೆಯುತ್ತಿರಲಿಲ್ಲ. ನಮ್ಮ ಒಬ್ಬ ಖದ್ದಾರಿ ಹೇಳಿದಂತೆ "ಕುರಿಯ ಹೆಣವನ್ನಾದರೂ ತಿನ್ನಲಿ, ತನ್ನ ಹೆಣ

ವನ್ನಾದರೂ ತಿನ್ನಲಿ, ಹೆಗ್ಗಣವನ್ನಾದರೂ ತಿನ್ನಲಿ'' ಎಂದು ಸುಮ್ಮನಿರ ಬಹುದಾಗಿದ್ದಿತು. ಇದನ್ನು ತಿಳಿಯದೆ ಮಾಂಸಾಹಾರಿಗಳು "ನೆಹ್ರು ಮಾಂಸ ತಿನ್ನುತ್ತಾನೆ. ಗಾಂಧಿ ತಿಂದಿದ್ದ ಎಂದೂ ಮುಂತಾಗಿ ಹೇಳಿ ಕೊಂಡು'' ತಮ್ಮ ನಾಲಿಗೆಯ ರುಚಿ ತಮ್ಮ ಸ್ವಂತ. ಇದಕ್ಕೆ ಯಾವ ಮಹಾತ್ಮರ ಆಚರಣೆಯ ಆಧಾರವೂ ಬೇಕಿಲ್ಲ. ಎಂಬ ಮಾತನ್ನು ಮರೆತು ವಾದಿಸುತ್ತಿದ್ದರು. ಯುವಕರಾದ ನಮ್ಮ ಗೌಡರಂತೂ "ನಾವೆಲ್ಲಾ ಒಂದು ದಿನ ಮಾಂಸಾಹಾರ ಮಾಡಿದರೆ ಸಾಕು. ಜೈಲಿನ ಬಾಗಿಲು ತಾನಾಗಿಯೇ ತೆರೆಯುವುದು. ಸ್ವರಾಜ್ಯ ಬರುವುದು'' ಎಂದರು.

ಸೆರೆಮನೆಯಂತಹ ಸಂಕುಚಿತ ವಾತಾವರಣದಲ್ಲಿ ನಾನಾ ಬಗೆಯ ನಾನಾ ಸ್ವಭಾವದ ಜನ ಸೇರಿ ಅಸ್ವಾಭಾವಿಕವಾದ ಜೀವನ ನಡೆಸುತ್ತಿರು ವಾಗ ಅವರಿಗೆ ಬೇಸರಿಕೆಯುಂಟಾಗದಿರಲು, ಅವರ ಶಿಸ್ತು ಭಂಗವಾಗ ದಿರಲು, ಅವರ ಎದುರಾಳಿ ಅವರ ಅಸಹಾಯತೆಯ ಲಾಭ ಪಡೆಯದಿರಲು ಸೆರೆಯಾಳುಗಳೆಲ್ಲಾ ಒಂದೇ ಬಗೆಯಾದ ಜೀವನಕ್ರಮ ಅನುಸರಿಸುವುದು ಉತ್ತಮ. ಧ್ಯೇಯವು ಮುಖ್ಯವೇ ಹೊರತು ಆಹಾರ ಮುಖ್ಯವಲ್ಲ. ಆದುದರಿಂದ ಆಹಾರದ ವಿಷಯದಲ್ಲಿ ಸರ್ವರಿಗೂ ಸಮರ್ಪಕವಾದ ಆಹಾರ ಕ್ರಮವನ್ನು ಅನುಸರಿಸಬೇಕು. ಬ್ರಾಹ್ಮಣನಾದವನು ಮೈಗೆಲ್ಲಾ ಹನ್ನೆರಡು 14, 16 ನಾಮ ವಿಭೂತಿ ಅಕ್ಷತೆ ಬಳಿದುಕೊಂಡು ದರ್ಭೆಯ ಹೊರೆಯನ್ನೂ ತುಳಸಿಯ ಕಾಡನ್ನೂ ದೇಹದ ಮೇಲೆ ಬೆಳೆಸಿಕೊಂಡು ಅಪವಿತ್ರಃ ಪವಿತ್ರೋವ ಎಂದು ದರ್ಭೆಯಿಂದ ಪ್ರೋಕ್ಷಿಸುತ್ತಾ ಇತರರು ಹತ್ತಿರಕ್ಕೆ ಬಂದರೆ "ಮೈಲಿಗೆಯಾಯಿತು'' ಎಂದು ಗಳಿಗೆಗೊಂದು ಸಲ ಸ್ನಾನಮಾಡುತ್ತಾ ಊಟ ಮಾಡುವಾಗ ಯಾರಾದರೂ ಕಂಡರೆ ಊಟವನ್ನೇ ಬಿಟ್ಟು ಎದ್ದು ಬಿಟ್ಟರೆ, ಉಳಿದವರಿಗೆ ಹೇಗೆ ಆಗುತ್ತೆ? ಹಾಗೆಯೇ ವೀರಶೈವರು ಮಾಡಿದರೆ ಉಳಿದವರಿಗೆ ಹೇಗೆ ಆಗುತ್ತೆ. ಹೀಗೆ ನಾವು ಮಾಡಿದರೆ ಬಾಹ್ಯವಾದ ವ್ಯತ್ಯಾಸವನ್ನು ಹೆಚ್ಚಿಸಿಕೊಂಡಂತೆ ಆಗುತ್ತದೆ. ಸಾಧ್ಯವಾದ ಮಟ್ಟಿಗೆ ಆಹಾರ ನಡವಳಿಕೆ ಸೆರೆಮನೆಯಂತಹ ಸಂಕ್ಷಿಪ್ತ ವಾತಾವರಣದಲ್ಲಿ ಒಮ್ಮುಖವಾಗಿರಬೇಕು ಎಂಬುದು ಮಾಂಸಾ ಹಾರಿಗಳಾದ ಡಿಟೆನ್ಯುಗಳಿಗೆ ಮರೆಯಲು ಅವರ ನಾಲಿಗೆಯ ರುಚಿಯೇ ಮುಖ್ಯ ಕಾರಣವಾಯಿತು. ಪ್ರಾರಂಭದಲ್ಲಿ ಹೊರಗಿನಿಂದ ಮಾಡಿದ

ಪಾಕಿಸ್ತಾನ ಬುಟ್ಟಿ ಬುಟ್ಟಿ ಬಂದು ಗುಟ್ಟಾಗಿ ವಿಲೆಯಾಗುತ್ತಿದ್ದುದು. ಕೊನೆಯಲ್ಲಿ ಸೆರೆಮನೆಯಲ್ಲಿಯೇ ಕಟುಕರ ಗೃಹವೂ ಮಾಂಸ ಬೇಯಿಸುವ ಪಾಕಶಾಲೆಯೂ ಸಿದ್ಧವಾಯಿತು. ಬಾಹ್ಯ ಪ್ರಪಂಚದಲ್ಲಿ ವಿಸ್ತಾರವಾಗಿರುವೆಡೆ, ನಿಮಗೆ ಅಸಮಾಧಾನವಾದರೆ ನೀವು ಮೂರು ದಿನ ಮುವ್ವತ್ತು ದಿನ ಅವರ ಸಹವಾಸ ಬಿಟ್ಟುಬಿಡಬಹುದು. ಆದರೆ ಸೆರೆಮನೆಯಲ್ಲಿ ಹಾಗೆ ಮಾಡಿದರೆ ನಿತ್ಯಾ ನೂರು ಪಕ್ಷಗಳಾಗುತ್ತವೆ. ಮಾಂಸಾಹಾರಿಗಳಲ್ಲದವರು "ಒಗ್ಗಟ್ಟಿನ ಹೆಸರಿನಲ್ಲಿ ಯಾವ ತ್ಯಾಗ ಬೇಕಾದರೂ ಮಾಡೋಣ. ಆದರೆ ಕೇವಲ ನಾಲಿಗೆಯ ರುಚಿಗಾಗಿಯೇ ಇವರು ಮೂಳೆ ಕಡಿಯುವುದಾದ ಮೇಲೆ ಎರಡು ಪಾಕಶಾಲೆಗಳು ಆಗಬೇಕು. ಒಬ್ಬರಿಗೊಬ್ಬರಿಗೆ ಸಂಪರ್ಕ ಬೇಡ" ಎಂದು ಗರ್ಜಿಸಿದರು. ಕೊನೆಗೂ ಮಾಂಸಾಹಾರಿಗಳು ತಮ್ಮ ಹಟ ಬಿಡಲಿಲ್ಲ. ಸೆರೆಮನೆಯಲ್ಲಿ ಎರಡು ಅಡಿಗೆ ಮನೆಯಾದರೆ ನಮ್ಮ ಒಗ್ಗಟ್ಟು ತಗ್ಗುವುದೆಂದು ಸಸ್ಯಗಳನ್ನು ತಿನ್ನುವವರು, ಪ್ರಾಣಿಗಳನ್ನು ತಿನ್ನುವವರ ಮೇಲೆ ಹುರುಡು ಮಾಡದೆ ಕಂಡೂ ಕಾಣದಂತೆ ಇದ್ದುಬಿಟ್ಟರು. ರಾಮಯ್ಯನವರು ಮಾತ್ರ "ಸರ್ಕಾರವನ್ನಾದರೂ ಎದುರಿಸಿ ದಾರಿಗೆ ತರಬಹುದಯ್ಯ. ಆದರೆ ಇವರ ಜತೆ ಇರುವುದು ಸಾಧ್ಯವಿಲ್ಲ. ಕುರಿಯ ಕಿವಿ ತಿಂದು ಅಭ್ಯಾಸವಾದವನು ನಮ್ಮ ಕಿವಿನೂ ಕಡಿದರೆ ಮಾಡೋದೇನಯ್ಯ" ಎಂದು ಹಾಸ್ಯ ಮಾಡುತ್ತಿದ್ದರು. ಸೀಮಯ್ಯನವರು "ಸೆರೆಮನೆಯಲ್ಲಿಯೂ ಈ ಆಹಾರವನ್ನು ಇವರು ಬಿಡುವುದಿಲ್ಲ ಎನ್ನುವುದು ಆ ಆಹಾರವನ್ನು ತಿನ್ನುವುದರಿಂದುಂಟಾದ ಇವರ ಸ್ವಭಾವದ ಮಹತ್ವ" ವಿರಬಹುದೆಂದರು.

ಈ ಸಲ ಸೆರೆಮನೆಗಳಲ್ಲಿ ಎಲ್ಲೆಲ್ಲಿಯೂ ನೂಲು ತೆಗೆಯುವವರೇ ಕಣ್ಣಿಗೆ ಬೀಳುತ್ತಿದ್ದರು. ಯಾವ ಬ್ಯಾರಕ್‌ನಲ್ಲಿ ನೋಡಲಿ ರಾಟೆಗಳ ತಿರುಗಾಟ. ಕೆಲವು ರಾಟೆಗಳಂತೂ ಗಾಣಿಗರ ಗಾಣಗಳಂತೆ ಕಿರೋ ಎಂದು ಶಬ್ದ ಮಾಡುತ್ತಿದ್ದವು. 10-15 ತಿಂಗಳು ಸೆರೆಯ ವಾಸದಿಂದ ಅನೇಕರು ನೂಲುವುದರಲ್ಲಿಯೂ, ರಾಟೆಗಳನ್ನು ಸರಿಮಾಡುವುದರಲ್ಲಿಯೂ ನಿಪುಣರಾದರು. ಕೋಲಾರದ ಆಚಾರ್ರು—ಇವರು ಯಾವಾಗಲೂ ತಾವು ನೂತ ನೂಲಿನ ಬಟ್ಟೆ ಉಡುವವರೇ—ದಿನಕ್ಕೆ ಮೂರು ಹ್ಯಾಂಕ್ ನೂಲು ಎಳೆದುಬಿಡುತ್ತಿದ್ದರು. ರೇಶನ್ ಅಧಿಕಾರಿ, ಸಾಮಾನಿಗಾಗಿ 24 ಗಂಟೆ

ಗಳೂ ಕಂಟ್ರಾಕ್ಟ್‌ರೊಂದಿಗೆ ಚರ್ಚೆಮಾಡುತ್ತಿದ್ದರೂ ದಿನಕ್ಕೆ 3 ಹ್ಯಾಂಕ್ ತಪ್ಪದೆ ನೂಲುತ್ತಿದ್ದರು. ಕೆಲವರಿಗೆ ಊಟ ನಿದ್ರೆ ಹೊರತು ಉಳಿದ ಕಾಲಗಳಲ್ಲಿ ನೂಲುವುದೊಂದೇ ಯೋಗವಾಯಿತು. ವಾಸು ನೂಲುವುದಕ್ಕಿಂತ ಹೆಚ್ಚಾಗಿ ನೂಲುವವರಿಗೆ ಸಹಾಯ ಒದಗಿಸುವುದರಲ್ಲಿ ತೊಡಗಿದ್ದ. ಸೀಮಯ್ಯನವರ ಹತ್ತಿರ ರಾಟೆ ಇಲ್ಲದೆ ಇದ್ದರೂ ಇತರರ ರಾಟೆಯಲ್ಲಿ ಸಾಮಾನ್ಯವಾಗಿ ನೂಲುತ್ತಿದ್ದರು. ಬಿಜಾಪುರದ ಕ್ಷಾಮ ನಿಧಿಯ ಸಂದರ್ಭದಲ್ಲಿ ಆ ಒಂದೆರಡು ತಿಂಗಳಿನಲ್ಲಿ ತೆಗೆದ ಸುಮಾರು ಇನ್ನೂರು ರುಪಾಯಿ ನೂಲು ಒದಗಿತು. ಕರ್ಣಾಟಕ ಚರಖ ಸಂಘದ ಕಾರ್ಯದರ್ಶಿಯೇ ಸೆರೆಯಾಳಾದುದರಿಂದ ರಚನಾತ್ಮಕ ಕಾರ್ಯ ಸೆರೆಮನೆಯೊಳಗೆ ಸಮರ್ಪಕವಾಗಿಯೇ ನಡೆಯಿತು.

---

## ೪೯. ಕೆಲವು ದೃಶ್ಯಗಳು

ಕೆಲಸಗಾರರೆಲ್ಲ ಒಂದೇ ಕಡೆ ಸೇರುವಂತೆ ಮಾಡಿ, ಸರ್ಕಾರ ಒಂದು ರೀತಿಯಲ್ಲಿ ಡಿಟೆನ್ಯುಗಳಿಗೆ ಸಹಾಯವನ್ನೇ ಮಾಡಿತು ಎಂದು ಹೇಳಬಹುದು. ಚಾಣಕ್ಯರು ಪ್ರತಿದಿನವೂ ಮಧ್ಯಾಹ್ನ ಮೈಸೂರು ದೇಶದ ಹಣಕಾಸಿನ ಆಡಳಿತದ ಮೇಲೆ ಪಾಠಕ್ರಮ ನಡೆಸುತ್ತಿದ್ದರು. ಅಯ್ಯನವರು ಮೂರು ನಾಲ್ಕು ದಿನ ಮೈಸೂರು ದೇಶದ ಬಜೆಟ್ ಕುರಿತು ಕೂಲಂಕಷವಾಗಿ ಮಾತನಾಡಿದರು. ಪ್ರಾಣಾಚಾರ್ಯರು ಆಯುರ್ವೇದದ ತರಗತಿ ನಡೆಸುತ್ತಿರುವುದು ಗೋಚರವಾಗುತ್ತಿದ್ದಿತು. ಹಿಂದಿ ಮೂರ್ತಿಗಳು ಹಿಂದಿಯ ಜತೆಗೆ ಉರ್ದುವನ್ನೂ ಪ್ರಾರಂಭಿಸಿಬಿಟ್ಟರು. ದೊಡ್ಡ ದೊಡ್ಡ ಪುಢಾರಿಗಳು ಮೊದಲುಗೊಂಡು ಅಲೀಫ್‌ಜಬರ್ ಅ ಫೆಕೆನೀಜೆ ತೀನ್ ನುಕ್ತಾಫೆ ಎಂದುಕೊಂಡು ಬಲಗಡೆಯಿಂದ ಎಡಗಡೆಗೆ ಬರೆಯಲು ಪ್ರಾರಂಭಿಸಿದರು. ಪ್ರಾಣಾಚಾರ್ಯರಂತೂ ಅಡಿಗೆ ಮನೆಯಿಂದ ಸ್ನಾನದ ಮನೆಗೆ, ಸ್ನಾನದ ಮನೆಯಿಂದ ಆಟದ ಬಯಲಿಗೆ ಜಗ್ಗು ಹಾಕುತ್ತಾ ತಾಳಾ ಹಾಕಿಕೊಂಡು ಉರ್ದು ಅಕ್ಷರಗಳನ್ನು ಹೇಳಿಕೊಂಡು ತಿರುಗುತ್ತಿದ್ದರು. ಮೈಸೂರಿನ ಪಂಡಿತರು, ಯಾರು ಕೇಳಲಿ ಯಾರು ಬಿಡಲಿ

ಗಮನಿಸದೆ ಒಂದೇ ಸಮನೆ ಕುಮಾರವ್ಯಾಸ ಭಾರತವನ್ನು ಓದುತ್ತಿದ್ದರು. ಬ್ಯಾರಕ್‌ನಲ್ಲಿದ್ದವರಿಗೆ, ಮೊದಮೊದಲು ಇವರು ಯಾಕಪ್ಪ ಹೀಗೆ ಕಯ್ ಗುಟ್ಟಿ ನಮ್ಮನ್ನು ಹಿಂಸಿಸುತ್ತಾರೆ ಎಂಬ ಬೇಸರಿಕೆ ಇದ್ದುದು ಬರಬರುತ್ತಾ ಕುಮಾರವ್ಯಾಸನ ಮಹಿಮೆಯಿಂದಲೋ ಏನೋ ಭಾರತದಲ್ಲಿ ಶ್ರದ್ಧೆ ಉಂಟಾಯಿತು. ಇನ್ನೊಂದು ಸಲ ಓದಿ ಎಂದರು. ಎಲ್ಲಿ ಸ್ವಲ್ಪ ಅರ್ಥ ಹೇಳಿ ಎಂದರು. ಅರ್ಥ ಹೇಳುವುದಕ್ಕೆ ಓಬ್ಬರು ಕುಳಿತರು. ಕೆಲವು ಕಾಲ ಮರೆಯಾಗಿದ್ದ ಕುಮಾರವ್ಯಾಸ ತನ್ನ ಪ್ರಭುತ್ವವನ್ನು ಮತ್ತೆ ಸ್ಥಾಪಿಸಿದನು.

ಗೋಡೆಗೆ ಟಾರು ಬಳಿದು ಅದನ್ನೇ ಒಂದು ಬ್ಲಾಕ್ ಬೋರ್ಡು ಆಗಿ ಏರ್ಪಡಿಸಿಕೊಂಡಿದ್ದರು. ಆ ಬೋರ್ಡಿಗೆ ಯಾವಾಗಲೂ ವಿರಾಮ ವಿರಲಿಲ್ಲ. ಹಿಂದಿ, ಉರ್ದು ಆಯುರ್ವೇದ ನೂಲುವ ಶಾಸ್ತ್ರದ ಅಂಕಿ ಗಳು ಛಂದಸ್ಸು ಕೊನೆಗೆ ಶೀಘ್ರಲಿಪಿ ಯಾವುದಾದರೂ ಆ ಬೋರ್ಡಿನಲ್ಲಿ ತುಂಬಿಯೇ ಇರುತ್ತಿದ್ದಿತು. ಮತ್ತೊಂದು ಬ್ಯಾರಕ್‌ನಲ್ಲಿ ಇದ್ದಕ್ಕಿದ್ದಂತೆ ಒಂದು ದೊಂಬಿಯೇ ಎದ್ದುಬಿಡುತ್ತಿದ್ದಿತು. ಇದೇನು ಇರಬಹುದೆಂದು ಡಿಟೆನ್ಯುಗಳೆಲ್ಲ ಓಡಿಬರುತ್ತಿದ್ದರು. ಭದ್ರಾನಂತ ಶಾಸ್ತ್ರಿಗಳು ವಿದ್ಯಾರ್ಥಿ ಗಳಿಗೆ ಜ್ಯೋತಿಷ್ಯ ಪಾಠವನ್ನು ಹೇಳುವಾಗ ವಿದ್ಯಾರ್ಥಿಗಳು ಹಾಕಿದ ಕುಹಕದ ಪ್ರಶ್ನೆಗೆ ಜವಾಬುಕೊಡುತ್ತಿದ್ದ ಉತ್ಸಾಹದ ಕಾವು ಅದು. ಭದ್ರಾನಂತ ಶಾಸ್ತ್ರಿಗಳಿಗೆ 55 ವಯಸ್ಸು. ಇವರು ಮೊದಲು ದಿನ ಸೆರೆ ಮನೆಗೆ ಡಿಟೆನ್ಯುವಾಗಿ ಬಂದಾಗ ಉಳಿದವರು "ಪಾಪ ಈ ಸರ್ಕಾರಕ್ಕೆ ಕಣ್ಣಿಲ್ಲವಲ್ಲ. ಈ ಮುದುಕರನ್ನ ಯಾಕೆ ಹಿಡಿದುಕೊಂಡು ಬಂದಿದ್ದಾರೆ" ಎಂದುಕೊಂಡರು. ಶಾಸ್ತ್ರಿಗಳ ಗಡ್ಡ ಆಗ ಸ್ವಲ್ಪ ಬೆಳೆದಿತ್ತು. ಅವರು ಆ ದಿನ ಸೆರೆಮನೆಯಲ್ಲಿ ಕ್ಷೌರ ಮಾಡಿಸಿಕೊಂಡಾಗಲೇ ಒಳ್ಳೆಯ ತೇಜಸ್ವಿ ಯಾಗಿ ಕೆಂಪಗೆ ಹುಡುಗನಂತೆ ಕಾಣುತ್ತಿದ್ದರು. ಈ ಮುದುಕನ ಮುಂದೆ ನಮ್ಮ ಹುಡುಗತನ ನಡೆಯುವುದಿಲ್ಲವೆಂದುಕೊಂಡರು ಡಿಟೆನ್ಯು ಗಳು. ಧೈರ್ಯ, ಸಾಹಸ, ಪರಿಶುದ್ಧಿ, ಸ್ನಾನ, ಬಟ್ಟೆಗಳನ್ನು ಶುದ್ಧವಾಗಿ ಒಗೆ ದಿಟ್ಟುಕೊಂಡಿರುವುದು, ಯಾವಾಗಲೂ ಪಾದರಸದಂತಹ ಚಟುವಟಿಕೆ, ಅನುಭವದಿಂದ ಮಾತ್ರ ಉಂಟಾಗಿರುವ ಸಂಸ್ಕೃತಿ; ಶಾಸ್ತ್ರಿಗಳನ್ನು ನೋಡಿದರೆ ಯಾರಿಗಾದರೂ "ಇಷ್ಟಲ್ಲದೆ ಸರ್ಕಾರಕ್ಕೆ ನಿಮ್ಮನ್ನು ಕಂಡರೆ

ಭಯುವೇ'' ಎನಿಸುತ್ತಿದ್ದಿತು. ಶಾಸ್ತ್ರಿಗಳು ಒಳ್ಳೆಯ ತೇಜಸ್ವಿಗಳಾಗಿ ಒಂದು ವಿಧವಾದ ತೃಪ್ತಿಯನ್ನು ಅಭ್ಯಾಸಮಾಡಿಕೊಂಡಿದ್ದರು. ಹುಡುಗ ರೊಂದಿಗೆ ಹುಡುಗರಾಗಿ ವಯಸ್ಕರೊಂದಿಗೆ ವಯಸ್ಕರಾಗಿ ಸೆರೆಮನೆಗೆ ಡಿಟೆನ್ಯುವಾಗಿ ಬಂದಿದ್ದ ತಮ್ಮ ಮಗನೊಂದಿಗೆ ಮಿತ್ರರಂತೆ ವರ್ತಿಸುತ್ತಾ ಹಿರಿಯತನದ ಗಾಂಭೀರ್ಯವನ್ನು ಉಳಿಸಿಕೊಂಡಿದ್ದರು.

ಶಾಸ್ತ್ರಿಗಳದು ಜ್ಯೋತಿಷ್ಯ ಶಾಸ್ತ್ರದಲ್ಲಿ ಒಳ್ಳೆಯ ಪಾಂಡಿತ್ಯ. ಸಾಧಾರಣವಾಗಿ ಸೆರೆಮನೆಯಲ್ಲಿ ಎಲ್ಲರಿಗೂ ಜ್ಯೋತಿಷ್ಯ ಶಾಸ್ತ್ರದಲ್ಲಿ ಆಸೆ ಉಂಟಾಗುತ್ತದೆ. ಅದು ಸಂಗೀತ ಸಾಹಿತ್ಯದಂತೆ ಬಹು ಮೋಹಕವಾದ ಶಾಸ್ತ್ರ. ಅದರ ಪ್ರಭಾವವನ್ನು ನಾಸ್ತಿಕರೂ ಜಯಿಸಿಲ್ಲ. ವಾರದ ಭವಿಷ್ಯ ವನ್ನು ಹೇಳದ ಯಾವ ವೃತ್ತಪತ್ರಿಕೆಯೂ ಈ ಕಾಲದಲ್ಲಿ ಖರ್ಚಾಗು ವುದಿಲ್ಲ. ಜ್ಯೋತಿಷ್ಯ ಶಾಸ್ತ್ರ ಬರಿಯ ಬುರುಡೆ ಎನ್ನುವವರೂ ಕೂಡ ಪತ್ರಿಕೆ ಕೈಗೆ ಬಂದ ಕೂಡಲೇ ಮೆಲ್ಲಗೆ ತಮ್ಮ ರಾಸಿಯ ಫಲವನ್ನು ನೋಡಿ ಕೊಂಡು ಬಿಡುತ್ತಾರೆ. ಸೆರೆಮನೆಯಲ್ಲಿ ಜ್ಯೋತಿಷ್ಯ ಬಲ್ಲವರನ್ನೂ ಸಾಮುದ್ರಿಕ ಬಲ್ಲವರನ್ನೂ ಕಂಡರೆ ಡಿಟೆನ್ಯುಗಳು ಕೇಳುತ್ತಿದ್ದುದು ಒಂದೇ ಪ್ರಶ್ನೆ. 'ಬಿಡುಗಡೆ' ಎಂದು. ಈ ಪ್ರಶ್ನೆಯನ್ನು ಕೇಳುವುದರಲ್ಲಿ ಡಿಟೆನ್ಯುಗಳು ಬಿಡುಗಡೆಗಾಗಿ ಬಹಳ ಆತುರಗಾರರಾಗಿದ್ದರೆಂದಲ್ಲ. ಸೆರೆ ಯಲ್ಲಿರುವವರು ಬಿಡುಗಡೆ ಹೊಂದಲು ಎಷ್ಟು ಆತುರವುಳ್ಳವರಾಗಿರ ಬೇಕೋ ಅಷ್ಟು ಆತರ ಡಿಟೆನ್ಯುಗಳಿಗೆ ಇದ್ದಿತು. ಆದರೆ ಜ್ಯೋತಿಷ್ಯ ವಿದ್ವಾಂಸರನ್ನು ಕಂಡರೆ ಅಂತಹ ಕಣ್ಣಿಗೆ ಕಾಣದ ಆದರೆ ಖಂಡಿತವಾದ ಪ್ರತ್ಯುತ್ತರ ಬರಬಹುದಾದ ಪ್ರಶ್ನೆಯನ್ನು ತಾನೇ ಹಾಕಬೇಕೇ. ಆಗೆಸ್ಟ್ ನಲ್ಲಿ ಬಂದಿಗಳಾದ ಡಿಟೆನ್ಯುಗಳನ್ನು ಅದೇ ಡಿಸೆಂಬರ್‌ನಲ್ಲಿ ಬಿಡುಗಡೆ ಮಾಡುತ್ತಾರೆ ಎಂದು ಹಾಸ್ಯಪುರಿಯ ಸೆರೆಮನೆಯಲ್ಲಿರುವಾಗ ಐಯ್ಯಂ ಗಾರ್‍ಯರು ಜ್ಯೋತಿಷ್ಯ ನೋಡಿ ಹೇಳಿದ್ದರು. ಬಿಡುಗಡೆ ಮಾಡುವುದಿರಲಿ. ತಾಯಿಯ ಮೊದಲ ವರುಷದ ಶ್ರಾದ್ಧಕ್ಕೇ ಒಬ್ಬ ಡಿಟೆನ್ಯುವನ್ನು ಒಂದು ದಿನ ಮಟ್ಟಿಗೆ ಪೆರೋಲ್ ಮೇಲೆ ಬಿಡಲಿಲ್ಲ, ಭಾರತ ರಕ್ಷಣೆಯನ್ನು ವಹಿಸಿ ಕೊಂಡಿದ್ದ ಅಲ್ಲಿಯ ಜಿಲ್ಲಾಧಿಕಾರಿಗಳು. ಡಿಟೆನ್ಯುಗಳಿಗೆಲ್ಲಾ ಭದ್ರಾನಂತ ಶಾಸ್ತ್ರಿಗಳನ್ನು ಬಿಡುಗಡೆಗಾಗಿ ಕಿರುಕುಳಗೊಳಿಸುವುದೇ ವಿನೋದವಾಗಿ ದ್ದಿತು. ಆದರೆ ಶಾಸ್ತ್ರಿಗಳು ಎಷ್ಟೋ ಜನ ಪ್ರಶ್ನೆ ಕೇಳುವವರಿಗೆ ಎಷ್ಟೋ

ಬಗೆಯ ಪ್ರತ್ಯುತ್ತರವನ್ನು ಕೊಟ್ಟವರು. ಮೇಲಾಗಿ ತೀಕ್ಷ್ಣವಾದ ಬುದ್ಧಿಯುಳ್ಳವರು. ಒಳ್ಳೆಯ ಗಣಿತ ಶಾಸ್ತ್ರ ಲೆಕ್ಕಾಚಾರಸ್ತರು. ಆದುದರಿಂದ ಅವರು ಕೇಳಿದವರಿಗೆಲ್ಲಾ ಸರಿಯಾದ ಪ್ರತ್ಯುತ್ತರವನ್ನೇ ಕೊಡುತ್ತಿದ್ದರು. ಪತ್ರಿಕೆಗಳಲ್ಲಿ ಬರುತ್ತಿದ್ದ ಸಮಾಚಾರಗಳು ಯುದ್ಧದ ವರ್ತಮಾನಗಳು ಪಾರ್ಲಿಮೆಂಟಿನಲ್ಲಿ ಚರ್ಚೆ ಇವುಗಳ ಜತೆಗೆ ನಕ್ಷತ್ರಗಳ ಗತಿಯನ್ನೂ ಲೆಕ್ಕಾಚಾರಹಾಕಿ ತಮ್ಮ ವ್ಯವಹಾರ ಜ್ಞಾನವನ್ನೆಲ್ಲಾ ಉಪಯೋಗಿಸಿ ಒಂದು ತಾರೀಖನ್ನು ಸಾಧಾರಣವಾಗಿ ಹೇಳುತ್ತಿದ್ದರು. ಹೀಗೆ ಅವರು ಹೇಳುತ್ತಿದ್ದ ದಿನ ಕೇಳಿದ ದಿನದಿಂದ 1 ತಿಂಗಳು 1½ ತಿಂಗಳಿನಿಂದ ಆಚೆ ಇರುತ್ತಿರಲಿಲ್ಲ. ಆದರೆ ಒಬ್ಬ ಡಿಟೆನ್ಯು ಹೇಳಿದಂತೆ "ಪಾಪ. ಮಂತ್ರಿಗಳು ತಿದ್ದಿ ಕೂರಿಸಿರುವ ಗೊಂಬೆಗಳು! ಎಲ್ಲಿ ಬಿಡುತ್ತಾರೆ. ಶಾಸ್ತ್ರಿಗಳ ತಾರೀಖಿನ ದಿನ ಏನೂ ಆಗುತ್ತಿರಲಿಲ್ಲ. ಆಗುತ್ತಿರಲಿಲ್ಲವೆಂದು ಎಲ್ಲರಿಗೂ ಗೊತ್ತಿದ್ದಿತು. ಆದರೆ ಶಾಸ್ತ್ರಿಗಳನ್ನು ಸುಮ್ಮನೆ ಬಿಡುತ್ತಿರಲಿಲ್ಲ. "ಹೊ. ನಿಮ್ಮ ಜ್ಯೋತಿಷ್ಯ ಬರಿಯ ಬುರುಡೆ. ಇಲ್ಲಿ ಕುಳಿತಿರುವ ನಮಗೂ ಅಷ್ಟು ದೂರದಲ್ಲಿ ತಿರುಗುತ್ತಿರುವ ಗ್ರಹಗಳಿಗೂ ಏನು ಸಂಬಂಧ. ನಮಗೆ ಸಂಬಂಧವಿರುವ ಗ್ರಹಗಳು ಅಷ್ಟು ದೂರದಲ್ಲಿ ಇಲ್ಲ. ನಮಗೆ ಸಂಬಂಧಿಸಿರುವ ಗ್ರಹಗಳ ಸಂಖ್ಯೆ ಅಷ್ಟು ಹೆಚ್ಚೂ ಅಲ್ಲ. ನಮಗೆ ಸಂಬಂಧಿಸಿದ ಗ್ರಹಗಳಿಗೆ ಸ್ವಂತ ಚಲನೆ ಎಲ್ಲಿ ಬಂತು ಸ್ವಾಮಿ? ಇವುಗಳಿಗೆ ಇರುವುದು ಒಂದೇ ಗತಿ. ವಕ್ರಗತಿ; ಇವುಗಳ ದೃಷ್ಟಿ ಯಾವಾಗಲೂ ಕ್ರೂರ" ಎಂದು ವಿನೋದ ಮಾಡುತ್ತಿದ್ದರು. ಶಾಸ್ತ್ರಿಗಳು "ಈ ಭೂಮಿಯಲ್ಲಿ ಹುಟ್ಟಿದವರಿಗೆಲ್ಲಾ ಎಲ್ಲಾ ಗ್ರಹಗಳ ಸಂಪರ್ಕವೂ ಇದೆ. ಕೆಲವು ಗ್ರಹಗಳ ಸಂಪರ್ಕ ನಮಗೆ ಇಲ್ಲ ಎನ್ನುವುದು. ಜ್ಯೋತಿಷ್ಯ ಶಾಸ್ತ್ರ ತಿಳಿಯದವರ ಮಾತು" ಎನ್ನುತ್ತಿದ್ದರು.

ಜ್ಯೋತಿಷ್ಯ ಶಾಸ್ತ್ರ ಮೋಹಕವಾದ ಶಾಸ್ತ್ರವೆಂದು ಹೇಳಿದೆನಷ್ಟೆ. ಸೀಮಯ್ಯನವರು ಇದಕ್ಕೆ ನಿದರ್ಶನವಾಗಿ ಒಂದು ಅನುಭವವನ್ನು ಹೇಳುತ್ತಿದ್ದರು. ಅವರು ಹಿಂದೆ ಯಾವಾಗಲೋ ಒಂದು ಸಲ ಒಬ್ಬ ಸ್ವಾಮಿಗಳನ್ನು (ಮಠಾಧಿಪತಿಗಳು) ನೋಡಲು ಹೊರಟರಂತೆ. ಸ್ವಾಮಿಗಳು ಯಾತ್ರೆ ಹೊರಟು ಮುಂದು ಮುಂದೆ ಹೋಗುತ್ತಿದ್ದರು. ಸೀಮಯ್ಯನವರು ಅವರು ಹೋದ ಸ್ಥಳಗಳಿಗೆಲ್ಲಾ ಒಂದು ದಿನ ಹಿಂದಾಗಿ

ಹೋಗುತ್ತಿದ್ದರು. ಇವರು ಹೋದೆಡೆಗಳಲ್ಲೆಲ್ಲಾ "ಸ್ವಾಮಿಗಳು ನೆನ್ನೆ ಇಲ್ಲಿಂದ ಮುಂದೆ ದಯಮಾಡಿದರು" ಎಂದು ಹೇಳುತ್ತಿದ್ದರು. ಸೀಮಯ್ಯನವರು ಒಂದು ಊರಿನಲ್ಲಿ, ಪ್ರಯಾಣದ ಆಯಾಸವನ್ನು ಸುಧಾರಿಸಿಕೊಳ್ಳಲು ಎರಡು ದಿನ ನಿಂತರು. ಆ ಮನೆಯ ಯಜಮಾನ ಮಹಾರಾಷ್ಟ್ರ. ಅವರು ಸೀಮಯ್ಯನವರಿಗೆ ಬಹಳ ಆತಿಥ್ಯ ಮಾಡಿದರು. ಮನುಷ್ಯ ಸ್ವಭಾವವನ್ನು ಚೆನ್ನಾಗಿ ಬಲ್ಲ ಸೀಮಯ್ಯನವರಿಗೆ ಆ ದಂಪತಿಗಳ ಆತಿಥ್ಯ ಕಂಡು ಸ್ವಲ್ಪ ಆಶ್ಚರ್ಯವಾಯಿತು. ಇವರು ಅಲ್ಲಿಂದ ಮುಂದೆ ಹೊರಡುವುದಕ್ಕೆ ಎರಡು ಮೂರು ಗಂಟೆಗಳ ಮುಂಚೆ ಆ ದಂಪತಿಗಳು ಇವರ ಎದುರಿಗೆ ಕೈಮುಗಿದುಕೊಂಡು ನಿಂತುಕೊಂಡರು. ಸೀಮಯ್ಯನವರು ಗಾಬರಿಯಿಂದ "ಏನು. ಏನಾಗಬೇಕು" ಎಂದು ಕನ್ನಡದಲ್ಲಿ ಕೇಳಿದರು. ಯಜಮಾನರು ಮರಾಠಿಯಲ್ಲಿ "ನಮ್ಮ ಜಾತಕ ನೋಡಬೇಕು" ಎಂದು ಹೇಳಿ ತನ್ನ ಮತ್ತು ತನ್ನ ಹೆಂಡತಿಯ ಜಾತಕಗಳನ್ನು ಮುಂದೆ ನೀಡಿದರು. ಸೀಮಯ್ಯನವರಿಗೆ ಜ್ಯೋತಿಷ್ಯ ತಿಳಿಯುತ್ತಿರಲಿಲ್ಲ. ಮರಾಠಿ ಮಾತು ತಿಳಿಯುತ್ತಿರಲಿಲ್ಲ. ಅವರು ತಮಗೆ ಬರುವುದಿಲ್ಲವೆಂದು ಹೇಗೋ ಆತನಿಗೆ ತಿಳಿಸಿ ಮುಂದಲ ಊರದಾರಿ ಹಿಡಿದನು.

ಸೆರೆಮನೆಯಲ್ಲಿ ಭದ್ರಾನಂತ ಶಾಸ್ತ್ರಿಗಳು ಜ್ಯೋತಿಷ್ಯವನ್ನು ಹೇಳುತ್ತಿದ್ದ ಕ್ರಮ ಅನೇಕರ ಮನಸ್ಸಿಗೆ ಹಿಡಿದುದರಿಂದ ಕೆಲವರು ಜ್ಯೋತಿಷ್ಯವನ್ನು ಅಭ್ಯಾಸಮಾಡಲು ಪ್ರಾರಂಭಿಸಿದರು. ಪ್ರಭವ ವಿಭವ ಸಂವತ್ಸರಗಳೂ ಅಶ್ವಿನಿ ಭರಣಿ ನಕ್ಷತ್ರಗಳೂ ಚಾಂದ್ರಮಾನ ಸೌರಮಾನಗಳೂ ನವಗ್ರಹಗಳೂ ನಮ್ಮ ಬಾಲ್ಯದಲ್ಲಿ ನಾವು ಬಾಯಿಪಾಠ ಹೇಳುತ್ತಿದ್ದಾಗ ಕಿವಿಗೆ ಬಿದ್ದಿದ್ದುವು. ಮತ್ತೆ ಬೀಳ ತೊಡಗಿದವು. ಉಪಾಧ್ಯಾಯರಿಗೆ ಅನುಸಾರವಾಗಿ ವಿದ್ಯಾರ್ಥಿಗಳೂ ಒಳ್ಳೆಯ ಬುದ್ಧಿಯವರೇ ಆಗಿದ್ದರು. ಆದರೆ ಇದು ಬುರುಡೆ ಶಾಸ್ತ್ರ ಎಂಬ ನಂಬಿಕೆ ವಿದ್ಯಾರ್ಥಿಗಳಿಗೆ ಇದ್ದುದರಿಂದ ಶಾಸ್ತ್ರಿಗಳಿಗೆ ಇದ್ದಕ್ಕಿದ್ದಂತೆ ಯಾವುದೋ ಒಂದು ವಿನೋದದ ಪ್ರಶ್ನೆಯನ್ನು ಹಾಕಿಬಿಡುತ್ತಿದ್ದರು. ಸಾಮಾನ್ಯರಾದ ಜ್ಯೋತಿಷ್ಯ ಉಪಾಧ್ಯಾಯರಾಗಿದ್ದರೆ ಅಷ್ಟಕ್ಕೇ ತಬ್ಬಿಬ್ಬಾಗಬೇಕಾಗಿದ್ದಿತು. ಆದರೆ ಶಾಸ್ತ್ರಿಗಳು ಅಷ್ಟಕ್ಕೆ ಸೋಲುತ್ತಿರಲಿಲ್ಲ. ಅವರು ಒಳ್ಳೆಯ ಆವೇಶದಿಂದ ವಾದಿಸುತ್ತಿದ್ದರು. ಮಾತನಾಡುತ್ತಾ-ಆಡುತ್ತಾ ಅವರ ಕಾವು ಹೆಚ್ಚಾಗಿ ಆ ವಿಷಯ

ದಲ್ಲಿ ದೊಡ್ಡ ಉಪನ್ಯಾಸವನ್ನೇ ಮಾಡುತ್ತಿದ್ದರು. "ಏನು ಸ್ವಾಮಿ ಗ್ರಹಗಳ ಗತಿ ಹೇಗೆ ಇದೆ? ಅವುಗಳ ಹೋರಾಟದಲ್ಲಿ ನಿಮ್ಮ ಭಾಗ ವೇನು? ನಮ್ಮದೇನೋ ಈ ಗತಿಯಾಯಿತು. ಎಲ್ಲಾ ಗ್ರಹಗಳೂ ನಿಮ್ಮ ಸ್ವಾಧೀನದಲ್ಲಿಯೇ ಇರಬಹುದು. ಎಲ್ಲಿ ಒಂದೆರಡಕ್ಕೆ ಆರ್ಡರ್ ಕೊಡಿ" ಎಂಬುದಾಗಿ ರಾಮರಾಜಯ್ಯಂಗಾರ್‍ರು ಶಾಸ್ತ್ರಿಗಳನ್ನು ಆಗಾಗ್ಗೆ ಹಾಸ್ಯ ಮಾಡುತ್ತಿದ್ದರು. ಒಂದೊಂದು ಸಲ ಸಾಮುದ್ರಿಕಕ್ಕೂ ಜ್ಯೋತಿಷ್ಯಕ್ಕೂ ವಾದ ಬೀಳುತ್ತಿದ್ದಿತು. ಸಾಮುದ್ರಿಕದ ನರಸಿಂಗರಾಯರು ತಮ್ಮ ಶಾಸ್ತ್ರವನ್ನು ಶಾಸ್ತ್ರಿಗಳಷ್ಟೇ ಕಾವಿನಿಂದ ಪ್ರತಿಪಾದಿಸುತ್ತಿದ್ದರು.

ಸೆರೆಮನೆಯಲ್ಲಿ ಯುದ್ಧದ ಸಮಾಚಾರಗಳನ್ನು ಸಾಧಾರಣವಾಗಿ ವಿವರಿಸುತ್ತಿದ್ದವರು ಡಾಕ್ಟರ್ ಸಿಂಗರು. ಪತ್ರಿಕೆಗಳನ್ನು ಓದುವಾಗ ಒಬ್ಬೊಬ್ಬರು ಒಂದೊಂದು ವಿಚಾರಕ್ಕೆ ಹೆಚ್ಚು ಶ್ರದ್ಧೆಯಿಡುವುದು ಅವರ ವರ ಸ್ವಭಾವ. ಸೀಮಯ್ಯನವರು ಭಾರತದ ವರ್ತಮಾನಗಳನ್ನೇ ಹೆಚ್ಚಾಗಿ ಓದುತ್ತಿದ್ದರು. 42ನೆಯ ಆಗಸ್ಟ್ ಚಳವಳಿಯ ಸಂಬಂಧದಲ್ಲಿ ನಮ್ಮ ದೇಶದಲ್ಲ ಬ್ರಿಟಿಷ್ ಸರ್ಕಾರ ಎಷ್ಟು ಕಡೆ ವಿಮಾನಗಳಿಂದ ಜನಗ ಳನ್ನು ಮಿಷನ್ ಬಂದೂಕಗಳಿಂದ ಸುಟ್ಟರು. ಎಷ್ಟು ಸಾವಿರ ಜನಕ್ಕೆ ಛಡಿ ಏಟು ಬಿತ್ತು. ಭಾರತದ ವಿಚಾರದಲ್ಲಿ ಬ್ರಿಟಿಷ್ ಅಧಿಕಾರಿಗಳು ಹೇಳುತ್ತಿರುವ ಅಪದ್ಧಗಳೇನು ಇವುಗರನ್ನು ಚೆನ್ನಾಗಿ ವ್ಯಾಸಂಗ ಮಾಡು ವುದು ಸೀಮಯ್ಯನವರ ಪದ್ಧತಿಯಾಗಿದ್ದಿತು. ಐಯ್ಯಂಗಾರ್‍ರೂ ಇತರ ಪುಢಾರಿಗಳೂ ಪಾರ್ಲಿಮೆಂಟ್‌ನಲ್ಲಿ ಭಾರತವನ್ನು ಕುರಿತು ಬಂದ ಚರ್ಚೆ ಗಳೇನು? ಇಂಗ್ಲೆಂಡಿನಲ್ಲಿಯೂ ಭಾರತದಲ್ಲಿಯೂ ಅದರ ಪ್ರತಿಕ್ರಿಯೆ ಗಳೇನು ಎಂದು ನೋಡುತ್ತಿದ್ದರು. ಡಾಕ್ಟರ್ ಸಿಂಗ್ ಮಾತ್ರ ಯಾವಾ ಗಲೂ ಯುದ್ಧದ ಸಮಾಚಾರ; ಯುದ್ಧಗ ತಿಳಿಯಬೇಕಾದರೆ ಡಾ|| ಸಿಂಗ್ ರನ್ನು ಕೇಳಿದರೇ ಸಾಕಾಗುತ್ತಿದ್ದಿತು. ಅವರು ಬರಿಯ ಸುದ್ದಿಗಳನ್ನು ಮಾತ್ರ ಹೇಳುವುದಲ್ಲದೆ ಅವುಗಳಿಗೆಲ್ಲಾ ಸಮನ್ವಯಮಾಡಿ ಇಂಗ್ಲಿಷರು ಈ ಸುದ್ದಿ ಕೊಡುವುದಕ್ಕೆ ಕಾರಣ ಇದು. ಇವತ್ತು ಹೀಗೆ ಹೇಳಿದಾರೆ ನಾಳೆ ಹೀಗೆ ಹೇಳುತ್ತಾರೆ. ಈಗ ಜರ್ಮನರ ಅಷ್ಟು ಡಿವಿಜನ್ ರಷ್ಯಾ ದಲ್ಲಿದೆ; ಪೆರಲ್ ಹಾರ್‌ಬರ್ ಹೋಗುವುದಕ್ಕೆ ಕಾರಣ ಇದು. ಬರ್ಮಾ ಹೋಗುವುದಕ್ಕೆ ಕಾರಣ ಇದು. ಸಿಂಗಪುರ ಮಲಯಾದಲ್ಲಿ ಅವು ಬ್ರಿಟಿಷರ

ಕೈ ಬಿಟ್ಟಾಗ ಇಷ್ಟಿಷ್ಟು ಸೈನ್ಯಗಳಿದ್ದವು. ಬ್ರಿಟಿಷ್ ಅಮೆರಿಕನ್ ಜರ್ಮನ್ ಸೈನ್ಯಗಳು ಇಷ್ಟಿಷ್ಟು ಇಂತಹ ಕಡೆಗಳಲ್ಲಿಯೇ ಇವೆ; ಇವೇ ಮುಂತಾದ ಸಮಾಚಾರಗಳನ್ನೆಲ್ಲಾ ಕೂಲಂಕುಷವಾಗಿ ಅನುಮಾನವಿಲ್ಲದೆ ಸ್ಪಷ್ಟವಾಗಿ ವಿವರಿಸಿ ಹೇಳುತ್ತಿದ್ದರು. ಯುದ್ಧಕ್ಕೆ ಸಂಬಂಧಪಟ್ಟ ಜಗತ್ತಿನ ಭೂವಿವರಣೆ ಇವರಿಗೆ ಪೂರ್ಣವಾಗಿ ಕರಗತವಾಗಿದೆ. ಈ ಯುದ್ಧ ಮುಗಿದ ಮೇಲೆ ಜಗತ್ತಿನ ಹಿಂದಲ ರಾಜಕೀಯ ನಕ್ಷೆ ಹೇಗೂ ಬದಲಾವಣೆಯಾಗುವುದಷ್ಟೆ. ಈ ಹಳೆಯ ನಕ್ಷೆ ಬದಲಾವಣೆಯಾದ ಮೆಟ್ಟಲು ಮೆಟ್ಟಲುಗಳನ್ನು ಚಾಚೂ ತಪ್ಪದೆ ಇನ್ನು ಹತ್ತು ವರುಷಗಳ ನಂತರ ಬೇಕಾದರೂ ಡಾ|| ಸಿಂಗರು ಹೇಳುತ್ತಾರೆ.

ಜನರ ಸ್ವಭಾವ ಸೆರೆಮನೆಯಲ್ಲಿ ಒಬ್ಬರೊಬ್ಬರಿಗೆ ತಿಳಿಯುವಂತೆ ಹೊರಗೆ ತಿಳಿಯುವುದು ಸಾಧ್ಯವಿಲ್ಲ. ಹೊರಗಿನ ವಿಶಾಲ ಪ್ರಪಂಚದಲ್ಲಿ ಒಬ್ಬರೊಂದಿಗೆ ಒಬ್ಬರು ಹೆಚ್ಚಾಗಿ ಬೆರೆಯುವುದಿಲ್ಲ. ಒಂದೊಂದು ಗಳಿಗೆ ಸೇರುತ್ತಾರೆ. ಅವರವರ ತಾಪತ್ರಯ ಅವರವರಿಗೆ; ಸ್ನೇಹಿತರೊಂದಿಗೂ ಪರಿಚಿತರೊಂದಿಗೂ ಮಾತನಾಡುವಾಗ ಗಂಭೀರವಾಗಿಯೇ ನಗು ನಗುತ್ತಲೇ ಇರುತ್ತಾರೆ. ಸೆರೆಮನೆ ಹಾಗಲ್ಲ. ಸಂಕುಚಿತ ವಾತಾವರಣ. ಇಪ್ಪತ್ತನಾಲ್ಕು ಗಂಟೆಯೂ ಒಬ್ಬರನ್ನೊಬ್ಬರು ನೋಡುತ್ತಲೇ ಇರಬೇಕು. ಒಬ್ಬರೊಂದಿಗೊಬ್ಬರು ಸೇರಲೇಬೇಕು. ಒಬ್ಬನ ಗುಣ ಯೋಗ್ಯತೆ ಮತ್ತೊಬ್ಬರಿಗೆ ಚಾಚೂ ತಪ್ಪದಂತೆ ಚೆನ್ನಾಗಿ ಗೊತ್ತಾಗುತ್ತದೆ. ತನ್ನ ಸ್ವಭಾವವನ್ನು ಒಂದೆರಡುದಿನ ಮುಚ್ಚಿಕೊಂಡು ಬೇರೆ ರೀತಿ ಎಚ್ಚರಿಕೆಯಿಂದ ನಟಿಸಬಹುದು. ಆದರೆ ಎರಡುದಿನದನಂತರ ಸ್ವಭಾವ ತನಗೆ ತಾನೇ ಪ್ರಕಟವಾಗುತ್ತದೆ. ಡಾಕ್ಟರ್ ಸಿಂಗರದು ಕಾಂಪ್ರೊಮೈಸ್ ಎನ್ನುತ್ತಾರಲ್ಲ ಆ ಬಗೆಯ ಸ್ವಭಾವ. ಯಾವುದರಲ್ಲೂ ಕಪಿಮುಷ್ಟಿಯಿಲ್ಲ. ಇದು ಸರಿ ಎಂದರೆ ಇದೇ ಸರಿ. ಅದು ಸರಿ ಎಂದರೆ ಅದೇ ಸರಿ. ಎರಡೂ ಸರಿ ಎಂದರೆ ಎರಡೂಸರಿ. ಅದು ಅರ್ಧ ಸರಿ. ಇದು ಅರ್ಧಸರಿ ಎಂದರೆ ಅದೂ ಸರಿ. ಸಾಮಾನ್ಯವಾಗಿ ಡಾಕ್ಟರಿಗೆ ಸಿಟ್ಟು ಬಂದುದೇ ಇಲ್ಲ. ಏನು ಸ್ವಾಮಿ ಡಾಕ್ಟರೆ ಮೈಯೆಲ್ಲಾ ಕಜ್ಜಿ, ತಣ್ಣೀರಿನ ಸ್ನಾನ ಮಾಡಲೇ ಎಂದರೆ ಹೂ ಅದು ಒಳ್ಳೆಯದು, ಹಾಗೇ ಮಾಡಿ ಎನ್ನುವರು. “ಕಣ್ಣೀರಿನ ಸ್ನಾನ ಹಿತವಿಲ್ಲ. ಕಜ್ಜಿಗೆ ಒಳ್ಳೆಯ ಬಿಸಿನೀರಿನ ಸ್ನಾನವನ್ನೇ

ಮಾಡಬೇಕು'' ಎಂದರೆ ಅದೂ ಸರಿ ಎನ್ನುವರು. ಬಿಸಿನೀರು ಹೆಚ್ಚಾದರೆ ಸುತ್ತು ಆಗುತ್ತೆ ಎಂದರೆ ಹಾಗೂ ಹೀಗೂ ಬಿಸಿನೀರು ತಣ್ಣೀರು ಸೇರಿಸಿ ಕೊಂಡು ಮಾಡಿಸಾರ್ ಸರಿಹೋಗುತ್ತೆ ಎನ್ನುವರು. ಜರ್ಮನಿಯವರೇ ಜಯಿಸುತ್ತಾರೆ. ಎಂದರೆ ಹಾಗೆಯೇ ಕಾಣುತ್ತದೆ ಎನ್ನುವರು. ಆದರೆ ಇಂಗ್ಲಿಷಿನವರ ಶಸ್ತ್ರಾಸ್ತ್ರ ಸಂಗ್ರಹ ಹೆಚ್ಚು. ಕಾಲವಿಳಂಬವಾದಂತೆ ಇಂಗ್ಲಿಷು ಅಮೆರಿಕಾದವರಿಗೆ ಸಿದ್ಧತೆಗೆ ಅನುಕೂಲ ದೊರೆಯುತ್ತದೆ ಎಂದರೆ ಅದೂ ನಿಜ ಎನ್ನುತ್ತಾರೆ. ಇಬ್ಬರ ಶಕ್ತಿಯೂ ಸಮಾನ ಎಂದರೆ ಹಾಗೇ ಆಗುತ್ತೆ. ಇಬ್ಬರೂ ಸುಸ್ತಾಗಿ ತೆಪ್ಪನಾಗುತ್ತಾರೆ. ಅವರೂ ಸೋಲುವುದಿಲ್ಲ. ಇವರೂ ಸೋಲುವುದಿಲ್ಲ. ಯುದ್ಧಮಾತ್ರ ನಿಲ್ಲುತ್ತೆ. ಎನ್ನುತ್ತಾರೆ.

ಮತ್ತೊಂದು ಕಡೆ ದಶನೇತ್ರ ರಾಮಾಚಾರ್ರು ದೃಷ್ಟಿಗೆ ಬೀಳುತ್ತಾರೆ. ಇವರಿಗೆ ದಶನೇತ್ರ ಎಂದು ಹೆಸರಿರಲು ಕಾರಣ ಇವರಿಗೆ ಒಂದೇ ಕಣ್ಣು ಇರುವುದು. ಸೆರೆಮನೆಯಲ್ಲಿ ಇವರಿಗೆ "ಕಣ್ಣು ಒಂದು ಆಮೇಲೆ ಸೊನ್ನೆ (೧೦) ಅಂದರೆ ಒಂದು ಕಣ್ಣು ಉಂಟು ಇನ್ನೊಂದು ಕಣ್ಣು ಸೊನ್ನೆ ಆದುದರಿಂದ ಇವರಿಗೆ ದಶನೇತ್ರ'' ಎಂದು ಹೆಸರಿಟ್ಟಿದ್ದಾರೆ. ಈ ದಶನೇತ್ರ ರಾಮಾಚಾರ್ರ ನಶ್ಯಕ್ಕೆ ಹನುಮಂತರಾಯನ ವಜ್ರವೆಂದು ಹೆಸರು. ಹನುಮಂತರಾಯನಿಗೆ ಪದೇ ಪದೇ ಎಣ್ಣೆ ಮಜ್ಜನ ಮಾಡುವುದರಿಂದ ಅದರ ಮೇಲೆ ಕಿಮಿಟ ಕೂತು ಕೂತು ಕೊನೆಯಲ್ಲಿ ಉಗುರಲ್ಲಿ ಎಡೆದರೆ ಉಂಡೆ ಉಂಡೆಯಾಗಿ ಬರುವಷ್ಟು ಆಗುತ್ತದೆ. ದಶನೇತ್ರ ರಾಮಾಚಾರ್ರ ನಶ್ಯ ಗಟ್ಟಿಯಲ್ಲಿ ಈ ವಜ್ರಕ್ಕೆ ಸಮಾನವಾಗಿರುತ್ತದೆ. ರಾಮಾಚಾರ್ಯರು ನಶ್ಯ ಮಾಡುತ್ತಾ ಕುಳಿತಿರಬೇಕಾದರೆ ಅವರ ಸುತ್ತಾ ನಶ್ಯ ಬೇಕಾದವರೂ ಬೇಡವಾದವರೂ ಸೇರಿ "ಏನು ಸ್ವಾಮಿ ಹನುಮಂತರಾಯನ ವಜ್ರ ಬಿಡೋದೆ ಇಲ್ಲವೋ'' ಎನ್ನುತ್ತಾರೆ.

ರಾಮಾಚಾರ್ಯರ ನಶ್ಯದ ಆರ್ಭಟವೇ ಮಹಾಭಾರತದ ಒಂದು ಅಧ್ಯಾಯದಂತೆ. ರಾಮಾಚಾರ್ರು ಡಿಟೆನ್ಯುಗಳಿಗೆ "ಸ್ವಾಮಿ ಇಲ್ಲಿ ಬನ್ನಿ ಕುಳಿತುಕೊಳ್ಳಿ. ಮೊದಲು ಈ ಪ್ರಾತರಾಹ್ನಿಕ ಮುಗಿದುಹೋಗಲಿ. ಆಮೇಲೆ ಏನುಬೇಕಾದರೂ ನೋಡೋಣ'' ಎನ್ನುತ್ತಿದ್ದರು. ಡಿಟೆನ್ಯುಗಳು ಅನುಮಾನಿಸಿದರೆ "ಸ್ವಾಮಿ ಅನುಮಾನವೇಕೆ. 'ಸಂಶಯಾತ್ಮಾ

ವಿನಶ್ಯತಿ' ಧೈರ್ಯವಾಗಿ ಬನ್ನಿ ಸ್ವಾಮಿ. ವ್ಯಾಸವಸಿಷ್ಠಾದಿಗಳೂ ಕೂಡ ಈ ಚೂರ್ಣವನ್ನು ಸ್ವೀಕರಿಸಿಸುತ್ತಿದ್ದರು. ಇದಕ್ಕೆ ಸ್ಮೃತಿಯ ಅಧಾರವುಂಟು.

"ಮೌನಬ್ರಾಹ್ಮಣ ಋಷಿಃ; ಪ್ರಾತರುತ್ಥಾಯ; ಶಯ್ಯಾಂ ಉಪವಿಶ್ಯ; ಕನಕರತ್ನ ಕಲಶಯುಕ್ತ ನಶ್ಯ ಕರಂಡಮಾದಾಯ; ರಜತ ಕರಂಡ ಸುಧಾಮಾಧಾಯ; ಕಾಂಸಮಯ ಕರಂಡ ಚೂರ್ಣಮಾದಾಯ; ಸುಧೇನ ಸಂಯೋಜ್ಯ; ಸಮ್ಯಕ್ ಮರ್ದಯಿತ್ವಾ; ಸಮ್ಯಕ್ ಮರ್ದ ಯಿತ್ವಾ; ಮರ್ದನಂ ಕೃತ್ವಾ; ಅನಂತರಂ ಚೂರ್ಣೇನ ಸಂಯೋಜ್ಯ; ಕರತಲಾಂಗುಷ್ಠೇಭ್ಯೋ ತರ್ಜನೀಭ್ಯೋ ಸಮ್ಯಕ್ ಮರ್ದಯಿತ್ವಾ; ಮರ್ದಯಿತ್ವಾ; ಮರ್ದನಂ ಕೃತ್ವಾ; ಏಕರಾಶಿಂ ನಿಧಾಯ; ಅತಿ ತಿಭ್ಯೋ, ಅಭ್ಯಾಗತೇಭ್ಯೋ, ಸಂಕೋಚ ಪ್ರಕೃತಿಭ್ಯೋ, ಯಥೇಷ್ಟಂ ದತ್ವಾ, ಅಂತರಂ ಏಕರಾಶಿಂ ಕುರ್ವಾ; ಸ್ವಯಮಪಿ, ಆ ಬ್ರಹ್ಮಬ್ರಹ್ಮ ಕಪಾಲ ಪರ್ಯಂತಂ ಪೂರಯಿತ್ವಾ, ಪೂರಯಿತ್ವಾ, ಪುನಃ ಪೂರಯಿತ್ವಾ; ಜ್ಞಾನೀ ಭವತಿ ಜ್ಞಾನೀ ಭವತಿ; ಶಾಂತಿರಸ್ತು; ವಾಂತಿರಸ್ತು; ಭ್ರಾಂತಿರಸ್ತು; ನೇತ್ರಾರೋಗಾ ವಾಪ್ತಿರಸ್ತು; ಶಿರೋರೋಗ ವಾಪ್ತಿ ರಸ್ತು; ಶಾಶ್ವತ ಬ್ರಹ್ಮಸುಖಾ ವಾಪ್ತಿರಸ್ತು; ಶ್ರೀ ನಾಸಿಕಾರ್ಪಣ ಮಸ್ತು ಹರಿಃ ಓಂ, ಆನಂದಮಯ ಬ್ರಹ್ಮಣಂ ಭವತು"

ರಾಮಾಚಾರ್ಯರು ಹೇಳಿ ಮುಗಿಸುವ ವೇಳೆಗೆ ಅವರ ಕೈ ನಶ್ಯವೂ ಸಿದ್ಧವಾಗುತ್ತಿದ್ದಿತು. ಅವರು ದಶರಥಮಹಾರಾಜನು ಪುತ್ರಕಾಮೇಷ್ಠಿ ಯಾಗದಲ್ಲಿ ದೊರೆತ ಪಾಯಸವನ್ನು, ಎಷ್ಟು ಭಕ್ತಿವಿಶ್ವಾಸದಿಂದ ತನ್ನ ರಾಣಿಯರಿಗೆ ತಂದುಕೊಟ್ಟನೋ ಅದೋ ಮನೋಭಾವದಿಂದ ಎಲ್ಲರಿಗೂ ನಸ್ಯವನ್ನು ಕೊಡುತ್ತಿದ್ದರು. "ಸಂಕೋಚ ಪ್ರಕೃತಿಭ್ಯೋ" ಎಂದು ಕೊಂಡು ಹಿಂದೆ ಕೂತಿದ್ದವರಿಗೆ ತಮ್ಮ ಬೆನ್ನಿನ ಕಡೆಗೆ ಕೈನೀಡಿ ಕೊಡು ತ್ತಿದ್ದರು. ಅನೇಕ ಸಲ ರಾಮಾಚಾರ್ರು ಕೈಯಲ್ಲಿ ನಶ್ಯ ಇಲ್ಲದೆನೇ ಈ ನಾಟಕವನ್ನು ಅಭಿನಯಿಸುತ್ತಿದ್ದರು.

ಸೆರೆಮನೆಯ ಮತ್ತೊಂದು ಕಡೆ ಡಿಟೆನ್ಯು ಪ್ರೈಮರಿ ಉಪಾಧ್ಯಾ ಯರು ಪುಢಾರಿಗಳನ್ನು ಉಪನ್ಯಾಸ ಕೊಡಿ ಎಂದು ಹಿಂಸಿಸುತ್ತಿರುವುದೂ ದಪ್ಪ ರೆಡ್ಡಿಗಳು ಅವರನ್ನು "ಇಲ್ಲಿ ಉಪನ್ಯಾಸ ಯಾರಿಗೆ ಬೇಕ್ರಿ. ಅದೆಲ್ಲಾ ಹೊರಗಡೆ ಇದ್ದಾಗ ಇದ್ದೇ ಇದೆ. ಇಲ್ಲಿ ಚೆನ್ನಾಗಿ ಊಟಮಾಡುವುದು.

ನಿದ್ರೆ ಮಾಡುವುದು ಇಷ್ಟೆ.'' ಎನ್ನುವುದೂ ಕಣ್ಣಿಗೆ ಬೀಳುತ್ತಿದ್ದಿತು. ಈ ಪ್ರೈಮರಿ ಉಪಾಧ್ಯಾಯರು 1942ನೆ ಇಸ್ವಿಯಲ್ಲಿ ಸರ್ಕಾರ ನಿಷ್ಕಾರಣ ವಾಗಿ ಗಾಂಧಿ ಮುಂತಾದವರನ್ನು ಬಂಧಿಸಿದಾಗ ತಮ್ಮ ಹುದ್ದೆಗೆ ರಾಜೀನಾಮೆ ಕೊಟ್ಟರು. ಸರ್ಕಾರದವರು ಕೂಡಲೇ ಅವರನ್ನೂ ಬಂಧಿಸಿದರು. ಸರ್ಕಾರ ಪ್ರೈಮರಿ ಉಪಾಧ್ಯಾಯರು ರಾಜೀನಾಮೆ ಕೊಟ್ಟುದರಿಂದ ಮಾತ್ರವೇ ಅವರನ್ನು ಬಂಧಿಸಿದರೆಂದಲ್ಲ. ಮಕ್ಕಳು ಸ್ಕೂಲಿಗೆ ಹೋಗದಿದ್ದರೆ ಆಗ ತಂದೆಗಳಿಗೆ ಶಿಕ್ಷೆಯಾಯಿತು. ಸರ್ಕಾರ ಮಕ್ಕಳನ್ನೂ ಮಕ್ಕಳ ತಂದೆಗಳಾದ ಸರ್ಕಾರಿ ನೌಕರರನ್ನೂ ಮೃಗಗಳನ್ನು ಬೇಟೆಯಾಡುವಂತೆ ಬೇಟೆಯಾಡಿತು. ನಿಮ್ಮ ಮಕ್ಕಳು ಸ್ಕೂಲಿಗೆ ಬರದಿದ್ದರೆ ನಿಮ್ಮ ನೌಕರಿಗೆ ತಿಲಾಂಜಲಿ. ನಿಮ್ಮ ಮೇಲೆ ಡಿಫೆನ್ಸ್ ಆಫ್ ಇಂಡಿಯಾ. ಚಳುವಳಿಯ ಕಾಲದಲ್ಲಿ ಮಕ್ಕಳು ಸ್ಕೂಲಿಗೆ ಹೋಗದಿರಲು ಅವರನ್ನು ಬಲಾತ್ಕರಿಸಿ ಸ್ಕೂಲಿಗೆ ಕಳುಹಿಸಲಿಲ್ಲವೆಂಬ ಕಾರಣದಿಂದಲೂ ಡಿಟೆನ್ಯುಗಳಾದವರು ಕೆಲವರಿದ್ದರು.

---

## ೫೦. ಸ್ವರ್ಗದ ಬಾಗಿಲು

---

ವಿದ್ಯಾರ್ಥಿಗಳೂ ಇತರ ಡಿಟೆನ್ಯುಗಳೂ ಸೆರೆಮನೆಯಲ್ಲಿ ಸ್ವರ್ಗದ ಬಾಗಿಲು ಎಂಬ ಒಂದು ಹಸ್ತ ಪತ್ರಿಕೆಯನ್ನು ಪ್ರಾರಂಭಿಸಿದರು. ದೇಶದ ಬುದ್ಧಿವಂತರೆಲ್ಲಾ ನೆರೆದ ಆ ಸ್ಥಳದಲ್ಲಿ ನಡೆಯುವ ಪತ್ರಿಕೆಯಲ್ಲಿ ಕಾವ್ಯ ಸುದ್ದಿಗಳೂ ಹಾಸ್ಯಗಳೂ ಕಡಿಮೆ ಇರಲಿಲ್ಲ. ಅದಕ್ಕೆ ಒಬ್ಬ ಸಂಪಾದಕ, ಸಂಪಾದಕ ಮಂಡಲಿ, ಬಾತ್ಮಿದಾರರು, ಒಂದೊಂದು ಬ್ಯಾರಕ್‌ಗೆ ಒಬ್ಬೊಬ್ಬ ಬಾತ್ಮೀದಾರರು. ಪತ್ರಿಕೆಯನ್ನು ಪ್ರತಿ ಬ್ಯಾರಕ್‌ಗೂ ಹಂಚುವವರು ಎಲ್ಲರೂ ಇದ್ದರು. ಸಾಧಾರಣವಾಗಿ ಪತ್ರಿಕೆಯನ್ನು ಕಂಡರೆ ಸರ್ಕಾರಕ್ಕೆ ಮತ್ತು ಸಾರ್ವಜನಿಕರಿಗೆ ಭಯ ಎಚ್ಚರಿಕೆ ಹೇಗೆ ಹೆಚ್ಚೋ ಈ ಸಣ್ಣ ಪತ್ರಿಕೆಯ ವಿಷಯದಲ್ಲಿಯೂ ಸೆರೆಮನೆಯ ಅಧಿಕಾರಿ ಗಳಿಗೆ ಅಷ್ಟೇ ಎಚ್ಚರಿಕೆಯುಂಟಾಯಿತು. ಪತ್ರಿಕೆಗಳು ಅಪರೂಪವಾದ ಸೆರೆಮನೆಗೆ, ಅದಾವ ಮಾರ್ಗದಿಂದಲೋ ಹೊರಗಿನ ಸುದ್ದಿಗಳೂ ಅನೇಕ

ವಾಗಿ ಬರುತ್ತಿದ್ದವು. ಸೆರೆಮನೆಯ ಡಿಟೆನ್ಯುಗಳಿಗೇ ತಿಳಿಯದ ಅನೇಕ ಸಂಗತಿಗಳು ಸೆರೆಮನೆಯಲ್ಲಿ ನಡೆಯುತ್ತಿದ್ದುದು ಸ್ವರ್ಗದ ಬಾಗಿಲನ್ನು ಓದಿದಾಗ ಮಾತ್ರ ಗೊತ್ತಾಗುತ್ತಿದ್ದಿತು. ಪತ್ರಿಕಾ ಸುದ್ದಿಗಾರರು ಹೇಗೆ ಚಾಕಚಕ್ಯದಿಂದ ಜನರ ಸಮೀಪವನ್ನು ಸೇರಿ ಸುದ್ದಿಗಳನ್ನು ಸಂಗ್ರಹಿಸಿ ಅನಂತರ ಯಾರಿಗೆ ಆ ಸುದ್ದಿ ಸಂಬಂಧಿಸಿದ್ದೋ ಅವರು ಬೆಚ್ಚಿ ಬೀಳುವಂತೆ ಅದನ್ನು ಪ್ರಕಟಿಸುತ್ತಾನೋ ಹಾಗೆಯೇ ಸ್ವರ್ಗದ ಬಾಗಿಲು ಪತ್ರಿಕೆಯ ಬಾತ್ಮಿದಾರನೂ ಡಿಟೆನ್ಯುಗಳ ಮತ್ತು ಅಧಿಕಾರಿಗಳ ಸಮೀಪವನ್ನು ಹೊಂದಿ ಉಪಾಯವಾಗಿ ಸುದ್ದಿಗಳನ್ನು ಸಂಗ್ರಹಿಸಿ ಪ್ರಕಟಿಸಿಬಿಡುತ್ತಿದ್ದನು. ಈ ಪತ್ರಿಕೆಯಲ್ಲಿ ಬಂದ ಕೆಲವ ಸುದ್ದಿಗಳು ವಾಚನೀಯವಾಗಿದೆ.

1. ಕೇಂದ್ರಕಾರಾಗಾರದ ಡಾಕ್ಟರ್‌ರವರು ಜೈಲಿಗಾಗಿಯೇ ಹುಟ್ಟಿದವರು. ಸಾಧಾರಣವಾಗಿಯೇ ಇವರಿಗೆ ಕೆಲಸ ಜಾಸ್ತಿ. ಒಂದು ಸಾವಿರ ಕ್ರಿಮಿನಲ್ ಖೈದಿಗಳಿಗೆ ಔಷಧಿ ಕೊಡಬೇಕು. ಜತೆಗೆ ಈಗ ಡಿಟೆನ್ಯುಗಳೇ 500–600 ಸಾವಿರದವರೆಗೆ ಏರಿದ್ದಾರೆ. ಆದರೆ ಇಲ್ಲಿಗೆ ವೈದ್ಯರು ಇವರೊಬ್ಬರೇ. ಒಬ್ಬ ವೈದ್ಯರು ಎರಡು ಸಾವಿರ ಖೈದಿಗಳ ಆರೋಗ್ಯವನ್ನೂ ನೋಡಿಕೊಳ್ಳಬೇಕಾಗಿದೆ. ಈ ವೈದ್ಯರು ಯಾವಾಗಲೂ ನಕ್ಕುದೇ ಇಲ್ಲ. ಇವರ ಬಣ್ಣ ಕಪ್ಪು. ಅಷ್ಟೇ ಹೊರತು ಇವರು ನೀಗ್ರೋಗಳಲ್ಲ.

" ಈಚೆಗೆ ಇವರು ರೋಗಿಗಳ ಪರೀಕ್ಷೆಮಾಡುವುದನ್ನೇ ಬಿಟ್ಟಿದ್ದಾರೆ. ಪಾಪ ಅವರಿಗೆ ಅದಕ್ಕೆ ಅವಕಾಶವೇ ಇಲ್ಲ. ಎರಡು ಸಾವಿರ ರೋಗಿಗಳು ಅವರನ್ನು ಏಕಕಾಲದಲ್ಲಿ ಮುತ್ತಿದರೆ ಅವರು ಮಾಡುವುದಾದರೂ ಏನು? ಇಂಜಕ್ಷನ್ ಚುಚ್ಚಿ ಚುಚ್ಚಿ ಅವರ ಸೂಜಿ ದಬ್ಬಳದಂತೆ ದಪ್ಪವಾಗಿದೆ. ಈಚೆಗೆ ಖೈದಿಗಳು ತಮ್ಮಲ್ಲಿಗೆ ಬರುವುದೆಲ್ಲ ಒಳ್ಳೆಯ—ಆಹಾರ, ಪುಷ್ಟಿಯಾದ ಆಹಾರ ಸಂಪಾದಿಸುವುದಕ್ಕೇ ಎಂದು ಇವರ ಮತ. ರೋಗಿಗಳು ಹತ್ತಿರ ಬಂದ ಕೂಡಲೇ ಅವರು "ನಿಮಗೆ ಎಂ.ಬಿ.ಬಿ.ಎಸ್ ಬೇಕೋ ಬಿ. ಬಿ. ಎಸ್. ಬೇಕೋ" ಎಂದು ಕೇಳುತ್ತಾರೆ. ಎಂ.ಬಿ.ಬಿ.ಎಸ್. ಎಂದರೆ ಮಿಲ್ಕ್ ಬ್ರೆಡ್ ಬಟರ್ ಶುಗರ್ ಹಾಲು ರೊಟ್ಟಿ ಬೆಣ್ಣೆ ಸಕ್ರೆ, ಬಿ. ಬಿ. ಎಸ್. ಎಂದರೆ ರೊಟ್ಟಿ ಬೆಣ್ಣೆ ಸಕ್ಕರೆ; ನಿಜವಾಗಿ ದೇಹದಲ್ಲಿ ರೋಗವಿರುವವರಿಗೂ ಎಂ. ಬಿ. ಬಿ. ಎಸ್. ಔಷಧಿಯೆ. ಇದರಿಂದ ವೈದ್ಯರ ಕೆಲಸ ಬಹು ಸುಲಭವಾಗಿದೆ, ಎಂಬುದು ಸಂದೇಹವಿಲ್ಲ.

2. "ನಾಗರೀಕತೆಯ ತವರೂರಾದ ಈ ಕಲ್ಯಾಣನಗರದ ಮಧ್ಯ ದಲ್ಲಿರುವ ಕೇಂದ್ರ ಕಾರಾಗಾರದಲ್ಲಿ ಈ ಇಪ್ಪತ್ತನೆಯ ಶತಮಾನದಲ್ಲಿಯೂ ಖೈದಿಗಳಿಗೂ ಪ್ರಾಣಿಗಳಿಗೂ ವ್ಯತ್ಯಾಸವಿಲ್ಲ. ಇಲ್ಲಿ ರಾಜಕೀಯ ಖೈದಿ ಗಳಿಗೂ ಕ್ರಿಮಿನಲ್ ಖೈದಿಗಳಿಗಳೂ ಮಾಡಿರುವ ಕಕ್ಕಸ್‌ಗಳಿಗೆ, ಯಾವ ಕಡೆಯಿಂದಲೂ ಮರೆ, ಬಾಗಿಲು ಇಲ್ಲ. ಸೆರೆಮನೆಯಲ್ಲಿ ಮೊದಲು ಉಂಟಾ ಗುವ ಬೇಜಾರು ಈ ಬಹಿರಂಗ ಪಾಯಖಾನೆಗಳೇ. ಸೆರೆಮನೆಯನ್ನು ಪ್ರವೇಶಿಸಿದಕೂಡಲೇ, ಸೆರೆಮನೆಯ ಮೇಲಧಿಕಾರಿಗಳಿಗೆ ನಾಚಿಕೆ ಹೇಸಿಗೆ ಗಳ ವಿವೇಕ ಬುದ್ಧಿ ಹೀಗೆ ಮಾಯವಾಗಬಹುದೇ ಎಂದು ಪಶ್ಚಾತ್ತಾಪ ವಾಗುತ್ತದೆ. ಸೆರೆಮನೆಯ ವಿಸಿಟರ್ ಎನ್ನಿಸಿಕೊಳ್ಳುವವರು ಇರುತ್ತಾ ರೆಲ್ಲ. ಅವರು ಡಿಟೆನ್ಯುಗಳೂ ಅಲ್ಲ. ರಾಜಕೀಯ ಖೈದಿಗಳೂ ಅಲ್ಲ. ಅವರಲ್ಲಿ ಬಹುಶಃ ಒಬ್ಬಿಬ್ಬರು ಸ್ತ್ರೀಯರೂ ಇರಬಹುದು. ಅವರಿಗೆ ಸಹ ಈ ನಾಚಿಕೆ ಹೇಸಿಗೆಯ ವಿವೇಕ ತಪ್ಪಿ ಹೋಯಿತೆಲ್ಲ. ಮೊದಲು ಅಂದರೆ 1938 ರಲ್ಲಿ ಕಕ್ಕಸುಗಳಿಗಾಗಿ ನೆಲದಮೇಲೆ ಗುಂಡಿ ತೋಡಿ ಉದ್ದಕ್ಕೂ ಸಾಲಾಗಿ ಒಬ್ಬರ ಮಗ್ಗಲಲ್ಲಿ ಒಬ್ಬರು ಕುಳಿತುಕೊಳ್ಳಬೇಕಾಗಿದ್ದಿತು. ಸ್ವಲ್ಪ ಹೆಚ್ಚು ನಾಚಿಕೆಯುಳ್ಳ ರಾಜಕೀಯ ಖೈದಿಗಳು ಹಗಲು ಹೊತ್ತಿನಲ್ಲಿ ಈ ಕಕ್ಕಸುಗಳನ್ನು ಉಪಯೋಗಿಸುವುದೇ ಇಲ್ಲ. ರಾತ್ರಿಯವರೆಗೆ ಕಾಯು ತ್ತಿದ್ದು ಕತ್ತಲೆಯಾದ ಮೇಲೆ ಹೋಗುತ್ತಾರೆ ಹೀಗೆ ಅಸ್ವಾಭಾವಿಕ ವಾಗಿ ಪ್ರಕೃತಿಯ ವ್ಯಾಪಾರವನ್ನು ತಡೆಯುವುದರಿಂದ ಅನೇಕರಿಗೆ ಮಲ ಬದ್ಧತೆಯುಂಟಾಗಿದೆ. 1938 ರಿಂದ ಈಚೆಗೆ ರಾಜಕೀಯ ಖೈದಿಗಳು ಸೆರೆಮನೆಯೊಳಕ್ಕೆ ಬಂದಾಗಲೆಲ್ಲಾ ಈ ವಿಚಾರದಲ್ಲಿ ಸುಧಾರಣೆ ನಡೆಸ ಬೇಕೆಂದು ಪ್ರಯತ್ನಿಸಿದ್ದಾರೆ. ಆದರೆ ಸ್ವಲ್ಪವೂ ಸುಧಾರಣೆಯಾಗಿಲ್ಲ. ಹೊರಗಡೆ ಇರುವಾಗ ಯೋಚಿಸಿಕೊಂಡರೇಯೆ ಮೈ ಜುಂ ಎನ್ನುತ್ತದೆ. ಸೆರೆಮನೆಗೆ ಈ ಕಕ್ಕಸು ನರಕ. ದೇಶದ ಕಣ್ಣಾದ ಜನ, ದೇಶದಲ್ಲಿ ಮುಖಂಡರಾದವರು, ರಾಜ್ಯದ ಆಡಳಿತವನ್ನು ದಕ್ಷತೆಯಿಂದ ನಡೆಸ ಬಲ್ಲವರು, ಪ್ರಜೆಗಳ ವಿಶ್ವಾಸಕ್ಕೆ ಪಾತ್ರರಾದವರು, ಇಂತಹ ಮುಂದಾಳು ಗಳು ಮುಚ್ಚುಮರೆಯಿಲ್ಲದ ಬಹಿರಂಗವಾದ ಕಕ್ಕಸಿನಲ್ಲಿ ಕೂತಿರುವ ಒಬ್ಬೊಬ್ಬರನ್ನೂ ನೋಡಿಕೊಂಡು ತಲೆ ತಗ್ಗಿಸಿಕೊಂಡು ತಮ್ಮ ಕೆಲಸಕ್ಕೆ ಮುಂದೆ ಹೋಗಬೇಕಾಗಿದೆ. ಈ ಕಲ್ಯಾಣನಗರಿಯಲ್ಲಿ ಹೊರಗಡೆ 20ನೇ

ಶತಮಾನದಲ್ಲಿ 21ನೇ ಶತಮಾನದ ನಾಗರೀಕತೆ ನಾಜೂಕು ಥಳುಕು ನಡ ವಳಿಕೆ ನಡೆಯುತ್ತಿರುವಾಗ ಸೆರೆಮನೆಯ ಕಾಂಪೌಂಡಿನಲ್ಲಿ ಇಂತಹ ಅಮಾನುಷವಾದ ನಾಚಿಕೆಗೇಡುತನ ನಡೆಯುತ್ತಿರುವುದು ನಮ್ಮ ಸೆರೆ ಮನೆಯ ಅಧಿಕಾರಿಗಳಿಗೂ ಸರ್ಕಾರಕ್ಕೂ ಈ ದೇಶದ ಪ್ರಜೆಗಳಿಗೂ ಭೂಷಣ ವಲ್ಲ. ಇದು ಮನುಷ್ಯತ್ವದ ಮರ್ಯಾದೆಗೇ ಕುಂದಕವಾದುದು.

ಹಿಂದೊಮ್ಮೆ ನಾವು " ದೇಶಿಯ ಸರ್ಕಾರಗಳು ಕುದುರೆಗಿಂತ ಲದ್ದಿ ಬಿರುಸು " ಎಂಬಂತೆ ನಡೆದುಕೊಳ್ಳುವುವೆಂದು ಹೇಳಿದೆವು. ಅದು ಕೇಂದ್ರ ಕಾರಗಾರದಲ್ಲಿ ಹೆಜ್ಜೆಹೆಜ್ಜೆಗೂ ನಮಗೆ ಜ್ಞಾಪಕ ಬರುತ್ತಿದ್ದಿತು. ಬ್ರಿಟಿಷ್ ಇಂಡಿಯಾದ ಸೆರೆಮನೆಗಳಲ್ಲಿ ಅದು ಪರದೇಶದ ಸರ್ಕಾರವೇ ಆದರೂ ಜನರ್ನು ಹೀಗೆ ಮಾನಗೆಟ್ಟರೀತಿ ನಡೆಸಿಕೊಳ್ಳುವುದಿಲ್ಲ. ಅಲ್ಲಿಯ ಅಧಿಕಾರಿ ಗಳಿಗೂ ನಾಚಿಕೆ ಹೇಸಿಗೆ ಇದೆ. ನಾಸಿಕ್ ಸೆರೆಮನೆಯಲ್ಲಿದ್ದವರೂ ಎರವಾಡ ಸೆರೆಮನೆಯಲ್ಲಿದ್ದವರೂ ಹಿಂಡಲಗಿ ಸೆರೆಮನೆಯಲ್ಲಿದ್ದವರೂ, ನಮ್ಮ ಕೇಂದ್ರ ಕಾರಾಗಾರದಲ್ಲಿ ಇದ್ದಾರೆ. ಬ್ರಿಟಿಷ್ ಇಂಡಿಯಾದಲ್ಲಿ ಇಂತಹಮುಚ್ಚುಮರೆಯಿಲ್ಲದ ಕಕ್ಕಸುಗಳಿಲ್ಲವೆಂದು ಅವರು ಹೇಳುತ್ತಾರೆ. ಶಾಸನ ಸಭೆಯಲ್ಲಿ ದೇಶದ ಪ್ರತಿನಿಧಿಗಳು, ಪ್ರಜಾಪ್ರತಿನಿಧಿ ಸಭೆಯ ಮುಂದಾಳುಗಳು, ಕಲ್ಯಾಣನಗರದ ಪೌರಸಭೆಯ ಅಧ್ಯಕ್ಷರು, ರಾಷ್ಟ್ರಸಭೆಯ ನಾಯಕರು ಇಂತವರೆಲ್ಲಾ ದನಗಳಂತೆ ಮುಚ್ಚುಮರೆಯಿಲ್ಲದೆ ಪ್ರಕೃತಿಯ ಆವಶ್ಯಕತೆಗಳಿಗಾಗಿ ಬಹಿರಂಗವಾಗಿ ಕುಳಿತುಕೊಳ್ಳಬೇಕಾದರೆ, ಈ ಸರ್ಕಾರ ನಮ್ಮ ಸರ್ಕಾರವೆನ್ನುವುದಿರಲಿ, ಹೀಗೆ ಮಾಡುವ ಮನುಷ್ಯರು ಮನುಷ್ಯ ರೆಂದು ತಾನೇ ಹೇಗೆ ಹೇಳುವುದು.

(3) " ಸೆರೆಮನೆಯಲ್ಲಿ ಎಲ್ಲಾ ಒಂದು ಅತಿಯೆ. ಇಲ್ಲಿಯ ಬಾಗಿಲು ತೆರೆದರೆ ತೆರದೇ ಬಿಡುತ್ತದೆ. ಯಾರು ಎಲ್ಲಿಗೆ ಬೇಕಾದರೂ ಹೋಗಬಹುದು. ಹಾಕಿದರೆ ಹಾಕಿಯೇ ಬಿಡುತ್ತದೆ. ನಡುಬೀದಿಗಳಲ್ಲಿ ತಮ್ಮ ಪಾಡಿಗೆ ತಾವು ಹೋಗುತ್ತಿರುವವರನ್ನೂ ಹಿಡಿದುಕೊಂಡು ಬಂದು ಬಿಡುತ್ತಾರೆ. ಹಿಂದೆ „ಹಾಗೆ ಒಬ್ಬರನ್ನು ಹಿಡಿದುಕೊಂಡು ಬಂದರು. ಅನಂತರ ಪದ್ಧತಿಯಂತೆ ಇನ್ನು ಮೇಲೆ ಹೀಗೆ ಮಾಡುವುದಿಲ್ಲ ಎಂಬು ಬರೆದುಕೊಡಿ ಎಂದರು. ಏನನ್ನು ಮಾಡುವುದಿಲ್ಲ ಎಂದು ಬರೆದು ಕೊಡಬೇಕೆಂದು ಅವರು ಕೇಳಿ ಸುಮ್ಮನಾದರು. ಸೆರೆಮನೆಯ ಸಾರಿನ

ರುಚಿ ಇಲ್ಲಿಗೆ ಬಂದವರಿಗೇ ಗೊತ್ತು. ಅವರಿಗೆ ಆಮಶಂಕೆ ಹಿಡಿದು ಅವರು ಇಲ್ಲಿಯೇ ಸತ್ತರು. ಬಾಗಿಲು ತೆರೆದರೆ ಹಾಕುವುದಿಲ್ಲ. ಹಾಕಿದರೆ ತೆರೆಯುವುದಿಲ್ಲ. ಇದು ಸೆರೆಮನೆಯ ಲಕ್ಷಣ. 1942ನೆ ಇಸವಿಯಲ್ಲಿ ಸರ್ಕಾರ ವಿದ್ಯಾರ್ಥಿಗಳನ್ನೆಲ್ಲಾ ತಂದ ಸೆರೆಮನೆಗೆ ಕೂಡಿದರು. ಇದ್ದಕ್ಕಿದ್ದಂತೆ ಒಂದು ದಿನ ಅಲ್ಲಿಯವರೆಗೆ ಶಿಕ್ಷೆಯಾಗಿದ್ದ ವಿದ್ಯಾರ್ಥಿಗಳೆಲ್ಲರನ್ನೂ ಬಿಡುಗಡೆ ಮಾಡಿ ಎಂದು ಅಪ್ಪಣೆ ಹೊರಟಿತು. ಆ ಅಪ್ಪಣೆಗೆ ಲೆಕ್ಕವೂ ಇಲ್ಲ. ಅಂಕಿಯೂ ಇಲ್ಲ. ಜೈಲಿನ ಎರಡು ಬಾಗಿಲನ್ನೂ ಹಿಂದಕ್ಕೆ ತೆರೆದು ದನಗಳನ್ನು ದೊಡ್ಡಿಯಿಂದ ಓಡಿಸುವಂತೆ ವಿದ್ಯಾರ್ಥಿಗಳನ್ನು ಹೊರದೂಡಿದರು. ಈ ಅವಾಂತರದಲ್ಲಿ ಶಿಕ್ಷೆ ಹೊಂದಿದ್ದ 40 ವರುಷದ ವಿಷ್ಣುಗೌಡ ಸಹ ತಲೆಗೆ ಮುಸುಕುಹಾಕಿಕ್ಕೊಂಡು ಹೋಗಿಬಿಟ್ಟ. ಸೂಪರಿಂಟೆಂಡೆಂಟರು ಅವನೂ ವಿದ್ಯಾರ್ಥಿ ಇರಬಹುದೆಂದು ಸುಮ್ಮನಾದರು.

(4) ಈದಿನ ಸೆರೆಮನೆಯಲ್ಲಿ ಒಂದು ವಿನೋದ. ಜಿಲ್ಲಾಧಿಕಾರಿಗಳು ಭಗವದ್ಗೀತೆಯ ಮೇಲೆ ಉಪನ್ಯಾಸ ಮಾಡಲು ಒಬ್ಬ ಸಾಧುಗಳನ್ನು ಒಳಕ್ಕೆ ಕರೆದುಕೊಂಡು ಬಂದರು. ಸಾಧುಗಳ ಉಪನ್ಯಾಸ ಮುಗಿದ ನಂತರ ಜಿಲ್ಲಾಧಿಕಾರಿಗಳು ಇದ್ದಕ್ಕಿದ್ದಂತೆ ಎದ್ದು ನಿಂತು "ಈ ಬರಿಯ ವೇದಾಂತದಿಂದ ಪ್ರಯೋಜನವಿಲ್ಲ. ನಾವು ಬರಿಯ ವೇದಾಂತ ಹೇಳಿದುದರಿಂದಲೇ ನಮ್ಮದನ್ನು ಇತರರು ಕಿತ್ತುಕೊಂಡು ಹೋದರು, ಧೈರ್ಯದಿಂದ ಎದುರಾಳಿಯನ್ನು ಎದುರಿಸಬೇಕು. ಸಮಯ ಬಂದರೆ ನಾಲ್ಕು ಪೆಟ್ಟು ಸಹ ಬಿಗಿಯಬೇಕು" ಎಂದರು. ಇದು ಸೆರೆಮನೆ. ಇಲ್ಲಿ ಹೇಳುವ ಮಾತು ಹೊರಕ್ಕೆ ಖಂಡಿತ ಹೋಗುವುದಿಲ್ಲವೆಂದು ಅವರಿಗೆ ಗೊತ್ತು. ಆ ವೇಳೆಗೆ ತೀರ್ಥಪುರಿಯ 13-14 ವರುಷದ ನಾಗಪ್ಪ ವಿಚಾರಣೆ ಅಪರಾಧಿ ಅಲ್ಲಿ ಬಂದ. ಅವನ ಮೇಲೆ ಎರಡು ಲಾರಿ ಭರ್ತಿಯಾಗವಷ್ಟು ತಂತಿ ಕತ್ತರಿಸಿ ಅದನ್ನು ಮೊಸಳೆ ಮಡುವಿನಲ್ಲಿ ಮುಳುಗಿಸಿದ ಆಪಾದನೆ. ಜಿಲ್ಲಾಧಿಕಾರಿಗಳಿಗೆ ಇದರಲ್ಲಿ ಪೂರ್ಣ ನಂಬಿಕೆ. ದರ್ಪದ ಮರೆಯಲ್ಲಿ ಊಹನಾಶಕ್ತಿ ಪೂರ್ಣವಾಗಿ ಮರೆಯಾಗಿದೆ. ಮಾತಿಗೂ ಕಾರ್ಯಕ್ಕೂ ಸಂಬಂಧವೇ ಇಲ್ಲ. ಆ ವಿದ್ಯಾರ್ಥಿಯನ್ನು ನೋಡಿ ಜಿಲ್ಲಾಧಿಕಾರಿಗಳು ನೀವು ಪೋಕರಿಗಳು ಎಂದರು. ಹುಡುಗ ಕೇಳಬೇಕೆ? "ಅದೇನೂ

ನಿಮಗೆ ಗೌರವ ತರುವ ವಿಚಾರವಲ್ಲ'' ಎಂದ. ಜಿಲ್ಲಾಧಿಕಾರಿಗಳು ಹಾ, ಎಂದರು. ಹುಡುಗ "ನಾವು ನಿಮ್ಮ ಅಧಿಕಾರಕ್ಕೆ ಒಳಪಟ್ಟವರು. ನಾವು ಪೋಕರಿಗಳಾದ ಮೇಲೆ ನಮ್ಮ ಮೇಲೆ ಅಧಿಕಾರ ಮಾಡುತ್ತಿರುವ ತಾವು ದೊಡ್ಡ ಪೋಕರಿ ಎಂದಂತಾಯಿತು'' ಎಂದ. ಅಲ್ಲಿಂದ ಮುಂದೆ ಜಿಲ್ಲಾಧಿಕಾರಿಗಳು ಸೆರೆಯೊಳಗೆ ಬರಲಿಲ್ಲ. ಹುಡುಗನ ಮೇಲೆ ಹಾಕಿದ್ದ ಮೊಖದ್ದಮೆಯುನ್ನೂ ಹಿಂದಕ್ಕೆ ತೆಗೆದುಕೊಳ್ಳಲಿಲ್ಲ. ಅದು ತಾನಾಗಿಯೇ ಅಪೀಲು ಕೋರ್ಟಿನಲ್ಲಿ ವಜಾ ಆಯಿತು. ಜಿಲ್ಲಾಧಿಕಾರಿಗಳು ಮಾತ್ರ ದುಷ್ಟನಿಗ್ರಹ ಶಿಷ್ಟಪರಿಪಾಲನೆ ನನ್ನ ಕರ್ತವ್ಯ ಎಂದುಕೊಂಡರು.

" ಮಿಡಲ್ ಸ್ಕೂಲು ವಿದ್ಯಾರ್ಥಿ 12 ವರುಷದ ಡಿಟೆನ್ಯು ಹುಡುಗ ನನ್ನು ನೋಡಿ ಜಿಲ್ಲಾಧಿಕಾರಿಗಳು " ನೀನೇನು ಮಹಾ ದೊಡ್ಡ ಡಿಟೆನ್ಯು " ಎಂದರು !

(5) " ನಾವು ಹಿಂದೊಮ್ಮೆ ಸ್ವರ್ಗದ ಬಾಗಿಲು ಪತ್ರಿಕೆಯಲ್ಲಿ ಸೆರೆಮನೆಯ ಬಾಗಿಲು ಹಾಕಿದರೆ ತೆರೆಯುವುದಿಲ್ಲ. ತೆರೆದರೆ ಹಾಕುವು ದಿಲ್ಲವೆಂದು ಬರೆದೆವು. ಆ ಮಾತನ್ನು ಬಲಪಡಿಸುವುದಕ್ಕೋ ಎಂಬಂತೆ ಇವತ್ತು ಒಂದು ಸಂಗತಿ ನಡೆಯಿತು. ಇಲ್ಲಿ ಇರುವ ಡಿಟೆನ್ಯುಗಳ ಸಂಖೆ ಸಾವಿರಕ್ಕಿಂತ ಹೆಚ್ಚು. ಕ್ರಿಮಿನಲ್ ಖೈದಿಗಳು ಸಾವಿರದ ಮೇಲೆ ಇದ್ದಾರೆ. ಇವರನ್ನು ನೋಡಲು ನಿತ್ಯಾ ಜನ ಬರುತ್ತಾರೆ. ಬರುವವರು ಒಳ್ಳೊಳ್ಳೆ ಉಡುಪುಗಳನ್ನು ಧರಿಸಿ ಬುಟ್ಟಿ ತಟ್ಟೆಗಳಲ್ಲಿ ಹಣ್ಣು ತಿಂಡಿ, ಒಳಗೆ ಪೂಜೆ ಮಾಡುವವರಿಗೆ ಊದುಕಡ್ಡಿ ಇವನ್ನೆಲ್ಲಾ ತರುತ್ತಾರೆ. ಜನರ ಗುಂಪು ಜಾಸ್ತಿ, ಡಿಟೆನ್ಯೂಗಳಾಗಿರುವವರನ್ನೂ ನೋಡಲು ಬರುವ ಹೆಂಗಸರು ಮಕ್ಕಳ ಸಂಖೆ ಅಧಿಕ. ಒಳಗೆ ಖೈದಿಗಳು; ಹೊರಗೆ ಬಂದವರು, ಗದ್ದಲವೋ ಗದ್ದಲ. ದೊಡ್ಡ ಜಾತ್ರೆ. ಈ ಗಲಾಟೆ ನೋಡಿಕೊಂಡು ಯಾರೊ ಒಬ್ಬ ಪಾಪ ಹಳ್ಳಿಯವನು, ಇದು ಯಾವುದೋ ಜಾತ್ರೆಯೋ ದೇವಸ್ಥಾನವೋ ಇರಬೇಕು ಎಂದು ಕೊಂಡು ಸಂದರ್ಶನಾರ್ಥವಾಗಿ ಬಂದಿದ್ದವರ ಜತೆಯಲ್ಲಿ ತಾನೂ ಒಳಗೆ ನುಗ್ಗಿಬಿಟ್ಟ. ಸೆರೆಮನೆಯ ಒಳಗಡೆ ಅದೇ ಒಂದು ಊರು; ಸುಮಾರು ೧ ಗಂಟೆ ೨ ಗಂಟೆ ಅವನು ಎಲ್ಲಾ ಕಡೆಯೂ ತಿರುಗಿಕೊಂಡು ಎಲ್ಲಾ ಬ್ಯಾರಕ್‌ಗಳಲ್ಲಿಯೂ ಇದ್ದ ವರನ್ನೆಲ್ಲಾ ನೋಡಿಕೊಂಡು ಬಾಗಿಲಿಗೆ ಬರುವ ವೇಳೆಗೆ, ಸಂದರ್ಶನಾರ್ಥ

ವಾಗಿ ಬಂದಿದ್ದವರಿಗೆ ಕೊಡುತ್ತಿದ್ದ ಕಾಲಾವಕಾಶ ಮುಗಿದು ಹೋಗಿ ಅವರೆಲ್ಲಾ ಹೊರಕ್ಕೆ ಹೊರಟುಹೋಗಿದ್ದರು. ಆಗಲೆ ಸಂಜೆ ಏಳು ಗಂಟೆ ಯಾಗಿದ್ದಿತು. ಕಾವಲುಗಾರ ಸೆರೆಮನೆಯ ಬಾಗಿಲಿಗೆ ಬೀಗವನ್ನು ಬಾರಿಸಿ ಬಾಗಿಲಿನೊಳಗಿನ ಬಾಗಿಲನ್ನೂ ಸಹ ಮುಚ್ಚಿ ಯಮದೂತನಂತೆ ಅದರ ಮುಂದೆ ನಿಂತಿದ್ದ. ಈ ಹಳ್ಳಿಯ ಗುಗ್ಗು ಬಡಪಾಯಿ ಅಲ್ಲಿಗೆ ಬಂದ ಕೂಡಲೇ "ಕಾಕ ಸಂಘಾತದೊಳ್ ಸಿಲುಕಿರ್ದ ಕೋಗಿಲೆಯ ಮರಿಯಂತೆ" ವಾರ್ಡರುಗಳೆಲ್ಲಾ ಅವನನ್ನು ಮುತ್ತಿದರು. ಆ ಪ್ರಾಣಿಗೆ ದಿಕ್ಕೇ ತೋರದಂತಾಯಿತು. ಕೂಡಲೆ ಹೆಡ್ ವಾಟರ್ (ವಾರ್ಡರನ್ನು ಸೆರೆಯಲ್ಲಿರುವವರು ಸಂಬೋಧಿಸುವುದೇ ಹೀಗೆ) ಗೆ ಸುದ್ದಿ ಹೋಯಿತು. ಹೆಡ್ ವಾಟರ್‌ರಿಂದ ಛೀಫ್ ವಾಟರ್, ಛೀಫ್ ವಾಟರ್‌ರಿಂದ ಡೆಪುಟಿ ಜೈಲ್‌ರ್, ಛೀಫ್ ಜೈಲ್‌ರ್, ಸೂಪರಿಂಟೆಂಡೆಂಟ್‌ರವರವರಿಗೆ ಗುಲ್ಲು ಎದ್ದು ಹೋಯಿತು. ಖೈದಿಗಳಿಗೆ ಮಾಂಸವನ್ನು ಕತ್ತರಿಸುವ ಮನೆಯಲ್ಲಿ ಅವನನ್ನು ಕೂಡಿ ಬೀಗ ಹಾಕಿದರು. ಇವನು ಯಾರ ಗುಪ್ತಚಾರನಾಗಿ ಬಂದಿರಬಹುದು ಎಂದು ಸೆರೆಮನೆ ಅಧಿಕಾರಿಗಳಲ್ಲಿ ದೊಡ್ಡ ಚರ್ಚೆಯೇ ನಡೆಯಿತು. ಕೊನೆಗೆ ರಾತ್ರಿಗೆ ಎಲ್ಲಾ ಬ್ಯಾರಕ್‌ಗಳಲ್ಲಿಯೂ ಖೈದಿಗಳನ್ನು ಲೆಕ್ಕಮಾಡಿ ಅವರ ಸಂಖ್ಯೆ ಸರಿಯಾದ ನಂತರ ಆಗಂತುಕನನ್ನು ಬಿಟ್ಟು ಬಿಡಬಹುದೆಂದು ಹೇಳಿ ಸೂಪರಿಂಟೆಂಡೆಂಟರು ಕ್ಲಬ್‌ಗೂ, ಛೀಫ್ ಜೈಲರ್ ಸಾಹೇಬರು ಸಿನಿಮಾಕ್ಕೂ ಹೊರಟುಹೋದರು. ವಾರ್ಡರುಗಳು ಒಂದು ಇಪತ್ತೈದು ಎರಡು ಇಪ್ಪತ್ತೈದು ಎಂದು ಲೆಕ್ಕಮಾಡಿ ಒಬ್ಬನು ಡೆಪುಟಿ ಜೈಲರಿಗೆ ಹನ್ನೆರಡು ಇಪ್ಪತ್ತೈದು ಮೇಲೆ ಎಂಟು ಎಂದೂ ಮತ್ತೊಬ್ಬನು ಆರು ಇಪ್ಪತ್ತೈದು ಮೇಲೆ ಎರಡು ಎಂದೂ, ಇನ್ನೊಬ್ಬನು ಇಪ್ಪತ್ತುನಾಲ್ಕು ಇಪ್ಪತ್ತೈದು ಮೇಲೆ ಹದಿನೇಳು ಎಂದೂ ಹೇಳಿದ ಮೇಲೆ ಇವುಗಳನ್ನೆಲ್ಲಾ ಡೆಪುಟಿ ಜೈಲರ್ ಕೂಡಿ ಎಲ್ಲಾ ಸರಿಯಾಗಿದೆಯೇ ಎಂದು ನೋಡಿ ರಾತ್ರಿ 11½ ಗಂಟೆಗೆ ಹಸಿವಿನಿಂದಲೂ ಛಳಿಯಿಂದಲೂ ಭಯದಿಂದಲೂ ನಡುಗುತ್ತಿದ್ದ ಆ ಬಡಪಾಯಿಯನ್ನು ಹೊರಕ್ಕೆ ಬಿಟ್ಟರು. ಬಾಗಿಲು ನುಸಿದು ಹೋಗುವಾಗ ಕಡೆಯಲ್ಲಿ ನಿಂತಿದ್ದ ವಾರ್ಡರ್ ಅವನ ಬೆನ್ನಿನ ಮೇಲೆ ಒಂದು ಇಡಿದನು. ಧರ್ಮರಾಯನಿಗೆ ನರಕ ದರ್ಶನವಾದಂತೆ ಆ ನಿರಪರಾಧಿಗೆ ಐದು ಗಂಟೆ ಸೆರೆವಾಸ ಲಭಿಸಿತು.

(6) "ಸರ್ಕಾರ ತಮ್ಮ ಪಾಡಿಗೆ ತಾವು ಕುಳಿತಿದ್ದವರನ್ನೆಲ್ಲಾ ದಸ್ತಗಿರಿ ಮಾಡಿಕೊಂಡು ಬಂದುದು ಸರಿಯಷ್ಟೆ. ಒಳಕ್ಕೆ ಬಂದನಂತರ 6 ತಿಂಗಳು ಎಂಟು ತಿಂಗಳು ಹತ್ತು ತಿಂಗಳಾದರೂ ಸರ್ಕಾರಕ್ಕೆ ಭಯ ತಪ್ಪದುದರಿಂದ ಅವರು ಯಾರನ್ನೂ ಬಿಡುಗಡೆ ಮಾಡಲಿಲ್ಲ. ಸರ್ಕಾರ ಕೇಳಿದಾಗಲೆಲ್ಲಾ "ಪ್ರತಿಯೊಬ್ಬರ ವಿಷಯವನ್ನೂ ಕುರಿತು ಕೂಲಂಕಷ ವಾಗಿ ವಿಮರ್ಶಿಸುತ್ತಿದ್ದೇವೆ" ಎನ್ನುತ್ತಿದ್ದರು. ಸರ್ಕಾರದ ಯಂತ್ರ ಚಲಿ ಸುವ ವೇಗ ಎಲ್ಲರಿಗೂ ಗೊತ್ತು. ಅಲ್ಲಿ ವರುಷಗಳು ದಿನಗಳಾಗುತ್ತವೆ. ನಿರಪರಾಧಿಗಳಾದ ಡಿಟೆನ್ಯುಗಳಲ್ಲಿ ಯಾರಾದರೂ ಸರ್ಕಾರವನ್ನು ಸ್ವಲ್ಪ ಜೋರಾಗಿ ನಮ್ಮನ್ನು ಬಿಡುಗಡೆ ಮಾಡಿ ಎಂದು ಕೇಳಿದರೆ ಸರ್ಕಾರ ಕೂಡಲೇ ಇನ್ನು ಮೇಲೆ ಹೀಗೆ ಮಾಡುವುದಿಲ್ಲವೆಂದು ಬರೆದುಕೊಡು ಎನ್ನುತ್ತಿದ್ದರು. ಬರಿಯ ಯಂತ್ರವಾದ ಸರ್ಕಾರಕ್ಕೆ ಮನುಷ್ಯನ ಸ್ವಭಾವ ಹೇಗೆತಾನೆ ಗೊತ್ತಾದೀತು? ಯಾವ ತಪ್ಪನ್ನೂ ಮಾಡದವನನ್ನು ಇನ್ನು ತಪ್ಪು ಮಾಡುವುದಿಲ್ಲವೆಂದು ಬರೆದುಕೊಡು ಎಂದು ಹೇಳಿದರೆ ಅವನು ಬರೆದುಕೊಟ್ಟಾನೆ? ಘನಗಾಂಭೀರ್ಯವಿರಬೇಕಾದ ಸರ್ಕಾರಕ್ಕೆ ಈ ಅಲ್ಪ ವಾದ ಸೇಡುತಾನೆ ಯಾಕೆ? ಆದರೂ ಭಾರತ ಸರ್ಕಾರವೂ ದೇಶೀಯ ಸರ್ಕಾರಗಳೂ ಈ ಮಾರ್ಗವನ್ನೇ ಅನುಸರಿಸಿದುವು.

ದೀರ್ಘಕಾಲ ಸೆರೆಮನೆಯ ವಾಸದಿಂದ ದೇಹ ದೌರ್ಬಲ್ಯವೂ ಅದರ ಜತೆಯಲ್ಲಿ ಮನಸ್ಸಿಗೆ ದೌರ್ಬಲ್ಯವೂ ಉಂಟಾಗುತ್ತದೆ. ಜತೆಗೆ ಊರುಗಳಿಂದ ಮನೆಗಳಿಂದ ಸಂಸಾರದವರಿಂದ ಬರುವ ಕಾಗದಗಳಲ್ಲಿ ಗೋಳೇ ತುಂಬಿರುತ್ತದೆ. ದುಡಿಯುವ ಆಳು ಸಂಕೋಲೆಯಲ್ಲಿರುವಾಗ ಮಕ್ಕಳ ಹೊಟ್ಟೆ ತುಂಬುವವರಾರು? ಎಲ್ಲದರಲ್ಲೂ ಪ್ರಾಜ್ಞನೆಂದು ನಟಿ ಸುವ ಸರ್ಕಾರ ಬಂದಿಗಳ ಸಂಸಾರಕ್ಕೆ ಯಾವ ಸಹಾಯವೂ ಅಗತ್ಯವಿಲ್ಲ ವೆಂದು ತೀರ್ಮಾನಿಸಿತು. ಬ್ರಿಟಿಷ್ ಇಂಡಿಯಾದಲ್ಲಿ ಡಿಟೆನ್ಯುಗಳಿಗೆ ಅವರವರ ದರ್ಜೆಗೆ ಅನುಸಾರವಾಗಿ ತಿಂಗಳಿಗೆ 100-150 ರೂ. ಗಳು ಸರ್ಕಾರದಿಂದ ಸಂಸಾರ ನಿರ್ವಹಣೆಗಾಗಿ ದೊರಕುತ್ತಿದ್ದರೂ ಇಲ್ಲಿಯ ಸರ್ಕಾರ ನಮ್ಮವರಾದುದರಿಂದ ನಮ್ಮ ಡಿಟೆನ್ಯುಗಳ ಸಂಸಾರಗಳಿಗೆ ಹಸಿ ವಾಗುವುದೆಂಬುದು ಅವರಿಗೆ ತಿಳಿಯಲಿಲ್ಲವೆಂಬುದಿರಲಿ; ಅವರಿಗೆ ಹೊಟ್ಟೆ ಬಾಯಿ ಇದೆ ಎಂಬುದನ್ನೂ ಸರ್ಕಾರ ಒಪ್ಪಲಿಲ್ಲ. ರಟ್ಟೆಗಾತ್ರದ ಮೀಸೆ

ಗಳನ್ನು ಹುರಿಮಾಡಿಕೊಂಡು ಸರ್ಕಾರದ ಉತ್ಪತ್ತಿ ಮಾತ್ರ ಹೆಚ್ಚಿದೆ ಎಂದು ಹೇಳಿಕೊಳ್ಳತೊಡಗಿದರು. ಅಸೆಂಬ್ಲಿ ಕೌನ್ಸಿಲ್ಲುಗಳಲ್ಲಿ ಸರ್ಕಾರ ನಮ್ಮ ಬಂದಿಗಳಿಗೆ ಮಾಸಾಶನ ಬೇಡ ಎಂದ ಕೂಡಲೇ "ನಮ್ಮ ಸರ್ಕಾರ" ಎಂದು ಬೆನ್ನು ತಟ್ಟಿಕೊಳ್ಳುತ್ತಿದ್ದವರಿಗೆ ಬಹಳ ನಾಚಿಕೆಯಾಯಿತು. ಬೇಜಾರಿನಿಂದ ಒಬ್ಬೊಬ್ಬರು ನಾವು ಮಾಡಿದುದು ತಪ್ಪು ಎಂದು ಬರೆದು ಕೊಟ್ಟರು. ಸರ್ಕಾರ ಒಂದು ದೇಶವನ್ನೇ ಜಯಿಸಿದವರಂತೆ ಸಂತೋಷ ಪಟ್ಟುಕೊಂಡರು. ಸಭೆಯಲ್ಲೆಲ್ಲಾ ಹೇಳಿದರು. ಆದರೆ ಹಾಗೆ, "ಮಾಡಿ ದುದು ತಪ್ಪು" ಎಂದುಕೊಂಡು ಹೊರಗೆ ಹೋದವರಿಗೆ ಮಾನ ಬರ ಲಿಲ್ಲ-ಒಬ್ಬರು ಹೀಗೆ ಕ್ಷಮಾಪಣೆ ಕೊಟ್ಟು ಹೋಗುತ್ತಾರೆ ಎಂಬುದು ಸೆರೆಮನೆಯಲ್ಲಿ ಜನಜನಿತವಾಯಿತು. ಡಿಟೆನ್ಯುಗಳು ಹೇಳುವುದನ್ನೆಲ್ಲಾ ಹೇಳಿಯಾಯಿತು. ಆದರೂ ಕ್ಷಮಾಪಣೆ ಕೊಡುತ್ತೇನೆಂದವರು ಅಲ್ಲಾಡ ಲಿಲ್ಲ. ಬೇರೆ ದಾರಿಯಿಲ್ಲದೆ ಡಿಟೆನ್ಯುಗಳು ಸುಮ್ಮನಾದರು. ಆವತ್ತು ಕ್ಷಮಾಪಣೆ ಕೊಟ್ಟು ಹೋಗಬೇಕೆಂದಿದ್ದವರಿಗೆ ಮನೆಯಿಂದ ಒಂದು ಕಾಗದ ಬಂದಿತು. ಕೇಂದ್ರ ಕಾರಾಗಾರದ ಸೆರೆಮನೆಯಲ್ಲಿ ಯಾವುದೂ ಗುಟ್ಟು ಇಲ್ಲ. ಕಕ್ಕಸ್ ಗುಟ್ಟು ಇಲ್ಲದ ಕಡೆ ಇನ್ನು ಯಾವುದು ತಾನೇ ಗುಟ್ಟು! ಎಲ್ಲರೂ ಊಟಕ್ಕೆ ಕುಳಿತಿದ್ದಾಗ ಒಬ್ಬ ಡಿಟೆನ್ಯು ಆ ಕಾಗದ ತಂದು ಸಭೆಯಲ್ಲಿ ಓದಿದರು. ಕ್ಷಮಾಪಣೆ ಕೊಟ್ಟು ಹೋಗುತ್ತೇನೆಂದು ಹೇಳುತ್ತಿದ್ದವರ ಹೆಂಡತಿ ಬರೆದಿದ್ದ ಕಾಗದ ಅದು. ಅದರ ಒಕ್ಕಣೆ ಹೀಗೆ ಇತ್ತು. "ಪ್ರಿಯರೆ ನೀವು ಬಂದಿಸಲ್ಪಟ್ಟಾಗ 'ದೇವರು ಮಾಡಿದಂತೆ ಆಗಲಿ. ಧೈರ್ಯವಾಗಿರು. ಬಂದಾಗ ಬರುತ್ತೇನೆ' ಎಂದು ಹೇಳಿ ಹೋದಿರಿ. ನಾವು ಕಷ್ಟ ಸುಖ ಹೇಗೋ ಈವರೆಗೆ ತಳ್ಳಿದುದಾಯಿತು. ಈಗ ನಾನು ಕೇಳುತ್ತಿರುವ ಸುದ್ದಿ ಏನು? ನೀವು ಕ್ಷಮಾಪಣೆ ಕೊಟ್ಟು ಬರುತ್ತೀರಿ ಎಂದು ಹೇಳಿಕೊಳ್ಳುತ್ತಿದ್ದಾರೆಲ್ಲ. ಕ್ಷಮಾಪಣೆ ಕೊಡುವುದು ಯಾವುದಕ್ಕೆ? ನೀವು ಏನು ತಪ್ಪು ಮಾಡಿದ್ದೀರಿ. ಖಂಡಿತ ಕ್ಷಮಾಪಣೆ ಕೊಟ್ಟು ವಾಪಸು ಬರಬೇಡಿ. ಉಳಿದ ಸ್ತ್ರೀಯರ ಎದುರಿಗೆ ತಲೆ ಎತ್ತಿಕೊಂಡು ತಿರುಗಲು ಸಾಧ್ಯವಾಗುವುದಿಲ್ಲ. ಕಮಲಮ್ಮನ ಗಂಡ ಖಾಯಿಲೆ ನೆಪ ದಿಂದ ಕ್ಷಮಾಪಣೆ ಕೊಟ್ಟು ಬಂದರು. ಈಗ ಕಮಲಮ್ಮ ಮನೆಬಿಟ್ಟು ಹೊರಡುವುದಿಲ್ಲ. ಹೊಳೆಗೆ ಬಂದು ಹದಿನೈದು ದಿನಗಳಾದವು. ಗಂಡ

ಯಾವೂರಲ್ಲಿದ್ದಾರೋ ದೇವರಿಗೇ ಗೊತ್ತು. ಖಂಡಿತ ನನ್ನನ್ನು ಈ ಸ್ಥಿತಿಗೆ ತರಬೇಡಿ. ದಮ್ಮಯ್ಯ ಹಿಂದಿರುಗುವುದು ನಿಧಾನವಾದರೂ ಚಿಂತೆಯಿಲ್ಲ. ಮಾನವಾಗಿ ಹಿಂದಿರುಗಿ, ಹೇಗೋ ಮಾಡಿಕೊಳ್ಳುತ್ತೇವೆ''

"ಈ ಕಾಗದ ಓದಿದ ಮೇಲೆ ಕ್ಷಮಾಪಣೆ ಕೊಡಬೇಕೆಂದಿದ್ದ ಡಿಟೆನ್ಯು ಉಸಿರಾಡಲಿಲ್ಲ.

(7) "ಈ ಸ್ವರ್ಗದ ಬಾಗಿಲು ಪತ್ರಿಕೆಯ ಮೇಲೆ ಆಗಲೇ ಅಧಿಕಾರಿಗಳ ವಕ್ರ ದೃಷ್ಟಿ ಬೀಳತೊಡಗಿದೆ. ಇದಕ್ಕೆ ಮುಖ್ಯ ಕಾರಣ ನಾವು ಮೊನ್ನೆ ಬರೆದ ಸುದ್ದಿಯೇ. ನಾವು ಬರೆದುದು ನಿಜವೇ ಎಂದು ನಾವು ಮತ್ತೆ ಪರೀಕ್ಷಿಸಿ ಸಮಜಾಯಿಶಿ ಮಾಡಿಕೊಂಡೆವು. ನಾವು ಬರೆದ ವಿಚಾರ ಸತ್ಯವಾದುದು. ನಂಜಪ್ಪ ನಂಜಯ್ಯ ಇಬ್ಬರೂ ಬಂದಿಗಳು. ನಂಜಪ್ಪ ಜೈಲಿನಲ್ಲಿ ಸತ್ತ. ಆದರೆ ಸೆರೆಮನೆಯ ಅಧಿಕಾರಿಗಳು ನಂಜಯ್ಯ ಸತ್ತ ಎಂದು ತಮ್ಮ ಲೆಕ್ಕದಲ್ಲಿ ಬರೆದುಕೊಂಡರು. ಅವರ ಮಟ್ಟಿಗೆ ಯಾವನೋ ಒಬ್ಬ ಸತ್ತ ಅಷ್ಟೇ. ಕೆಲವು ದಿನಗಳ ನಂತರ ನಂಜಯ್ಯನಿಗೆ ಬಿಡುಗಡೆ ಬಂತು. ಬಿಡುಗಡೆಯ ಸುದ್ದಿ ಕೇಳಿ ನಂಜಯ್ಯ ಸೆರೆಮನೆಯ ಕಛೇರಿ ಬಾಗಿಲಿಗೆ ಬಂದ. ಆದರೆ ಸೂಪರಿಂಟೆಂಡೆಂಟ್ ಸಾಹೇಬರು "ನೀನು ಸತ್ತಿದ್ದೀಯ, ನಿನಗೆ ಬಿಡುಗಡೆ ಎಲ್ಲಿ'' ಎಂದರು. ತಾನು ಸತ್ತಿದ್ದೇನೆಯೋ ಇಲ್ಲವೋ ಎಂಬುದು ನಂಜಯ್ಯನಿಗೇ ಅನುಮಾನವಾಯಿತು. ನಂಜಯ್ಯ "ನಾನು ಸತ್ತಿಲ್ಲ'' ಎಂದ. ಸೂಪರಿಂಟೆಂಡೆಂಟ್ ಸಾಹೇಬರು "ಅದು ನಿನ್ನ ತಪ್ಪು. ನಮ್ಮ ದಾಖಲೆ ಸರಿಯಾಗಿದೆ'' ಎಂದರು.

ಕೊನೆಗೆ ನಂಜಯ್ಯನಿಗೆ ಬಿಡುಗಡೆಯಾಯಿತೆಂದು ಕೇಳುತ್ತೇವೆ.

(8) "ಒಬ್ಬ ಖೈದಿಯನ್ನು ಒಂದು ವಾರ, ಲೆಕ್ಕಾಚಾರದ ತಪ್ಪಿನಿಂದ ಹೆಚ್ಚಾಗಿ ಸೆರೆಯಲ್ಲಿ ನಿಲ್ಲಿಸಿಕೊಂಡುದು ನಿಜವೆಂದು ಮತ್ತೆ ನಮಗೆ ಖಾತರಿಯಾಗಿ ಗೊತ್ತಾಗಿದೆ.

(9) "ಈ ದಿನ ಹೊಸದಾಗಿ ಬಂದ ಡಿಟೆನ್ಯುವಿನ ವಿಷಯದಲ್ಲಿ ಒಂದು ಸುದ್ದಿ ಕೇಳುತ್ತೇವೆ. ಜಿಲ್ಲಾಧಿಕಾರಿಗಳಿಂದ ಮೊದಲು ವಾರಂಟು ವಿ. ಎಸ್. ಹನುಮಂತಯ್ಯ ಎಂಬುವರ ಹೆಸರಿಗೆ ಹೊರಟಿತಂತೆ. ಆದರೆ ಎಷ್ಟುಕಾಲ ಹುಡುಕಿದರೂ ವಿ. ಎಸ್. ಹನುಮಂತಯ್ಯ ದೊರಕಲಿಲ್ಲ. ಎಸ್. ವಿ. ಹನುಮಂತಯ್ಯ ದೊರಕಿದರು. ಈಗ ಪೋಲೀಸಿನವರು

ವಾರಂಟಿನಲ್ಲಿಯೇ ಏ. ಎಸ್. ಹೊಡೆದು ಎಸ್. ಏ. ಮಾಡಿದ್ದಾರಂತೆ. ಇದು ನಿಜವೇ?

"ಗಂಟೆ ಹೊಡೆಯುವ ಅವಶೇಷ ಇದೊಂದು ಸೆರೆಮನೆಯಲ್ಲಿ ಮಾತ್ರ ಇನ್ನೂ ಉಳಿದುಕೊಂಡಿದೆ. ಗಂಟೆ ಹೊಡೆಯುತ್ತಿರುವ ವಾರ್ಡರ್‌ಗೆ ಈ ಸ್ಥಳದಲ್ಲಿಯೇ ಮುವ್ವತ್ತು ವರುಷ ಸರ್ವಿಸ್ ಆಗಿದೆ. ಕೆಲಸಕ್ಕೆ ಸೇರಿದಾಗ ಅವನಿಗೆ ಎಷ್ಟು ಸಂಬಳ ಕೊಡುತ್ತಿದ್ದರೋ ಈಗಲೂ ಅಷ್ಟೇ ಕೊಡುತ್ತಿದ್ದಾರೆ. ಆದರೆ ಅವನಿಗೆ 8-9 ಮಕ್ಕಳಿವೆ. ಅವನಿಗೆ ಗಂಟೆ ಹೊಡೆಯುವುದರ ಹೊರತು ಮತ್ತೇನೂ ತಿಳಿಯದು. ಸಂಬಳ ಹೆಚ್ಚಾಗಿ ಕೇಳಬೇಕು ಎಂಬುದು ಕೂಡ ಅವನಿಗೆ ತಿಳಿಯದು. ದೊಡ್ಡವರು ತಮ್ಮ ಸಂಬಳಗಳನ್ನು ಹೆಚ್ಚಿಸಿಕೊಳ್ಳುತ್ತಾರೆಯೇ ಹೊರತು ಸಣ್ಣವರ ಯೋಗಕ್ಷೇಮ ನೋಡುವುದಿಲ್ಲ. ಸಂಸಾರದ ತಾಪತ್ರಯ ದುಃಖ ಹೋಗಲಾಡಿಸಿಕೊಳ್ಳಲು ಅವನಿಗಿರುವ ಒಂದೇ ಮಾರ್ಗ ಕುಡಿತ. ವಾರ್ಡರ್ ಮಲ್ಲ, ಮನಸ್ಸಿಗೆ ಬಂದ ದಿನ ನೆಟ್ಟಗೆ ಹೋಗಿ ಎರಡು ಸೇರು ಮೂರು ಸೇರು ಕುಡಿದುಬಿಡುತ್ತಾನೆ. ಅನಂತರ ಬಂದ ಮೇಲೆ ಅವನಿಗೆ ಗಂಟೆ ಹೊಡೆಯುವ ಜಾಗಟೆ, ತೇರಿನ ಗಾಲಿಯಂತೆ ಕಾಣುತ್ತದೆ. ಬಂದವನೇ ಅವನು ಮನಸ್ಸಿಗೆ ಬಂದಷ್ಟು ಗಂಟೆ ಬಾರಿಸುತ್ತಾನೆ. ಒಂದು ದಿನ ಗಂಟೆ ಎಂಟು ಆಗಿದ್ದಾಗ 9 ಹೊಡೆದ. ಮತ್ತೊಂದು ದಿನ ಮಧ್ಯಾಹ್ನ ಒಂದು ಗಂಟೆಯಾಗಿದ್ದಾಗ ಹನ್ನೆರಡು ಹೊಡೆದ. ಡಿಟೆನ್ಯುಗಳ ಪೈಕಿ ಯಾರೋ ಈಗ ಗಂಟೆ ಒಂದು ಎಂದಾಗ ಮತ್ತೆ ಒಂದು ಹೊಡೆದ. ಗಂಟೆ ಹೊಡೆಯದ ಬಾಕಿ ಕಾಲದಲ್ಲೆಲ್ಲಾ ಅವನು ಬಂದೂಕವನ್ನು ಹೆಗಲಿನ ಮೇಲೆ ಇಟ್ಟುಕೊಂಡು 'ಟವರ್' ಸುತ್ತ ಗಸ್ತು ಹೊಡೆಯುತ್ತಿರಬೇಕು. ಆದರೆ ಸುರಾದೇವಿಯ ಆವಾಹನೆಯಾದನಂತರ ಬಂದೂಕದೊಂದಿಗೆ ಗಸ್ತು ತಿರುಗುವುದು ಎಲ್ಲಿ? ಒಂದು ದಿನ ಮಲ್ಲ ಸೊಂಟದ ನಡುಕಟ್ಟನ್ನು ಬಿಚ್ಚಿಟ್ಟು ಗೊರಕೆ ಹೊಡೆಯುತ್ತಿರುವಾಗ ಖೈದಿಗಳ ಪೈಕಿ ಯಾರೋ ಅದರಲ್ಲಿದ್ದ ಮದ್ದಿನ ಪೊಟ್ಟಣವನ್ನು ಹಾರಿಸಿ ಬಿಟ್ಟರು. ಅದು ಯಾವಾಗ ಸರ್ಕಾರಿ ಅಧಿಕಾರಿಗಳ ಗಮನಕ್ಕೆ ಬರುವುದೋ ಗೊತ್ತಿಲ್ಲ.

"ಮಲ್ಲನನ್ನು ನೋಡಿದರೆ ಜನರಿಗೆ ಕನಿಕರವುಂಟಾಗುತ್ತದೆ. ಮಲ್ಲ ಕುಡುಕನಾದುದರಿಂದ ಅವನ ಕಣ್ಣಿಗೆ ಏನೇನೋ ಕಾಣುತ್ತದೆ. ಸೆರೆ

ಮನೆಯಲ್ಲಿ ಮಲ್ಲನ ಭೂತದ ಕತೆ ಪ್ರಸಿದ್ಧ. "ನಾನು ರಾತ್ರಿ ತೂಕಡಿ ಸುತ್ತಾ ಕುಳಿತಿದ್ದೆ. ಬೆಳ್ಳಂಬೆಳದಿಂಗಳು. ಇದ್ದಕ್ಕಿದ್ದಂತೆ ಒಂದು ದೆಯ್ಯ ಬಂತು. ಫಾಸಿ ತೊಲೆ ಮೇಲೆ ಕುಳಿತುಕೊಂಡಿತು. ಅಲ್ಲಿಂದ ಗೋಡೆಯ ಮೇಲೆ ಕುಪ್ಪುತ್ತಾ ಆಸ್ಪತ್ರೆ ಹತ್ತಿರ ಸ್ವಲ್ಪ ಹೊತ್ತು ನಿಂತಿತ್ತು. ಆಮೇಲೆ ಟವರ್‌ನ ಜೈಲು ಗೋಪುರ ಹತ್ತಿರ ಬಂದು ಗಂಟೆ ಮುಟ್ಟಿ ನೋಡಿತು. 2-3 ಗಸ್ತು ಹೊಡೆಯಿತು. ಇದ್ದಕ್ಕಿದ್ದಂತೆ ನನ್ನ ಮೇಲೆ ಬಂದು ಆಗತು ಕೊಂಡಿತು. ನನಗೆ ಕೂಗಿಕೊಳ್ಳಬೇಕೆನ್ನಿಸಿತು. ಆದರೆ ಬಾಯಿಂದ ಉಸಿರೇ ಹೊರಡಲಿಲ್ಲ. ಆಮೇಲೆ ಯಾವಾಗ ನನಗೆ ನಿದ್ರೆ ಬಂತೋ ಗೊತ್ತಿಲ್ಲ" ಎಂಬ ಮಲ್ಲನ ಕತೆ ಸೆರೆಮನೆಯಲ್ಲೆಲ್ಲಾ ಪ್ರಸಿದ್ಧವಾದುದೇ. ಮನುಷ್ಯ ಸ್ವಭಾವ ಎಲ್ಲಾ ಕಡೆಯೂ ಒಂದೇ. ದೆಯ್ಯ ಸ್ವಲ್ಪ ಹೆಚ್ಚು ಕಡಿಮೆ ಎಲ್ಲಿಬೇಕಾದರೂ ಕಣ್ಣಿಗೆ ಕಾಣಿಸಿಕೊಳ್ಳುತ್ತದೆ.

"ಮಲ್ಲ ಹೀಗೆ ಕುಡಿತದ ಕಾಟದಿಂದ ಮಾತ್ರವೇ ಗಂಟೆಯನ್ನು ದಿಕ್ಕಾಪಾಲಾಗಿ ಹೊಡೆಯುತ್ತಿದ್ದಾನೆಂತಲ್ಲ. ಅವನು ಜ್ಞಾನವಾಗಿದ್ದು ಕೊಂಡೇ ದಿವಸಕ್ಕೆ ಎರಡು ಸಲ ಗಂಟೆಯನ್ನು ಅರ್ಧಗಂಟೆ ಮುಂಚೆ ಹೊಡೆಯುತ್ತಾನೆ. ಸೆರೆಮನೆಯಲ್ಲಿ ಡಿಟೆನ್ಯುಗಳಿಗೆ ಸಾಧಾರಣವಾಗಿ ಮಧ್ಯಾಹ್ನ ಒಂದು ಗಂಟೆಗೂ ರಾತ್ರಿ 8 ಗಂಟೆಗೂ ಊಟವಷ್ಟೆ. ಡಿಟೆನ್ಯು ಗಳಲ್ಲಿ ಕೆಲವರೇನೋ ಇನ್ನೂ ಅರ್ಧ ಗಂಟೆ ತಡವಾದರೂ ಚಿಂತೆಯಿಲ್ಲ ಎನ್ನುತ್ತಿದ್ದಾರೆ. ಆದರೆ ಮಲ್ಲಯ್ಯನಿಗೆ ಊಟ ಸಕಾಲದಲ್ಲಿ ಬೇಕು. ಆದುದರಿಂದ ಅವನು ಎರಡು ಹೊತ್ತೂ ಅರ್ಧ ಗಂಟೆ ಮುಂಚಿತವಾಗಿ ಗಂಟೆ ಹೊಡೆದು ಬಿಡುತ್ತಾನೆ. ಡಿಟೆನ್ಯುಗಳು ಊಟಮಾಡಿ ಅವನಿಗೆ ಊಟ ಕೊಡುವ ವೇಳೆಗೆ ಅವನಿಗೆ ಸರಿಯಾದ ಊಟದ ಕಾಲ ಬರುತ್ತದೆ. ಇದರಿಂದ ಯಾರಿಗೂ ನಷ್ಟವಿಲ್ಲ. ಮಲ್ಲಯ್ಯ ಒಬ್ಬನಿಗೆ ಸ್ವಲ್ಪ ಸುಖ. ಸೆರೆಮನೆಯಲ್ಲಿರುವ ಬಂದಿಗೆ ಈ ಗಂಟೆ ಕಟ್ಟಿಕೊಂಡು ಆಗಬೇಕಾದು ದೇನು? ಅರ್ಧ ಗಂಟೆ ಮುಂದು ಅಥವ ಹಿಂದು ಎಂಬುದರಿಂದ ಅವನಿಗೆ ಸೆರೆಯ ಬಾಳಿನಲ್ಲಿ ಹೆಚ್ಚು ವ್ಯತ್ಯಾಸ ಕಾಣುವುದಿಲ್ಲ.

(11) "ನಾವು ಹಿಂದೆ ಸ್ವರ್ಗದ ಬಾಗಿಲಿನಲ್ಲಿ ದಾಡಿವಾಲ (ಗಡ್ಡ ಬಿಡಿಸಿರುವವರು) ಗಳ ವಿಚಾರ ಕುರಿತು ಹೇಳಿದ್ದೆವು. ಈಚೆಗೆ ಇವರ ಸಂಖೆ ಹೆಚ್ಚಾಗಿದೆ. ಸುರಪುರ ಸಬ್ ಜೈಲಿನಲ್ಲಿದ್ದ ನಾಪಿತ ಒಬ್ಬ

ಕೆಲಸಗಾರ. ವಯಸ್ಸಾದ ಮುದುಕನಾದರೂ ಕ್ಷೌರ ಮಾಡುವಾಗ ಕೈ ನಡುಗುತ್ತಿರಲಿಲ್ಲ ಲಕ್ಷಣವಾದ ಜರಿ ಪೇಟವನ್ನು ಧರಿಸಿ ಕನ್ನಡಕ ಹಾಕಿಕೊಂಡು ಮದವಣಿಗನಂತೆ ಕೂತು ಆತ ಕ್ಷೌರ ಚೆನ್ನಾಗಿ ಮಾಡುತ್ತಿದ್ದ. ಅವನ ಮುಂದೆ ಕ್ಷೌರಕ್ಕೆ ಕೂತರೆ ಬಹಳ ಚೆನ್ನಾಗಿ ಹೊತ್ತು ಹೊಗುತ್ತದೆ. ಸುಮಾರು 50 ವರುಷಗಳಿಂದ ಆ ಸ್ಥಳಕ್ಕೆ ಬಂದ ದೊಡ್ಡ ದೊಡ್ಡ ಅಧಿಕಾರಿಗಳಿಗೆಲ್ಲಾ ಕ್ಷೌರ ಮಾಡಿರುವವನು ಅವನೇ. ಅವರೆಲ್ಲ ಬರೆದುಕೊಟ್ಟ ಪ್ರಶಸ್ತಿ ಪತ್ರಗಳೆಲ್ಲಾ ಅವನಲ್ಲಿ ಇವೆ. ಇವನು ಗಾಂಧಿಯವರು ಸುರಪುರಿಗೆ ಬಂದಾಗ ಅವರಿಗೆ ಕ್ಷೌರ ಮಾಡಿದ್ದನಂತೆ. ಈ ಕಾರಣದಿಂದ ಡಿಟೆನ್ಯುಗಳು ಅವನನ್ನು ಗಾಂಧಿ ಕ್ಷೌರಕ ಎಂದು ಕರೆಯುತ್ತಾರೆ. ಡಿಟೆನ್ಯುಗಳು ಸುರಪುರದಿಂದ ವರ್ಗವಾಗಿ ಕೇಂದ್ರ ಕಾರಾಗಾರಕ್ಕೆ ಹೊರಟಾಗ ಗಾಂಧಿ ಕ್ಷೌರಕ ಅವರಲ್ಲಿ ಗಡ್ಡ ಬಿಟ್ಟವರನ್ನು ಕಂಡು ಬಲಾತ್ಕರಿಸಿ ಅವರು ಗಡ್ಡ ಬಿಡುವುದು ತಮಗೆ ಅವಮಾನವೆಂದು ಹೇಳಿ ಪುಸಲಾಯಿಸಿ ಕ್ಷೌರಮಾಡಿಸಿ ಕಳುಹಿಸಿದ್ದ. ಸೆರೆಮನೆಯಲ್ಲಿರುವ ಡಿಟೆನ್ಯುಗಳಿಗೆ ತಮ್ಮ ವೇಷ ಭೂಷಣಗಳಲ್ಲಿ ಔದಾಸೀನ್ಯ ಸ್ವಾಭಾವಿಕ. ಕೆಲವರು ತಾವು ಸ್ವತಃ ಮಾಡಿಕೊಳ್ಳಬೇಕು. ಇಲ್ಲದಿದ್ದರೆ ಗಡ್ಡ ಬೆಳ ದಿರಲಿ ಎನ್ನುತ್ತಾರೆ! ಕೆಲವರು ಸಮತಾವಾದಿಗಳು, ಅವರೂ ಗಡ್ಡ ಬಿಟ್ಟಿದ್ದಾರೆ. ಕೆಲವರು ಕಮ್ಯೂನಿಸ್ಟ್ ಅವರೂ ಗಡ್ಡ ಬಿಟ್ಟಿದ್ದಾರೆ. ಕಮ್ಯೂನಿಸ್ಟರು ತರತರಹ ಗಡ್ಡ ಬಿಟ್ಟಿದ್ದಾರೆ. ಕೆಲವರಿಗೆ ಕಪ್ಪಾಗಿ ಪೊದೆ ಬೆಳೆದಂತೆ ಬೆಳೆದಿದೆ. ಈ ಗಡ್ಡ ಬಿಟ್ಟವರ ಎಡಗೈಗೆ ಯಾವಾಗಲೂ ಕೆಲಸವೇ. ಇವರ ಎಡಗೈ ಯಾವಾಗಲೂ ಗಡ್ಡ ಕೆರೆಯುತ್ತಲೇ ಇರು ತ್ತದೆ. ಸಾಧಾರಣವಾಗಿ ಅವರನ್ನು ಗುರುತಿಸುವುದೇ ಸಾಧ್ಯವಿಲ್ಲ. ಕಾಮ ನಾತ್‌ರ ಸ್ನೇಹಿತರು ದರ್ಶನಾರ್ಥವಾಗಿ ಬಂದಿದ್ದಾಗ ಕಾಮನಾತ್‌ರನ್ನೇ ಕುರಿತು 'ಕಾಮನಾತ್‌ರನ್ನು ಕರೆಯಿರಿ' ಎಂದರು. ಡಾಕ್ಟರ್‌ರವರ ಹೆಂಡತಿ "ಇಂಟರ್‌ವ್ಯೂ"ಗೆ ಬರುವುದಕ್ಕೆ ಮುಂಚೆ "ಮಗು ನಿಮ್ಮನ್ನು ನೋಡುತ್ತಿರುವುದು ಇದೇ ಮೊದಲು. ಆದುದರಿಂದ ಗಡ್ಡ ತೆಗೆಸಿಬಿಡಿ. ಇಲ್ಲದಿದ್ದರೆ ಬೆದರಿಯಾತು" ಎಂದು ಬರೆದರು. ಸುರಪುರದಿಂದ ಹೊರ ಡುವಾಗಲೇನೋ ಎಲ್ಲರೂ ಗಡ್ಡ ಬೋಳಿಸಿಕೊಂಡೇ ಹೊರಟಿದ್ದರು. ಆದರೆ ಕೇಂದ್ರ ಕಾರಾಗಾರದಲ್ಲಿ ಕ್ಷೌರ ಮಾಡಿಸಿಕೊಳ್ಳುವುದು ಒಂದು

ದೊಡ್ಡ ಯಾಗ. ನರಕಯಾತನೆ. ಅಲ್ಲಿ ಬೇಲ್ ಪಟ್ಟಿಗಳನ್ನು ಕಲ್ಲಿನ ಮೇಲೆ ತಿಕ್ಕಿ ಕ್ಷೌರ ಮಾಡಿಸಿಕೊಳ್ಳುವವರು ಅನೇಕರಿದ್ದಾರೆ. ಕತ್ತಿ ಎನ್ನಿಸಿಕೊಳ್ಳುವುದನ್ನು ವರುಷಕ್ಕೆ ಒಂದು ಸಲವೂ ಸಾಣೆ ಹಿಡಿಸುವುದಿಲ್ಲ. ಕ್ಷೌರ ಮಾಡುವವರಿಗೆ ಸ್ವಲ್ಪ ಹೆಚ್ಚು ದಿನಗಳು ರೆಮಿಶನ್ (ರಿಯಾಯ್ತಿ) ದೊರೆಯುವುದರಿಂದ ಖೈದಿಗಳೆಲ್ಲಾ ಕ್ಷೌರಕರೇ ಆಗಲು ಉತ್ಸಾಹಿಗಳಾಗಿರುತ್ತಾರೆ. ಅವರು ಕೈಗೆ ಸಿಕ್ಕಿದ ಬಡಪಾಯಿಯ ಗಡ್ಡ ಕೆರೆಯುತ್ತಿರುವಾಗ ಅವನ ಕಣ್ಣಿನಿಂದ ಧಾರಾಳವಾಗಿ ನೀರು ಸುರಿಯುತ್ತಾ ಇರುತ್ತದೆ. ಈ ಕಾರಣದಿಂದ ಕಾರಾಗೃಹದಲ್ಲಿರುವ ಅನೇಕ ಡಿಟೆನ್ಯುಗಳು ಈ ಸಲ ಗಡ್ಡ ಬಿಟ್ಟೇ ಇದ್ದರು. ಸೀಮಯ್ಯನವರು "ನೀವು ಇಲ್ಲಿ ಬಂದಿರುವುದೇ ಒಂದು ವಿಕಾರ. ಅದರ ಜತೆಗೆ ಈ ಗಡ್ಡ ಬೇರೆ ಬಿಡುವುದು ಯಾಕೆ ವಿಕಾರ" ಎಂದು ಹಾಸ್ಯ ಮಾಡುತ್ತಿದ್ದಾರೆ.

(12) "ಈಚೆಗೆ ಡಿಟೆನ್ಯುಗಳ ವ್ಯಾಸಂಗ ಬಹಳ ಹೆಚ್ಚಾಗಿದೆ. ಖಾದಿ ತರಗತಿ, ಬಡ್ಜೆಡ್ ತರಗತಿ, ಹಿಂದಿ ಉರ್ದು ಆಯುರ್ವೇದ ಸಂಸ್ಕೃತಿ ಕನ್ನಡ, ವೇದಾಧ್ಯಯನ, ಈ ಪಾಠಗಳಿಗೆ ಇವರಿಗೆ ಈವರೆಗೆ ಇರುವ ಮೆದುಳು ಸಾಲದು. ಇವರು ಮೆದುಳನ್ನು ಮತ್ತಾರಿಂದಲಾದರೂ ಸಾಲ ತೆಗೆದುಕೊಳ್ಳಬೇಕು.

(13) "ಸುರಪುರ ಸೆರೆಮನೆಯಲ್ಲಿ ಕಿಟಕಿಗಳಿಗೆ ಬಾಗಿಲುಗಳಿಲ್ಲ, ಬಾಗಿಲಿಗೆ ಬಾಗಿಲಿಲ್ಲ. ಬರಿಯ ಸಲಾಕಿಯ ಚೌಕಟ್ಟುಗಳು. ಬಿದ್ದ ಮಳೆ ಇರಚಲೆಲ್ಲಾ ತೂರಿಕೊಂಡು ಕೊಠಡಿಯೊಳಕ್ಕೇ ಬೀಳುತ್ತಿವೆ. ಮಳೆ ಬಂದ ಮರುದಿನ ನೆನೆದ ಸಾಮಾನುಗಳನ್ನು ಒಣಗಿಸಿಕೊಳ್ಳುವುದೇ ಡಿಟೆನ್ಯುಗಳಿಗೆ ಕೆಲಸ. ಇವು ಹಂಗಾಮಿ ಸೆರೆಮನೆಗಳಾದುದರಿಂದ ಹೀಗೆಯೇ. ಡಿಟೆನ್ಯುಗಳ ಬಟ್ಟೆ ಹಾಸಿಗೆ ಪುಸ್ತಕಗಳೆಲ್ಲಾ ಬಹಳ ದಿನ ಹೀಗೆ ನೆನೆದ ಮೇಲೆ ಕಿಟಕಿಗಳನ್ನು ಬಿದಿರು ತಡಿಕೆಗಳಿಂದ ಮುಚ್ಚಬೇಕೆಂದು ಮಂಜೂರಾಯಿತು. ಒಂದು ಕಡೆಯಿಂದ ಕಿಟಕಿಗಳಿಗೂ ಬಾಗಿಲುಗಳಿಗೂ ಬಿದಿರು ಚಾಪೆ ಕಟ್ಟಲು ಪ್ರಾರಂಭಿಸಿದರು. ಸೆರೆಮನೆಯ ಕಂಟ್ರಾಕ್ಟ್! ರುಪಾಯಿಗೆ ಎರಡೇ ಆಣೆ ಕೆಲಸ ನಡೆಯುವುದು; ಒಂದು ಗಾಳಿ ಬಂದರೆ ತಡಿಕೆಗಳು ಪಟಪಟನೆ ಹಾರಾಡುತ್ತವೆ. ಒಂದೊಂದು ತಡಿಕೆ ಒಂದೊಂದು ವಿಧವಾಗಿ ಜೋತು ಬಿದ್ದಿದೆ. ನೋಡಿದರೆ ಒಂದು

ವಿಧವಾದ ಬಾಂಬೆಶೊ ಅಥವ ಫೇರಿ ಬಜಾರ್‌ನಂತೆ ಕಾಣುತ್ತದೆ. ಇಷ್ಟಾದರೂ ಮಳೆ ಒಳಕ್ಕೆ ಬರುವುದು ನಿಂತಿಲ್ಲ.

(14) "ಇಲ್ಲಿಯ ವಾರ್ಡರುಗಳೆಲ್ಲಾ ಎಲ್ಲಿ ಹೋಗುತ್ತಾರೊ. ಈ ದಿನ ಸೂಪರಿಂಟೆಂಡೆಂಟ್ ಗಂಟೆ ಹೊಡೆದಾಗ ಬಾಗಿಲಿನಲ್ಲಿ ಬಂದೂಕ ಹಿಡಿದುಕೊಂಡು ನಿಂತಿದ್ದ ಸೆಂಟ್ರಿ, ಬಂದೂಕ ಮೂಲೆಗೆ ನಿಲ್ಲಿಸಿ ತಾನೇ ಅವರ ಬಳಿ ಹೋದ. ಆಗ ಸೂಪರಿಂಟೆಂಡೆಂಟರನ್ನು ನೋಡುವುದಕ್ಕಾಗಿ ಹೋಗಿದ್ದ ಡಿಟೆನ್ಯು ಒಬ್ಬರು, ಆ ಬಂದೂಕ ಕೈಯ್ಯಲ್ಲಿ ಹಿಡಿದುಕೊಂಡು ಪರೀಕ್ಷಿಸುತ್ತಿದ್ದರು. ಸಿಪಾಯಿ ಒಳಗಿನಿಂದ ಬಂದ. ಬರುವ ವೇಳೆಗೆ ಬಂದೂಕದ ಬಾಯಿ ಅವರ ಕಡೆಗೆ ಇರುವಂತೆ ಡಿಟೆನ್ಯು ಬಂದೂಕವನ್ನು ಪರೀಕ್ಷಿಸುತ್ತಿದ್ದರು. ಸಿಪಾಯಿ ಹೆದರಿ ಹೋ ಎಂದು ಕೂಗಿದ. ಸೂಪರಿಂಟೆಂಡೆಂಟರು ಒಳಗಿನಿಂದ ಓಡಿ ಬಂದರು. ಡಿಟೆನ್ಯು ಏನೂ ತಿಳಿಯದವನಂತೆ ಬಂದೂಕವನ್ನು ಮತ್ತೆ ಮೂಲೆಗೆ ಒರಗಿಸಿದ. ಒಂದು ಗಳಿಗೆಯ ನಂತರ ಸಿಪಾಯಿ 'ನಾನು ಸುಮ್ಮನೆ ಹೆದರಿದೆ. ಅದರಲ್ಲಿ ತೋಟ ಇರಲಿಲ್ಲ. ತೋಟ ನನ್ನ ಸೊಂಟದಲ್ಲಿಯೇ ಇದೆ' ಎಂದ.

(15) "ನಮ್ಮ ವಾಚಕರಿಗೆ ಈ ದಿನ ವಿಶೇಷ ಸುದ್ದಿ. ರಾತ್ರಿ ಕ್ರಿಮಿನಲ್ ಖೈದಿ ಮಾದ ತಪ್ಪಿಸಿಕೊಂಡು ಹೋಗಿದ್ದಾನಂತೆ. ಇದು ಸೆರೆಮನೆ ಅಧಿಕಾರಿಗಳ ವರದಿ. ಆದರೆ ಸ್ವರ್ಗದ ಬಾಗಿಲು ಸುದ್ದಿಗಾರನಿಗೆ ತಿಳಿದಿರುವ ಸಮಾಚಾರ ಈ ರೀತಿ. ಸೆರೆಮನೆಯ ವಾರ್ಡರ್ ಅಥವ ಛೀಫ್ ವಾರ್ಡರ್, ಒಬ್ಬ ಖೈದಿಯನ್ನು ಆಗಾಗ್ಗೆ ಸೆರೆಯಿಂದ ರಾತ್ರಿ ಹೊತ್ತು ಹೊರಗೆ ಬಿಡುತ್ತಿದ್ದ. ಅವನು ಹೋಗಿ ಸಿಕ್ಕಿದುದನ್ನು ಕಳವುಮಾಡಿ ತರುತ್ತಿದ್ದನೆಂದೂ ಇಬ್ಬರೂ ಅದನ್ನು ಹಂಚಿಕೊಳ್ಳುತ್ತಿದ್ದರೆಂದೂ ವರದಿ. ಹೀಗೆ ಬಿಡುತ್ತಾ ಇದ್ದ ಖೈದಿ ಮೊನ್ನೆ ರಾತ್ರಿ ಬಿಟ್ಟಾಗ ಹೋದವನು ಬರಲೇ ಇಲ್ಲ. ಈಗ ಖೈದಿ ಗೋಡೆ ಹಾರಿ ತಪ್ಪಿಸಿಕೊಂಡನೆಂದು ಒಂದು ಸ್ಥಳದ ಗೋಡೆಯನ್ನು ಎತ್ತರಿಸುತ್ತಿದ್ದಾರೆ".

* * * * *

ಈ ಸುದ್ದಿಯನ್ನು ಪ್ರಕಟಿಸಿದುದೇ ಸ್ವರ್ಗದ ಬಾಗಿಲಿಗೆ ಕೊನೆಯಾಯಿತು. ಅಧಿಕಾರಿಗಳಿಗೆ ಹಿಂದಲಿಂದ ಇದ್ದ ಅಸಮಾಧಾನಗಳೆಲ್ಲಾ ಒಟ್ಟಾಗಿ ಯಾವುದೋ ಒಂದು ನೆಪದಿಂದ ಅವರು "ಲಾಠಿಛಾರ್ಜು"

ಮಾಡಿದರು. ಸಂಪಾದಕನಿಗೂ ಸುದ್ದಿಗಾರರಿಗೂ ಚೆನ್ನಾಗಿ ಬಿತ್ತು. ಸಂಪಾದಕರ ಬೆನ್ನಿನ ಮೇಲೆ ಉದ್ದಕ್ಕೆ ರಟ್ಟೆಗಾತ್ರದ ಬಾಸುಂಡೆ ಎದ್ದಿತು. ಅವರು ಬೆನ್ನು ಮೇಲಕ್ಕೆ ಮಾಡಿಕೊಂಡು ನರಳುತ್ತಾ ಮಲಗಿದ್ದರು. ಆಗ ಸುದ್ದಿಗಾರರೊಬ್ಬರು ಬಂದು 'ಸ್ವಾಮಿ ಸಂಪಾದಕರೇ ಒಂದು ಬಾತ್ಮಿ' ಎಂದರು. ಸಂಪಾದಕರು ನರಳುತ್ತಾ ರೇಗಿದರು.

## ೫೧. ಭಾರತದ ಸ್ವಾತಂತ್ರ್ಯಕ್ಕೆ ಚ್ಯುತಿ ಇಲ್ಲ

ಸುಮಾರು 6 ತಿಂಗಳು ಹೀಗೆ ಕಳೆದು ಹೋಯಿತು. ಇದ್ದಕ್ಕಿದ್ದಂತೆ ಅಂತರಿಕ್ಷದಿಂದ ಸಿಡಿಲು ಬಡಿದಂತೆ ಗಾಂಧಿಯವರ ಇಪ್ಪತ್ತೊಂದು ದಿನದ ಉಪವಾಸದ ಸಮಾಚಾರ ಹೊರಬಿದ್ದಿತು. ಭಾರತವೆಲ್ಲಾ ತಲ್ಲಣಿಸಿತು. ಇಂಗ್ಲೆಂಡ್ ಅಮೆರಿಕ ಮುಂತಾದ ಕಡೆಗಳಲ್ಲಿ ಗಾಂಧಿಯವರ ಬಿಡುಗಡೆಯ ಒತ್ತಾಯಗಳು ನಡೆದುವು. ಸರ್ವಪಕ್ಷ ಸಮ್ಮೇಳನ ಗಾಂಧಿ ಬಿಡುಗಡೆಗಾಗಿ ಪ್ರಯತ್ನಿಸಿತು. ಸರ್ಕಾರ ಕಾಂಗ್ರೆಸ್ ಸಂಸ್ಥೆಗೆ ಮಾಡಿದ ಅನ್ಯಾಯವನ್ನು ಪ್ರತಿಭಟಿಸುವುದಕ್ಕಾಗಿ ಗಾಂಧಿಯವರು ಈ ಮಾರ್ಗ ಕೈಕೊಂಡರು. ಉಪವಾಸ ಕಾಲದಲ್ಲಿ ಬಿಡುಗಡೆ ಮಾಡುತ್ತೇವೆಂಬ ಸರ್ಕಾರದ ರಿಯಾಯಿತಿಯನ್ನು ಗಾಂಧಿ ತಿರಸ್ಕರಿಸಿದರು. ಸೆರೆಮನೆಗಳಲ್ಲಿದ್ದ ಎಲ್ಲಾ ಡಿಟೆನ್ಯುಗಳೂ ಮಂಕಾದರು. ಇದರ ಪರಿಣಾಮ ಏನಾಗುವುದೋ ಗಾಂಧಿಯವರ ಸ್ಥಿತಿ ಹೇಗಾಗುವುದೋ ಎಂದು ಎಲ್ಲರೂ ಕಳವಳಗೊಂಡರು. ದೇಶದ ಮೇಲೆ ಮಂಕು ಕವಿಯಿತು.

ಸರ್ಕಾರ ಆರು ತಿಂಗಳಿನಿಂದ ಗಾಂಧಿಯವರದೂ ಕಾಂಗ್ರೆಸ್ಸಿನವರದೂ ತಪ್ಪು ಎಂದು ಬೇಕಾದಂತೆ ಟಾಮುಟಾಮು ಮಾಡಿಸಿತ್ತು. ಕಾಂಗ್ರೆಸ್ ನಡೆಸಿದ ಅನ್ಯಾಯ ಎಂದು ಟಾಟನ್‌ಹ್ಯಾಮ್ ಪ್ರಕಟಿಸಿದ ಜಾಹೀರಾತು ಸಾವಿರಾರು ಪ್ರತಿ ಎಲ್ಲೆಲ್ಲೂ ಹಂಚಲ್ಪಟ್ಟಿತ್ತು. ಆದರೆ ಗಾಂಧಿಯವರು ಪ್ರತ್ಯುತ್ತರ ಕೊಟ್ಟಕೂಡಲೇ ಸರ್ಕಾರ ಪದ್ಧತಿಯಂತೆ ರೇಗಿತು. ಸರ್ಕಾರಕ್ಕೆ ಹಿಂದೂಸ್ಥಾನವನ್ನು ಆಳಲು ಯೋಗ್ಯತೆಯಿಲ್ಲವೆಂದು ಗಾಂಧಿಯವರು ಖಡಾಖಂಡಿತವಾಗಿ ಹೇಳಿದರು. "ಇಷ್ಟು

ಅವಸರದಿಂದ ಈ ಬಿಕ್ಕಟ್ಟಿನ ಸ್ಥಿತಿ ತಂದಿಟ್ಟುದು ಸರ್ಕಾರದ ತಪ್ಪು. ತಾವು ಮಾಡಿದ ತಪ್ಪು ಸರಿ ಎಂದು ಸಾಧಿಸಲು ಸರ್ಕಾರ ಕೊಡುತ್ತಿರುವ ಕಾರಣ ತಿರುಗಮುರುಗ. ಭಾರತೀಯ ಮಂತ್ರಿಗಳು ಇದಕ್ಕೆ ಒಪ್ಪಿದ್ದಾರೆ ಎಂಬುದರಲ್ಲಿ ಮಹತ್ವವಿಲ್ಲ. ಭಾರತದಲ್ಲಿ ನಿಮಗೆ ಯಾವಾಗಲೂ ಅವರಿಂದ ಈ ಸಹಾಯ ದೊರಕುತ್ತೆ. ಭಾರತೀಯ ಮಂತ್ರಿಗಳ ಈ ಸಹಕಾರವೇ ನೀವು ಭಾರತದಿಂದ ಹೋಗಲು ಮತ್ತೊಂದು ಬಲವಾದ ಕಾರಣ '' ಎಂದರು.

'' ನಾನು ಸಾಮೂಹಿಕ ಚಳುವಳಿ ಪ್ರಾರಂಭಿಸುವವರೆಗೆ ಸರ್ಕಾರ ಕಾಯಬೇಕಾಗಿದ್ದಿತು. ನಿಶ್ಚಿತವಾದ ಹೆಜ್ಜೆ ಇಡುವುದಕ್ಕೆ ಮುಂಚೆ ನಿಮಗೆ ಬರೆಯುತ್ತೇನೆಂದು ನಾನು ಘಂಟಾಘೋಷವಾಗಿ ಹೇಳಿದ್ದೆ. ಕಾಂಗ್ರೆಸ್ ವಾದವನ್ನು ನಿಷ್ಪಕ್ಷಪಾತವಾಗಿ ವಿಮರ್ಶೆಮಾಡಿರೆಂದು ಕೇಳುವುದೇ ನನ್ನ ಉದ್ದೇಶವಿತ್ತು. ತನ್ನ ಬೇಡಿಕೆಯಲ್ಲಿ ಏನೇನು ದೋಷಗಳಿವೆಯೆಂದು ತೋರಿದ್ದಿತೋ ಕಾಂಗ್ರೆಸ್ ಅವನ್ನೆಲ್ಲಾ ಪೂರ್ಣಮಾಡಿತ್ತು. ನೀವು ನನಗೆ ಭೇಟಿಯ ಸಂಧಿ ಒದಗಿಸಿದ್ದರೆ ಎಲ್ಲಾ ತೊಡಕುಗಳನ್ನೂ ಬಿಡಿಸುತ್ತಿದ್ದೆ, ಆದರೆ ಸರ್ಕಾರ ಉಗ್ರ ಉಪಾಯ ಕೈಕೊಂಡದ್ದು ನೋಡಿದರೆ, ಕಾಂಗ್ರೆಸ್ಸು ದಕ್ಷತೆಯಿಂದ ಸಾಮೂಹಿಕ ಚಳುವಳಿಯ ಕಡೆ ಸಾಗುತ್ತಿರುವುದರಿಂದ ಜನಾಭಿಪ್ರಾಯವು ಕಾಂಗ್ರೆಸ್‌ಗೆ ಅನುಕೂಲವಾಗುವುದೆಂದು ಸರ್ಕಾರ ಹೆದರಿದಂತೆ ಕಾಣುತ್ತದೆ. ಕಾಂಗ್ರೆಸ್ ಬೇಡಿಕೆಯನ್ನು ತಿರಸ್ಕರಿಸಲು ಸರ್ಕಾರ ಹೂಡಿದ ಟೊಳ್ಳುವಾದ ಲೋಕಕ್ಕೆ ಚೆನ್ನಾಗಿ ಅರ್ಥವಾಗಿದೆ. ಕಾಂಗ್ರೆಸ್ ಗೊತ್ತುವಳಿ ಆದನಂತರ ನಾನು ಮಾಡಿದ ಭಾಷಣಗಳ ಅಧಿಕೃತ ವರದಿಗಳಿಗಾಗಿ ಸರ್ಕಾರ ಕಾಯಬೇಕಿತ್ತು. ನಾನು ಆತುರದಿಂದ ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲವೆಂಬುದು ಸರ್ಕಾರಕ್ಕೆ ಗೊತ್ತಾಗುತ್ತಿದ್ದಿತು. ಅದರಲ್ಲಿ ನಾನು ಸೂಚಿಸಿದ ಅವಧಿಯನ್ನು ನೀವು ಉಪಯೋಗಿಸಿಕೊಂಡು ಕಾಂಗ್ರೆಸ್ ಬೇಡಿಕೆ ಪೂರೈಸುವ ಮಾರ್ಗಗಳನ್ನು ಕಂಡುಹಿಡಿಯಬಹುದಾಗಿದ್ದಿತು.

ಸರ್ಕಾರದ ತೀರ್ಮಾನದಲ್ಲಿ '' ಕಾಂಗ್ರೆಸ್‌ಗೆ ಬುದ್ಧಿ ಬಂದೀತೆಂದು ಸರ್ಕಾರ ಬಹುದಿನ ಕಾದಿತು '' ಎಂದಿದೆ. ಈ ಬುದ್ಧಿ ಬರುವುದು ಎಂಬ ಮಾತಿಗೆ ಕಾಂಗ್ರೆಸ್ ತನ್ನ ಬೇಡಿಕೆಯನ್ನು ಬಿಡಬೇಕೆಂಬುದೇ ಅರ್ಥವೆಂದು ಕಾಣುತ್ತದೆ. ಭಾರತಕ್ಕೆ ಸ್ವಾತಂತ್ರ್ಯ ಕೊಡುವುದೇ ನಮ್ಮ

ಧ್ಯೇಯವೆಂದು ಜಂಭ ಕೊಚ್ಚುವ ಸರ್ಕಾರ, ಕಾಂಗ್ರೆಸ್ ತನ್ನ ಬೇಡಿಕೆ ಬಿಡಬೇಕೆಂದು ಯಾಕೆ ಕೇಳಬೇಕು? ಇದಿರು ಪಕ್ಷದವರೊಂದಿಗೆ ಚರ್ಚೆ ಸಂಧಾನ ಮಾಡದೆ ದಬ್ಬಾಳಿಕೆಯಿಂದಲೇ ಮಟ್ಟಹಾಕುವ ಬೇಡಿಕೆಯೇ ಇದು! ಭಾರತದ ಸ್ವಾತಂತ್ರ್ಯವನ್ನು ಒಪ್ಪಿದರೆ ಭಾರತಕ್ಕೆ ಸರ್ವನಾಶ ಎಂದು ಹೇಳಿದರೆ ಯಾರುತಾನೆ ನಂಬಿಯಾರು? ಈ ಬೇಡಿಕೆಯನ್ನು ತಿರಸ್ಕರಿಸಿದುದರಿಂದ ದೇಶವೂ ಸರ್ಕಾರದಲ್ಲಿ ಗೊಂದಲದಲ್ಲಿ ಬಿದ್ದಿದೆ. ಕಾಂಗ್ರೆಸ್ಸು ಮಿತ್ರರ ಧ್ಯೇಯದೊಂದಿಗೆ ಐಕ್ಯವಾಗಲು ಸರ್ವ ಪ್ರಯತ್ನವನ್ನೂ ಮಾಡುತ್ತಿದ್ದಿತು.

ಸರ್ಕಾರದ ಪ್ರಕಟನೆಯಲ್ಲಿ ಮುಂದೆ ಹೀಗೂ ಇದೆ. "ಕಾಂಗ್ರೆಸ್ ಪಕ್ಷದವರು ಕೆಲವು ಕಾಲದಿಂದ ಶಾಸನ ವಿರೋಧವಾದ ಹಿಂಸಾಕೃತ್ಯದ ಏರ್ಪಾಡಿನಲ್ಲಿ ತೊಡಗಿದ್ದಾರೆ. ಪ್ರಯಾಣ ಸೌಕರ್ಯ ನಿರೋಧ ಸರ್ಕಾರಿ ನೌಕರರೊಡನೆ ರಾಜದ್ರೋಹದ ಒಳಸಂಚು, ಭಾರತ ರಕ್ಷಣೆಯ ಪ್ರಯತ್ನಕ್ಕೆ ಅಡ್ಡಿ ಮುಂತಾದುವನ್ನು ಯೋಜಿಸಿದ್ದಾರೆ. ಇದು ಗವರ್ನರ್ ಜನರಲ್‌ರ ಗಮನಕ್ಕೆ ಬಂದಿದೆ." ಇದು ಸತ್ಯದ ಪೂರ್ಣ ತಲೆಕೆಳಕು. ಯಾವಾಗಲೂ ಯಾವ ಮಜಲಿನಲ್ಲಿಯೂ ಹಿಂಸೆ ಯೋಚಿಸಿರಲಿಲ್ಲ. ಅಹಿಂಸಾ ಕೃತ್ಯದಲ್ಲಿ ಏನೇನು ಸೇರಿಸಬಹುದೋ ಅವನ್ನೆಲ್ಲಾ ಸೂಕ್ಷ್ಮವಾಗಿ ದುರುದ್ದೇಶದಿಂದ ವರ್ಣಿಸಲಾಗಿದೆ. ಕಾಂಗ್ರೆಸ್ ಎಲ್ಲರ ಎದುರಿಗೆ ಎಲ್ಲವನ್ನೂ ಬಹಿರಂಗವಾಗಿಯೇ ಚರ್ಚಿಸಿದ್ದಿತು. ಯಾವುದನ್ನೂ ಗುಟ್ಟಾಗಿ ಮಾಡುವಂತೆ ಇರಲಿಲ್ಲ. ಮತ್ತು ಬ್ರಿಟಿಷ್ ಜನರ ಹಿತಕ್ಕೆ ಘಾತಕವಾದ ಕೆಲಸವನ್ನು ಬಿಟ್ಟುಬಿಡಿರೆಂದು ನಿಮಗೆ ನಾನು ಹೇಳಿದರೆ, ಅದರಿಂದ ನಿಮ್ಮಲ್ಲಿಯ ರಾಜಭಕ್ತಿಗೆ ಭಂಗವನ್ನು ಎಲ್ಲಿ ತಂದಂತಾಯಿತು.

"ಕಾಂಗ್ರೆಸ್ ನಾಯಕರ ಬೆನ್ನು ಹಿಂದೆ ಹೀಗೆ ಸರ್ಕಾರ ಪ್ರಕಟಿಸುವ ಬದಲು 'ಸಿದ್ಧತೆ'ಗಳು ಆದುದು ತಿಳಿದಕೂಡಲೇ ಸರ್ಕಾರ ಅಂತವರ ಮೇಲೆ ತಕ್ಕ ಕಾರ್ಯಕ್ರಮ ಕೈಕೊಂಡು ಶಿಕ್ಷಿಸಬೇಕಾಗಿದ್ದಿತು. ಅದು ನ್ಯಾಯವಾದ ಮಾರ್ಗವಾಗುತ್ತಿದ್ದಿತು. ಆದರೆ ನಿರಾಧಾರವಾದ ದೂರನ್ನು ಹೊರಿಸಿ, ಮಾಡಿದ್ದು ಅನ್ಯಾಯ ಎಂಬ ಅಪರಾದಕ್ಕೆ ಗುರಿಯಾದಿರಿ.

"ತನ್ನ ಕಡೆಗೆ ಜನರ ದೃಷ್ಟಿಯನ್ನು ಎಳೆಯುವಷ್ಟು ತ್ಯಾಗವನ್ನು ಜನರಲ್ಲಿ ಉಂಟುಮಾಡುವುದು ಕಾಂಗ್ರೆಸ್ ಸಂಸ್ಥೆಯ ಧ್ಯೇಯವಾಗಿ

ದ್ದಿತು. ಕಾಂಗ್ರೆಸ್‌ಗೆ ಜನಾನುರಾಗವೆಷ್ಟೆಂಬುದನ್ನು ತೋರಿಸುವುದು ಅದರ ಉದ್ದೇಶವಾಗಿದ್ದಿತು. ಅಹಿಂಸೆಯನ್ನು ಪೂರ್ಣವಾಗಿ ಅನುಸರಿಸುತ್ತಿರುವ ಸಂಸ್ಥೆಯನ್ನು ಈ ಕಾಲದಲ್ಲಿ ತುಳಿಯಲು ಪ್ರಯತ್ನಿಸಿದುದು ವಿವೇಕವೆ ?

ಕಾಂಗ್ರೆಸ್ಸು ಭಾರತದ ವಾಣಿಯಲ್ಲವೆಂದೂ ತನ್ನ ಸ್ವಂತ ಪ್ರಾಧಾನ್ಯತೆಗಾಗಿ ತನ್ನ ಸರ್ವಾಧಿಕಾರ ನೀತಿಗಾಗಿ ಭಾರತ ತನ್ನ ಗುರಿಯನ್ನು ತಾನು ಮುಟ್ಟಲು ಕಾಂಗ್ರೆಸ್ ನಾಯಕರು ಒಂದೇ ಸಮವಾಗಿ ಅಡ್ಡಿಯಾಗಿದ್ದಾರೆ ಎಂದೂ ಸರ್ಕಾರಿ ಪ್ರಕಟನೆಯಲ್ಲಿ ಹೇಳಿದೆ. ಅತ್ಯಂತ ಹಳೆಯದಾದ ರಾಷ್ಟ್ರೀಯ ಸಂಸ್ಥೆಯನ್ನು ಹೀಗೆ ನಿಂದಿಸುವುದು ನೀಚವಾದ ಅವಹೇಳನ. ಸ್ವಾತಂತ್ರ ವೀಯಲು ಸರ್ಕಾರ ಮಾಡಿದ ರಾಷ್ಟ್ರೀಯ ಪ್ರಯತ್ನಗಳನ್ನೆಲ್ಲಾ, ನ್ಯಾಯದ ಮತ್ತು ಅನ್ಯಾಯದ ಮಾರ್ಗದಿಂದ ಕಾಂಗ್ರೆಸ್ ವಿರೋಧಿಸಿದುದನ್ನು ಅಚ್ಚುಮಾಡಿರುವ ಆಧಾರಗಳ ಮೇಲೆ ಸಿದ್ಧಮಾಡಿದೆ ಎಂಬ ಸುಳ್ಳು ಮಾತು—ಸರ್ಕಾರದ ಬಾಯಲ್ಲಿ ಬರಬಾರದು.

" ಭಾರತ ಸರ್ಕಾರ ಒಂದು ವಿಷಯ ಪರಿಗಣಿಸಲೇ ಇಲ್ಲ. ಸ್ವಾತಂತ್ರ್ಯ ಘೋಷಣೆಯ ಜತೆಯಲ್ಲಿ ರಾಷ್ಟ್ರೀಯ ಸರ್ಕಾರವನ್ನು ರಚಿಸಲು ಕಾಂಗ್ರೆಸ್‌ಗೆ ಅವಕಾಶ ಕೊಡದಿದ್ದಲ್ಲಿ, ಮುಸ್ಲಿಂ ಲೀಗ್‌ಗಾದರೂ ಅವಕಾಶಕೊಡಿ. ಮುಸ್ಲಿಂ ಲೀಗ್ ರಚಿಸಿದ ಸರ್ಕಾರವನ್ನೇ ಕಾಂಗ್ರೆಸ್ ಅಂಗೀಕರಿಸುವುದು. ಕಾಂಗ್ರೆಸ್ ಹೀಗೆ ಹೇಳಿರುವಾಗ ಇದರ ಮೇಲೆ ಸರ್ವಾಧಿಕಾರದ ಆಕ್ಷೇಪಣೆಗೆ ಅವಕಾಶವೇ ಇಲ್ಲ.

" ಸರ್ಕಾರ ಕೊಡುತ್ತೇನೆ ಎಂದು ಹೇಳಿದುದನ್ನೇ ಸ್ವಲ್ಪ ಪರೀಕ್ಷಿಸೋಣ. ಸರ್ಕಾರ ಹೇಳಿದ್ದು ಇದು " ಯುದ್ಧ ಮುಗಿದ ಕೂಡಲೇ ಎಲ್ಲಾ ಪಕ್ಷಗಳನ್ನೂ ಸೇರಿಸಿ ತನಗೆ ಸರಿತೋರಿದ ರೀತಿಯ ಸರ್ಕಾರ ಸ್ಥಾಪಿಸಲು ಭಾರತಕ್ಕೆ ಸಂಪೂರ್ಣ ಸ್ವಾತಂತ್ರ್ಯವುಂಟು ಎಂದು ಹೇಳಿದಿರಿ. ನಿಮ್ಮ ಆ ಮಾತಿನಲ್ಲೇನಾದರೂ ಸತ್ಯವುಂಟೆ ? ಎಲ್ಲಾ ಪಕ್ಷಗಳಲ್ಲಿಯೂ ಈಗ ಒಮ್ಮತವಿಲ್ಲ. ನಿಜ, ಆದರೆ ಯುದ್ಧ ಮುಗಿದ ಕೂಡಲೆ ಆ ಒಮ್ಮತವುಂಟಾಗಿಬಿಡುವುದೆ ? ಸ್ವಾತಂತ್ರ್ಯ ಬರುವುದಕ್ಕೆ ಮುಂಚೆ ಪಕ್ಷಗಳು ಕೆಲಸಮಾಡಬೇಕಾದರೊ ? ಪ್ರಾತಿನಿಧ್ಯವಿಲ್ಲದ ಪಕ್ಷಗಳು ನಾಯಿ ಕೊಡೆಗಳಂತೆ ಬೆಳೆದರೂ, ಅವು ಕಾಂಗ್ರೆಸ್ಸನ್ನು ವಿರೋಧಿಸಿದ ಕೂಡಲೇ ಸರ್ಕಾರ

ಅವನ್ನು ಗೌರವಿಸುವುದು. ಆ ಪಕ್ಷ, ಸ್ವಾತಂತ್ರ್ಯ ವಿರೋಧಿಯಾದರೂ
ಚಿಂತೆಯಿಲ್ಲ. ಸರ್ಕಾರದ ದಾನದಲ್ಲಿ ವಿಫಲತೆ ಸ್ಪಷ್ಟವಾಗಿ ಅಡಗಿದೆ. ಇದ
ರಿಂದ ಸ್ವಾಭಾವಿಕವಾಗಿ ಹೊರಡುವ ತರ್ಕವೇ “ಬ್ರಿಟಿಷರೇ ಭಾರತ
ಬಿಟ್ಟು ಹೊರಡಿ” ಎಂಬುದು; ಭಾರತ ಗುಲಾಮಗಿರಿಯನ್ನು ಬಿಟ್ಟು
ಸ್ವತಂತ್ರವಾಗಬೇಕಾದರೆ, ಬ್ರಿಟಿಷರು ಇಲ್ಲಿಂದ ಕಾಲು ತೆಗೆಯಬೇಕು.
ನಿಜವಾದ ಪ್ರಜಾಪ್ರಾತಿನಿಧ್ಯದ ಸರ್ಕಾರ ಸ್ಥಾಪನೆಯಾಗಬೇಕು.

“ಈ ಬೇಡಿಕೆಯನ್ನು ಬೇಡಿದವನನ್ನು ಸಜೀವವಾಗಿ ಸೆರೆಯಲ್ಲಿ ಹೂತ
ಮಾತ್ರಕ್ಕೇ ಈ ಸಮಸ್ಯೆ ಪರಿಹಾರವಾಗಲಿಲ್ಲ. ಸಮಸ್ಯೆ ಇನ್ನೂ ವಿಷಮಿಸಿದೆ.

“ಸರ್ಕಾರದ ತೀರ್ಮಾನದಲ್ಲಿ ಮುಂದೆ ಹೀಗಿದೆ. ಆಕ್ರಮಣಕಾರರಿಗೆ
ಸಿಕ್ಕಿ ಕಷ್ಟಪಡುತ್ತಿರುವ ರಾಜ್ಯಗಳನ್ನು ನೋಡಿಯೂ ಭಾರತ, ಆಕ್ರಮಣ
ಕಾರರಿಗೆ ಸ್ವಾಗತವನ್ನು ನೀಡುವುದು ಎಂಬುದು ಭಾರತದ ಅಭಿ
ಪ್ರಾಯವೆಂದು ಸರ್ಕಾರ ಒಪ್ಪಲು ಸಿದ್ಧವಾಗಿಲ್ಲ” ಆ ಕೋರಿಗಳೆಲ್ಲಾ
ನನಗೆ ಗೊತ್ತಿಲ್ಲ. ಆದರೆ ಕಾಂಗ್ರೆಸ್ ಹೇಳಿಕೆಗೆ ಬೇಕಾದ ಸಾಕ್ಷ್ಯ
ಗಳನ್ನು ಮಾತ್ರ ನಾನು ಕೊಡಬಲ್ಲೆ. ಸರ್ಕಾರ ಅದನ್ನು ನಂಬಬಹುದು
ಬಿಡಬಹುದು. ಕೊನೆ ಸನ್ನಿಹಿತವಾಗಿದೆ ಎಂದರೆ ಯಾವ ಸಾಮ್ರಾಜ್ಯಕ್ಕೂ
ಆ ಮಾತು ಹಿತವಿಲ್ಲ. ಉಳಿದ ಸಾಮ್ರಾಜ್ಯಗಳ ಗತಿ ಕಾಂಗ್ರೆಸ್‌ಗೆ ಬೇಕಿಲ್ಲ.
ಬ್ರಿಟನ್ ಕಾಂಗ್ರೆಸ್‌ನ ಹಿತೈಷಿ. ಉಳಿದ ಸಾಮ್ರಾಜ್ಯಗಳ ಗತಿ ಬ್ರಿಟನ್ನಿಗೆ
ಬರದಿರಲಿ ಎಂಬುದು ಕಾಂಗ್ರೆಸ್ಸಿನ ಬಯಕೆ. ಆದುದರಿಂದ ಸಾಮ್ರಾಜ್ಯ
ಮೋಹವನ್ನು ನೀವಾಗಿಯೇ ತ್ಯಾಗಮಾಡಿ ಎಂದು ಕಾಂಗ್ರೆಸ್ ಹೇಳುತ್ತದೆ
ಕಾಂಗ್ರೆಸ್ಸು ಚಳುವಳಿ ಪ್ರವೇಶಿಸಿದುದು ಸ್ನೇಹದ ಭಾವನೆಯಿಂದಲೇ!
ಕಾಂಗ್ರೆಸ್ಸು ಸಾಮ್ರಾಜ್ಯ ವಾದವನ್ನು ಕೊಲ್ಲಬಯಸಿದುದು ಬ್ರಿಟಿಷರ
ಹಿತಕ್ಕಾಗಿ, ಜಗತ್ತಿನ ಹಿತಕ್ಕಾಗಿ. ಕಾಂಗ್ರೆಸ್ಸಿಗೆ, ಇಡೀ ಭಾರತದ
ಮತ್ತು ಜಗತ್ತಿನ ಹಿತದ ಹೊರತು ಮತ್ತಾವ ಸ್ವಂತ ಹಿತವೂ ಇಲ್ಲ.

“ಇದೇ ಹೇಳಿಕೆಯಲ್ಲಿರುವ ಮುಂದಲ ಈ ವಾಕ್ಯ ಬಹು ವಿನೋದ
ವಾಗಿದೆ. ‘ಭಾರತವನ್ನು ರಕ್ಷಿಸುವ ಭಾರತದ ಯುದ್ಧ ಪ್ರಯತ್ನವನ್ನು
ಬೆಳೆಸುವ ಭಾರತದ ಪಂಗಡಗಳಲ್ಲಿ ಸಮಾನತೆಯಿಂದಾಳುವ ಜವಾಬ್ದಾರಿ,
ಸರ್ಕಾರದ್ದು’. ಮಲಯ ಸಿಂಗಪುರ ಬರ್ಮಾದಲ್ಲಿ ಆದುದನ್ನು ನೋಡಿದರೆ
ಈ ಮಾತು ಸತ್ಯದ ಅಪಹಾಸ್ಯ. ಪಕ್ಷಗಳಲ್ಲಿ ಸಮಾನತೆ ತೋರುವುದು ತಮ್ಮ

ಜವಾಬ್ದಾರಿ ಎಂದು ಸರ್ಕಾರ ಹೇಳುವ ಮಾತು ಶೋಚನೀಯ. ಈ ಪಕ್ಷಗಳನ್ನು ಹುಟ್ಟಿಸಿರುವವರೇ ಸರ್ಕಾರವೆಂಬುದನ್ನು ಎಲ್ಲರೂ ಬಲ್ಲರು.

"ಯುದ್ಧದ ಗುರಿ ಇಬ್ಬರಿಗೂ ಒಂದೇ. ಸ್ಪಷ್ಟವಾಗಿ ಹೇಳಬೇಕಾದರೆ ಅದು ಚೀಣ ರಷ್ಯಾಗಳ ಸ್ವಾತಂತ್ರ್ಯ ರಕ್ಷಣೆಗೆ. ಆ ಉದ್ದೇಶಸಾಧನೆಗೆ ಭಾರತ ಸ್ವಾತಂತ್ರ್ಯ ಆವಶ್ಯಕವಿಲ್ಲವೆಂಬುದು ಸರ್ಕಾರದ ಅಭಿಪ್ರಾಯ. ನನ್ನ ಅಭಿಪ್ರಾಯ ಇದಕ್ಕೆ ತೀರಾ ವಿರುದ್ಧವಾಗಿದೆ. ನಾನು ಜವಹಿರ್ ಲಾಲ್ ನೆಹ್ರುವನ್ನು ನನ್ನ ಅಳತೆಗೋಲುಮಾಡಿಕೊಂಡಿದ್ದೇನೆ. ಚೀಣ ರಷ್ಯಾಗಳ ಸಂಬಂಧ ಪರಿಚಯದಿಂದ, ಆ ರಾಷ್ಟ್ರಗಳ ಆಪತ್ತು ನನಗಿಂತಲೂ ನಿಮಗಿಂತಲೂ ಆತನಿಗೆ ಹೆಚ್ಚು ದುಃಖವುಂಟುಮಾಡಿದೆ. ಈ ದುಃಖದ ತೀವ್ರತೆಯಲ್ಲಿ ಆತ ಸಾಮ್ರಾಜ್ಯದೊಂದಿಗೆ ತನಗಿದ್ದ ಹಳೆಯ ವ್ಯಾಜ್ಯವನ್ನು ಮರೆಯಲೆತ್ನಿಸಿದ. ನಾಜಿಗಳಿಗೂ ಫೇಸಿಸ್ಟ್‌ಗಳಿಗೂ ಎಲ್ಲಿ ಜಯವಾಗುವುದೋ ಎಂದು ಅವನು ಬಹಳ ಹೆದರಿದ್ದಾನೆ. ನಾನು ಅವನೊಂದಿಗೆ ಅನೇಕ ದಿನ ಚರ್ಚಿಸಿದೆ. ಅವನು ಒಳ್ಳೆಯ ಕಾವಿನಿಂದ ನನ್ನೊಂದಿಗೆ ವಾದಿಸಿದ. ಆ ಭಾವ ತೀವ್ರತೆಯನ್ನು ನಾನು ಮಾತಿನಲ್ಲಿ ವರ್ಣಿಸಲಾರೆ. ಆದರೆ ಆತನೂ ತರ್ಕಕ್ಕೆ ಸೋತು ಸತ್ಯಕ್ಕೆ ತಲೆಬಾಗಿದ. ಭಾರತಕ್ಕೆ ಸ್ವಾತಂತ್ರ್ಯ ದೊರೆಯದಿದ್ದರೆ ಇತರ ಎರಡು ರಾಷ್ಟ್ರಗಳ ಸ್ವಾತಂತ್ರ್ಯಕ್ಕೂ ಸೊನ್ನೆ ಎಂಬುದು ಗೊತ್ತಾದ ಕೂಡಲೆ ಒಪ್ಪಿದ. ಅಂತಹ ನಮ್ಮ ನಿಮ್ಮ ಮಿತ್ರನನ್ನು, ಶಕ್ತನಾದ ಸಹೋದ್ಯೋಗಿಯನ್ನು ಬಂಧಿಸಿದುದು ನಿಜವಾಗಿಯೂ ನಿಮ್ಮ ತಪ್ಪು. ನಮ್ಮ ನಿಮ್ಮ ಧ್ಯೇಯ ಒಂದೇ. ಆದರೆ ನಮ್ಮ ಕೇಳಿಕೆಗೆ ನಿಮ್ಮ ಉತ್ತರ ದಬ್ಬಾಳಿಕೆ. ಆದುದರಿಂದ ಬ್ರಿಟಿಷ್ ಸರ್ಕಾರಕ್ಕೆ ಬೇಕಾಗಿರುವುದು ಮಿತ್ರ ಪಕ್ಷದ ಜಯಕ್ಕಿಂತಲೂ ಭಾರತದ ಮೇಲೆ ಆಡಳಿತವೇ ಎಂದು ನಾನು ಅನಿವಾರ್ಯವಾಗಿ ಊಹಿಸಿದರೆ ತಪ್ಪಾಗಲಾರದು. ಈ ಹಟದಿಂದಲೇ ಸರ್ಕಾರ ಕಾಂಗ್ರೆಸ್ ಹೇಳಿಕೆಯನ್ನು ತಿರಸ್ಕರಿಸಿ ದಬ್ಬಾಳಿಕೆ ಪ್ರಾರಂಭಿಸಿತು. ಇತಿಹಾಸದಲ್ಲಿ ಹಿಂದೆಂದೂ ನಡೆಯದಷ್ಟು ದೊಡ್ಡ ರೂಪದಲ್ಲಿ ನಡೆಯುತ್ತಿರುವ ಈ ಪರಸ್ಪರ ಹತ್ಯೆಯೇ ಉಸಿರು ಕಟ್ಟಿಸಲು ಸಾಕು. ಆದರೆ ಸರ್ಕಾರದ ತೀರ್ಮಾನದಲ್ಲಿ ತೋರುತ್ತಿರುವ ಈ ಸತ್ಯದ ಕೊಲೆ, ಕಾಂಗ್ರೆಸ್ ಸ್ಥಾನವನ್ನು ಮತ್ತಷ್ಟು ಭದ್ರಪಡಿಸುತ್ತದೆ.

"ಇಷ್ಟು ಉದ್ದವಾದ ಕಾಗದ ಬರೆಯಬೇಕಾಗಿ ಬಂದುದಕ್ಕೆ ನನಗೇ ದುಃಖವಾಗಿದೆ. ನೀನು ಮಾಡಿದ ಕೆಲಸ ನನಗೆಷ್ಟೇ ಅಪ್ರಿಯವಾಗಿರಲಿ ನಾನು ಹಿಂದಲಂತೆಯೇ ನಿಮ್ಮ ಮಿತ್ರ. ಬ್ರಿಟಿಷ್ ಸರ್ಕಾರ ತನ್ನ ನೀತಿಯನ್ನು ಪೂರ್ಣವಾಗಿ ಬದಲಾಯಿಸಬೇಕೆಂದು ಕೇಳುತ್ತೇನೆ. ಬ್ರಿಟಿಷರ ಸ್ನೇಹಿತನೆಂದುಕೊಳ್ಳುವ ನನ್ನ ಮಾತನ್ನು ನಿರ್ಲಕ್ಷಿಸಬೇಡಿ, ದೇವರೂ ನಿಮಗೆ ದಾರಿ ತೋರಲಿ."

ದೇವರು ಲಿನ್‌ಲಿತ್‌ಗೊ ಸಾಹೇಬರಿಗೆ ದಾರಿ ತೋರಿಸಲಿಲ್ಲ. ಅವರು ಮೊಂಡರಾಗಿ ನಿಮ್ಮ ಉಪವಾಸದ ಜವಾಬ್ದಾರಿ ನಿಮ್ಮ ತಲೆಯಮೇಲೆ ಎಂದುಬಿಟ್ಟರು. ದೇಶದ ಆದ್ಯಂತವೂ ಸಭೆಗಳೂ ಪ್ರಾರ್ಥನೆಗಳೂ ಆದವು. ಸಪ್ರುರವರು ಬಂದುದನ್ನು ಅನುಭವಿಸಲು ದೇಶ ಸಿದ್ಧವಾಗಿರಬೇಕೆಂದು ಹೇಳಿದರು. ಸೆರೆಮನೆಗಳ ವಾತಾವರಣದಲ್ಲಿ ಮಂಕು ಕವಿಯಿತು. ಹಾಸ್ಯ ನಗು ಅಧಿಕಾರಿಗಳ ಮೇಲೆ ಹಾರಾಟ ಎಲ್ಲಾ ಮರೆಯಾಯಿತು. ಸೆರೆಮನೆಯಲ್ಲಿ ಯಾವ ತಿಂಡಿಯನ್ನೂ ಮಾಡಕೂಡದೆಂದೂ ತೀರ್ಮಾನವಾಯಿತು. ಶಾಂತವಾಗಿದ್ದ ವಾತಾವರಣವನ್ನು ಕಲಕಲು ಯಾರಿಗೂ ಮನಸ್ಸಿರಲಿಲ್ಲ. ಪ್ರತಿದಿನವೂ ಪ್ರಾಥಃಕಾಲ 9 ಗಂಟೆಗೆ ಗಾಂಧಿಯವರ ಆರೋಗ್ಯಕ್ಕಾಗಿ ಸೆರೆಮನೆಯಲ್ಲಿ ಪ್ರಾರ್ಥನೆ, ಭಗವದ್ಗೀತೆ ಪಠನ ಮೌನ ಇವು ನಡೆಯುತ್ತಿದ್ದವು. ಭಗವಂತ ಮಾಡಿದಂತೆ, ಎಲ್ಲಾ ಭಗವಂತನ ಇಚ್ಛೆ, ಎಂಬ ಸಾತ್ವಿಕತ್ಯಾಗ ಸೆರೆಯಾಳುಗಳೆಲ್ಲರ ಮುಖದಲ್ಲಿಯೂ ಒಡೆದು ಕಾಣುತ್ತಿದ್ದಿತು. ಆ ಕಾಲದಲ್ಲಿ ಕ್ರಿಮಿನಲ್ ಖೈದಿಗಳೂ ಸಹ ತಮ್ಮ ನಿತ್ಯದ ಹೊಡೆದಾಟವನ್ನು ಬಿಟ್ಟರು. ತಮ್ಮ ಕೆಲಸದಿಂದ ಯಾವ ಅನಾಹುತ ಎಲ್ಲಿ ಸಂಭವಿಸುವುದೋ ಎಂದು ಅವರು ಹೆದರಿದರು. ಅವರಲ್ಲಿಯ ಪರಸ್ಪರ ಕಲಹಗಳು ಗಾಂಧಿ ಉಪವಾಸದಿಂದ ಶಾಂತವಾದವು. ಅವರು ಪಿಸುಮಾತಿನಲ್ಲಿ ಮಾತನಾಡಿಕೊಳ್ಳುತ್ತಿದ್ದರು. ವೃತ್ತ ಪತ್ರಿಕೆಗಳ ಸುದ್ದಿ ತಿಳಿಯಲು ಅವರಿಗೆ ಆಗಿನಷ್ಟು ಆತುರ ಮತ್ತಾವಾಗಲೂ ಆಗಲಿಲ್ಲ.

ದಿನಗಳು ಒಂದೊಂದಾಗಿ ಕಳೆಯ ತೊಡಗಿದವು. ವಾತಾವರಣ ಸೆರೆಯಲ್ಲಿ ಹೆಚ್ಚು ಹೆಚ್ಚು ಭಾರವಾಯಿತು. ಸೆರೆಯಾಳುಗಳ ಪೈಕಿ ಅನೇಕರು ಒಂದುದಿನ ಎರಡು ದಿನ ಮೂರು ದಿನ ಉಪವಾಸ ಮಾಡಿದರು ಉಪ

ವಾಸದ ಹದಿನಾಲ್ಕು ಹದಿನೈದನೆಯ ದಿನಗಳಲ್ಲಿ ಗಾಂಧಿಯವರು ಬದುಕುವ ಭರವಸೆ ಇಲ್ಲವೆಂದು ತೋರಿತು. ಆದರೆ ಮಹಾತ್ಮರ ಇಚ್ಛಾಶಕ್ತಿ ಪ್ರಕೃತಿಯ ದೌರ್ಬಲ್ಯವನ್ನು ಜಯಿಸಿತು. ತಾವು ಬದುಕಿರಬೇಕೆಂದು ಗಾಂಧಿಯವರು ಮನಸ್ಸುಮಾಡಿದರು. ದೇಶದ ಕಾತರತೆ ಕಡಿಮೆ ಯಾಯಿತು. ದೇಶದ ಪ್ರಾರ್ಥನೆ ಪರಮಾತ್ಮನಿಗೆ ಕೇಳಿಸಿತು.

ತಮ್ಮ ಪಾಡಿಗೆ ತಾವು ಕುಳಿತಿದ್ದವರನ್ನು ಸೆರೆಹಿಡಿದು ಆರು ತಿಂಗಳಾಯಿತು. ಏಳು ತಿಂಗಳಾಯಿತು. ಎಂಟು ತಿಂಗಳಾಯಿತು. ಒಂಭತ್ತು ತಿಂಗಳಾಯಿತು. ಇನ್ನೂ ಹೀಗೆ ಎಷ್ಟುಕಾಲ. ಸರ್ಕಾರ ಯಾವಾಗ ಕೇಳಲಿ ಪ್ರತಿಯೊಬ್ಬವ್ಯಕ್ತಿಯ ಬಿಡುಗಡೆಯ ವಿಚಾರ ಕುರಿತೇ ಯೋಚಿಸು ತ್ತೇವೆ ಎನ್ನುತ್ತಿದ್ದರು. ಈ ಗಜಗರ್ಭಕ್ಕೆ ವಿಮೋಚನೆ ಎಂದು, ಎಂದು ದೇಶ ಕೂಗತೊಡಗಿತು. ತಾವು ನಿರಪರಾಧಿಗಳನ್ನು ಸೆರೆಹಿಡಿದುದು ತಪ್ಪು ಎಂಬುದು ಸರ್ಕಾರಕ್ಕೇ ತಿಳಿದರೂ ಒಣಪ್ರತಿಷ್ಠೆಯಕಾರಣದಿಂದ ಅವರು ಹತ್ತು ತಿಂಗಳಿನವರೆಗೆ ಸುಮ್ಮನಿದ್ದು ಅನಂತರ ಬಿಡುಗಡೆಯ ಒಂದು ಪಟ್ಟಿ ಹೊರಡಿಸಿದರು. ಸೆರೆಮನೆಯಲ್ಲಿರಲು ಯಾರಿಗೆ ತಾನೇ ಇಷ್ಟ? ಪ್ರತಿಯೊಬ್ಬ ಡಿಟೆನ್ಯುವೂ ತನ್ನ ಹೆಸರು ಪಟ್ಟಿಯಲ್ಲಿ ಬರುವು ದೇನೋ ಎಂದು ಕಾತುರನಾಗಿದ್ದ ಸುಮಾರು 300 ಡಿಟೆನ್ಯುಗಳ ಬಿಡುಗಡೆ; ಪೈಕಿ ಅರ್ಧ ಜನಕ್ಕೆ ಹಿಂಸಾಕೃತ್ಯದಲ್ಲಿ ಭಾಗವಹಿಸುವುದಿಲ್ಲವೆಂದು ಬರೆದು ಕೊಡಿ ಎಂದರು. ಅಹಿಂಸಾವಾದಿಗಳಾದ ಯಾವ ಕಾಂಗ್ರೆಸ್‌ನವರೂ ಹಿಂಸಾಕೃತ್ಯರಲ್ಲಿ ಭಾಗವಹಿಸುವವರಲ್ಲ. ಆದರೆ ಅಂತವರನ್ನು ಹಿಡಿದು ತಪ್ಪುಮಾಡಿದುದು ಸರ್ಕಾರ; ತಾವು ತಪ್ಪುಮಾಡಿ, ಡಿಟೆನ್ಯುಗಳನ್ನು ಹಿಂಸಾಕೃತ್ಯದಲ್ಲಿ ಭಾಗವಹಿಸುವುದಿಲ್ಲ. ಮಾಡಿದುದು ತಪ್ಪು ಎಂದು ಬರೆದುಕೊಂಡು ಎಂದರೆ ಹೇಗೆ? ಸರ್ಕಾರ ತಾನು ಮಾಡಿದ ತಪ್ಪಿನಿಂದ ಯಾವುದೋ ಉಪಾಯದಿಂದ ನುಗುಚಿಕೊಳ್ಳಲು ಈ ಹೂಟ ಹೂಡಿತು.

ಹೀಗೆ ಒಟ್ಟು ಬಿಡುಗಡೆಯಾದವರು ಎಂದು ಸರ್ಕಾರ ಪ್ರಕಟಿಸಿದ ಸಂಖೆ 300 ಆದರೂ, ಯಾವ ಷರತ್ತುಗಳೂ ಇಲ್ಲದೆ ಬಿಡುಗಡೆ ಹೊಂದಿ ದವರು 150 ಡಿಟೆನ್ಯುಗಳೇ. ಆ ಬಿಡುಗಡೆಯಲ್ಲಿ ಸರ್ಕಾರ ಯಾವ ನಿಯಮ ವನ್ನೂ ಅನುಸರಿಸಲೇ ಇಲ್ಲ. ಸಿಕ್ಕಿದವರಿಗೆ ಶೀರುಂಡೆ ಎಂಬಂತೆ ಮನಸ್ಸು ಬಂದವರನ್ನು ಬಿಟ್ಟಿತು; ಇಲ್ಲದವರನ್ನು ಒಳಗೇ ಕೂಡಿತು. ಈ

ವಿಮೋಚನ ಸಮಾರಂಭವನ್ನು ಕುರಿತು ಸ್ವರ್ಗದ ಬಾಗಿಲು ಪತ್ರಿಕೆ ಹೀಗೆ ಬರೆಯಿತು.

"ಕೊನೆಗೆ ಈ ಗಜಗರ್ಭಕ್ಕೆ ಮೋಕ್ಷವೆಂದುಕೊಂಡಿದ್ದೆವು. ಆದರೆ ಇದು ಬೆಟ್ಟ ಅಗೆದು ಇಲಿ ತೆಗೆದ ಸಮಾಚಾರವಾಯಿತು. ಈ ಬಿಡುಗಡೆಯಲ್ಲಿ ಸರ್ಕಾರ ಯಾವ ನೀತಿಯನ್ನೂ ಅನುಸರಿಸಿದಂತೆಯೇ ತೋರುವುದಿಲ್ಲ. ವಿದ್ಯಾರ್ಥಿಗಳಿಗೆ ಬಿಡುಗಡೆ ಇಲ್ಲ. ಹದಿಮೂರುವರುಷದ ಕೃಷ್ಣನಿಗೆ ಬಿಡುಗಡೆ ಇಲ್ಲ. ಸ್ತ್ರೀಯರಿಗೆ ಬಿಡುಗಡೆ ಇಲ್ಲ. ಆದರೆ ಕೆಲವು ಕಡೆಯ ಮುಖಂಡರನ್ನೇ ಬಿಟ್ಟಿದೆ; ಇದೇ ಮೊದಲನೆಯ ಸಲವಾಗಿ ಹಿಡಿದುಕೊಂಡು ಒಂದವರನ್ನು ಬಿಡಲಿಲ್ಲ. ಹಿಂದೆ 3–4 ಸಲ ತಾವಾಗಿಯೇ ಸ್ವಂತ ಇಚ್ಛೆಯಿಂದ ಸೆರೆ ಸೇರಿದವರನ್ನು ಬಿಟ್ಟಿದೆ. ಈ ನಿಯಮರಹಿತವಾದ ನೀತಿಯನ್ನು ಕುರಿತು ನಮ್ಮ ಹಾಸ್ಯ ಸುದ್ದಿಗಾರರು ಹೀಗೆ ಹೇಳುತ್ತಾರೆ 'ಯಾರನ್ನು ಬಿಡಬೇಕು ಯಾರನ್ನು ಬಿಡಬಾರದು ಎಂಬುದರ ಮೇಲೆ ಅಧಿಕಾರಿವರ್ಗದಲ್ಲಿ ಬಹಳ ಚರ್ಚೆ ನಡೆಯಿತಂತೆ. ಪ್ರತಿಯೊಂದು ವ್ಯಕ್ತಿಯ ವಿಷಯವನ್ನು ಪರಿಶೀಲಿಸಿ ನೋಡಲು ಅವರಿಗೆ ವಿರಾಮವಿಲ್ಲ. ಆದುದರಿಂದ ಅವರಲ್ಲಿ ಪ್ರಾಜ್ಞರೊಬ್ಬರು 'ಇವುಗಳನ್ನು ಒಂದು ವಿಧವಾದ ಲಾಟರಿಗೆ ಹಾಕೋಣ ಅವರ ಅದೃಷ್ಟ ಎಂದರಂತೆ. ಆಗ ಎಲ್ಲಾ ಡಿಟೆನ್ಯುಗಳ ಕಟ್ಟುಗಳನ್ನೂ ಮೇಜಿನಮೇಲೆ ಇಟ್ಟು 'ಮೇಜನ್ನು ಒದ್ದರೆ ಎಡಗಡೆ ಬೀಳುವುದಕ್ಕೆ ಬಿಡುಗಡೆ ಇಲ್ಲ. ಬಲಗಡೆ ಬಿದ್ದವಕ್ಕೆ ಉಂಟು. ಮೇಜಿನ ಮೇಲೆ ಉಳಿದವುಗಳಿಗೆ ಷರತ್ತು ಹಾಕೋಣ' ಎಂಬ ಸಮಾಧಾನಕ್ಕೆ ಬಂದರಂತೆ ಯಾರು ಒದೆಯಬೇಕೆಂಬುದಕ್ಕೂ ಹತ್ತು ನಿಮಿಷ ಚರ್ಚೆಯಾಗಿ ಕೊನೆಗೆ ತೀರ್ಮಾನವಾಯಿತಂತೆ " ವಿದ್ಯಾರ್ಥಿಗಳನ್ನೂ ಬಿಡಲಿಲ್ಲ. ನ್ಯಾಯಸ್ಥಾನದಲ್ಲಿ ತಪ್ಪಿತಸ್ಥರಲ್ಲವೆಂದು ತೀರ್ಮಾನವಾಗಿ, ಸರ್ಕಾರ ಢಿಟೆನ್ಯುಗಳಾಗಿಟ್ಟವರನ್ನೂ ಬಿಡಲಿಲ್ಲ."

---

# ೫೨. ಹೊರಗಿನ ಜಗತ್ತು ಏನು ಸೊಗಸು

ಸೆರೆಮನೆಯ ವಾತಾವರಣದಿಂದ ಸಾಮಾನ್ಯವಾದ ವಸ್ತುಗಳೂ ಸಾಮಾನ್ಯವಾದ ಸುಖಗಳೂ ಬಹು ದುರ್ಲಭವಾಗಿ ತೋರುತ್ತವೆ. ಸುರಪುರದ ಸೆರೆಮನೆಯ ಗೋಪುರದಲ್ಲಿ ಸಂಧ್ಯಾಕಾಲ ಡಿಟೆನ್ಯುಗಳ ಸಂದಣಿ ಬಹು ಹೆಚ್ಚು. ಯಾಕೆಂದರೆ ಗೋಪುರದ ಮೇಲೆ ನಿಂತು ಕೊಂಡರೆ ರೈಲು ಸಾಗರದ ಕಡೆಗೆ ಧಾನಿಸುವುದು ಕಾಣುತ್ತದೆ. ಹಾಸನ ಮಹಿಷಪುರಿ ಕಲ್ಯಾಣನಗರ ಮುಂತಾದ ಸೆರೆಮನೆಗಳಿಗೆ ಆಗಸ್ಟ್‌ನಲ್ಲಿ ಬಂದ ಡಿಟೆನ್ಯುಗಳು 8 ತಿಂಗಳು 10 ತಿಂಗಳು ರೈಲನ್ನೇ ನೋಡುತ್ತಿರಲಿಲ್ಲ ಆಗ ಸೆರೆಮನೆಯಿಂದ ಸೆರೆಮನೆಗೆ ಬದಲಾಯಿಸಬೇಕಾದರೂ ರೈಲಿನಲ್ಲಿ ಸಾಗಿಸುತ್ತಿರಲಿಲ್ಲ. ಇಪ್ಪತ್ತು ಜನ ಕೂರುವ ಬಸ್ಸಿನಲ್ಲಿ 70 ಜನರನ್ನು ತುಂಬಿ ಜತೆಗೆ ಪೋಲೀಸರನ್ನೂ ಬಂದೂಕಗಳನ್ನೂ ಭರ್ತಿಮಾಡಿ ಕಳುಹಿ ಸುತ್ತಿದ್ದರು. ಆಗ ಡಿಟೆನ್ಯುಗಳಿಗೆ ಹೊರಗಿನ ಪ್ರಪಂಚದೊಂದಿಗೆ ಸಂಬಂಧ ಸಾಯಂಕಾಲ ಕಾಣುತ್ತಿದ್ದ ರೈಲು ಒಂದೇ. ಆ ರೈಲು ದೂರದಲ್ಲಿ ಹೋಗುತ್ತಿದ್ದರೂ ಡಿಟೆನ್ಯುಗಳಿಗೆ ಅದೊಂದು ಬಗೆಯ ಹಳೆಯ ಮಿತ್ರ ನಂತೆ ತೋರುತ್ತಿದ್ದಿತು. ರೈಲು ಹೋಗುವುದನ್ನು ಕಾಯುವುದೇ ನೋಡುವುದೇ ಡಿಟೆನ್ಯುಗಳಿಗೆ ದಿನದ ಮುಖ್ಯ ಕೆಲಸವೂ ಉತ್ಸಾಹವೂ ಆಯಿತು. ಅನೇಕ ಕಾರಣಗಳಿಂದ ಬೇಸರಿಕೆ ಹೊಂದಿದ್ದ ಡಿಟೆನ್ಯುಗಳಿಗೆ ರೈಲು ಕಣ್ಣಿಗೆ ಬಿದ್ದ ಕೂಡಲೇ ಅಂದಿನ ಬೇಸರಿಕೆ ಮಾಯವಾಗುತ್ತಿದ್ದಿತು. ಹೀಗೆ ದಿನ ದಿನವೂ ನೋಡಿದ ಅಭ್ಯಾಸದಿಂದ ಡಿಟೆನ್ಯುಗಳು ಸ್ವಾಭಾವಿಕ ವಾಗಿ ತಮ್ಮಲ್ಲಿ ಗಡಿಯಾರವಿಲ್ಲದಿದ್ದರೂ ಹೊತ್ತಿಗೆ ಸರಿಯಾಗಿ ಗೋಪುರದ ಮೇಲೆ ಸೇರಿಬಿಡುತ್ತಿದ್ದರು. ಆದರೆ ರೈಲು ಮಾತ್ರ ಪ್ರತಿದಿನವೂ ಒಂದೊಂದು ವೇಳೆಯಲ್ಲಿ ಬರುತ್ತಿದ್ದಿತು.

ಸೆರೆಮನೆಯಲ್ಲಿ ಅತ್ಯಲ್ಪವಾದ ಸುಖಗಳಿಗೂ ಡಿಟೆನ್ಯುಗಳು ಬಹಳ ಕೃತಜ್ಞರಾಗಿರುತ್ತಾರೆ. ನಾಗರಪುರಿಯ ಸೆರೆಮನೆಯಲ್ಲಿ ನೀರಿಲ್ಲದೆ ನರಳಿ ದರೂ, ಆ ಸೆರೆಯಿಂದ ಬದಲಾಯಿಸುವ ಮೊದಲ ದಿನ ಸಾಯಂಕಾಲ, ಸೆರೆಮನೆಯ ಎದುರಿಗೆ ಹೊಸದಾಗಿ ಕಟ್ಟಿದ್ದ ಚಲನ ಚಿತ್ರ ಮಂದಿರದಲ್ಲಿ ಪ್ರಯೋಗಕ್ಕಾಗಿ, ಸೌಂಡ್ ಪೆಟ್ಟಿಗೆ ಸರಿಮಾಡಿ ಕೆಲವು ಹಾಡುಗಳನ್ನು

ಹಾಡಿಸುತ್ತಿದ್ದರು. ಆ ಹಾಡು ಕಿವಿಗೆ ಬಿದ್ದುದೇ ತಡ. ಧ್ವನಿಯ ದಿಕ್ಕನ್ನು ಅನುಸರಿಸಿಕೊಂಡು ಡಿಟೆನ್ಯುಗಳು ಕಾಂಪೌಂಡಿನಲ್ಲಿ ಹೋಗಿ ನಿಂತರು. ಕೆಲವರು ಮರಗಳ ಮೇಲೆ ಏರಿ ಕುಳಿತರು. ಅಂತಹ ಹಾಡು ಕಿವಿಗೆ ಬಿದ್ದು ಎಷ್ಟೋ ತಿಂಗಳಾಗಿದ್ದಿತು. ಕೆಲವು ಡಿಟೆನ್ಯುಗಳಿಗೆ ತಾವು ಇರುವುದು ಬಂಧನ ಎಂಬುದೂ ಮರೆತು ಹೋಯಿತು. ವಸಂತಕಾಲದಲ್ಲಿ, ಛಳಿಗಾಲದಿಂದ ಕಟ್ಟಿದ್ದ ಕೋಗಿಲೆಯ ಕೊರಳು ಸಡಿಲ ಬಿಡುವಂತೆ ಡಿಟೆನ್ಯುಗಳು ಹಿಂದಲ ಸಂಸ್ಕಾರವನ್ನು ಜ್ಞಾಪಿಸಿಕೊಂಡವರಂತೆ ತಾವೂ ಹಾಡಲು ಪ್ರಾರಂಭಿಸಿದರು. ಈ ಕಾಲದ ಚಲನ ಚಿತ್ರದ ಹಾಡುಗಳು ಸಾಧಾರಣವಾಗಿ ಎಲ್ಲರಿಗೂ ತಿಳಿದಿರುತ್ತವೆ. ಕೆಲವರು ಹಾಡುವುದನ್ನೂ ಕಲಿತಿರುತ್ತಾರೆ. ಹೊರಗೆ ಹೀಗೆ ಹಾಡಿನ ಧ್ವನಿ ಕೇಳಿದ ಕೂಡಲೇ ಇದ್ದಕ್ಕಿದ್ದಂತೆ ಒಳಗಡೆ ನೂರಾರು ಕಂಠಗಳಿಂದ ನೂರಾರು ಹಾಡುಗಳು ಪ್ರಾರಂಭವಾದುವು. ಸೆರೆಮನೆ ಎಷ್ಟು ಸುಲಭವಾಗಿ ನಂದನವಾಯಿತು!

ಕೇಂದ್ರ ಕಾರಾಗಾರದಲ್ಲಿಯೂ ಹೀಗೆಯೇ. ಕಾರಾಗಾರದ ಹಿಂದಲ ಗೋಡೆಯ ಆಚೆ ಇರುವುದು ಸಾಗರ್ ಸಿನಿಮಾ, ಪ್ರಭಾತ್ ಸಿನಿಮಾ. ಸಾಯಂಕಾಲವಾದ ಕೂಡಲೆ ಸೆರೆಮನೆಯ ಆವರಣದಲ್ಲಿರುವ ಮರ ಏರಿ ನಿಂತರೆ ಸಿನಿಮಾಗಳಲ್ಲಿ ಹತ್ತಿಸಿರುವ ದೀಪ ಕಾಣುತ್ತದೆ. ಡಿಟೆನ್ಯುಗಳು ಹೀಗೆ ಹತ್ತಿ ದೀಪಗಳನ್ನು ನೋಡುತ್ತಿರುವುದನ್ನು ಕಂಡು ಒಂದು ಬೆಳಿಗ್ಗೆ ಸೂಪರಿಂಟೆಂಡೆಂಟರು ಮರಗಳನ್ನು ಕಡಿಸಿಹಾಕಿಸಿದರು. ಹಿಂದಲ 'ಕಾಂಪೌಂಡುಗೋಡೆಯ' ಬಳಿ ನಿಂತರೆ ಪ್ರಿಯಾ ಮಿಲನಕು ಜಾನಾ ಚಲ್ ಚಲ್‌ರೆ ನೌ ಜವಾನ್ ಹಾಡುಗಳು ಸ್ವಲ್ಪ ದೂರದ ಕಾರಣದಿಂದ ಹೆಚ್ಚು ಇಂಪಾಗಿಯೇ ಕೇಳಿಸುತ್ತವೆ. ಒಂದೊಂದು ಸಲ ಹೊರಗಿನ ಜಗತ್ತು ಏನು ಸೊಗಸು ಎಂದು ತೋರುವುದು. ಮತ್ತೊಂದು ಸಲ ಈ ಸುಖವೆಲ್ಲ ನಮಗೆ ಯಾಕೆ ಇಲ್ಲ ಎಂದೂ ಎನಿಸುವುದು. ಈ ರೂಪುವಾಣಿ ಜಗತ್ತಿಗೂ ನಮಗೂ ಮಧ್ಯೆ ಇರುವುದು ಒಂದೇ ಗೋಡೆ. ಆದರೆ ನಡುವೆ ಇರುವ ಅಂತರ! ಒಂದಕ್ಕೊಂದಕ್ಕೆ ಎಷ್ಟು ದೂರ!

ಹಾಸ್ಯಪುರಿಯ ಸೆರೆಮನೆಯಲ್ಲಿ ಡಿಟೆನ್ಯುಗಳ ತಲೆಯ ಮೇಲೆಲ್ಲಾ ಗುಬ್ಬಚ್ಚಿಗಳು ಗೂಡು ಕಟ್ಟಿರುತ್ತಿದ್ದವು. ಇವುಗಳ ಪೈಕಿ ಒಂದು ಗಂಡು ಗುಬ್ಬಚ್ಚಿ, ಅದನ್ನು ಪ್ರೇಮದ ಬೇಟೆಯಾಡುವ ಎರಡು ಹೆಣ್ಣು ಗುಬ್ಬಚ್ಚಿ;

ಆ ಎರಡು ಹೆಣ್ಣುಗಳೂ ಗಂಡಿನ ಎದುರಿಗೆ ಬೇಕಾದಂತೆ ಆಡುತ್ತಿದ್ದವು. ಗಂಡಿನ ಹೆಗಲಿನ ಮೇಲೆ ಕುಳಿತುಕೊಂಡು ಮುದ್ದಿಸುತ್ತಿದ್ದುವು. ಗಂಡು ಅವುಗಳನ್ನು ಹೊತ್ತುಕೊಂಡು ಕುಪ್ಪಳಿಸುತ್ತಾ ಮುಂದಕ್ಕೆ ಹೋಗುತ್ತಿದ್ದಿತು. ಗಂಡು, ಹೆಣ್ಣುಗಳ ಹೆಗಲಿನ ಮೇಲೆ ಒಂದರ ಮೇಲೆ ಆದ ಮೇಲೆ ಒಂದರ ಮೇಲೆ ಕುಳಿತುಕೊಳ್ಳುತ್ತಿದ್ದಿತು. ಹೆಣ್ಣುಗಳೂ ಅದನ್ನು ಹೊತ್ತುಕೊಂಡು ನೆಗೆಯುತ್ತಾ ಹಾರುತ್ತಾ ಕುಪ್ಪಳಿಸುತ್ತಿದ್ದಿತು. ಆ ಕೊಠಡಿಗಳಿಗೆ ಮೊದಲು ಅವೇ ಯಜಮಾನರಾಗಿದ್ದುವು. ರಾಜಕೀಯ ಖೈದಿಗಳಿಲ್ಲದಿದ್ದರೆ ಸೆರೆಮನೆಗಳಲ್ಲಿ ಮುಕ್ಕಾಲೆಲ್ಲಾ ಖಾಲಿ. ಆಗ ಈ ಹಕ್ಕಿಗಳು ಓತಿಕೇತ ಹಾವು ಹಲ್ಲಿ ಹೆಗ್ಗಣಗಳೇ ಅಲ್ಲಿಯ ಯಜಮಾನರು. ಡಿಟೆನ್ಯೂಗಳು ಅಲ್ಲಿ ಇದ್ದರೂ ಗುಬ್ಬಚ್ಚಿಗಳು ಮಾತ್ರ ಸ್ವತಂತ್ರವಾಗಿ ತಮ್ಮ ಗೂಡುಗಳಿಗೆ ಬಂದು ಹೋಗುತ್ತಿದ್ದುವು.

ಒಂದು ಸಲ ಒಂದು ಪಾರಿವಾಳ ತಾಯಿ ಮರಿಯನ್ನು ಬಿಟ್ಟು ಎಲ್ಲಿಯೋ ಹೋಗಿಬಿಟ್ಟಿತು. ಬಹುಶಃ ಅದಕ್ಕೆ ಏನೋ ಅಪಾಯ ಸಂಭವಿಸಿದ್ದಿರಬೇಕು. ಅಥವಾ ಯಾರೋ ಅದನ್ನು ಕೊಂದಿರಬೇಕು. ಅಂತೂ ನಿತ್ಯ ಬೆಳಗಿನಿಂದ ಸಂಧ್ಯಾಕಾಲದ ಒಳಗಾಗಿ ೩-೪ ಸಲ ಬಂದು ಗುಟಕು ಕೊಡುತ್ತಿದ್ದ ಆ ಪಾರಿವಾಳ ಆ ದಿನ ಬರಲೇ ಇಲ್ಲ. ಕಾಲಕ್ಕೆ ಸರಿಯಾಗಿ, ಗಂಟೆ ಹೊಡೆದ ಕ್ರಮದಲ್ಲಿ ಬರುತ್ತಿದ್ದ ಆ ಪಾರಿವಾಳ ಆ ದಿನ ಬರದುದರಿಂದ ಅದರ ಚಲನವಲನಗಳನ್ನು ಗಮನಿಸುತ್ತಿದ್ದ ಡೆಟೆನ್ಯೂಗಳಿಗೆ—ಅದರಲ್ಲಿಯೂ ಮುಖ್ಯವಾಗಿ ಯಾರ ಹಾಸಿಗೆಯ ಮೇಲು ಭಾಗದಲ್ಲಿ ಅದು ಗೂಡು ಕಟ್ಟಿ ಗೂಡಿನ ಕಡ್ಡಿ ಕಸ ಹಾಸಿಗೆಯ ಮೇಲೆ ಕೆಡವಿ ಹಿಂಸೆಮಾಡುತ್ತಿದ್ದಿತೋ ಆ ಡಿಟೆನ್ಯುವಿಗೆ—ಆಶ್ಚರ್ಯವಾಯಿತು. ಸಾಯಂಕಾಲ ಏಳು ಗಂಟೆಯ ವೇಳೆಗೆ ಗೂಡಿನಿಂದ ಪಾರಿವಾಳದ ಮರಿ ಕೆಳಗಿನ ಹಾಸಿಗೆಯ ಮೇಲೆ ಬಿತ್ತು. ಪ್ರಾಯಶಃ ಅದು ಹಸಿವಿನಿಂದ ಗೂಡಿನ ತುದಿಯವರೆಗೆ ತೆವಳುತ್ತಾ ಬಂದಿದ್ದು ಮುಂದಲ ಹೆಜ್ಜೆಯಲ್ಲಿ ಏನು ಮಾಡುವುದಕ್ಕೂ ತೋರದೆ ಕೆಳಗೆ ಬಿದ್ದಿರಬೇಕು.

ಮನೆಗೆ ಬೆಂಕಿ ಬಿದ್ದಾಗ ಭಾವಿ ಇಲ್ಲದವರು ತಳಮಳಿಸುವಂತೆ ಡಿಟೆನ್ಯುಗಳೆಲ್ಲಾ ಒದ್ದಾಡುತ್ತಿದ್ದ ಪಾರಿವಾಳದ ಮರಿಯನ್ನು ನೋಡಿ “ ಅಯ್ಯೋ ಅಯ್ಯೋ ಹಸಿವಿನಿಂದ ಅನ್ಯಾಯವಾಗಿ ಸಾಯುವುದಲ್ಲಾ.

ಇದಕ್ಕೆ ಏನು ಮಾಡಬೇಕೋ ತಿಳಿಯದೆಲ್ಲಾ. ಒಂದು ಗಳಿಗೆ ಸುಮ್ಮನೆ
ಯಾದರೂ ಇದ್ದರೆ ಬದುಕಿಕೊಳ್ಳುತ್ತೆ. ಅನ್ಯಾಯವಾಗಿ ರಕ್ಕೆ ಬಡಿದು
ಸುಸ್ತಾಗಿ ಪ್ರಾಣಬಿಡುವುದಲ್ಲಾ'' ಎಂದು ಕೊರಗಿದರು. ಏನು ಮಾಡ
ಬೇಕೆಂಬುದು ಯಾರಿಗೂ ತಿಳಿಯಲಿಲ್ಲ. ಒಬ್ಬರು ಓಡಿಹೋಗಿ ಒಂದು
ಹಿಡಿ ಅಕ್ಕಿ ತಂದು ಮರಿಯ ಮುಂದೆ ಹಾಕಿದರು. ಮರಿ ಅದರ ಮೇಲೆಯೂ
ಹೊರಳಾಡಿತು. ಮತ್ತೊಬ್ಬರು ಒಂದು ಬಟ್ಟಲಿನಲ್ಲಿ ಸ್ವಲ್ಪ ಹಾಲನ್ನು
ತಂದು ಮರಿಯ ಮುಂದೆ ಇಟ್ಟರು. ಮರಿ ಒಂದುಸಲ ಹಾರಿ ಲೋಟದ
ಮೇಲೆ ಬಿದ್ದು ಅದನ್ನು ಉರುಳಿಸಿತು. ಹೀಗೆ ಸ್ವಲ್ಪ ಹೊತ್ತು ಒದ್ದಾಡಿ
ಮರಿ ಸುಮ್ಮನಾಯಿತು. ಅದು ಸಾಯುವುದೆಂದು ಎಲ್ಲರೂ ತಿಳಿದರು.
ಜನ ಮುಟ್ಟಿದರೇ ಅದು ಎಲ್ಲಿ ಸಾಯುವುದೋ ಎಂಬುವಷ್ಟು ನಿಶ್ಶಕ್ತ
ವಾಗಿತ್ತು ಅದು.

ಬೇರೆ ಕೊಠಡಿಯ ಒಬ್ಬ ಡಿಟೆನ್ಯು ಯುವಕ ಅಲ್ಲಿ ಬಂದ. ಬಹು
ಜೋರಾದ ಆಸಾಮಿ. ''ಬೇ ಜವಾಬ್ದಾರಿ'' ಮೂರ್ತಿವೆತ್ತಂತೆ ಕಾಣು
ತ್ತಾನೆ. ಒಂದೊಂದು ಗಳಿಗೆಗೆ ಒಂದೊಂದು ವೇಷ ಹಾಕುತ್ತಾನೆ.
ದಿವಸದಲ್ಲಿ ಅರ್ಧ ಕಾಲವನ್ನು ಅಭಿನಯದಲ್ಲಿಯೂ ಹಾಡಿನಲ್ಲಿಯೂ ಕಳೆ
ಯುತ್ತಾನೆ. ನಾಲ್ಕು ವಾರ ಗಡ್ಡ ಬಿಡುತ್ತಾನೆ. ಎರಡು ವಾರ ದಿನಕ್ಕೆ
ಮೂರು ಸಲ ಕ್ಷೌರಮಾಡಿಸುತ್ತಾನೆ. ಕೆಲವು ದಿನ ತಲೆ ಪೂರ್ತಾ
ಬೋಳಿಸಿ ಗಡ್ಡ ಬಿಟ್ಟು ಮುಸಲ್ಮಾನರಂತೆ ಪಾಯಿಜಾಮ ಮುಸಲ್ಮಾನರ
ಟೋಪಿ ಕುಚ್ಚು ಧರಿಸಿ ಉರ್ದುವಿನಲ್ಲಿ ಜಕಟಾ ಸಾಬಿಯಂತೆ ಮಾತ
ನಾಡುತ್ತಾನೆ. ಒಂದು ದಿನ ಇದ್ದಕ್ಕಿದ್ದಂತೆ ಔಷಧಿಗಳ ಜಾಹಿರಾತು
ಪ್ರಾರಂಭಿಸುತ್ತಾನೆ. ಯಾವುದಕ್ಕೂ ಹೆದರದ ಒರಟನಾಗಿ ಕಾಣುತ್ತಾನೆ.
ಪಾರಿವಾಳ ಸಾಯುತ್ತಿದ್ದುದನ್ನು ಕಂಡು ಅವನು ಅದರ ಹತ್ತಿರಕ್ಕೆ
ಹೋಗಿ ಅದನ್ನು ಮೆತ್ತಗೆ ಕೈಯ್ಯಲ್ಲಿ ಎತ್ತಿಕೊಂಡ. ''ನೀನು ಮುಟ್ಟಿ
ದರೇ ಸಾಯುತ್ತೆ. ಅದನ್ನು ಯಾಕೆ ಮುಟ್ಟಿದೆ'' ಎಂದು ಉಳಿದವರೆಲ್ಲಾ
ಕೂಗಿಕೊಂಡರು. ಪಾರಿವಾಳದ ಮರಿ....ಈಗಲೋ ಇನ್ನೊಂದು ಗಳಿ
ಗೆಗೋ ಉಸಿರು ಹೋಗುವುದು ಎಂಬಂತೆ ಏದುತ್ತಿದ್ದಿತು. ಪಾರಿ
ವಾಳದ ಮುಂದೆ ಬಿದಿದ್ದ ಅಕ್ಕಿ ಕಾಳು ನಾಲ್ಕನ್ನು ಡಿಟೆನ್ಯು ಬಾಯಲ್ಲಿ
ಹಾಕಿಕೊಂಡು ಚೆನ್ನಾಗಿ ಅಗಿದು ಅದರ ರಸದ ಗುಟುಕನ್ನು ಬಾಯಿ

ನಿಂದಲೇ ಪಾರಿವಾಳದ ಮರಿಯ ಬಾಯಿಗೆ ಕೊಟ್ಟ. ಮರಿ ಅವನ ಬಾಯಲ್ಲಿ ಕೊಕ್ಕನ್ನು ಇಟ್ಟುಕೊಂಡು ನಿಧಾನವಾಗಿ ಗುಟುಕನ್ನು ಹೀರಿತು. ಡಿಟೆನ್ಯು ಮರಿಯನ್ನು ಕೆಳಕ್ಕೆ ಬಿಟ್ಟು ಸುತ್ತ ಮುತ್ತ ಬಿದ್ದಿದ್ದ ಹುಲ್ಲಿನ ಸಹಾಯದಿಂದ ಒಂದು ಗೇಣು ಎತ್ತರದ ಒಂದು ಸಣ್ಣ ಗುಡಿಸಲನ್ನು ಕಟ್ಟಿ ಒಬ್ಬ ಡಿಟೆನ್ಯುವಿನ ತಲೆದಿಂಬಿನ ಹರಕಿನಲ್ಲಿ ಕಾಣುತ್ತಿದ್ದ ಹತ್ತಿಯಿಂದ ನೆಲದ ಮೇಲೆ ಹಾಸಿಗೆ ಮಾಡಿ ಮರಿಯನ್ನು ಗೂಡಿನಲ್ಲಿ ಬಿಟ್ಟನು. ಅವನ ಕನಿಕರ ಚುರುಕು, ಮಗು ತಾಯಿಯನ್ನು ಸಂರಕ್ಷಿಸುವಂತೆ ಆತ ಪಾರಿವಾಳಕ್ಕೆ ಮಾಡಿದ ಆರೈಕೆ, ಇವನ್ನೆಲ್ಲಾ ನೋಡಿ ಉಳಿದವರಿಗೆ ಆಶ್ಚರ್ಯವಾಯಿತು. ಅಲ್ಲಿಂದ ಮುಂದೆ ಪಾರಿವಾಳ ಅವನ ಹತ್ತಿರಕ್ಕೆ ಹೊರತು ಉಳಿದವರ ಸಮೀಪ ಹೋಗುತ್ತಿರಲಿಲ್ಲ. ಉಳಿದವರು ಮುಟ್ಟುವುದಕ್ಕೆ ಹೋದರೆ ತನ್ನ ಗೂಡಿನ ಕೊನೆಗೆ ಹೋಗಿ ಒರಗಿಕೊಂಡು ಭಯದಿಂದ ಕುಳಿತುಕೊಳ್ಳುತ್ತಿದ್ದಿತು. ಡಿಟೆನ್ಯು ಮೊದಲ ದಿನ 5-6 ಸಲ ಪಾರಿವಾಳಕ್ಕೆ ಗುಟಕನ್ನು ಕೊಟ್ಟನು. ಮಾರನೆಯ ದಿನದಿಂದ ದಿನಕ್ಕೆ ಮೂರು ಸಲದಂತೆ ಕೊಡಲು ಪ್ರಾರಂಭಿಸಿದನು. ಹೀಗೆ 10 ದಿವಸ ಕೊಡುವುದರಲ್ಲಿ ಮರಿಗೆ ಪೂರ್ಣವಾಗಿ ಗುಣವಾಯಿತು. ಅದರ ಪುಟ್ಟ ಕಣ್ಣಿಗೆ ಮಿಂಚಿನ ಹೊಳಪೂ ದೇಹಕ್ಕೆ ಪಕ್ಷಿ ಸಹಜವಾದ ಚಟುವಟಿಕೆಯೂ ಉಂಟಾಯಿತು. ಆಳಿನ ಮೇಲೆ ಆಳು ನಿಂತುಕೊಂಡು (ಸೆರೆಮನೆಯಲ್ಲಿ ಏಣಿ ಇರುವುದಿಲ್ಲ. ಇದ್ದರೆ ಕಳ್ಳರು ಅದರ ಮೇಲೆ ಹತ್ತಿ ತಪ್ಪಿಸಿಕೊಂಡು ಹೋಗುತ್ತಾರೆಂದು ಅಧಿಕಾರಿಗಳಿಗೆ ಭಯ) ಸೂರಿನ ಮೇಲೆ ಕಟ್ಟಿದ್ದ ಗೂಡಿಗೆ ಮರಿಯನ್ನು ಬಿಟ್ಟೆವು. ಮರಿ ಅರ್ಧ ಗಂಟೆಯೊಳಗಾಗಿ ಎಲ್ಲಿಗೋ ಹಾರಿಹೋಯಿತು. ಆಹಾರವನ್ನು ಸಂಪಾದಿಸಿಕೊಂಡು ಮತ್ತೆ ಗೂಡಿಗೆ ಬಂತು. ಅಲ್ಲಿಂದ ಮುಂದೆ ನಿತ್ಯವೂ ಮರಿಯೂ ತನ್ನ ತಾಯಿ ಮಾಡುತ್ತಿದ್ದಂತೆಯೇ ಸಕಾಲದಲ್ಲಿ ಗೂಡನಿಂದ ಹೊರಟು ಹೊರಗೆ ಹೋಗಿ ಆಹಾರವನ್ನು ಸಂಪಾದಿಸಿಕೊಂಡು ಸಾಯಂಕಾಲದಲ್ಲಿ ಹಿಂದಿರುಗುತ್ತಿದ್ದಿತು.

ಸೆರೆಮನೆಯ ಅಧಿಕಾರಿಗಳಿಗೆ ಮನುಷ್ಯ ಸ್ವಭಾವ ಸ್ವಲ್ಪವೂ ತಿಳಿಯುವುದಿಲ್ಲ ಎಂಬುದಕ್ಕೆ ಈ ಡಿಟೆನ್ಯುವಿನ ವಿಚಾರದಲ್ಲಿ ಸೂಪರಿಂಟೆಂಡೆಂಟರು ನಡೆದುಕೊಂಡುದೇ ಉದಾಹರಣೆ. ಈ ಡಿಟೆನ್ಯು ನಿತ್ಯಾ ಒಂದು ವೇಷ

ಹಾಕುತ್ತಾ ಬೇಜವಾಬ್ದಾರಿಯಿಂದ ನಡೆದುಕೊಳ್ಳುತ್ತಿದ್ದುದನ್ನು ಕಂಡು ಸೂಪರಿಂಟೆಂಡೆಂಟ್ ಸಾಹೇಬರು "ಇವನು ಕ್ರಾಂತಿಕಾರ. ಇವನು ಇಲ್ಲಿರುವಾಗ ಸೆರೆಮನೆಯ ರಕ್ಷಣೆ ನನಗೆ ಕಷ್ಟ. ಆದುದರಿಂದ ನಾಲ್ಕು ಬಂದೂಕ ಹೆಚ್ಚಾಗಿ ಬೇಕು. ನಾಲ್ಕು ಸಿಪಾಯಿಗಳ ಕಾವಲು ಹೆಚ್ಚಾಗಿ ಬೇಕು" ಎಂದು ಮೇಲಧಿಕಾರಿಗಳಿಗೆ ಅರ್ಜಿ ಹಾಕಿ ತರಿಸಿದರು. ಇನ್ನು 10-15 ದಿನಗಳನಂತರ ಇಷ್ಟು ಕುಮುಕು ಇದ್ದರೂ ಸಾಧ್ಯವಿಲ್ಲ ಎಂದು ಹೇಳಿ ಆ ಕ್ರಾಂತಿಕಾರನನ್ನು ಕೇಂದ್ರ ಕಾರಾಗಾರಕ್ಕೆ ವರ್ಗಾಯಿಸಿದರು. ಅಲ್ಲಿಗೆ ಹೋದ ಕೂಡಲೆ ಬುಕ್ಕಿನಲ್ಲಿ ಮತ್ತು ಪೋಲೀಸ್ ಸೆರೆಮನೆ ಕಾಗದ ಪತ್ರಗಳಲ್ಲಿ ಅವನಿಗೆ ಕ್ರಾಂತಿಕಾರನೆಂಬ ಬಿರುದು ಸೇರಿಹೋಯಿತು. ಯಾವ ಸೆರೆಮನೆಗೆ ಅವನನ್ನು ವರ್ಗಾಯಿಸಿದರೂ ಸೆರೆಮನೆ ಸೂಪರಿಂಟೆಂಡೆಂಟು "ಓಹೋ ಇವನು ಕ್ರಾಂತಿಕಾರ ಇವನಿಗೆ ಸರಿಯಾದ ಬಂದೋಬಸ್ತು ಏರ್ಪಡಿಸಬೇಕು" ಎಂದುಕೊಳ್ಳುತ್ತಿದ್ದರು. ಆತನ ಕೋಮಲವಾದ ಹೃದಯ, ಪಾಪ ಅವರಿಗೆ ಹೇಗೆ ಗೊತ್ತಾಗಬೇಕು. ಇಂತಹ ಕ್ರಾಂತಿಕಾರನನ್ನು ಕಂಡುಹಿಡಿದುದಕ್ಕೆ ಆ ಸೂಪರಿಂಟೆಂಡೆಂಟ್ ರವರಿಗೆ ಬಡ್ತಿಯೂ ಮೇಲಧಿಕಾರಿಗಳ ಪ್ರಶಸ್ತಿಯೂ ದೊರೆತಿದ್ದಿರಬೇಕು.

---

## ೫೩. ಸೆರೆಮನೆಯ ಆಡಳಿತಗಾರರು ಯಾರು?

---

ವೈದ್ಯ ಶಾಲೆಗಳಿರುವುದು ಹೇಗೆ ರೋಗಿಗಳಿಗಾಗಿಯೋ ಹಾಗೆ ಕಾರಾಗ್ರಹವಿರುವುದು ಖೈದಿಗಳಿಗಾಗಿ. ಸೆರೆಮನೆಯ ಆಡಳಿತ ನಡೆಸುವವರೂ ಖೈದಿಗಳೇ. ಅಲ್ಲಿ ಸೂಪರಿಂಟೆಂಡೆಟರು, ಛೀಪ್ ಜೈಲರ್ ಹೆಡ್ ವಾರ್ಡರ್, ಡೆಪುಟಿ ವಾರ್ಡರ್‌ಗಳು ಇರುವುದು ನೆಪಮಾತ್ರಕ್ಕೆ. ಸೆರೆಮನೆಯಲ್ಲಿ ನೋಡಿದರೂ ಹಾಗೆಯೇ ಕಾಣುತ್ತದೆ. ಇದು ಇವರ ಪಟ್ಟಣ. ಇದರ ಆಡಳಿತ ಹಣೆಬರಹ ಖೈದಿಗಳಿಗೆ ಸೇರಿದ್ದು. ಈ ಅಧಿಕಾರಿಗಳು ಪ್ರೇಕ್ಷಕರಂತೆ ಇರುತ್ತಾರೆ.

ಕೇಂದ್ರ ಕಾರಾಗಾರದಲ್ಲಿ ಯಾವಾಗಲೂ ಸುಮಾರು 200 ಜನ ಜೀವಾವಧಿ ಶಿಕ್ಷೆಯುವರು ಇರುತ್ತಾರೆ. ಆಮರಣಾಂತ ಶಿಕ್ಷೆ, ಕರೆ ನೀರು

ಲೈಫರ್ ಇವೆಲ್ಲಾ ನಾವು ಉಪಯೋಗಿಸುವ ಪದಗಳು. ಸೆರೆಮನೆಯಲ್ಲಿ ಇವರಿಗೆ ಬಂಕೋಲ್ ಎಂದು ಹೆಸರು. ಬೇರೆ ಹೆಸರಿನಲ್ಲಿ ಅವರನ್ನು ಕರೆದರೆ ಅವರಿಗೂ ತಿಳಿಯುವುದಿಲ್ಲ. ಸೆರೆಯ ಇತರ ಖೈದಿಗಳಿಗೂ ತಿಳಿಯುವುದಿಲ್ಲ. ಆಜನ್ಮ ಶಿಕ್ಷೆಯವನಿಗೆ ನೀನು ಯಾರು ಎಂದರೆ 'ಬಂಕೋಲ್' ಎಂದು ಹೇಳುತ್ತಾನೆ. ಈ ಪದ ಹೇಗೆ ಬಂದಿದೆಯೋ ಗೊತ್ತಿಲ್ಲ.

ಕೇಂದ್ರ ಕಾರಾಗಾರ ಬಂಕೋಲ್‌ಗಳಿಗೇ ಸೇರಿದ್ದು. ಅವರು ಆ ಕಾರಾಗಾರವನ್ನು ತಮ್ಮ ಸ್ವಂತ ಮನೆಯೆಂದೇ ಭಾವಿಸಿದ್ದಾರೆ. ಹಾಗೆಯೇ ಹಂಗಾಮಿಯಾಗಿ ಬರುವ ಇತರ ಖೈದಿಗಳನ್ನು ಆಗಂತುಕರೆಂದು ತಿರಸ್ಕರಿಸುತ್ತಾರೆ. ಯಾವುದಾದರೂ ಚರ್ಚೆ ಬಂದರೆ ಅವರು ಇತರ ಖೈದಿಗಳನ್ನು "ನಿಮಗೇನು ಇವತ್ತು ಇದ್ದು ನಾಳೆ ಹೋಗುವವರು" ಎನ್ನುತ್ತಾರೆ. ಸೆರೆಮನೆಯ ಅಧಿಕಾರಿಗಳೂ ಇತರ ಕಳುವಿನ ಖೈದಿಗಳನ್ನು ಲೆಕ್ಕದಲ್ಲಿ ಇಟ್ಟಿಲ್ಲ. "ಇವತ್ತಿದ್ದು ನಾಳೆ ಹೋಗುವ ನಿನಗ್ಯಾಕೊ ಈ ಪಾರುಪತ್ಯ" ಎಂದು ಅವರನ್ನು ಗದರಿಸುತ್ತಾರೆ. ಕಳವಿನ ಖೈದಿಗಳೂ ಸಹ "ನಾಲ್ಕು ದಿನ ಹೇಗೊ ತಳ್ಳಿದರೆ ಆಯಿತು" ಎಂದು ಇರುತ್ತಾರೆ. ಆದರೆ ಬಂಕೋಲ್‌ಗೆ ಸೆರೆಮನೆಯೇ ಮನೆ.

ಹೀಗೆ ಬಂಕೋಲ್ ಸೆರೆಮನೆಯನ್ನು ಮನೆಯಾಗಿ ತಿಳಿದುಕೊಂಡು ಅಲ್ಲಿಯ ವ್ಯವಸ್ಥೆಗಳನ್ನೆಲ್ಲಾ ಸರಿಯಾಗಿ ಏರ್ಪಡಿಸಿಕೊಳ್ಳಲು ಕಾರಣ ಅವನು ಅಲ್ಲಿ ದೀರ್ಘಕಾಲ ಇರಬೇಕಾದುದೇ. ಹಿಂದೆ ಜೀವಾವಧಿ ಶಿಕ್ಷೆ ಎಂದರೆ ಸಾಧಾರಣವಾಗಿ ಹದಿನಾಲ್ಕು ವರುಷ ಸೆರೆವಾಸವಾಗುತ್ತಿದ್ದಿತು. ಈಚೆಗೆ ಹದಿನಾಲ್ಕು ವರುಷ ಹೆಚ್ಚು ಎಂದೂ ಆ ಅವಧಿಯನ್ನು 9 ರಿಂದ 10 ರವೊಳಗೆ ಮಾಡಬೇಕೆಂದೂ, ಹತ್ತು ವರುಷಗಳೊಳಗೆ ಯಾರು ಯಾರನ್ನು ಬಿಡಬೇಕೆಂಬುದನ್ನು ತೀರ್ಮಾನಿಸುವುದಕ್ಕೂ ಒಂದು ಸಮಿತಿಯನ್ನು ಮಾಡಿದರು. ಈ ಸಮಿತಿಯು ಮೂರು ತಿಂಗಳಿಗೋ ಎರಡು ತಿಂಗಳಿಗೋ ಒಂದು ಸಲ ಸಭೆ ಸೇರುತ್ತದೆ. ಆ ದಿನ ಬಂಕೋಲ್‌ಗಳೆಲ್ಲಾ ಸಾಲಾಗಿ, ಮಡಿಮಾಡಿದ ಬಟ್ಟೆಗಳನ್ನು ಧರಿಸಿ ಹಣೆಗೆ ಕುಂಕುಮ ನಾಮ ಇಕ್ಕಿಕೊಂಡು ಗಂಭೀರವಾಗಿ ನಿಂತಿರುತ್ತಾರೆ. ಭಗವಂತನ ವರಕ್ಕೂ ಭಕ್ತ ಅಷ್ಟು ಶ್ರದ್ಧೆಯಿಂದ ಕಾಯುವುದಿಲ್ಲ. ಭಗವಂತ ಸೆರೆಯ ವಾಸದ ಅವಧಿಯನ್ನು ಕಡಿಮೆ ಮಾಡಿದುದನ್ನು ಯಾರು ಕಂಡುದಿಲ್ಲ. ಆದರೆ ಈ

ಸಮಿತಿ ಅವಧಿಯನ್ನು ನಿಜವಾಗಿ ಕಡಿಮೆ ಮಾಡಬಲ್ಲದು. ಆದರೆ ಈ ಸಮಿತಿಯ ಸದಸ್ಯರಾದವರಿಗೆ ಸೆರೆಮನೆಯ ಖೈದಿಯ ಮನೋಭಾವ ಖಂಡಿತ ತಿಳಿದಿಲ್ಲ. ಜವಹಿರ್‌ಲಾಲ್ ನೆಹ್ರು ಹೇಳುವಂತೆ ನ್ಯಾಯಾಧೀಶರ ಜತೆಯಲ್ಲಿ ಈ ಸದಸ್ಯರೂ ಕೆಲವು ಕಾಲ ಸೆರೆಯ ವಾಸವನ್ನು ಅನುಭವಿಸಿದರೆ ಸೆರೆಯಾಳಿನ ಕಾತುರ ಅವರಿಗೆ ಗೊತ್ತಾಗುವುದು. ನಾಳೆ ಬೆಳಿಗ್ಗೆ ಸಮಿತಿಯ ಸಭೆ ಎನ್ನುವಾಗ ಖೈದಿಗಳಿಗೆ ಇವತ್ತೇ ಸಡಗರ. ಅವರಿಗೆ ರಾತ್ರಿ ನಿದ್ರೆಯೇ ಬರುವುದಿಲ್ಲ. ಬೆಳಿಗ್ಗೆ ಭಗವಂತ ಸಮಿತಿಯ ರೂಪದಲ್ಲಿ ಏನು ವರ ಕೊಡುತ್ತಾನೋ ಎಂದು ಕಾತರ. ಚೆನ್ನಾಗಿ ಬೆಳಗಾಗುವುದಕ್ಕೆ ಮುಂಚೆಯೇ ಖೈದಿಗಳು, ಸೂಪರಿಂಟೆಂಡೆಂಟರ ಆಫೀಸ್ ಬಾಗಿಲಿನಲ್ಲಿ ನಿಲ್ಲುತ್ತಾರೆ. ಆದರೆ ಸಮಿತಿಯ ಸದಸ್ಯರಾಗಲು ಕಾತುರರಾಗಿದ್ದ ಮಹನೀಯರು, ಸರಿಯಾಗಿ ಸಭೆಗೆ ಬರುವುದಿಲ್ಲ. ಅಥವ ಆ ದಿನ ಸೆರೆಮನೆ ಇನಿಸ್ಪೆಕ್ಟರ್ ಜನರಲ್‌ರಿಗೆ ಬೇರೆ ಕೆಲಸ, ಅಥವಾ ಮತ್ತಾರೋ ಮುಖ್ಯ ಸದಸ್ಯರಿಗೆ ಬೇರೆ ಕೆಲಸ. ಅಂತೂ ಸಭೆ ನಡೆಯುವುದಿಲ್ಲ. ಸದಸ್ಯರನ್ನು ನಿರೀಕ್ಷಿಸಿ ಬಾಗಿಲಿನ ಕಡೆ ನೋಡಿ ನೋಡಿ ಖೈದಿಗಳು ಸುಸ್ತಾಗುತ್ತಾರೆ.

ಈ ಸಮಿತಿಯನ್ನು ಸರ್ಕಾರದವರು ಮಾಡಬೇಕಾದರೆ, ಹಿಂದೆ ಬಂಕೋಲ್ ಖೈದಿಗಳು ಉಪವಾಸ ಮಾಡಬೇಕಾಯಿತು. ಅದು 1940 ನೆಯ ಇಸವಿ. ಖೈದಿಗಳ ಕೇಳಿಕೆ ನ್ಯಾಯವಾಗಿದ್ದುದರಿಂದ ಆಗ ಸೆರೆಯಲ್ಲಿದ್ದ ಕಾಂಗ್ರೆಸ್ ಮುಖಂಡರು ಅವರಿಗೆ ನ್ಯಾಯವಾದ ಸಲಹೆಗಳನ್ನು ಕೊಟ್ಟರು. ಅವರು ಆ ಸಲಹೆ ಕೊಡದೆ ಹೋಗಿದ್ದರೆ ಖೈದಿಗಳ ಕೇಳಿಕೆಗಳಿಗೆ ಬಲ ಬರುತ್ತಿರಲಿಲ್ಲ. ಸಮಿತಿಯನ್ನೇನೊ ಮಾಡಿದುದಾಯಿತು. ಆದರೆ ಸಮಿತಿಯ ಸಭೆ ಸರಿಯಾಗಿ ಸೇರಲಿಲ್ಲ. ವಾಯಿದೆಗೆ ಸರಿಯಾಗಿ ಒಂದು ಸಭೆ ಸೇರಲಿಲ್ಲ, ಎರಡು ಸಭೆ ಸೇರಲಿಲ್ಲ. ಮೂರು ಸೇರಲಿಲ್ಲ. ಸೂಪರಿಂಟೆಂಡೆಂಟರು ಆಫೀಸನ್ನು ಸಭೆಗೆ ಸಿದ್ಧಪಡಿಸಿ ಮೇಜಿನ ಸುತ್ತಾ ಕುರ್ಚಿಗಳನ್ನು ಹಾಕಿರುತ್ತಿದ್ಧರು. ಆದರೆ ಸದಸ್ಯರು ಬರುತ್ತಿರಲಿಲ್ಲ. ಕೊನೆಗೆ ವಾಯಿದೆ ಪೂರೈಸಿದ್ದ ಒಬ್ಬ ಬಂಕೋಲ್, ಒಂದು ದಿನ ಜೈಲು ಕಾಂಪೌಂಡಿನಲ್ಲಿದ್ದ ಒಂದು ಮರಕ್ಕೆ ನೇಣು ಹಾಕಿಕೊಂಡು ಸತ್ತ. ಮರುದಿವಸ ಸಮಿತಿಯ ಸಭೆ ನಡೆಯಿತು.

ಬಂಕೋಲ್ ಖೈದಿಗಳಲ್ಲಿ ಸರ್ಕಾರದವರಿಗೂ ನಂಬಿಕೆ. ಈ ಖೈದಿಗಳು ಮಾಡಿರುವುದು ಒಂದೇ ತಪ್ಪು. ಅದೂ ಉದ್ರೇಕದ ಫಲ. ಒಬ್ಬ ಗದ್ದೆ ಬದುವಿನಲ್ಲಿ ತೆವರು ಕಡಿಯುತ್ತಿರುವಾಗ, ಅವನ ನೆಂಟನೊಬ್ಬ ಒಂದು ತಡೆಹಾಕಿದ. ಕೈಯ್ಯಲ್ಲಿದ್ದ ಗುದ್ದಲಿಯಿಂದಲೇ ಅವನು ನೆಂಟನಿಗೆ ಬಡಿದ. ನೆಂಟ ಸತ್ತ. ಮತ್ತೊಬ್ಬನಿಗೆ ಹೆಂಡತಿಯ ಮೇಲೆ ಸಿಟ್ಟು ಬಂತು. ಎತ್ತಿ ದೊಣ್ಣೆಯಲ್ಲಿ ಬಿಟ್ಟ. ಏಟು ಆ ವೇಳೆಗೆ ಅಡ್ಡಲಾಗಿ ಬಂದ ಮಗಳಿಗೆ ತಗಲಿತು. ಮಗಳು ಸತ್ತಳು ; ಒಬ್ಬ ಸಾಲ ತೀರಿಸಿದ್ದ ; ಆದರೆ ಪತ್ರ ಮತ್ತೆ ತೆಗೆದುಕೊಂಡಿರಲಿಲ್ಲ. ಹಣ ಕೊಟ್ಟವನು ಎರಡನೆಯ ಸಲ ವಸೂಲಿಗಾಗಿ ದಾವಾ ಹಾಕಿದ. ಇವ ಅವನನ್ನ ಕೊಚ್ಚಿ ಹಾಕಿದ. ಮತ್ತೊಬ್ಬನ ಹೆಂಡತಿಯನ್ನ ಒಬ್ಬ ತುರುಕ ಪುಸಲಾಯಿಸಿ ಹಾರಿಸಿಕೊಂಡು ಹೋದ. ಇಬ್ಬರೂ ಬೇರೆ ಊರಿನಲ್ಲಿ ಇದ್ದರು. ಇವನು ಹೋದ. ತುರುಕನಿಗೂ ಇವನಿಗೂ ವ್ಯಾಜ್ಯವಾಯಿತು. ಇವನು ತುರುಕನನ್ನು ಒಡಿದ. ಅವನು ಸತ್ತ. ಮತ್ತೊಬ್ಬನ ಹೆಂಡತಿ ಚಿನ್ನದ ಆಸೆಯಿಂದ ವ್ಯಭಿಚಾರ ಮಾಡಿದಳು. ಇವನು ಕೋಪದಲ್ಲಿ ಅವಳನ್ನೂ ಅವನನ್ನೂ ಕೊಂದ. ಮತ್ತೊಬ್ಬನ ಹೆಂಡತಿ ಚಿನ್ನ ಚಿನ್ನ ಚಿನ್ನ ಚಿನ್ನ ಎಂದು ಮನೆಯನ್ನು ನರಕಮಾಡಿದ್ದಳು. ಕೋಪದಿಂದ ಇವನು ಅವಳ ಮೂಗು ಕುಯ್ದ. ಅವಳು ಸತ್ತಳು. ಗಂಡ ವ್ಯಭಿಚಾರ ಮಾಡುತ್ತಿದ್ದ. ಹೆಂಡತಿ ಅವನು ಮಲಗಿರುವಾಗ ಅವನ ಕತ್ತಿಗೆ ಹಗ್ಗ ಬಿಗಿದು ಕೊಂದಳು. ಹೀಗೆ ಬಂಕೋಲ್‌ಗಳಿಗೆ ೨೦೦ ಜನಕ್ಕೂ ಇನ್ನೂರು ಕತೆ. ಅವರು ತಮ್ಮ ಜೀವಮಾನದಲ್ಲಿ ಉದ್ರೇಕದಿಂದ ಮಾಡಿರುವುದು ಒಂದೊಂದೇ ತಪ್ಪು. ಒಬ್ಬ ಇಪ್ಪತ್ತು ವರುಷದ ಹುಡುಗ ಬಂಕೋಲ್ ಆಗಿದ್ದ. ಒಬ್ಬ ಕ್ರೂರಿ ಹೆಂಡತಿಯನ್ನು ಹೊಡೆಯುತ್ತಿದ್ದನಂತೆ. ಈ ಹುಡುಗ ವಯೋನುಗುಣವಾದ ಸ್ತ್ರೀ ಗೌರವ ಔದಾರ್ಯದಿಂದ ಗಂಡಸನ್ನು ಸ್ವಲ್ಪ ಆಚೆಗೆ ತಳ್ಳಿದ. ಗಂಡ ಕೆಳಗೆ ಬಿದ್ದ. ತಲೆ ಬಾಗಿಲುವಾಡಕ್ಕೆ ತಗಲಿ ಒಡೆದು ಸತ್ತ. ಹುಡುಗನಿಗೆ ಜೀವಾವಧಿ ಶಿಕ್ಷೆಯಾಯಿತು. ತನ್ನ ಹೆಂಡತಿಯನ್ನು ತಾನು ಹೊಡೆಯಕೂಡದೆಂದು ಯಾವ ಕಾನೂನಿನಲ್ಲಿ ಹೇಳಿದೆ !

ಕೇಂದ್ರ ಕಾರಾಗಾರದಲ್ಲಿರುವವರು ಮೂರು ಬಗೆಯ ಖೈದಿಗಳು. ಮೊದಲನೆಯವರು ಉದ್ದೇಶಪೂರ್ವಕವಾಗಿ ಖೂನಿ ಮಾಡಿದವರೆಂದು

ನ್ಯಾಯಸ್ಥಾನದಲ್ಲಿ ತೀರ್ಮಾನವಾಗಿ ಮರಣದಂಡನೆಗೆ ಒಳಗಾಗಿ ಬರುವವರು; ಎರಡನೆಯವರು ಬಂಕೋಲ್‌ಗಳು. ಮೂರನೆಯವರು ಪಂಚರಂಗಿಗಳು. ಯಾರು ಎರಡು ಮೂರು ನಾಲ್ಕು ಸಲ ಕಳವು ಮಾಡಿ, ಸೆರೆಮನೆಯಿಂದ ಹೊರಗೆಹೋದ 1-2 ತಿಂಗಳಿನಲ್ಲಿಯೇ ಮತ್ತೆ ಹೊರಕ್ಕೆ ಬರುವರೋ ಅವರಿಗೆ ಪಂಚರಂಗಿಗಳೆಂದು ಹೆಸರು. ಈ ಮೂರು ಬಗೆಯವರಲ್ಲದೆ ಕೇಂದ್ರ ಕಾರಾಗಾರದಲ್ಲಿ ಸಾಮಾನ್ಯವಾಗಿ ಜೇಬುಕಳ್ಳರಾದ 8-10-12-14-16 ವರುಷದ ಹುಡುಗರ ಗುಂಪು ಒಂದು ಇರುತ್ತದೆ. ಮರಣದಂಡನೆಗೆ ಗುರಿಯಾದವರು ಬಂದ ಕೂಡಲೇ ಆ ಬಡಪಾಯಿಗಳನ್ನು ಒಬ್ಬೊಬ್ಬರನ್ನು ಒಂದೊಂದು ಕೋಣೆಯಲ್ಲಿ ಇಡುತ್ತಾರೆ. ಮರಣದಂಡನೆಗೆ ಗುರಿಯಾದವರು ಬಂದಾಗ ಸೆರೆಮನೆಯ ವಾತಾವರಣ ಬಹಳ ದುಃಖಪೂರಿತವಾಗುತ್ತದೆ. ಅಲ್ಲಿರುವವರಿಗೆಲ್ಲಾ ಆ ಕೊಲೆಗೆ ತಾವೆಲ್ಲ ಸಹಾಯಕರೇಯ ಎಂಬ ಭಾವ ಬರುತ್ತದೆ. ಸೆರೆಮನೆಯಲ್ಲಿ ಎಲ್ಲದಕ್ಕಿಂತ ಹೆಚ್ಚು ಕ್ರೂರವಾಗಿ ತೋರುವುದು ಮರಣದಂಡನೆ. ಇದು ಖಂಡಿತವಾಗಿ "ಖೂನಿಗೆ ಪ್ರತಿ ಖೂನಿ" ಎಂದು ಹೇಳಬಹುದು. ಅನೇಕ ದೇಶಗಳಲ್ಲಿ ಮರಣದಂಡನೆ ತೆಗೆದುಹಾಕಿದ್ದಾರೆ ಸೂರ್ಯ ಮುಳುಗದ ಬ್ರಿಟಿಷ್ ಸಾಮ್ರಾಜ್ಯದಲ್ಲಿ ಈ ಕ್ರೌರ್ಯ ಇನ್ನೂ ಜಾರಿಯಲ್ಲಿದೆ ಇದುವರೆಗೆ ಎಷ್ಟೋ ಮರಣದಂಡನೆಗಳಾದುವು. ಆದರೆ ಮನುಷ್ಯನ ಸ್ವಭಾವ ಶಿಕ್ಷೆಯಿಂದ ಬದಲಾಯಿಸುವುದಿಲ್ಲ. ದೇಶದಲ್ಲಿ ಖೂನಿಗಳು ಕಡಿಮೆಯಾಗಿಲ್ಲ. ಕಳವು ಖೂನಿಗಳು, ಒಂದು ಬಗೆಯ ರೋಗ. ರೋಗಿಷ್ಟರಿಗೆ ಚಿಕಿತ್ಸೆ ಮಾಡುವಂತೆ ಆ ತಪ್ಪಿತಸ್ಥರಿಗೆ ದಯೆಯಿಂದ ಚಿಕಿತ್ಸೆಮಾಡಬೇಕು. ನಮ್ಮ ಬಂದಿಖಾನೆಗಳು ಚಿಕಿತ್ಸಾ ಗೃಹಗಳಂತೂ ಖಂಡಿತ ಅಲ್ಲ.

ಮರಣದಂಡನೆಗೆ ಗುರಿಮಾಡಲ್ಪಟ್ಟವನು ಮರಣವನ್ನು ವಂಚಿಸುವುದು ಅಪರೂಪ. ಮನುಷ್ಯನನ್ನು ಕೊಲ್ಲುವುದು ಮನುಷ್ಯನಿಗೆ ಸ್ವಾಭಾವಿಕವಾಗಿ ಬಂದ ಸೇಡಿನ ಮನೋಧರ್ಮವೆಂದು ಕಾಣುತ್ತದೆ. ಪ್ರಾಣವನ್ನು ಉಳಿಸುವ ಶಕ್ತಿ ಇರುವವರು "ಯಾವ ಖೂನಿ ಮಾಡುವವನು ಬೇಕಾದರೂ ಪ್ರಾಣ ತೆಗೆಯಬಹುದು. ಆದರೆ ಅದನ್ನು ಉಳಿಸುವುದು ದೈವದತ್ತವಾದ ವರ" ಎಂಬುದನ್ನು ಮರೆಯುತ್ತಾರೆ. ಕ್ಷಮಾಶಕ್ತಿ ಉಪಯೋಗಿಸಲು ಅರ್ಹತೆಯಿಲ್ಲದ ಹೇಡಿಯ ಕೈಯಿನ ಚಂದ್ರಾಯುಧದಂತೆ, ಇಂತಹ ಸೊಕ್ಕಿದ ಕೋಣಗಳ ಕೈನಲ್ಲಿ ವ್ಯರ್ಥವಾಗುವುದು.

ಕೇಂದ್ರ ಕಾರಾಗಾರಕ್ಕೆ ಒಂದು ದಿನ ಇದ್ದಕ್ಕಿದ್ದಂತೆ ೯ ಖೈದಿಗಳನ್ನು ಮಿಲಿಟರಿ ಇಲಾಖೆಯವರು ತಂದರು. ಅವರೆಲ್ಲಾ ಭಾರತೀಯರು ಎಲ್ಲರೂ ಯುವಕರು. ಮುವ್ವತ್ತು ವಯಸ್ಸಿಗೆ ಮೀರಿದವರು ಅವರಲ್ಲಿ ಯಾರೂ ಇರಲಿಲ್ಲ. ಒಬ್ಬಿಬ್ಬರಿಗೆ 20-22 ವಯಸ್ಸಾಗಿದ್ದಿತು. ಉಳಿದವರು 24-26-27 ಈ ರೀತಿಯ ವಯಸ್ಸಿನವರಾಗಿದ್ದರು. ಧೀರರಾಗಿ ಎದೆಯುಬ್ಬಿದವರಾಗಿ ಮುಖದಲ್ಲಿ ತೇಜಸ್ಸನ್ನು ಉಕ್ಕಿಸುತ್ತಾ ಸೆರೆಮನೆಗೆ ಬಂದ ಆ ಭಾರತ ವೀರರನ್ನು ನೋಡಿ, ಸೆರೆಯಲ್ಲಿದ್ದವರಿಗೆಲ್ಲಾ ಭಾರತ ದೇಶ ನಿಜವಾಗಿಯೂ ವೀರರ ನಾಡು ಎಂಬ ಭಾವ ದೃಢವಾಯಿತು.

ಅವರನ್ನು ಸೆರೆಮನೆಯೊಳಕ್ಕೆ ಕರೆದುಕೊಂಡು ಬಂದವರು ಯಮದೂತರಂತಹ ಧಾಂಡಿಗರಾದ ಬಿಳಿಯರು. ಈ ಒಂಭತ್ತು ಜನ ನಿರಾಯುಧರಾದ ಯುವಕರ ಕಾವಲಿಗೆ ಹಿಂದೆ ಮುಂದೆ ನಾಲ್ಕು ಲಾರಿ ತುಂಬ ಬಿಳಿಯ ಮಿಲಿಟರಿ; ನಾಲ್ಕು ಮೋಟಾರ್ ಸೈಕಲ್ ಸವಾರರು. ಎಲ್ಲರ ಬಳಿಯೂ ಪಿಸ್ತೂಲು. ಒಂದು ನಿಮಿಷದೊಳಗಾಗಿ ಆ ಒಂಭತ್ತು ಜನರೂ ಎಲ್ಲಿಯೋ ಬಂಗಾಳಾದಲ್ಲಿಯೋ ಬೊಂಬಾಯಿನಲ್ಲಿಯೋ ಬರ್ಮಾ ಗಡಿಯಲ್ಲಿಯೋ ಸೈನ್ಯದ ಶಿಸ್ತಿಗೆ ವಿರೋಧವಾಗಿ ನಡೆದುದರಿಂದ ಅವರಿಗೆ ಮರಣದಂಡನೆ ವಿಧಿಸಲ್ಪಟ್ಟಿದೆಯೆಂದೂ, ಅದಕ್ಕಾಗಿ ಇಲ್ಲಿಗೆ ಅವರನ್ನು ನೇತುಹಾಕಲು ಕರೆದುಕೊಂಡು ಬಂದಿರುವರೆಂದೂ, ಸಮಾಚಾರ ಹೊರಟಿತು. ಸಮಾಚಾರ ನಿಜವಿರಬೇಕು ಎಂಬಂತೆ ಆ ಒಂಭತ್ತು ಜನರನ್ನೂ ಒಂಭತ್ತು ಮರಣದ ಕೋಣೆಗಳಲ್ಲಿ ಇರಿಸಿ ಅವರ ಮೇಲೆ ಸರಿಯಾದ ಕಾವಲನ್ನು ನಿಯಮಿಸಿದರು. ಸೆರೆಮನೆಯ ದರ್ಜಿ ಅವರಿಗಾಗಿ 9 ಕರಿಯ ಕುಲಾವಿಯನ್ನೂ ಹೊಲಿಯುತ್ತಿರುವನೆಂದು ಸುದ್ದಿ ಬಂತು.

ಈ ಸಮಾಚಾರ ತಿಳಿದಕೂಡಲೆ ಕಾರಾಗೃಹದ ರಾಜಕೀಯ ಮತ್ತು ಕ್ರಿಮಿನಲ್ ಸೆರೆಯಾಳುಗಳೆಲ್ಲಾ ಪೆಚ್ಚಾದರು. ಆ ಒಂಭತ್ತು ಜನರ ತಪ್ಪು ಏನು ಎಂಬುದು ಯಾರಿಗೂ ತಿಳಿದಿರಲಿಲ್ಲ. ಅಷ್ಟೊಂದು ದೊಡ್ಡ ಸಂಖ್ಯೆಯಲ್ಲಿ ಅದರಲ್ಲಿಯೂ ಸೈನ್ಯದ ಶಿಸ್ತನ್ನು ವಿರೋಧಿಸಿದ ತಪ್ಪಿಗಾಗಿ ಹಾಗೆ ಹಿಂದೆ ಯಾವಾಗಲೂ ಈ ಕಾರಾಗ್ರಹದಲ್ಲಿ ಜನರನ್ನು ಕೊಂದಿರಲಿಲ್ಲ. ಐದೈದು ನಿಮಿಷಕ್ಕೆ ಒಂದೊಂದು ಸಲ ಬಿಳಿಯ ಮಿಲಿಟರಿ ಅಧಿಕಾರಿಗಳು ಸೆರೆಮನೆಯೊಳಕ್ಕೆ ಬರುತ್ತಿದ್ದರು. ಹೆಣಗಳನ್ನು ಸಾಗಿಸುವ

ಪೆಟ್ಟಿಗೆ, ಅವುಗಳ ಮೇಲೆ ಮುಚ್ಚಲು ಒಟ್ಟೆ ಎಲ್ಲಾ ಸಿದ್ಧವಾಗಿ ಬಂದು ಬಿಟ್ಟಿತು. ಕೇಂದ್ರ ಕಾರಾಗಾರದಲ್ಲಿ ಒಂದೊಂದು ಸಲಕ್ಕೆ ಇಬ್ಬರನ್ನು ನೇಣುಹಾಕಬಹುದು. ನಾಲ್ಕು ದಿನ ಇಬ್ಬಿಬ್ಬರು ಕೊನೆಯ ದಿನ ಒಬ್ಬರು ಹೀಗೆ ೯ ಜನರನ್ನೂ ಪೂರೈಸುತ್ತಾರೆಂದೂ ಈ ನರ ಮೇಧಕ್ಕೆ ಈ ಸ್ಥಳ ವನ್ನು ಆರಿಸಿರುವರೆಂದೂ ಸೆರೆಮನೆಯುಳ್ಳೆಲ್ಲಾ ಗದ್ದಲವಾಯಿತು.

ಕೇಂದ್ರ ಕಾರಾಗಾರದಲ್ಲಿ, ಮರಣದಂಡನೆಗೆ ಗುರಿಯಾಗಿ ಮರಣ ವನ್ನು ಎದುರು ನೋಡುತ್ತಿರುವವನಿಗೂ ಕಾವಲುಗಾರರಾಗಿ ನಿಲ್ಲುವವರು ನಮ್ಮ ವಾರ್ಡರುಗಳೇ ಆದರೆ ಈಗ ಬಂದಿದ್ದ ಸೆರೆಯಾಳುಗಳನ್ನು ಕಾಯುತ್ತಾ ಬಿಳಿಯವರೇ ಅವರ ಸುತ್ತಾ ಕಾವಲು ನಿಂತರು. ಮರಣ ದಂಡನೆಗೆ ಗುರಿಯಾದವರಿಗೆ ಸಾಮಾನ್ಯವಾಗಿ ಕೊಡುತ್ತಿದ್ದ ಯಾವ ರಿಯಾಯಿತಿ ಸೌಕರ್ಯಗಳೂ ಅವರಿಗೆ ದೊರಕಲಿಲ್ಲ. ಅವರ ಜತೆಯಲ್ಲಿ ಯಾರಿಗೂ ಮಾತನಾಡಲು ಅವಕಾಶವಿರಲಿಲ್ಲ. ಯಾರಿಗೂ ಕಾಗದ ಬರೆ ಯಲು ಅವಕಾಶವಿರಲಿಲ್ಲ. ಆದರೂ ಮರುದಿವಸ ಅವರಲ್ಲಿ ಇಬ್ಬರು ಸೂರ್ಯೋದಯದೊಳಗೆ ಇಹಲೋಕವನ್ನು ಬಿಡುವವರಾಗಿದ್ದರು. ಅವರು ಎಲ್ಲಿ ಇತರರೊಂದಿಗೆ ಮಾತನಾಡಿಬಿಡುತ್ತಾರೆಯೋ, ಅನ್ಯಾಯ ಯಾವುದು ಪ್ರಕಟವಾಗಿಬಿಡುತ್ತದೆಯೋ ಎಂಬುದಾಗಿ ಬಿಳಿಯ ಅಧಿಕಾರಿಗಳಿಗೆ ಭಯ ವಿದ್ದಂತೆ ಕಾಣುತ್ತಿದ್ದಿತು.

ಈ ೯ ಜನರನ್ನು ನಿಮ್ಮ ಸೆರೆಯಲ್ಲಿ ನೇಣುಹಾಕಲು ಸಹಾಯಕೊಡಿ ಎಂಬುದಾಗಿ ಕಾರಾಗ್ರಹದ ಸೂಪರಿಂಟೆಂಡೆಂಟ್‌ರವರಿಗೆ ಅಪ್ಪಣೆ ಬಂದಿ ದ್ದಿತು. ಸೂಪರಿಂಟೆಂಡೆಂಟ್‌ರವರು ಸ್ವಲ್ಪ ಧೈರ್ಯಮಾಡಿ "ಇದು ಕಾನೂ ನಿಗೆ ವಿರೋಧ. ಈ ಕಾರಾಗ್ರಹದಲ್ಲಿ ನೇತುಹಾಕಬೇಕಾದರೆ ಇಲ್ಲಿಯ ನ್ಯಾಯಸ್ಥಾನದಲ್ಲಿ ಮರಣದಂಡನೆ ದೊರೆಯಬೇಕು. ಅನಂತರ ಅದಕ್ಕೆ ಆಗಬೇಕಾದ ಕೆಲಸಗಳು ಇನ್ನೂ ಅನೇಕ ಇವೆ. ನಾಲ್ಕು ಲಾರಿ ಮಿಲಿಟರಿ ಯವರು ಬಂದು 9 ಜನರನ್ನು ಇಲ್ಲಿ ನೇಣುಹಾಕಲು ಕಾನೂನು ಇಲ್ಲ. ಮಿಲಿಟರಿ ಕೋರ್ಟಿನ ತೀರ್ಮಾನವನ್ನು ಇಲ್ಲಿ ಜಾರಿಗೆ ಕೊಡಲು ಸಾಧ್ಯವಿಲ್ಲ" ಎಂದು ಮೇಲಕ್ಕೆ ಬರೆದರು. ಆಗ ಮಧ್ಯಾಹ್ನ 3 ಗಂಟೆ. ಮರುದಿವಸ ಬೆಳಗಿನ ಜಾವ ಇಬ್ಬರ ನರಮೇಧ ನಡಿಯಬೇಕಾಗಿದ್ದಿತು. ಮಿಲಿಟರಿ ಅಧಿಕಾರಿಗಳು ಎಲ್ಲಾ ಸಿದ್ಧತೆಗಳನ್ನೂ ಮಾಡಿಕೊಳ್ಳುತ್ತಿದ್ದರು. ಕೇಂದ್ರ

ಕಾರಾಗಾರದ ನೇಣು ಹಾಕುವವನನ್ನು ಕರೆಸಿದರು. ಅವನು ಎಲ್ಲರಿಗೂ ಕಾಣುವಂತೆ ಆಫೀಸ್ ಬಾಗಿಲಿನಲ್ಲಿ ಕುಳಿತುಕೊಂಡು ನೇಣುಹಾಕುವ ಹಗ್ಗಕ್ಕೆ ಕೊಬ್ಬನ್ನು ತೀಡುತ್ತಿದ್ದನು.

ಬಂದಿದ್ದ ೯ ಧೀರರಿಗೂ ತಮ್ಮನ್ನು ಕೊಲ್ಲಲು ಇಲ್ಲಿಗೆ ತಂದಿದಾರೆ ಎಂಬುದು ಚೆನ್ನಾಗಿ ಗೊತ್ತಾಗಿದ್ದಿತು. ಆದರೆ ಅವರು ಸ್ವಲ್ಪವಾಗಲಿ ಎದೆಗೆಡಲಿಲ್ಲ. ಅವರ ಮುಖದಲ್ಲಿ ಒಂದು ಬಗೆಯ ಸ್ಥಿತ ಪ್ರಜ್ಞತ್ವ ತೋರುತ್ತಿದ್ದಿತು. ಅವರು ನಗನಗುತ್ತ ರಾಷ್ಟ್ರೀಯ ಗೀತೆಗಳನ್ನು ಹಾಡುತ್ತಿದ್ದರು. ಅವರ ಮೇಲೆ ಹೊತ್ತಿರುವುದು ಸೈನ್ಯದ ಶಿಸ್ತನ್ನು ವಿರೋಧಿಸಿದ ತಪ್ಪಲ್ಲ. ಏನೋ ದೇಶಪ್ರೇಮದ ತಪ್ಪು ಎಂದು ಎಲ್ಲರಿಗೂ ಚೆನ್ನಾಗಿ ವ್ಯಕ್ತವಾಗುತ್ತಿದ್ದಿತು. ಆದರೆ ಬಿಳಿಯವರಿಗೆ ಅಷ್ಟು ಕೋಪಬರುವಂತೆ— 60 ಜನ 9 ಜನರನ್ನು ಇಂತಹ ದೂರದೇಶದಲ್ಲಿ ಕೊಲ್ಲಲು ಬರುವಂತಹ— ತಪ್ಪು ಏನು ಎಂಬುದು ಯಾರಿಗೂ ಸರಿಯಾಗಿ ವ್ಯಕ್ತವಾಗಲಿಲ್ಲ. ಆ ಮಧ್ಯಾಹ್ನ ಅವರು ಭಗವದ್ವಿಷಯವನ್ನು ಬೋಧಿಸಲು ಒಬ್ಬ ಗುರುವನ್ನು ಬಯಸಿದರು. ಮಿಲಿಟರಿ ಅಧಿಕಾರಿಗಳಿಗೆ, ಹೊರಗಿನವರಾರಿಗೂ ಸುದ್ದಿ ತಿಳಿಯುವುದು ಬೇಕಾಗಿರಲಿಲ್ಲವಾಗಿ ಸೆರೆಮನೆಯೊಳಗಿದ್ದ ಡಿಟೆನ್ಯುಗಳ ಪೈಕಿಯೇ ಒಬ್ಬರನ್ನು ಅವರಲ್ಲಿಗೆ ಕಳುಹಿಸಿದರು.

ಧೀರರಾಗಿ ಮರಣವನ್ನೆದುರಿಸಿ ಹೋಗುತ್ತಿರುವ ಆ ಪ್ರತಾಪಿಗಳಿಗೆ ಈ ಬಡ ಡಿಟೆನ್ಯು ಬೋಧಿಸುವುದು ಏನಿದೆ? "ಹೇಡಿಗಳೇ ಹೆಚ್ಚುತ್ತಿರುವ ಈ ದೇಶದ ಹುಳಗಳಿಗೆ, 40 ಕೋಟಿಯಾದ ಜಳ್ಳುಗಳಿಗೆ ನಿಮ್ಮ ತ್ಯಾಗದಿಂದ ಧೈರ್ಯಬರಲಿ" ಎಂದರು. ಮರಣೋನ್ಮುಖರಾದವರು ನಗುನಗುತ್ತಾ ಅಡ್ಡಬಿದ್ದರು. ಅವರಿಗೆ ಆಗಲೇ ಈ ಲೋಕದ ಆಶೆ ತಪ್ಪಿ, ಮನಸ್ಸು ಯಾವಾಗಲೋ ಭೂಲೋಕವನ್ನು ಬಿಟ್ಟು ಮೇಲಕ್ಕೆ ಹೋಗಿದ್ದಿತು. ದೇಹ ಮಾತ್ರ ಬಿಡುಗಡೆಗಾಗಿ ಕಾಯುತ್ತಿದ್ದಿತು. ಎರಡು ಕೆಂಪು ಗುಲಾಬಿ ಹೂವಿನ ದಂಡೆಗಳನ್ನು ಅವರು ಕಟ್ಟುತ್ತಿದ್ದರು. ಯುವಕರಾದ ಇಬ್ಬರ ಬೆನ್ನನ್ನು ತಟ್ಟಿ "ನಾಳೆ ಬೆಳಿಗ್ಗೆ ಇವರಿಬ್ಬರೂ ಹೋಗಿ ಬರುತ್ತಾರೆ. ಆ ವೇಳೆಗೆ ಹೂವು ಸಿಕ್ಕುತ್ತದೋ ಇಲ್ಲವೋ ಎಂದು ಈಗ ನಾವೇ ಎರಡು ಹಾರ ಮಾಡುತ್ತಿದ್ದೇವೆ" ಎಂದರು. ಬೋಧಿಸಲು ಹೋಗಿದ್ದ ಡಿಟೆನ್ಯು "ನಿಮಗೆ ಯಾಕೆ ಈ ಶಿಕ್ಷೆ" ಎಂದನು. ಅವರಲ್ಲಿ ಮುಖಂಡನಾದವನು

" ದೇಶ ಸ್ವತಂತ್ರವಾಗಬೇಕಾದರೆ ಇನ್ನೂ ಎಷ್ಟು ಜನ ಹೀಗೆ ಸಾಯ ಬೇಕೋ. ಇದುವರೆಗೆ ಎಷ್ಟೋ ಆಯಿತು. ಭಾರತದ ನಾನಾ ಕಡೆ ಗಳಲ್ಲಿ ಈ ಗಳಿಗೆಯಲ್ಲಿ ಇನ್ನೂ ಎಷ್ಟು ಜನ ಸಾಯುತ್ತಿದ್ದಾರೆಯೋ" ಎಂದನು. ಡಿಟೆನ್ಯುವಿಗೆ ಕಣ್ಣಿನಲ್ಲಿ ನೀರು ಬಂತು. ನಾಚಿಕೆಯಾಯಿತು. " ಸೆರೆಮನೆಗೆ ಬಂದದ್ದೇ ದೊಡ್ಡದು ಎಂದುಕೊಂಡಿದ್ದೆ. ಆದರೆ ಈ ತ್ಯಾಗ ವನ್ನು ನೋಡಿದರೆ ನಾಚಿಕೆಯಿಂದ ತಲೆ ತಗ್ಗಿಸಬೇಕಾಗಿದೆ" ಎಂದು ಕೊಂಡು ಈಚೆಗೆ ಬಂದನು.

ರಾತ್ರಿಯಾಯಿತು. ಸೂಪರಿಂಟೆಂಡೆಂಟ್‌ರು ಒಡ್ಡಿದ ಎಡರು ಮೇಲಧಿಕಾರಿಗಳಿಗೆ ಒಪ್ಪಿಗೆಯಾಯಿತೋ ಇಲ್ಲವೋ ತಿಳಿಯಲಿಲ್ಲ. ರಾತ್ರಿ ಹನ್ನೆರಡು ಗಂಟೆಯುವರೆಗೆ ಸೂಪರಂಟೆಂಡೆಂಟರೂ ನಿರೀಕ್ಷಿಸುತ್ತಿದ್ದು ಬೆಳ ಗಿನ ಜಾವ ಬರುವುದಾಗಿ ಹೇಳಿ ಮನೆಗೆ ಹೋದರು. ಆ ರಾತ್ರಿ ಡಿಟೆನ್ಯು ಗಳಿಗಾಗಲಿ ಕ್ರಿಮಿನಲ್ ಸೆರೆಯಾಳುಗಳಿಗಾಗಲೀ ನಿದ್ರೆ ಬರಲಿಲ್ಲ. ಇದು ಅನ್ಯಾಯ. ಇದಕ್ಕೆ ಕಾನೂನು ಇಲ್ಲ. ಇದು ಒಂದು ಬಗೆಯ ಖೂನಿಯೇ ಸರಿ ಎಂದರು ಡಿಟೆನ್ಯುಗಳು; ಹೊರಗಿನವರನ್ನೆಲ್ಲಾ ಇಲ್ಲಿ ತಂದು ನೇತು ಹಾಕುವುದಕ್ಕೆ ಪ್ರಾರಂಭಿಸಿದರೆ ಇನ್ನು ಮುಂದೆ ಈ ಯುದ್ಧ ಕಾಲದಲ್ಲಿ ಫಾಸಿಗೆ ಬಿಡುವೇ ಇಲ್ಲ ಎಂದರು. ಕ್ರಿಮಿನಲ್‌ಗಳು; ಹಾಗೂ ಹೀಗೂ ಬೆಳ ಗಿನ ಝಾವ ನಾಲ್ಕು ಗಂಟೆಯಾಯಿತು.

ಇದ್ದಕ್ಕಿದ್ದಂತೆ ಏನೋ ಸದ್ದಾಯಿತು. ಎಲ್ಲರ ಎದೆಯೂ ಡವಡವನೆ ಹೊಡೆದುಕೊಳ್ಳಲು ಪ್ರಾರಂಭವಾಯಿತು. ಡಿಟೆನ್ಯುಗಳೆಲ್ಲಾ ಕಬ್ಬಿಣದ ಸಲಾಕಿಯ ಆವರಣದಲ್ಲಿ ತಲೆಯಿಟ್ಟು ನೋಡುತ್ತಿದ್ದರು. ಎದುರು ಕಡೆ ಕ್ರಿಮಿನಲ್ ಖೈದಿಗಳೆಲ್ಲಾ ಮಿಟಮಿಟನೆ ನೋಡುತ್ತಿದ್ದರು. ನಿಧಾನವಾಗಿ ತುಂತುರು ಮಳೆ ಬೀಳುತ್ತಿದ್ದಿತು. ಮಳೆಯ ಸಂದಿನಲ್ಲಿ ದೀಪಗಳು ಮಂಜಾಗಿ ಕೊಳ್ಳಿ ದೆವ್ವಗಳಂತೆ ಕಾಣುತ್ತಿದ್ದವು. ಫಾಸಿಯ ಜಾಗ, ಕೈಕಾಲ್ ಪಂಜಗಳನ್ನು ಮುದುರಿಕೊಂಡು ಹುಲಿಯಂತೆ ನಿಶ್ಶಬ್ದವಾಗಿ ತನ್ನ ಬೇಟೆಯನ್ನು ಕಾಯುತ್ತಿದ್ದಿತು. ಮಿಲಿಟರಿ ಅಧಿಕಾರಿಗಳು ಒಂದು ಕೋಣೆಯನ್ನು ಪ್ರವೇಶಿಸಿದರು. ಕಬ್ಬಿಣದ ಬಾಗಿಲು ಗಿರ್ರೆಂದು ಸದ್ದಾ ಯಿತು. ಖೈದಿಗೆ ಬಟ್ಟೆ ತೊಡಿಸುತ್ತಿದ್ದಾರೆ ಕೈಕೋಳ ಹಾಕುತ್ತಿದ್ದಾರೆ ಎಂದು ನಡುಗುವ ಧ್ವನಿಯಲ್ಲಿ ಡಿಟೆನ್ಯುಗಳು ಮಾತನಾಡಿಕೊಳ್ಳುತ್ತಿದ್ದರು. ಒಂದು

ಗಳಿಗೆಯನಂತರ ಎರಡನೆಯ ಕೋಣೆಯ ಕಬ್ಬಿಣದ ಬಾಗಿಲು ಗಿರ್ ಎಂದು ಸದ್ದಾಯಿತು. ಕೇಂದ್ರ ಕಾರಾಗಾರದಲ್ಲಿ ಒಂದು ಸಲಕ್ಕೆ ಇಬ್ಬರಿಗೆ ಮಾತ್ರ ಫಾಸಿ ಹಾಕಲು ಅವಕಾಶವಿರುವುದರಿಂದ ಇನ್ನೇನು ಇಬ್ಬರು ಹೊರಕ್ಕೆ ಬರುತ್ತಾರೆ ಎಂದು ನಿರೀಕ್ಷಿಸುತ್ತಿದ್ದೆವು. ಆದರೆ ಮೂರನೆಯ ಕಬ್ಬಿಣದ ಬಾಗಿಲೂ ಕಿರ್ ಎಂದು ಸದ್ದಾಯಿತು ಕ್ರಿಮಿನಲ್ ಖೈದಿಗಳು "ಭಾರತಮಾತೆ ಗೆಲ್ಗೆ" ಎಂದು ಕೂಗಿದರು. ಆಗ ಡಿಟೆನ್ಯುಗಳಿಗೆ ಮೂರನೆಯ ಬಾಗಿಲು ತೆಗೆದುದರಿಂದ ಈಗ ಫಾಸಿ ಇಲ್ಲ ಎಂಬುದು ಅರ್ಥವಾಯಿತು. ಕ್ರಿಮಿನಲ್ ಖೈದಿಗಳಿಂದ ಸೂಚನೆ ಬರದೇ ಇದ್ದಿದ್ದರೆ ಡಿಟೆನ್ಯುಗಳಿಗೆ ಅಷ್ಟು ಬೇಗ ಇದು ಗೊತ್ತಾಗುತ್ತಿರಲಿಲ್ಲ.

ಕ್ರಮವಾಗಿ ೯ ಬಾಗಿಲನ್ನೂ ತೆರೆದು ೯ ಜನರಿಗೂ ಅವರವರ ಉಡುಪನ್ನು ಕೊಟ್ಟು ಮಿಲಿಟರಿಯವರು ಕಾವಲಿನೊಡನೆ ಅವರನ್ನು ಹೊರಕ್ಕೆ ಕರೆದುಕೊಂಡು ಹೋದರು. ಸೆರೆಮನೆಯ ಬಾಗಿಲಿನಲ್ಲಿ ನಾಲ್ಕು ಲಾರಿ ತುಂಬ ಬಿಳಿಯ ಮಿಲಿಟರಿ ಭರ್ತಿಯಾಗಿದ್ದಿತು. ಒಂಭತ್ತು ಜನರನ್ನೂ ಲಾರಿಯಲ್ಲಿ ಕುಳ್ಳಿರಿಸಿ ಅವರ ಕಾಲುಗಳನ್ನೆಲ್ಲಾ ಲಾರಿಯ ಆಸನಗಳ ಕಾಲುಗಳಿಗೆ ನೂಲು ಹಗ್ಗದಲ್ಲಿ ಕಟ್ಟಿದರು. ನಿರಾಯುಧರಾದ ಆ ಅಲ್ಪ ಸಂಖ್ಯೆಯವರನ್ನು ಅಷ್ಟು ಹಿಂಸಿಸುತ್ತಿದ್ದ ಥಾಂಡಿಗರಾದ ಅಷ್ಟೊಂದು ದೊಡ್ಡ ಸಂಖ್ಯೆಯ ಬಿಳಿಯವರು, ಶುದ್ಧ ಹೇಡಿಗಳಾಗಿಯೇ ತೋರಿದರು. ಅವರಲ್ಲಿ ಒಬ್ಬನೂ ಮರಣವನ್ನು ಈ ಒಂಭತ್ತು ಜನಗಳಷ್ಟು ಧೈರ್ಯವಾಗಿ ಎದುರಿಸುವವನಲ್ಲವೆಂಬುದು, ಈ ಧೀರರನ್ನು ಕಂಡರೆ ಅವರಿಗಿರುವ ಭಯದಿಂದಲೇ ಗೊತ್ತಾಗುತ್ತಿದ್ದಿತು. ಅವರನ್ನು ವೇಲೂರಿಗೆ ಕರೆದುಕೊಂಡು ಹೋದರೆಂದೂ ಅಲ್ಲಿ ಅವರ ಕೊಲೆ ನಡೆಯುವುದೆಂದೂ ಕೆಲವರು ಹೇಳಿದರು.

ಇವರು ಯಾರು? ಇವರ ಗತಿ ಏನಾಗಿರಬಹುದು? ಇದನ್ನು ತಿಳಿಯಲು ಸಾಧ್ಯವಾಗಲಿಲ್ಲ. ಮಿಲಿಟರಿಯವರು ಅವರನ್ನು ಎಲ್ಲೋ ಕೊಂದಿರಬೇಕು. ಗುಲಾಮಗಿರಿಗೆ ಒಳಗಾಗಿರುವ ದೇಶಕ್ಕೆ ಯಾವ ಶುಭವೂ ಸಂಭವಿಸುವುದಿಲ್ಲ. ಮರಣದಂಡನೆಗೆ ಗುರಿಯಾದವರು ನ್ಯಾಯಸ್ಥಾನದಿಂದ ಸೆರೆಮನೆಗೆ ಹಿಂದಿರುವಾಗ ಸೆರೆಮನೆಯ ಬಂಕೋಲ್ ಖೈದಿಗಳು ಅವರಿಗೆ ಚೆನ್ನಾಗಿ ಉಪಚಾರಮಾಡುತ್ತಾರೆ. ಧೈರ್ಯಕೊಡುತ್ತಾರೆ. ಈ ೯ ಜನಕ್ಕೆ ಆ ಸೌಕರ್ಯವೂ ದೊರೆಯಲಿಲ್ಲ. ಕಟುಕನ ಕೈಯ್ಯಲ್ಲಿ ಕುರಿ

ಗಳು ಸಾಯುಯುವಂತೆ ಅವರು ಮಡಿದಿರಬೇಕು. ಆದರೆ ಅವರ ಧೈರ್ಯ ಕೆಚ್ಚು ಹುಮ್ಮಸ್ಸು, ನೆನಸಿಕೊಂಡರೆ ಅದರ ಎದುರಿಗೆ ಅವರನ್ನು ಪೀಡಿಸುತ್ತಿದ್ದ ಬಿಳಿಯುವರು ಅಲ್ಪರಾಗಿ ಹೇಡಿಗಳಾಗಿ ತೋರಿದರು.

ಬಂಕೋಲ್ ದಂಡನೆಗೆ ಗುರಿಯಾದವರು ಸೆರೆಮನೆಗೆ, ನ್ಯಾಯಸ್ಥಾನದಿಂದ ಹಿಂದಿರುಗುವ ವೇಳೆಗೆ ಸೆರೆಮನೆಯ ಇತರ ಬಂಕೋಲುಗಳು ಅವನನ್ನು ತಮ್ಮ ಕೂಟಕ್ಕೆ ಸೇರಿಸಿ ಸ್ವಾಗತಿಸುತ್ತಾರೆ. ಅವನಿಗಾಗಿ ಅನ್ನ ಮೊಸರು ಯಾವುದಾದರೂ ತಿಂಡಿಮಾಡಿ ಇಟ್ಟಿರುತ್ತಾರೆ "ಹೆದರಬೇಡ. ಇಲ್ಲಿ ನಾವು ಇನ್ನೂರು ಜನ ಇದ್ದೇವೆ" ಎಂದು ಸಮಾಧಾನಪಡಿಸುತ್ತಾರೆ. ಬಂದವನನ್ನು ಬಹಳ ದಯೆ ಸಹಾನುಭೂತಿಯಿಂದ ಉಪಚರಿಸುತ್ತಾರೆ. ಇಂತಹ ಸಹಾನುಭೂತಿ ಸಿಕ್ಕದಿದ್ದರೆ ಬಂಕೋಲ್ ಆಗಿ ಬಂದವನಿಗೆ, ಬಂದ ದಿನವೇ ಹುಚ್ಚು ಹತ್ತುವುದು. ನಿಧಾನವಾಗಿ ಅವನ ಮನೋಭಾವ ಆಜನ್ಮ ಕಾರಾಗ್ರಹಕ್ಕೆ ಹೊಂದಿಕೊಳ್ಳುವುದು. ಬಂಕೋಲ್‌ಗಳು ಸಾಮಾನ್ಯವಾಗಿ ಯೋಗ್ಯರು. ಜೀವಮಾನದಲ್ಲಿ ಅವರು ಮಾಡಿರುವುದು ಒಂದೇ ತಪ್ಪು. ಆ ತಪ್ಪಿಗಾಗಿ ಅವರು ಜೀವಾವಧಿ ಪಶ್ಚಾತ್ತಾಪ ಪಡುತ್ತಾರೆ.

ಈ ಬಂಕೋಲ್‌ಗಳು ಸಣ್ಣ ಕಳ್ಳರಲ್ಲ. ಹೇಡಿಗಳಲ್ಲ. ಒಳ್ಳೆಯ ಧೈರ್ಯಶಾಲಿಗಳು. ಅವರ ನಡವಳಿಕೆಗಳಲ್ಲಿ ನೀಚವಾದುದಾಗಲಿ ಅಲ್ಪವಾದುದಾಗಲಿ ಅತಿ ದೈನ್ಯವಾಗಲಿ ಇಲ್ಲ. ಅವರು "ಒಂದು ತಪ್ಪು ಮಾಡಿದೆ. ಅದಕ್ಕೆ ಶಿಕ್ಷೆ ಅನುಭವಿಸುತ್ತಿದ್ದೇನೆ. ಆ ತಪ್ಪಿಗೆ ಈ ಶಿಕ್ಷೆ. ಇನ್ನು ನನಗೆ ಯಾರ ಹಂಗೂ ಇಲ್ಲ" ಎಂಬ ರೀತಿಯಲ್ಲಿ ತಲೆ ಎತ್ತಿಕೊಂಡು ತಿರುಗುತ್ತಾರೆ. ಆದರೆ ಕಳವುಮಾಡಿ ಸೆರೆಗೆ ಬಂದ ಕ್ರಿಮಿನಲ್ ಖೈದಿಗಳ ವಿಚಾರ ಹಾಗಲ್ಲ. ಅವರು ಎರಡು ಮೂರು ನಾಲ್ಕು ಸಲ ಸೆರೆವಾಸಕ್ಕೆ ಬಂದವರು. ಕೆಲವರಿಗಂತೂ ಸೆರೆಯಿಂದ ಹೊರಗೆ ಇರುವುದಕ್ಕೇ ಆಗುವುದಿಲ್ಲ. ಬಿಡುಗಡೆಯಾದ ನಾಲ್ಕಾರು ದಿನಗಳಲ್ಲಿಯೇ ಅವರು ಮತ್ತೆ ಕದ್ದು ಒಳಕ್ಕೆ ಬರುತ್ತಾರೆ. ಒಳಕ್ಕೆ ಬಂದ ಮೇಲೆ ಅಲ್ಲಿಯೂ ಕಳವನ್ನು ಬಿಡುವುದಿಲ್ಲ. ಸೆರೆಮನೆಯ ಅಡಿಗೆ ಮನೆಯಲ್ಲಿ ಉಪ್ಪು ಈರುಳ್ಳಿಯಿಂದ ಹಿಡಿದು ಅಧಿಕಾರಿಗಳ ಜೇಬಿನ ಫೌಂಟನ್‌ಪೆನ್‌ವರೆಗೆ ಅವರು ಏನು ಸಿಕ್ಕಿದರೆ ಅದನ್ನು ಕದಿಯುತ್ತಾರೆ. ಈ ಕಾರಣ

ದಿಂದ ಆ ಪಂಚರಂಗಿ ಕಳ್ಳರಲ್ಲಿ ಸೆರೆಮನೆಯ ಅಧಿಕಾರಿಗಳಿಗಾಗಲಿ ಇತರ ಖೈದಿಗಳಿಗಾಗಲಿ ನಂಬಿಕೆ ಇರುವುದಿಲ್ಲ.

ಸೆರೆಮನೆಯ ಆಡಳಿತ ಸುಸೂತ್ರವಾಗಿ ನಡೆಯುವುದಕ್ಕೆ ಕಾರಣ ಖೈದಿಗಳ ಮೇಲೆ ಖೈದಿಗಳು ಕಾವಲಿರುವುದೇ; ಖೈದಿಯ ಮೇಲೆ, ಖೈದಿ ಗುಪ್ತ ಪೋಲೀಸ್ ಆಗಿ ಕೆಲಸಮಾಡುವುದೇ; ಖೈದಿಯ ಮೇಲೆ ಖೈದಿ ಚಾಡಿ ಹೇಳುವುದೇ. ಹೀಗೆ ಮಾಡದೆ ಹೋದರೆ ಅಧಿಕಾರಿಗಳಿಗೆ ಒಂದು ನಿಮಿಷವೂ ಸೆರೆಮನೆಯಲ್ಲಿ ಶಿಸ್ತು ಶಾಂತಿ ಇಡಲು ಸಾಧ್ಯವಿಲ್ಲ. ಬ್ರಿಟಿಷ್ ಸರ್ಕಾರ ಭಾರತದಲ್ಲಿ ಒಬ್ಬನನ್ನು ರಾಜ, ಒಬ್ಬನನ್ನು ಮಂತ್ರಿ, ಒಬ್ಬನನ್ನು ತಂತ್ರಿ, ಒಬ್ಬನನ್ನು ಸರ್, ಮತ್ತೊಬ್ಬನನ್ನು ಬಹದ್ದೂರ್, ಒಬ್ಬ ಜಮೀನ್ ದಾರ ಮತ್ತೊಬ್ಬ ಜೋಡಿದಾರ, ಹೀಗೆಲ್ಲಾ ಮಾಡಿ ವ್ಯತ್ಯಾಸಗಳನ್ನು ಕಲ್ಪಿಸಿದ್ದಾರೆ. ಒಬ್ಬನ ಮೇಲೆ ಒಬ್ಬನನ್ನು ಕಾವಲು ಹಾಕಿದ್ದಾರೆ. ಒಬ್ಬನಲ್ಲಿ ವಿಶ್ವಾಸ ಮತ್ತೊಬ್ಬನಲ್ಲಿ ಅವಿಶ್ವಾಸ, ಒಬ್ಬನಿಗೆ ದಯೆ ಒಬ್ಬನಿಗೆ ಕ್ರೋಧ, ಒಬ್ಬನ ಕೈತುಂಬ ಹಣ, ಒಬ್ಬನಿಗೆ ಏನೂ ಇಲ್ಲ. ಹೀಗಾಗಿ ನಮ್ಮವರೇ ನಮ್ಮ ಕಾವಲು, ನಮ್ಮವರೇ ನಮ್ಮ ಜೈಲರುಗಳು. ಈ ತಂತ್ರಕ್ಕಾಗಿ ಇಂಗ್ಲೆಂಡಿನಿಂದ ಏನನ್ನೂ ತರಬೇಕಾದುದಿಲ್ಲ. ಆದರೆ ಭಾರತವನ್ನು ಹಿಡಿತದಲ್ಲಿ ಇಟ್ಟುಕೊಳ್ಳಲು ಇದು ಆವಶ್ಯಕ. ಹೀಗೆಯೇ ಸೆರೆಮನೆಯ ಅಧಿಕಾರಿಗಳೂ ಒಬ್ಬ ಖೈದಿಯ ಮೇಲೆ ಮತ್ತೊಬ್ಬ ಖೈದಿಯನ್ನು ಕಾವಲು ಇಟ್ಟು ಸೆರೆಮನೆಯ ಆಡಳಿತ ನಡೆಸಿಕೊಳ್ಳುತ್ತಾರೆ. ಇದಕ್ಕಾಗಿ ಅವರಿಗೆ ಲಂಚ ಕೊಡುತ್ತಾರೆ. ಈ ಲಂಚವೆಂಬುದು ಸೆರೆಮನೆಯಲ್ಲಿರಬೇಕಾದ ಶಿಕ್ಷೆಯ ಅವಧಿಯಲ್ಲಿ ದೊರೆಯುವ ರಿಯಾಯ್ತಿಯೇ. 6 ತಿಂಗಳು ಮೇಲ್ಪಟ್ಟು ಶಿಕ್ಷೆಯಾದವನಿಗೆ ಸಾಧಾರಣವಾಗಿ ತಿಂಗಳಿಗೆ ಮೂರು ದಿನ ರೆಮಿಶನ್ ಅಥವ ರಿಯಾಯ್ತಿ ದೊರೆಯುತ್ತದೆ ಆದರೆ ಅವನು ಅಧಿಕಾರಿಗಳಿಗೆ ಇಷ್ಟವಾದ ಕೆಲಸ ಮಾಡಿದರೆ ಅವನಿಗೆ ಇನ್ನೂ ಹೆಚ್ಚು ರಿಯಾಯ್ತಿ ಕೊಡಲು ಅವರಿಗೆ ಅವಕಾಶವುಂಟು. ಈ ಅವಕಾಶವನ್ನು ಸಾಧಾರಣವಾಗಿ ಖೈದಿಗಳಲ್ಲಿರುವ ಒಗ್ಗಟ್ಟನ್ನು ಮುರಿಯಲು ಸೆರೆಮನೆಯ ಅಧಿಕಾರಿಗಳು ಉಪಯೋಗಿಸುತ್ತಾರೆ.

“ ಇಂತಹ ಖೈದಿ, ಮಜ್ಜಿಗೆ ಇಲ್ಲದ ದಿನ ಇತರ ಖೈದಿಗಳು ಅಸಮಾಧಾನ ತೋರಿಸುತ್ತಿರುವಾಗ, ಅವರಿಗೆ ಸರಿಯಾದ ಸಮಜಾಯಿಷಿ

ಹೇಳಿದ. ಆದುದರಿಂದ ಇವನಿಗೆ ಸ್ಪೆಷಲ್ ರಿಯಾಯ್ತಿ 15 ದಿನ ಕೊಡಬಹುದು; ಈ ಖೈದಿ, ಇತರ ಖೈದಿಗಳು ಸೆರೆಮನೆಯ ಕಾನೂನನ್ನು ಮುರಿಯಲು ಪಿತೂರಿ ಮಾಡುತ್ತಿರುವುದನ್ನು ಕಂಡುಹಿಡಿದು ತಿಳಿಸಿದ. ಆದುದರಿಂದ ಇವನಿಗೆ ಹತ್ತು ದಿನ ಕೊಡಬಹುದು. ಇಂತಹ ಖೈದಿ ನಲ್ಲಿ ನೀರು ನಿಂತು ಹೋದ ರಾತ್ರಿ, ಇತರ ಖೈದಿಗಳನ್ನು ಸಮಾಧಾನಪಡಿಸುವುದರಲ್ಲಿ ಬಹಳ ಮುತವರ್ಜಿ ತೋರಿಸಿದ. ಸೆರೆಮನೆಯ ಶಿಸ್ತನ್ನು ಮುರಿಯುವವರನ್ನು ಹಿಡಿದುಕೊಟ್ಟ. ಆದುದರಿಂದ ಇವನಿಗೆ 15 ದಿನ ಸ್ಪೆಶಲ್ ರಿಯಾಯ್ತಿ''. ಸೆರೆಮನೆಯ ಅಧಿಕಾರಿಗಳು ರಾಜಕೀಯ ಖೈದಿಗಳನ್ನು ಸಹ ಒಬ್ಬನ ಮೇಲೆ ಒಬ್ಬನನ್ನು ಪಿತೂರಿಗಾರರಾಗಿ ಇಡಲು ಪ್ರಯತ್ನಿಸಿದ ಕಾಲವುಂಟು. "ಖೈದಿಗಳು ದಂಗೆ ಏಳುವುದರಲ್ಲಿದ್ದರು. ಆಗ ಈತ ಗುಟ್ಟನ್ನೆಲ್ಲಾ ಕಂಡುಹಿಡಿದು ತಿಳಿಸಿದ. ಆದುದರಿಂದ ಕಾಂಗ್ರೆಸ್ ನವರು ಇವನನ್ನು ತಮ್ಮ ಗುಂಪಿನಿಂದ ಹೊರಕ್ಕೆ ತಳ್ಳಿದರು. ಇವನಿಗೆ 15 ದಿನ ಸ್ಪೆಶಲ್ ರೆಮಿಶನ್ ಕೊಡಬಹುದು''. ಇವೆಲ್ಲಾ ರೆಮಿಶನ್ ರಿಜಿಸ್ಟರಿನಲ್ಲಿ ಸೆರೆಮನೆಯ ಅಧಿಕಾರಿಗಳು ಬರೆದಿವರ ವಾಕ್ಯಗಳ ಮಾದರಿಗಳು.

ಸೆರೆಮನೆಗೆ ಬಂದ ಎರಡು ವರುಷ ಕಾಲ ಬಂಕೋಲ್, ಸಾಮಾನ್ಯ ಸೆರೆಯಾಳಿನಂತೆ ಇರುತ್ತಾನೆ. ಆಗ ಅವನಿಗೆ ತಿಂಗಳಿಗೆ 5 ದಿನ ರೆಮಿಶನ್ ಸಿಕ್ಕುತ್ತಾ ಇರುತ್ತದೆ. ಅನಂತರ ಅವನನ್ನು ರಾತ್ರಿಯ ಕಾವಲುಗಾರ (ನೈಟ್ ವಾಚ್‌ಮನ್) ಎಂದು ಮಾಡುತ್ತಾರೆ. ಪ್ರತಿಯೊಂದು ಬ್ಯಾರಕ್‌ಗೂ ಒಬ್ಬೊಬ್ಬ ರಾತ್ರಿಯ ಕಾವಲುಗಾರ ಇರುತ್ತಾನೆ. ಸಂಧ್ಯಾಕಾಲ 6 ಗಂಟೆಗೆ ಬ್ಯಾರಕ್‌ಗಳ ಬೀಗ ಹಾಕಿದರೆ ಬೆಳಗಿನವರೆಗೆ ಅವುಗಳನ್ನು ಕಾಯುತ್ತಿರುವುದು ಅವನ ಕೆಲಸ. ಸೆರೆಮನೆಯ ಮಧ್ಯದ ಗೋಪುರದಲ್ಲಿರುವ ವಾರ್ಡರ್ ಗಂಟೆಗೊಂದು ಸಲ, ತೂಗಹಾಕಿರುವ ದೊಡ್ಡ ಜಾಗಟೆ ಹೊಡಿಯುತ್ತಾನೆ. ಆ ಜಾಗಟೆಯ ಹತ್ತಿರ ನಿಂತುಕೊಂಡರೆ ಅವನಿಗೆ ಸುತ್ತಾ ನಡೆಯುವುದೆಲ್ಲಾ ಕಾಣುತ್ತದೆ. ಅವನು ಬ್ಯಾರಕ್‌ಗಳ ಹೆಸರನ್ನು ಹಿಡಿದು ಕರೆದಾಗ, ಆ ಬ್ಯಾರಕ್ ಬಾಗಿಲಿನಲ್ಲಿ ಕಾವಲಿರುವ ಬಂಕೋಲ್ ನೈಟ್ ವಾಚಮನ್ "ಎಲ್ಲಾ ಸರಿಯಾಗಿದೆ'' ಎಂದು ಪ್ರತ್ಯುತ್ತರ ಕೊಡಬೇಕು. ಹೀಗೆ ಎಲ್ಲಾ ಬ್ಯಾರಕ್‌ಗಳನ್ನೂ ಕೇಳಿ ಅನಂತರ ಅವನು ಗಂಟೆ ಹೊಡೆಯುತ್ತಾನೆ. ಗಂಟೆಗೊಂದು ಸಲದಂತೆ

ಈ ಸಂಪ್ರದಾಯ ನಡೆಯಬೇಕು. ಗೋಪುರದಲ್ಲಿರುವ ವಾರ್ಡರ್, ಬ್ಯಾರಕ್‌ಗಳ ಹೆಸರು ಹಿಡಿದು ಕರೆಯುತ್ತಾನೆ. ಇಲ್ಲಿಂದ ಯಾವುದೋ ಒಂದು ವಿಕಾರವಾದ ಧ್ವನಿಯಲ್ಲಿ ಪ್ರತ್ಯುತ್ತರ ಹೊರಡುತ್ತದೆ. ಅದು ಬರಿಯ ಸದ್ದು. ಆದರೆ ಅನುಭವಸ್ಥರಾದವರಿಗೆ ಅದು "ಎಲ್ಲಾ ಸರಿಯಾಗಿದೆ" ಎಂಬ ಪ್ರತ್ಯುತ್ತರವೆಂದು ಗೊತ್ತಾಗುತ್ತದೆ.

ಹೀಗೆ ಮೊದಲು ರಾತ್ರಿಯ ಕಾವಲುಗಾರನಾದ ಬಂಕೋಲ್ ಖೈದಿಯನ್ನು ಅನಂತರ "ವರ್ಗಾವರ್ಶಿ" work overseer ಮಾಡುತ್ತಾರೆ. ಆ ವೇಳೆಗೆ ಬಂಕೋಲ್, ಸೆರೆಯ ಆಡಳಿತ ಅಧಿಕಾರಕ್ಕೆ ಸೇರಿದವನಾಗುತ್ತಾನೆ. ಇತರ ಸೆರೆಯಾಳುಗಳಿಂದ ಸರಿಯಾಗಿ ಕೆಲಸಮಾಡಿಸಿಕೊಳ್ಳುವುದು ಅವನ ಜವಾಬ್ದಾರಿ. ಅವನಿಗೆ ಅದಕ್ಕಾಗಿ ಸ್ಪೆಶಲ್ ರಿಯಾಯ್ತಿಗಳು ಉಂಟು. ಅನಂತರ ಅವನನ್ನು "ಟಿಕೆಟ್ ವಾರ್ಡರ್" ಎಂದು ಮಾಡುತ್ತಾರೆ. ಆಗ ಅವನಿಗೆ ತಿಂಗಳಿಗೆ 4 ಕಾಸು ಸಂಬಳ ಉಂಟು. ಹೀಗೆ ಎರಡು ವರುಷ ಕಳೆಯುವುದರಲ್ಲಿ ಅವನು "ಪೇಟಾ ವಾರ್ಡರ್" ಆಗುತ್ತಾನೆ. ಅಂದರೆ ಅವನಿಗೆ ಒಂದು ಪೇಟಾ ಕೊಡುತ್ತಾರೆ. ಆ ವೇಳೆಗೆ ಅವನಿಗೆ ಸೆರೆಯ ವಾಸ ಚೆನ್ನಾಗಿ ಅಭ್ಯಾಸವಾಗಿರುತ್ತದೆ. ಇಷ್ಟು ದಿನ ಕಳೆಯಿತು. ಮುಂದಲದೂ ಕಳೆದೇ ಕಳೆಯುತ್ತದೆ. ಎಂಬ ಆಸೆ ಅವನಿಗೆ ಉಂಟಾಗಿ ಒಂದೊಂದು ವೇಳೆ ಅವನು ಉಡುಪಿನಲ್ಲಿಯೂ "ಶೋಕಿ" ಮಾಡುತ್ತಾನೆ. ಆಗ ಅವನಿಗೆ ತಿಂಗಳಿಗೆ 6 ದಿನ ರಿಯಾಯ್ತಿ ದೊರೆಯುತ್ತದೆ. ಎಂಟು ವರುಷವಾದ ಮೇಲೆ ಬಂಕೊಲ್ ಸೆರೆಯ ಆವರಣದಲ್ಲಿ ಎಲ್ಲಿ ಬೇಕಾದರೂ ತಿರುಗಬಹುದು. ಆಗ ಅವನು ನಿಶಾಚರನೂ ಹೌದು. ಉಷಾಚರನೂ ಹೌದು—ಒಬ್ಬ ಸೂಪರಿಂಟೆಂಡೆಂಟರು ಬಂಕೋಲ್‌ಗಳೆಲ್ಲಾ ದೈತ್ಯರು ರಾಕ್ಷಸರು ನಿಶಾಚರರು ಎನ್ನುತ್ತಾರೆ. ಹೊರಬಾಗಿಲಿನಿಂದ ಹೊರಗಿನ ಪ್ರಪಂಚಕ್ಕೆ ಹೋಗುವುದೊಂದಕ್ಕೆ ಅವನಿಗೆ ಅವಕಾಶವಿಲ್ಲ. ಇಷ್ಟೊಂದು ರಿಯಾಯ್ತಿ ಇತರ ಸೆರೆಯಾಳುಗಳಿಗೆ ಇಲ್ಲ. ತಮ್ಮ ಬ್ಯಾರಕ್‌ನ ಆವರಣ ಬಿಟ್ಟು ಬರುವುದಕ್ಕೇ ಅವರಿಗೆ ಅವಕಾಶವಿರುವುದಿಲ್ಲ.

ಹೀಗೆ ಏಳು ವರುಷ ಎಂಟು ವರುಷ ಸೆರೆವಾಸ ಅನುಭವಿಸಿ, ಸೆರೆಯಾಳುಗಳು ಮನುಷ್ಯರೆಂದೇ ಒಪ್ಪದಿರುವ ಅಧಿಕಾರಿಗಳ ಕೈಲಿ ಸಿಕ್ಕಿದವ

ರಿಗೆ ಮನುಷ್ಯತ್ವವೂ, ಮನುಷ್ಯ ಸಾಮಾನ್ಯವಾದ ಸ್ವಭಾವವೂ ಇರುವುದು ಅಪರೂಪವೆಂದೇ ಭಾಸವಾಗುವುದು. ಸೆರೆಯಾಳುಗಳನ್ನು ನೋಡಿದರೂ ಇವರಿಗೆ ಹೃದಯವಿರುವುದೇ ಎಂಬ ಸಂದೇಹ ಬರುವುದು. ಒಂದು ಸಲ ಸುಮಾರು 2-3 ವರುಷ ಸೆರೆವಾಸವನ್ನು ಕಳೆದಿದ್ದ ಒಬ್ಬ ಬಂಕೋಲ್‌ನ ಹೆಂಡತಿ ಮಗುವಿನೊಂದಿಗೆ ಗಂಡನನ್ನು ನೋಡಲು ಸೆರೆಮನೆಗೆ ಬಂದಳು. ಅವಳು ಅಲ್ಲಿಯವರೆಗೆ ಸೆರೆಮನೆಗೆ ಬಂದಿರಲಿಲ್ಲ. ಗಂಡನಿಗೆ ಶಿಕ್ಷೆಯಾದಾಗ ಆಕೆ ಗರ್ಭಿಣಿಯಾಗಿದ್ದಳು. ಹೆಂಡತಿ ಮಗು ಬರುವುದನ್ನು ಅರಿತು ಬಂಕೋಲ್ ಸೆರೆಮನೆಯ ಅಡಿಗೆ ಮನೆಯಲ್ಲಿ ಉಪಾಯವಾಗಿ ಒಂದು ಚೂರು ತಿಂಡಿ ಮಾಡಿಸಿದ. ಅಲ್ಲೆಲ್ಲೋ ಪಂಚರಂಗಿ ಖೈದಿಯ ಬಳಿ ಇದ್ದ ಒಂದು ಬಣ್ಣದ ಬಟ್ಟೆಯಿಂದ ತನ್ನ ಮಗುವಿನ ಅಳತೆಯ ಅಂದಾಜಿಗೆ ಒಂದು ಟೋಪಿ ಹೊಲಿಸಿದ್ದ. ಸಕಾಲಕ್ಕೆ ದರುಶನಕ್ಕೆ ಆತನ ಹಂಡತಿ ಬಂದಳು. ಮಗು ಗೆಲುವಾಗಿ ಚೆನ್ನಾಗಿದ್ದಿತು. ಬಂಕೋಲ್ ಮಗುವನ್ನು ಎತ್ತಿಕೊಂಡು ಮುದ್ದಾಡುತ್ತಿದ್ದ. ಆ ನರಕದಲ್ಲಿ ಆ ಮಗುವಿನ ಮುಖ ಮರಳುಕಾಡಿನ ತಣ್ಣೀರಾಯಿತು. ಮಗುವಿನ ಮೇಲೆ ಮಾಡಿದ ಪ್ರೇಮದಿಂದ ಬಂಕೋಲ್ ಪವಿತ್ರನಾದ; ಅವನ ಹೃದಯ ಉನ್ನತಿಗೆ ಏರಿತು; ಆದರೆ ಅವನ ಹೆಂಡತಿಗೆ ಬಂಕೋಲ್ ಹೆಂಡತಿಯ ಬಾಳ್ವೆ ಬಾಳಿ ಸಾಕಾಗಿದ್ದಿತೆಂದು ಕಾಣುತ್ತದೆ. ಪ್ರಪಂಚದ ಬೇಸರಿಗೆ ಅವಳಿಗೆ ಹೆಚ್ಚಾಗಿದ್ದಿತು. ಅವಳು ಗಂಡನನ್ನು "ಮಹಾ ಕಷ್ಟಪಟ್ಟು ಸಾಕಿದ್ದಕ್ಕೆ ಮುದ್ದಾಡಪ್ಪ ಮುದ್ದಾಡು" ಎಂದುಬಿಟ್ಟಳು. ಅವಳೇನೋ ಆ ಮಾತನ್ನು ಸ್ವಾಭಾವಿಕವಾಗಿ ಅದಕ್ಕೆ ಹೆಚ್ಚು ಅರ್ಥವಿಡದೆ ಆಡಿದ್ದಿರಬಹುದು. ಆದರೆ ಆ ಮಾತು ಬಂಕೋಲ್‌ನ ಹೃದಯವನ್ನು ಮುಟ್ಟಿತು. ಅವನ ಮುಖ ಪೆಚ್ಚಾಯಿತು. ಅವನು ಮಗುವನ್ನು ನೆಲದ ಮೇಲೆ ಬಿಟ್ಟು ಮಾತನಾಡದೆ ಒಳಕ್ಕೆ ಹೊರಟುಹೋದನು. ಅಲ್ಲಿಂದ ಮುಂದೆ ಸುಮಾರು 15 ದಿನಗಳ ಕಾಲ ಬಂಕೋಲ್ ಮೊದಲಿನಂತೆ ಆಗಲಿಲ್ಲ.

---

# ೫೪. ಸೆರೆಮನೆಗಳನ್ನು ವೈದ್ಯಶಾಲೆ ಮಾಡಿ

ನಮ್ಮ ದೇಶದಲ್ಲಿ ಕೇಂದ್ರ ಕಾರಾಗಾರದಲ್ಲಿಯೂ ಇತರ ಕಾರಾಗಾರ ದಲ್ಲಿಯೂ ಸೆರೆಯಿರುವವರ ಮುಖ್ಯವಾದ ತಪ್ಪಿತ ಕಳವು. ಕಳವಿಗಾಗಿ ಸೆರೆಯಿರುವವರ ಸಂಖ್ಯೆಯೇ ಅಧಿಕ. ಇದಕ್ಕೆ ಮುಖ್ಯವಾದ ಕಾರಣ ಸಮಾಜದಲ್ಲಿರುವ ಧನಿಕ ಬಡವರ ಮಧ್ಯದ ಅಂತರ. ಒಬ್ಬನ ಪದಾರ್ಥ ವನ್ನು ಒಬ್ಬನು ತೆಗೆದುಕೊಳ್ಳುವುದು ತಪ್ಪು ಎಂದು ಘಂಟಾಘೋಷವಾಗಿ ಹೇಳುವಷ್ಟರಮಟ್ಟಿಗೆ ನಿಷ್ಪಕ್ಷಪಾತವಾಗಿ ದೇವರು ಎಲ್ಲರಿಗೂ ಸಮಾನ ವಾದ ಅನುಕೂಲ ಸುಖಗಳನ್ನು ಕಲ್ಪಿಸಿಲ್ಲ. ಕೇಂದ್ರ ಕಾರಾಗಾರದಲ್ಲಿ ರುವ ಹಳೆಯ ಕಳ್ಳ ವೈರಮುಡಿ. ಹೆಸರು ಎಷ್ಟು ಸೊಗಸಾಗಿದೆ. ಹೆಸರಿ ನಷ್ಟೇ ಅವನ ಮಾತೂ ಸ್ವಾರಸ್ಯ. ಕಳವು ಅವನ ಹುಟ್ಟುಗುಣ. ಕವಿ ಗಳಿಗೆ ಕವಿತೆ, ದಾನಿಗೆ ದಾತೃತ್ವ ಸುಂದರಿಗೆ ಸೌಂದರ್ಯ, ಪುಷ್ಪಕ್ಕೆ ಸುಗಂಧ, ಸ್ವಾಭಾವಿಕವಾಗಿ ದೈವದತ್ತವಾಗಿ ಬಂದಂತೆ ವೈರಮುಡಿಗೆ ಕಳವು ದೈವದತ್ತವಾಗಿ ಬಂದಿದೆ. ದೇವರ ದಯೆ ಇಲ್ಲದಿದ್ದಿದ್ದರೆ ಆ ವಿದ್ಯೆ ಯಲ್ಲಿ ಅವನಿಗೆ ಆ ಪ್ರಾವೀಣ್ಯತೆ ಬರುವುದು ಸಾಧ್ಯವಿಲ್ಲ. ವಿಜ್ಞಾನಿ, ತನ್ನ ಶೋಧನೆ ಪ್ರಯೋಗಗಳನ್ನು ಕುರಿತು ಉತ್ಸಾಹದಿಂದ ಮಾತನಾಡು ವಂತೆ ವೈರಮುಡಿ ತನ್ನ ಕಳವನ್ನು ಕುರಿತು ಸಂತೋಷ, ಒಂದು ವಿಧವಾದ ಹೆಮ್ಮೆ ಅಭಿಮಾನದಿಂದಲೇ ಮಾತನಾಡುತ್ತಾನೆ. "ಈ ವಿದ್ಯೆ ಇರುವ ವರೆಗೆ ಯಾರ ಹಂಗೂ ಇಲ್ಲ. ವಿದ್ಯೆ ಇಲ್ಲದಿದ್ದರೆ ಯಾರು ಸ್ವಾಮಿ ಕೇಳು ತ್ತಾರೆ. ವಿದ್ಯೆ ಇರುವ ಹೊತ್ತಿಗೆ ಒಬ್ಬರ ಹಂಗು ಇಲ್ಲದೆ ನನ್ನ ಪಾಡಿಗೆ ನಾನು ಇದೀನಿ" ಎನ್ನುತ್ತಾನೆ. ತನ್ನ ವಿದ್ಯೆ ತಪ್ಪು ಎಂಬುದು ಅವನಿಗೆ ನಂಬಿಕೆ ಇಲ್ಲ. ಆದರೆ "ಈ ವಿದ್ಯೆ ಜಯಿಸುತ್ತಿಲ್ಲ. ಇದರ ಜಯಕ್ಕೆ ದಾರಿ ಮಾಡಿಕೊಳ್ಳಬೇಕು" ಎನ್ನುತ್ತಾನೆ. "ಈಗ ನೋಡಿ ಸ್ವಾಮಿ. ನಾನು ಮಾಡುವುದೂ ಸರ್ಕಾರ ಮಾಡುವ ಕೆಲಸವೇ. ನಿಮ್ಮಲ್ಲಿರುವುದನ್ನು ಸರ್ಕಾರ ತೆಗೆದುಕೊಳ್ಳುತ್ತದೆ. ಆ ಹಣವನ್ನು ಅಮಲ್ದಾರರು ಡೆಪುಟಿ ಕಮಿಶನರು ದಿವಾನರು, ಆವರ ಮೇಲ್ಪಟ್ಟವರು ವೈಸರಾಯರು ಇಂಡಿಯಾ ಸೆಕ್ರೆಟರಿ ಆಫ್ ಸ್ಟೇಟ್ ಎಲ್ಲರೂ ಅವರವರ ದರ್ಜೆಗೆ ಅನು ಸಾರವಾಗಿ ಹಂಚಿಕೊಳ್ಳುತ್ತಾರೆ. ಆದರೆ ಅವರು ಮಾಡಿದ ಕೆಲಸ ಜಯಿಸಿ

ಕೊಳ್ಳಲು ಅವರಿಗೆ ಪೋಲೀಸ್ ಕುಮ್ಮಕ್ಕು ಇದೆ. ನಾನು ಮಾಡುವುದೂ ಅದೇಯೆ. ಅವರಿಗೆ ಬೇಕಾದುದನ್ನು ಅವರು ತೆಗೆದುಕೊಳ್ಳುತ್ತಾರೆ. ನನಗೆ ಬೇಕಾದುದನ್ನು ನಾನು ತೆಗೆದುಕೊಳ್ಳುತ್ತೇನೆ. ಆದರೆ ಮಾತ್ರ ನನ್ನನ್ನು ಇಲ್ಲಿ ಕೂಡಿದ್ದಾರೆ. ನಾನೂ ಅವರಂತೆ ಪೋಲೀಸ್ ಕುಮ್ಮಕ್ಕು ಇಟ್ಟುಕೊಂಡು ಮಾಡಿದ ಕೆಲಸ ಜಯಿಸಿಕೊಂಡರೆ ಆಗ ನನ್ನ ಹುದ್ದೆಯೂ ಅವರ ಹುದ್ದೆಯ ಸಮಾನವಾಗಿ ನನಗೂ ಗೌರವ ಬಂದೀತು'' ಎನ್ನುತ್ತಾನೆ.

ವೈರಮುಡಿಗೆ ಇವತ್ತಿನವರೆಗೆ ತನ್ನ ಕಳವಿನಿಂದ ಪಶ್ಚಾತ್ತಾಪ ವಾಗಿಲ್ಲ. ಬೆಳಗಿನಿಂದ ಸಂಜೆಯವರೆಗೆ ದುಡಿದರೂ ಒಬ್ಬನಿಗೆ ಹೊಟ್ಟೆಯೇ ತುಂಬದಿರುವುದು; ಮತ್ತೊಬ್ಬ ಕುಳಿತಲ್ಲಿಯೇ ಯಾವ ಕೆಲಸವನ್ನೂ ಮಾಡದೆ ಹಂದಿಯಂತೆ ಮೈ ಕೊಬ್ಬಿಸುತ್ತಿರುವುದು; ಎಲ್ಲಿಯವರೆಗೆ ಈ ಅನ್ಯಾಯ ಸಮಾಜದಲ್ಲಿದೆಯೋ ಅಲ್ಲಿಯವರೆಗೆ ತನಗೂ ಸಮಾಜದಲ್ಲಿ ಆವಶ್ಯಕವಾದ ಕೆಲಸವಿರುವುದೆಂದೇ ಅವನ ಭಾವನೆ. ಭಗವಂತ ಕೊಟ್ಟ ಈ ಶಕ್ತಿ ಬೆಳೆಸಿಕೊಳ್ಳಬೇಕು. ನೂರು ಜನ ಒಂದು ಮನೆಯಲ್ಲಿ ಮಲಗಿ ರಲಿ, ಒಂದು ಕ್ಷಣ ಟಾರ್ಚ್ (torch) ಹಾಕಿದರೆ ಸಾಕು. ಎಲ್ಲ ಪೂರಾ ಮನೋನೇತ್ರದ ಎದುರಿಗೆ ನಿಲ್ಲಬೇಕು. ಇಂಥಿಂಥಾದ್ದು ಇಂತ ಕಡೆಯೇ ಇದೆ ಎಂತ ಗೊತ್ತಾಗಬೇಕು. ಎರಡು ಸಲ ಟಾರ್ಚ್ ಹಾಕುವವನು ಹುಟ್ಟು ಕಳ್ಳನಲ್ಲ. ಅವನು ಅಡ್ಡ ಕಸಬಿ. ಅಡ್ಡಕಸಬಿ ಕೆಲಸ ಯಾವತ್ತೂ ಎಡಬಡಂಗಿ. ನೀವೆಲ್ಲ ನನಗೆ ಒಂದು ಲೆಕ್ಕವೇ ಸ್ವಾಮಿ. ಪಾಪ ಪಾಪ ನೀವೆಲ್ಲಾ ಏನೂ ಅರಿಯದ ಹಾಲು ಕೂಸುಗಳು. ನಿಮ್ಮ ಜೇಬಲ್ಲಿರೋ ಪೌಂಟನ್‌ಪೆನ್ ಗಡಿಯಾರ ಇವುಗಳನ್ನು ಹಾರಿಸುವುದು ಎಷ್ಟು ಕ್ಷಣದ ಕೆಲಸ. ಆದರೆ ರಾಜಾ ಕಳ್ಳನಾಗಿರಬೇಕು. ದರಿದ್ರರನ್ನು ಕದಿಯುವ ಕಳ್ಳನಾಗಿರಬಾರದು'' ಎನ್ನುತ್ತಾನೆ.

ಕಳ್ಳತನದ ತಪ್ಪಿಗಾಗಿ ಸಮಾಜ ಕೊಡುವ ದಂಡನೆಯಿಂದಲಾಗಲಿ, ಆ ದಂಡನೆಯನ್ನು ಅನುಭವಿಸುವಾಗ ಸೆರೆಮನೆಯಲ್ಲಿ ತಪ್ಪಿತಸ್ಥನಿಗೆ ಉಂಟಾ ಗುವ ಅನುಭವದಿಂದಲಾಗಲಿ, ಕಳ್ಳನ ಮನಸ್ಸು ಬದಲಾಯಿಸುವುದಿಲ್ಲ. ಅದರ ಬದಲು ಸಮಾಜವನ್ನು ಎದುರಿಸಬೇಕೆಂಬ ಮನೋಭಾವವೇ ಅವನಲ್ಲಿ ಹೆಚ್ಚುತ್ತದೆ. ಶಿಕ್ಷೆ ವಿಧಿಸುವ ನ್ಯಾಯಾಧಿಪತಿಗಳಲ್ಲಿ ಅನೇಕರಿಗೆ

ಬಡತನವೆಂದರೆ ಏನೆಂಬುದೇ ತಿಳಿಯದು. "ಹೆಂಡತಿಗೆ ಸಾವಿರ ರೂಪಾಯಿ ಓಲೆ ಇಲ್ಲ. ವಾಸಕ್ಕೆ ತಾರಸಿ ಮನೆಯಿಲ್ಲ. ಪುಷ್ಟಿಕರವಾದ ಹಣ್ಣು ಓವಲ್ಟಿನ್ ಕಡಿಮೆ ಇದೆ" ಇದೇ ಅವರ ದಾರಿದ್ರ್ಯ ಕಲ್ಪನೆ. ಅವರು ಕುಳಿತಿರುವುದು ಆ ಮೇಲಿನ ಆಸನದಲ್ಲಿ. ಅಪರಾಧಿ ನಿಂತಿರುವುದು ಈ ಕೆಳಮಟ್ಟದಲ್ಲಿ. "ಹೊಟ್ಟೆ ತುಂಬಿಕೊಳ್ಳುವುದಕ್ಕಾಗಿ ಕಳವನ್ನು ಮಾಡುತ್ತಿರಬಹುದು. ಹಸಿವಿನಿಂದ ಸಾಯುವುದಕ್ಕಿಂತ ಕಳವುಮಾಡುವುದು ಉತ್ತಮ"ವೆಂದು ಈ ಅಪರಾಧಿ ಭಾವಿಸಿರಬೇಕೆಂಬುದು ಅವರಿಗೆ ಎಂದಿಗೂ ಹೊಳೆಯುವುದಿಲ್ಲ. ತಮ್ಮ ಮುಂದೆ ಬಂದವನಿಗೆ ಒಂದು ಶಿಕ್ಷೆ; ಆದರೆ ಈ ಶಿಕ್ಷೆಯನ್ನು ಅವನ ಮೇಲೆ ಹೇಗೆ ಪ್ರಯೋಗಿಸುತ್ತಾರೆ. ಆ ಪ್ರಯೋಗದಿಂದ ಅವನ ಸ್ವಭಾವ ಬದಲಾಗುವುದೇ ಎಂಬುದನ್ನೂ ಅವರು ಪರೀಕ್ಷಿಸುವುದಿಲ್ಲ. "ಒಂದು ಸಾರಿ ಕಳ್ಳನಾದವನಿಗೆ ಶಿಕ್ಷೆ ಕೊಟ್ಟೆವಲ್ಲ. ಆದರೆ ಇವನು ಮತ್ತೆ ಕಳವನ್ನೇ ಮಾಡಿದನಲ್ಲಾ. ಆ ಶಿಕ್ಷೆ ಇವನನ್ನು ತಿದ್ದಲಿಲ್ಲವೆ? ಹಾಗಾದರೆ ಆ ಶಿಕ್ಷೆಯ ಕ್ರಮದಲ್ಲಿ ಏನೋ ದೋಷವಿರಬೇಕಲ್ಲವೆ? ಇದಕ್ಕೆ ಪರಿಹಾರ ಯಾವುದು? ಈ ಸಲ ಶಿಕ್ಷೆಯನ್ನು ಮತ್ತೆ ಹೆಚ್ಚುಪಡಿಸುವುದೇಯೆ? "ಹಾಗಾದರೆ ಇದಕ್ಕೆ ಕೊನೆ ಎಲ್ಲಿ" ಇದನ್ನು ಕುರಿತು ಒಬ್ಬ ನ್ಯಾಯಾಧಿಪತಿಯಾದರೂ ಯೋಚಿಸಿದರೆ, ಮೇಲಧಿಕಾರಿಗಳ ದೃಷ್ಟಿಯನ್ನು ಎಳೆದರೆ, ಖೈದಿಗಳಿಗೆ ಒಳ್ಳೆಯದಾದೀತು. ಹಾಗೆ ಬರೆಯುವ ಧೈರ್ಯವುಳ್ಳ ನ್ಯಾಯಾಧಿಪತಿಗಳು ಇಲ್ಲ. ಹಾಗೂ ಒಬ್ಬಿಬ್ಬರು ಬರೆದರೆ, ಅವರಿಗಿಂತ ಹೆಚ್ಚು ಸಂಬಳ ತೆಗೆದುಕೊಳ್ಳುವ ಮೇಲಿನ ಪ್ರಾಜ್ಞರು "ಇದು ತಲೆ ಹರಟೆ. ಕಾನೂನಿಗೆ ಅನುಸಾರವಾಗಿ ಶಿಕ್ಷೆ ಕೊಡು" ಎನ್ನುತ್ತಾರೆ.

ಕೇಂದ್ರ ಕಾರಾಗಾರದಲ್ಲಿ ಶಿಕ್ಷೆ ಅನುಭವಿಸುತ್ತಿರುವ ಕಳ್ಳರನ್ನು ನೋಡಿದರೆ ಅವರ ವಿಧವಿಧವಾದ ಸ್ವಭಾವ ಗೊತ್ತಾಗುವಂತೆ, ಆ ಕಳ್ಳರನ್ನು ಶಿಕ್ಷಿಸಿರುವ ತೀರ್ಪಿನಿಂದ ಆಯಾ ನ್ಯಾಯಾಧಿಪತಿಗಳ ಮನೋಭಾವಗಳೂ ಗೊತ್ತಾಗುತ್ತವೆ. ನ್ಯಾಯಾಧಿಪತಿಗಳಲ್ಲಿ "ಕಳ್ಳರೇ ಒಂದು ಜಾತಿ. ಅವರನ್ನು ಎಂದಿಗೂ ತಿದ್ದುವುದಕ್ಕೇ ಆಗುವುದಿಲ್ಲ" ಎನ್ನುವವರು ಎಷ್ಟು ಜನ; ಊಹನಾಶಕ್ತಿ ಇಲ್ಲದವರೂ ಮನುಷ್ಯ ಸ್ವಭಾವವನ್ನೇ ಅರಿಯದವರೂ ಎಷ್ಟು ಜನ; ದಯೆ ಎಂಬುದು ಹೃದಯವನ್ನು ಮುಟ್ಟ

ದವರು ಎಷ್ಟು ಜನ; ಮಕ್ಕಳು ಇಲ್ಲದಿರುವವರು ಎಷ್ಟು ಜನ? ತೀರ್ಪು ಗಳಿಂದ ಕಳ್ಳರ ಯೋಗ್ಯತೆಗಿಂತ ಹೆಚ್ಚಾಗಿ ನ್ಯಾಯಾಧಿಪತಿಗಳ ಯೋಗ್ಯತೆ ಗೊತ್ತಾಗುವುದು. ಒಬ್ಬನು 8 ಮನೆಯಲ್ಲಿ 8 ಚೊಂಬುಗಳನ್ನು ಕದ್ದ. ಪೋಲೀಸಿನವರು ಎಲ್ಲವನ್ನೂ ಸೇರಿಸಿ ಒಂದು ಮೊಖದ್ದಮೆ ಹೂಡಬಹು ದಾಗಿದ್ದಿತು ಅವರಿಗೆ ಕಳವನ್ನು ಪತ್ತೆಮಾಡಿದ ಸಂಖೆ ಹೆಚ್ಚಾಗಿ ಬೇಕಾ ಗಿದ್ದಿತೇನೋ. ಅವರು 8 ಮೊಖದ್ದಮೆ ಹೂಡಿದರು. ನ್ಯಾಯಾಧೀಶರು ಎಂಟು ಮೊಖದ್ದಮೆಗಳಿಗೂ 8 ತಿಂಗಳು, (ಒಂದೊಂದಕ್ಕೆ ಒಂದೊಂದು ತಿಂಗಳು, ಒಂದಾದ ಮೇಲೆ ಒಂದರಂತೆ) ಕೊಟ್ಟರು. ಗಣಿತದ ಲೆಕ್ಕ ಸರಿಯಾಗಿದೆ. ನಿಧಾನವಾಗಿ ವಿಚಾರಿಸಿದುದರಲ್ಲಿ ಈ ನ್ಯಾಯಾಧೀಶರು ವಿದ್ಯಾರ್ಥಿ ದೆಸೆಯಿಂದಲೂ ಗಣಿತದಲ್ಲಿ ಗಟ್ಟಿಗರೆಂದು ಗೊತ್ತಾಯಿತು. ನಾಲ್ಕು ಜನ ದೇವಸ್ಥಾನದಲ್ಲಿ 12 ರೂಪಾಯಿ ಬೆಲೆ ಬಾಳುವ ಸಾಮಾನು ಕದ್ದರು. ನ್ಯಾಯಾಧೀಶರು ಒಳ್ಳೆಯ ಭಗವದ್ಭಕ್ತರು. ಒಬ್ಬೊಬ್ಬರಿಗೆ ಮೂರು ತಿಂಗಳು ಕಠಿಣ ಶಿಕ್ಷೆ ವಿಧಿಸಿದರು. ಒಬ್ಬ ನ್ಯಾಯಾಧೀಶರು ತೋಟದಲ್ಲಿ ಎಳನೀರು ಕದ್ದು ಕೆಡವಿ ಕುಡಿದವನಿಗೆ 3 ತಿಂಗಳು ಶಿಕ್ಷೆ ವಿಧಿ ಸಿದರು. ಒಂದು ಸಲ ಒಬ್ಬನ ಮೇಲೆ ಕಳುವಿನ ಅಪಾದನೆ ಹೊತ್ತರೆ ಸಾಕು. ಎರಡನೆಯ ಸಲ ಅವನ ಮೇಲೆ ಸರಿಯಾದ ಸಾಕ್ಷಿ ರುಜುವಾತು ಗಳು ಇಲ್ಲದಿದ್ದರೂ ಅವನಿಗೆ ಮೊದಲಿಗಿಂತ ಹೆಚ್ಚು ಶಿಕ್ಷೆ ಕೊಟ್ಟುಬಿಟ್ಟರೆ ತಮ್ಮ ಜವಾಬ್ದಾರಿ ತೀರಿತೆಂದು ನ್ಯಾಯಾಧಿಪತಿಗಳು ತಿಳಿದಿರುತ್ತಾರೆ. ಹದಿನೈದು ವರುಷದ ಒಬ್ಬ ಹುಡುಗನಿಗೆ ಎರಡು ಶರಟು ಕದ್ದುದಕ್ಕೆ ಎರಡು ಮೊಖದ್ದಮೆಯಲ್ಲಿ ನ್ಯಾಯಾಧೀಶರು ಮೂರು ತಿಂಗಳು ಸಜ ಕೊಟ್ಟರು. ವಿಚಾರಿಸುವುದರಲ್ಲಿ ನ್ಯಾಯಾಧೀಶರಿಗೆ ಮಕ್ಕಳು ಇಲ್ಲವೆಂದು ತಿಳಿಯಿತು.

ಎಲ್ಲಕ್ಕಿಂತ ಹೆಚ್ಚಾಗಿ ನಮ್ಮ ಸೆರೆಮನೆಗಳಲ್ಲಿ, ಕಣ್ಣಿಗೆ ಬೇನೆ ಕರುಳಿನ ಕಪ್ಪಾಗಿರುವುದು ಕಳ್ಳ ಮಕ್ಕಳು. ಈ ಮಕ್ಕಳಲ್ಲಿ 8 ವರುಷದಿಂದ 15-16 ವರುಷದವರು ಉಂಟು. ಒಬ್ಬ ಹುಡುಗ ಒಂದು ಫೌಂಟನ್‌ಪೆನ್ ಕದ್ದ; ಜೇಬಿನಲ್ಲಿದ್ದ ದುಡ್ಡಿನ ಚೀಲ ಕದ್ದ. ಒಬ್ಬ ಒಂದು ಟೋಪಿ ಕದ್ದ. ಬೀಡಿ ಕಟ್ಟು ಕದ್ದ. ಬೈಸ್ಕಲ್ ಲ್ಯಾಂಪು ಕದ್ದ. ಈ ಸಣ್ಣ ಮಕ್ಕಳನ್ನು ತಿದ್ದಲು ನಮ್ಮ ಸೆರೆಮನೆಗಳಲ್ಲಿ ಏನೂ ಅವಕಾಶವಿಲ್ಲ. ಕುರಿಗಳನ್ನು

ಕೂಡುವಂತೆ ಅವರನ್ನು ಒಂದು ಬ್ಯಾರಕ್‌ನಲ್ಲಿ ಕೂಡಿ, ಅವರ ಮುಂದೆ ಗಂಟಾದ ಒಂದು ಮುಂಕರಿ ಕುರಿಯ ತುಪಟ ಸುರಿದು, ನೋಡಿದರೆ ಯಮನಂತಿರುವ ಒಬ್ಬ ವಾರ್ಡರ್ ಬಾಗಿಲಿನಲ್ಲಿ ಕಾವಲು ಕೂರುತ್ತಾನೆ. ಆ ಬಾಲಕರಿಗೆ ಆಟ ಪಾಟಗಳಾಗಲಿ ಗಾಳಿ ಸಂಚಾರವಾಗಲಿ ಇಲ್ಲ. ಆ ಬಾಲಕರು ಕುರಿ ತುಪಟ ಬಿಡಿಸುವುದು ಯಾರಿಗೂ ಏನೂ ಪ್ರಯೋಜನ ಏಲ್ಲ. ಆ ತುಪಟ ಶುದ್ಧ ಗಂಟು. ಹುಡುಗರನ್ನು ಸುಮ್ಮನೆ ಕೂರಿಸಿರಬಾರದು ಎಂಬ ನಿಯಮಕ್ಕಾಗಿ ಹುಡುಗರ ಮುಂದೆ ಆ ಗಂಟನ್ನು ಹಾಕುತ್ತಾರೆ. ಸ್ವಾಭಾವಿಕವಾಗಿ ಬಾಲಕರಿಗೆ ಕೈಯ್ಯಲ್ಲಿ ಕುರಿಯ ತುಪಟ ಇರುವಾಗಲೇ ನಿದ್ರೆ ಬರುತ್ತದೆ. ಅವು ತೂಕಡಿಸುತ್ತವೆ. ಕೆಲವು ತುಪಟದ ಗುಡ್ಡೆಯ ಸುತ್ತ ನೆಲದ ಮೇಲೆಯೇ ಮಲಗಿಕೊಳ್ಳುತ್ತವೆ. ವಾರ್ಡರ್ ಬಂದು ಒಂದು ಕೊಟ್ಟು ಎಬ್ಬಿಸುತ್ತಾನೆ. ತಾಯಿಯ ತೊಡೆಯ ಮೇಲೆ ದಿವಸಕ್ಕೆ ಹತ್ತುಸಲ ತಿಂಡಿ ತಿನ್ನುತ್ತಾ ಓಡಾಡುತ್ತಿರಬೇಕಾದ ಮಕ್ಕಳು ಅವು. ಸ್ವಾಭಾವಿಕವಾದ ಜೇಷ್ಟೆಯ ಬುದ್ಧಿಯಿಂದ ಒಂದು ಕಳವು ಮಾಡುತ್ತವೆ. ನಮ್ಮ ಮಕ್ಕಳು ನಮ್ಮ ಮನೆಯಲ್ಲಿ ನಾವು ಜೇಬಿನಲ್ಲಿಟ್ಟಿರುವ ದುಡ್ಡನ್ನು ಕದಿಯುತ್ತವೆ. ದೊಡ್ಡವರಾದವರೂ ಒಂದಿಲ್ಲೊಂದು ರೂಪದಲ್ಲಿ ಕದಿಯುತ್ತಲೇ ಇರುತ್ತಾರೆ. ಆದರೆ ನಮ್ಮ ಮಕ್ಕಳನ್ನು ನಾವು ಪೋಲೀಸಿಗೆ ಕೊಡುತ್ತೇವೆಯೆ? ಆದರೆ ಮತ್ತೊಬ್ಬರ ಮಕ್ಕಳನ್ನು ಹಿಡಿದುಕೊಡುತ್ತೇವೆ.

ನಮ್ಮ ಸೆರೆಮನೆಗಳಲ್ಲಿ ಮಕ್ಕಳನ್ನು ತಿದ್ದಲು ಯಾವ ಸೌಕರ್ಯಗಳೂ ಇಲ್ಲ. ಅಲ್ಲಿಯ ಅಧಿಕಾರಿಗಳಿಗೆ ಆ ಭಾವನೆಯೇ ಇಲ್ಲ. ಹುಡುಗರನ್ನು ಸೆರೆಗೆ ಕಳುಹಿಸಿದರೆ ತಮ್ಮ ಜವಾಬ್ದಾರಿ ತೀರಿತೆಂದು ನ್ಯಾಯಾಧೀಶರು ನೆನೆಸುತ್ತಾರೆ; ಅವರನ್ನು ಬ್ಯಾರಕ್‌ನಲ್ಲಿ ಕೂಡಿಕೊಂಡಿದ್ದು ವಾಯಿದೆಯಾದನಂತರ ಬಿಡುಗಡೆ ಮಾಡಿದರೆ, ತಮ್ಮ ಜವಾಬ್ದಾರಿ ತೀರಿತೆಂದು ಸೆರೆಮನೆಯ ಅಧಿಕಾರಿಗಳು ಭಾವಿಸುತ್ತಾರೆ. ಪ್ರತಿಯೊಬ್ಬ ಕಳ್ಳ ಮಗುವಿನ ಮನಸ್ಸನ್ನೂ ಪರೀಕ್ಷಿಸಿ, "ಈ ದೌರ್ಬಲ್ಯ ಅದಕ್ಕೆ ಇರಲು ಕಾರಣವೇನು? ಬಾಕಿ ರೋಗದಂತೆ ಇದೂ ಒಂದು ರೋಗ. ಇದನ್ನು ಈಗಲೇ ಗುಣಪಡಿಸದಿದ್ದರೆ ಮುಂದೆ ಸಮಾಜದ ಒಂದು ಅಂಗವೇ ಊನವಾಗುವುದು; ಈ ಸೆರೆವಾಸವನ್ನು ತಿದ್ದುಪಡಿಯ ಪಾಠಶಾಲೆ ಮಾಡಬೇಕು" ಎಂಬ ಭಾವ

ನಮ್ಮ ಸರ್ಕಾರಕ್ಕೆ ಬರುವವರೆಗೆ ಸೆರೆಮನೆಗಳ ಸುಧಾರಣೆಯಾಗುವುದಿಲ್ಲ. ಹತ್ತು ವರುಷ ವಯಸ್ಸಾಗುವ ವೇಳೆಗೆ ಮೂರು ನಾಲ್ಕು ಸಲ ಸೆರೆಗೆ ಬಂದ ಮಕ್ಕಳಿದ್ದಾರೆ. ಒಂದು ಕಡೆ ಫಾಸಿ; ಮತ್ತೊಂದೆಡೆ ಬಂಕೋಲು, ಇನ್ನೊಂದು ಕಡೆ ನಿಲುಬೇಡಿ ನಾಡಾಬೇಡಿ ಛಡಿ ಏಟು; ಮತ್ತೊಂದು ಕಡೆ ರಾಗಿ ಕಲ್ಲು, ಕಲ್ಲು ಒಡೆಯುವುದು ಸುತ್ತೆಲ್ಲಾ ಪಂಚರಂಗಿ ಕಳ್ಳರು. ಬೀಳುವ ರೋಗದಿಂದ ಬಿದ್ದಲ್ಲಿ ಬಿದ್ದು ಅರಚುತ್ತಿರುವ ಕಳ್ಳರು. ಬಾಗಿಲಿನಲ್ಲಿ ಯಮದೂತರಂತಹ ಕಾಕಿ ಬಟ್ಟೆ ವಾರ್ಡರ್. ಈ ನರಕದಲ್ಲಿ ಒಂದು ಮೂಲೆಯ ವಾರ್ಡ್‌ನಲ್ಲಿ ಗಡಗಡನೆ ನಡುಗುತ್ತಾ ಬಿದ್ದಿರುವ ಈ "ಕಳ್ಳ ಮಕ್ಕಳು" ಗುಲಾಮಗಿರಿಯಲ್ಲಿರುವ ದೇಶಕ್ಕೆ ಎಲ್ಲಾ ಒಳ್ಳೆಯ ಗುಣಗಳೂ ನಾಶವಾಗುವುದೆಂಬುದು ನಿಶ್ಚಯ. ನಮ್ಮ ಕ್ರೌರ್ಯ ಸಹ ಹೇಡಿಯ ಕ್ರೌರ್ಯವಾಗಿದೆ. ಮಕ್ಕಳ ಮೇಲೆ ಸಹ ಸೇಡು ತೀರಿಸಿಕೊಳ್ಳುತ್ತೇವೆ. ದೂರದೃಷ್ಟಿ ಭಾವನಾ ಪ್ರಧಾನವಾದ ಸರ್ಕಾರ ಬೇಕು. "ಈಗಲೇ ಕೆಲಸ ಜಾಸ್ತಿ. ಇನ್ನೆಷ್ಟು ನೋಡಲಿ". ಎನ್ನುವ "ತಿಂದು ಉಂಡು ಮದನಂಗೆ ಆಳಾದ" ಸರ್ಕಾರದಿಂದ ಈ ಸೂಕ್ಷ್ಮ ಪ್ರಶ್ನೆ ಒಗೆ ಹರಿದೀತೆ?

ಈ ಸೆರೆಮನೆಯಲ್ಲಿ ಶಿಕ್ಷೆ ಯಾವಾಗಲೂ ಹೀಗೆ ನಡೆಯುತ್ತಲೇ ಇದ್ದರೂ, ಜನ ಮಾಡುವ ತಪ್ಪು ಮಾಡುತ್ತಲೇ ಇದ್ದಾರೆ. ಸೆರೆಮನೆ ಯಾವಾಗಲೂ ತುಂಬಿಯೇ ಇರುತ್ತದೆ. ಆದುದರಿಂದ ಈ ತಪ್ಪು ಮತ್ತು ಶಿಕ್ಷೆ ಎಂಬ ಮೂಲ ಅಭಿಪ್ರಾಯವೇ ತಪ್ಪು ಇರಬಹುದೆಂಬುದು ನಮ್ಮ ವರಿಗೆ ಹೊಳೆದೇ ಇಲ್ಲ. "ತಪ್ಪು ಮಾಡಿದವನನ್ನು ಸೆರೆಗೆ ಕೂಡು". ಇದಿಷ್ಟೇ ನಮ್ಮ ಮಾರ್ಗ. ಫ್ರಾಂಕ್ ಕ್ರೇನ್ ಎಂಬ ಮನಶ್ಶಾಸ್ತ್ರಜ್ಞರು, ಅನೇಕ ವರುಷ ಇಂಗ್ಲೆಂಡಿನಲ್ಲಿ ಸೆರೆಮನೆಯ ಮುಖ್ಯಾಧಿಕಾರಿಯಾಗಿದ್ದ ಅನುಭವಸ್ಥರು. ಮನುಷ್ಯನನ್ನು ಸೆರೆಯಲ್ಲಿಡುವುದರಿಂದ ಏನಾದರೂ ಪ್ರಯೋಜನವಾದೀತೆ ಎಂಬುದನ್ನು ಕುರಿತು ಹೀಗೆ ಹೇಳಿದ್ದಾರೆ.

"ಹೊಡೆಯದೆ ಇದ್ದರೆ ಮಗು ಕೆಡುತ್ತೆ ಎಂಬುದಾಗಿ ಹಿಂದಲವರು ಹೇಳಿದರು. ಅಂದಿನಿಂದ ಕೆಟ್ಟದ್ದಕ್ಕೆಲ್ಲಾ ಶಿಕ್ಷೆಯೇ ಸ್ವಾಭಾವಿಕವಾದ ಮತ್ತು ಸಕಾರಣವಾದ ಪ್ರತೀಕಾರ ಎಂಬುದನ್ನು ನಾವು ಒಪ್ಪಿಕೊಂಡು ಬಂದಿದ್ದೇವೆ.

"ಒಳ್ಳೆಯದನ್ನು ಪ್ರೋತ್ಸಾಹಿಸಬೇಕಾದರೆ ಬಹುಮಾನ ಕೊಡು.

ಕೆಟ್ಟದ್ದನ್ನು ಅಮುಕಬೇಕಾದರೆ ಅದನ್ನು ಬಡಿ. ಇದು ಸಾಧಾರಣ ವ್ಯವಹಾರ ಜ್ಞಾನ. ಆದರೆ ಅದರಲ್ಲಿ ಒಂದು ಕುಂದಕವಿದೆ. ಅದು ನಿಜವಲ್ಲ.

" ಅದರಲ್ಲಿ ಒಂದು ಮಾತ್ರವೇ ಅಲ್ಲ. ಅನೇಕ ಕುಂದಕಗಳಿವೆ. ಹಾಗೆ ನಡೆಯುವುದಿಲ್ಲ ಎಂಬುದು ಮಾತ್ರವೇ ಅಲ್ಲ. ಹಿಂದೆ ಹಾಗೆ ಆಗಲಿಲ್ಲ; ಈಗ ಆಗುವುದಿಲ್ಲ. ಮುಂದೆಯೂ ಆಗುವುದಿಲ್ಲ.

" ಜಗತ್ತು ಪ್ರಾರಂಭವಾದಂದಿನಿಂದ ಮನುಷ್ಯನಲ್ಲಿರುವ ಒಳ್ಳೆಯ ಗುಣ ನೀತಿ ನಡತೆ ಇವುಗಳ ಸ್ವಲ್ಪ ಭಾಗ ಕೂಡ ಬಹುಮಾನದ ಆಸೆಯಿಂದ ಉಂಟಾದುದಲ್ಲ.

" ಜಗತ್ತು ಪ್ರಾರಂಭವಾದಂದಿನಿಂದ, ಮನುಷ್ಯ ಯಾವ ಯಾವ ಕೆಟ್ಟ ಕೆಲಸಗಳನ್ನು ಮಾಡದೆ ಬಿಟ್ಟಿದ್ದಾನೆಯೋ, ಅವೊಂದೂ ಛಡಿ ಏಟಿನ ಭಯದಿಂದ ಬಿಟ್ಟುವಲ್ಲ.

" ಯಾವುದೋ ಒಂದು ಕಡೆ ಒಂದು ಕೆಟ್ಟ ಕೆಲಸ ಛಡಿಯ ಭಯದಿಂದ ತಪ್ಪಿರಬಹುದು. ಆದರೆ ಅದು ಬೇರೆ ರೂಪದಲ್ಲಿ ಮತ್ತೆಲ್ಲಿಯೋ ಹೊರಬರುತ್ತದೆ.

" ಕಿವಿ ನೋವು ಇರುವವರನ್ನು ನಾವು ಹೊಡೆಯುವುದಿಲ್ಲ. ಶಿಡುಬು ಎದ್ದಿರುವವನನ್ನು ಸೆರೆಮನೆಗೆ ಕಳಿಹಿಸುವುದಿಲ್ಲ. ರೋಗ ಅಪಾಯವಾಗಿದ್ದರೆ ರೋಗಿಯನ್ನು ಬೇರೆ ಇಡುತ್ತೇವೆ. ಅಂತೂ ಹೇಗೊ ಒಳ್ಳೆಯ ಬುದ್ಧಿವಂತಿಕೆಯ ದಾರಿಯಿಂದ ಗುಣಪಡಿಸಲು ಪ್ರಯತ್ನಿಸುತ್ತೇವೆ.

" ತಪ್ಪು ಮಾಡಿದವನನ್ನು ಶಿಕ್ಷಿಸಿದುದರಿಂದ ಯಾವಾಗಲೂ ತಪ್ಪು ಮಾಡುವ ಚಾಳಿ ಗುಣವಾಗಲಿಲ್ಲ. ಯಾವ ಜೈಲು ವಾರ್ಡರ್ ಬೇಕಾದರೂ ನಿಮಗೆ ಹೇಳುತ್ತಾನೆ. ಜೈಲು ಇರುವುದು ಖೈದಿಗಳನ್ನು ತಿದ್ದಿ ಸುಧಾರಣೆ ಹೂಡುವುದಕ್ಕೆ ಅಲ್ಲ ಅವರನ್ನು ಶಿಕ್ಷಿಸಲು ಎಂದು.

" ಸೆರೆಮನೆಗಳೇ ಇರಬಾರದು. ಸೆರೆಮನೆಗಳೆಲ್ಲಾ ವೈದ್ಯಶಾಲೆಗಳಾಗಿ ಬದಲಾವಣೆ ಹೊಂದಬೇಕು.

" ಸೆರೆಮನೆಗಳ ವ್ಯವಸ್ಥೆ ಪೋಲೀಸ್ ಮತ್ತು ಜೈಲು ಅಧಿಕಾರಿಗಳ ವಶದಲ್ಲಿರಬಾರದು. ಆದರೆ ಮನಸ್ಸಿನ ರೋಗಗಳನ್ನು ಚೆನ್ನಾಗಿ ಅರಿತ ನಿಪುಣರಾದ ವೈದ್ಯರ ವಶದಲ್ಲಿರಬೇಕು.

" ಈ ಪ್ರಶ್ನೆಯನು ಕುರಿತು ಸಮಾಜ ನಡೆಯುತ್ತಿರುವುದು ಶುದ್ಧ

ತಪ್ಪು. ಎಲ್ಲಾ ವಿಧವಾದ ಶಿಕ್ಷೆಗಳೂ ತಪ್ಪು. ಯಾಕೆಂದರೆ ಅವುಗಳಿಂದ ಏನೂ ಒಳ್ಳೆಯದಾಗುವುದಿಲ್ಲ.

"ಮಾಡಿದ ತಪ್ಪಿಗೆ ಹುಡುಗರನ್ನೋ ದೊಡ್ಡವರನ್ನೋ ಶಿಕ್ಷಿಸುವುದು, ನಿಮಗೆ ಕೋಪ ಬರುವಂತೆ ಮಾಡಿದ ಕುದುರೆಯ ಹೊಟ್ಟೆಗೆ ಒದ್ದಂತೆ. ಅಥವ ಇಟ್ಟಿದ್ದ ಹಾರ್ಮೋನಿಯಂ, ಪಿಯಾನೋ ಪೆಟ್ಟಿಗೆಯ ಮೇಲೆ, ಕಣ್ಣು ಕಾಣದೆ ಬಿದ್ದು ಆ ತಪ್ಪಿಗೆ ಕೊಡಲಿಯಿಂದ ಆ ಪೆಟ್ಟಿಗೆ ಒಡೆದಂತೆ.

"ನಿಮ್ಮ ಸೇಡು ಏನೋ ಅದರಿಂದ ತೀರುತ್ತೆ. ಅಷ್ಟೆ.

"ಗುಣಪಡಿಸು. ನೋಯಿಸಬೇಡ. ಶಿಕ್ಷಿಸಬೇಡ. ಇದೇ ದಾರಿ.

"ಆದರೆ ಈ ನೀತಿಯನ್ನು ಆಕ್ಷೇಪಿಸುವವರು ಹೀಗೆ ಹೇಳುತ್ತಾರೆ. "ನೋವಿನ ಭಯ ಸುಖದ ಆಸೆ ಇವೇ ಪ್ರಾರಂಭದ ಶಿಕ್ಷಕರಲ್ಲವೆ? ಮಕ್ಕಳು ಹಾಗೆಯೇ ಕಲಿಯುವುದಿಲ್ಲವೆ?

"ಹೌದು. ಅದು ಮುಖ್ಯ ತತ್ವ. ಆದರೆ ಅದು ಪಶುಗಳಿಗೆ ಮಾತ್ರ ಅನ್ವಯಿಸುತ್ತದೆ. ಮನುಷ್ಯರೂ ಪಶುಗಳಾಗಿರುವವರೆಗೆ ಆ ನಿಯಮ ಮನುಷ್ಯರಿಗೂ ಅನ್ವಯಿಸುತ್ತದೆ.

"ನಾಗರೀಕತೆಯ ಇಂದಿನ ಅತಿ ಸೂಕ್ಷ್ಮವಾದ ಮತ್ತು ವಿಷಮವಾದ ಪರಿಸ್ಥಿತಿಯಲ್ಲಿ ಈ ನಿಯಮ ಬಹು ಅಸಮರ್ಪಕ. ತಪ್ಪು ಮಾಡದಿರಲು ಕಾರಣ ಪೋಲೀಸಿನವರ ಭಯ ಮಾತ್ರವಾದರೆ ಜನ ನಾಳೆ ಇಷ್ಟು ಹೊತ್ತಿನೊಳಗಾಗಿ ನಗರವನ್ನು ಸುಟ್ಟು ಅದನ್ನು ಜನರ ರಕ್ತದಿಂದ ಆರಿಸುತ್ತಿದ್ದರು.

"ನಮ್ಮನ್ನು ನಿಜವಾಗಿಯೂ ಸಂರಕ್ಷಿಸುತ್ತಿರುವುದು ಕಣ್ಣಿಗೆ ಕಾಣದ ಪೋಲೀಸ್; ಅಂದರೆ ಒಳ್ಳೆಯ ಮನಸ್ಸು; ಆತ್ಮ ಸಾಕ್ಷಿ; ಮರ್ಯಾದೆ; ಆತ್ಮಗೌರವ, ಸರಿಯಾದ ಕೆಲಸಗಳನ್ನೇ ಮಾಡಬೇಕೆಂಬ ಭಾವನೆ. ಈ ಭಾವನೆಗಳು ಜನಗಳಲ್ಲಿರುವುದರಿಂದ ಬೀದಿಗಳಲ್ಲಿ ಸುರಕ್ಷಿತವಾಗಿ ಸುಖವಾಗಿ ತಿರುಗಾಡಬಹುದು.

"ಕೆಲವು ಕಾಕಿ ಅರಿವೆ, ತಮ್ಮ ಸುತ್ತಾ ನಿಂತಿರುವುದರಿಂದಲೇ ತಾವು ಸುರಕ್ಷಿತವಾಗಿರುವೆವೆಂದು ತಿಳಿಯುವವರು ಮೂರ್ಖರು. ಪ್ರತಿಯೊಬ್ಬರ ಹೃದಯದಲ್ಲಿಯೂ ಇರುವ ಯಾವುದೋ ಒಂದು ಮಹತ್ತಾದ ಉತ್ತಮ ಆದರ್ಶ ನಮ್ಮನ್ನು ರಕ್ಷಿಸುತ್ತಿದೆ.

"ಪ್ರಾಣಿಗಳನ್ನು ಭಯದಿಂದ ಆಳಬಹುದು. ಕಾಡು ಜನರನ್ನು ಭಯದಿಂದ ದಾಸ್ಯದಲ್ಲಿ ಇಡಬಹುದು. ಆದರೆ ಭಯ ನಾಗರೀಕತೆಯನ್ನು ಎಂದೂ ಸಂರಕ್ಷಿಸಲಾರದು.

"ನಮ್ಮ ನಿಜವಾದ ಪೋಲೀಸು ನಮ್ಮ ಪಾಠಶಾಲೆಗಳಲ್ಲಿರುವ ಉಪಾಧ್ಯಾಯರು; ಚರ್ಚ್‌ಗಳಲ್ಲಿರುವ ಬೋಧಕರು; ಎಲ್ಲರಿಗಿಂತ ಹೆಚ್ಚಾಗಿ ಮನೆಯಲ್ಲಿರುವ ತಾಯಂದಿರು. ಇವರೇ ಆತ್ಮಗಳನ್ನು ಆಳುವವರು. ನಾವೆಲ್ಲಾ ಆತ್ಮಗಳು. ಮಂಗಗಳಲ್ಲ.

"ನ್ಯೂಯಾರ್ಕಿನ ಜನರು ಸ್ವಾಭಾವಿಕವಾಗಿ "ಪ್ರಮಾಣಿಕರಾಗಿರುತ್ತೇವೆ ಕದಿಯುವುದಿಲ್ಲ ಲೂಟಿ ಮಾಡುವುದಿಲ್ಲ ಸ್ತ್ರೀಯರ ಮೇಲೆ ಅತ್ಯಾಚಾರ ಮಾಡುವುಧಿಲ್ಲ" ಎಂದು ದೃಢ ಮನಸ್ಸು ಮಾಡಿಕೊಳ್ಳದಿದ್ದರೆ, ಅಮೆರಿಕದ ಪೂರ್ತಾ ಸೈನ್ಯ ಪ್ರಯತ್ನಿಸಿದರೂ ಅದು ಒಂದು ವಾರದಲ್ಲಿ ನರಕವೇ ಆಗುವುದು

"ತಪ್ಪನ್ನು ನಿಲ್ಲಿಸುವುದಕ್ಕೆ ಮಾರ್ಗ, ಶಿಕ್ಷೆ; ಇದು ಲೋಕದ ವ್ಯವಹಾರ. ಆದರೆ ಪ್ರಪಂಚದಲ್ಲಿ ನಡೆದಿರುವ ದೊಡ್ಡ ದೊಡ್ಡ ತಪ್ಪುಗಳೆಲ್ಲಾ ಈ ವ್ಯವಹಾರಜ್ಞಾನ ಎಂಬುದರಿಂದಲೇ.

"ತಪ್ಪಿತಸ್ತರಿಗೆ ನಾವು ಹಿಂದೆ ಚಿತ್ರ ಹಿಂಸೆ ಮಾಡುತ್ತಿದ್ದೆವು. ಅದರಿಂದ ಪ್ರಯೋಜನವಿಲ್ಲ ಎಂಬುದು ಚೆನ್ನಾಗಿ ಗೊತ್ತಾಗಿದೆ. ಇನ್ನು ಸೆರೆಮನೆ ಮರಣದಂಡನೆ ಇವುಗಳಿಂದ ಶಿಕ್ಷಿಸುತ್ತಿದ್ದೇವೆ. ಅದೂ ವ್ಯರ್ಥ ಎಂಬುದನ್ನು ತಿಳಿಯುವ ವಿವೇಕ ನಮ್ಮಲ್ಲಿ ಇನ್ನೂ ಉಂಟಾಗಿಲ್ಲ.

"ಹಾಗಾದರೆ ಏನು ಮಾಡಬೇಕು. ತಪ್ಪಿತಸ್ತನನ್ನು ಸುಮ್ಮನೆ ಬಿಟ್ಟುಬಿಡಬೇಕೆ?"

ನಾನು ಉತ್ತರ ಕೊಟ್ಟಿದ್ದೇನೆ. "ಸೆರೆಮನೆಗಳನ್ನೆಲ್ಲಾ ವೈದ್ಯ ಶಾಲೆಗಳಾಗಿ ಮಾಡಿರಿ. ಗುಣಪಡಿಸಿ. ಸಹಾಯ ಸಹಾನುಭೂತಿ ಕೊಡಿ. ಆದರೆ ಬೆಂಕಿಯನ್ನು ಪೆಟ್ರೋಲಿನಿಂದ ಆರಿಸುವ ಪ್ರಯತ್ನ ಮಾಡಬೇಡಿ".

---

# ೫೫. ಬಿಳಿಯ ಕಳ್ಳ ಕಳ್ಳನಲ್ಲ

ಈ ಸಂದರ್ಭದಲ್ಲಿ ಕೇಂದ್ರ ಕಾರಾಗಾರದಲ್ಲಿ ನಡೆದ ಒಂದು ಕಳ ವಿನ ವಿಷಯ ನಮೂದಿಸಬೇಕು. ರಾತ್ರಿಯ ಹೊತ್ತು ಡಿಟೆನ್ಯುಗಳ ಬ್ಯಾರಕ್‌ಗಳನ್ನು ಬಂದೂಕ ಸಹಿತರಾದ ಸೆರೆಮನೆಯ ವಾರ್ಡರ್‌ಗಳು ಕಾಯುತ್ತಿರುತ್ತಾರೆ. ಇವರನ್ನು ಎರಡೆರಡು ಗಂಟೆಗೆ ಒಂದೊಂದು ಸಲ ದಂತೆ ಬದಲಾಯಿಸುತ್ತಾರೆ. ಕಾವಲು ಕಾಯುವುದರಲ್ಲಿ ಇವರು ಬಹಳ ಗಟ್ಟಿಗರು! ರಾತ್ರಿಯ ಹೊತ್ತು ಕಣ್ಣು ಮುಚ್ಚದೆ ಗಸ್ತು ಹೊಡೆಯುತ್ತಿರು ತ್ತಾರೆ. ಆದುದರಿಂದಲೇ ತಪ್ಪಿಸಿಕೊಂಡು ಹೋಗುವ ಖೈದಿಗಳು ಹಗಲು ಹೊತ್ತೇ ತಪ್ಪಿಸಿಕೊಂಡು ಹೋಗುತ್ತಾರೆ! ಕ್ರಿಮಿನಲ್ ಖೈದಿಗಳ ಬಾಗಿಲು ಗಳಿಗೆಲ್ಲಾ ಬೀಗ ಹಾಕುವುದರಿಂದ ಅವರಾರೂ ಹೊರಕ್ಕೆ ಬರುವಂತೆ ಇಲ್ಲ. ಒಂದು ರಾತ್ರೆ ಎರಡು ಗಂಟೆ ಹೊತ್ತಿನಲ್ಲಿ ಒಬ್ಬ ಡಿಟೆನ್ಯುವಿನ ಪೆಟ್ಟಿಗೆ ಕಳ ವಾಯಿತು. ಆ ಡಿಟೆನ್ಯು ಹೊರಗಿನಿಂದ ಒಂದು ರುಪಾಯಿ ಖರ್ಚುಮಾಡಿ ನಾಲ್ಕು ಆಣೆ ವಿಳ್ಳೆದೆಲೆ ಅಡಕೆ ತರಿಸಿ ಪೆಟ್ಟಿಗೆಯಲ್ಲಿಟ್ಟುಕೊಂಡು ಮಾರು ತ್ತಿದ್ದ. ಆ ಪೆಟ್ಟಿಗೆಯೇ ಕಳುವಾಗಿಹೋಯಿತು. ಬೆಳಗಿನ ಜಾವ ಡಿಟೆನ್ಯು ಎದ್ದಾಗ ಪೆಟ್ಟಿಗೆ ಕಳುವಾದುದು ಗೊತ್ತಾಯಿತು. ಸೆರೆಮನೆ ಯಲ್ಲಿಯೇ ಕಳವು ಎಂಬುದನ್ನು ಅರಿತು ಜನರಿಗೆ ಆಶ್ಚರ್ಯವಾಯಿತು. ಆದರೆ ಸಾಮಾನು ಹೊರಕ್ಕೆ ಹೋಗಿಲ್ಲ ಎಂಬ ಧೈರ್ಯವಿದ್ದಿತು. ಅರ್ಧ ಗಂಟೆ ಯೊಳಗಾಗಿ ಆ ಧೈರ್ಯವೂ ಮಾಯವಾಯಿತು.

ಸೆರೆಮನೆಯ ಅಧಿಕಾರಿಗಳು ನಮಗೇನು ಗೊತ್ತು ಎಂದರು. "ನಿಮ್ಮ ವಶದಲ್ಲಿ ನಾವಿರುವಾಗ ನಮ್ಮ ಸಾಮಾನುಗಳಿಗೆ ನೀವು ಜವಾಬ್ದಾರರಲ್ಲವೇ" ಎಂದರೆ ಹೂ ಎಂದರು. ವಾರ್ಡರುಗಳೇ ಕಾವಲಿರುವಾಗ ಕದ್ದವರು ಯಾರು? ವಾರ್ಡರುಗಳು ನಾವು ಕದಿಯಲಿಲ್ಲ ಎಂದರು ಸೀತಾರಾಮು ಹೇಳುವಂತೆ ಸೆರೆಮನೆಯಲ್ಲಿ ಇರುವವರೆಲ್ಲ ಒಂದೇ ಜಾತಿ. ಬೇರೆ ಜಾತಿ ಯವರು ಬಂದರೆ ಅಲ್ಲಿ 3 ದಿನವೂ ಇರುವುದಿಲ್ಲ. ಕೆಲವರು ಕಾಕಿ ಬಟ್ಟೆ ಹಾಕಿಕೊಳ್ಳುತ್ತಾರೆ. ಕೆಲವರು ಬಿಳಿಯ ಬಟ್ಟೆ ಹಾಕಿಕೊಳ್ಳುತ್ತಾರೆ. ಒಂದೊಂದು ಸಲ ಅಲ್ಲಿಗೆ ಹೊಂದದವರು ಬೇರೆ ಯಾವುದಾದರೂ ಇಲಾಖೆ ಯಿಂದ ಬಂದು ಒಂದು ಎರಡು ದಿನ ಇದ್ದು ತಮಗೂ ಈ ಜನರಿಗೂ

ಸಂಬಂಧವಿಲ್ಲವೆಂದುಕೊಂಡು ವಿದ್ಯಾ ಇಲಾಖೆಗೋ ಇತರ ಬೇರೆ ಇಲಾಖೆಗೋ ಜಾರಿಕೊಂಡರು. ವಾರ್ಡರ್‌ಗಳ ಕೈಗೆ ಸಿಕ್ಕಿದ್ದರೆ, ದೊರೆಯುವ ಸಂಭವವಿಲ್ಲ. ಆದರೆ ಸೆರೆಮನೆಯ ಕಾವಲುಗಾರರಾದ ವಾರ್ಡರ್ ಕದ್ದಿಲ್ಲ! ಕ್ರಿಮಿನಲ್ ಖೈದಿಗಳ ಪೈಕಿ ಯಾರೋ ಕದ್ದಿರಬೇಕು ಎಂದ ಒಬ್ಬ ವಾರ್ಡರ್. ಹಾಗಾದರೆ ಕ್ರಿಮಿನಲ್ ಖೈದಿಗಳನ್ನು ಹುಡುಕಿ ಎಂದರು ಸೀತಾರಾಮು. ಸೂಪರಿಂಟೆಂಡೆಂಟರು ಅದೆಲ್ಲಾ ಸಾಧ್ಯವಿಲ್ಲದ ಮಾತು ಎಂದರು.

ಕ್ರಿಮಿನಲ್ ಖೈದಿಗಳನ್ನು ಬೀಗಹಾಕಿ ಕೂಡಿರುವಾಗ ಅವರು ಕದ್ದಿಲ್ಲವೆಂಬುದು ನಮಗೆ ಚನ್ನಾಗಿ ಗೊತ್ತಿದ್ದಿತು. ಆದರೆ ಸೆರೆಮನೆಯ ಅಧಿಕಾರಿಗಳು ಅವರನ್ನು ಹುಡುಕದಿರಲು ಕಾರಣ, ಕ್ರಿಮಿನಲ್ ಖೈದಿಗಳು ಕದಿಯುವವರಲ್ಲ ಎಂದಲ್ಲ. ಆದರೆ ಕ್ರಿಮಿನಲ್ ಖೈದಿಗಳನ್ನು ಕಂಡರೆ ಅಧಿಕಾರಿಗಳಿಗೆ ಮರಣಭಯ. ಹಿಂದೆ ಒಂದು ಸಲ ನಾವು "ಸೆರೆಮನೆ ಇರುವುದು ಖೈದಿಗಳಿಗಾಗಿಯೇ. ಅದು ಅವರ ಪಟ್ಟಣ. ಅವರ ಸಂಸ್ಥಾನ, ಅವರ ರಾಜ್ಯ. ಅಲ್ಲಿ ಸೆರೆಮನೆಯ ಅಧಿಕಾರಿ ವಾರ್ಡರ್ ಇವರು ಇರುವುದು ನೆಪಮಾತ್ರಕ್ಕಾಗಿ. ಎಂದು ಹೇಳಿದೆವು. ಆ ಮಾತು ಯಾವಾಗಲೂ ಸುಳ್ಳಾಗಿಲ್ಲ. ಸೆರೆಮನೆಯ ಆಡಳಿತ ಈಗ ಇರುವಂತೆ ಇರುವವರೆಗೆ ಇದನ್ನು ತಪ್ಪಿಸಲು ಖಂಡಿತ ಸಾಧ್ಯವಿಲ್ಲ. ಸೆರೆಮನೆಗೆ ಇಷ್ಟು ಬಾಗಿಲು, ಸೀಲು, 150 ವಾರ್ಡರುಗಳ ಕಾವಲು, ನಿಲುಬೇಡಿ ನಾಡಾಬೇಡಿ ಛಡಿ ಒಂಟಿ ಸೆರೆ, ಎಲ್ಲಾ ಇದ್ದರೂ ಖೈದಿಗಳು ತಮಗೆ ಬೇಕಾದ ಪದಾರ್ಥ ಒಳಕ್ಕೆ ತರಿಸುತ್ತಾರೆ. ಇಸ್ಪಿಟುಪ್ಯಾಕು ತರಿಸುತ್ತಾರೆ. ಅಫೀಂ ಗಾಂಜಾ ಬ್ರಾಂಡಿ ತರಿಸುತ್ತಾರೆ. ಬೀಡಿ ನಶ್ಯ ಎಲೆ ಅಡಿಕೆ ತರಿಸುತ್ತಾರೆ. ಸೆರೆಮನೆಯಲ್ಲಿ ಯಾವಾಗಲೂ ಜೂಜು ನಡೆಯುತ್ತದೆ. ನೂರಾರು ರುಪಾಯಿ ಸಿಕ್ಕುತ್ತದೆ. ಪದಾರ್ಥಗಳನ್ನು ಖೈದಿಗಳು ಯಾವ ಮಾರ್ಗದಿಂದ ತರಿಸುತ್ತಾರೋ ಅವರಿಗೇ ಗೊತ್ತು. ಒಬ್ಬ ವಾರ್ಡರ್ ಸುಮಾರು 6-7 ವರುಷಗಳಿಂದ ಯಾವಾಗಲೂ ಎಡ ಮೊಣಕಾಲಿಗೆ ದಪ್ಪವಾಗಿ ಬಟ್ಟೆ ಕಟ್ಟಿಕೊಳ್ಳುತ್ತಿದ್ದ. ಕಾಲು ವಾಯುವಿನಿಂದ ಬಾತಿದೆ ಎಂದೇ ಹೇಳುತ್ತಿದ್ದ. ಹೊಸದಾಗಿ ಬಂದ ವೈದ್ಯರು ಒಂದು ದಿನ ಇದ್ದಕ್ಕಿದ್ದಂತೆ ಅವನನ್ನು ಕರೆದು "ಎಲ್ಲಿ ಕಾಲಿನ ಕಟ್ಟು ಬಿಚ್ಚು ನೋಡುತ್ತೇನೆ" ಎಂದರು.

ವಾರ್ಡರ್ ಬೇಡಿ ಬೇಡಿ ಎಂದ. ವೈದ್ಯರು ಬಿಡದೆ ಅವನನ್ನು ನಿಲ್ಲಿಸಿ ಅವನ ಕಾಲನ್ನು ಬಿಚ್ಚಿ ನೋಡಿದರು. ವಾರ್ಡರ್ ಕಾಲಿಗೆ ಸೇರಿದಂತೆ ಒಂದು ಬ್ರಾಂದಿ ಸೀಸೆ ಇಟ್ಟು ಅದರ ಮೇಲೆ ಬಟ್ಟೆ ಕಟ್ಟಿದ್ದ. ಅದು ಒಳಗಿನ ಒಬ್ಬ ಖೈದಿಗೆ.

ಖೈದಿಗಳ ಪದಾರ್ಥಗಳನ್ನು ಹುಡುಕುವ ಧೈರ್ಯ ವಾರ್ಡರ್‌ಗಳಿಗೆ ಇಲ್ಲ. ಮೃಗಾಲಯದ ಸಿಂಹ ಹುಲಿ ಕರಡಿಗಳು ಹಸಿವಿನಿಂದ ತಮ್ಮ ಆಹಾರವನ್ನು ತಿಂದ ಕಾವಲುಗಾರರ ಮೇಲೆ ಬೀಳುವಂತೆ, ಖೈದಿಗಳು ಅಧಿಕಾರಿಗಳ ಮೇಲೆ ಬೀಳುತ್ತಾರೆ. ಅಧಿಕಾರಿಗಳು, ಸಿಂಹದ ಗುಹೆಯನ್ನು ಪ್ರವೇಶಿಸುವಂತೆಯೇ ಅವರ ಬ್ಯಾರಕ್‌ಗಳನ್ನು ಪ್ರವೇಶಿಸಬೇಕು. ಅಧಿಕಾರಿಗಳು ಆ ಸಾಹಸಕ್ಕೆ ಹೋಗುವುದೇ ಇಲ್ಲ. ಕೇಂದ್ರ ಕಾರಾಗಾರದಲ್ಲಿ ನಡೆದ ಡಿಟೆನ್ಯುವಿನ ಪದಾರ್ಥದ ಕಳವು ಪತ್ತೆಯಾಗಲಿಲ್ಲ. ಹೊರಗಿನ ಕಳ್ಳರು ಯಾರೂ ಅಲ್ಲಿ ಬರಲಿಲ್ಲ ಎಂಬುದೇ ಪತ್ತೆಯಾದ ಸಂಗತಿ.

ಗುಲಾಮಗಿರಿಯ ಮನೋಭಾವ ಸೆರೆಮನೆಯಲ್ಲಿಯೂ ನಮ್ಮನ್ನು ಕಾಡುತ್ತದೆ. ಸರ್ಕಾರ ನಮ್ಮ ಸರ್ಕಾರವೇ ಆದರೂ, ಸೆರೆಮನೆಯ ಖೈದಿಗಳಲ್ಲಿಯೂ ಬಿಳಿಯವರು ಕರಿಯವರು ಎಂಬ ವ್ಯತ್ಯಾಸ ಉಂಟು. ಬಿಳಿಯ ಕಳ್ಳ ಕರಿಯ ಕಳ್ಳನಿಗಿಂತ ಶ್ರೇಷ್ಠ. ಯಾಕೆಂದರೆ ಕರಿಯ ಕಳ್ಳ ಸೆರೆಯ ಅಧಿಕಾರಿಗಳನ್ನು ಕಂಡರೆ ಹೆದರುತ್ತಾನೆ. ಗೌರವಿಸುತ್ತಾನೆ. ಆದುದರಿಂದ ಅವನನ್ನು ತಿರಸ್ಕರಿಸಬಹುದು. ಬಿಳಿಯ ಕಳ್ಳ ಸೆರೆಯ ಅಧಿಕಾರಿಗಳನ್ನೂ ಒದೆಯುತ್ತಾನೆ. ಅವರ ಮೇಲೆ ಸಿಗರೇಟು ಎಸೆಯುತ್ತಾನೆ. ಆದುದರಿಂದ ಸೂಪರಿಂಟೆಂಡೆಂಟ್ ಮೊದಲುಗೊಂಡು ಅವನನ್ನು ಗೌರವಿಸುತ್ತಾರೆ. ಯೂರೋಪಿಯನ್‌ನು ಕಳ್ಳನಾದರೂ ಅವನಿಗೆ ಹೆಚ್ಚಿಗೆ ಗೌರವ ತೋರಿಸಬೇಕು. ಯೂರೋಪಿಯನ್ ಬ್ಯಾರಕ್ ಎಂಬುದಾಗಿ ಅವರಿಗೇ ಬೇರೆಯಾದ ಜಾಗ, ಕೊಠಡಿ, ಮಂಚ, ಮಾಂಸಾಹಾರ, ಮೊಟ್ಟೆ, ರೊಟ್ಟಿ, ಸಿಗರೇಟು,' ಪುಸ್ತಕ, ವೃತ್ತಪತ್ರ, ಇವೆಲ್ಲಾ ಕಾನೂನಿನಂತೆ ಅವನಿಗೆ ಒದಗಿಸಲ್ಪಡಬೇಕು. ಇಷ್ಟಲ್ಲದೆ ಅವನು ಬಿಳಿಯವನಾದುದರಿಂದ, ಬಿಳಿಯವರನ್ನು ಕಂಡರೆ ನಮ್ಮವರಿಗಿರುವ ಸ್ವಾಭಾವಿಕವಾದ ಭಯದಿಂದಲೇ, ಅವನು ಕೇಳಿದುದನ್ನೆಲ್ಲಾ ಒದಗಿಸಲೇಬೇಕು. ಸೆರೆಮನೆಯ ಸೂಪರಿಂಟೆಂಡೆಂಟಿಗೆ ಸಹ "ಇವನು ಖೈದಿ, ಕದ್ದವನು. ತಾನು ಸೂಪ

ರಿಂಟೆಂಡೆಂಟ್'' ಎಂಬುದು ಮರೆತುಹೋಗುತ್ತದೆ. ಅವನು ಬಿಳಿಯವ ತಾನು ಕಪ್ಪಿನವ ಎಂಬುದು ಮಾತ್ರವೇ ಅವರಿಗೆ ಗೊತ್ತು. ಬಿಳಿಯ ಖೈದಿಗೆ ಪ್ರತಿದಿನವೂ 3 ರುಪಾಯಿ ಖರ್ಚುಮಾಡು ಎಂದು ಒಂದು ಪಕ್ಷ ಬಿಳಿ ಸರ್ಕಾರ ಹೇಳಿರಬಹುದು. ಆದರೆ ಕರಿಯ ಖೈದಿಗೆ 2 ಆಣೆ 10 ಕಾಸು ಖರ್ಚುಮಾಡೆಂದು ಅವರು ನಮ್ಮ ಸರ್ಕಾರಕ್ಕೆ ಹೇಳಿಲ್ಲ. ಬಿಳಿಯುವನಿಗೆ ದಿನಕ್ಕೆ 3 ರುಪಾಯಿ ಕೊಡುವಾಗ ನಮ್ಮವನಿಗೆ ಮಾತ್ರ ಹುಳು, ಕಲ್ಲು ತುಂಬಿದ ಹಿಟ್ಟು ಮೆಣಸಿನ ನೀರು ಕೊಡುತ್ತೇವೆಯೆಲ್ಲಾ ಎಂಬುದು ಇವರಿಗೆ ಹೊಳೆದೇ ಇಲ್ಲ. ಬಿಳಿಯುವನು ಬ್ರಿಟಿಷ್ ಪ್ರಜೆ. ಅವರು ಅವನನ್ನು ರಕ್ಷಿಸುವುದು ಹಾಗೆ. ಕರಿಯುವನು ನಮ್ಮ ಪ್ರಜೆ. ನಮ್ಮವರು ನಮ್ಮನ್ನು ರಕ್ಷಿಸುವುದು ಹೀಗೆ.

ಬಿಳಿಯುವನಿಗೆ ಹೀಗೆ ದಿನಕ್ಕೆ ಮೂರು ರುಪಾಯಿ ಖರ್ಚುಮಾಡಲು ಅವನು ಮಾಡುವ ದೊಡ್ಡ ಕಳ್ಳತನಗಳೇ ಕಾರಣವಾಗಿರಬಹುದೆಂದು ನಮ್ಮ ಮಿತ್ರರಾದ ಸೀತಾರಾಮು ಹೇಳುತ್ತಿದ್ದುದು ನಿಜವೆಂದು ಕಾಣುತ್ತದೆ. ಕೇಂದ್ರ ಕಾರಾಗಾರಕ್ಕೆ ಒಂದು ಸಲ ಒಬ್ಬ ಬಿಳಿಯುವ, ಕಳ್ಳ ಬಂದ. ಅವನು ಆ ವೇಳೆಗೆ ಸುಮಾರು ಅರವತ್ತು ಸಾವಿರ ರುಪಾಯಿ ಬೆಲೆಬಾಳುವ ಚಿನ್ನವನ್ನು ಕದ್ದು ದಕ್ಕಿಸಿಕೊಂಡು ಆಗಿದ್ದಿತು. ಮುಂದೆ ಕದಿಯುವುದಕ್ಕೆ ಹೋದಾಗ ಅವನು ಸಿಕ್ಕಿಬಿದ್ದ. ಅವನಿಗೆ 4 ತಿಂಗಳು ಸಾದಾ ಸಜ ಕೊಟ್ಟರು. ಕೇಂದ್ರ ಕಾರಾಗಾರದಲ್ಲಿ ಹನ್ನೆರಡು ಎಳ ನೀರು ಕದ್ದುದಕ್ಕೆ ಮೂರು ವರುಷ; ಒಂದು ಹರಕಲು ಅಂಗಿ ಕದ್ದುದಕ್ಕೆ ಒಂದು ವರುಷ ಕಠಿಣ ಶಿಕ್ಷೆ ಅನುಭವಿಸುತ್ತಿರುವ ಕರಿಯ ಖೈದಿಗಳು ಇದ್ದಾರೆ. ಈ ಬಿಳಿಯ ಕಳ್ಳ ಸೆರೆಮನೆಯೊಳಕ್ಕೆ ಬರುವಾಗಲೇ ವಾರ್ಡರ್‌ಗಳನ್ನೆಲ್ಲಾ ಹೆದರಿಸುತ್ತಲೇ ಬಂದ. ಒಂದು ದಿನ ಅವನು ಏನೋ ಕೇಳಿದುದಕ್ಕೆ ಸರಿಯಾದ ಪ್ರತ್ಯುತ್ತರ ಕೊಡಲಿಲ್ಲವೆಂದು ಸೆರೆಮನೆಯ ಗುಮಾಸ್ತನನ್ನು ಹೊಡೆದ. ಕರಿಯ ಮನುಷ್ಯ ಏನಾದರೂ ಹಾಗೆ ಮಾಡಿದ್ದರೆ ಅವನ ಪ್ರಾಣವನ್ನು ಅಲ್ಲಿ ತೆಗೆದುಬಿಡುತ್ತಿದ್ದರು. ಗುಮಾಸ್ತ ಸೂಪರಿಂಟೆಂಡೆಂಟರ ಹತ್ತಿರ ಹೋದ. ಅವರಿಗೂ ಧೈರ್ಯವಿಲ್ಲ. ಹಾಗೆ ಅವರೇನಾದರೂ ಧೈರ್ಯಮಾಡಿದರು ಎನ್ನೋಣ, ಮೇಲಿನವರು ಅವರು ಮಾಡಿದುದು ಸರಿ ಎನ್ನಬೇಕಲ್ಲ. ಅವರಿಗೆ ಆ ಪುರುಷತ್ವವಿಲ್ಲ. ಮೇಲಕ್ಕೆ

ಹೋದಷ್ಟೂ, ಸಂಬಳ ಹೆಚ್ಚಿದಷ್ಟೂ, ಬ್ರಿಟಿಷ್ ಸರ್ಕಾರದಿಂದ ಲಾಭ ವಾದಷ್ಟೂ ಅವರ ಹೇಡಿತನ ಹೆಚ್ಚುತ್ತಾ ಹೋಗುತ್ತದೆ. ಬಿಳಿಯವನ ಅನ್ಯಾಯವನ್ನು ಹೀಗೆ ಪ್ರತಿಭಟಿಸಿದವರನ್ನು ಪ್ರಶಂಸಿಸುವುದರ ಬದಲು ಅವನಿಗೆ ವ್ಯವಹಾರಜ್ಞಾನವಿಲ್ಲವೆನ್ನುತ್ತಾರೆ ಅವರು. ಹೇಡಿಗಳ ರಾಜ್ಯದಲ್ಲಿ ಭಿಕ್ಷಾಧಿಕಾರಿಯಿಂದ ಹಿಡಿದು ಲಕ್ಷಾಧಿಕಾರಿಯುವರೆಗೆ ಇದೇ ಗೋಳು.

"ಕೂಚ್ ಬಿಹಾರಿನ ನೃಪೇಂದ್ರ ನಾರಾಯಣರು ಒಂದು ಸಲ ಹೀಗೆ ಮಾಡಿದರೆಂದು ಮಾಡರ್ನ್ ರೆವ್ಯೂನಲ್ಲಿ ಉಲ್ಲೇಖಿತವಾಗಿದ್ದಿತು. ನೃಪೇಂದ್ರ ನಾರಾಯಣರು ಸಾಧಾರಣವಾದ ಉಡುಪನ್ನು ಧರಿಸಿ ಕಲ್ಕತ್ತಾದಿಂದ ಮೊದಲನೆಯ ತರಗತಿಯ ಗಾಡಿಯಲ್ಲಿ ಹೋಗುತ್ತಿದ್ದರು. ರಂಗಪುರದಲ್ಲಿ ಆಗಿನ ಡಿಸ್ಟ್ರಿಕ್ಟ್ ಕಲೆಕ್ಟರ್ ಯೂರೋಪಿಯನ್, ಆ ಗಾಡಿ ಹತ್ತಿ ನೃಪೇಂದ್ರ ನಾರಾಯಣರಿಗೆ ಬೇರೆ ಗಾಡಿಗೆ ಹೋಗಲು ಹೇಳಿದ. ನಾರಾಯಣರು ಹೊರಡಲಿಲ್ಲ. ಕಲೆಕ್ಟರು 'ನೀನು ಬೇರೆ ಗಾಡಿಗೆ ಹೋಗ ದಿದ್ದರೆ ನಿನ್ನನ್ನು ಕಿಟಿಕಿಯಿಂದ ಹೊರಕ್ಕೆ ಎಸೆಯುತ್ತೇನೆ" ಎಂದ. ಆಗ ನೃಪೇಂದ್ರ ನಾರಾಯಣರು ಆ ಕಲೆಕ್ಟರನ್ನು ಎತ್ತಿ ಒಂದೇ ಏಟಿಗೆ ಅನಾ ಮತ್ತು ಕಿಟಕಿಯಿಂದ ಹೊರಕ್ಕೆ ಎಸೆದುಬಿಟ್ಟರು. ಪತ್ರಿಕೆಗಳಲ್ಲಿ ಚಳುವಳಿ ಮಾಡುವ ಅರ್ಜಿ ಹಾಕುವ ಕೋರ್ಟಿಗೆ ಹೋಗುವ ಹೇಡಿಗಳಿಗಿಂತ ನೃಪೇಂದ್ರ ನಾರಾಯಣರಂಥವರು ಧೀರರು. ಭಾರತೀಯರ ಮೇಲೆ ಅತ್ಯಾಚಾರ ನಡೆದಾಗ, ಸ್ಥಳದಲ್ಲಿ ಪ್ರತಿಭಟಿಸುವವರು ಯಾರೂ ಇಲ್ಲವಲ್ಲ ಎಂದು ನಾಚಿಕೆಯಾಗುತ್ತದೆ. ಅತ್ಯಾಚಾರ ನಡೆಯುವೆಡೆ ಭಾರತೀಯರು ಬೇಕಾದಷ್ಟು ಮಂದಿ ಇರುತ್ತಾರೆ. ಆದರೆ ಅವರಲ್ಲಿ ಗಂಡಸರೇ ಇಲ್ಲ! ಆದುದರಿಂದಲೇ ಇಂತಹ ಅತ್ಯಾಚಾರಗಳು ನಡೆಯುತ್ತಲೇ ಇವೆ.

ಆದರೆ ರಾಜಕೀಯ ಖೈದಿಗಳನ್ನು ಹೊಡೆಯುವಾಗ ಈ ದೀರರನ್ನು ನೋಡಬೇಕು. ಹಿಂದಲಿಂದ ಬಂದು ಲಾಠಿಪ್ರಹಾರ ಮಾಡುತ್ತಾರೆ. ಸ್ನಾನಮಾಡುತ್ತ ನಿಂತಿರುವವರಿಗೂ ಬಡಿಯುತ್ತಾರೆ. ಬಾಗಿಲು ಮುಚ್ಚಿ ಕೊಂಡರೂ ಹೋಗಿ ಹುಡುಕಿ ಹೊಡೆಯುತ್ತಾರೆ."

---

# ೫೬. ಕೆಸರಿನಲ್ಲಿ ಕಮಲ

ಹೀಗೆ ಬರಿಯ ಕಳ್ಳರ ಪಟ್ಟಣವಾದ ಸೆರೆಮನೆಯಲ್ಲಿ ಸಹ ಮನುಷ್ಯ ತನ್ನ ಸ್ವಾಭಾವಿಕವಾದ ರಸಿಕತೆ, ಕಲೆಯ ಕಡೆ ಒಲಿದ ಮನಸ್ಸು ಇವುಗಳನ್ನು ಬಿಡಲಿಲ್ಲ. ಆನಂದದ ಅಭಿಲಾಷೆ ಮನುಷ್ಯನ ಬಾಳಿನ ಜತೆಯಲ್ಲಿ ಬಂದುದು. ಬಾಳಿನ ಕಾರ್ಪಣ್ಯ ಕಷ್ಟಗಳನ್ನು ವಂಚಿಸಿ ಅದರಿಂದ ಸುಖವನ್ನು ಕದಿಯುವುದೇ ಅವನ ಗುರಿ. ಸೆರೆಯಲ್ಲಿರುವವರಿಗಂತೂ "ಸುಖವನ್ನು ಕದ್ದರೆ ಉಂಟು. ಇಲ್ಲದಿದ್ದರೆ ಅದು ದೊರೆಯುವುದಿಲ್ಲ" ಎಂಬ ಭಾವ ಅನುಭವದಿಂದ ಖಂಡಿತವಾಗಿರುತ್ತದೆ. ಅವರಿಗೆ ಯಾರೂ ಏನನ್ನೂ ಸಿಗಗೊಡುವುದಿಲ್ಲ.

ಕೇಂದ್ರ ಕಾರಾಗಾರದಲ್ಲಿ ಮುಖ್ಯವಾಗಿ ಸುದರ್ಶನನ ಕಣ್ಣಿಗೆ ಬಿದ್ದುದು ಸೆರೆಯಾಳುಗಳ ಸಂಗೀತ ಮತ್ತು ಕೋಲಾಟದ ಉತ್ಸಾಹ. ಸೆರೆಯಾಳುಗಳಿಗೆ ಪ್ರತಿ ಭಾನುವಾರವೂ ರಜಾ. ಆ ಬೆಳಿಗ್ಗೆ ಅವರು ತಮ್ಮ ಬಟ್ಟೆಗಳನ್ನೆಲ್ಲಾ ಒಗೆದುಕೊಂಡು ಒಂದೊಂದು ಸಲ ಕೋಲಾಟವನ್ನು ಆಡುತ್ತಾರೆ. ಸೆರೆಮನೆಯಲ್ಲಿ ಹಾಗೆ ಆಟಕ್ಕೆ ಕೋಲು ಸಿಕ್ಕುವುದೂ ಅಪರೂಪವೇ. ಅಲ್ಲಿ ಹಾಗೆ ಕೋಲಿನ ಸದ್ದು ಹಾಡುಗಾರಿಕೆ ಕೇಳಿದ ಕೂಡಲೇ ಅದು ಸೆರೆಮನೆ ಎಂಬುದೇ ಮರೆಯುತ್ತದೆ. ವಾತಾವರಣದಲ್ಲಿ ಒಂದು ವಿಧವಾದ ಹೊಳಪು ಬಂದು ಹಗುರವಾಗುತ್ತದೆ. ಖೈದಿಗಳು ಹೇಳಿದ ಕೆಲವು ಹಾಡುಗಳೂ ಸಹ ಸುದರ್ಶನನಿಗೆ ಹೊಸದಾಗಿಯೇ ತೋರಿದವು.

**ಹಾರಿ ಬಂದಿದ್ದ ಲಂಕೆ ಒಳಗೆ ಹನುಮಂತ**
**ಸಾರಿ ಬಂದಿದ್ದ ಲಂಕೆಯೊಳಗೆ**
**ಹಾರಿದನೋ ಹನುಮ ! ಹಾರಿದನೊ ಹನುಮ !**
**ಒಂದಾಕಾಶ ನಡಿಗ್ಯಾವು**
**ಭೂಮಿ ತಲ್ಲಣಿಸ್ಯಾವು**
**ತರಿಕೆರೆ ಬೆಟ್ಟಗಳು ತಲೆಕೆಳಕನಾದಾವು**
**ಅಲ್ಲಿ ನರಯಣಸ್ವಾಮಿ ನಗುತ್ತಿದ್ದನಂತೆ**
**ಅಲ್ಲಿ ಜಲ್ಪದ ಮುನಿಯು ತ್ರಿವಿಸಿದ್ದನಂತೆ**
**ತ್ರಿವಿಸಿನಾ ಎರಡೊಂದು ಒಲೆಯ ಗುಂಡಾನೋಡಿ**

ಅಂಗಲ್ಲವೋ ಕಂದ ಇಂಗಿಲ್ಲವೋ ಕಂದ
ಮೂರು ಮೂರೂಡಂದ ಜಲ್ಪದಾಮುನಿಯು
ಹಾರಿ ಬಂದಿದ್ದ ಲಂಕೆಒಳಗೆ ಹನುಮಂತ
ಸಾರಿ ಬಂದಿದ್ದ ಲಂಕೆಯೊಳಗೆ||
ಕೊಂಡದಲಿ ಕೈಪೂ ಕೊಂಡದಲಿ ಕೈಪೂ
ಜನ್ನಿಗ ಜಟ್ಟಿ ಜನಿವಾರ
ಲಂಡ ನಿವನ್ಯಾರೆಂದು ರಾವಣನು ಕೇಳಲು
ಆರು ರಾಯರ ಮಿಂಡ
ಮೂರು ರಾಯರ ಗಂಡ
ಇಂದ್ರ ಜಟ್ಟಿಯ ಮಿಂಡ
ಕುಂಭಕರ್ಣರ ಗಂಡ
ಇಂತು ರಾಮರಿಗೆ ಭಂಟ
ನಿಮ್ಮಕ್ಕ ತಾಟಗಿತ್ತಿಯ ಮಿಂಡ
ಭಾಪುರೆ ಸುಮಂತಾ
ಹಾರಿ ಬಂದಿದ್ದ ಲಂಕೆ ಒಳಗೆ ಹನುಮಂತ
ಸಾರಿ ಬಂದಿದ್ದ ಲಂಕೆ ಒಳಗೆ
ಚೋಟುದ್ದ ಕಪಿ ನೀನು
ಚೋಟುದ್ದ ಕಪಿ ನೀನು ಗೇಣುದ್ದ ಬಾಲವನು
ಹೇಸಿಗೆ ಕೋಡಗ ನಿನ್ನ
ಸಾಸೆ ವಿಟ್ಟಂಗೆ ತಮ್ಮ
ಮಾತು ಮಾತಿಗೆ ಮುನ್ನ
ಏಸಿ ಎನ್ನೆಲದೀರೊ
ಹಿಚಕಿ ನಾ ಪೊಗದಿರುವೆ
ಇರುವೆ ಸಾಲಿಟ್ಟಂಗೆ
ತುರುಬಿ ಚೆಂಡಾಡುವೆನು
ಹಾರುವೆನು ಗಗನಕ್ಕೆ, ತೂರುವೆನು ಯೋಜನವ
ಇಂತು ಮಚ್ಚರಿಸಿ ರಾವಣನ ಗರ್ವಮಂ ಮುರಿದಯ್ಯ
ಬಿಚ್ಚ ಕಂಕಣದಯ್ಯ ಕರಿಯ ಮಾರೇ ಹನುಮ

ಪಟ್ಟಣದ ಐಶ್ವರ್ಯನಾಳುತಿರಲಣ್ಣಾ
ಹಾರಿ ಬಂಡಿದ್ದ ಲಂಕೆ ಒಳಗೆ ಹನುಮಂತ
ಸಾರಿ ಬಂದಿದ್ದ ಲಂಕೆ ಒಳಗೆ
ಶ್ರೇಷ್ಠ ಬಲ್ಲಿದ ನಹುದು
ಸಾಮರ್ಥ ನೀನಹುದು
ಸೀತೆ ಒಯ್ಯ್ಯವಾಗ ನೀನು ಎಲ್ಲಿದ್ಯಲೋ ತಮ್ಮ
ಎಲ್ಲಿದ್ಯಲೋ
ಸೀತೆ ನೀ ನೊಯ್ವ್ಯಾಗ ನೀನಿದ್ದಂಗೆ ನಾನಿದ್ದರೆ
ಗುದ್ದಿ ಕೊಲ್ಲುವೆ ನಿನ್ನ ರಥದ ಮೇಲಿ
ಕಾಲಲಿ ಒದ್ದು ಕೊಲ್ಲುವೆ ನಿನ್ನ ಎದೆಯ ಮೇಲಿ
ಗಂಡನುಳ್ಳವ್ಮನ ತಂದು ವನದೊಳಗಿಟ್ಟೆ
ದಂಡ ತರತೀನಿ ಸೈರಿಸಣ್ಣಯ್ಯ, ಸೈರಿಸಣ್ಣಯ್ಯ
ಹಾರಿ ಬಂದಿದ್ದ ಲಂಕೆ ಒಳಗೆ ಹನುಮಂತ
ಸಾರಿ ಬಂದಿದ್ದ ಲಂಕೆ ಒಳಗೆ.

ಈ ಹಾಡು ಹೊಸ ಹಾಡು. ಬಹು ಸ್ವಾರಸ್ಯವಾದ ಹಾಡು. ಇದು ಕೋಲಾಟದ ಧಾಟಿಗೆ ಬಹಳ ಚೆನ್ನಾಗಿ ಹೊಂದಿಕೊಳ್ಳುತ್ತದೆ. ಪದ್ಯದ 8, 9, 10, 11 ನೆಯ ಸಾಲುಗಳು ಅನೇಕ ವಾರ ಅರ್ಥವಾಗಿರಲಿಲ್ಲ. ಇದು ಏನು ಇರಬಹುದು. " ಜಲ್ಪದಾ ಮುನಿಯು ಹಂಗಲ್ಲವೋ ಕಂದ, ಹಿಂಗಲ್ಲವೋ ಕಂದ ಒಲೆಯ ಗುಂಡಾ ನೋಡಿ ಮೂರು ಮೂರ್ಹ್ಹಡಂದ " ಎಂದರೆ ಏನಿರಬಹುದು ಎಂಬುದಾಗಿ ಬಹು ಅಶಾಂತಿಯಿಂದ ಯೋಚಿಸುತ್ತಿರುವಾಗ ಮತ್ತೊಂದು ದಿನದ ಹಾಡಿನಲ್ಲಿ ಅದಕ್ಕೆ ಒಂದು ಉತ್ತರ ದೊರಕಿತು. ಆ ಹಾಡಿನಲ್ಲಿರುವ ಸಂಗತಿಯೂ ಹೊಸ ವಿಚಾರವೇ. ಇದುವರೆಗೆ ನಮ್ಮ ಗಮನಕ್ಕೆ ಬಿದ್ದುದಲ್ಲ.

ಕೋಲಿ ರನ್ನದ ಕೋಲಿ ಚೆನ್ನಾದ ಕೋಲಿ ಮುತ್ತಿನ ಕೋಲಿ
ಕೋಲಂದು ನಾಡ್ಯಾರು ಬಾಲಿ | ಈ ಊರ ಲೋಲಹನುಮಂತನ ಮೇಲಿ ||
ಮುನಿಗಳ ಬಳಿಗೆ ತಾನ್ಹೋಗಿ ಹನುಮಣ್ಣ
ಕೂಗಿ ಕೂಗಿ ಮಾತನಾಡಿ | ಹನುಮಣ್ಣ
ತೂಗಿ ತೂಗಿ ಮಾತನಾಡಿ

ಕೂಗಿದರೆ ತಲೆಯಬಾಗಿ, ಆ ರುಷಿ ಮಾತು ಬಲ್ಲವ ಸಾವಯೋಗಿ
ಓಡಿ ಓಡಿ ಓಡಿ ಹೋದ ಹನುಮಣ್ಣ
ಒಡಕು ಗಡಿಗೆಲಿ ನೀರ ತಂದ

ಹನುಮಣ್ಣ ತೂತು ಗಡಿಗೇಲಿ ನೀರ ತಂದ
ನೀನಲ್ಲಿ ಮಾಡಿಕೊಂಡುಣ್ಣಯ್ಯ ಪೋರ
ಹೂಡಯ್ಯ ಮೂರು ಬಲಿ ಗುಂಡ
ಆದಾರಾಗಾಲಪ್ಪ ಶಿವನೆ
ನೀನೆಗೆ ಮಾತ ನಾಡಿದ್ದೊಂದೆ ಸೆವನೆ
ದೇವರ ದೇವನಂತವನೆ
ಲಂಕೆಗೆ ಹಾದಿಯ ತೋರಯ್ಯ ಹರನೆ

ಆಡ್ವಾಗ ನೋಡ್ವಾಗ ಬಾಲಾ ಹನುಮಣ್ಣ
ತೂಗುತಿದ್ದನು ರಂಬೆ ಮೇಲ ಹನುಮಣ್ಣ
ತೂಗುತಿದ್ದನು ಕೊಂಬೆ ಮೇಲ
ಅಲ್ಲೋದರೆ ನಿನ್ನ ತಲೆಯ, ಎರವೆ
ನಿನ್ನಂತ ಕೋತ್ಯೆಲ್ಲ ಅವರೀಗೆ ಪರವೆ

ಏ ನಿನ್ನ ಕಣ್ಣಿಗೆ ನಾನು ಕೋತಿ
ನಾನು ಕಣ್ಣು ಬಿಟ್ಟರೆ ನೀನು ಏತಿ

ಕೋಲೆ ರನ್ನದ ಕೋಲೆ ಚಿನ್ನಾದ ಕೋಲೆ ಮುತ್ತಿನ ಕೋಲೆ
ಕೋಲಂದು ನಾಡ್ಯಾರು ಬಾಲೆ ಈ ಊರ ಲೋಲ ಹನುಮಂತನ ಮೇಲೆ

ಹನುಮಂತ ಲಂಕೆಗೆ ಹಾರಲು ಹೊರಟ. ಮಾರ್ಗ ತಿಳಿಯಲಿಲ್ಲ. ಸಮುದ್ರ ತೀರದಲ್ಲಿ ಒಬ್ಬ ಮುನಿ ಕುಳಿತಿದ್ದ. ಆತನಿಗೆ ಮಾರ್ಗ ಗೊತ್ತು. ಆದರೆ ಆತ ಮೌನಿ. ಏನು ಮಾಡಿದರೂ ಮಾತನಾಡುವುದಿಲ್ಲ. ಹುನುಮಂತ ಎರಡು ಗುಂಡಿನ ಒಲೆ ಹೂಡಿ ತೂತು ಗಡಿಗೇಲಿ ನೀರು ತರಲು ಪ್ರಾರಂಭಿಸಿದ. ಮುನಿ ಈ ಕೋತಿ ವಿದ್ಯೆ ನೋಡಿ ಕೊನೆಗೆ "ಮೂರು ಮೂರು ಹೂಡಂದ; ಹೂಡಯ್ಯ ಮೂರು ಒಲಿಗುಂಡ. ನೀನಲ್ಲಿ ಮಾಡಿಕೊಂಡು ಣ್ಣಯ್ಯ ಪೋರ" ಎಂದ. ಆಗ ಆಂಜನೇಯ ಸನ್ಯ ನೀನು ಮಾತನಾಡಿದುದೆ ಸಾಕು. ಲಂಕೆಗೆ ದಾರಿ ತೋರು ಎಂದ. ಮುನಿಯು ಈ ಕಪಿಯನ್ನು ನೋಡಿ "ಅವರಿಗೆ ನಿನ್ನಂತ ಕೋತ್ಯೆಲ್ಲ ಪರವೇ. ನೀನು ತಲೆ

ತೆರುವೆ " ಎಂದ. ಹನುಮ ನಿನ್ನ ಕಣ್ಣಿಗೆ ನಾನು ಕೋತಿ. ಆದರೆ ನಾನು ಕಣ್ಣು ಬಿಟ್ಟರೆ ನೀನು ಏತಿ " ಎಂದ.

ಈ ಕತೆ ಯಾವ ರಾಮಾಯಣದ್ದೋ. ಹನುಮಂತ ಮುನಿ ಮಾತನಾಡುವಂತೆ ಮಾಡಲು ಸಿಂದಬಾದ್ ನಾವಿಕನ ಕತೆಗಳಲ್ಲಿ ಹೇಳಿರುವಂತೆ ಹೋಗಿ ಋಷಿಯ ಬೆನ್ನಿನ ಮೇಲೆ ಕುಳಿತುಕೊಳ್ಳಲಿಲ್ಲ. ಒಡಕು ಗಡಿಗೆಲಿ ನೀರ ತಂದ. ಸೆರೆಮನೆಯ ಬಂದಿಗಳು ಈ ಹಾಡು ಹೇಳಿಕೊಂಡು ಕೋಲಾಟವಾಡುತ್ತಿರುವಾಗ ಆ ಹಾಡುಗಳ ಹಿಂದಲ ಸಂಸ್ಕೃತಿ ಕಂಡು ಸುದರ್ಶನನಿಗೆ ಆಶ್ಚರ್ಯವಾಯಿತು.

ಸೆರೆಮನೆಯ ಬಂದಿಗಳು ತಾವು ತಪ್ಪು ಮಾಡಿದವರು ಎಂಬ ಭಾವದಿಂದಲೋ ಏನೋ, ನೀತಿ ತಮ್ಮ ಎದುರಿಗೆ ಇರಬೇಕೆಂದು ಈ ಹಾಡನ್ನು ಕೋಲಾಟದಲ್ಲಿ ಹೇಳಿಕೊಳ್ಳುತ್ತಾರೆ.

ನೀತಿಲಿ ನಡೆಯಬೇಕಣ್ಣ
ಅವ ನೀತಿಲಿ ನಡೆದರೆ, ಕೆಟ್ಟ ನೀತಿಲಿ ನಡೆದರೆ ಮೆಚ್ಚ ಮುಕ್ಕಣ್ಣ || ನೀತಿಲಿ....
ವೇದ ಶಾಸ್ತ್ರಂಗಳನೋದಿ
ಅದರ ಭೇದವ ತಿಳಿಯದೆ ತಪ್ಪಿದೆ ಹಾದಿ
ವಾದಿ ಜನರ ಕೂಡೆ ಕಾದಿ
ನೀನು ಯಾಕಾಲೆ ನರಕಕ್ಕೆ ನೀ ಬಿದ್ದೆ ಖೋಡಿ || ನೀತಿಲಿ ||

ಸೊಕ್ಕು ಜವ್ವನೆಯರ ಕೂಡಿ
ಅವರಕ್ಕ ಅವ್ವನೆಂದು ಸವಿ ಮಾತನಾಡಿ
ಅಕ್ಕರದಲಿ ಒಡಗೂಡಿ
ನೀನು ಯಾಕಾಲೆ ನರಕಕ್ಕೆ ನೀ ಬಿದ್ದೆ ಖೋಡಿ || ನೀತಿಲಿ ||

ತಂದೆ ತಾಯನು ಪೂಜೆ ಮಾಡೊ
ಅವರು ನೊಂದುಕೊಂಡರೆ ನಿನಗೆ ಬಂದಿತು ಕೇಡು
ಬಂದ ಜಂಗಮಕನ್ನ ನೀಡು
ಇಂತ ಕೊಟ್ಟೂರು ಬಸವನ ಪಾದಾ ನೀ ಬೇಡು || ನೀತಿಲಿ ||

ದೇವಸ್ಥಾನ ಯಾರ ಸ್ವತ್ತೂ ಅಲ್ಲವಾದುದರಿಂದ ಅಲ್ಲಿಗೆ ಕಳ್ಳರು ನುಗ್ಗುವುದು ಯಾವಾಗಲೂ ಹೆಚ್ಚು. ಸೆರೆಮನೆಗೆ ಬರುವವರ ಪೈಕಿ ದೇವಸ್ಥಾನದ ಕಳ್ಳರೂ ಅನೇಕರಿರುತ್ತಾರೆ. ವಿಗ್ರಹಪೂಜೆಯ ವಿರೋಧಕರು

"ಮೈಮೇಲೆಲ್ಲಾ ಇಲಿ ಓಡಾಡಿದರೂ ದೇವರು ಸುಮ್ಮನಿರುತ್ತಾನೆ. ಕಳ್ಳ ಬಂದು ಲೂಟಿಮಾಡಿಕೊಂಡು ಹೋದರೂ ಸುಮ್ಮನೆ ಇರುತ್ತಾನೆ. ಇದು ಎಂತಹ ದೇವರು" ಎನ್ನುತ್ತಾರೆ. ತನ್ನ ಮೈಮೇಲಿನ ಒಡವೆಗಳನ್ನು ಕದಿಯಲು ಅವಕಾಶಕೊಟ್ಟ ಹನುಮಂತನನ್ನು ಕುರಿತು ಈ ಹಾಡು ಸೆರೆವಾಸಿಗಳಲ್ಲಿ ಪ್ರಚಾರದಲ್ಲಿದೆ.

ಸುಲಿಗೆಯ ಕೊಳಬಹುದೇ | ಹನುಮಣ್ಣ
ನಿನ್ನ ಸುಲಿಸಿಕೊಳ್ಳಲು ಬಹುದೆ?
ಗಡಿಯ ಕಳ್ಳರು ಬಂದು
ನಿನ್ನ ತೊಡೆಯ ಮೇಗಳ ಭಂಗಾರ
ನಿನ್ನ ತೊಡೆಯ ಮೇಗಳ ಭಂಗಾರ | ಸಡಲಿಸಿ ಒಯ್ವಾಗ |
ಗಡಗುಟ್ಟಿ ನಡುಗಿದೆಲ್ಲೊ | ಹನುಮಣ್ಣ
ಸುಲಿಗೆಯ....

ಕಳ್ಳ ಬೇಡರು ಬಂದು
ಪಾರಿಯ ಬೇಲಿ ಕಂಡಿಯ ಕೀಳ್ವಾಗ
ಪಾರಿಯ ಬೇಲಿ ಕಂಡಿಯ ಕೀಳ್ವಾಗ, ಗುಂಡಿಗೆ ನಡುಗಿತಲ್ಲೊ ಹನುಮ
ಸುಲಿಗೆಯ

ಉಪ್ಪಾರಿಗೆ ಕಳ್ಳನೆಂಬ ಹನುಮಣ್ಣ
ನಿನ್ನ ಒಪ್ಪುಳ್ಳ ಪಲ್ಲಕ್ಕಿಯ
ನಿನ್ನ ಒಪ್ಪುಳ್ಳ ಪಲ್ಲಕ್ಕಿಯ ಸುಪ್ಪತ್ತಿಗೊಯ್ವಾಗ
ಬೆಪ್ಪಾಗಿ ಇರುವಾರೇನೋ | ಹನುಮಣ್ಣ
ಸುಲಿಗೆಯಕೊಳಬಹುದೇ | ಹನುಮಣ್ಣ
ನಿನ್ನ ಸುಲಿಸಿಕೊಳಲುಬಹುದೆ

ಇಂತಹ ಹಾಡುಗಳು ಆ "ಕಳ್ಳರ ಕೂಟದಲ್ಲಿ" ಇನ್ನೂ ಎಷ್ಟು ಇವೆಯೋ. "ನೀನೂ ಮನುಷ್ಯನೆ. ಕಳವು ನಿನ್ನ ಒಂದು ರೋಗ. ಸರಿಯಾದ ಚಿಕಿತ್ಸೆ ಬೇಕು ಅದಕ್ಕೆ" ಎಂಬ ಸಹಾನುಭೂತಿಯಿಂದ ಅವರೊಡನೆ ವರ್ತಿಸಿದರೆ ಆ ಸ್ವಭಾವದ ಉತ್ತಮ ಗುಣಗಳು ತಾನಾಗಿಯೇ ವ್ಯಕ್ತವಾಗುವುವು.

---

# ೫೭. ಮುಂದೇನು ?

ಗಡಿನಾಡಿನಲ್ಲಿ ಮಂತ್ರಿಗಳು ಹೋಗಿ ರಾಜಕೀಯ ಬಂದಿಗಳನ್ನೂ ಡಿಟೆನ್ಯುಗಳನ್ನು ಕಂಡು ಮಾತುಕತೆ ಆಡುತ್ತಿದ್ದಾರೆ. ಇವತ್ತು ಈ ಸೆರೆಮನೆಗೆ ಹೋಗಿ ಇಂಥವರನ್ನು ಕಂಡು ಮಾತನಾಡಿದರು. ಮುಂತಾಗಿ ಪತ್ರಿಕೆಗಳಲ್ಲಿ ಸುದ್ದಿ ಪ್ರಕಟವಾದಾಗ ಸ್ವರ್ಗದ ಬಾಗಿಲಿನ ಸಂಪಾದಕರನ್ನು "ನಮ್ಮ ಮಂತ್ರಿಗಳಿಗೆ ಯಾಕೆ ಇಷ್ಟು ಶ್ರೀಮುದ್ಗಾಂಭೀರ್ಯ. ಆ ಮಂತ್ರಿಗಳೆಲ್ಲಾ ಹೋಗಿ ಡಿಟೆನ್ಯುಗಳೊಂದಿಗೆ ಚರ್ಚಿಸಬಹುದಂತೆ. ಇವರು ಯಾಕೆ ಬಂದು ನಮ್ಮಲ್ಲಿ ಮಾತನಾಡಬಾರದು" ಎಂದು ಅಯ್ಯನವರು ಕೇಳಿದರು. ಸಂಪಾದಕರು "ಬಂದಿಗಳೂ ಗಡಿನಾಡಿನವರೇ. ಮಂತ್ರಿಗಳೂ ಗಡಿನಾಡಿನವರೇ. ಆದುದರಿಂದ ಅವರು ಅವರಲ್ಲಿಗೆ ಹೋದರು. ನಿಮ್ಮವರು ನಿಮ್ಮವರೇ ? ಯಾರ ಮಾತನ್ನೋ ಕೇಳಿ ಹಿಡಿದು ಹಾಕಿದರು. ಅವರ ಮಾತನ್ನೇ ಕೇಳಿ ಕೇಳಿ ಒಂದು ದಿವಸ ಬಾಗಿಲು ತೆಗೆಯುತ್ತಾರೆ" ಎಂದರು. ಈ ಮಾತನ್ನು ಸಂಪಾದಕರು ಒಂದು ಬಗೆಯ ನಿರ್ಲಕ್ಷ್ಯದಿಂದ ಹೇಳಿದ್ದರೂ ಅದು ನಿಜವೇ ಆಗಿದ್ದಿತು.

ಡಿಟೆನ್ಯುಗಳನ್ನು ಹಿಡಿದು ಕೂಡಿದ ಸುಮಾರು 12 ತಿಂಗಳ ನಂತರ ಸರಕಾರಕ್ಕೂ ಒಳಗೆ ಕೂತಿದ್ದವರಿಗೂ ಏನೋ ಒಂದು ಸಂಧಾನ ಪ್ರಯತ್ನ ನಡೆಯಿತು. ಸರ್ಕಾರದ್ದು ಯಾವುದರಲ್ಲಿಯೂ ಚೌಕಶಿಯ ಮನೋಭಾವ. ಯಾವುದರಲ್ಲಿಯೂ ಒಣಪ್ರತಿಷ್ಠೆ. ಇದಕ್ಕೆ ಹೃದಯ ಮನುಷ್ಯತ್ವ ದೂರ ದೃಷ್ಟಿ ಮುಂತಾದ ದೌರ್ಬಲ್ಯಗಳಿವೆ ಎಂದು ಎಲ್ಲಿ ಜನ ತಿಳಿದುಕೊಳ್ಳುತ್ತಾರೋ ಎಂದು ಅದಕ್ಕೆ ಭಯ. ಸಂಬಂಧಪಟ್ಟವರನ್ನು ಎದುರಿನಲ್ಲಿ ಕಂಡು ಮಾತನಾಡಿ ವಿಷಯ ಚರ್ಚಿಸುವ ಧೈರ್ಯ ಅದಕ್ಕೆ ಇಲ್ಲ. ತನ್ನ ಘನತೆಗೂ ಹಿಡಿದು ಇಟ್ಟಿದ್ದ ಮುಖಂಡರ ಘನತೆಗೂ ಅನರ್ಹವಾದ ಒಂದು ನಿಯಮವನ್ನು ಅದು ವಿಧಿಸಿತು. ದೇಶದಲ್ಲಿ ನಡೆದಿದ್ದ ತ್ಯಾಗ ಅದು ಮರೆಯಿತು. ತನ್ನ ಅವಿವೇಕವನ್ನೇ ಅಪ್ಪಿಗೊಂಡಿತು. ಸರ್ಕಾರದ ವರ್ತನೆ "ನೆಚ್ಚಿದ್ದ ಎಮ್ಮೆ ಕೋಣನ್ನ ಈಯಿತು" ಎಂಬಂತೆ ಆಯಿತು. ಗಾಂಧಿಯವರೇ ಹೇಳಿದಂತೆ ಸರ್ಕಾರದ ಯಾವ ವರ್ತನೆಯನ್ನೂ ಸಮರ್ಥಿ

ಸುವ ಜನ ದೊರೆಯುತ್ತಾರೆ. ಮಂಕು ಜ್ಯೋತಿ ಎಂಬ ಪತ್ರಿಕೆಯ ಸಂಪಾದ ಅಂಧಕಾರ್‌ರವರು—ಇವರ ಪತ್ರಿಕೆಗೆ 8 ಜನ ಮಾತ್ರ ಚಂದಾದಾರರಿದ್ದಾರಂತೆ—ಸರ್ಕಾರ ಮಾಡಿದ್ದು ಸರಿ. ಕಾಂಗ್ರೆಸ್‌ನವರನ್ನು ಬಿಡಕೂಡದು ಎಂದೇ ಬರೆದರು. ಸರ್ಕಾರದವರು ನಿಷ್ಕಾರಣವಾಗಿ ಸೆರೆಯಲ್ಲಿಟ್ಟಿರುವವರನ್ನು ಬಿಡಲೇ ಇಲ್ಲ. ಪುಂಡುಗಂದಾಯ ಹಾಕಿದುದು ಸರಿ ಎಂದೂ ಒಬ್ಬರು ಪ್ರತಿನಿಧಿ ಸಭೆಯಲ್ಲಿ ಹೇಳಿದರು. ಮತ್ತೊಬ್ಬ ಸದಸ್ಯರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಸಾರ್ವಜನಿಕವಾಗಿ ಮರಣದಂಡನೆ ಶಿಕ್ಷೆಯನ್ನು ನಡೆಸಬೇಕೆಂದು ಕೋರಿದರು. ಪ್ರಜೆಗಳ ನಿಜವಾದ ಪ್ರತಿನಿಧಿಗಳು ಒಳಗೆ ಕೂತರು. ಸರ್ಕಾರದವರು 'ಹೌದಪ್ಪಗ'ಳ ಒಪ್ಪಿಗೆಯಿಂದಲೇ ರಾಜ್ಯವಾಳಿದರು. ಕುದುರೆಗಿಂತ ಲದ್ದಿ ಬಿರಸು ಎಂಬಂತೆ ಬ್ರಿಟಿಷ್ ಸರ್ಕಾರದವರು ಸಹ ಹೇಳಲು ಹಿಂತೆಗೆದ, ಉಪವಾಸ ಸಹ ರಾಜದ್ರೋಹವೆಂದರು ನಮ್ಮವರು.

ಡಿಟೆನ್ಯುಗಳನ್ನು ಒಳಗೆ ಕೂಡಿದ ನಂತರ ತಾವು ಮಾಡಿದುದು ಅವಿವೇಕ, ತಪ್ಪು ಎಂಬುದು ಸರ್ಕಾರಕ್ಕೆ ಚೆನ್ನಾಗಿ ಗೊತ್ತಾಯಿತು. ತಮ್ಮ ತಪ್ಪನ್ನು ಸರಿಮಾಡಿಕೊಳ್ಳಲು ಏನಾದರೂ ಸಬೂಬು ಸಿಕ್ಕೀತೇ ಎಂದು ನಿರೀಕ್ಷಿಸುತ್ತಿದ್ದರು. ಒಂದು ನವರಾತ್ರಿಯಾಯಿತು, ಒಂದು ವರ್ಧಂತಿ ಆಯಿತು. ವಿವಾಹವಾಯಿತು. ಆದರೆ ಬಿಡುಗಡೆ ಬರಲಿಲ್ಲ.

ಒಂದು ತಿಂಗಳಿನಿಂದ ಬಿಡುಗಡೆಯ ಸುದ್ದಿ ಹೊರಟಿದ್ದಿತು. ಆದರೆ ಈ ಗಜಗರ್ಭದ ಆಡಳಿತ ಯಂತ್ರ ಚಲಿಸಬೇಕಲ್ಲ. ಸರ್ಕಾರದ ಮನಸ್ಸು ಬಿರುಗಾಳಿಗೆ ಸಿಕ್ಕಿದ ಪಟದಂತೆ ಆಚೆ ಈಚೆಗೆ ಆಡುತ್ತಿದ್ದಿತು. ಗಳಿಗೆಗೆ ಒಂದೊಂದು ವರ್ತಮಾನ; ಗಳಿಗೆಗೆ ಒಂದೊಂದು ಹೊಸ ಸುದ್ದಿ; ಬಿಡುಗಡೆಯಾಗುವವರ ಪಟ್ಟಿ ದಿನ ದಿನವೂ ಬೇರೆ ಬೇರೆ ರೂಪವನ್ನು ಹೊಂದುತ್ತಿದ್ದಿತು.

ಅಕ್ಟೋಬರ್ 4ನೇ ತಾರೀಖು ಸರ್ಕಾರದವರು ತಾವು ಮಾಡಿದುದು ತಪ್ಪು, ಕೆಲವು ಡಿಟೆನ್ಯುಗಳನ್ನು ಬಿಡುತ್ತೇವೆ ಎಂದರು. ಲೆಕ್ಕಾಚಾರವಾಗಿ ಡಿಟೆನ್ಯುಗಳನ್ನು ಬಿಟ್ಟೇ ಆ ಮಾತನ್ನು ಹೇಳಬೇಕಾಗಿದ್ದಿತು. ಅಥವ ಎರಡೂ ಸಮಾನಕಾಲದಲ್ಲಿ ಆಗಬೇಕಾಗಿದ್ದಿತು. ಬಿಡುಗಡೆಯಾದವರು ಎನ್ನಿಸಿಕೊಂಡವರು, ಸೆರೆಮನೆಯಲ್ಲಿ ಕುಳಿತುಕೊಂಡೇ ಪತ್ರಿಕೆಗಳಲ್ಲಿ ಆ

ಮಾತುಗಳನ್ನು ಓದಿಕೊಂಡರು. ಬಿಡುಗಡೆ ಎಂದರೆ ಎಂತಹವರಿಗಾದರೂ ಹೊಸ ಉತ್ಸಾಹ. 15 ತಿಂಗಳಿನಿಂದ ನೋಡದ ಹೊರಗಿನ ಜಗತ್ತನ್ನು ಮತ್ತೆ ನೋಡುವ ಸೌಭಾಗ್ಯ. ಈ ಬಿಡುಗಡೆ ಎಂಬುದು ಸಣ್ಣ ಸೆರೆಮನೆಯಿಂದ ದೊಡ್ಡ ಸೆರೆಮನೆಗೆ ಎಂಬುದು ಯಾರಿಗೂ ತಿಳಿಯದೆ ಇರಲಿಲ್ಲ. ಆದರೂ ಬಿಡುಗಡೆ ಬಿಡುಗಡೆ ತಾನೆ. ನಿಲ್ಲುವವರು ಯಾರು? ಹೊರಗೆ ಹೋಗುವವರು ಯಾರು ಎಂಬುದು ತಿಳಿಯದುದರಿಂದ ಡಿಟೆನ್ಯುಗಳಲ್ಲಿ ಅಶಾಂತಿ ಹೆಚ್ಚಾಗಿದ್ದಿತು. ಸರ್ಕಾರದ ದೃಷ್ಟಿ ಯಾರಮೇಲೆ ಬೀಳುವುದೋ; ಬಿಡುಗಡೆಯುಂಟು ಇಲ್ಲ ಎಂದು ಎಡಕ್ಕೂ ಬಲಕ್ಕೂ ಎಸೆಯುವುದರಲ್ಲಿ ಯಾರ ಹೆಸರು ಬಲಕ್ಕೋ, ಯಾರ ಹೆಸರು ಎಡಕ್ಕೋ? ಪ್ರತಿಯೊಬ ಡಿಟೆನ್ಯುವೂ ಎಷ್ಟು ವರುಷವಾದರೂ ಇರಲು ಸಿದ್ಧನಾಗಿ ಬಂದಿದ್ದರೂ ಹೊರಗೆ ಹೋಗುವ ಆಸೆಯನ್ನು ಜಯಿಸಿದವರಾರು? ಐದನೆಯ ತಾರೀಖು ಯಾರಿಗೂ ಬಿಡುಗಡೆ ಬರಲಿಲ್ಲ. 6 ನೇ ತಾರೀಖು ಕೆಲವರಿಗೆ ಬಂತು. ಏಳನೇ ತಾರೀಖು ಕೆಲವರಿಗೆ, ಎಂಟನೇ ತಾರೀಖು ಕೆಲವರಿಗೆ 9 ನೇ ತಾರೀಖು ಕೆಲವರಿಗೆ. ಅಂತೂ ಕೇಂದ್ರ ಕಾರಾಗಾರದಿಂದ ಇನ್ನೂರು ಜನರ ಬಿಡುಗಡೆ ಆಯಿತು.

* * * *

ಸುದರ್ಶನ ವಾಸು ಸಂಪತ್ ಸೀಮಯ್ಯ ಆರಾಜಯ್ಯ ಒಬ್ಬೊಬ್ಬರಾಗಿ ಸೆರೆಮನೆಯ ಬಾಗಿಲಿನಿಂದ ಹೊರಟರು. ಅಂದಿನ ಕರ್ಮ ಧರ್ಮ ಸಂಯೋಗದಿಂದ, ಸುದರ್ಶನನ ಜತೆಯಲ್ಲಿ ವಿದ್ಯಾರ್ಥಿಯಾಗಿದ್ದು, ಅನಂತರ ಸುದರ್ಶನನ್ನು ದಸ್ತಗಿರಿಮಾಡಿದ ರಂಗಪ್ಪ, ಆ ದಿವಸವೇ ಸೆರೆಮನೆಗೆ ಅಧಿಕಾರಿಯಾಗಿ ಛೀಪ್ ಜೈಲರ್ ಆಗಿ ಬಂದರು. ಸುದರ್ಶನನ ತರಗತಿಯಲ್ಲಿಯೇ ಓದಿದವರಾಗಿ ಸುದರ್ಶವನ ಸೆರೆಮನೆಯಲ್ಲಿಯೇ ಅಲ್ಲಿಯವರೆಗೆ ಛೀಪ್ ಜೈಲರ್ ಆಗಿದ್ದ ಅಜೀಜ್ ಸಾಹೇಬರು, ಲಾಠಿ ಛಾರ್ಜು ಮಾಡುವಾಗ 'ಕ್ಲಾಸ್‌ಮೇಟ್' ಆದ ಸುದರ್ಶನನಿಗೆ ಬಲವಾಗಿಯೇ ತಲೆಯ ಮೇಲೆ ಬಾರಿಸಿದ್ದವರು, ಡಿಟೆನ್ಯುಗಳಿಗೆ ಬಂದ ಪುಸ್ತಕಗಳನ್ನೆಲ್ಲಾ ಸಂಗ್ರಹಿಸಿ ತಮ್ಮ ಲೈಬ್ರೇರಿಯನ್ನೇ ಬಲಪಡಿಸಿಕೊಂಡ ಸಾಹಿತ್ಯಾಭಿಮಾನಿ, ಅದೇ ದಿನ ಮೇಲಿನ ದರ್ಜೆಗೆ ಬಡ್ತಿಹೊಂದಿದರು. ರಂಗಪ್ಪ ಅಜೀಜ್‌ಸಾಬ್ ಇಬ್ಬರೂ ಒಬ್ಬರ ಮೇಲೆ ಒಬ್ಬರು ಮೀಸೆ ತಿರುಗಿ

ಸುತ್ತಾ ಪರಸ್ಪರ ಅಸೂಯೆಯಿಂದ ಒಬ್ಬರನ್ನೊಬ್ಬರು ನೋಡುತ್ತಿದ್ದರು. ಆದರೆ ಇಬ್ಬರೂ ಒಂದೇ ವಿಧವಾದ ಕ್ರೌರ್ಯದಿಂದ ತಮ್ಮ ಸಹಾಧ್ಯಾಯಿಯಾಗಿದ್ದ ಸುದರ್ಶನನನ್ನು ನೋಡುತ್ತಿದ್ದರು. ಸುದರ್ಶನ ಅವರನ್ನು ನೋಡುತ್ತಾ "ಇಪ್ಪತ್ತು ವರುಷದಿಂದ ಅವರ ಆಯಸ್ಸು ಹಾಗೆಯೇ ಕಳೆಯಿತು, ನನ್ನ ಆಯಸ್ಸೂ ಹೀಗೆಯೇ ಆಗಿಹೋಯಿತು" ಎಂದುಕೊಂಡ. ಸೆರೆಮನೆಯ ಬಾಗಿಲಿನಲ್ಲಿ ಸೀತಾರಾಮು, ನಾರಾಯಣ, ವೈದೇಹಿ ಅವನನ್ನು ಎದುರುಗೊಂಡರು. ದೂರದಲ್ಲಿ, ಅವನ ಕಿವಿಯ ಮೇಲೆ ಬಡಿದಂತೆ ಮುಂದಲ ಹಾಡು ಕೇಳಿಸಿತು.

" Hark to the thunder, hark to the tramp,
    a myriad army comes
An army sprang from a hundred lands, speaking
    a hundred tongues
And over head a portent new, a blood red banner
    see !
The nations gather in affright to ask what the
    sign may be
Banner of Crimson, banner bright, banner flaunting
    the sky
What is the word that ye bring to men, the hope
    that you hold on high
" We come from the fields, we come from the
    forge, we come from the land and sea
We come in the right of our new born might to
    set the people free !
Masters, we left you a world to make, planning
    was yours to do
We were the toilers humble and sad, we gave
    our faith to you

And now with a dread in our hearts, we stand and gaze at the work of years
We have builded a temple with pillars white, you have stained it with blood and tears
For our little ones with their teeming hopes, you have roofed the sweat shop den
And our daughters fair, you have prisoned in the reeking brothers pen
And so for the sign of our murdered hopes, our blood red banner, see
We come in the right of our new born might to set the people free.
Tremble oh Masters, tremble all who live by others toil
We come to your dungeon walls to raze your citadel, to spoil
Yours is the power of club and jail, yours is the axe and fire
But ours is the hope of human hearts and the strngth of the soul's desir e
Ours is the blazing banner, sweeping the sky along
Ours the host, the marching host, hark to our battle song
Chanting of brotherhood, chanting of freedom, dreaming the world to be
We come in the right of our new born might to set the people free"

ಸುದರ್ಶನನು ಹೊರಗಿನ ಜಗತ್ತಿನ ಘಾಳಿಯನ್ನು ಆಘ್ರಾಣಿಸುತ್ತಾ "ನಾನೇನೋ ಹೊರಕ್ಕೆ ಬಂದೆ. ಆದರೆ ದೇಶವೋ" ಎಂದುಕೊಂಡನು. ಸ್ವಯಂಸೇವಕರ

We come in the right of our new born might
to set the people free

ಎಂಬ ಧ್ವನಿಯ ಝೇಂಕಾರದೊಂದಿಗೆ ಅವನ ಆಲೋಚನೆಗಳು ಸೇರಿ ಹೋದವು.

ವಂದೇ ಮಾತರಂ



